ಡಿ.ಎಸ್. ರಾಮಪ್ಪ ಅಭಿನಂದನ ಗ್ರಂಥ

# ಉಪ್ಪಾರ ಹಣತೆ

(ಉಪ್ಪಾರ ಸಮುದಾಯದ ಶಾಸ್ತ್ರೀಯ ಅಧ್ಯಯನ)

*ಪ್ರಧಾನ ಸಂಪಾದಕರು*

**ಹೆಚ್. ಸಿ. ನೀರಾವರಿ**

*ಸಂಪಾದಕರು*

**ಹೆಚ್. ನೀಲಪ್ಪ**

**ಹನುಮಾಕ್ಷಿ ಗೋಗಿ**

**ಎನ್. ಭಾರತಿ**

**ಹೆಚ್. ರಾಮಪ್ಪ**

**ಎಂ. ಹೆಚ್. ತುಗ್ಗಣಿ**

*ಪರಿಕಲ್ಪನೆ ಹಾಗು ನಿರೂಪಣೆ*

**ಕೆ. ಆರ್. ಕಮಲೇಶ್**

*ಪ್ರಕಾಶಕರು*

ರಾಜರ್ಷಿ ಭಗೀರಥ ಸಂಕಲ್ಪ ಟ್ರಸ್ಟ್ (ರಿ.)

# 13, 15ನೆಯ ತಿರುವು, 4ನೆಯ ಹಂತ

ಜೆ.ಪಿ. ನಗರ, ಬೆಂಗಳೂರು 560 078

ದೂರವಾಣಿ : 6583601

**UPPARA HANATHE**
D.S. Ramappa's Felicitation Volume
Edited by : H.C. Neeravari and K.R. Kamalesh
Published by : Rajashri Bhagiratha Sankalpa Trust (Regd.)
# 13, 15th Cross, 4th Stage, Dollars Layout, Bangalore-560 078
Telephone : 658 3601

Pages : xx + 16 Photopages + 512



Year of Publication : 2002 Sept.

Price : **Rs. 450/-**

Photos by : **Prof. M. Sridhara Murthy**

Cover Page Design : **Shreepad**

*DTP by*
**Friends Com-Tech**
# 121/1, 5th Main, Chamarajpet, Bangalore-18
Phone : 6528454

*Printed at*

Chamarajpet, Bangalore-18
Phone : 6613123, 6618752

## ಶ್ರೀ ಡಿ.ಎಸ್. ರಾಮಪ್ಪ ಅಭಿನಂದನ ಸಮಿತಿ, ಬೆಂಗಳೂರು

ಅಧ್ಯಕ್ಷರು : ಹೆಚ್. ಸಿ. ನೀರಾವರಿ, ಬೆಂಗಳೂರು

ಕಾರ್ಯದರ್ಶಿ : ವಿಶ್ವನಾಥ್, ತುಮಕೂರು

ಖಜಾಂಚಿ : ಶಿವಪ್ಪ ನೀರಾವರಿ, ರಾಯಚೂರು

ಸಹ ಖಜಾಂಚಿ : ಪ್ರಭಾಕರ ಹೆಚ್. ಚಿಣಿ, ಬಾಗಲಕೋಟೆ

ಸದಸ್ಯರು : ಎಂ. ಹನುಮಯ್ಯ, ಬೆಂಗಳೂರು
ಬಸವರಾಜಪ್ಪ ತುರ್ಚಗಟ್ಟ, ದಾವಣಗೆರೆ
ಯು. ಹನುಮಂತಪ್ಪ ಮತ್ತಿ, ದಾವಣಗೆರೆ
ಬಿ. ಭೀಮಪ್ಪ, ದಾವಣಗೆರೆ
ಅಶೋಕ ಬಿ. ನಾಯಕ್, ಧಾರವಾಡ
ಎ. ಜಂಬಣ್ಣ, ಗಂಗಾವತಿ
ಆರ್. ರಂಗಪ್ಪ, ಬೆಂಗಳೂರು

## ಅಭಿನಂದನ ಗ್ರಂಥದ ಸಂಪಾದಕ ಮಂಡಳಿ

ಪ್ರಧಾನ ಸಂಪಾದಕರು : ಹೆಚ್. ಸಿ. ನೀರಾವರಿ

ಸಂಪಾದಕರು : ಹೆಚ್. ನೀಲಪ್ಪ
ಹೆಚ್. ರಾಮಪ್ಪ
ಶ್ರೀಮತಿ ಹನುಮಾಕ್ಷಿ ಗೋಗಿ
ಶ್ರೀಮತಿ ಎನ್. ಭಾರತಿ
ಎಂ. ಎಚ್. ತುಗ್ಗಣಿ

ಪರಿಕಲ್ಪನೆ ಹಾಗೂ ನಿರೂಪಣೆ : ಕೆ. ಆರ್. ಕಮಲೇಶ್



ಶ್ರೀ ಶ್ರೀ ಶ್ರೀ ಶಿವಪುರಿ ಮಹಾಸ್ವಾಮಿಗಳು




**OMKAR ASHRAM MAHASAMSTHANA**

**BANGALORE - 560 060**


# ಸಂದೇಶ

ಎಪ್ಪತ್ತೈದರ ಹರೆಯದ ಶ್ರೀ ಡಿ. ಎಸ್. ರಾಮಪ್ಪ ಅವರಿಗೆ ದಾವಣಗೆರೆಯಲ್ಲಿ ಸನ್ಮಾನ ಮಾಡುವ ವಿಚಾರ ತಿಳಿದು ಸಂತೋಷವಾಯಿತು. ಡಿ. ಎಸ್. ರಾಮಪ್ಪ ಅವರು ನಿಸ್ವಾರ್ಥ ಸಮಾಜ ಸೇವಕರು. ಸರಳ ನಡೆ ನುಡಿ ಉಳ್ಳವರು, ಸಜ್ಜನರು.

ಶ್ರೀ ರಾಮಪ್ಪ ಅವರು ನಮ್ಮ ಸದ್ಭಕ್ತರು. ನಿರ್ಮಲ ಮನಸ್ಸಿನವರು. ರಾಗ-ದ್ವೇಷಗಳಿಂದ ಬಹುದೂರ. ಯಾವಾಗಲೂ ಒಳ್ಳೆಯ ಕೆಲಸಕ್ಕೆ ಪ್ರೇರಣೆ ಪಡೆಯುವವರು.

ಈ ಸುಸಂದರ್ಭದಲ್ಲಿ ಶ್ರೀ ಡಿ. ಎಸ್. ರಾಮಪ್ಪ ಅವರಿಗೂ ಹಾಗೂ ಅವರ ಕುಟುಂಬ ವರ್ಗಕ್ಕೂ ಭಗವಂತನು ಆಯುರಾರೋಗ್ಯ ಭಾಗ್ಯ ದಯಪಾಲಿಸಲೆಂದು ಪ್ರಾರ್ಥಿಸುತ್ತಾ, ಸನ್ಮಾನ ಸಮಾರಂಭವು ಯಶಸ್ವಿಯಾಗಲೆಂದು ಹಾರೈಸುತ್ತೇವೆ.

Sri Shivapuri Swamy

(ಶ್ರೀ ಶಿವಪುರಿ ಸ್ವಾಮಿ)



ಶ್ರೀ ಸಿದ್ರಾಮಸ್ವಾಮಿಗಳು
ಚರಮೂರ್ತಿಗಳು

ಶ್ರೀ ಚನ್ಮೂಲಾದ್ರಿ, ಶಿಲಾಪುರಿ ಭಗೀರಥಪೀಠ ಶಾಖಾ ಟ್ರಸ್ಟ್(ರಿ.)
ಶ್ರೀ ಚನ್ಮೂಲಾದ್ರಿ, ಶಿಲಾಪುರಿ ಸಂಸ್ಥಾನ ಉಪ್ಪಾರ ಜಗದ್ಗುರು ಶಾಖಾಮಠ

ದಾವಣಗೆರೆ - ೫೭೭ ೦೦೪

# ಸಂದೇಶ

ಶ್ರೀ ಡಿ. ಎಸ್. ರಾಮಪ್ಪ ಅವರು ಶ್ರೀಗಂಧದಂತೆ ತಮ್ಮನ್ನೇ ತೇಯ್ದುಕೊಂಡು ಸಮಾಜ ಸೇವೆ ಮಾಡಿದ್ದಾರೆ.

ದಾವಣಗೆರೆಯಲ್ಲಿ ಅವರು ಪ್ರಾರಂಭಿಸಿರುವ ವಿದ್ಯಾರ್ಥಿ ನಿಲಯ ನೂರಾರು ವಿದ್ಯಾರ್ಥಿಗಳಿಗೆ ಉಪಯೋಗವಾಗಿದೆ.

ಶ್ರೀ ಡಿ. ಎಸ್. ರಾಮಪ್ಪ ಅವರ ಕುಟುಂಬಕ್ಕೆ ಪರಮಾತ್ಮ ಎಲ್ಲಾ ಸುಖ ಸೌಭಾಗ್ಯಗಳನ್ನು ಕೊಡಲಿ. ಉಪ್ಪಾರ ಜನಾಂಗ ಎಂದಿಗೂ ಶ್ರೀ ಡಿ. ಎಸ್. ರಾಮಪ್ಪ ಅವರನ್ನು ಮರೆಯದೆ ಅವರ ಆದರ್ಶಗಳನ್ನು ಪಾಲಿಸಲಿ.

ಸಿದ್ರಾಮಸ್ವಾಮಿ
(ಶ್ರೀ ಸಿದ್ರಾಮ ಸ್ವಾಮಿಗಳು)





। ಓಂ ತತ್ಸತ್ ।

## ಶ್ರೀ ಶ್ರೀ ಶ್ರೀ ಪುರುಷೋತ್ತಮಾನಂದಪುರಿ ಮಹಾಸ್ವಾಮಿಗಳವರು

ಉಪ್ಪಾರ ಜಗದ್ಗುರುಗಳು

ಚಿನ್ಮೂಲಾದ್ರಿ ಶಿಲಾಪುರಿ ಮಹಾಸಂಸ್ಥಾನ

ಭಗೀರಥ ಪೀಠ

ಬ್ರಹ್ಮವಿದ್ಯಾನಗರ, ಮಧುರೆ ಅಂಚೆ, ಹೊಸದುರ್ಗ - ೫೭೭ ೫೨೭

# ಸಂದೇಶ

ಉಪ್ಪಾರ ಸಮುದಾಯದ ಹಿತಚಿಂತಕರೂ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್ ಆದ ಶ್ರೀ ಡಿ. ಎಸ್. ರಾಮಪ್ಪ ಅವರ ಎಪ್ಪತ್ತೈದನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಅವರ ಅಭಿಮಾನಿ ಬಳಗವು ಅವರನ್ನು ದಾವಣಗೆರೆಯಲ್ಲಿ ಸನ್ಮಾನಿಸುತ್ತಿರುವ ವಿಚಾರ ತಿಳಿದು ನಮಗೆ ತುಂಬಾ ಸಂತೋಷವಾಯಿತು. ಬಡಕುಟುಂಬದಲ್ಲಿ ಹುಟ್ಟಿ, ಸಮಾಜದ ಸಹೃದಯರ ಸಹಾಯದಿಂದ ಇಂಜಿನಿಯರ್ ಪದವಿ ಪಡೆದು ದಕ್ಷತೆ ಹಾಗೂ ಪ್ರಾಮಾಣಿಕತೆಯಿಂದ ಸರಕಾರಿ ಸೇವೆ ನಿರ್ವಹಿಸಿ ನಿವೃತ್ತಿಯ ನಂತರ ತಾನು ಹುಟ್ಟಿ ಬೆಳೆದ ಸಮಾಜಕ್ಕೆ ನಿಃಸ್ವಾರ್ಥ ಸೇವೆ ಸಲ್ಲಿಸಿರುವ ಶ್ರೀ ಡಿ.ಎಸ್.ರಾಮಪ್ಪ ಅವರು ಆದರ್ಶಪ್ರಾಯರು.

ಅಖಿಲ ಕರ್ನಾಟಕ ಉಪ್ಪಾರ ಸಂಘದ ಅಧ್ಯಕ್ಷರಾಗಿ ಉಪ್ಪಾರ ಸಂಘಟನೆಗಾಗಿ ಹಗಲಿರುಳು ದುಡಿದಿದ್ದಾರೆ. ಇದು ಎಲ್ಲರಿಗೂ ಸ್ಫೂರ್ತಿ ನೀಡಲಿ.

ಶ್ರೀ ಡಿ. ಎಸ್. ರಾಮಪ್ಪನವರು ಶತಾಯುಷಿಗಳಾಗಲೆಂದೂ, ಸನ್ಮಾನ ಸಮಾರಂಭವು ಯಶಸ್ವಿಯಾಗಿ ಜರುಗಲೆಂದು ಶುಭ ಹಾರೈಸುತ್ತೇವೆ.

(ಶ್ರೀ ಪುರುಷೋತ್ತಮಾನಂದಪುರಿ ಸ್ವಾಮಿ)



ರಾಮಕೃಷ್ಣ ಹೆಗಡೆ




ಬೆಂಗಳೂರು - ೫೬೦ ೦೮೦

ದಿನಾಂಕ : ೧೨.೦೮.೨೦೦೨

# ಸಂದೇಶ

ಅರವತ್ತರ ದಶಕದಲ್ಲಿ ಸಿರ್ಸಿ, ಸಿದ್ದಾಪುರ, ಮುಂಡಗೋಡ ಹಾಗೂ ಹಳಿಯಾಳಗಳಲ್ಲಿ ಅಸಿಸ್ಟೆಂಟ್ ಇಂಜಿನಿಯರ್ ಆಗಿ ಕೆಲಸ ಮಾಡಿದ ಶ್ರೀ ಡಿ. ಎಸ್. ರಾಮಪ್ಪ ಅವರು ದಕ್ಷ ಹಾಗೂ ಪ್ರಾಮಾಣಿಕ ಅಧಿಕಾರಿಯೆಂದು ಹೆಸರು ಗಳಿಸಿದ್ದರು. ನಮ್ಮ ಸುತ್ತಲಿನ ಅನೇಕ ಕಾಮಗಾರಿಗಳನ್ನು ಶ್ರದ್ಧೆಯಿಂದ ಮಾಡಿದ ಕೀರ್ತಿ ಇವರದು.

ನಿವೃತ್ತಿಯ ನಂತರ ಅವರು ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾಗಿ ಆ ಜನಾಂಗದ ಸಂಘಟನೆ ಹಾಗೂ ಜಾಗೃತಿಗೆ ದುಡಿದಿರುವುದು ಸ್ವಾಗತಾರ್ಹ ವಿಚಾರ. ಹಿಂದುಳಿದವರ ಜಾಗೃತಿ ಹಾಗೂ ಕಲ್ಯಾಣದ ಕಾರ್ಯಗಳಲ್ಲಿ ಆಯಾ ಸಮುದಾಯದ ವಿದ್ಯಾವಂತರು ರಾಮಪ್ಪನವರಂತೆ ತಮ್ಮನ್ನು ತೊಡಗಿಸಿಕೊಂಡರೆ ಎಷ್ಟೋ ಪ್ರಯೋಜನವಾಗುತ್ತದೆ. ಇದೀಗ ೭೫ ವಸಂತಗಳನ್ನು ಕಂಡಿರುವ ರಾಮಪ್ಪನವರ ಬದುಕು ಮತ್ತಷ್ಟು ಸಮೃದ್ಧವಾಗಲಿ. ಅವರ ಆಶಯದಂತೆ ಉಪ್ಪಾರ ಸಮುದಾಯ ನ್ಯಾಯೋಚಿತವಾದ ಸ್ಥಾನಮಾನ ಪಡೆಯಲೆಂದು ಆಶಿಸುತ್ತೇನೆ.

(ರಾಮಕೃಷ್ಣ ಹೆಗಡೆ)



ಎಸ್. ಎಂ. ಕೃಷ್ಣ
ಮುಖ್ಯ ಮಂತ್ರಿ



ಬೆಂಗಳೂರು - ೫೬೦ ೦೦೧

ದಿನಾಂಕ : ೧೯.೦೮.೨೦೦೨

# ಸಂದೇಶ

ಉಪ್ಪಾರ ಸಮುದಾಯದ ಶ್ರೇಯೋಭಿವೃದ್ಧಿಗೆ ಶ್ರಮಿಸಿರುವ ಶ್ರೀ. ಡಿ. ಎಸ್. ರಾಮಪ್ಪರವರ ೭೫ನೇ ಹುಟ್ಟುಹಬ್ಬದ ಸಂದರ್ಭದಲ್ಲಿ 'ಉಪ್ಪಾರ ಹಣತೆ' ಅಭಿನಂದನ ಗ್ರಂಥ ಹೊರ ತರುತ್ತಿರುವುದನ್ನು ತಿಳಿದು ಹರ್ಷವಾಗಿದೆ.

ಶ್ರೀ ರಾಮಪ್ಪರವರು ಲೋಕೋಪಯೋಗಿ ಇಲಾಖೆಯಲ್ಲಿ ೨೯ ವರ್ಷಗಳ ಕಾಲ ದುಡಿದು ನಿವೃತ್ತರಾದ ನಂತರ ಉಪ್ಪಾರ ಸಮುದಾಯದ ಏಳ್ಗೆಗೆ ಶ್ರಮಿಸುತ್ತಿರುವ ಹಿರಿಯ ಚೇತನ. ಅವರ ಹುಟ್ಟುಹಬ್ಬ ಯಶಸ್ವಿಯಾಗಿ ಜರುಗಲಿ ಹಾಗೂ ಈ ಸಂದರ್ಭದಲ್ಲಿ ಹೊರತರುತ್ತಿರುವ 'ಉಪ್ಪಾರ ಹಣತೆ' ಸಮುದಾಯದ ಗುಣವಿಶೇಷಗಳನ್ನು ಪ್ರತಿಬಿಂಬಿಸುವ ಸುಂದರ ಕೃತಿಯಾಗಿ ಮೂಡಿ ಬರಲಿ ಎಂದು ಹಾರೈಸುತ್ತೇನೆ.

ಎಸ್.ಎಂ.ಕೃಷ್ಣ

(ಎಸ್.ಎಂ.ಕೃಷ್ಣ)



ಕಾಗೋಡು ತಿಮ್ಮಪ್ಪ
ಆರೋಗ್ಯ ಮತ್ತು ಕುಟುಂಬ
ಕಲ್ಯಾಣ ಹಾಗೂ ವಾರ್ತಾ ಸಚಿವರು



ಬೆಂಗಳೂರು - ೫೬೦ ೦೦೧

ದಿನಾಂಕ : ೧೩.೦೮.೨೦೦೨

# ಸಂದೇಶ

ಉಪ್ಪಾರ ಸಮುದಾಯದ ಹಿತಚಿಂತಕರೂ ನಿವೃತ್ತ ಕಾರ್ಯಪಾಲಕ ಅಭಿಯಂತರರು ಆಗಿರುವ ಶ್ರೀ ಡಿ. ಎಸ್. ರಾಮಪ್ಪ ಇವರು ೭೪ ವರ್ಷಗಳನ್ನು ಸಮಯೋಚಿತವಾಗಿ ಪೂರೈಸಿ ೭೫ನೇ ವರ್ಷದ ಹುಟ್ಟು ಹಬ್ಬವನ್ನು ಆಚರಿಸುತ್ತಿರುವ ವಿಷಯವನ್ನು ತಿಳಿದು ನನಗೆ ತುಂಬ ಸಂತೋಷವಾಯ್ತು.

ಈ ಶುಭ ಸಂದರ್ಭದಲ್ಲಿ ಹೊರತರಲಿರುವ 'ಉಪ್ಪಾರ ಹಣತೆ' ಎಂಬ ಗ್ರಂಥವು ಸಮಾಜದ ಎಲ್ಲಾ ವರ್ಗದ ಜನರಿಗೆ ದಾರಿದೀಪವಾಗಲೆಂದು ಹಾರೈಸುತ್ತೇನೆ.

(ಕಾಗೋಡು ತಿಮ್ಮಪ್ಪ)





ಬೆಂಗಳೂರು - ೫೬೦ ೦೩೨

ದಿನಾಂಕ : ೦೯.೦೮.೨೦೦೨

ಎಂ. ವೀರಪ್ಪ ಮೊಯಿಲಿ
ಮಾಜಿ ಮುಖ್ಯ ಮಂತ್ರಿ ಹಾಗೂ
ಅಧ್ಯಕ್ಷರು, ತೆರಿಗೆ ಸುಧಾರಣಾ ಆಯೋಗ

# ಸಂದೇಶ

ಉಪ್ಪಾರ ಸಮುದಾಯದ ಹಿತಚಿಂತಕರೂ ಆ ಜನಾಂಗದ ಏಳಿಗೆಗಾಗಿ ಅವಿರತವಾಗಿ ಶ್ರಮಿಸಿದ ನಿವೃತ್ತ ಕಾರ್ಯಪಾಲಕ ಇಂಜಿನಿಯರ್ ಶ್ರೀ ಡಿ. ಎಸ್. ರಾಮಪ್ಪ ಅವರ ಎಪ್ಪತ್ತೈದನೆಯ ಹುಟ್ಟುಹಬ್ಬದ ಪ್ರಯುಕ್ತ 'ಉಪ್ಪಾರ ಹಣತೆ' ಎಂಬ ಅಭಿನಂದನ ಗ್ರಂಥವನ್ನು ಹೊರತರುತ್ತಿರುವ ವಿಚಾರ ತಿಳಿದು ಸಂತೋಷವಾಯಿತು.

ಶ್ರೀ ರಾಮಪ್ಪನವರು ಬಾಲ್ಯದಿಂದಲೂ ಬಡತನದ ಬೇಗೆಯಲ್ಲಿ ಬೆಂದು ವಿದ್ಯಾಭ್ಯಾಸ ಮಾಡಿದವರು. ಲೋಕೋಪಯೋಗಿ ಇಲಾಖೆಯಲ್ಲಿ ಇಂಜಿನಿಯರ್ ಆಗಿ ಕೆಲಸಕ್ಕೆ ಸೇರಿದ ನಂತರ ಅವರು ತಮಗೆ ಜನ್ಮ ನೀಡಿದ ಸಮಾಜವನ್ನು ಎಂದೂ ಮರೆತವರಲ್ಲ. ಬಡವರು ಹಾಗು ವಿಶೇಷವಾಗಿ ವಿದ್ಯಾರ್ಥಿಗಳ ಬಗ್ಗೆ ಅನುಕಂಪ ಉಳ್ಳವರು.

ನಿವೃತ್ತಿಯ ನಂತರ ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾಗಿ, ಸರ್ವಜನಾದರಣೀಯವಾದ ಕೆಲಸ ಮಾಡಿದ್ದಾರೆ. ಅವರ ಈ ಸೇವೆ ಉಪ್ಪಾರ ಸಮುದಾಯಕ್ಕೆ ಮಾರ್ಗದರ್ಶನ ನೀಡಲಿ. ಅಭಿನಂದನ ಗ್ರಂಥ ಸುಂದರವಾಗಿ ಹೊರಬರಲಿ. ಸಮಾರಂಭ ಯಶಸ್ವಿಯಾಗಲೆಂದು ಹಾರೈಸುತ್ತೇನೆ.

ಎಂ. ವೀರಪ್ಪ ಮೊಯಿಲಿ.
(ಎಂ. ವೀರಪ್ಪ ಮೊಯಿಲಿ)



ಹೆಚ್. ವಿಶ್ವನಾಥ್
ಸಹಕಾರ ಸಚಿವರು



ಬೆಂಗಳೂರು - ೫೬೦ ೦೦೧

# ಸಂದೇಶ

ಉಪ್ಪಾರ ಜನಾಂಗವು ಅತಿ ಹಿಂದುಳಿದ ವರ್ಗಕ್ಕೆ ಸೇರಿದ್ದು. ಈ ಜನಾಂಗವು ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದ ಜನಾಂಗವಾಗಿದೆ. ಉಪ್ಪಾರ ಜನಾಂಗಕ್ಕೆ ದಿವಂಗತ ಡಿ. ದೇವರಾಜ್ ಅರಸ್‌ರವರು ಮುಖ್ಯಮಂತ್ರಿಯಾಗಿದ್ದಾಗ ಈ ಜನಾಂಗವನ್ನು ಗುರುತಿಸಿ ಹೆಚ್ಚು ಸ್ಥಾನಮಾನ ಕಲ್ಪಿಸಿಕೊಟ್ಟಿದ್ದರು. ಈ ಜನಾಂಗವು ಸಾಕಷ್ಟು ಅಭಿವೃದ್ಧಿ ಹೊಂದಬೇಕಾಗುವ ಅವಶ್ಯಕತೆ ಇರುತ್ತದೆ. ಇಂತಹ ಒಂದು ಸಮುದಾಯದಲ್ಲಿ ಹಿತಚಿಂತಕರೂ, ನಿವೃತ್ತ ಕಾರ್ಯಪಾಲಕ ಅಭಿಯಂತರರು ಹಾಗೂ ಅತ್ಯಂತ ಶ್ರಮಜೀವಿಯಾಗಿ ಮೂಡಿ ಬಂದ ಶ್ರೀ ಡಿ. ಎಸ್. ರಾಮಪ್ಪರವರು ೭೫ ವಸಂತಗಳನ್ನು ಪೂರೈಸಿರುವುದು ನನಗೆ ಅತೀವ ಆನಂದವಾಗಿದೆ.

ಸದರಿಯವರು ತಮ್ಮ ಜೀವನದುದ್ದಕ್ಕೂ ಅನೇಕ ಜನಪರ ಹೋರಾಟಗಳ ನೇತಾರರಾಗಿ, ಹಲವಾರು ಸಂಘ-ಸಂಸ್ಥೆಗಳ ಅಧ್ಯಕ್ಷರಾಗಿ ಸಾರ್ವಜನಿಕ ಜೀವನದಲ್ಲಿ ಅಕ್ಷರಶಃ ಮಾದರಿಯಾಗಬಲ್ಲ ಒಂದು ಹೊಸ ಶೈಲಿಯನ್ನೇ ಹುಟ್ಟುಹಾಕಿದ್ದಾರೆ ರಾಮಪ್ಪನವರು. ಇವರ ಹುಟ್ಟುಹಬ್ಬದ ಪ್ರಯುಕ್ತ ಹೊರತರಲಾಗುತ್ತಿರುವ 'ಉಪ್ಪಾರ ಹಣತೆ' ಎಂಬ ಅಭಿನಂದನ ಗ್ರಂಥವು ಶೈಕ್ಷಣಿಕ ಹಾಗೂ ಮಾಹಿತಿಯ ಜ್ಞಾನಜ್ಯೋತಿಯಾಗಿ ಮೂಡಿ ಬರಲಿ ಎಂದು ಹಾರೈಸುತ್ತಾ, ಸದರಿಯವರು ಇನ್ನೂ ನೂರ್ಕಾಲ ಬಾಳಿ, ಭಗವಂತನು ಅವರಿಗೆ ಸಕಲ ಸನ್ಮಂಗಳವನ್ನುಂಟು ಮಾಡಲಿ ಎಂದು ಈ ಸಂದರ್ಭದಲ್ಲಿ ತುಂಬು ಹೃದಯದಿಂದ ಶುಭಕೋರುತ್ತೇನೆ.

(ಹೆಚ್. ವಿಶ್ವನಾಥ್)



ಯೌವನದಲ್ಲಿ ಶ್ರೀ ಡಿ. ಎಸ್. ರಾಮಪ್ಪ



ವಿವಾಹವಾದ ತರುಣದಲ್ಲಿ
ಶ್ರೀ ಡಿ. ಎಸ್ ರಾಮಪ್ಪ ಮತ್ತು ಶ್ರೀಮತಿ ಸಣ್ಣಮ್ಮ ರಾಮಪ್ಪ



ರಾಮಪ್ಪ ದಂಪತಿಗಳ ಕುಟುಂಬ

ಎಡದಿಂದ - ಗಂಡುಮಕ್ಕಳು ಡಿ ಆರ್. ಯೋಗೇಂದ್ರ, ಡಿ. ಆರ್. ಕೇಶವಮೂರ್ತಿ

ಬಲದಿಂದ - ಮೊದಲನೆಯವರು ಕುಮಾರಿ ಉಷಾದೇವಿ

ಹಿಂದಿನ ಸಾಲಿನಲ್ಲಿ - ಕುಮಾರಿ ವಿಜಯಲಕ್ಷ್ಮಿ



ದಾವಣಗೆರೆಯಲ್ಲಿ ಭಗೀರಥ ಜಯಂತಿ ಆಚರಣೆಯಲ್ಲಿ ಶ್ರೀಯುತರೊಂದಿಗೆ
ಓಂಕಾರ ಮಹಾ ಸಂಸ್ಥಾನದ ಪೂಜ್ಯ ಶ್ರೀ ಶ್ರೀ ಶಿವಪುರಿ ಮಹಾಸ್ವಾಮೀಜಿ
ಮತ್ತು ಉಪ್ಪಾರ ಜಗದ್ಗುರುಗಳಾದ ಪೂಜ್ಯ ಶ್ರೀ ಶ್ರೀ ಬ್ರ. ಲೇಪಾಕ್ಷ ಸ್ವಾಮೀಜಿ



ದಾವಣಗೆರೆಯ ಶ್ರೀ ಭಗೀರಥಾನಂದ ಶಾಖಾಮಠದ ಉಪಾಧ್ಯಕ್ಷರಾದ
ಶ್ರೀ ಕೆ. ಜಿ. ಬಸಪ್ಪ ಅವರನ್ನು ಸನ್ಮಾನಿಸುತ್ತಿರುವುದು



ದಾವಣಗೆರೆಯಲ್ಲಿ ಸ್ವಾಮಿ ಭಗೀರಥಾನಂದ ಉಪ್ಪಾರ ಜಗದ್ಗುರು
ಶಾಖಾಮತದ ಉದ್ಘಾಟನೆ. ಪೂಜ್ಯ ಶ್ರೀ ಶ್ರೀ ಶ್ರೀ ಲೇಪಾಕ್ಷ
ಸ್ವಾಮೀಜಿಯವರೊಂದಿಗೆ



ದಾವಣಗೆರೆಯಲ್ಲಿ ಮೂರನೆಯ ರಾಜರ್ಷಿ ಭಗೀರಥ ಜಯಂತಿ ಆಚರಣೆ
ಎಡಗಡೆಯಿಂದ - ಶ್ರೀ ಡಿ. ಎಸ್. ರಾಮಪ್ಪ, ಶ್ರೀ ಹೆಚ್. ಸಿ. ನೀರಾವರಿ
ಶ್ರೀ ಶ್ಯಾಮನೂರು ಶಿವಶಂಕರಪ್ಪ, ಪೂಜ್ಯ ಲೇಪಾಕ್ಷ ಸ್ವಾಮೀಜಿಯವರು
ಮತ್ತು ಹೆಚ್. ಹನುಮಂತಪ್ಪ



ದಾವಣಗೆರೆಯ ಭಗೀರಥಾನಂದ ಶಾಖಾಮಠದ ವಾರ್ಷಿಕ ಸಾಮಾನ್ಯ ಸಭೆ.
ಸಾನಿಧ್ಯ : ಭಗೀರಥ ಪೀಠ ಉಪ್ಪಾರ ಜಗದ್ಗುರು
ಪೂಜ್ಯ ಶ್ರೀ ಶ್ರೀ ಪುರುಷೋತ್ತಮಾನಂದ ಪುರಿ ಸ್ವಾಮೀಜಿ



ಶ್ರೀಯುತರಿಗೆ ಗಂಗಾವತಿಯ ಪೂಜ್ಯ ಶ್ರೀ ಶ್ರೀ ಮಲ್ಲಿಕಾರ್ಜುನ ಸ್ವಾಮೀಜಿ
ಅವರ ಪೂರ್ಣ ಆಶೀರ್ವಾದ



ಕುಷ್ಟಗಿಯಲ್ಲಿ ಜರುಗಿದ ಭಗೀರಥ ಸಂಕಲ್ಪ ಮಾಸಪತ್ರಿಕೆ ಬಿಡುಗಡೆ
ಖ್ಯಾತ ಸಮಾಜ ವಿಜ್ಞಾನಿ ಡಾ. ಮುಮ್ತಾಜ್ ಆಲಿಖಾನ್
ಅವರಿಗೆ ಧನ್ಯವಾದ ಸಮರ್ಪಣೆ



ಮಗ ಡಿ. ಆರ್. ಯೋಗೇಂದ್ರ ಅವರ ವಿವಾಹ ಮಹೋತ್ಸವ
ಸೊಸೆ ಶುಭಾಂಗಿ ಯೋಗೇಂದ್ರ. ಬೀಗರಾದ ಕೆಂಚಪ್ಪಗೋಳ್
ಶ್ರೀಮತಿ ಮಂದಾಕಿನಿ ಕೆಂಚಪ್ಪಗೋಳ್



ದಾವಣಗೆರೆಯಲ್ಲಿ ವಿಶ್ರಾಂತ ಜೀವನ ಕಳೆಯಲು ನಿರ್ಧರಿಸಿರುವ
ಶ್ರೀ ಡಿ. ಎಸ್. ರಾಮಪ್ಪ ದಂಪತಿಗಳು



# ಮುನ್ನುಡಿ

ಕರ್ನಾಟಕ ಲೋಕಸೇವಾ ಆಯೋಗದ ನಿವೃತ್ತ ಸದಸ್ಯರೂ ನನ್ನ ಆತ್ಮೀಯರೂ ಆದ ಹೆಚ್.ಸಿ. ನೀರಾವರಿ ಅವರು "ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದ ಶ್ರೀ ಡಿ.ಎಸ್. ರಾಮಪ್ಪ ಅವರಿಗೆ ಸನ್ಮಾನ ಸಮಾರಂಭ ಇಟ್ಟುಕೊಂಡಿದ್ದೇವೆ, ಅದರ ಅಂಗವಾಗಿ 'ಉಪ್ಪಾರ ಹಣತೆ' ಎಂಬ ಅಭಿನಂದನ ಗ್ರಂಥ ಹೊರತರುತ್ತಿದ್ದೇವೆ. ತಾವು ಅದಕ್ಕೆ ಮುನ್ನುಡಿ ಬರೆದು ಕೊಡಬೇಕೆಂದು" ಕೇಳಿದ್ದರು. ಸಾಮಾನ್ಯವಾಗಿ ಸರ್ಕಾರಿ ಅಧಿಕಾರಿಗಳು ಮೂರು ದಶಕಗಳ ಸರ್ಕಾರಿ ಸೇವೆಯ ನಂತರ ಹೆಚ್ಚು ಕಡಿಮೆ ನಿಷ್ಕ್ರಿಯರಾಗುವುದುಂಟು. ಆದರೆ ಹೆಚ್.ಸಿ. ನೀರಾವರಿ ಅವರು ನಿವೃತ್ತಿಯನಂತರ ಮತ್ತಷ್ಟು ಕ್ರಿಯಾಶೀಲರಾಗಿದ್ದಾರೆ. 'ಭಗೀರಥ ಸಂಕಲ್ಪ' ಎಂಬ ಮಾಸಪತ್ರಿಕೆಯನ್ನು ಅತ್ಯಂತ ಸುಂದರವಾಗಿ ಹೊರತರುತ್ತಿದ್ದಾರೆ. ಉಪ್ಪಾರ ಸಮುದಾಯದ ಜಾಗೃತಿಗೆ ತಮ್ಮ ವೈಯಕ್ತಿಕ ಕಷ್ಟಸುಖಗಳನ್ನು ಮರೆತು ಹಗಲಿರುಳು ದುಡಿಯುತ್ತಿದ್ದಾರೆ. ಅದಕ್ಕಾಗಿ ಅವರನ್ನು ಮೊದಲಿಗೆ ಮನಸಾರೆ ಅಭಿನಂದಿಸುತ್ತೇನೆ. ಹೆಚ್.ಸಿ. ನೀರಾವರಿ ಅವರು ಮೂರು ದಶಕಗಳ ಕಾಲ ಪ್ರಾಮಾಣಿಕವಾಗಿ ಸರ್ಕಾರಿಸೇವೆ ಸಲ್ಲಿಸಿದ್ದಾರೆ. ಅವರು ತಮ್ಮ ಸೇವಾವಧಿಯಲ್ಲಿ ಹಿಂದುಳಿದ, ದಲಿತ ಹಾಗೂ ಬಡವರ ಬಗ್ಗೆ ವಿಶೇಷ ಅನುಕಂಪ ಹೊಂದಿದ ಅಧಿಕಾರಿಗಳೆಂದು ಪ್ರಸಿದ್ಧರಾಗಿದ್ದರು. ನನ್ನ ಆಪ್ತ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ ಅವರು ನಿಷ್ಠುರವಾದಿಗಳು. ವಹಿಸಿಕೊಂಡ ಕೆಲಸವನ್ನು ಶ್ರದ್ಧೆಯಿಂದ ಮುಗಿಸುವ ಮನೋಭಾವವುಳ್ಳವರು. ಅವರ ಸಂಪೂರ್ಣ ಶಕ್ತಿಯನ್ನು ಸಮುದಾಯ ಬಳಸಿಕೊಳ್ಳಬೇಕು.

ಶ್ರೀ ಹೆಚ್.ಸಿ. ನೀರಾವರಿ ಅವರಿಗೆ ಶ್ರೀ ಡಿ.ಎಸ್. ರಾಮಪ್ಪ ಅವರು ಆದರ್ಶವೆಂಬುದನ್ನು ಈ ಬೃಹತ್ ಗ್ರಂಥದ ಪ್ರತಿಯೊಂದು ಪುಟವೂ ಸಾರುತ್ತದೆ. ಶ್ರೀ ಡಿ.ಎಸ್. ರಾಮಪ್ಪ ಅವರನ್ನು ಬಹಳ ದಿನಗಳಿಂದ ನೋಡುತ್ತಿದ್ದೇನೆ. ಅವರು ಅತ್ಯಂತ ಸರಳರು ಹಾಗೂ ನಿಸ್ಪೃಹರು.

1928ರಲ್ಲಿ ಚನ್ನಗಿರಿ ತಾಲ್ಲೂಕು, 'ದೇವರಹಳ್ಳಿ'ಯಲ್ಲಿ ಜನಿಸಿದ ರಾಮಪ್ಪ ಅವರದು ಯುವಜನತೆಗೆ ನಿರಂತರ ಸ್ಫೂರ್ತಿ ನೀಡುವ 'ಹೋರಾಟದ ಬದುಕು'. ಆದರೆ ಬಾಲ್ಯದಲ್ಲೇ ತಂದೆ-ತಾಯಿಗಳನ್ನು ಕಳೆದುಕೊಂಡು ಅನಾಥವಾಗಿ ಬೀದಿಗೆ ಬಿದ್ದ ರಾಮಪ್ಪ ಬೆಳೆದ ರೀತಿ ಪವಾಡ ಸದೃಶವಾದುದು. ಸ್ವಾತಂತ್ರ್ಯ ಪೂರ್ವದಲ್ಲಿ ಮೇಲ್ವರ್ಗದ ಒಂದೆರಡು ಜನರನ್ನು ಬಿಟ್ಟರೆ ಯಾರಿಗೆ ತಾನೆ 'ವಿದ್ಯೆ'ಯ ಮಹತ್ವ ಗೊತ್ತಿತ್ತು? ಕುಳೇನೂರು ಶಾನುಭೋಗ್ ಸುಬ್ಬರಾಯರ ಸಹಾಯ ಪಡೆದು ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢಶಿಕ್ಷಣವನ್ನು ಮುಗಿಸಿದ ಶ್ರೀರಾಮಪ್ಪ ವಾರಾನ್ನ ಮಾಡಿಕೊಂಡು ವ್ಯಾಸಂಗ ಮಾಡಿದ್ದಾರೆ. ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಲ್ಲಿನ ತಮ್ಮ ಜನಾಂಗದ ಮುಖಂಡರಿಂದ ಆರ್ಥಿಕ ಸಹಾಯ ಪಡೆದಿದ್ದಾರೆ. ಇಂಟರ್‌ಮೀಡಿಯಟ್ ವ್ಯಾಸಂಗದ ಅವಧಿಯಲ್ಲಿ 'ಮೈಸೂರು ಚಲೋ' ಚಳವಳಿಯಲ್ಲಿ ಭಾಗವಹಿಸಿ ಪೋಲೀಸರಿಂದ ಲಾಠಿ ಏಟು ತಿಂದಿದ್ದಾರೆ.

ಬಡತನವಿದ್ದರೂ ಬೆಂಗಳೂರಿನಲ್ಲಿ ಬಿ.ಇ. ವ್ಯಾಸಂಗ ಮಾಡಲು ಮುಂದಾದರು. ಆ ಅವಧಿಯಲ್ಲೇ ಕುಂಸಿಯ ಬಾಬು ಹುಚ್ಚಣ್ಣ ಅವರ ಮಗಳು ಸಣ್ಣಮ್ಮನೊಡನೆ ವಿವಾಹ. ವ್ಯಾಸಂಗಾವಧಿಯಲ್ಲೇ ಅವರು ಎರಡು ಮಕ್ಕಳ ತಂದೆ. 'ಸಂಸಾರ ವಿದ್ಯೆಗೆ ಶತ್ರು' ಎಂಬ ಲೋಕೋಕ್ತಿಯನ್ನು ಸುಳ್ಳಾಗಿಸಿ ಬಿ.ಇ. ಡಿಗ್ರಿ ಪಡೆದರು.

ತೀರ್ಥಹಳ್ಳಿಯಲ್ಲಿ ಲೋಕೋಪಯೋಗಿಯ ಸೂಪರ್‌ವೈಸರ್ ಆಗಿ ಸರ್ಕಾರಿ ಸೇವೆಗೆ ಸೇರಿದರು. ಸಿರಸಿ, ಸಿದ್ದಾಪುರ, ವಿರಾಜಪೇಟೆ, ಕುಷ್ಟಗಿ, ಸಾಗರ ಮೊದಲಾದೆಡೆ ಕೆಲಸ ಮಾಡಿದ ಡಿ.ಎಸ್. ರಾಮಪ್ಪ ಹತ್ತು ಹಲವು ತರಹದಂತಿರುವ ಸರ್ಕಾರಿ ಅಧಿಕಾರಿಯಲ್ಲ. ನಾವು ಬೇಕಾದಷ್ಟು ದೇವಸ್ಥಾನಗಳನ್ನು ನೋಡಿರಬಹುದು. ಅನೇಕ ಪೂಜೆಗಳನ್ನು ಕಂಡಿರಬಹುದು. ಬಂಗಾಳದ ರಾಮಕೃಷ್ಣ ಪರಮಹಂಸರು ಮಾಡುವ ಪೂಜಾ ವಿಧಾನ ಎಂತಹದು! ಅರ್ಪಣಾ ಮನೋಭಾವವೇ ಅವರ ಪೂಜೆಯ ವೈಶಿಷ್ಟ್ಯ. ಹಾಗೆಯೇ ಶ್ರೀ ಡಿ.ಎಸ್. ರಾಮಪ್ಪ ಅವರ ಸರ್ಕಾರಿ ಸೇವೆ ಅರ್ಪಣಾ ಮನೋಭಾವದ ಕಾಯಕ ಪೂಜೆಯಾಗಿದೆ.

ಶ್ರೀ ಡಿ.ಎಸ್. ರಾಮಪ್ಪ ಅವರ ವ್ಯಕ್ತಿತ್ವವನ್ನು ತಿಳಿಯಲು 'ಕಾಯಕಯೋಗಿ' ಅಧ್ಯಾಯ ತುಂಬಾ ಸಹಕಾರಿಯಾಗಿದೆ. 'ವಿವೇಕವ ಬಿತ್ತು ಬಾ ರಾಮ', 'ಧೀಮಂತ ಚೇತನ', 'ಭಗೀರಥನ ನೆನೆವಂತೆ ಮಾಡಿದರು', 'ಪ್ರಾಮಾಣಿಕ ದುಡಿಮೆಗಾರರು', 'ವ್ಯಕ್ತಿಯಲ್ಲ, ಸಮುದಾಯದ ಶಕ್ತಿ', 'ಅಪರೂಪದ ವ್ಯಕ್ತಿ', 'ಪ್ರೇಮ ಸ್ವರೂಪಿಗಳು', 'ಉಪ್ಪಾರ ಕಣ್ಮಣಿ', 'ಸಾಧಕ ಸಿರಿ',

'ಸ್ಮರಣೀಯರು', 'ಅಜಾತಶತ್ರು', 'ನಮ್ಮ ಸಮಾಜ ಕಟ್ಟಿದವರು', 'ಸ್ಮರಣಾರ್ಹರು', 'ಸಮಾಜದ ಋಣ ತೀರಿಸಿದವರು', 'ಮಾರ್ಗದರ್ಶಿಗಳು' - ಹೀಗೆ ಡಿ.ಎಸ್. ರಾಮಪ್ಪ ಅವರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಅವರ ಬಂಧು-ಮಿತ್ರರು ಇಲ್ಲಿ ಆತ್ಮೀಯವಾಗಿ ಚಿತ್ರಿಸುತ್ತಾರೆ. ಹನ್ನೊಂದು ವರುಷಗಳ ಕಾಲ ಉಪ್ಪಾರ ಜನಾಂಗಕ್ಕೆ ಶ್ರೀಯುತರು ಸಲ್ಲಿಸಿದ ಸೇವೆ ಶ್ಲಾಘನೀಯವಾದುದು. ಅನಾಥರಾದ ತಮ್ಮನ್ನು ಪೋಷಿಸಿದ ಉಪ್ಪಾರ ಸಮಾಜಕ್ಕೆ ತಮ್ಮನ್ನು ತೆತ್ತುಕೊಳ್ಳಲು ನಿರ್ಧಾರ ಮಾಡಿದ್ದುದು, ಆ ಸಮಾಜದ ಪುಣ್ಯ. ಉಪ್ಪಾರ ಸಮಾಜದ ಜನಗಣತಿ ಕಾರ್ಯದಿಂದ ಹಿಡಿದು ಅದರ ಎಲ್ಲಾ ಮಗ್ಗುಲುಗಳನ್ನು ಚಿಂತನೆ ಮಾಡಿದ ಕೀರ್ತಿ ಡಿ.ಎಸ್. ರಾಮಪ್ಪ ಅವರಿಗೆ ಸಲ್ಲಬೇಕು.

ಈ ಗ್ರಂಥದ ಮತ್ತೊಂದು ಅಧ್ಯಾಯ 350 ಪುಟಗಳಷ್ಟು ಹಬ್ಬಿರುವ 'ಕರ್ನಾಟಕದಲ್ಲಿ ಉಪ್ಪಾರ ಸಮಾಜ'. ಈ ಅಧ್ಯಾಯ ಪ್ರಾರಂಭದ ಲೇಖನವೇ ಉಪ್ಪಾರ ಧಾರ್ಮಿಕ ಪರಂಪರೆ. ಐನೂರು ವರುಷಗಳ ಸುದೀರ್ಘ ಪರಂಪರೆಯುಳ್ಳ ಚಿನ್ಮೂಲಾದ್ರಿ ಮಹಾಸಂಸ್ಥಾನದ ಪರಿಚಯವನ್ನು ಈ ಲೇಖನದಲ್ಲಿ ಮಾಡಿಕೊಡಲಾಗಿದೆ.

ಬೀದರ್ ಜಿಲ್ಲೆಯಿಂದ ಹಿಡಿದು ಬೆಂಗಳೂರು ನಗರಜಿಲ್ಲೆಯ ತನಕ ೨೫ ಜಿಲ್ಲೆಗಳಲ್ಲಿರುವ ಉಪ್ಪಾರ ಸಮಾಜದ ವ್ಯಾಪಕ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಯಾವುದೇ ಹಿಂದುಳಿದ ಸಮಾಜ ಯೋಚಿಸದ, ಯೋಜಿಸದ ರೀತಿ ಉಪ್ಪಾರ ಸಮಾಜದ ಸಾಮಾಜಿಕ ಕ್ಷೇತ್ರದ ಅಧ್ಯಯನವನ್ನು ಮಾಡಲಾಗಿದೆ. ಇದೊಂದು ಅಪೂರ್ವ ಪ್ರಯತ್ನ.

ನಾನು ಮುಖ್ಯಮಂತ್ರಿಯಾಗಿದ್ದಾಗ 'ಡಿ. ದೇವರಾಜು ಅರಸು ಸಂಶೋಧನಾ ಕೇಂದ್ರ'ಕ್ಕೆ ಕ್ಷೇತ್ರಕಾರ್ಯ ಮಾಡಿ ಈ ತರಹದ ಸಂಶೋಧನಾ ಕಾರ್ಯ ಕೈಗೊಳ್ಳುವಂತೆ ಸೂಚಿಸಿದ್ದೆ. ನಮ್ಮ ಹಿಂದುಳಿದ ಆಯೋಗಗಳು ಅನೇಕ ಸಾರಿ ಸಮರ್ಪಕ ಅಂಕಿ ಅಂಶಗಳ ಕೊರತೆಯಿಂದ ಬಳಲುತ್ತಿವೆ. ವೆಂಕಟಸ್ವಾಮಿ ಹಿಂದುಳಿದ ಆಯೋಗ, ಆಯಾಯ ಜಾತಿ ಜನಸಂಖ್ಯೆಯ ಜನ ಗಣತಿ ಕಾರ್ಯ ಕೈಗೊಂಡಿತು. ಆದರೆ ಅದರ ಪ್ರಯತ್ನ ವೈಜ್ಞಾನಿಕ ತಳಹದಿಯ ಮೇಲೆ ರೂಪುಗೊಂಡಿಲ್ಲದ ಕಾರಣ ವ್ಯಾಪಕ ಪ್ರತಿಭಟನೆ ಕಂಡುಬಂತು.

ಯಾವುದೇ ಆಸರೆಯಿಲ್ಲದ ಉಪ್ಪಾರ ಸಮಾಜದಂತಹ ಅತ್ಯಂತ ಹಿಂದುಳಿದ ಸಮಾಜಗಳು ತಮ್ಮ ರಕ್ಷಣೆಯನ್ನು ತಾವೇ ಮಾಡಿಕೊಳ್ಳಬೇಕು. ಸರ್ವೋಪಯೋಗಿಯಾದ ಅಂಕಿ ಅಂಶಗಳನ್ನು ವೈಜ್ಞಾನಿಕ ತತ್ವದ ಹಿನ್ನೆಲೆಯಲ್ಲಿ ಸಂಗ್ರಹಿಸಬೇಕು. ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರದ ವಿದ್ವಾಂಸರಿಂದ ತಾವು ಸಂಗ್ರಹಿಸಿದ ಅಂಕಿ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಬೇಕು. ಹೀಗೆ ಅಧ್ಯಯನ ಮಾಡಿದ ಫಲಗಳ ಆಧಾರದ ಮೇಲೆ ಆಯಾಯ ಹಿಂದುಳಿದ ಸಮುದಾಯಗಳ

ಅಭಿವೃದ್ಧಿಗೆ ಕ್ರಿಯಾಯೋಜನೆ ತಯಾರಿಸಬೇಕು. ಇಂತಹ ಸರ್ವೇಕಾರ್ಯ ನಿರಂತರವಾಗಿ ನಡೆಯುತ್ತಿರಬೇಕು.

ಈ ಗ್ರಂಥಕ್ಕೆ ಮಾಡಿದ ಸರ್ವೇಕಾರ್ಯದಿಂದಾಗಿ ಚಾಮರಾಜನಗರ, ಮೈಸೂರು, ಬೆಳಗಾವಿ, ತುಮಕೂರು, ಕೊಪ್ಪಳ, ಗುಲ್ಬರ್ಗಾ, ಧಾರವಾಡ ಮೊದಲಾದ ಕಡೆ ಉಪ್ಪಾರರ ಜನಸಂಖ್ಯೆ ಗಣನೀಯ ಪ್ರಮಾಣದಲ್ಲಿರುವುದನ್ನು ಗಮನಿಸಬಹುದು. ರಾಜ್ಯದ ಇಪ್ಪತ್ತೈದು ಜಿಲ್ಲೆಗಳಲ್ಲೂ ಅವರನ್ನು ಕಡೆಗಣಿಸುವಂತಿಲ್ಲ. ಸುಮಾರು 65 ತಾಲ್ಲೂಕುಗಳಲ್ಲಿ ಉಪ್ಪಾರರ ಪ್ರಭಾವ ಹೆಚ್ಚಿದೆ.

ಉಪ್ಪಾರರ ಆರ್ಥಿಕ ಸ್ಥಿತಿಯಂತೂ ಅತ್ಯಂತ ಶೋಚನೀಯವಾಗಿರುವುದನ್ನು ಪ್ರತಿಯೊಂದು ಜಿಲ್ಲೆಯ ಲೇಖಕರೂ ಒತ್ತಿ ಹೇಳುತ್ತಾರೆ. ಅವರ ಶೈಕ್ಷಣಿಕ ಪ್ರಮಾಣವಂತೂ ಶೇಕಡ 30ನ್ನೂ ಮೀರಿಲ್ಲವೆಂದರೆ ನಮ್ಮ ಅಭಿವೃದ್ಧಿ ಯೋಜನೆಗಳ ಅನುಷ್ಠಾನ ಯಾವ ರೀತಿ ಆಗಿದೆ ಎಂಬುದನ್ನು ಊಹಿಸಬಹುದು. ಸಾಮಾಜಿಕವಾಗಿ ಹೇಳುವುದಾದರೆ, 'ಉಪ್ಪಾರ ಸಮಾಜ'ದಲ್ಲಿ ನಿರೀಕ್ಷಿತ ಪ್ರಮಾಣದಲ್ಲಿ ಐಕಮತ್ಯವಿಲ್ಲ. ಮುಗ್ಧತೆ ಹಾಗೂ ಅರಿವಿನ ಕೊರತೆಯಿಂದಾಗಿ ಈ ಸಮಾಜ ನ್ಯಾಯೋಚಿತವಾಗಿ ಪಡೆಯಬೇಕಾದ ಸೌಲಭ್ಯಗಳಿಂದಲೂ ವಂಚಿತವಾಗಿದೆ. ಅದಕ್ಕಾಗಿ ಚಿನ್ನಪ್ಪರೆಡ್ಡಿ ಆಯೋಗದಲ್ಲಿ ನಾನು ಈ ಸಮುದಾಯವನ್ನು ಪ್ರವರ್ಗ ಒಂದಕ್ಕೆ ಸೇರಿಸಿದೆ. ಅದರಿಂದ ಇವರಿಗೆ ಅನೇಕ ರೀತಿಯ ಸೌಲಭ್ಯ ದೊರೆಯುವಂತಾಗಿವೆ.

ಶ್ರೀ ಡಿ.ಎಸ್. ರಾಮಪ್ಪನವರಂತಹ ಅನೇಕ ಹಿರಿಯ ವ್ಯಕ್ತಿಗಳು ಈ ಸಮಾಜಕ್ಕೆ ಸಲ್ಲಿಸಿದ ನಿಷ್ಕಾಮ ಸೇವೆಯ ಫಲವಾಗಿ ಇಷ್ಟಾದರೂ ಕೆಲಸಗಳು ಆಗಿವೆ. ಆದರೆ ಆಗಬೇಕಾದ ಕೆಲಸಗಳೂ ಸಾಕಷ್ಟು ಇವೆ. ಇದರ ಅನುಷ್ಠಾನದ ಹೊಣೆಯನ್ನು ಶ್ರೀ ನೀರಾವರಿಯವರಂತಹ ಹಿರಿಯರು ಹೊರಬೇಕು. ಅವರಿಗೆ ಶ್ರದ್ಧಾಳುಗಳಾಗಿ ಯುವಜನತೆ ಸ್ಪಂದಿಸಬೇಕು. ಆಗ ಮಾತ್ರ ಅಸಹಾಯಕ ಉಪ್ಪಾರ ಸಮುದಾಯದಲ್ಲಿ ಬೆಳಕು ಮೂಡಲು ಸಾಧ್ಯ.

ಶ್ರೀ ಡಿ.ಎಸ್. ರಾಮಪ್ಪ ಅವರಿಗೂ ಮತ್ತು ಅದರ ಕುಟುಂಬ ವರ್ಗಕ್ಕೂ ಹಾರ್ದಿಕ ಶುಭಾಶಯಗಳು. ಡಿ.ಎಸ್. ರಾಮಪ್ಪ ಅವರನ್ನು ಅರ್ಥಪೂರ್ಣವಾಗಿ ಸನ್ಮಾನಿಸುತ್ತಿರುವ ಹೆಚ್.ಸಿ. ನೀರಾವರಿ ಮತ್ತು ಅವರ ಮಿತ್ರರನ್ನು ಮತ್ತೊಮ್ಮೆ ಅಭಿನಂದಿಸುತ್ತೇನೆ.

ದಿನಾಂಕ : 15-8-2002

*ಎಂ. ವೀರಪ್ಪ ಮೊಯಿಲಿ*

ಕೌಸ್ತುಭ, ನಂ. 1, ಆರ್.ಟಿ. ನಗರ
ಬೆಂಗಳೂರು-560 032

* ## ಅರಿಕೆ

ಭಾರತೀಯ ಸಂಸ್ಕೃತಿ ಪರಂಪರೆಯಲ್ಲಿ ಷಷ್ಟ್ಯಬ್ದಿಗೆ ವಿಶೇಷವಾದ ಮಹತ್ವವಿದೆ. ಅರವತ್ತು ಸಂವತ್ಸರಗಳನ್ನು ಮುಗಿಸಿದ ವ್ಯಕ್ತಿಗೆ ಹರಕೆ-ಹಾರೈಕೆಗಳನ್ನು ಅರ್ಪಿಸುವುದು ಸಹಜವಾದ ಕ್ರಿಯೆಯಾಗಿದೆ. ನಮ್ಮ ರಾಮಪ್ಪ ಅವರಿಗೆ ಇದೀಗ ಎಪ್ಪತ್ತೈದು ವರುಷ. ವಿವಾಹವಾಗಿ ಐವತ್ತು ವರುಷಗಳು ಕಳೆದಿವೆ. ನಾಲ್ವರು ಮಕ್ಕಳು, ಹತ್ತು ಮೊಮ್ಮಕ್ಕಳಿಂದಾಗಿ ಅವರ ಸಾಂಸಾರಿಕ ಜೀವನ ಸಂತೃಪ್ತಿಯ ತಾಣವಾಗಿದೆ.

ನಮ್ಮ ರಾಮಪ್ಪನವರು ನಮಗೆ ಮುಖ್ಯವಾಗುವುದು ತಮ್ಮ ಸಾಂಸಾರಿಕ ಜೀವನ ಹಾಗೂ ಸರ್ಕಾರಿ ವೃತ್ತಿಯಿಂದಲ್ಲ; ಅದರಲ್ಲಂತೂ ಅವರು ಸಂಪೂರ್ಣವಾದ ಯಶಸ್ಸು ಕಂಡಿದ್ದಾರೆ. ಇನ್ನು ಸರ್ಕಾರಿ ವೃತ್ತಿಯಲ್ಲಿ ಅವರು ತುಳಿದ ಹಾದಿಯಂತೂ ಇತರರಿಗೆ ಕಷ್ಟಸಾಧ್ಯವಾದ ಮಾರ್ಗ.

ಪ್ರಾಮಾಣಿಕತೆ ಹಾಗೂ ಆಲಸ್ಯವಿಲ್ಲದ ಸೇವಾವೃತ್ತಿ ಅವರ ಪಾಲಿನದಾಗಿದೆ. ಲೋಕೋಪಯೋಗಿ ಇಲಾಖೆಯಲ್ಲಿ ಕಾರ್ಯ ನಿರ್ವಾಹಕ ಇಂಜಿನಿಯರ್ ಆಗಿದ್ದ ಡಿ.ಎಸ್. ರಾಮಪ್ಪ ಅವರಿಗೆ ಬೆಂಗಳೂರು ನಗರದಲ್ಲಿ ಮನೆಯಾಗಲಿ ಅಥವಾ ನಿವೇಶನವಾಗಲಿ ಇಲ್ಲವೆಂದರೆ ಯಾರೂ ಆಶ್ಚರ್ಯ ಪಡಬೇಕಾಗಿಲ್ಲ.

ಬಾಲ್ಯದಲ್ಲೇ ಮಾತಾ-ಪಿತೃಗಳನ್ನು ಕಳೆದುಕೊಂಡ ರಾಮಪ್ಪ ಅವರು ಎಂದೂ ನಕಾರಾತ್ಮಕ ಧೋರಣೆ ಬೆಳೆಸಿಕೊಳ್ಳಲಿಲ್ಲ. ಅದರ ಬದಲು ಅಪಾರವಾದ 'ಜನಪ್ರೀತಿ' ಹಾಗೂ 'ಮಾನವೀಯ

ಗುಣ'ಗಳನ್ನು ಬೆಳೆಸಿಕೊಂಡರು. ಸಹಾಯ ಮಾಡಿದವರನ್ನು ಸ್ಮರಿಸುವುದು ರಾಮಪ್ಪ ಅವರ ಹಿರಿದಾದ ಗುಣ. ಬಾಲ್ಯದಲ್ಲಿ ಸಹಾಯ ಮಾಡಿದ ಕುಳೇನೂರು ಶಾನುಭೋಗ್ ಕುಟುಂಬಕ್ಕೆ ಅವರು ಮಾಡಿದ ಉಪಕಾರ ಒಂದಲ್ಲ ಹಲವು. ಶಾನುಭೋಗರಿಗೆ ಅವರು ಬದುಕಿರುವ ತನಕ ತಾವೇ ಪೆನ್‌ಷನ್ ಕೊಡುತ್ತಿದ್ದರೆಂದರೆ ಅವರ ಮನೋಧರ್ಮ ಎಂತಹುದು ಎಂಬುದನ್ನು ತಿಳಿಯಬಹುದು.

1972ರಲ್ಲಿ ಕುಷ್ಟಗಿಯಲ್ಲಿ ಅಸಿಸ್ಟಂಟ್ ಎಕ್ಸಿಕ್ಯುಟಿವ್ ಇಂಜಿನಿಯರ್ ಆಗಿದ್ದ ರಾಮಪ್ಪನವರು ನಮ್ಮ ಪ್ರದೇಶದ ಜನತೆಯಲ್ಲಿ ಸೇವಾಮನೋಭಾವವನ್ನು ಪ್ರಚೋದಿಸುವಲ್ಲಿ ಮೂಲ ಪ್ರೇರಕರಾಗಿದ್ದರು.

ಇಂತಹ ಹಿರಿಯ ಚೇತನಕ್ಕೆ ಸನ್ಮಾನ ಸಮಾರಂಭವಿಟ್ಟುಕೊಳ್ಳಲು ಯೋಚಿಸುತ್ತಿದ್ದಾಗ ಗೆಳೆಯರಾದ ಶ್ರೀ ಕೆ.ಆರ್. ಕಮಲೇಶ್ ಅವರು ಅರ್ಥಪೂರ್ಣ ಅಭಿನಂದನ ಗ್ರಂಥ ತರುವ ಸಲಹೆ ಮಾಡಿದರು. ಪ್ರಾರಂಭದಲ್ಲಿ ಕೆಲಸದ ಆಗಾಧತೆಯ ಪರಿಚಯವಿಲ್ಲದೆ ನಾನು ಸಹ 'ಆಯ್ತು ಗ್ರಂಥ ತರೋಣ' ಎಂದೆ. ಸಾಕ್ಷರತೆಯ ಪ್ರಮಾಣ ಶೇಕಡ ಮೂವತ್ತು ಕೂಡಾ ಇಲ್ಲದ ಈ ಸಮುದಾಯದಲ್ಲಿ ಅಂಕಿ-ಅಂಶಗಳನ್ನು ಸಂಗ್ರಹಿಸುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ಅದರಲ್ಲೂ ಗ್ರಾಮೀಣ ಪ್ರದೇಶದ ಪ್ರತಿಯೊಂದು ಹಳ್ಳಿ, ಅಲ್ಲಿನ ಕುಟಂಬ ಹಾಗೂ ಅವರ ಸಂಪೂರ್ಣ ಚಿತ್ರ ಪಡೆಯುವುದಕ್ಕೆ ಹರಸಾಹಸ ಮಾಡಬೇಕಾಯಿತು. ಇಪ್ಪತ್ತೈದು ಜಿಲ್ಲೆಗಳ ನೂರ ಅರವತ್ತು ತಾಲ್ಲೂಕುಗಳಿಂದ ಅಗತ್ಯ ಮಾಹಿತಿ ಸಂಗ್ರಹಿಸಲು ನಮ್ಮೆಲ್ಲಾ ಶ್ರಮವನ್ನು ವಿನಿಯೋಗಿಸಲೇಬೇಕಾಯಿತು. ಕೇವಲ ಒಂದು ವರ್ಷಕ್ಕೂ ಕಡಿಮೆ ಅವಧಿಯಲ್ಲಿ ಮಾಹಿತಿಯನ್ನು ಸಂಗ್ರಹಿಸಿ ಅದನ್ನು ಅಧ್ಯಯನಕ್ಕೊಳಪಡಿಸಲಾಯಿತು.

ಮೂಲಭೂತವಾಗಿ ಎಲ್ಲಾ ಜಿಲ್ಲೆಗಳಿಂದಲೂ ನಮ್ಮ ಬಂಧುಗಳು ಸಮರ್ಪಕ ಮಾಹಿತಿಯನ್ನು ನೀಡಿದ್ದಾರೆ. ನಾವುಗಳು ಕ್ಷೇತ್ರಕಾರ್ಯಕ್ಕೆ ಹೋದಾಗ ಎಲ್ಲಾ ರೀತಿಯ ಸಹಾಯ ನೀಡಿದ್ದಾರೆ. ಅವರಿಗೆ ಧನ್ಯವಾದಗಳನ್ನು ಹೇಳಲೇಬೇಕು.

ಉಪ್ಪಾರ ಸಮುದಾಯದ ಬಗ್ಗೆ ನಾವು ಸಂಗ್ರಹಿಸಿದ ಮಾಹಿತಿಗಳು ಅಂತಿಮವಾದುದೇನೂ ಅಲ್ಲ. ಇದಕ್ಕೆ ಸೂಕ್ತವಾದ ಸೇರ್ಪಡೆಯನ್ನು ಆಗಿಂದಾಗ್ಗೆ ಮಾಡುತ್ತಿರಬೇಕಾಗುತ್ತದೆ. ಅನೇಕ ವೇಳೆ ಹಳ್ಳಿಯ ಹೆಸರು ಹಾಗೂ ಉಲ್ಲೇಖಿಸಲ್ಪಡಬೇಕಾದ ವ್ಯಕ್ತಿಗಳ ಹೆಸರು ನಮ್ಮ ಕಣ್ಣು ತಪ್ಪಿ ಹೋಗಿರಬಹುದು. ಈ ಗ್ರಂಥದ ಮರುಮುದ್ರಣದಲ್ಲಿ ಇಂತಹವುಗಳನ್ನು ಸರಿಪಡಿಸಿಕೊಳ್ಳ ಲಾಗುವುದು.

ಮೂಲತಃ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ದುಡಿಯುವ 'ಕಾಯಕ ಯೋಗಿ' ಶ್ರೀ ಡಿ.ಎಸ್. ರಾಮಪ್ಪ ಅವರನ್ನು ಈ ಸನ್ಮಾನಕ್ಕೆ ಒಪ್ಪಿಸುವುದು ಕಷ್ಟದಾಯಕವಾದ ಕೆಲಸ. ಅವರು ತಮ್ಮಲ್ಲಿರುವ ಜನಗಣತಿಯ ಹಳೆ ಭಂಡಾರವನ್ನು ನೀಡಿ ಮಾಹಿತಿ ಸಂಗ್ರಹಕ್ಕೆ ಅಗತ್ಯ

ನೆರವು ನೀಡಿದ್ದಾರೆ. ಶ್ರೀಮತಿ ಸಣ್ಣಮ್ಮ ರಾಮಪ್ಪ ಅವರು ಸಹ ಈ ಕಾರ್ಯದಲ್ಲಿ ಸಹಕರಿಸಿದ್ದಾರೆ. ರಾಜ್ಯಾದ್ಯಂತವಿರುವ ರಾಮಪ್ಪ ಅವರ ಅಭಿಮಾನಿಗಳು ಉತ್ಸಾಹದಿಂದ ಈ ಕಾರ್ಯದಲ್ಲಿ ಪಾಲುಗೊಂಡಿದ್ದಾರೆ. ಅಷ್ಟೇ ಅಲ್ಲ, ಯುವಕರು ಹೆಚ್ಚಿನ ಆಸಕ್ತಿ ತೋರಿಸಿರುವುದು ಸಮುದಾಯದ ಬೆಳವಣಿಗೆಯ ದೃಷ್ಟಿಯಿಂದ ಮಾನ್ಯ ಮಾಡುವಂತಹ ವಿಚಾರ.

ಈ ಗ್ರಂಥವನ್ನು ವಿಭಿನ್ನ ನಿಲುವುಗಳಲ್ಲಿ ಅಧ್ಯಯನ ಮಾಡಿ ವಿದ್ವತ್ಪೂರ್ಣ ಲೇಖನಗಳನ್ನು ಕೊಟ್ಟಿರುವ ಸಾಹಿತಿಗಳಾದ ಡಾ. ಕೆ. ಅನಂತರಾಮು ಮತ್ತು ಡಾ. ಎಂ.ಬಿ. ರಾಜಾಮಣಿ ಅವರುಗಳಿಗೆ ಅಭಿನಂದನ ಸಮಿತಿಯ ಪರವಾಗಿ ಕೃತಜ್ಞತೆಗಳು.

ಅಭಿನಂದನ ಗ್ರಂಥಕ್ಕೆ ಶೈಕ್ಷಣಿಕ ಮೌಲ್ಯವುಳ್ಳ ಮುನ್ನುಡಿ ಬರೆದುಕೊಟ್ಟಿರುವ ಮಹಾಕವಿಗಳೂ, ಮಾಜಿ ಮುಖ್ಯಮಂತ್ರಿಗಳೂ ಹಾಗೂ ತೆರಿಗೆ ಸುಧಾರಣಾ ಆಯೋಗದ ಅಧ್ಯಕ್ಷರೂ ಆದ ಎಂ. ವೀರಪ್ಪಮೊಯಿಲಿ ಅವರಿಗೆ ಅಭಿನಂದನ ಸಮಿತಿ ಸದಾ ಋಣಿಯಾಗಿರುತ್ತದೆ. ಎಲ್ಲಾ ಹಿಂದುಳಿದ ವರ್ಗಗಳ ಏಳಿಗೆಗೆ ಕಾಳಜಿಯುಳ್ಳ ಶ್ರೀ ಮೊಯಿಲಿ ಅವರ ಬದ್ಧತೆಯ ಬಗ್ಗೆ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಚಿನ್ನಪ್ಪರೆಡ್ಡಿ ಹಿಂದುಳಿದ ಆಯೋಗವನ್ನು ಅನುಷ್ಠಾನಗೊಳಿಸಿ, ಉಪ್ಪಾರರಂತಹ ಅನೇಕ ಹಿಂದುಳಿದ ಸಮಾಜಗಳಿಗೆ ರಾಜಕೀಯ ಸಾಮಾಜಿಕ, ಆರ್ಥಿಕ ಸವಲತ್ತು ತಂದುಕೊಟ್ಟ ಕೀರ್ತಿ ಶ್ರೀ ಎಂ. ವೀರಪ್ಪಮೊಯಿಲಿ ಅವರದು. ರಾಜ್ಯದ ಎಲ್ಲಾ ಹಿಂದುಳಿದವರ್ಗಗಳೂ ಸದಾಕಾಲ ಕೃತಜ್ಞತೆಯಿದ ಅವರನ್ನು ಸ್ಮರಿಸುತ್ತವೆ.

ಮಾತಿಲ್ಲದೆ ಮೌನವಾಗಿ ಕೆಲಸ ಮಾಡುತ್ತಾ, ಹಿಂದುಳಿದ ವರ್ಗಗಳ ಹಿತ ಕಾಯುತ್ತಿರುವ ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಮತ್ತು ವಾರ್ತಾ ಸಚಿವರಾದ ಶ್ರೀ ಕಾಗೋಡು ತಿಮ್ಮಪ್ಪ ಅವರು ಸದಾ ನಮ್ಮನ್ನು ಬೆಂಬಲಿಸಿದ್ದಾರೆ.

ಹಿಂದುಳಿದ ವರ್ಗಗಳ ನಾಯಕರೂ ಸಹಕಾರ ಸಚಿವರೂ ಆದ ಶ್ರೀ ಹೆಚ್. ವಿಶ್ವನಾಥ್ ಹಾಗೂ ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವರಾದ ಎಸ್.ಎಸ್. ಮಲ್ಲಿಕಾರ್ಜುನ ಅವರಿಗೆ ಸಮಿತಿಯ ಪರವಾಗಿ ಧನ್ಯವಾದಗಳು.

ದಾವಣಗೆರೆಯಲ್ಲಿ ಸನ್ಮಾನ ಸಮಾರಂಭ ಯಶಸ್ವಿಯಾಗಲು ಅಲ್ಲಿನ ನಮ್ಮ ಬಂಧುಗಳು ಹಾಗೂ ಎಲ್ಲಾ ಸಮುದಾಯದ ನಾಯಕರು ಉದಾರವಾಗಿ ಸಹಕರಿಸಿದ್ದಾರೆ. ಅವರ ನೆರವನ್ನು ಮರೆಯುವಂತಿಲ್ಲ.

ಯಾವುದೇ ಸಮುದಾಯ ಮುಂದೆಬರಬೇಕಾದರೆ ಅದಕ್ಕೆ ಧರ್ಮಗುರುಗಳ ಆಶೀರ್ವಾದ ಅತ್ಯಗತ್ಯ. ಓಂಕಾರ ಮಹಾಸಂಸ್ಥಾನದ ಪೂಜ್ಯ ಶ್ರೀ ಶ್ರೀ ಶಿವಪುರಿಮಹಾಸ್ವಾಮೀಜಿ, ಬ್ರಹ್ಮವಿದ್ಯಾನಗರದ ಭಗೀರಥ ಪೀಠದ ಉಪ್ಪಾರ ಜಗದ್ಗುರು ಪೂಜ್ಯ ಶ್ರೀ ಶ್ರೀ ಪುರುಷೋತ್ತಮಾನಂದಪುರಿ ಮಹಾಸ್ವಾಮೀಜಿ ಅವರ ಪೂರ್ಣ ಆಶೀರ್ವಾದ ನಮ್ಮ ಮೇಲಿದ್ದ

ಕಾರಣ ನಮ್ಮ ಕೆಲಸಗಳೆಲ್ಲಾ ಸುಸೂತ್ರವಾಗಿ ಜರುಗಿವೆ. ಅವರುಗಳಿಗೆ ಭಕ್ತಿಪೂರ್ವಕವಾದ ನಮಸ್ಕಾರಗಳು.

ಇಂತಹ ಮಹತ್ವದ ಸಾಹಿತ್ಯಿಕ ಕೆಲಸ ಸಮರ್ಪಕವಾದ ರೀತಿಯಲ್ಲಿ ಪೂರ್ಣಗೊಳ್ಳಲು ಶ್ರೀ ಕೆ.ಆರ್. ಕಮಲೇಶ್ ಅವರ ಕುಟುಂಬದ ಸಹಕಾರವನ್ನು ಕೃತಜ್ಞತೆಯಿಂದ ಸ್ಮರಿಸುವಂತಹದು. ಅವರ ತಾಯಿ ಶ್ರೀಮತಿ ಎಸ್.ಎನ್. ಸರೋಜಮ್ಮ ಹಾಗೂ ಅವರ ಪತ್ನಿ ಶ್ರೀಮತಿ ಎನ್. ಭಾರತಿ ಅವರುಗಳ ಸಹಕಾರವನ್ನು ಮರೆಯುವಂತಿಲ್ಲ.

ಈ ಪುಸ್ತಕ ಇಷ್ಟೊಂದು ಅಂದವಾಗಿ ಹೊರಬರಲು ಲಕ್ಷ್ಮಿ ಮುದ್ರಣಾಲಯದ ಮಾಲೀಕರಾದ ಅಶೋಕ್‌ಕುಮಾರ್, ಡಿಟಿಪಿ ಮಾಡಿಕೊಟ್ಟ ಫ್ರೆಂಡ್ಸ್ ಕಾಮ್-ಟೆಕ್‌ನ ಸುರೇಶ್‌ಬಾಬು ಹಾಗೂ ಸುಬ್ರಹ್ಮಣ್ಯಂ ಅವರುಗಳನ್ನು ಸ್ಮರಿಸದಿದ್ದರೆ ಕರ್ತವ್ಯ ಲೋಪವಾದೀತು.

ಮುಖಪುಟಕ್ಕೆ ಕಲಾತ್ಮಕವಾಗಿ ಛಾಯಾಚಿತ್ರ ಮಾಡಿಕೊಟ್ಟ ಪ್ರೊ. ಶ್ರೀಧರಮೂರ್ತಿ, ರಕ್ಷಾಪುಟ ರಚಿಸಿಕೊಟ್ಟ ಕಲಾವಿದ ಶ್ರೀಪಾದ್ ಅವರಿಗೆ ವಂದನೆಗಳು.

ಈ ಗ್ರಂಥ ಸಿದ್ಧತೆಯಲ್ಲಿ ನೂರಾರು ಗ್ರಂಥಗಳ ಹಾಗೂ ಲೇಖಕರ ನೆರವು ಪಡೆದಿದ್ದೇವೆ. ಎಲ್ಲಾ ಜಿಲ್ಲೆಗಳ 'ಐತಿಹಾಸಿಕ ಹಿನ್ನೋಟ' ಸಿದ್ಧ ಮಾಡುವಾಗ ಅನೇಕರ ನೆರವು ಪಡೆದಿದ್ದೇವೆ. ರಾಜ್ಯ ಗ್ಯಾಸೆಟಿಯರ್ ಇಲಾಖೆಯಲ್ಲಿ ಹಿರಿಯ ಸಂಪಾದಕರಾದ ಎಸ್.ಎ. ಜಗನ್ನಾಥ್ ಅಮೂಲ್ಯ ಗ್ರಂಥಗಳನ್ನು ಒದಗಿಸಿದ್ದಾರೆ. ಹಿಂದುಳಿದ ಆಯೋಗದಲ್ಲಿ ಸಹಾಯಕ ನಿರ್ದೇಶಕರಾದ ಶ್ರೀಮತಿ ಕೆ.ಎಂ. ವಿಜಯಲಕ್ಷ್ಮಿ ಅಗತ್ಯ ಮಾಹಿತಿ ನೀಡಿದ್ದಾರೆ. ಎಲ್ಲಾ ಕಡೆಗಳಿಂದಲೂ ಸಹಕಾರ, ಸಹಾಯ ಹಾಗೂ ಸಲಹೆಗಳು ಹರಿದುಬಂದಿವೆ.

ಅದಕ್ಕೆ ಮುಖ್ಯ ಕಾರಣ ಡಿ.ಎಸ್. ರಾಮಪ್ಪ ಅವರೆಂದೇ ಹೇಳಬೇಕು. ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ಅವರು ಸಲ್ಲಿಸಿರುವ ಸೇವೆ ನಮಗೆ ಆದರ್ಶವಾಗಿದೆ. ಈ ಜನಾಂಗದಲ್ಲಿರುವ ಎಲ್ಲರಿಗೂ ಅದು ಮಾರ್ಗದರ್ಶಕ. ಅವರ ಸೇವೆಯೆಂಬ ಹಣತೆ ಸಾವಿರಾರು ಹಣತೆಗಳಾಗಿ ಈ ಜನಾಂಗದವರಿಗೆ ಬೆಳಕಾಗಲಿ. ಸಮಾಜ ಸೇವೆಯೆಂಬುದು ಎಲ್ಲರ ಪ್ರಿಯವಾದ ಹವ್ಯಾಸವಾಗಲಿ. ಆ ಮೂಲಕ ಉಪ್ಪಾರ ಸಮುದಾಯ ಹೊಸ ಬೆಳಕನ್ನು ಕಾಣಲಿ ಎಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇನೆ.

ಕೊನೆಯದಾಗಿ ಈ ಎಲ್ಲಾ ಕೆಲಸದ ಶ್ರೇಯಸ್ಸು ಅಭಿನಂದನ ಸಮಿತಿ ಪದಾಧಿಕಾರಿಗಳಿಗೆ ಹಾಗೂ ಸದಸ್ಯರಿಗೆ ಸಲ್ಲಬೇಕು. ಅವರ ಸಲಹೆ-ಸಹಾಯಗಳಿಗಾಗಿ ಅನಂತಾತನಂತ ಕೃತಜ್ಞತೆಗಳು.

ದಿನಾಂಕ : 15-8-2002
ಜೆ.ಪಿ. ನಗರ, ಬೆಂಗಳೂರು

**ಹೆಚ್.ಸಿ. ನೀರಾವರಿ**
ಅಧ್ಯಕ್ಷರು
ಡಿ.ಎಸ್. ರಾಮಪ್ಪ ಸನ್ಮಾನ ಸಮಿತಿ



# ಓದುಗರೊಂದಿಗೆ...

ಹಿರಿಯರಾದ ಶ್ರೀ ಹೆಚ್. ಸಿ. ನೀರಾವರಿ ಅವರು ಒಂದು ವರ್ಷದ ಹಿಂದೆ ದೂರವಾಣಿ ಮಾಡಿ "ಬರುವ ಭಾನುವಾರ ನಮ್ಮ ಮನೆಗೆ ಬನ್ನಿ, ನಮ್ಮ ರಾಮಪ್ಪ ಅವರಿಗೆ ಎಪ್ಪತ್ತೈದು ತುಂಬಿದೆ ಮಾತನಾಡೋಣ" ಎಂದರು.

ಸರ್ಕಾರಿ ಸೇವೆಯಿಂದ ನಿವೃತ್ತರಾದರೂ ಹೆಚ್. ಸಿ. ನೀರಾವರಿ ಅವರು ಇತರ ಅಧಿಕಾರಷಾಹಿಗಳಂತೆ ಬಿಮ್ಮನೆ ಮನೆಯಲ್ಲಿ ಕುಳಿತವರಲ್ಲ. ಅವರು ಒಮ್ಮೆಲೆ ಹತ್ತಾರು ವಿಚಾರಗಳನ್ನು ಕುರಿತು ಯೋಚಿಸುತ್ತಿರುತ್ತಾರೆ. ಅದರಲ್ಲೂ ಗ್ರಾಮೀಣ ಪ್ರದೇಶದ ಉಪ್ಪಾರ ಸಮುದಾಯದವನ್ನೊಳಗೊಂಡಂತೆ ಇತರ ದುರ್ಬಲ ವರ್ಗಗಳ ಸ್ಥಿತಿಗತಿಯ ಬಗ್ಗೆ ಅವರದು ಸದಾ ಚಿಂತನೆ.

ಅವರು ಹೇಳಿದ ಭಾನುವಾರ ಮನೆಗೆ ಹೋದರೆ ಸಮಾನ ಮನಸ್ಕರಾದ ಹತ್ತಾರು ಜನ ಆಗಲೇ ಸೇರಿದ್ದರು. ಸ್ವಭಾವತಃ ನೀರಾವರಿ ಅವರದು ನಾಯಕತ್ವದ ವ್ಯಕ್ತಿತ್ವ. ಯಾರಿಗೂ ಹೇಳಲು ಬಿಡದೆ ತಾವೇ ರಾಮಪ್ಪ ಅವರ ಗುಣಲಕ್ಷಣಗಳನ್ನು ಸಭೆಗೆ ಎಳೆಎಳೆಯಾಗಿ ಬಿಡಿಸತೊಡಗಿದರು. "ಇಂತಹ ಅಪರೂಪದ ವ್ಯಕ್ತಿಯನ್ನು ಸನ್ಮಾನಿಸಿ ನಮ್ಮ ಜನಾಂಗದಲ್ಲಿ ಜಾಗೃತಿಯನ್ನುಂಟು ಮಾಡೋಣ" ಎಂದು ಹೇಳಿ ತಮ್ಮ ಮಾತು ಮುಗಿಸಿದರು. ಬಂದಿದ್ದ ರಾಮಪ್ಪ ಅಭಿಮಾನಿಗಳು ಉತ್ಸಾಹ ತೋರಿಸಿದ್ದುಂಟು. ಎಲ್ಲರೂ 'ನೀವು ಮಾತನಾಡಿ' ಎಂದು ನನಗೆ ಒತ್ತಾಯ ಮಾಡಿದರು. ರಾಮಪ್ಪ

ಅವರು ನನಗೆ ಅಪರಿಚಿತರಲ್ಲ. ಶ್ರೀ ನೀರಾವರಿಯವರ ಜೊತೆ ಅವರನ್ನು ಅನೇಕ ವರ್ಷಗಳಿಂದ ನೋಡುತ್ತಾ ಬಂದಿದ್ದೇನೆ. ಲೋಕೋಪಯೋಗಿ ಇಲಾಖೆಯಲ್ಲಿ ಕಾರ್ಯಪಾಲಕ ಇಂಜಿನಿಯರಾಗಿದ್ದವರು, ಇಷ್ಟೊಂದು ಸರಳವಾಗಿರಲು ಸಾಧ್ಯವೇ? ಎಂಬ ಭಾವನೆ ಕೂಡಾ ನನ್ನಲ್ಲಿ ಸ್ಫುರಿಸಿತು.

ಅವರು ಚನ್ನಗಿರಿ ತಾಲ್ಲೂಕಿನ ದೇವರಹಳ್ಳಿಯವರು. ನನ್ನ ಪತ್ನಿ ಶ್ರೀಮತಿ ಎನ್. ಭಾರತಿಯ ತಾಯಿಯವರ ಪ್ರಾಥಮಿಕ ಶಾಲೆಯ ಸಹಪಾಠಿ, ಶ್ರೀ ರಾಮಪ್ಪ ಅವರು. ಅವರ ವಿನಯ, ಪರೋಪಕಾರ, ಉಪಕಾರ ಸ್ಮರಣೆ, ವಹಿಸಿಕೊಂಡ ಕೆಲಸವನ್ನು ಮಾಡುವ ಶ್ರದ್ಧೆ- ನನಗೆ ಪ್ರಿಯವೆನಿಸಿದ ಗುಣಗಳಾಗಿದ್ದವು. ಈ ಹಿನ್ನೆಲೆಯಲ್ಲಿ ನಾನು ರಾಮಪ್ಪ ಅವರ ಅಭಿಮಾನಿಗಳಿಗೆ "ಕೇವಲ ಸನ್ಮಾನ ಮಾಡಿ, ಶಾಲು ಹೊದಿಸಿ, ಹಾರ ಹಾಕಿದರೇನು ಬಂತು. ಅಭಿನಂದನ ಗ್ರಂಥವನ್ನು ತರೋಣ" ಎಂದೆ. ಎಲ್ಲರೂ ಒಕ್ಕೊರಲಿನಿಂದ 'ಆಯ್ತು' ಎಂದರು. ದಿಢೀರನೆ ಸಂಪಾದಕ ಮಂಡಳಿ ರಚನೆಯಾಯಿತು. "ನೀವೇ ಗ್ರಂಥದ ಹೊಣೆ ಹೊರಿ" ಎಂದರು. ಅಲ್ಲಿಗೆ ಬಂದಿದ್ದ ತರುಣ ಅಧಿಕಾರಿ ಮಂಜುನಾಥ್ ಅವರು ಇರಬೇಕು, "ನಮ್ಮ ಉಪ್ಪಾರ ಸಮುದಾಯಕ್ಕೆ ರಾಮಪ್ಪ ಅವರು ಸೇವೆ ಎಂಬ ಹಣತೆ ಹಚ್ಚಿಟ್ಟಿದ್ದಾರೆ, ಅದನ್ನು ಮತ್ತಷ್ಟು ಪ್ರಜ್ವಲಿಸೋಣ" ಎಂದು ಉತ್ಸಾಹದಿಂದ ಹೇಳಿದರು.

ಅಭಿನಂದನ ಗ್ರಂಥದ ಸ್ವರೂಪ ಹೇಗಿರಬೇಕು, ಈ ಗ್ರಂಥದ ಆದ್ಯತೆಗಳು ಯಾವುವು ? ಎಂಬುದರ ಬಗ್ಗೆ ಸಾಕಷ್ಟು ಚರ್ಚೆ ಚಿಂತನೆಗಳು ನಡೆದವು. ರಾಮಕೃಷ್ಣ ಹೆಗಡೆ ಅವರು ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲಿ ನೇಮಕವಾದ ಕೆ. ವೆಂಕಟಸ್ವಾಮಿ ಆಯೋಗ, ರಾಜ್ಯದ ಹಿಂದುಳಿದ ವರ್ಗದ ಜನಸಂಖ್ಯೆ ಹಾಗೂ ಇತರೆ ವಿಚಾರಗಳ ಬಗ್ಗೆ ಪ್ರಾಥಮಿಕ ಸರ್ವೇ ಕಾರ್ಯ ನಡೆಸಿದೆ. ಅದು ಕೊಟ್ಟ ಅಂಕಿ-ಅಂಶಗಳನ್ನು ಯಾರೂ ಒಪ್ಪಿಕೊಳ್ಳದಿದ್ದರೂ ಆ ದಿಸೆಯಲ್ಲಿ ಮೊದಲ ಬಾರಿಗೆ ವೈಜ್ಞಾನಿಕವಾಗಿ ಯೋಚಿಸಿದ ಕೀರ್ತಿಗೆ ಅದು ಭಾಜನವಾಗಿದೆ.

ಬಹುಮಟ್ಟಿನ ಸಮುದಾಯಗಳು ಹಿಂದುಳಿದ ವರ್ಗಗಳ ಆಯೋಗ ಹಾಗೂ ಸರ್ಕಾರ ಇತರೆ ಸಂದರ್ಭದಲ್ಲಿ ಕೇಳುವ ವಿವರಗಳನ್ನು ಕೊಡಲು ಯಾವುದೇ ವ್ಯವಸ್ಥೆ ಮಾಡಿಕೊಂಡಿಲ್ಲ. ಎಲ್ಲಾ ಸಂಘಗಳ ಪದಾಧಿಕಾರಿಗಳ ಮುಖ್ಯ ಉದ್ದೇಶ, ಮಂತ್ರಿ-ಮಹೋದಯರನ್ನು ಒಲಿಸಿ ಕೊಂಡು ತಾತ್ಕಾಲಿಕ ಲಾಭ ಪಡೆಯುವುದೇ ಆಗಿರುತ್ತದೆ; ತಮ್ಮ ಸಮಾಜದ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಸ್ಥಿತಿಗತಿಗಳ ಬಗ್ಗೆ ಅವರಲ್ಲಿ ಯಾವುದೇ ಅಧಿಕೃತ ಮಾಹಿತಿ ಇರುವುದಿಲ್ಲ. ಅಗತ್ಯ ಬಿದ್ದಾಗ ಹೇಗೋ ವಿವರಗಳು ಸಿದ್ಧವಾಗುತ್ತದೆ. ಯಾವುದಾದರೊಂದು ಹಿಂದುಳಿದ ವರ್ಗದ ಸಮಸ್ತ ವಿವರಗಳನ್ನು ವೈಜ್ಞಾನಿಕ ತತ್ವದ ಹಿನ್ನೆಲೆಯಲ್ಲಿ ಸಂಗ್ರಹಿಸಿ ಅದನ್ನು ಅಧ್ಯಯನಕ್ಕೆ ಒಳಪಡಿಸಬೇಕೆಂಬ ಆಸೆ ಬಹಳ ದಿನಗಳಿಂದ ನನ್ನಲ್ಲಿತ್ತು.

ಶ್ರೀ ನೀರಾವರಿ ಅವರಿಗೆ ಇದನ್ನು ಹೇಳಿ "ರಾಮಪ್ಪ ಅವರ ಅಭಿನಂದನ ಗ್ರಂಥವನ್ನು ಉಪ್ಪಾರ ಸಮುದಾಯದ ಶಾಸ್ತ್ರೀಯ ಅಧ್ಯಯನಕ್ಕೆ ಮೀಸಲಾಗಿಡೋಣ" ಎಂದೆ. ಮೂಲತಃ ಅಕಾಡೆಮಿಷಿಯನ್ ಆದ ಶ್ರೀ ನೀರಾವರಿ ಇದರಲ್ಲಿ ತೋರಿದ ಆಸಕ್ತಿ ನಿಜಕ್ಕೂ ಶ್ಲಾಘನೀಯ ವಾದುದು. ಇಂತಹ ಗ್ರಂಥವನ್ನು ಒಪ್ಪಿಸಿಕೊಳ್ಳಲು ರಾಮಪ್ಪನವರಿಗಿಂತ ಬೇರೆ ಸಮರ್ಥ ವ್ಯಕ್ತಿ ಯಾರೂ ಇಲ್ಲವೆಂದು ಹೇಳಿದ ನೀರಾವರಿ ಅವರು ಇಡೀ ಕೆಲಸವನ್ನು ತಮ್ಮ ಮೇಲೆ ಎಳೆದುಕೊಂಡರು. ಮಾಹಿತಿ ಸಂಗ್ರಹಕ್ಕೆ ರೂಪಿಸಿದ ಪ್ರಶ್ನಾವಳಿಗಳಿಂದ ಹಿಡಿದು ಎಲ್ಲಾ ತಾಲ್ಲೂಕುಗಳ ಸಾಮಗ್ರಿಯನ್ನು ಪರಿಷ್ಕರಿಸುವ ತನಕ ಅವರು ತೋರಿದ ಶ್ರದ್ಧೆ ಹಾಗೂ ಉತ್ಸಾಹಗಳನ್ನು ವರ್ಣಿಸಲು ಸಾಧ್ಯವಿಲ್ಲ. ಕೆಲವು ದಿನ ಈ ಕಾರ್ಯಕ್ಕಾಗಿ ಹದಿನೆಂಟು ಗಂಟೆ ಕೆಲಸ ಮಾಡಿದ್ದಾರೆ. ಯಾವುದೋ ತಾಲ್ಲೂಕಿನ ಒಂದು ಸಣ್ಣ ಉಪ್ಪಾರ ಕುಟುಂಬ ವಿವರ ಬೇಕಾಗಿದ್ದರೆ ಅದನ್ನು ತರಿಸಲು ಎಷ್ಟೇ ಶ್ರಮವಾದರೂ ಅವರು ಬಿಡುತ್ತಿರಲಿಲ್ಲ. ಈ ಕಾರ್ಯಕ್ಕಾಗಿ ಅವರ ಮನೆಯ ಟೆಲಿಫೋನ್ ಬಿಲ್ಲು ಸಾವಿರಾರು ರೂಪಾಯಿಗಳಾಗಿವೆ. ಅನೇಕ ಸಾರಿ ಈ ಗ್ರಂಥದ ಮಾಹಿತಿ ಸಂಗ್ರಹಕ್ಕಾಗಿ ಜಿಲ್ಲೆ, ತಾಲ್ಲೂಕು ಹಾಗೂ ಹಳ್ಳಿಗಳಿಗೆ ಪ್ರವಾಸ ಹೋಗಿದ್ದಾರೆ. ಸಮಿತಿಯ ಸದಸ್ಯರನ್ನು ಅವರ ಆಲಸ್ಯಕ್ಕಾಗಿ ತರಾಟೆ ತೆಗೆದುಕೊಂಡಿದ್ದಾರೆ. ನನ್ನೊಡನೆ ದಿನಗಟ್ಟಲೆ ಚರ್ಚೆ ಮಾಡಿದ್ದಾರೆ. ಗ್ಯಾಸೆಟಿಯರ್, ಮಿಥಿಕ್ ಸೊಸೈಟಿ ಹಾಗೂ ವಿಶ್ವವಿದ್ಯಾನಿಲಯಗಳ ಗ್ರಂಥಾಲಯಗಳಿಗೆ ಹೋಗಿ ಹತ್ತಾರು ಗ್ರಂಥಗಳನ್ನು ಹುಡುಕಿ ತಂದು ನನಗೆ ಅಪೂರ್ವ ಮಾಹಿತಿ ಒದಗಿಸಿದ್ದಾರೆ. ಮುದ್ರಣಕಾರ್ಯ ಪ್ರಾರಂಭವಾದ ಮೇಲಂತೂ ಅವರದು ಪ್ರೆಸ್‌ನಲ್ಲಿಯೇ ಠಿಕಾಣಿ. ಶ್ರೀ ನೀರಾವರಿ ಅವರು ಇಂತಹ ಹುಚ್ಚು ಹತ್ತಿಸಿಕೊಂಡಿದ್ದರಿಂದಲೇ ಈ ಗ್ರಂಥ ಇಷ್ಟೊಂದು ಪರಿಪೂರ್ಣವಾಗಿ ಬಂದಿದೆ. ಅವರಿಗೆ ಹೇಗೆ ಕೃತಜ್ಞತೆ ಹೇಳಬೇಕೋ ಗೊತ್ತಿಲ್ಲ. ಅವರ ಕರ್ತೃತ್ವಶಕ್ತಿಯ ಪೂರ್ಣ ಪ್ರಯೋಜನವನ್ನು ಉಪ್ಪಾರ ಸಮಾಜ ಪಡೆದು ಕೊಂಡರೆ ಖಂಡಿತಾ ಆ ಸಮಾಜ ಸರ್ವತೋಮುಖ ಏಳಿಗೆಯನ್ನು ಕಾಣುವುದರಲ್ಲಿ ಯಾವುದೇ ಸಂಶಯವಿಲ್ಲ.

ದುರ್ಬಲ ವರ್ಗಗಳ ಸ್ಥಿತಿಯನ್ನು ಕಾಣುತ್ತಾ ಬಂದಿದ್ದ ನಾವು ಅನೇಕ ಸಮಾಜಶಾಸ್ತ್ರಜ್ಞರ ನೆರವಿನಿಂದ ಮಾಹಿತಿ ಸಂಗ್ರಹಕ್ಕಾಗಿ ಪ್ರಶ್ನಾವಳಿಗಳನ್ನು ತಯಾರಿಸಿದೆವು. ಜಿಲ್ಲೆ, ತಾಲ್ಲೂಕು, ಹೋಬಳಿ, ಕೊನೆಗೆ ಗ್ರಾಮಗಳಿಗೆ ಮಾಹಿತಿ ಸಂಗ್ರಹಕ್ಕಾಗಿ ಪ್ರಶ್ನಾವಳಿಗಳನ್ನು ವಿತರಿಸಿ, ಭಗೀರಥನಷ್ಟೆ ಸಾಹಸಪಟ್ಟು ಮೂಲಭೂತ ಮಾಹಿತಿಯನ್ನು ಸಂಗ್ರಹಿಸಿದೆವು. ಹೀಗೆ ಸಂಗ್ರಹಿಸಿದ ಮಾಹಿತಿಯನ್ನು ನಾನು ಹತ್ತಾರು ಕಡೆಯಿಂದ ಒರೆಗೆ ಹಚ್ಚಿ ತುಲನೆ ಮಾಡಿ ನೋಟ್ಸ್ ಮಾಡಿಕೊಂಡೆ.

ಉಪ್ಪಾರ ಸಮಾಜದ ಪರಿಚಯ ಪೂರ್ವದಲ್ಲಿ ಎಲ್ಲಾ ಜಿಲ್ಲೆಗಳ ಐತಿಹಾಸಿಕ ಹಿನ್ನೋಟ

ಕೊಡುವುದು ಅವಶ್ಯವೆನಿಸಿ ನೀರಾವರಿ ಅವರ ಸಲಹೆ ಕೇಳಿದೆ. ಇದರಿಂದ ಗ್ರಂಥದ ಮೌಲ್ಯ ಹೆಚ್ಚುತ್ತದೆ. ಅದನ್ನು ಅಗತ್ಯವಾಗಿ ಕೊಡಿ ಎಂದವರು ಪ್ರೋತ್ಸಾಹಿಸಿದರು. ಈ ಸಂಬಂಧ ಕರ್ನಾಟಕದ ಎಲ್ಲಾ ಜಿಲ್ಲೆ ಹಾಗೂ ತಾಲ್ಲೂಕುಗಳ ಅಧ್ಯಯನ ಕೈಗೊಂಡೆ. ನೂರಾರು ಪುಸ್ತಕಗಳನ್ನು ತಿರುವಿಹಾಕಿದೆ. ಗ್ಯಾಸೆಟಿಯರ್, ಮಿಥಿಕ್ ಸೊಸೈಟಿ, ಕಬ್ಬನ್‌ಪಾರ್ಕ್ ಗ್ರಂಥಾಲಯ, ಕನ್ನಡ ಸಾಹಿತ್ಯ ಪರಿಷತ್ತಿನ ಗ್ರಂಥಾಲಯ, ಗೋಖಲೆ ವಿಚಾರ ಸಂಸ್ಥೆಯ ಗ್ರಂಥಾಲಯ, ಕೊನೆಗೆ ಡಾ. ಕೆ. ಅನಂತರಾಮು ಅವರ ಖಾಸಗಿ ಗ್ರಂಥಾಲಯದ ನೆರವು ಸಹ ಪಡೆದಿದ್ದೇನೆ. ಎಲ್ಲಾ ಜಿಲ್ಲಾ ಗ್ಯಾಸೆಟಿಯರ್, ಐಬಿಹೆಚ್ ಪ್ರಕಾಶನ ಹೊರತಂದ ಜಿಲ್ಲಾ ಹಾಗೂ ತಾಲ್ಲೂಕು ದರ್ಶನ, ರಾಷ್ಟ್ರೋತ್ಥಾನ ಪರಿಷತ್ತಿನ ಭಾರತ-ಭಾರತಿ ಪುಸ್ತಕ, ಮೈಸೂರು ವಿಶ್ವವಿದ್ಯಾನಿಲಯದ ವಿಶ್ವಕೋಶ, ಕರ್ನಾಟಕವಿಷಯ ವಿಶ್ವಕೋಶ, ಪತ್ರಿಕಾ ಲೇಖನ, ಸ್ಮರಣ ಸಂಚಿಕೆ, 2001ರ ಜನಗಣತಿ ವರದಿ, ಆಯಾಯ ಜಿಲ್ಲಾ ಪಂಚಾಯತ್ ಪ್ರಕಟಿಸಿರುವ ಆಡಳಿತ ವರದಿಗಳು ಮುಂತಾದವುಗಳ ನೆರವಿನಿಂದ ಇಲ್ಲಿರುವ ಎಲ್ಲಾ ಜಿಲ್ಲೆಗಳ ಐತಿಹಾಸಿಕ ಹಿನ್ನೋಟದ ಬರವಣಿಗೆ ಸಿದ್ಧವಾಗಿದೆ. ಮೇಲ್ಕಂಡ ಸಂಸ್ಥೆಗಳಿಗೂ ಅದರ ಪ್ರಕಟಣೆಯ ಎಲ್ಲಾ ಲೇಖಕರಿಗೂ ಚಿರಋಣಿಯಾಗಿದ್ದೇನೆ.

ಜಿಲ್ಲೆಯ ಐತಿಹಾಸಿಕ ಹಿನ್ನೋಟ ಪರಿಪೂರ್ಣವೆಂದು ನಾವೇನೂ ಭಾವಿಸಿಲ್ಲ. ಇದು ಜಿಲ್ಲೆಗಳ ಅಧ್ಯಯನ ಕುರಿತಂತೆ ಕೈಗೊಂಡಿರುವ ಪಕ್ಷಿನೋಟ ಮಾತ್ರ. ಆಯಾ ಜಿಲ್ಲೆಗಳು ಐತಿಹಾಸಿಕವಾಗಿ ಬೆಳೆದು ಬಂದ ಪರಂಪರೆಯನ್ನು ಮಾತ್ರ ಗುರುತಿಸಲಾಗಿದೆ. ವಿಶೇಷವಾಗಿ ಸಾಂಸ್ಕೃತಿಕ ಘಟನೆಗಳಿಗೆ ನಮ್ಮ ಅಧ್ಯಯನ ಸೀಮಿತಗೊಂಡಿದೆ. ಎಷ್ಟೋ ಅಗತ್ಯ ವಿಚಾರಗಳು ಇದರಲ್ಲಿ ಸೇರ್ಪಡೆಯಾಗಬೇಕಾಗಿತ್ತೆಂದು ಯಾರಾದರೂ ಹೇಳಿದರೆ ತಪ್ಪೇನೂ ಇಲ್ಲ. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದ ಅಧ್ಯಯನಕ್ಕೆ ನಡೆಸಿದ ಪ್ರಾಮಾಣಿಕ ಪ್ರಯತ್ನವಿದೆಂಬುದು ನಮ್ಮ ಅನಿಸಿಕೆ. ಹಂಸಕ್ಷೀರ ನ್ಯಾಯದಂತೆ ಸಹೃದಯ ಓದುಗರು ಇದನ್ನು ಪರಿಶೀಲಿಸಬೇಕಾಗಿ ವಿನಂತಿಸುತ್ತೇನೆ.

ಉಪ್ಪಾರ ಸಮಾಜದ ಅಧ್ಯಯನಕ್ಕೆ ಸಂಗ್ರಹಿಸಿದ ಮಾಹಿತಿಯನ್ನೆಲ್ಲಾ ಪರಿಶೀಲಿಸಿದಾಗ ಕಂಡ ಮುಖ್ಯಾಂಶಗಳು ಇಂತಿವೆ :

❋ 2001ರ ಜನಗಣತಿಯ ಆಧಾರದ ಮೇಲೆ ಇಪ್ಪತ್ತೈದು ಜಿಲ್ಲೆಗಳಲ್ಲಿರುವ ಎಲ್ಲಾ ಉಪ್ಪಾರ ಸಮುದಾಯವನ್ನು ಗಣನೆಗೆ ತೆಗೆದುಕೊಂಡು ಹೇಳುವುದಾರೆ ಅವರ ಜನಸಂಖ್ಯಾ ಬಾಹುಳ್ಯ ಸಾಕಷ್ಟು ದೊಡ್ಡ ಪ್ರಮಾಣದಲ್ಲಿದೆ. ಬೆಳಗಾಂ, ಬಾಗಲಕೋಟೆ, ಮೈಸೂರು, ಚಾಮರಾಜನಗರ, ಚಿಕ್ಕಮಗಳೂರು, ತುಮಕೂರು, ಶಿವಮೊಗ್ಗ, ಹಾಸನ, ಚಿತ್ರದುರ್ಗ,

ದಾವಣಗೆರೆ, ಬಳ್ಳಾರಿ, ಕೊಪ್ಪಳ, ರಾಯಚೂರು, ಗುಲ್ಬರ್ಗಾ, ಬೀದರ್ ಜಿಲ್ಲೆಗಳಲ್ಲಿ ಇವರ ಸಂಖ್ಯಾ ಪ್ರಮಾಣ ಗಣನೀಯವಾಗಿದೆ.

* ಕರ್ನಾಟಕದಲ್ಲಿ ನಾಲ್ಕು ಕಂದಾಯ ವಿಭಾಗದಲ್ಲೂ ಈ ಸಮುದಾಯದವರು ಕಾಣಬರುತ್ತಾರೆ. ಕೆಲವು ಜಿಲ್ಲೆಗಳಲ್ಲಂತೂ ಇವರದು ಮೇಲುಗೈ. ಆದರೂ ಸಾಮಾಜಿಕ ಅಧ್ಯಯನದ ಹಿನ್ನೆಲೆಯಲ್ಲಿ ಹೇಳುವುದಾದರೆ ಇವರಲ್ಲಿ ಸಂಘಟನೆಯ ಕೊರತೆ ಎದ್ದು ಕಾಣುತ್ತದೆ. ಚಾಮರಾಜನಗರ, ಬೆಳಗಾಂ, ಕೊಪ್ಪಳ ಹಾಗೂ ದಾವಣಗೆರೆ ಜಿಲ್ಲೆಗಳಲ್ಲಿನ ಉಪ್ಪಾರ ಸಮುದಾಯ ಮಾನಸಿಕವಾಗಿ ಒಂದಾಗಿಲ್ಲ, ಸಾಮಾಜಿಕ ಒಡನಾಟ ಹೆಚ್ಚಾಗಿಲ್ಲ.

* ಆರ್ಥಿಕ ಅಧ್ಯಯನದ ದೃಷ್ಟಿಯಿಂದ ಹೇಳುವುದಾದರೆ ಈ ಜನಾಂಗ ಎಂದೂ ಹೇಳಿಕೊಳ್ಳುವಂತಹ ಆರ್ಥಿಕ ಸ್ಥಿತಿ ಪಡೆದಿಲ್ಲ. ಪರಂಪರಾನುಗತವಾದ 'ಉಪ್ಪಿನ ಉದ್ಯಮ' ಕೈಬಿಟ್ಟ ಮೇಲೆ ಇವರು ನೆಲೆ ಕಳೆದುಕೊಂಡರು. ತುಂಡು ಭೂಮಿಯ ಕೃಷಿ, ಗೌಂಡಿ ಕೆಲಸ ಹಾಗೂ ಸಣ್ಣ ಪುಟ್ಟ ವ್ಯಾಪಾರವೇ ಇವರ ಬದುಕಿನ ಆಸರೆಯಾಯಿತು. ಸಮುದಾಯದ ಶೇಕಡ ಅರವತ್ತರಷ್ಟು ಜನ ಬಡತನದ ರೇಖೆಗಿಂತ ಕೆಳಗಿರುವುದನ್ನು ಕಾಣಬಹುದು. ರಾಜಕೀಯ ಹಾಗೂ ಸಾಮಾಜಿಕವಾಗಿ ಅತ್ಯಂತ ಬಲಹೀನವಾದ ಈ ಸಮುದಾಯಕ್ಕೆ ಸರ್ಕಾರದ ಅಭಿವೃದ್ಧಿ ಯೋಜನೆಗಳ ಪ್ರಯೋಜನವೂ ದೊರಕಿಲ್ಲ.

* ಉಪ್ಪಾರ ಸಮುದಾಯ ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿರುವುದನ್ನು ಗಮನಿಸಬಹುದು. ಗಂಡಸರಲ್ಲಿ ಶೇಕಡ ೩೦ರಷ್ಟಾದರೂ ಸಾಕ್ಷರತೆ ಕಾಣಲು ಸಾಧ್ಯವಿಲ್ಲ. ಸ್ತ್ರೀಯರ ಸಾಕ್ಷರತೆಯ ಪ್ರಮಾಣ ಮತ್ತಷ್ಟು ಶೋಚನೀಯವಾಗಿದೆ.

* ಸಾಮಾಜಿಕ ಅರಿವಿನ ಕೊರತೆಯಿಂದಾಗಿ ಅನೇಕ ಮೌಢ್ಯಗಳ ಜಂಜಾಟದಲ್ಲಿ ಈ ಸಮಾಜ ಸಿಲುಕಿದೆ.

* ಈ ಸಮಾಜದಲ್ಲಿ ಕಾಣಬರುವ ಅತ್ಯಂತ ಕೊರತೆಯ ಅಂಶ ನಾಯಕತ್ವ. ಕರ್ನಾಟಕದ ಎಲ್ಲಾ ಉಪ್ಪಾರರನ್ನು ಒಂದೆಂಬಂತೆ ಸಂಘಟಿಸುವ ಕೆಲಸ ಇನ್ನು ಆಗಬೇಕಾಗಿದೆ.

ರಾಜ್ಯದ ಇಪ್ಪತ್ತೈದು ವಿಧಾನಸಭಾಕ್ಷೇತ್ರಗಳಲ್ಲಿ ಉಪ್ಪಾರ ಮತದಾರರು ನಿರ್ಣಾಯಕ ಪಾತ್ರವನ್ನು ವಹಿಸಬಲ್ಲರು. ಗೋಕಾಕ್, ಅರಭಾವಿ, ರಾಯಬಾಗ್, ಗುಂಡ್ಲುಪೇಟೆ, ಹೆಗ್ಗಡದೇವನಕೋಟೆ, ಟಿ. ನರಸೀಪುರ, ಹನೂರು, ಚಾಮರಾಜನಗರ, ಸಂತೇಮರಳ್ಳಿ, ಕೊಳ್ಳೇಗಾಲ, ನಂಜನಗೂಡು, ಪಿರಿಯಾಪಟ್ಟಣ, ಕೆ.ಆರ್. ನಗರ, ಚಿಕ್ಕನಾಯಕನಹಳ್ಳಿ,

ಅರಕಲಗೂಡು, ಚಿಕ್ಕಬಳ್ಳಾಪುರ, ಉತ್ತರಹಳ್ಳಿ, ತರೀಕೆರೆ, ಕಡೂರು, ಬೀರೂರು, ಹೊಳೆಹೊನ್ನೂರು, ಮಾಯಕೊಂಡ, ದಾವಣಗೆರೆ, ಚನ್ನಗಿರಿ, ಹೊಸದುರ್ಗ, ಚಳ್ಳಕೆರೆ, ಹಿರಿಯೂರು, ಸೊಂಡೂರು, ಕುಷ್ಟಗಿ, ಕೊಪ್ಪಳ, ಸಿಂಧನೂರು, ಸುರಪುರ, ಹುಮನಾಬಾದ್ ಮೊದಲಾದ ಕಡೆಯ ಉಪ್ಪಾರರು ಏಕನಿರ್ಣಯ ಕೈಗೊಂಡರೆ ಅಚ್ಚರಿ ಫಲಿತಾಂಶ ಬರುವುದರಲ್ಲಿ ಸಂಶಯವಿಲ್ಲ. ಹನುಮಂತನಿಗೆ ಶ್ರೀರಾಮದರ್ಶನವಾಗುವತನಕ ಅವನಿಗೆ ತನ್ನ ಶಕ್ತಿ ಸಾಮರ್ಥ್ಯಗಳು ಗೊತ್ತಿರಲಿಲ್ಲವಂತೆ ! ಸಹಜವಾಗಿ ಜನಸಂಖ್ಯಾ ಬಾಹುಳ್ಯದಿಂದ ಶಕ್ತಿಶಾಲಿಗಳಾದ ಉಪ್ಪಾರ ಸಮುದಾಯವನ್ನು ಎಚ್ಚರಿಸಲಿಕ್ಕೆ ಯಾವ ಶ್ರೀರಾಮ ಬರಬೇಕೊ! ಆತ ವ್ಯಕ್ತಿರೂಪದಲ್ಲಿ ಬಾರದೆ ಜ್ಞಾನ ರೂಪದಲ್ಲಿ ಬರಬೇಕೆಂದು ಶ್ರೀ ನೀರಾವರಿಯವರು ಬಯಸಿದ್ದರು. ಅದರ ಪ್ರತಿಫಲವೇ ಈ ಬೃಹತ್ ಗ್ರಂಥ. ಸಮುದಾಯದ ಜಾಗೃತಿಗೆ ಬೇಕಾದ ಎಲ್ಲಾ ಅಂಶಗಳನ್ನು ವೈಜ್ಞಾನಿಕವಾಗಿ ಸಂಗ್ರಹಿಸಿ, ಅಧ್ಯಯನ ಮಾಡಿ ಇಲ್ಲಿ ಕೊಡಲಾಗಿದೆ.

ಗ್ರಂಥದ ಪ್ರಸ್ತುತತೆ ಹಾಗೂ ಅದರ ಸ್ವರೂಪ ಕುರಿತು ನನ್ನ ವಿದ್ಯಾಗುರುಗಳಾದ ಡಾ. ಕೆ. ಅನಂತರಾಮು ಅವರು ವಿಶಿಷ್ಟಪೂರ್ಣವಾದ ಅಧ್ಯಯನ ನಡೆಸಿದ್ದಾರೆ. ಈ ಗ್ರಂಥದ ಪ್ರಾರಂಭದಿಂದಲೂ ಸಲಹೆ ಮಾರ್ಗದರ್ಶನ ನೀಡುತ್ತಾ ಬಂದಿರುವ ಅವರು ಒಟ್ಟಾರೆ ಗ್ರಂಥದ ಸ್ವರೂಪಕ್ಕೆ ಕಾರಣಕರ್ತರು. ಅವರಿಗೆ ಭಕ್ತಿಪೂರ್ವಕವಾದ ನಮಸ್ಕಾರಗಳು.

ಸಮಾಜಶಾಸ್ತ್ರಜ್ಞರೂ, ಗಾಂಧಿ ಸಾಹಿತ್ಯದಲ್ಲಿ ವಿಶೇಷವಾದ ಪಾಂಡಿತ್ಯವುಳ್ಳವರೂ ಆದ ಡಾ. ಎಂ.ಬಿ. ರಾಜಾಮಣಿ ಅವರು ಸಮಾಜಶಾಸ್ತ್ರೀಯ ದೃಷ್ಟಿಯಿಂದ ಈ ಸಮುದಾಯವನ್ನು ಅಧ್ಯಯನ ಮಾಡಿಕೊಟ್ಟಿದ್ದಾರೆ. ಉಪ್ಪಾರ ಸಮುದಾಯ ಹಾಗೂ ಅಲ್ಲಿನ ಮಹಿಳೆಯರ ಬಗ್ಗೆ ವಿಶೇಷ ಕಾಳಜಿಯುಳ್ಳ ಅವರು ತುಂಬು ಪ್ರೀತಿಯಿಂದ ಈ ಕೆಲಸ ಮಾಡಿಕೊಟ್ಟಿದ್ದಾರೆ. ಅವರಿಗೆ ಕೃತಜ್ಞತೆಗಳು.

ಐನೂರಐವತ್ತು ಪುಟಗಳ ಈ ಬೃಹತ್ ಗ್ರಂಥದ ಹಸ್ತಪ್ರತಿಯನ್ನು ಸಿದ್ಧ ಮಾಡುವಲ್ಲಿ ಶ್ರೀಮತಿ ಎನ್. ಭಾರತಿ ನನಗೆ ಮರೆಯಲಾಗದ ಸಹಾಯ ನೀಡಿದ್ದಾರೆ. ಅವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

ಈ ಕಾರ್ಯದಲ್ಲಿ ನನ್ನ ತಾಯಿ ಮಾ|| ಎಸ್.ಎನ್. ಸರೋಜಮ್ಮ ಹಾಗೂ ಕರಡು ತಿದ್ದುವಲ್ಲಿ ಸಹಕರಿಸಿದ ಶ್ರೀ ಬಿ.ಎಸ್. ಸತ್ಯನಾರಾಯಣರಾವ್ ಹಾಗೂ ಜೆ.ಆರ್. ನರಸಿಂಹಸ್ವಾಮಿ ಅವರನ್ನು ಮರೆಯುವಂತಿಲ್ಲ.

ಅನೇಕರ ಸಹಾಯ, ಸಹಕಾರ ಹಾಗೂ ಆಶಯಗಳು ಈ ಗ್ರಂಥದ ಹಿನ್ನೆಲೆಯಲ್ಲಿದೆ. ಶ್ರೀ ಡಿ.ಎಸ್. ರಾಮಪ್ಪ ಅವರು ಹನ್ನೊಂದು ವರುಷಗಳ ಕಾಲ ರಾಜ್ಯ ಉಪ್ಪಾರ ಸಂಘದ

ಅಧ್ಯಕ್ಷರಾಗಿದ್ದಾಗ ಸಂಗ್ರಹಿಸಿದ ಮಾಹಿತಿಯನ್ನು ಕೂಡಾ ಬಳಸಿಕೊಂಡಿದ್ದೇನೆ. ಎಲ್ಲಾ ಜಿಲ್ಲೆಯವರೂ ನಾವು ಕೇಳಿದ ಎಲ್ಲಾ ಮಾಹಿತಿಯನ್ನು ಸಕಾಲದಲ್ಲಿ ಕಳುಹಿಸಿಕೊಟ್ಟಿದ್ದಾರೆ. ಅವರನ್ನೆಲ್ಲಾ ನೆನೆಯುವುದು ನನ್ನ ಆದ್ಯ ಕರ್ತವ್ಯ.

ಶ್ರೀ ಡಿ.ಎಸ್. ರಾಮಪ್ಪ ಅವರು ಭಾವಿಸಿದಂತೆ "ಪ್ರತಿಯೊಬ್ಬ ವ್ಯಕ್ತಿಯ ಮೇಲೂ ಸಮಾಜದ ಋಣವಿದ್ದೇ ಇರುತ್ತದೆ. ಅದನ್ನು ತೀರಿಸಲು ಆತ ಪ್ರಾಮಾಣಿಕನಾಗಿ ಪ್ರಯತ್ನಿಸಬೇಕು. ಇಲ್ಲದಿದ್ದರೆ ಆತ ಸ್ವಾರ್ಥಿಯಾಗುತ್ತಾನೆ". ಅದರ ಜೊತೆ ನಾನೊಂದು ವಿಚಾರ ಸೇರಿಸುತ್ತೇನೆ. ಎಲ್ಲಾ ಜೀವಿಯ ಮೇಲೂ ಹಿರಿಯರ ಋಣ ಇರುತ್ತದೆ. ಆ ಹಿರಿಯರು ಆಯಾಯ ಕುಟುಂಬ ಅಥವಾ ಜಾತಿಗೆ ಸಂಬಂಧಪಟ್ಟವರು ಮಾತ್ರವಲ್ಲ; ವಿಶಾಲ ಸಮಾಜದಲ್ಲಿರುವ ಹಿರಿಯರ ಋಣವನ್ನು ಎಲ್ಲರೂ ಅಗತ್ಯವಾಗಿ ತೀರಿಸಬೇಕು. ಇದು ವ್ಯಕ್ತಿಯ ಜೀವನದ ಸಾರ್ಥಕತೆಗೆ ಕಾರಣವಾದ ಅಂಶ.

ಎಪ್ಪತ್ತೈದರ ಹರೆಯದ ಪೂಜ್ಯ ಶ್ರೀ ಡಿ.ಎಸ್. ರಾಮಪ್ಪ ಅವರ ಅಭಿನಂದನ ಗ್ರಂಥದಲ್ಲಿ ಕಿಂಚಿತ್ತು ಸೇವೆ ಸಲ್ಲಿಸುವ ಅವಕಾಶ ದೊರಕಿದುದು ನನ್ನ ಪುಣ್ಯ ವಿಶೇಷ. ಇದನ್ನು ಒದಗಿಸಿಕೊಟ್ಟ ಶ್ರೀ ಹೆಚ್. ಸಿ. ಸೀರಾವರಿ ಅವರಿಗೆ ನಾನು ಸದಾ ಕೃತಜ್ಞ.

ದಿನಾಂಕ : 18-8-2002

**ಕೆ.ಆರ್. ಕಮಲೇಶ್**
ಬೆಂಗಳೂರು

* # ಹುಟ್ಟೂರು

- ಹೆಚ್. ನೀಲಪ್ಪ
ಸಂತೆಬೆನ್ನೂರು

ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ದೇವರಹಳ್ಳಿ ಎಲ್ಲ ಬಗೆಯಲ್ಲೂ ವಿಶಿಷ್ಟತೆಯನ್ನು ಹೊಂದಿದೆ. ಜಿಲ್ಲಾ ಕೇಂದ್ರದಿಂದ 45 ಕಿ.ಮೀ. ಹಾಗು ತಾಲ್ಲೂಕು ಕೇಂದ್ರದಿಂದ ಈಶಾನ್ಯಕ್ಕೆ 13 ಕಿ.ಮೀ. ದೂರದಲ್ಲಿದೆ. ಗ್ರಾಮದ ನೆಲಮಟ್ಟದಿಂದ ಸುಮಾರು ಮೂರುನೂರು ಅಡಿಗಳಷ್ಟು ಎತ್ತರವಾದ ಬೆಟ್ಟದ ಮೇಲಿರುವ ಶ್ರೀರಂಗನಾಥಸ್ವಾಮಿ ದೇವಸ್ಥಾನವು ನಾಲ್ಕಾರು ಕಿ.ಮೀ. ದೂರದಿಂದಲೇ ಜನಮನವನ್ನು ತನ್ನತ್ತ ಸೆಳೆಯುತ್ತದೆ. ಇದೊಂದು ಹೆಸರಾಂತ ಐತಿಹಾಸಿಕ ಮತ್ತು ಧಾರ್ಮಿಕ ಕ್ಷೇತ್ರ.

1930ರಲ್ಲಿ ಪ್ರಕಟವಾಗಿರುವ ಹಯವದನರಾವ್ ಬರೆದ 'ಮೈಸೂರು ಗೆಜೆಟಿರಿಯರ್', 1979ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಮಾಡಿರುವ 'ಕರ್ನಾಟಕ ವಿಷಯ ವಿಶ್ವಕೋಶ' ಹಾಗೂ 1994ರಲ್ಲಿ ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ಪ್ರಕಟಿಸಿರುವ 'ಕರ್ನಾಟಕ ಕೈಫಿಯತ್ತುಗಳು' ಎಂಬ ಪುಸ್ತಕ ಹಾಗು ಜನರಲ್ ಮೆಕೆಂಜೆಯವರು ಸಂಗ್ರಹಿಸಿರುವ ಮಾಹಿತಿ, ಇವುಗಳಿಂದ ತಿಳಿದುಬರುವಂತೆ ಈ ಹಳ್ಳಿಯು 16ನೇ ಶತಮಾನದಲ್ಲಿ ಸಂತೇಬೆನ್ನೂರು ನಾಯಕರ ಪಾಳೆಯಪಟ್ಟಿಗೂ, 17ನೆಯ ಶತಮಾನದ ಅಂತ್ಯದಲ್ಲಿ ಚಿತ್ರದುರ್ಗದ ಪಾಳೆಯಪಟ್ಟಿಗೂ, 18ನೆಯ ಶತಮಾನದ ಆದಿಯಲ್ಲಿ ಕೆಳದಿ ಅರಸರ ಪಾಳೆಯಪಟ್ಟಿಗೂ ಸೇರಿತ್ತು. ಈ ಕ್ಷೇತ್ರದ ಅಧಿದೇವತೆ ಉಡುಮರಡಿ ಶ್ರೀ ಲಕ್ಷ್ಮಿರಂಗನಾಥಸ್ವಾಮಿಯ ಅಸ್ತಿತ್ವದ ಐತಿಹ್ಯ ಹೀಗಿದೆ :

ವಿಜಯನಗರದ ಅರಸು ಹರಿಹರ ಮಹಾದೇವರಾಯ ಬೇಟೆಗಾಗಿ ಈ ಪ್ರಾಂತ್ಯಕ್ಕೆ ಬಂದಿದ್ದಾಗ, ಬೇಟೆಗಾರರ ತಂಡವೊಂದು ಧೂಪದಮರಡಿ ಎಂಬಲ್ಲಿ ಸುಗಂಧ ವಾಸನೆಯುಳ್ಳ ಸುಂದರ ಉಡ(ದೊಡ್ಡ ಹಲ್ಲಿ)ವೊಂದನ್ನು ಕಂಡು ಅದನ್ನು ಹಿಡಿಯಲು ಬೆನ್ನಟ್ಟಿದರು. ಆದರೆ ದೈವಾಂಶಸಂಭೂತವಾದ ಉಡವು ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಆಕಾರದಲ್ಲಿ ಕಾಣಿಸಿಕೊಂಡಿತಂತೆ. ಚಿನ್ನಾಪುರ ಎಂಬಲ್ಲಿ ಚಿನ್ನದ ಬಣ್ಣದಿಂದ, ಜಕ್ಕಲಿ ಎಂಬಲ್ಲಿ ಚಕ್ಕುಲಿ ಆಕಾರದಲ್ಲಿ, ಹಿರೇಉಡ ಎಂಬಲ್ಲಿ ದೊಡ್ಡ ಗಾತ್ರದಲ್ಲಿ, ಚಿಕ್ಕೂಡ ಎಂಬಲ್ಲಿ ಚಿಕ್ಕದಾಗಿ, ಕಗತೂರು ಎಂಬಲ್ಲಿ ತನ್ನ ಶಕ್ತಿಯನ್ನು ಪ್ರದರ್ಶಿಸಿ, ರಾಮಗೊಂಡನಹಳ್ಳಿ ಎಂಬಲ್ಲಿ ರಾಮ ರಾಮ ಎಂದು ಧ್ಯಾನಿಸಿ, ನೀತಿಗೆರೆ ಎಂಬಲ್ಲಿ ನೀತಿಯನ್ನು ಹೇಳಿ, ಕಾಕನೂರು ಎಂಬಲ್ಲಿ ಕಾ ಕಾ ಎಂದು ಕೂಗಿ, ನಿಂಬಾಪುರ ಎಂಬಲ್ಲಿ ಸ್ವಲ್ಪಕಾಲ ನಿಂತು, ಒಂದೇ ಬಾರಿಗೆ ಕುಪ್ಪಳಿಸಿ ಹಾರಿ ಹರಿದ್ರಾ ನದಿ(ಹಿರೇಹಳ್ಳ)ಯನ್ನು ದಾಟಿ ಮುಂದೆ ದೇವರಗುಡ್ಡ ತಲುಪಿ ಒಂದು ಹುತ್ತದಲ್ಲಿ ಸೇರಿಕೊಂಡಿತಂತೆ. ಆದರೂ ಬೇಟೆಗಾರರು ಬಿಡದೆ ಆ ಹುತ್ತವನ್ನು ಅಗೆಯಲು ಲಿಂಗರೂಪದ ರಂಗನಾಥನ ವಿಗ್ರಹ ಗೋಚರಿಸಿತು. ಬೆರಗಾದ ಬೇಟೆಗಾರರು ತಾವು ಆವರೆಗೆ ಬೆನ್ನಟ್ಟಿ ಬಂದ ಉಡವು ಶ್ರೀರಂಗನಾಥಸ್ವಾಮಿ ಎಂಬುದನ್ನು ತಿಳಿದು ಭಕ್ತಿಯಿಂದ ಆ ದೇವನನ್ನು ಪೂಜಿಸಿ ನಮಿಸಿದರು. ಈ ವಿಗ್ರಹದ ಮುಂಭಾಗವು ಶಂಖ ಚಕ್ರಾಯುಧ ಕೆತ್ತನೆಯಿಂದ ಕೂಡಿದ ಗುಂಡನೆಯ ಆಕಾರವಿರುವ ಲಿಂಗವಾಗಿದೆ. ಹಿಂಭಾಗದಲ್ಲಿ ತ್ರಿನೇತ್ರ, ಬಾಣ, ಗಂಗೆಯ ಚಹರೆಗಳಿವೆ. ಆದ್ದರಿಂದ ಇದು ಹರಿಹರ ಉದ್ಭವಮೂರ್ತಿಯೂ ಆಗಿದೆ. ಈ ಲಿಂಗದ ಹಿಂದೆ ವಿಜಯನಗರದ ಅರಸು ಕೃಷ್ಣದೇವರಾಯನಿಂದ ಪ್ರತಿಷ್ಠಾಪನೆಗೊಂಡ ಬಾಣಾಕಾರದ ಲಿಂಗವೊಂದಿದ್ದು ಅದರ ಮೇಲೆ ಒಂದೂವರೆ ಅಡಿ ಎತ್ತರದ ಶ್ರೀ ಕೇಶವನ ವಿಗ್ರಹವಿದೆ. 'ಹರಿದ್ರಾಮಹಾತ್ಮ್ಯ' ಎಂಬ ಕೃತಿಯಲ್ಲೂ ಈ ಬಗ್ಗೆ ಉಲ್ಲೇಖವಿದೆ.

1970ರಲ್ಲಿ ಡಾ॥ ಎಂ. ಶೇಷಾದ್ರಿಯವರು ಸಂಪಾದಿಸಿ ಪ್ರಕಟಿಸಿರುವ 'ಕರ್ನಾಟಕ ಶಾಸನಗಳು' ಸಂಪುಟ 7-8ರ ಅನುಬಂಧದಂತೆ ಶಾಸನ-87, 88, 89ರಲ್ಲಿ ಉಲ್ಲೇಖಿಸಿರುವಂತೆ ಈ ದೇವರನ್ನು ಉಡುಮರಡಿ ರಂಗನಾಥಸ್ವಾಮಿ ಎಂದು ಕರೆಯಲಾಗಿದೆ. ದೇವಸ್ಥಾನದ ನವರಂಗವನ್ನು 1576ನೇ ತಾರಣ ಸಂ। ವೈಶಾಖ 5ರಲ್ಲಿ ದೇವರಹಳ್ಳಿ ಗೌಡ ಪೂಜಾರಿ ಮುದ್ರಂಗಪ್ಪನ ಮೊಮ್ಮಗಳು ಗಿರಿಯಂಮ ಕಟ್ಟಿಸಿದುದಾಗಿದೆ (1654ರ ಶಾಸನ). ನವರಂಗ ಭಾಗದ ಮುಂದಿನ 12 ಅಂಕಣದ ಭಾಗವನ್ನು ಸಂತೇಬೆನ್ನೂರು ಸಂಸ್ಥಾನದ ಪಾಳೆಯಗಾರರು ಸರ್ಜ ಹುಚ್ಚಹನುಮಪ್ಪ ಮತ್ತು ಸರ್ಜ ಕೆಂಗಪ್ಪ ನಾಯಕರು ಕಟ್ಟಿಸಿದುದಾಗಿ ತಿಳಿದುಬರುತ್ತದೆ.

ಶ್ರೀರಂಗನಾಥಸ್ವಾಮಿ ದೇವಸ್ಥಾನದ ಪಾರ್ಶ್ವದಲ್ಲಿ ಪಶ್ಚಿಮಾಭಿಮುಖವಾಗಿ ಶಕ್ತಿ ಸ್ವರೂಪಿಣಿ ಶ್ರೀರಂಗನ ರಾಣಿ ಶ್ರೀಲಕ್ಷ್ಮೀದೇವಿ ದೇವಸ್ಥಾನವಿದೆ. ಆವಾರದಲ್ಲಿ ಬ್ರಹ್ಮದೇವರು, ಚೌಡಮ್ಮ, ಬೃಂದಾವನ, ನಾಗರಕಟ್ಟೆ, ಗರುಡ ವಿಗ್ರಹ, ದೀಪಸ್ತಂಭ, ಪಾದುಕಾಮಂಟಪ

ಇದ್ದು ಹೊರಭಾಗದಲ್ಲಿ ಓಕಳಿಗುಂಡಿ ಚೌಡಮ್ಮ, ಭೂತೇಶ್ವರ, ಅತ್ರಿಮಾರಮ್ಮ, ಸಂಜೀವಪ್ಪ, ಆಂಜನೇಯಸ್ವಾಮಿ ಗುಡಿಗಳಿವೆ.

ಪ್ರತಿ ವರ್ಷ ಚೈತ್ರ ಶುದ್ಧ ಹುಣ್ಣಿಮೆಯ ಚಿತ್ತಾನಕ್ಷತ್ರ(ಬೆಂಗಳೂರು ಕರಗ)ದಂದು ವೈಭವಯುತವಾಗಿ ರಥೋತ್ಸವ ನಡೆಯುತ್ತದೆ. ಶ್ರೀರಾಮನವಮಿಯಿಂದ ಆರಂಭಿಸಿ ಪ್ರತಿ ದಿವಸ ರಾತ್ರಿ ಕ್ರಮವಾಗಿ ಪಲ್ಲಕ್ಕಿ, ಸಾರಥಿ, ಸರ್ಪ, ಆಂಜನೇಯ, ಗರುಡ, ಆನೆ ಮತ್ತು ಅಶ್ವ ಉತ್ಸವಗಳು ಜರುಗುವುವು. ಹುಣ್ಣಿಮೆಯಂದು (ಅಪರಾಹ್ನ) ಬ್ರಹ್ಮರಥೋತ್ಸವ ನಡೆದು ಮರುದಿವಸ ಬೆಳಿಗ್ಗೆ ಶ್ರೀದೇವಿ ಭೂದೇವಿಯರೊಡಗೂಡಿದ ಶ್ರೀರಂಗನಾಥಸ್ವಾಮಿಯನ್ನು ಸುಮಾರು ಮೂವತ್ತು ಅಡಿ ಎತ್ತರದ ಭವ್ಯಾಲಂಕೃತ ರಥದಲ್ಲಿ ಕುಳ್ಳಿರಿಸಿ ನಾಡಿನೆಲ್ಲೆಡೆಯಿಂದ ಬರುವ ಸಹಸ್ರಾರು ಭಕ್ತಾದಿಗಳು ಜಯಕಾರ ಮಾಡುತ್ತ ರಥವನ್ನು ಬೆಟ್ಟದಿಂದ ಕೆಳಗಿಳಿಸಿ ತರುವ ದೃಶ್ಯ ಮೈನವಿರೇಳಿಸುವಂತಹುದು. ಸುಮಾರು 300 ಅಡಿ ಎತ್ತರದಿಂದ ಬೆಟ್ಟದ ಮೇಲಿಂದ ಮರದ ರಥವನ್ನು ಇಳಿಸುವಾಗ ದೊಡ್ಡ ದೊಡ್ಡ ಮರದ ಅಡಕುಗಳನ್ನು ಚಕ್ರಗಳಿಗೆ ಕೊಡುತ್ತ ಬೇಕಾದ ದಿಕ್ಕಿಗೆ ರಥವನ್ನು ತಿರುಗಿಸಿ ಇಳಿಸುವುದು ಸಾಹಸದ ಕೆಲಸ ಮಾತ್ರವಲ್ಲ ದೈವಪ್ರೇರಿತವೂ ಆಗಿರುತ್ತದೆ.

ಉಪ್ಪಾರ ದೊಡ್ಡರಂಗಪ್ಪ, ಸ್ವಾಮಿ ನಿಂಗಪ್ಪ, ಗುರವ್ವರ ಸಣ್ಣರಂಗಪ್ಪ, ಚಿಕ್ಕೀರಪ್ಪರ ಭೈರಪ್ಪ, ಬಡ್ಯಪ್ಪ, ಕ್ಯಾಸಿನಕೆರೆ ರಂಗಪ್ಪ ಮುಂತಾದ ಬಲಾಢ್ಯರು ರಥದ ಚಕ್ರದ ಬಳಿಯಿದ್ದು ಈ ಸಾಹಸದ ಕೆಲಸ ಮಾಡುತ್ತಿದ್ದುದನ್ನು ನಾನು ಚಿಕ್ಕಂದಿನಲ್ಲಿ ಕಂಡಿದ್ದೇನೆ. ಅವರು ಸೂಚನೆ ಕೊಟ್ಟ ನಂತರವೇ ರಥವನ್ನು ಹಿಂದಕ್ಕೋ ಮುಂದಕ್ಕೋ ಎಳೆಯುತ್ತಿದ್ದರು. ಹೀಗೆ ಊರ ಒಳಗೆ ಬಂದ ರಥವನ್ನು ಗ್ರಾಮಸ್ಥರಿಂದ ಮತ್ತು ನೆರೆದ ಭಕ್ತಾದಿಗಳಿಂದ ಪೂಜೆಗೊಂಡ ನಂತರ ಪುನಃ ಬೆಟ್ಟದ ಮೇಲೆ ಎಳೆದೊಯ್ಯುವರು. ದೊಡ್ಡ ದೊಡ್ಡ ಹಗ್ಗಗಳನ್ನು ರಥದ ಹಿಂದೆ ಮುಂದೆ ಕಟ್ಟಿದ್ದು ಎರಡು ಸಾಲುಗಳಲ್ಲಿ ಭಕ್ತಜನ 'ಉಡುಮರಡಿ ರಂಗನಾಥ ನಿನ್ನ ಪಾದಕ್ಕೆ ಗೋವಿಂದಾ-ಗೋವಿಂದ. ಹೂ-ಹೂ-ಹೊಯ್' ಎಂದು ಜಯಕಾರ ಹಾಕಿ ಸಂತಸದಿಂದ ರಥವನ್ನು ಎಳೆಯುತ್ತಿದ್ದರೆ, ರಥದ ಮೇಲ್ತುದಿಯ ಕಳಸಕ್ಕೆ ಗುರಿಯಿಟ್ಟು ಬಾಳೆಹಣ್ಣು ಎಸೆಯುವ, ಮೆಣಸು ಮಂಡಕ್ಕಿ ಉಗ್ಗುವ, ರಥದ ಚಕ್ರಕ್ಕೆ ತೆಂಗಿನಕಾಯಿ ಒಡೆಯುವ ಜನಕೋಟಿಯ ಸಂಭ್ರಮ ನೋಡಲು ಎರಡು ಕಣ್ಣುಗಳೂ ಸಾಲವು ಎನಿಸುತ್ತದೆ. ಈ ಸಂದರ್ಭದಲ್ಲಿ ವಾರಗಟ್ಟಲೆ ಜಾತ್ರೆಯೂ ನೆರೆದಿರುತ್ತದೆ. ಮೂರು ದಿವಸ ಕುಸ್ತಿಪಂದ್ಯಗಳೂ ನಡೆಯುತ್ತವೆ. ಆ ಕಾಲಕ್ಕೆ ಒಳ್ಳೆಯ ಕುಸ್ತಿ ಪೈಲ್ವಾನರಿದ್ದರು (ಉಪ್ಪಾರರು). ಪೈಲ್ವಾನ್ ಗೊರಪುರ ಹೊಟ್ಟೆ ಹೊಳೆಯಪ್ಪ, ಚಿಕ್ಕೀರಪುರ ದೊಡ್ಡತಿಮ್ಮಪ್ಪ, ದೊಡ್ಡಹಾಲಪ್ಪ, ದುಗ್ಗಾಣಿ ಕರಿರಂಗಪ್ಪ, ಭೂತರಂಗಪ್ಪ, ಹೊಟ್ಟೆ ರಾಮಪ್ಪ, ಕೊಡ್ಲಣ್ಣರ ರಂಗಪ್ಪ ಮುಂತಾದವರ ಮೇಲ್ವಿಚಾರಣೆಯಲ್ಲಿ ಕುಸ್ತಿಪಂದ್ಯಗಳು ನಡೆಯುತ್ತಿದ್ದವು. ಊರ ಕೆಳಭಾಗದಲ್ಲಿ ಗರಡಿ ಮನೆಯೂ ಇದ್ದಿತು.

ರಥೋತ್ಸವಕ್ಕೆ ಈಗ ಬಳಸುತ್ತಿರುವ ರಥವನ್ನು 1962-63ರಲ್ಲಿ ಚನ್ನಗಿರಿ ತಾಲ್ಲೂಕು ಅಜ್ಜಿಹಳ್ಳಿಯ ಶಿಲ್ಪಿಗಳಾದ ಶ್ರೀ ಭುಜಂಗಾಚಾರ್ ಮತ್ತು ಸಹೋದರರು ನಿರ್ಮಿಸಿರುವರು. ಆ ಮೊದಲಿದ್ದ ಹಳೆಯ ರಥವನ್ನು ಭದ್ರಾವತಿ ತಾಲ್ಲೂಕಿನ ಚಿಕ್ಕದೇವರಹಳ್ಳಿಯ ಶ್ರೀರಂಗನಾಥಸ್ವಾಮಿ ದೇವಸ್ಥಾನಕ್ಕೆ ಕೊಡಲಾಗಿದೆ. ದೇವಸ್ಥಾನದ ಕನ್ವೀನರ್ ಆಗಿದ್ದ ಉಪ್ಪಾರ ಜನಾಂಗದ ದಿ|| ಹೆಚ್. ಹೊಳಿಯಪ್ಪನವರ ಕಾಲಾವಧಿಯಲ್ಲಿ (1957-1967) ದೇವರಕಾರ್ಯಗಳು ಮತ್ತು ಗ್ರಾಮದ ಅಭಿವೃದ್ಧಿ ಹೆಚ್ಚು ಪ್ರಚಲಿತಕ್ಕೆ ಬಂದಿತೆಂಬುದನ್ನು ಅನೇಕ ಹಿರಿಯರು ಹಾಗು ಸುತ್ತಮುತ್ತಲ ಗ್ರಾಮಸ್ಥರು ಈಗಲೂ ನೆನಪಿಸಿಕೊಳ್ಳುತ್ತಾರೆ.

ರಥೋತ್ಸವದ ಕೆಲಸಕಾರ್ಯಗಳನ್ನು ಈ ಭಾಗದ ಜನ ಹಂಚಿಕೊಂಡು ನಿರ್ವಹಿಸುತ್ತ ಬಂದಿದ್ದಾರೆ. ರಾಮಗೊಂಡನಹಳ್ಳಿಯವರು ರಥವನ್ನು ಕಟ್ಟಿ ಸಿದ್ಧ ಮಾಡುವುದು, ನುಗ್ಗಿಹಳ್ಳಿಯವರು ಕಲ್ಯಾಣೋತ್ಸವ ನಡೆಸಿಕೊಡುವುದು, ತಾಂಡಗಳ ಜವ ಕಟ್ಟಿಗೆ ಕಡಿದು ಸಿದ್ಧಮಾಡುವುದು, ದೇವರಹಳ್ಳಿಯ ಆದಿಕರ್ನಾಟಕ (ಎ.ಕೆ.) ಜನ ರಥದ ಬೀದಿಯನ್ನು ಗುಡಿಸಿ ಸ್ವಚ್ಛ ಮಾಡುವುದು, ಆದಿದ್ರಾವಿಡ (ಎ.ಡಿ) ಜನಾಂಗದವರು ವಾದ್ಯ ನುಡಿಸುವುದು, ದಾಸರ ವರ್ಗದವರು ಜಾಗಟೆ, ಚಕ್ರವಾದ್ಯ ನುಡಿಸಿ ಕಹಳೆ ಊದುವುದು, ದೇವಾಂಗ ಮತ್ತು ಗಂಗಾಮತಸ್ಥರು ಛತ್ರ, ಚಾಮರಗಳನ್ನು ಹಿಡಿಯುವುದು. ನಾಯಕ ಜನಾಂಗದವರು ತೇಜಿ (ಅಶ್ವ) ಅಲಂಕಾರ ಮಾಡಿ ಉತ್ಸವಗಳಿಗೆ ಸಿದ್ದತೆ ಮಾಡುವುದು, ಉಪ್ಪಾರ ಜನಾಂಗದವರು ಉತ್ಸವಗಳನ್ನು ಆಗುಮಾಡುವುದು, ರಥ ಎಳೆಯಲು ಹಗ್ಗಗಳ ಸಿದ್ಧತೆ, ಇತರೆ ಭಕ್ತಾದಿಗಳ ಸಹಕಾರದಿಂದ ರಥವನ್ನು ಬೆಟ್ಟದ ಮೇಲಿನಿಂದ ಕೆಳಗೆ ಇಳಿಸಿ ಪುನಃ ಬೆಟ್ಟದ ಮೇಲೆ ಎಳೆದೊಯ್ಯುವ ಪೂರ್ಣ ಹೊಣೆಗಾರಿಕೆ ನಿರ್ವಹಿಸುವುದು. ನೆರೆಯ ಗ್ರಾಮಗಳಾದ ಕಗತೂರು, ನೀತಿಗೆರೆ, ಕೊಂಡದಹಳ್ಳಿ, ಹೀರೇಉಡ, ಕಾಕನೂರು, ರಾಮೇನಹಳ್ಳಿಯವರು ತಮ್ಮ ಕೈಲಾದ ಸೇವಾಕಾರ್ಯ ಮಾಡುವುದು—ಹೀಗೆ ಈ ಭಾಗದ ಜನ ಒಂದು ವಿಶಿಷ್ಟವಾದ ಸಾಮರಸ್ಯದಿಂದ ಕೂಡಿದ ಭಾವೈಕ್ಯತೆಯ ಸಾಂಸ್ಕೃತಿಕ ಬದುಕನ್ನೇ ಕಟ್ಟಿಕೊಂಡು ಬಂದಿದ್ದಾರೆ.

ಈ ಕ್ಷೇತ್ರದ ಅಧಿದೇವರಿಂದ ಅನೇಕ ಪವಾಡಸದೃಶ ಘಟನೆಗಳೂ ನಡೆದಿವೆ. ಹಾಗೆಂದೇ ಶ್ರೀರಂಗನಾಥನಿಗೆ "ಭಕ್ತಬಾಂಧವ, ಭವರೋಗವೈದ್ಯ, ಕೆಂಜೆಡೆ ರಾಮ, ರಾಕ್ಷಸ ಸಂಹಾರಿ (ಉಲ್ಕಾಮುಖ ಎಂಬ ರಾಕ್ಷಸನನ್ನು ಸಂಹರಿಸಿರುವುದು), ಭಕ್ತ ಪರಿಪಾಲಕ, ದುಷ್ಟಶಿಕ್ಷಕ, ಶಿಷ್ಟರಕ್ಷಕ, ಭಕ್ತರ ಸೇವಕ, ಬೇಟೆರಂಗ-ಮುಂತಾದ ಬಿರುದುಗಳಿವೆ. ಸಕಾಲದಲ್ಲಿ ಈ ಭಾಗದಲ್ಲಿ ಮಳೆಯಾಗದಿದ್ದರೆ ಅಶ್ವಾರೂಢನಾದ ಶ್ರೀಸ್ವಾಮಿಯನ್ನು ಬಾಣಪ್ಪ ಮತ್ತು ಭೂತೇಶ್ವರ ದೇವರುಗಳೊಂದಿಗೆ ಕಾಲನಡಿಗೆಯಲ್ಲಿ ಸುಮಾರು ಹದಿನೈದು ಕಿಲೋಮೀಟರ್ ದೂರದ ಶಾಂತಿಸಾಗರದ ಶ್ರೀಸಿದ್ದೇಶ್ವರ ಕ್ಷೇತ್ರಕ್ಕೆ ಕರೆದೊಯ್ಯುವರು. ಅಲ್ಲಿ ವಿಶೇಷ ಗಂಗಾಪೂಜೆ ಸಲ್ಲಿಸಿ ಭಗವಂತನನ್ನು ಭಜಿಸಿ, ಪೂಜೆ ಸಲ್ಲಿಸಿ, ದೊಡ್ಡೆಡೆ (ದೊಡ್ಡ ಎಡೆ) ಹಾಕಿ ಪರಾಕ್ ಹೇಳಿಸಿ

ಪ್ರಸಾದವಿನಿಯೋಗ ಮಾಡುವರು. ಶ್ರೀಸ್ವಾಮಿಯ ಅಪ್ಪಣೆ ಪಡೆದು ಭೂತೇಶ್ವರ (ಹೊತ್ತ ಭಕ್ತರು) ಮೂರು ತಲೆಯ ಬೆಟ್ಟವನ್ನೇರಿ ವರುಣನಿಗೆ ಪ್ರಾರ್ಥನೆ ಸಲ್ಲಿಸಿ ಹಿಂದಿರುಗುವರು. ಭಕ್ತರ ಈ ವಿನಮ್ರ ಪ್ರಾರ್ಥನೆಯಿಂದ ಶ್ರೀರಂಗನ ಕರುಣೆಯಿಂದ ಮಳೆಯಾಗುವುದೆಂಬ ದೃಢ ನಂಬಿಕೆಯಿದೆ. ಈ ನಂಬಿಕೆ ಹಲವಾರು ಬಾರಿ ನಿಜವೂ ಆಗಿದೆ. ಹಾಗೆಂದೇ ಈ ದೇವರು 'ಮಳೆಯರಂಗ' ಎಂಬ ಖ್ಯಾತಿಗೂ ಪಾತ್ರನಾಗಿದ್ದಾನೆ.

ದೇವರಹಳ್ಳಿ ಜನತೆಗೆ ಶ್ರೀಲಕ್ಷ್ಮೀರಂಗನಾಥನೇ ಸರ್ವೋಚ್ಚ ನ್ಯಾಯಾಧೀಶ. ಆಸ್ತಿಪಾಸ್ತಿ ಕೊಳ್ಳಲು, ಶುಭಕಾರ್ಯ ಮಾಡಲು, ಭೂಮಿಗೆ ಬೀಜ ಬಿತ್ತಲು, ಈ ದೇವರ ಅನುಗ್ರಹ (ಪ್ರಸಾದ) ಬೇಕು ! ಈ ಊರಲ್ಲಿ ರಂಗಪ್ಪ, ರಂಗಮ್ಮ, ಲಕ್ಕಪ್ಪ, ಲಕ್ಕಮ್ಮ, ಲಕ್ಕಮ್ಮ, ಉಡುಮರಡಪ್ಪ ಎಂಬ ಹೆಸರಿನವರೇ ಹೆಚ್ಚು. ಶ್ರೀ ಸ್ವಾಮಿಯು ಉಡರೂಪದಲ್ಲಿ ಬಂದು ನೆಲೆಸಿರುವ ಹಿನ್ನೆಲೆಯಲ್ಲಿ ಈ ಹಳ್ಳಿಯಲ್ಲಿ ಇಲ್ಲವೇ ಬೆಟ್ಟದ ಭಾಗದಲ್ಲಿ ಉಡಗಳನ್ನು ಕೊಲ್ಲುವುದಿಲ್ಲ. ಅವುಗಳ ಬಗ್ಗೆ ಪೂಜ್ಯ ಭಾವನೆ ಹೊಂದಿದ್ದಾರೆ. ಕಾರ್ತೀಕೋತ್ಸವ, ಮಹಾನವಮಿ, ಹೋಳಿಹುಣ್ಣಿಮೆ, ಶಿವರಾತ್ರಿ, ರಾಮನವಮಿ, ಬಸವಜಯಂತಿ, ಏಕಾದಶಿಯಂತಹ ವಿಶೇಷ ದಿನಗಳಲ್ಲಿ ಉತ್ಸವಗಳನ್ನು ನಡೆಸುತ್ತಾರೆ. ಅಲ್ಲದೆ ಪುರಾಣ ಪುಣ್ಯಕಥೆಗಳ ಪಠಣ-ಶ್ರವಣವೂ ನಡೆಯುತ್ತದೆ. ಗ್ರಾಮದಲ್ಲಿ ಕರಿಯಮ್ಮ, ಆದಿಹೊನ್ನಮ್ಮ, ಆಂಜನೇಯ, ಮೈಲಾರ ಲಿಂಗೇಶ್ವರ, ಹುಲಗಿ ಹೊಸೂರಮ್ಮ, ಬಸವಣ್ಣ, ಕುಕ್ಕವಾಡೇಶ್ವರಿ, ಕಂಚಿಹಾಲಮ್ಮ...ಹೀಗೆ ಹತ್ತಾರು ದೇವಸ್ಥಾನಗಳಿವೆ. ಊರ ಕೆಳಭಾಗದಲ್ಲಿ ಪಶ್ಚಿಮಕ್ಕೆ ವಿಶಾಲ ಪುಷ್ಕರಣಿಯಿದೆ. ಇದರ ಪವಿತ್ರ ಜಲವು ಶ್ರೀಲಕ್ಷ್ಮೀರಂಗನಾಥರ ಪೂಜೆ-ಅಭಿಷೇಕಕ್ಕೆ ಸಲ್ಲುವುದಲ್ಲದೆ ಬಹುಕಾಲದಿಂದ ಗ್ರಾಮದ ಜನತೆಗೂ ಜೀವಧಾರೆಯಾಗಿದೆ. ಇತ್ತೀಚಿನ ವರ್ಷಗಳಲ್ಲಿ ಗ್ರಾಮದಲ್ಲಿ ನೀರು ಸರಬರಾಜು ಯೋಜನೆಯಡಿಯಲ್ಲಿ ನೀರು ಒದಗಿಸುತ್ತಿದ್ದಾರೆ, ಆದಾಗ್ಯೂ ಇನ್ನೂ ಅನೇಕ ಕುಟುಂಬಗಳು ಪುಷ್ಕರಣೆಯ ನೀರನ್ನೇ ಬಳಸುತ್ತಿವೆ. ಪುಷ್ಕರಣೆಗೆ ಹೊಂದಿಕೊಂಡಂತೆ ವಿಶಾಲವಾದ ಕೆರೆಯೂ ಇದೆ.

ನಾನು ಕಂಡಂತೆ ಇಲ್ಲಿಯ ಸಂಕ್ರಾಂತಿಯ ಆಚರಣೆ ಬಹು ವಿಶಿಷ್ಟವಾಗಿದೆ. ಸಂಕ್ರಾಂತಿಯಂದು ಅಶ್ವಾರೂಢ ಶ್ರೀ ಸ್ವಾಮಿಯನ್ನು ಶ್ರದ್ಧಾಭಕ್ತಿಯಿಂದ ಉತ್ಸವ ಮೂಲಕ ತಂದು ಗ್ರಾಮದ ಪಶ್ಚಿಮಕ್ಕಿರುವ ನಾಡಿಗರ ಹೊಲದಲ್ಲಿ ವಿಶೇಷ ಪೂಜೆಗೈದು ಬೇಟೆಗಾರರ ತಂಡ ಹಿಡಿದು ತಂದ ಬಿಳಿ ಮೊಲದ ಕಾಲಿಗೆ ಗೆಜ್ಜೆ ಕಟ್ಟಿ ಪೂಜೆ ಮಾಡಿ ಅದನ್ನು ಬಿಡುತ್ತಿದ್ದರು. ಆಗ ಆ ಮೊಲ ದಿಕ್ಕೆಟ್ಟು ಓಡಿ ಪೊದೆಯೊಂದರಲ್ಲಿ ಸೇರಿಕೊಳ್ಳುತ್ತಿತ್ತು. ಭಕ್ತಜನ ಚಪ್ಪಾಳೆ ತಟ್ಟಿ ಹರ್ಷ ವ್ಯಕ್ತಪಡಿಸಿ ಎಳ್ಳು-ಬೆಲ್ಲ ಸವಿಯುತ್ತಿದ್ದರು. ಇತ್ತೀಚಿನ ವರ್ಷಗಳಲ್ಲಿ ಮೊಲ ಬಿಡುವ ಪದ್ಧತಿ ನಿಂತಿರುವುದಾದರೂ ಅಂದು ಶ್ರೀ ಸ್ವಾಮಿಯನ್ನು ಉತ್ಸವದಲ್ಲಿ ತಂದು ಆ ಹೊಲದಲ್ಲಿ

ಪೂಜಿಸುತ್ತಾರೆ. ದೇವರನ್ನು ಕೂರಿಸಲು ಕಟ್ಟೆಯೊಂದನ್ನು ಕಟ್ಟಿದ್ದಾರೆ. ಇದನ್ನು ಸಂಕ್ರಾಂತಿಕಟ್ಟೆ ಎಂದೇ ಕರೆಯುವರು.

ಕ್ರಿ.ಶ. 1636 ರಲ್ಲಿ ಬಿಜಾಪುರದ ದಂಡನಾಯಕ ರಣದುಲ್ಲಾಖಾನ್ ಈ ಭಾಗದಲ್ಲಿ ಸಂತೇಬೆನ್ನೂರಿನ ಈಗಿನ ಐತಿಹಾಸಿಕ ಪುಷ್ಕರಣಿಯ ದಂಡೆಯ ಮೇಲಿದ್ದ ಭವ್ಯವಾದ ಹಿಂದೂ ದೇವಾಲಯ(ಶ್ರೀರಂಗನಾಥಸ್ವಾಮಿ)ವನ್ನು ನಾಶ ಮಾಡಿ ತನ್ನ ಸೈನ್ಯದೊಂದಿಗೆ ದೇವರಹಳ್ಳಿಯ ಉಡುಗಿರಿ ಕ್ಷೇತ್ರಕ್ಕೂ ಮುತ್ತಿಗೆ ಹಾಕಿದನು. ಆ ಕಾಲದಲ್ಲಿ ಶ್ರೀರಂಗನಾಥಸ್ವಾಮಿ ದೇವಸ್ಥಾನದಲ್ಲಿ ಬಹಳಷ್ಟು ದೊಡ್ಡ ದೊಡ್ಡ ಜೇನುಗಳು ಕಟ್ಟುತ್ತಿದ್ದವಂತೆ. (ನಾನು ಚಿಕ್ಕವನಿದ್ದಾಗ ಕಂಡಂತೆ 2-3 ಅಡಿ ಉದ್ದದ 1-2 ಅಡಿ ಕೆಳಗೆ ಜಗ್ಗಿದ ಜೇನುಗೂಡುಗಳಿದ್ದವು) ಸೈನಿಕರಲ್ಲಿ ಯಾರೋ ತಮ್ಮಲ್ಲಿದ್ದ ಆಯುಧದಿಂದ ಜೇನುಗೂಡಿಗೆ ತಿವಿದ ಕಾರಣವೋ ಅಥವಾ ದೈವಪ್ರೇರಣೆಯೋ ಭುಗಿಲೆದ್ದ ಜೇನುನೊಣಗಳು ಸೈನಿಕರನ್ನು ಕಚ್ಚತೊಡಗಿದವು. ಅದನ್ನು ಸಹಿಸಿಕೊಳ್ಳಲು ಸಾಧ್ಯವಾಗದೆ ರಣದುಲ್ಲಾಖಾನನ ಸೈನ್ಯ ದಿಕ್ಕೆಟ್ಟು ಓಡಿತು. ಹೀಗಾಗಿ ಈ ದೇವಸ್ಥಾನಗಳು ಶತ್ರು ದಾಳಿಯಿಂದ ಪಾರಾದವು (ಕೈಫಿಯತ್ತಿನಲ್ಲೂ ಈ ಬಗ್ಗೆ ಉಲ್ಲೇಖವಿದೆ).

ಬೆಟ್ಟದ ಮೇಲೆ ನಿಂತು ನೋಡಿದರೆ ಪೂರ್ವಕ್ಕೆ ದುಮ್ಮಿಮಲ್ಲೇಶ್ವರ ದೇವಸ್ಥಾನ, ಪಶ್ಚಿಮಕ್ಕೆ ಶಾಂತಿಸಾಗರ ಸಿದ್ಧೇಶ್ವರ ದೇವಸ್ಥಾನ, ಉತ್ತರಕ್ಕೆ ಸಂತೇಬೆನ್ನೂರು ಶ್ರೀರಾಮ ದೇವರ ದೇವಸ್ಥಾನ, ದಕ್ಷಿಣಕ್ಕೆ ಚನ್ನಗಿರಿ ಬೇಟೆ ರಂಗನಾಥಸ್ವಾಮಿ ದೇವಸ್ಥಾನ ಕಾಣುತ್ತವೆ.

ದೇವರಹಳ್ಳಿಯ ಕೆಳಭಾಗದಲ್ಲಿ ಉತ್ತರಕ್ಕೆ ಕೋಟೆಯೊಂದಿದ್ದ ಸಾಕ್ಷಿಯಾಗಿ ಒಂದು ಬುರುಜು ಮಾತ್ರ ಈಗ ಉಳಿದಿದೆ. ಅದೂ ಅರ್ಧದಷ್ಟು ಮಣ್ಣಲ್ಲಿ ಮುಚ್ಚಿಹೋಗಿದೆ. ಎಂಬತ್ತೈದರ ವಯೋಮಾನದ ಭೈರಪ್ಪರ ರಂಗಜ್ಜನವರನ್ನು ನಾನು ಕಂಡಾಗ ತಮ್ಮ ನೆನಪಿನಾಳದಿಂದ ಕೆಲವು ವಿಷಯಗಳನ್ನು ಹೊರತೆಗೆದರು. ಸುಮಾರು ಒಂದು ಮೈಲಿಯಷ್ಟು ಹೊಂದಿದ ಕೋಟೆಗೆ ನಾಲ್ಕು ದಿಕ್ಕುಗಳಲ್ಲೂ ನಾಲ್ಕು ಬುರುಜುಗಳು ಇದ್ದವಂತೆ. ಆ ಮಧ್ಯೆ ಸುಮಾರು ಅರವತ್ತು ಅಂಕಣದ ವಿಶಾಲವಾದ ನಾಡಹೆಂಚಿನ ಮನೆಯಿದ್ದು ಅದರಲ್ಲಿ ಕುದುರೆಲಾಯ, ಗೋಶಾಲೆ, ಗೌರಿ ಅಂಕಣ, ತೂಗುಮಂಚವಿದ್ದ ವಿಶ್ರಾಂತಿ ಕೊಠಡಿ, ಮಲಗುವ ಕೊಠಡಿಗಳು, ವಿಶಾಲ ಹಜಾರ, ಕಲಾಭ್ಯಾಸದ ಕೊಠಡಿ, ಪೂಜಾಮಂದಿರ, ಉಗ್ರಾಣ, ಭೋಜನಶಾಲೆ, ಅಡುಗೆಮನೆ... ಹೀಗೆ ವಿವಿಧ ಭಾಗಗಳಿದ್ದು ಮನೆಯ ಬಾಗಿಲು, ಕಿಟಕಿ, ತೊಲೆ-ಕಂಬಗಳಿಗೆ, ಮೇಲ್ಛಾವಣಿಗೆ ಬಳಸಿದ್ದ ಗಟ್ಟಿಮುಟ್ಟಾದ ದೊಡ್ಡಗಾತ್ರದ ಮರಮುಟ್ಟುಗಳಿಂದ ಕೂಡಿದ್ದ ಅಂತಹ ಮನೆಯನ್ನು ನಾನೆಲ್ಲೂ ಕಂಡಿಲ್ಲ — ಎಂಬುದಾಗಿ ತಿಳಿಸಿದರು. ಇತ್ತೀಚಿನ ವರ್ಷಗಳಲ್ಲಿ ಕೋಟೆ ನಶಿಸುತ್ತಾ ಮೂರು ಬುರುಜುಗಳು ಬಿದ್ದುಹೋಗಿವೆ. ತಿಪ್ಪೆಗಳು ಮತ್ತು ಸುಗ್ಗಿಯ ಕಣಗಳು ಕೋಟೆಯ ಒಳಭಾಗವನ್ನು ಆಕ್ರಮಿಸಿವೆ. ಒಂದೆರಡು ತಲೆಮಾರಿನಿಂದ ನಾಡಿಗರ ಮನೆತನದವರ ವಶದಲ್ಲಿದ್ದ ದೊಡ್ಡಮನೆ ಈಗ ನೆಲಸಮವಾಗಿದೆ. ಬಹುಶಃ ಹಿಂದೆ ಈ

ಕೋಟೆ ನಾಯಕರ (ಪಾಳೆಯಗಾರರ) ಆಳ್ವಿಕೆಯಲ್ಲಿದ್ದು ಅವರ ಕಾಲ ಮುಗಿದುಹೋಗುವ ಸಂದರ್ಭಕ್ಕೆ ಈ ಭಾಗದ ಶಾನುಭೋಗಿಕೆ ಕಾರ್ಯನಿರ್ವಹಿಸುತ್ತಿದ್ದ ನಾಡಿಗರ ವಂಶಸ್ಥರಿಗೆ ಆ ಮನೆಯನ್ನು ಬಿಟ್ಟುಹೋಗಿರಬೇಕು. ಇದು ಇತಿಹಾಸ ಸಂಶೋಧನೆಗೆ ಒಳಪಡಿಸಬಹುದಾದ ವಿಷಯವಾಗಿದೆ.

ಬಡತನ, ಅವಿದ್ಯಾವಂತಿಕೆಯಲ್ಲಿ ಬಹುಕಾಲ ನಡೆದುಬಂದ ಈ ಜನ ಹೃದಯ ಸಿರಿವಂತರು. ಆದರೆ ನಿರುದ್ಯೋಗಿಗಳಲ್ಲ-ಸೋಮಾರಿಗಳಲ್ಲ. ಸೊಪ್ಪು, ತರಕಾರಿ, ವ್ಯವಸಾಯ, ಕೂಲಿ, ಮೀನುಗಾರಿಕೆ, ಬೇಟೆಯಾಡುವುದು — ಹೀಗೆ ಬದುಕಿಗಾಗಿ ಅವಿಶ್ರಾಂತ ದುಡಿಯುತ್ತ ಬಂದ ಕಷ್ಟಸಹಿಷ್ಣುಗಳು. ಇತ್ತೀಚಿನ ವರ್ಷಗಳಲ್ಲಿ ಸಾಕಷ್ಟು ಮಂದಿ ವಿದ್ಯಾವಂತರಿದ್ದಾರೆ. ಹೆಣ್ಣುಮಕ್ಕಳೂ ಸುಶಿಕ್ಷಿತರಾಗುತ್ತಿದ್ದಾರೆ. ಹಲವರು ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಗ್ರಾಮಪಂಚಾಯ್ತಿ ಸದಸ್ಯೆಯರಾಗಿ, ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸುವಲ್ಲಿ ಯಶಸ್ವಿಯಾಗಿದ್ದಾರೆ. ಗ್ರಾಮದಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮಲ್ಲಾಡಿಹಳ್ಳಿ ಅನಾಥ ಸೇವಾಶ್ರಮದ ಆಡಳಿತಕ್ಕೊಳಪಟ್ಟ ಪ್ರೌಢಶಾಲೆ, ಪದವಿಪೂರ್ವ ಕಾಲೇಜೂ ಇವೆ. ನಾಡಿನ ಖ್ಯಾತ ಕವಿ ಡಾ.ಸುಮತೀಂದ್ರ ನಾಡಿಗ್, ಕಾದಂಬರಿಕಾರ ಬಿ.ಎಲ್. ವೇಣು, ನಿವೃತ್ತ ಇಂಜಿನಿಯರು ಹಾಗು ಸಮಾಜ ಸೇವಕರಾದ ಡಿ.ಎಸ್. ರಾಮಪ್ಪ ಅವರುಗಳು ದೇವರಹಳ್ಳಿಯವರೆಂದು ತಿಳಿಸಲು ಹೆಮ್ಮೆ ಎನಿಸುತ್ತದೆ.

ಸರ್ಕಾರದ ಮುಜರಾಯಿ ಇಲಾಖೆಗೆ ಸೇರಿರುವ ಈ ದೇವಸ್ಥಾನಕ್ಕೆ ಹೋಗಲು ಗ್ರಾಮದ ಬಸ್ ನಿಲ್ದಾಣದಿಂದ ಹಾಸುಗಲ್ಲಿನ 101 ಮೆಟ್ಟಿಲುಗಳ ಸೋಪಾನವನ್ನು ಭಕ್ತಾದಿಗಳ ಮತ್ತು ಮುಜರಾಯಿ ಇಲಾಖೆಯ ನೆರವಿನಿಂದ ನಿರ್ಮಿಸಲಾಗಿದೆ. ಅಲ್ಲದೆ ಹತ್ತಾರು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಹಲವು ಭಕ್ತರು ಹಲವು ಗೋಪುರಗಳನ್ನು ನಿರ್ಮಿಸಿರುವರು. ಸೋಪಾನ ಆರಂಭವಾಗುವಲ್ಲಿ ಪ್ರವೇಶ ಗೋಪುರವನ್ನು ಇಂಜಿನಿಯರುಗಳಾದ ಎಂ.ಎನ್. ಮಹೇಶ್ವರಪ್ಪ ಮತ್ತು ಕೆ.ಟಿ. ತಿಮ್ಮಪ್ಪ, ಮಧ್ಯ ಸೋಪಾನದಲ್ಲಿ ಪಾದುಕಾ ಗೋಪುರವನ್ನು ನಿವೃತ್ತ ಇಂಜಿನಿಯರ್ ಜೆ.ಎಂ. ರಂಗಪ್ಪ, ರಂಗನಾಥಸ್ವಾಮಿ ದೇವಸ್ಥಾನದ ಮೇಲಿನ ಗೋಪುರವನ್ನು ರಾಮಗೊಂಡನಹಳ್ಳಿ ಸೊಕ್ಕೆರಂಗಪ್ಪನವರ ಮಗ ಆರ್. ಶ್ರೀನಿವಾಸ್, ಲಕ್ಷ್ಮೀದೇವಿ ದೇವಸ್ಥಾನದ ಗೋಪುರವನ್ನು ಬೆಂಗಳೂರಿನ ಆಡನೂರಪ್ಪ — ಇವರುಗಳು ಕಟ್ಟಿಸಿರುತ್ತಾರೆ. ರಂಗನಾಥಸ್ವಾಮಿ ದೇವಾಲಯದಲ್ಲಿ ಸರ್ಪಶಯನ ಶ್ರೀವಿಷ್ಣುವಿನ ಸಿಮೆಂಟಿನ ವಿಗ್ರಹವನ್ನು ನಿವೃತ್ತ ಲೆಫ್ಟಿನೆಂಟ್ ಇಂಜಿನಿಯರ್ ಕೆ. ಮಾದಪ್ಪ, ನವರಂಗ ಅಂಕಣದ ನೆಲಕ್ಕೆ ನಿವೃತ್ತ ಇಂಜಿನಿಯರ್ ಕೆ. ದಾಸಪ್ಪನವರು ಮೊಜಾಯಿಕ್ ಕಲ್ಲು ಹಾಕಿಸಿದ್ದಾರೆ. ಶ್ರೀಲಕ್ಷ್ಮೀದೇವಿ ದೇವಸ್ಥಾನದ ಮುಂಭಾಗದಲ್ಲಿ ಆಶ್ರಯ ಮೇಲ್ಛಾವಣಿಯನ್ನು ಕಸ್ತೂರಿ ರಂಗಪ್ಪನವರ ಮಗ ಇಂಜಿನಿಯರ್ ನಾಗರಾಜ್ ಅವರು ನಿರ್ಮಿಸಿದ್ದಾರೆ. ಹೀಗೆ ಇನ್ನೂ ಹಲವು ಭಕ್ತರು ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ.

ದೇವಸ್ಥಾನಕ್ಕೆ ಉಂಬಳಿಯಾಗಿ (ದತ್ತಿ) ಭಕ್ತರು ಹಿಂದೆ ನೀಡಿದ್ದ ನೂರಾರು ಎಕರೆ ಭೂಮಿ ಈಗ ಉಳುವವರ ಪಾಲಾಗಿದೆ.

ಶೇಕಡ 95 ರಷ್ಟು ಹಿಂದುಳಿದವರೇ ನೆಲೆಸಿರುವ ದೇವರಹಳ್ಳಿಯ ಪ್ರಸ್ತುತ ಜನಸಂಖ್ಯೆ ಸುಮಾರು ಐದು ಸಾವಿರ. ಶೇ. 60 ರಷ್ಟು ಉಪ್ಪಾರರು, ಶೇ. 15 ರಷ್ಟು ನಾಯಕ (ವಾಲ್ಮೀಕಿ) ಜನಾಂಗ, ಶೇ. 15 ರಷ್ಟು ದೇವಾಂಗ ಜನಾಂಗ ಶೇ. 5 ರಷ್ಟು ಗಂಗಾಮತಸ್ಥರು ಉಳಿದ ಶೇ. 5ರಷ್ಟು ಇತರೆ ಜನಾಂಗದವರು. ಬಹುಸಂಖ್ಯಾತರಾದ ಉಪ್ಪಾರರೇ ಗ್ರಾಮದ ಸಕಲ ಕಾರ್ಯಗಳಲ್ಲೂ ನಿರ್ಣಾಯಕ ಪಾತ್ರದಲ್ಲಿದ್ದಾರೆ. ಹಬ್ಬ ಹರಿದಿನಗಳಲ್ಲಿ ವಿಶೇಷ ಸಂದರ್ಭಗಳಲ್ಲಿ ದೇವರನ್ನು ಬೆಟ್ಟದಿಂದ ಊರಿಗೆ ಹೊತ್ತು ತರುವ, ಉತ್ಸವಗಳನ್ನು ಶ್ರದ್ಧಾಭಕ್ತಿಯಿಂದ ನಡೆಸುವ, ಗ್ರಾಮಾಭಿವೃದ್ಧಿ ಕಾರ್ಯಗಳಲ್ಲಿ — ಹೀಗೆ ಎಲ್ಲರ ಸಹಕಾರದಿಂದ ಜವಾಬ್ದಾರಿ ನಿರ್ವಹಿಸುವಲ್ಲಿ ಉಪ್ಪಾರ ಜನಾಂಗ ಶ್ರಮಿಸುತ್ತ ಬಂದಿರುವುದೂ ಒಂದು ಇತಿಹಾಸವೇ ಆಗಿದೆ.

*(ಕೃಪೆ : ಭಗೀರಥ ಸಂಕಲ್ಪ : ಸಂಚಿಕೆ : ಫೆಬ್ರವರಿ 2002)*

*

## * ವಿವೇಕವ ಬಿತ್ತು ಬಾ ರಾಮ

- ಬಿ. ಮೈಲಾರಪ್ಪ
ಶ್ರೀರಂಗ

ಬಾ ರಾಮ ಬಾರ-ಬಾರ
ಬಡ ಜನತೆಯ ಕಾಯಿಬಾರ
ಚೌಳ ಮಣ್ಣನು ತೆಗೆದು
ಗುಡ್ಡೆಯನು ನೀ ಮಾಡಿ
ಮೇಲ್ ಹದವ ಮಾಡೆ,
ಬಂದಂಥ ರಸ ನೋಡ ಬಾರ :
ಅದುವೆ ಮೇಲ್ ಸಕ್ಕರೆ ಕಾಣ
ಮೇಲ್ ಸಕ್ಕರೆಯೇ ಅಹುದು
ಉಪ್ಪಾರರಾ ಬದುಕು ;
ಬರಡಾದ ಆ ಬದುಕ
ಅಸಹಾಯಕ ಸ್ಥಿತಿಯ
ನೀ ನೋಡ ಬಾರಾ
ಕುಲಕಸುಬ ತೊರೆದು
ಮೇಲ್ ಕಸುಬ ಕಲಿತ
ಇವರ ಸ್ಥಿತಿಯ ಕಾಣ ಬಾರ
ಇಟ್ಟಿಗೆ ಹಾಕಿ ಗೂಡು ಕಟ್ಟುವರು
ಬೆವರ ಸುರಿಸಿ ಕಲ್ ಮಣ್ಣ ಹೊರುವರು
ಹತ್ತಿಯ ಬಿಡಿಸಿ ನೂಲ್ ತೆಗೆವರು

ಕೆರೆಯ ಹಿಂಬದಿಯಲಿ ಇವರ ಬದುಕು
ಬರಡಾದ ಕೃಷಿ ಜೀವನದ ಬದುಕು
ವಿದ್ಯೆ ಇಲ್ಲದೆ ಬುದ್ಧಿಯಿಲ್ಲದೆ
ಬಿದ್ದ ಜನರಲ್ಲಿ ವಿವೇಕವ ಬಿತ್ತಲು
ಬಾ ರಾಮ ಬಾರ ಬಾರ
ದೇವರಹಳ್ಳಿಯ ರಾಮ
ಹನುಮನೊಡಗೂಡಿ ಬಾ
ಮತ್ತೊಮ್ಮೆ ಬಾರಾ
ಮಗದೊಮ್ಮೆ ಬಾರಾ
ಉಪ್ಪಾರರಾ ಬದುಕಿ
ನುದ್ಧಾರಕ್ಕಾಗಿ ಬಾ
ಬಾ ರಾಮ ಬಾರಾ
ಬಾ ರಾಮ ಬಾರಾ



## * ಧೀಮಂತ ಚೇತನ

- ಹೆಚ್. ನೀಲಪ್ಪ
ಸಂತೆಬೆನ್ನೂರು

1

ದೇವರಹಳ್ಳಿಯ ಬಡ ಕೂಲಿಕಾರ
ಸಿಕ್ಕುಡಿಯಪ್ಪ-ಕರಿಯಮ್ಮರ
ಪುಣ್ಯಗರ್ಭದಿ ಜನಿಸಿದ
ರಾಜೀವ ಗುಣಸಂಪನ್ನ
ಮನಸು ಅಪ್ಪಟ ಚಿನ್ನ
ಒಪ್ಪ ಓರಣ ಕಾಯಕನಿಷ್ಠ-ಡಿ.ಎಸ್.ಆರ್.

2

ಬಾಲ್ಯದಲೆ ಕಾಡಿತ್ತು ಅನಾಥ ಪ್ರಜ್ಞೆ
ತಂದೆ-ತಾಯಿಯರ ಮರಣದಿಂದೆ
ಚಂದ್ರಹಾಸನ ತೆರದಿ ಬದುಕು
ಬೀದಿಪಾಲು ! ಗಾಳಿಗೊಡ್ಡಿದ ಸೊಡರು !!
ವಿದ್ಯೆ ಪಡೆಯಬೇಕೆಂಬ ಹಂಬಲ
ಕನಿಕರಿಸಿದ ಬಂಧುಗಳ ಬೆಂಬಲ
ವಾರಾನ್ನದೂಟದಿ ಕಾಲೇಜು ವ್ಯಾಸಂಗ
ತಾಂತ್ರಿಕ ಬಿ.ಇ. ಪದವಿ ಗಳಿಕೆ ಪ್ರಸಂಗ
ಕುಂಸಿ ಸಣ್ಣಮ್ಮ ಜೊತೆ ವೈವಾಹಿಕ ಸಂಗ
ಲೋಕೋಪಯೋಗಿ ಇಲಾಖೆ ನೌಕರಿ ಸತ್ಸಂಗ

ಬದುಕಾಯಿತು ನೆಲೆ-ಬೆಲೆಯ ರಂಗ !
ಮೂವತ್ತು ವರುಷಗಳ ಸರ್ಕಾರಿ ಸೇವೆ
ದಕ್ಷ-ಪ್ರಾಮಾಣಿಕ-ನಿಷ್ಕಳಂಕ ಅಧಿಕಾರಿ-ಮನ್ನಣೆ
ಸಾರ್ಥಕ ಸೇವೆಗೆ ಎಲ್ಲರ ಅಭಿನಂದನೆ

3

ತನ್ನ ಬದುಕ ಬಳ್ಳಿಗೆ ನೀರೆರೆದು ಪೋಷಿಸಿದ
ಸಮಾಜ ಋಣ ತೀರಿಸುವ ಪಣ !
ಜಿಲ್ಲಾ-ರಾಜ್ಯ ಉಪ್ಪಾರ ಸಂಘದ ಹೊಣೆ
ನೀರಾವರಿ ಹನುಮಯ್ಯರ ಸಹನಿರ್ವಹಣೆ
ಭಗೀರಥ ಜಯಂತಿ ಆಚರಣೆ ಪ್ರೇರಣೆ
ಕುಲಗುರುಗಳಾಶೀರ್ವಾದದಿ ಶಾಖಾಮಠ
ಭಗೀರಥಾನಂದ ! ದಾವಣಗೆರೆಯಲಿ ನಿರ್ಮಿತ
ತನು-ಮನ-ಧನವನರ್ಪಿಸಿ ದುಡಿದ
ಎಪ್ಪತ್ತೈದರ ಹರೆಯದ ಡಿ.ಎಸ್.ಆರ್.
ಶತಾಯುಷಿಯಾಗಿ ಬಾಳಿ-ಬೆಳಗಲಿ
ಈ ನಾಡಲಿ-ಉಪ್ಪಾರರ ನಾಡಿಯಲಿ ಬಹುಕಾಲ

*

## * ಭಗೀರಥನ ನೆನೆವಂತೆ ಮಾಡಿದರು

- ಹೆಚ್.ಸಿ. ನೀರಾವರಿ
ಬೆಂಗಳೂರು

ಡಿ.ಎಸ್. ರಾಮಪ್ಪ ಅವರನ್ನು ನೆನೆದಾಗೆಲ್ಲಾ ನಮ್ಮ ಪ್ರಾಚೀನ ಋಷಿಗಣವನ್ನು ನೆನೆದಂತಾಗುತ್ತದೆ. ವಾಲ್ಮೀಕಿ, ವ್ಯಾಸ, ವಿಶ್ವಾಮಿತ್ರ, ಅಗಸ್ತ್ಯ, ಗೌತಮ, ಮಾರ್ಕಂಡೇಯ, ಋಷ್ಯಶೃಂಗ ಮುಂತಾದ ಮುನಿವರರು ಬದುಕಿ ಬಾಳಿದ ರೀತಿ ಯಾವುದು ? ಅವರು ಕೂಡ ಸಂಸಾರ ಕಟ್ಟಿಕೊಂಡಿದ್ದರು. ಅವರಿಗೂ ಮಕ್ಕಳು-ಮರಿಗಳಾಗಿದ್ದವು. ಆದರೆ ಅವರು ತಮ್ಮ ಜೀವನವನ್ನೆಲ್ಲಾ 'ಲೋಕಕಲ್ಯಾಣ'ಕ್ಕಾಗಿ ಮುಡಿಪಾಗಿಟ್ಟಿದ್ದರು. ಅಂತಹ ಹಿರಿಯ ಚೇತನ ರಾಮಪ್ಪ ಅವರದು. ಅವರು ನಮ್ಮಂತೆ ನಿಮ್ಮಂತೆ ಉಸಿರಾಡಿಕೊಂಡು ದೈನಂದಿನ ಜೀವನ ನಡೆಸುತ್ತಿದ್ದಾರೆಂದುಕೊಂಡರೆ ದೊಡ್ಡ ಲೋಪವಾದೀತು. ಅವರ ಮನಸ್ಸೆಲ್ಲಾ ಅಸಹಾಯಕರಿಗೆ ಮರುಗುವುದೇ ಆಗಿದೆ. ಎಪ್ಪತ್ತೈದು ವರುಷದ ರಾಮಪ್ಪ ಇಂದು ಕೂಡ ಬೆಳಗ್ಗೆಯೇ ದಾವಣಗೆರೆಯ ಅವರ ಮನೆಯಲ್ಲಿರುವುದಿಲ್ಲ. ಬೆಳಗಿನ ಹೊತ್ತು ಒಂದಿಷ್ಟು ಮುದ್ದೆ ಸೊಪ್ಪಿನ ಸಾರು ಉಂಡು ಹೊರಟರೆ ಮುಗಿದುಹೋಯ್ತು. ರಾತ್ರಿಯೇ ಮನೆಗೆ ಬರುವುದು. ಗೋಣೀಚೀಲ ಹಿಡ್ಕೊಂಡು ಊರೂರು ಸುತ್ತಿ ಕಾಳು-ಕಡ್ಡಿ ಸಂಗ್ರಹಿಸಿ ದಾವಣಗೆರೆಯಲ್ಲಿನ 'ಉಪ್ಪಾರ ವಿದ್ಯಾರ್ಥಿ ನಿಲಯ'ವನ್ನು ನಡೆಸುತ್ತಿದ್ದಾರೆ. ಅಲ್ಲೊಂದು ಶಾಖಾಮಠವಿದೆ. ಅದನ್ನು ನಡೆಸಬೇಕು. ವಿದ್ಯಾರ್ಥಿಗಳಿಗೆ ಹೊತ್ತುಗೊತ್ತಿಗೆ ಊಟ-ತಿಂಡಿ ನೀಡಬೇಕು. ಮನೆಯಲ್ಲಿ ಸಂಸಾರದ ಬಗ್ಗೆ ತಲೆಕೆಡಿಸಿಕೊಳ್ಳದಿದ್ದರೂ ಉಪ್ಪಾರ ಸಮುದಾಯವೆಂಬ ದೊಡ್ಡ ಕುಟುಂಬದ ಜವಾಬ್ದಾರಿಯನ್ನು ರಾಮಪ್ಪ ಹೊತ್ತುಕೊಂಡಿದ್ದಾರೆ. ಅವರು ಹೊತ್ತಿರುವ ಸಂಸಾರದ

ಜವಾಬ್ದಾರಿ ಸಾಮಾನ್ಯವಾದುದಲ್ಲ. ಅಲ್ಲಿ ಹತ್ತಾರು ಚಿತ್ರ-ವಿಚಿತ್ರ ಸಮಸ್ಯೆಗಳು ಬರುತ್ತವೆ. ಅಂದಾಕ್ಷಣ ರಾಮಪ್ಪ ಅವರಿಗೆ ಅವರ ಸ್ವಂತ ಸಂಸಾರದ ತಾಪತ್ರಯವಿಲ್ಲವೆಂದು ಭಾವಿಸಬೇಕಾಗಿಲ್ಲ. ಇವರ ಬಹುಮಟ್ಟಿನ ಜವಾಬ್ದಾರಿಯನ್ನು ಶ್ರೀಮತಿ ಸಣ್ಣಮ್ಮರಾಮಪ್ಪ ಅವರು ವಹಿಸಿಕೊಂಡಿದ್ದಾರೆ. ಹೀಗಾಗಿ ರಾಮಪ್ಪ ಅವರ ಶ್ರಮ ಎಷ್ಟೋ ಕಡಿಮೆ ಆಗಿದೆ. ಇಬ್ಬರು ಹೆಣ್ಣು ಮಕ್ಕಳು, ಇಬ್ಬರು ಗಂಡುಮಕ್ಕಳನ್ನು ಹೊಂದಿರುವ ರಾಮಪ್ಪ ಅವರ ಸಾಂಸಾರಿಕ ಜವಾಬ್ದಾರಿ ದೊಡ್ಡದಾಗಿದೆ. ಅವರ ಹಿರಿಯ ಅಳಿಯ ಎರಡು ವರ್ಷದ ಹಿಂದೆ ಹಠಾತ್ತನೆ ತೀರಿಹೋದರು. ಕಿರಿಯ ಮಗ ಜೀವನದಲ್ಲಿ ಪೂರ್ಣವಾಗಿ ನೆಲೆ ನಿಂತಿಲ್ಲ. ಇದರ ಜೊತೆ ಹತ್ತು ಹಲವು ಕಿರಿಕಿರಿಗಳು. ಆದರೆ ರಾಮಪ್ಪ ಎಂದೂ ಇಂತಹದನ್ನು ತಲೆಗೆ ಹಚ್ಚಿಕೊಂಡವರಲ್ಲ. ತಮ್ಮೆಲ್ಲಾ ಒಳನೋವುಗಳನ್ನು ನುಂಗಿಕೊಂಡು ಸಮಾಧಾನಚಿತ್ತದಿಂದಲೇ ಸಮಾಜ ಸೇವೆಗೆ ಮುಂದಾಗಿದ್ದಾರೆ. ಅದಕ್ಕೇ ಅವರನ್ನು ನಮ್ಮ ಪ್ರಾಚೀನ ಋಷಿ ಪರಂಪರೆಗೆ ಹೋಲಿಸಿದ್ದು.

1972ರಲ್ಲಿ ಡಿ.ಎಸ್. ರಾಮಪ್ಪ ಅವರು ನಮ್ಮೂರು ಕುಷ್ಟಗಿಗೆ ಅಸಿಸ್ಟೆಂಟ್ ಇಂಜಿನಿಯರ್‌ಆಗಿ ಬಂದರು. ಆ ತನಕ ನಮ್ಮ ಸುತ್ತಲಿನ ಬಹುತೇಕ ಉಪ್ಪಾರರಿಗೆ ತಮ್ಮ ಜನಾಂಗಕ್ಕೆ ಪ್ರತ್ಯೇಕ ಜಗದ್ಗುರು ಪೀಠವಿದೆಯೆಂಬುದೇ ತಿಳಿದಿರಲಿಲ್ಲ. ವಿಜಯನಗರ ಸಾಮ್ರಾಜ್ಯ ಕಾಲದಿಂದಲೂ ಚೋಳಪ್ಪಯ್ಯ ಸ್ವಾಮಿಗಳು ಹದಿನೆಂಟು ಜಾತಿಗಳಿಗೆ ಜಗದ್ಗುರುಗಳಾಗಿದ್ದರು. ಅವರಿಗೆ ನಾವೆಲ್ಲಾ ನಡೆದುಕೊಳ್ಳುತ್ತಿದ್ದೆವು. ಹೆಚ್ಚು ಹೇಳಬೇಕಾದರೆ ಆ ಕಾಲದಲ್ಲಿ ದಿನನಿತ್ಯದ ಬದುಕಿಗೆ ತೀವ್ರ ಕಷ್ಟವಾಗಿತ್ತು. ಅಂದಮೇಲೆ ದೇವರು, ಸ್ವಾಮೀಜಿ, ಮಠ ಮುಂತಾದವುಗಳನ್ನು ಕುರಿತು ಆಲೋಚಿಸಲು ಬಿಡುವಾದರೂ ಎಲ್ಲಿ ? ಆದರೆ ರಾಮಪ್ಪ ಅವರು ಹಾಗಲ್ಲ. ಸರ್ಕಾರಿ ಕೆಲಸವಾದ ಮೇಲೆ ಸುಮ್ಮನೆ ಮನೆಯಲ್ಲಿ ಕುಳಿತವರಲ್ಲ. ತಾವಿದ್ದ ತಾಲ್ಲೂಕಿನ ಪ್ರತಿ ಹಳ್ಳಿಗೂ ಭೇಟಿ ಕೊಟ್ಟವರು. ಉಪ್ಪಾರರ ಕುಟುಂಬಗಳನ್ನು ತಾವೇ ಹುಡುಕಿಕೊಂಡು ಹೋಗುತ್ತಿದ್ದರು. ಮುಖ ಪರಿಚಯವಿಲ್ಲದಿದ್ದರೂ, ಆ ಹಳ್ಳಿಗರೊಡನೆ ಗಂಟೆಗಟ್ಟಲೆ ಕಷ್ಟಸುಖ ಮಾತನಾಡುತ್ತಿದ್ದರು. ಹಳ್ಳಿಯಲ್ಲಿ ಅಸಿಸ್ಟೆಂಟ್ ಇಂಜಿನಿಯರ್‌ರೊಬ್ಬರು ಹುಡುಕಿಕೊಂಡು ಬಂದು ಮಾತನಾಡಿದರೆ, ಗುಡಿಸಲಿನಲ್ಲಿದ್ದ ಉಪ್ಪಾರನಿಗೆ ಆಗುವ ಸಂತೋಷ ಎಂತಹದು? ಅವನು ಹೇಳಿಕೊಳ್ಳದೇ ಹೋಗಿದ್ದರೂ ಅತ್ಯಂತ ಕೆಳಹಂತದ ಸಾಮಾಜಿಕ ವ್ಯವಸ್ಥೆಯಲ್ಲಿ ಆತ ಬದುಕುತ್ತಿದ್ದ. 'ಜಾತಿ'ಯಿಂದಾಗಿ ಆತನಿಗೆ ಯಾವುದೇ ಬೆಂಬಲವಿರಲಿಲ್ಲ. ಮೊದಲಿನಿಂದಲೂ 'ಭೂ ಒಡೆತನ' ಊರಿನ ಕುಲಕರ್ಣಿ, ದೇಸಾಯಿ, ಗೌಡ, ಪಟೇಲರಲ್ಲಿತ್ತೇ ಹೊರತು ಇವನಂತಹ ಅಸಹಾಯಕರ ಬಳಿ ಏನಿರುತ್ತಿತ್ತು !

ಸಾಮಾನ್ಯವಾಗಿ ಇಂಜಿನಿಯರ್‌ಗಳು, ಡಾಕ್ಟರ್‌ಗಳು ಹಾಗು ಸಾರಿಗೆ ಅಧಿಕಾರಿಗಳು ತಾಲ್ಲೂಕಿನಿಂದ ಬೇರೆ ತಾಲ್ಲೂಕಿಗೆ ವರ್ಗವಾಗಿಹೋದಾಗ ಮೊದಲು ಮನೆ ಬಾಗಿಲ ಬಗ್ಗೆ ಯೋಚಿಸುವುದಿಲ್ಲ. ಆ ಊರಿನಲ್ಲಿ 'ಆಫೀಸರ್ಸ್ ಕ್ಲಬ್' ಇದೆಯಾ? ಇಲ್ಲದೇಹೋದರೆ

ಮಾಡಲಿಕ್ಕೆ ಎಷ್ಟು ದಿನ ಬೇಕೆಂಬುದೇ ಅವರ ಚಿಂತೆ. ಇಸ್ಪೀಟು ಹಾಗೂ ಇತರ ವಿಚಾರವೇ ಅವರ ಚಿಂತನೆಗೆ ನಿಲುಕುವ ವಿಚಾರ. ಇಂತಹವರ ಸಾಲಿನಲ್ಲಿ ಅಂದು ಕುಷ್ಟಗಿಯಲ್ಲಿ ಅಸಿಸ್ಟೆಂಟ್ ಇಂಜಿನಿಯರ್ ರಾಮಪ್ಪ ನನಗೆ ಪ್ರತ್ಯೇಕವಾಗಿ ಕಂಡರು. ಲೋಕದ ಬಾಳಿಗೆ ಅವರು ಹುಚ್ಚರಂತೆ ಕಂಡರೂ ನನಗೆ ಅವರು ಉಪ್ಪಾರ ಸಮಾಜದ ಅವಧೂತರಾಗಿ ಗೋಚರಿಸಿದರು. ಈ ಹಿಂದೆ ರಾಮಪ್ಪ ತೀರ್ಥಹಳ್ಳಿ, ಸಿರಸಿ, ಸಿದ್ದಾಪುರ, ಯಲ್ಲಾಪುರ, ಹಳಿಯಾಳ, ಸಾಗರ, ವಿರಾಜಪೇಟೆ ಗಳಲ್ಲಿ ಕೆಲಸ ಮಾಡಿದ್ದರು. ಅಲ್ಲೆಲ್ಲಾ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಶಿವಮೊಗ್ಗದಲ್ಲಿ ಉಪ್ಪಾರ ವಿದ್ಯಾರ್ಥಿಗಳಿಗೆ 'ವಿದ್ಯಾರ್ಥಿ ನಿಲಯ'ವನ್ನು ಪ್ರಾರಂಭಿಸಿದ್ದರು.

1972ರಲ್ಲಿ ಪ್ರಾರಂಭವಾದ ರಾಮಪ್ಪ-ನನ್ನ ಸ್ನೇಹ ಅಳಿಸಲಾರದ ಬಂಧನವಾಯಿತು. ರಾಮಪ್ಪ ಅವರ ಸಹೃದಯತೆ, ಸ್ನೇಹಶೀಲತೆ, ಪ್ರಾಮಾಣಿಕತೆ, ಅಹಂಕಾರ ರಹಿತ ಮನಸ್ಸು, ಸದಾ ಚಟುವಟಿಕೆಯಿಂದಿದ್ದ ಅವರ ಗುಣಗಳಿಂದ ನಾನು ಆಕರ್ಷಿತನಾದೆ. ಆದರೆ ನನ್ನ ಯಾವ ಗುಣ ಅವರಿಗೆ ಮೆಚ್ಚಿಕೆಯಾಯಿತೋ ಗೊತ್ತಿಲ್ಲ. ಒಟ್ಟಾರೆ ಸೋದರರೆಂಬಂತೆ ನಮ್ಮಿಬ್ಬರಲ್ಲಿ ಬಾಂಧವ್ಯ ಬೆಸೆಯಿತು. ಕಷ್ಟ-ಸುಖಗಳನ್ನು ಹಂಚಿಕೊಳ್ಳುವಷ್ಟು ಸ್ನೇಹ ಸಂಬಂಧ ವೃದ್ಧಿಸಿತು.

1983ರಲ್ಲಿ ರಾಮಪ್ಪ ಅವರು ನಿವೃತ್ತರಾದರು. 1984ರಲ್ಲಿ ಒಂದು ದಿನ ಅವರು ನಮ್ಮ ಮನೆಗೆ ಬಂದರು. "ಸಾರ್, ಇಂದು ಉಪ್ಪಾರ ಸಂಘದ ಸಾಮಾನ್ಯ ಸಭೆ ಇದೆ. ಬನ್ನಿ ಹೋಗೋಣ" ಎಂದರು. ಅದಕ್ಕೆ ನಾನು "ಉಪ್ಪಾರ ಸಂಘ ಎಂಬುದು ಇದೆಯೆ ? ಯಾರೋ ಅಧಿಕಾರ ಪಡೆಯಲು ಆಗಾಗ್ಗೆ ಉಪ್ಪಾರ ಸಮ್ಮೇಳನಗಳು ಅಲ್ಲಲ್ಲಿ ನಡೆಯಬಹುದು. ಅದರಿಂದ ಗ್ರಾಮದ ಮುಗ್ಧ ಉಪ್ಪಾರನಿಗೆ ಹಾಗು ಮಧ್ಯಮವರ್ಗದ ಉಪ್ಪಾರನಿಗೆ ಏನು ಪ್ರಯೋಜನ? ನಾನು ಬರಬೇಕೆಂದರೆ ನೀವು ಅಧ್ಯಕ್ಷರಾಗಲು ಒಪ್ಪಿ" ಎಂದೆ. ಅದಕ್ಕೆ ರಾಮಪ್ಪ "ಅಯ್ಯೋ ಈಗ ಇರೋ ಅಧ್ಯಕ್ಷರು ನನ್ನ ಸಂಬಂಧಿ. ಮನೆತನದಲ್ಲಿ ಏಕೆ ವೈಮನಸ್ಸು. ಬೇಡ, ನಮಗೆ ಬುದ್ಧಿ ತೋಚಿದ ಕೆಲಸ ನಾವು ಮಾಡೋಣ" ಎಂದರು. ಆಗ ನಾನು 'ಸರಿ, ರಾಮಪ್ಪನವರೇ ನೀವು ಸಭೆಗೆ ಹೋಗಿಬನ್ನಿ ನಾನು ಬರೋಲ್ಲ' ಎಂದು ಬಿಗುಮಾನದಿಂದ ಕುಳಿತೆ. ಹೇಗಿದ್ದರೂ ಇವರಿಗೆ ಅಧ್ಯಕ್ಷರನ್ನಾಗಿ ಮಾಡಲು ಆಗೋಲ್ಲ ಅಥವಾ ಬಂದದ್ದೆಲ್ಲಾ ಬರಲಿ ಉಪ್ಪಾರ ಸಮುದಾಯಕ್ಕೆ ದುಡಿಯೋಣ ಎಂಬ ಹಠದಿಂದಲೋ ರಾಮಪ್ಪ ಅವರು 'ಆಗಲಿ, ಬನ್ನಿ ಸಾರ್. ನೀವು ಹೇಳಿದಂತೆ ಕೇಳುತ್ತೇನೆ' ಎಂದು ಮಾತುಕೊಟ್ಟರು. ನಾವಿಬ್ಬರೂ ಸಭೆಗೆ ಹೋದೆವು. ಸಭೆ ಪ್ರಾರಂಭವಾಗುವ ಮುಂಚೆಯೇ ಅಲ್ಲಿನ ಯುವಕರಿಗೆ 'ಈ ಸಾರಿ ರಾಮಪ್ಪನವರನ್ನು ಅಧ್ಯಕ್ಷರನ್ನಾಗಿ ಮಾಡೋಣ' ಎಂದೆ. ಎಲ್ಲರಿಗೂ ರಾಮಪ್ಪನವರ ದುಡಿಮೆಯ ಪರಿಚಯವಿತ್ತು. ಎಲ್ಲರೂ ಸಂತೋಷದಿಂದ ಉಬ್ಬಿಹೋದರು. ಪವಾಡದ ತರಹ ರಾಮಪ್ಪನವರು ಅಧ್ಯಕ್ಷರಾದರು.

ಉಪ್ಪಾರ ಸಂಘ ಎಂದರೆ ಏನು ? ಅದಕ್ಕೆ ಕಟ್ಟಡ, ಬ್ಯಾಂಕು ಖಾತೆ, ಅಷ್ಟೇ ಏಕೆ ಅದಕ್ಕೊಂದು ಖಾಯಂ ವಿಳಾಸ ಕೂಡ ಇರಲಿಲ್ಲ. ಯಾರಿಗಾದರೂ ರಾಜಕಾರಣಿಗಳಿಂದ ಕೆಲಸವಾಗಬೇಕಾದರೆ ಆಗ 'ಲೆಟರ್‌ಹೆಡ್' ಹುಟ್ಟಿಕೊಳ್ಳುತ್ತಿತ್ತು. ಹಿಂದುಳಿದವರ ಸಮ್ಮೇಳನದಡಿಯಲ್ಲಿ ಜನಜಾತ್ರೆ ನಡೆಯಿತು. ಸಂಬಂಧಪಟ್ಟವರ ಇಷ್ಟಾರ್ಥ ಪೂರ್ಣಗೊಂಡ ಮೇಲೆ ಸಂಘದ ಹೆಸರೇ ಮರೆತುಹೋಗುತ್ತಿತ್ತು. ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ ಬ್ರಹ್ಮವಿದ್ಯಾನಗರದಲ್ಲಿ ಈ ಜನಾಂಗದ ಜಗದ್ಗುರು ಪೂಜ್ಯ ಶ್ರೀ ಶ್ರೀ ಲೇಪಾಕ್ಷ ಸ್ವಾಮೀಜಿಗಳಿದ್ದರು. ಅವರು ಬೆಂಗಳೂರಿಗೆ ಬಂದರೆ 'ಲಾಡ್ಜ್'ನಲ್ಲಿ ಉಳಿದುಕೊಳ್ಳಬೇಕಾಗುತ್ತಿತ್ತು. ಬೆಂಗಳೂರಿನಲ್ಲಿ ಅಲ್ಲಿ ಇಲ್ಲಿ ಉಪ್ಪಾರ ಕುಟುಂಬಗಳಿದ್ದರೂ ಅವರಿಗೆ ನಮ್ಮ ಸಮಾಜಕ್ಕೆ 'ಜಗದ್ಗುರು'ಗಳಿದ್ದಾರೆಂಬ ಕಲ್ಪನೆ ಹೇಗೆ ಬರಬೇಕು? ಇಂತಹ ದುಃಸ್ಥಿತಿಯಲ್ಲಿದ್ದ ಸಂಘಕ್ಕೆ ಅಧ್ಯಕ್ಷರಾದ ರಾಮಪ್ಪ ನೈಜ ಅರ್ಥದಲ್ಲಿ ಅಲೆಮಾರಿಗಳಾದರು. ಅಷ್ಟು ಹೊತ್ತಿಗೆ ಅವರ ಹೆಣ್ಣುಮಕ್ಕಳ ಮದುವೆ ಕೂಡ ಆಗಿತ್ತು. ಅವರ ಗಂಡಂದಿರುಗಳ ಮನೆಯಲ್ಲಿದ್ದರು. ಒಬ್ಬ ಮಗ ಕೇಂದ್ರ ಸರ್ಕಾರದ ರಕ್ಷಣಾ ಇಲಾಖೆಯಲ್ಲಿ ಇಂಜಿನಿಯರ್ ಆಗಿದ್ದ. ಕೊನೆಯ ಮಗನೊಡನೆ ದಾವಣಗೆರೆಯಲ್ಲಿ ತಮ್ಮ ಕುಟುಂಬವನ್ನ ನೆಲೆಗೊಳಿಸಿದರು. ಆಮೇಲೆ ರಾಮಪ್ಪ ಹನ್ನೊಂದು ವರುಷಗಳ ಕಾಲ ಕರ್ನಾಟಕದ ಪ್ರತಿಯೊಂದು ತಾಲ್ಲೂಕಿಗೂ ಸ್ವತಃ ಭೇಟಿ ಕೊಟ್ಟರು. ಉಪ್ಪಾರರು ಹೆಚ್ಚಿರುವ ಹಳ್ಳಿಗೆ ಭೇಟಿ ಕೊಟ್ಟು ಅವರ ಕಷ್ಟ-ಸುಖಗಳನ್ನು ವಿಚಾರಿಸಿದರು. ಉಪ್ಪಾರ ಯುವಕ-ಯುವತಿಯರಲ್ಲಿ ಆತ್ಮವಿಶ್ವಾಸ ತುಂಬಿದರು. ನೀವೆಲ್ಲಾ ನಮ್ಮ ಪೂರ್ವಜ ರಾಜರ್ಷಿ ಭಗೀರಥನ ಜಯಂತಿಯನ್ನು ಮಾಡಿ, ಆಗ ನಮ್ಮವರೆಲ್ಲಾ ಒಂದೆಡೆ ಸೇರುತ್ತಾರೆ. ಸಂಘಟನೆಗೆ ಹೆಚ್ಚು ಅನುಕೂಲವಾಗುತ್ತದೆ. ಸಮಾಜಕ್ಕೆ ಶಕ್ತಿ ಬರುತ್ತದೆ. ಹಿಂದುಳಿದ ಜನಾಂಗದಲ್ಲಿ ವಿದ್ಯೆ ಪ್ರಸಾರ ಕಡಿಮೆ. ಅದಕ್ಕೆ ಧಾರ್ಮಿಕ ಮುಖಂಡರಿದ್ದರೆ ಇವರ ಸಂಘಟನೆಗೆ ಹೆಚ್ಚು ಅನುಕೂಲವೆಂದು ಭಾವಿಸಿ ಶ್ರೀ ಲೇಪಾಕ್ಷ ಸ್ವಾಮೀಜಿ ಅವರನ್ನು ಎಲ್ಲೆಡೆ ಕರೆದುಕೊಂಡು ಹೋದರು. ಇಡೀ ರಾಜ್ಯದ ಉಪ್ಪಾರರ ಬಗ್ಗೆ ತಾಲ್ಲೂಕುವಾರು ವಿಳಾಸ ಸಂಗ್ರಹಿಸಿದರು. ಅವರ ಉದ್ಯೋಗ, ಆರ್ಥಿಕ ಸ್ಥಿತಿ ಹಾಗು ನಾಯಕತ್ವ ಕುರಿತಂತೆ ಅನೇಕ ವಿಚಾರಗಳನ್ನು ನನಗೆ ಆಗಾಗ್ಗೆ ಹೇಳುತ್ತಿದ್ದರು. ಉತ್ತರಕನ್ನಡ, ಕೊಡಗು, ಮಂಡ್ಯ ಜಿಲ್ಲೆಗಳಲ್ಲಿ ಉಪ್ಪಾರ ಜನಾಂಗದ ಬಗ್ಗೆ ಅಪೂರ್ವ ಮಾಹಿತಿಯನ್ನು ಸಂಗ್ರಹಿಸಿದ ಹೆಗ್ಗಳಿಕೆ ರಾಮಪ್ಪ ಅವರದು. ಕೋಲಾರದಿಂದ ಬೀದರ್ ಮತ್ತು ಚಾಮರಾಜನಗರದಿಂದ ಉಡುಪಿ ತನಕ ಕೆ.ಎಸ್.ಆರ್.ಟಿ.ಸಿ. ಬಸ್‌ನಲ್ಲಿ ಪ್ರಯಾಣಿಸಿ ಅಪರಿಚಿತರ ಮನೆಯಲ್ಲಿ ಉಳಿದುಕೊಂಡು ಅಲ್ಲಿನ ಉಪ್ಪಾರರಲ್ಲಿ ಜಾಗೃತಿ ಉಂಟುಮಾಡುವ ಕೆಲಸ ಮಾಡಿದ ರಾಮಪ್ಪ ಅವರನ್ನು ನಮ್ಮ ಪೂರ್ವಜ 'ಭಗೀರಥ'ನಲ್ಲದೆ ಮತ್ಯಾರಿಗೆ ಹೋಲಿಸಲು ಸಾಧ್ಯ? ಸುಮಾರು ಇಪ್ಪತ್ತೆರಡು ಸಾವಿರ ಕಿ.ಮೀ. ಪ್ರಯಾಣವನ್ನು ತಮ್ಮ ಅರವತ್ತರ ಹರೆಯದಲ್ಲಿ, ಉಪ್ಪಾರ ಜನಾಂಗಕ್ಕಾಗಿ ಮಾಡಿರುವ ಅವರ ಋಣವನ್ನ ತೀರಿಸುವುದಾದರೂ ಹೇಗೆ? ಮೊದಮೊದಲು

ಅವರೇ ತಮ್ಮ ಸ್ವಂತ ಖರ್ಚಿನಿಂದ ಬೀದರ್‌ನಿಂದ ಕೋಲಾರ, ಚಾಮರಾಜನಗರದಿಂದ ಬಳ್ಳಾರಿಗೆ ಹೋಗುತ್ತಿದ್ದರು. ಆಮೇಲೆ ಬಸ್ ಛಾರ್ಜ್ ಕೊಡಲು ಸಂಘ ತೀರ್ಮಾನಿಸಿತು. ಒಂದು ಸಲದ ಪ್ರಯಾಣಕ್ಕೆ ಅವರಿಗೆ ಒಂದು ಸಾವಿರ ಖರ್ಚಾದರೆ ಸಂಘ ಅವರಿಗೆ ಮುನ್ನೂರು-ನಾನೂರು ರೂಪಾಯಿ ಕೊಡಬಹುದಾಗಿತ್ತು. ಉಳಿಕೆ ಖರ್ಚು ರಾಮಪ್ಪ ಅವರ ಜೇಬಿನಿಂದಲೇ.

ರಾಮಪ್ಪ ಅವರದು ಯಾವಾಗಲೂ ಒಂದೇ ಹಠ. 'ನಮ್ಮ ಸ್ವಾಮೀಜಿ ಅವರು 'ಲಾಡ್ಜ್'ನಲ್ಲಿ ಉಳಿದುಕೊಂಡರೆ ನಮಗೆಲ್ಲಾ ಮರ್ಯಾದೆ ಎಲ್ಲಿ ಬರುತ್ತದೆ. ಬೆಂಗಳೂರಿನಲ್ಲಿ ಒಂದು ಜಾಗ ಕೊಡಿಸಿ' ಎಂಬುದು. ಈ ಹಿಂದೆ ಉಪ್ಪಾರರ ಹೆಸರಿನಲ್ಲಿ ಬಿಡಿಎಯಿಂದ ಜಾಗ ಪಡೆಯಲು ಅನೇಕರು ಮಂತ್ರಿಗಳಿಗೆ ಹಾರತುರಾಯಿ ಅರ್ಪಿಸಿದ್ದರು. ಆದರೆ ಅವರ ಆಸೆ ಫಲಿಸಿರಲಿಲ್ಲ. ನಾನು ಬಿ.ಡಿ.ಎ. ಕಾರ್ಯದರ್ಶಿಯಾಗಿದ್ದಾಗ, ಸಿ.ಎ. ಸೈಟುಗಳ ಪಟ್ಟಿ ಮಾಡಿಸಿ, ಲಭ್ಯವಿರುವ ನಿವೇಶನಗಳಿಗೆ ಅರ್ಜಿ ಕರೆಯಲಾಯಿತು. ಈಗ ಸಮುದಾಯಕ್ಕೆ ಸಿಕ್ಕಿರುವ ನಿವೇಶನಕ್ಕೆ ಅರ್ಜಿ ಸಲ್ಲಿಸಲು ನಾನು ರಾಮಪ್ಪನವರಿಗೆ ಸೂಚಿಸಿದೆ. ಈ ನಿವೇಶನವೇ ಬೇಕೆಂದು ಬೇರೆಯವರು ಕೂಡ ಅರ್ಜಿ ಸಲ್ಲಿಸಿದ್ದರು. ಆಗ ನಗರಾಭಿವೃದ್ಧಿ ಸಚಿವರಾಗಿದ್ದ ಟಿ. ಎಸ್. ನರಸಿಂಹಮೂರ್ತಿ ಹಾಗೂ ಬಿ.ಡಿ.ಎ. ಅಧ್ಯಕ್ಷರಾಗಿದ್ದ ಎಸ್.ಪಿ. ಸಿಂಹ ಅವರ ಸಹಾಯದಿಂದ ಉಪ್ಪಾರರಿಗೆ ಬೆಂಗಳೂರಿನಲ್ಲಿ ಒಂದು ನಿವೇಶನ ದೊರಕಿತು. ಇವರ ಜೊತೆಗೆ ಇಂತಹ ಇನ್ನೂ ಕೆಲವು ಸಮಾಜದವರಿಗೆ ನಿವೇಶನ ಸಿಕ್ಕಿದ್ದಕ್ಕೆ ಸಂತೋಷವಾಗಿದೆ. ಬಿಡಿಎಗೆ ಹಣ ತುಂಬಲು ನಾವು ಪಟ್ಟ ಪಾಡು ಹೇಳತೀರದು.

ಹೇಗೋ ನಾವೆಲ್ಲ ಕಷ್ಟಪಟ್ಟು ಹಣ ಹೊಂದಿಸಿ ಸಂಘಕ್ಕೆ ಜಾಗ ಮಾಡಿಕೊಂಡೆವು. ರಾಮಪ್ಪ ಸ್ವತಃ ತಮ್ಮ ಕೈಯಿಂದ ಹತ್ತು ಸಾವಿರ ಖರ್ಚು ಮಾಡಿ ಸ್ವಾಮೀಜಿಗಳು ಬಂದರೆ ಅನುಕೂಲವಾಗಲೆಂದು ತಾತ್ಕಾಲಿಕ 'ಅತಿಥಿ ಗೃಹ' ನಿರ್ಮಿಸಿದರು. ಸ್ನೇಹಿತರಿಗೆ ಹೇಳಿ ನಿವೇಶನದ ಸುತ್ತ ಬೇಲಿ ಹಾಕಿಸಿಕೊಟ್ಟೆ. ರಾಮಪ್ಪನವರ ನಿರಂತರ ಒತ್ತಾಯವೇ ನಾನು ಈ ಬಗ್ಗೆ ಕಾರ್ಯಪ್ರವೃತ್ತನಾಗುವಂತೆ ಮಾಡಿದ್ದು.

ಹದಿನಾರು ಕೊಠಡಿಗಳ ಜೊತ ಸ್ವಾಮೀಜಿ ಅವರು ಉಳಿದುಕೊಳ್ಳುವುದಕ್ಕೆ ಬೇಕಾದ ಅತಿಥಿಗೃಹವನ್ನು ಕಟ್ಟಲಾಗಿದೆ. ಸ್ವತಃ ರಾಮಪ್ಪನವರು ತಮ್ಮ ಪಿಂಚಣಿಯಿಂದ ಬಂದ ಹಣದಿಂದ ಎರಡು ಕೊಠಡಿಗಳನ್ನು ಕಟ್ಟಿಸಿಕೊಟ್ಟಿದ್ದಾರೆ. ಸ್ವಾಮೀಜಿ ಅವರಿಗೆ ಪ್ರಯಾಣಕ್ಕಾಗಿ 'ಟಾಟಾ ಸುಮೋ' ಕೊಡಿಸಲಾಗಿದೆ.

ರಾಮಪ್ಪ ಅವರ ಕನಸು ಬಹಳ ದೊಡ್ಡದು. 160x210 ಸುತ್ತಳತೆಯ ಈ ನಿವೇಶನದಲ್ಲಿ ಸುಸಜ್ಜಿತವಾದ ಕಲ್ಯಾಣಮಂಟಪ ಕಟ್ಟಿಸಬೇಕೆಂದು ಬಿಡಿಎಗೆ 1,37,000 ರೂಪಾಯಿ ಪಾವತಿಸಿ ಲೈಸೆನ್ಸ್ ಸಹ ಪಡೆಯಲಾಗಿದೆ. ಈಗಿರುವ ತಾತ್ಕಾಲಿಕ ಅತಿಥಗೃಹದ ಜಾಗದಲ್ಲಿ ನಮ್ಮ

ಮಕ್ಕಳಿಗೆ ಬೇಕಾದ ಕಂಪ್ಯೂಟರ್, ಟಿಸಿಹೆಚ್ ಮೊದಲಾದ ವೃತ್ತಿಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಬೇಕೆಂಬುದು ಅವರ ಆಶಯ.

ಸುಸಜ್ಜಿತವಾದ ಕಲ್ಯಾಣಮಂಟಪ ನಿರ್ಮಾಣಕ್ಕೆ ರಾಷ್ಟ್ರೀಕೃತ ಬ್ಯಾಂಕೊಂದು ಒಂದು ಕೋಟಿ ಹಣ ಕೊಡಲು ಮುಂದಾಗಿತ್ತು. ಈ ಕಲ್ಯಾಣಮಂಟಪದಿಂದ ಪ್ರತಿವರ್ಷ 30 ರಿಂದ 40 ಲಕ್ಷ ವರಮಾನ ಬಂದರೆ ಉಪ್ಪಾರರು ಹೆಚ್ಚಿರುವ ಎಲ್ಲ ಜಿಲ್ಲೆಗಳಲ್ಲೂ ಕೇಂದ್ರ ಸಂಘದಿಂದಲೇ ಸಹಾಯಧನ ಕೊಟ್ಟು ವಿದ್ಯಾರ್ಥಿನಿಲಯ ಪ್ರಾರಂಭವಾದರೆ ಜನಾಂಗದಲ್ಲಿ ಜಾಗೃತಿ ಮೂಡುತ್ತದೆಂಬ ಭಾವನೆ ಅವರದು.

ವೃತ್ತಿಶಿಕ್ಷಣ ಕಲಿಯುವ ಮಕ್ಕಳಿಗೆ ವಿದ್ಯಾರ್ಥಿವೇತನ ಕೊಡಬೇಕು. ಅಸಹಾಯಕ ವಿಧವೆ ಹಾಗು ಪರಿತ್ಯಕ್ತ ಹೆಣ್ಣುಮಕ್ಕಳಿಗೆ ಹೊಲಿಗೆ ಒಳಗೊಂಡಂತೆ ಇತರೆ ಸ್ವಯಂ ಉದ್ಯೋಗಕ್ಕೆ ಅವಕಾಶ ಕಲ್ಪಿಸುವುದು — ಇವೆಲ್ಲಾ ಅವರ ಆಶಯಗಳು.

ಹಳ್ಳಿಯಲ್ಲಿ ವೃದ್ಧರು, ಮಕ್ಕಳು ಹಾಗು ಇತರರ ಪ್ರೀತಿಯಿಂದ ವಂಚಿತರಾಗಿ 'ಭಿಕ್ಷೆ' ಬೇಡುವ ಸ್ಥಿತಿಯಲ್ಲಿರುತ್ತಾರೆ. ನಮ್ಮ ಹಿರಿಯರು ಯಾರೂ ಹೀಗೆ ಭಿಕ್ಷೆ ಬೇಡಬಾರದೆಂಬ ಸುಸಂಸ್ಕೃತ ಮನಸ್ಸು ರಾಮಪ್ಪ ಅವರದು. ಅವರಿಗೆ ತಿಂಗಳಿಗೆ ಬೇಕಾಗುವ ಆಹಾರಧಾನ್ಯ ಒದಗಿಸಬೇಕೆಂಬ ಆಕಾಂಕ್ಷೆ ಅವರದು. ಅವರ ಕನಸು ಒಂದೇ ಎರಡೇ, ನೂರಾರು. ಪ್ರತಿಯೊಂದು ಕನಸು ಉಪ್ಪಾರ ಸಮುದಾಯದ ಕಲ್ಯಾಣ ಕುರಿತಂತೆ ಎಂಬುದು ವಿಶೇಷವಾಗಿ ದಾಖಲು ಮಾಡುವಂತಹದು. ಮನುಷ್ಯನ 'ಹೊಟ್ಟೆ ಕಿಚ್ಚು' ಹೇಗೆ ಅವನನ್ನು ಹಾಳುಮಾಡುತ್ತದೆಯೋ ಅದೇ ರೀತಿ ಅವನಲ್ಲಿನ ವಿಪರೀತ ಸ್ವಾರ್ಥ ಜನಾಂಗದ ಭವಿಷ್ಯವನ್ನೇ ಮಸುಕಾಗಿಸುತ್ತದೆ. ರಾಮಪ್ಪ ಅವರ ಮೇಲಿನ ಹೊಟ್ಟೆಕಿಚ್ಚು ಹಾಗು ತಮ್ಮ ವೈಯಕ್ತಿಕ ಸ್ವಾರ್ಥದಿಂದಾಗಿ ನಮ್ಮವರೇ ಅನೇಕರು ಅದಕ್ಕೆ ಅಡ್ಡಗಾಲು ಹಾಕುತ್ತಿದ್ದಾರೆ.

ಪೂಜ್ಯ ಲೇಪಾಕ್ಷ ಸ್ವಾಮೀಜಿಗಳವರು ಪರವಾಸಿಗಳಾದ ನಂತರ ರಾಮಪ್ಪ ಅವರು ಆ ಸ್ವಾಮೀಜಿ ಅವರೇ ಆಯ್ಕೆಮಾಡಿದ್ದ ಪೂಜ್ಯ ಶ್ರೀ ಪುರುಷೋತ್ತಮಾನಂದ ಸ್ವಾಮೀಜಿ ಅವರಿಗೆ ವೈಭವಯುತ ಪಟ್ಟಾಭಿಷೇಕ ನಡೆಯುವಂತೆ ಹಗಲಿರುಳು ದುಡಿದರು.

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನಲ್ಲಿ 'ನಭೂತೋ ನಭವಿಷ್ಯತಿ' ಎಂಬಂತೆ 1999ರಲ್ಲಿ ರಾಜರ್ಷಿ ಭಗೀರಥ ಜಯಂತಿ ಆಚರಿಸುವಂತ ನಮ್ಮೆಲ್ಲರಿಗೆ ಪ್ರೇರಣೆ ನೀಡಿ ಅದನ್ನು ಯಶಸ್ವಿಗೊಳಿಸಿದರು.

ದಾವಣಗೆರೆಯ ಹದಿನಾರು ಕೊಠಡಿಗಳ ವಿದ್ಯಾರ್ಥಿನಿಲಯ ಹಾಗು ಉಪ್ಪಾರ ಶಾಖಾಮಠ ಸುವ್ಯವಸ್ಥಿತವಾಗಿ ನಡೆಯುತ್ತಿದೆ. ಅಲ್ಲಿನ ವಿದ್ಯಾರ್ಥಿಗಳಿಗಾಗಿ ಊರೂರು ಸುತ್ತಿ ದವಸ-ಧಾನ್ಯಗಳನ್ನು ಸಂಗ್ರಹಿಸುತ್ತಾರೆ. ಒಂದು ದಿನ ಬೆಂಗಳೂರಿನಲ್ಲೋ ಅಥವಾ ಮಗಳ ಮನೆ ನಂಜನಗೂಡಿನಲ್ಲೋ ಇದ್ದರೆ ಅವರಿಗೆ ಹಾಸ್ಟಲ್‌ದೇ ಚಿಂತೆ. ಸದೊಂಬತ್ತು ಕಾಲ

ತಮ್ಮ ಸಂಸಾರದ ಚಿಂತೆ ಬಿಟ್ಟು ಸಮುದಾಯ ಚಿಂತೆಯನ್ನು ಹಂಚಿಕೊಳ್ಳುವವರನ್ನು ಏನೆಂದು ಕರೆಯಬೇಕು!

ಇಂತಹ ನಿಃಸ್ವಾರ್ಥಿ ರಾಮಪ್ಪ ಅವರಿಗೆ ನಿರಾಸೆಯಾಗಿಲ್ಲವೆಂದು ಯಾರೂ ಭಾವಿಸಬೇಕಾಗಿಲ್ಲ. ಅಳ್ಳೆದೆಯವರಾಗಿದ್ದರೆ ಇಷ್ಟು ಹೊತ್ತಿಗೆ ಏನು ಆಗಿಬಿಡುತ್ತಿದ್ದರೋ ಗೊತ್ತಿಲ್ಲ. ಆದರೆ ರಾಮಪ್ಪ ಧೈರ್ಯಶಾಲಿಗಳು. ಅಜ್ಞಾನ, ಮೌಢ್ಯ ಹಾಗು ಅಸಂಘಟನೆಯಲ್ಲಿ ಬಿದ್ದು ಹೊರಳುತ್ತಿರುವ ಶ್ರೀಸಾಮಾನ್ಯ ಉಪ್ಪಾರ ಜನಾಂಗಕ್ಕೆ ರಾಮಪ್ಪನವರಂತಹ ಆಲೋಚನೆಗೆ ಅರ್ಥವಾಗಿಲ್ಲ. ಸಂಘಟನೆಯಾದರೆ ತಮಗ ಎಂತಹ ಶಕ್ತಿ ಬರುತ್ತದೆಂಬುದನ್ನು ಅವರಿಗೆ ಅರ್ಥಮಾಡಿಸುವವರು ಯಾರು ? ಹೀಗೆ ಉಪ್ಪಾರರಿಗೆ ಅರ್ಥವಾಗಲು ರಾಮಪ್ಪನವರಂತಹವರು ಈ ಸಮುದಾಯದಲ್ಲಿ ಎಷ್ಟು ಜನ ಹುಟ್ಟಬೇಕು. ರಾಮಪ್ಪನಂತಹವರ ಕೆಲಸದಿಂದಾಗಿ ಉಪ್ಪಾರರಿಗೆ ಅನೇಕ ಪ್ರಯೋಜನಗಳು ದೊರಕಿವೆ. ಚಿನ್ನಪ್ಪರೆಡ್ಡಿ ಆಯೋಗದ ಅನುಷ್ಠಾನದಿಂದ ಈ ಸಮುದಾಯ ಪ್ರವರ್ಗIಕ್ಕೆ ಸೇರ್ಪಡೆಯಾಗಿದೆ. ಇದರಿಂದ ಶಿಕ್ಷಣ ಹಾಗು ಉದ್ಯೋಗದಲ್ಲಿ ಮೀಸಲಾತಿ ದೊರಕಿದ್ದು ಇನ್ನೂ ಅನೇಕ ಪ್ರಯೋಜನಗಳು ಲಭಿಸಿವೆ. ಸ್ವತಃ ನೂರಾರು ಉಪ್ಪಾರ ಯುವಕರು ಕೆಲಸ ಪಡೆದಿರುತ್ತಾರೆ. ಕೆಲಸ ದೊರೆಯುವುದಕ್ಕಿಂತ ಹಿಂದೆ ಇದ್ದ ಅವರ 'ಸದ್ಗುಣ'ಗಳು ಅನಂತರ ಹೇಗೋ ಮಾಯವಾಗಿ ಅಲ್ಲಿ ತಮ್ಮ ಕುಟುಂಬ ಕುರಿತಾದ 'ಸ್ವಾರ್ಥ' ತುಂಬಿಕೊಳ್ಳುತ್ತದೆ. ಜನಾಂಗದ ಹೆಸರಿನ 'ಸವಲತ್ತು' ಪಡೆದ ವ್ಯಕ್ತಿಗಳಿಗೆ ಸಮುದಾಯದ ಹೊಣೆಗಾರಿಕೆ ಇರುತ್ತದೆ. ಅದು ದೊಡ್ಡ ಪ್ರಮಾಣದಲ್ಲಿ ಅಲ್ಲದಿದ್ದರೂ ಕಿರುಪ್ರಮಾಣದಲ್ಲಿಯಾದರೂ ನಾವು ಋಣ ತೀರಿಸಬೇಕು. ಉಪ್ಪಾರ ಜನಾಂಗದ ಶ್ರೀಸಾಮಾನ್ಯನ ಜಡತ್ವ ಹಾಗು ಈ ಜನಾಂಗದಲ್ಲಿ ಹುಟ್ಟಿ ಪ್ರಯೋಜನ ಪಡೆದವರ ವಿಪರೀತ ಸ್ವಾರ್ಥಬುದ್ಧಿಯಿಂದಾಗಿ ರಾಮಪ್ಪ ಅವರಿಗೆ ತುಂಬ ನಿರಾಸೆಯಾಗಿದೆ.

ಹನ್ನೊಂದು ವರ್ಷ ಅಧ್ಯಕ್ಷರಾಗಿ ರಾಮಪ್ಪ ಅವರು ಉಪ್ಪಾರ ಜನಾಂಗವನ್ನು ಬುಡಮಟ್ಟದಿಂದ ಸಂಘಟಿಸಿದ್ದನ್ನು ಕಂಡು ಸಂಘದಲ್ಲೇ ಕರುಬಿದ್ದುಂಟು. ಯಾವುದೋ ಸಾಮಾನ್ಯ ಸಭೆಯಲ್ಲಿ ಸದಸ್ಯರು ದಾರಿತಪ್ಪಿ ಮಾತನಾಡಿದಾಗ ಸ್ಥಳದಲ್ಲೇ ರಾಜೀನಾಮೆ ಬರೆದರು. ರಾಮಪ್ಪ ಅವರು ರಾಜೀನಾಮೆ ನೀಡಿದ್ದಕ್ಕೆ ದೊಡ್ಡ ಹಿನ್ನೆಲೆಯಿದೆ. ಹಿರಿಯ ಪದಾಧಿಕಾರಿಯೊಬ್ಬರು ಎಂದೂ ರಾಮಪ್ಪನವರ ಆಶಯಗಳಿಗೆ ಸ್ಪಂದಿಸಲೇ ಇಲ್ಲ. ರಾಮಪ್ಪನವರು ದೂರದ ದಾವಣಗೆರೆಯಿಂದ ಕಾರ್ಯಕ್ರಮ ರೂಪಿಸಿಕೊಂಡು ಬರೋದು, ಇವರು ಬೆಂಗಳೂರಿನಲ್ಲಿ ತಮ್ಮ ಕೆಲಸಕ್ಕೆ ಹೋಗೋದು. ರಾಮಪ್ಪ ಈ ವರ್ತನೆ ಕುರಿತು ಅವರಿಗೆ ಸುದೀರ್ಘ ಪತ್ರ ಬರೆದಿದ್ದಾರೆ. ಈ ಅಸಹಕಾರಕ್ಕೆ ಅವರು ಬೇಸತ್ತುಹೋಗಿ ರಾಜಿನಾಮೆ ಕೊಡಲು ಮುಂದಾದರು. ಅದಕ್ಕಾಗಿ ಕಾದಿದ್ದ ಕೆಲವರು ಅದನ್ನು ಬಾಚಿಕೊಂಡರು. ರಾಮಪ್ಪ ಅವರಿಗೆ ಹುದ್ದೆಯಿಂದ ಏನಾಗಬೇಕು? ಅವರ ಅಂತರಂಗದ ನಿರ್ವ್ಯಾಜ ಪ್ರೀತಿ ಈ ಜನಾಂಗದ ಮೇಲಿದೆ. ಯಾವುದೇ

ಸ್ಥಾನಮಾನಗಳ ಗೊಡವೆ ಇಲ್ಲದೆ ಈ ಜನಾಂಗಕ್ಕೆ ಸೇವೆ ಸಲ್ಲಿಸುವ ಗುರಿ ಇವರದು; ಆದರೆ ದೊಡ್ಡ ನಷ್ಟ ಉಪ್ಪಾರ ಜನಾಂಗಕ್ಕೆ ಇದರಿಂದ ಆಯಿತು. ರಾಮಪ್ಪ ಇನ್ನು ಐದಾರು ವರುಷ ಅಧ್ಯಕ್ಷರಾಗಿದ್ದರೆ ರಾಜ್ಯದ ಎಲ್ಲ ಉಪ್ಪಾರರಿಗೂ ಹೊಸ ಬೆಳಕು ನೀಡುವ ಯೋಜನೆಯನ್ನು ರೂಪಿಸಿ ಅನುಷ್ಠಾನಗೊಳಿಸುತ್ತಿದ್ದರು. ಬೆಂಗಳೂರಿನ ಜಾಗವನ್ನು ಸದುಪಯೋಗಪಡಿಸಿ ಕೊಳ್ಳುತ್ತಿದ್ದರು. ಯಾರಿಗೆ ತಾನೇ ದೈವದ ನಿರ್ಣಯ ಮೀರಲು ಸಾಧ್ಯ ?

ಇಷ್ಟಾದರೂ ಡಿ.ಎಸ್. ರಾಮಪ್ಪ ಅವರ ಎಪ್ಪತ್ತೈದು ವರ್ಷಗಳ ಬದುಕು ನೋಡಿದಾಗ ಅಲ್ಲೊಂದು ಸ್ವಾರ್ಥರಹಿತ, ತ್ಯಾಗಮಯಿ, ಸುಸಂಸ್ಕೃತ ಜೀವಿ ಕಾಣಿಸುತ್ತದೆ. ತಾವು ಕಷ್ಟಪಟ್ಟು ಗಳಿಸಿದ ಆಸ್ತಿಯನ್ನು ಮೊದಲೇ ತಮ್ಮ ಏಕೈಕ ತಮ್ಮನಿಗೆ ಬಿಟ್ಟುಕೊಟ್ಟ ಉದಾರಿ ಅವರು. ಚಿಕ್ಕ ಚೊಕ್ಕ ಕುಟುಂಬವನ್ನು ಶಿಸ್ತು ಹಾಗು ಜವಾಬ್ದಾರಿಯಿಂದ ಬೆಳೆಸಿದವರು. ಅವರ ಮಡದಿ ಶ್ರೀಮತಿ ಸಣ್ಣಮ್ಮ ಕೂಡ ರಾಮಪ್ಪ ಅವರಷ್ಟೇ ಸಹೃದಯರು. ರಾಮಪ್ಪ ಅವರ ಜೊತೆ ಹೆಗಲೆಣೆಯಾಗಿ ದುಡಿದಿದ್ದಾರೆ. ಅವರೂ ಕೂಡ ಅಭಿನಂದನಾರ್ಹರು.

ರಾಮಪ್ಪ ಅವರಂತಹ ವ್ಯಕ್ತಿ ಉಪ್ಪಾರ ಸಮಾಜಕ್ಕೆ ಸದಾಕಾಲ ಬೇಕಾದವರು. ಅವರ ಆದರ್ಶಗಳಲ್ಲಿ ಶೇಕಡಾ ಹತ್ತರಷ್ಟಾದರೂ ನಮ್ಮ ಜನಾಂಗದಲ್ಲಿ ರೂಢಿಗತವಾದರೆ ಎಷ್ಟೋ ಪ್ರಯೋಜನ. ಅದಕ್ಕಾಗಿಯೇ ರಾಮಪ್ಪನವರಂತಹ ಸಂತತಿ ಸಾವಿರವಾಗಲಿ ಎಂದು ಪ್ರಾರ್ಥಿಸಿ ಅವರ ಎಪ್ಪತ್ತೈದನೆಯ ವರುಷದ ಶುಭಸಂದರ್ಭದಲ್ಲಿ ಹಾರ್ದಿಕ ಶುಭಾಶಯಗಳನ್ನು ಅರ್ಪಿಸುತ್ತೇನೆ.

*

# * ಪ್ರಾಮಾಣಿಕ ದುಡಿಮೆಗಾರರು

- ದೊಡ್ಮನೆ ಗಣೇಶ ಹೆಗಡೆ
ಸಿದ್ದಾಪುರ, ಉ.ಕ.

ನನ್ನ ಕಿರಿಯ ಮಿತ್ರರೊಬ್ಬರು ದೂರವಾಣಿ ಮಾಡಿ ನಿಮ್ಮ ಸ್ನೇಹಿತರಾದ ಡಿ.ಎಸ್. ರಾಮಪ್ಪ ಅವರಿಗೆ 75 ವರ್ಷ ತುಂಬಿದ ಅವಧಿಯಲ್ಲಿ ಸನ್ಮಾನ ಮಾಡುತ್ತಿದ್ದೇವೆ. ಉಪ್ಪಾರ ಸಮುದಾಯಕ್ಕೆ ಅವರದು 'ಅಗಣಿತ ಸೇವೆ' ಎಂದರು. ಒಂದು ಕ್ಷಣ ನನಗೆ ಇವರು ಯಾವ ರಾಮಪ್ಪನವರ ಬಗ್ಗೆ ಹೇಳುತ್ತಿದ್ದಾರೆಂಬುದೇ ಅರ್ಥವಾಗಲಿಲ್ಲ. 1962-63 ರಲ್ಲಿ ತಮ್ಮಲ್ಲಿ ಅಸಿಸ್ಟೆಂಟ್ ಇಂಜಿನಿಯರ್ ಆಗಿದ್ದ 'ಶಿವಮೊಗ್ಗ ರಾಮಪ್ಪ' ಎಂದಾಗ ಒಮ್ಮೆಲೆ ಮನಸ್ಸು ಆನಂದದಿಂದ ತುಂಬಿಬಂತು.

ಈಗಿನ ಕಾಲದಲ್ಲಿ ರಾಮಪ್ಪನವರಂತಹ ಅಧಿಕಾರಿಗಳನ್ನು ಕಾಣಲು ಸಾಧ್ಯವೇ? ಅವರ ಕರ್ತವ್ಯಪ್ರಜ್ಞೆ ಹಾಗು ಕೆಲಸದ ಬಗೆಗಿನ ನಿಷ್ಠೆ ಎಲ್ಲ ಕಾಲಕ್ಕೂ ಆದರ್ಶವೆನಿಸುವಂತಹ ಗುಣಗಳು.

ಸ್ವಾತಂತ್ರ್ಯ ಚಳವಳಿ ಹಾಗು ಕರ್ನಾಟಕದ ಏಕೀಕರಣ ಆಗತಾನೇ ಮುಗಿದಿತ್ತು. ನನ್ನ ಸಹೋದರ ರಾಮಕೃಷ್ಣಹೆಗಡೆ ಯೋಜನೆ, ಸಹಕಾರ, ಗ್ರಾಮೀಣ ಪಂಚಾಯತ್ ಹಾಗು ಅರ್ಥ ಸಚಿವರಾಗಿದ್ದರು. ಜನತೆಯ ಆಶಯಗಳು ತುಂಬ ಹಿರಿದಾಗಿದ್ದವು. ಎಲ್ಲ ಊರಿಗೂ ರಸ್ತೆ, ಶಾಲಾ ಕಟ್ಟಡ, ಗ್ರಾಮ ಪಂಚಾಯತ್ ಹಾಗು ಆಸ್ಪತ್ರೆ ಕಟ್ಟಡಗಳ ಬೇಡಿಕೆಯಿತ್ತು. ಅದರಲ್ಲೂ ಉತ್ತರ ಕನ್ನಡ ಜಿಲ್ಲೆ ದಟ್ಟ ಮಲೆನಾಡ ಪ್ರದೇಶ. ಹತ್ತಾರು ನದಿಗಳಿಂದ ಹಳ್ಳಿಗಳಲ್ಲಿ ಸಂಪರ್ಕ ಕಲ್ಪಿಸುವುದೇ ದೊಡ್ಡ ಸಾಹಸವಾಗಿತ್ತು. ಲೋಕೋಪಯೋಗಿ ಇಲಾಖೆಗೆ ಎಲ್ಲಿಲ್ಲದ ಡಿಮ್ಯಾಂಡ್. ಕೆಲಸ

ಮಾಡಲು ತಾಂತ್ರಿಕ ಅನುಭವವುಳ್ಳ ಕಂಟ್ರಾಕ್ಟರ್‌ಗಳ ಅಭಾವವಿತ್ತು. ಹಣಕಾಸಿನ ಕೊರತೆ ಸಾಕಷ್ಟಿತ್ತು. ಇಂತಹ ಸಂದರ್ಭದಲ್ಲಿ ಮೇಲು ಕೀಳು ಎನ್ನದೆ ಹಗಲಿರುಳು ದುಡಿಯುವ ವ್ಯಕ್ತಿ ಬೇಕಾಗಿತ್ತು. ಅಂತಹವರ ಸಾಲಿಗೆ ಸೇರಿದವರು — ರಾಮಪ್ಪ. ನಮ್ಮ ಜಿಲ್ಲೆಯ ಶಿರಸಿ, ಸಿದ್ಧಾಪುರ, ಮುಂಡಗೋಡು ಹಾಗು ಹಳಿಯಾಳಗಳಲ್ಲಿ ಇವರು ಕೆಲಸ ಮಾಡಿದ್ದಾರೆ. ಶ್ರೀ ರಾಮಪ್ಪ ಅವರನ್ನು ಎಂದೂ ಎಂಟು ಗಂಟೆಯ ನಂತರ ಮನೆಯಲ್ಲಿ ಕಾಣಲು ಸಾಧ್ಯವಿರುತ್ತಿರಲಿಲ್ಲ. ಅವರು ಯಾವುದಾದರೊಂದು ಕೆಲಸದ ಜಾಗದಲ್ಲಿರುತ್ತಿದ್ದರು. ಸ್ವತಃ ಶ್ರೀ ರಾಮಕೃಷ್ಣ ಹೆಗಡೆ ಅವರೇ ರಾಮಪ್ಪ ಅವರು ಮಾಡಿಸುತ್ತಿದ್ದ ಕೆಲಸದ ಸ್ಥಳಗಳಿಗೆ ಭೇಟಿ ಕೊಟ್ಟು ಪರಿಶೀಲನೆ ನಡೆಸುತ್ತಿದ್ದರು.

ಶ್ರೀ ರಾಮಪ್ಪ ತುಂಬ ಮುಗ್ಧರು. ನೇರವಾದ ಮಾತಿನ ಮನುಷ್ಯ. ಅವರಷ್ಟು ದೈಹಿಕ ಶ್ರಮವಹಿಸಿ ಕೆಲಸ ಮಾಡುವ ಇಂಜಿನಿಯರ್‌ಗಳು ಅಪರೂಪ. ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ ಬಂದ ಅವರು ಕೆಲವು ಮೌಲ್ಯಗಳಿಗಾಗಿ ಬದುಕಿದ್ದಾರೆ. ಬಡವರ ಬಗ್ಗೆ ಅವರದು ನೈಜ ಅನುಕಂಪ. ಎಷ್ಟೋ ಜನರನ್ನು ಕಾಮಗಾರಿ ಕೆಲಸಕ್ಕೆ ತೊಡಗಿಸಿ ಅವರಿಗೆ ಜೀವನಾಧಾರ ಮಾಡಿಕೊಟ್ಟಿದ್ದಾರೆ.

ವಿರಾಜಪೇಟೆಯಲ್ಲಿದ್ದಾಗ ಒಮ್ಮೆ ಅವರು ನನ್ನ ಬಳಿಗೆ ಬಂದರು. ಯಾರೋ ಕುಹಕಿಗಳು ನನ್ನ ತಮ್ಮನಲ್ಲಿ ಇವರ ಬಗ್ಗೆ ಸುಳ್ಳು ಅಭಿಪ್ರಾಯ ಬರುವಂತೆ ಮಾಡಿದ್ದರು. ನಾನೇ ಅದನ್ನು ಸಂಬಂಧಪಟ್ಟವರೊಡನೆ ಮಾತನಾಡಿ ಸರಿಮಾಡಿದೆ. ರಾಮಪ್ಪ ಅವರ ವ್ಯಕ್ತಿತ್ವ ಬಲ್ಲವರು ನಿವೃತ್ತಿಯ ನಂತರ ಅವರು ಸಮಾಜ ಸೇವಾ ಕಾರ್ಯಕ್ಕೆ ಹೋಗುತ್ತಾರೆಂದು ಊಹಿಸುತ್ತಾರೆ. ರಾಮಪ್ಪ ಅವರು ನಿವೃತ್ತರಾದಮೇಲೆ ಉಪ್ಪಾರ ಸಮಾಜಕ್ಕೆ ಸಲ್ಲಿಸಿರುವ ಸೇವೆ ಸದಾಕಾಲ ನೆನಪಿಸಿಕೊಳ್ಳುವಂತಹದು. ರಾಮಪ್ಪ ಅವರ ನಿಸ್ವಾರ್ಥ ಸೇವೆ ಉಪ್ಪಾರ ಸಮಾಜಕ್ಕೆ ಹೊಸ ಬೆಳಕು ತೋರಲಿ. ರಾಮಪ್ಪ ಅವರ ಕುಟುಂಬಕ್ಕೆ ಪರಮಾತ್ಮ ಸುಖ-ಶಾಂತಿ, ಸಮೃದ್ಧಿಯನ್ನು ಕರುಣಿಸಲಿ. ರಾಮಪ್ಪನವರ ಪ್ರಾಮಾಣಿಕತೆ ಹಾಗು ಕ್ರಿಯಾಶೀಲ ವ್ಯಕ್ತಿತ್ವ ಯುವಜನಾಂಗಕ್ಕೆ ಸ್ಫೂರ್ತಿ ಕೊಡಲಿ. ರಾಮಪ್ಪ ಅವರು ವರ್ಗವಾಗಿ ನಾಲ್ಕು ದಶಕಗಳ ನಂತರವೂ ನಮ್ಮ ಜಿಲ್ಲೆ ಅವರ ಸೇವೆಯನ್ನು ಜ್ಞಾಪಿಸಿಕೊಳ್ಳುತ್ತದೆಂದರೆ ಅವರ ಕರ್ತವ್ಯನಿಷ್ಠೆ ಎಂತಹದೆಂಬುದನ್ನು ಊಹಿಸಬಹುದು. ಈ ಕಾಲದಲ್ಲಂತೂ ಅಂತಹವರ ಸಂಖ್ಯೆ ಅಪರೂಪ. ಶ್ರೀ ರಾಮಪ್ಪ ಅವರಂತಹ ಶುದ್ಧಹಸ್ತ ಪ್ರಗತಿ ಮನೋಭಾವದ ಹಾಗು ಮಾನವೀಯ ಗುಣವುಳ್ಳ ಅಧಿಕಾರಿಗಳು ಹೆಚ್ಚಾದಷ್ಟೂ ನಮ್ಮ ದೇಶ ಸಮಸ್ಯೆಗಳಿಂದ ಮುಕ್ತವಾಗುತ್ತದೆ. ಅಂತಹ ಕಾಲ ಬೇಗ ಬರಲಿ ಎಂಬ ಆಶಯ ನನ್ನದು.

*

## * ಬಾಲ್ಯದ ಸಹಪಾಠಿ

- ಎನ್. ವಿಮಲಮ್ಮನಾರಾಯಣಜೋಯಿಸ್
ಚನ್ನಗಿರಿ

ಬೆಂಗಳೂರಿನಲ್ಲಿರೋ ನನ್ನ ಮಗಳು ಬಂದು "ಅಮ್ಮಾ, ರಾಮಪ್ಪ ಅವರಿಗೆ ಅಭಿನಂದನಾ ಗ್ರಂಥವನ್ನು ತರುತ್ತಿದ್ದೇವೆ. ಅದಕ್ಕೆ ನೀವು ಒಂದು ಲೇಖನವನ್ನ ಬರೆದುಕೊಡಿ" ಎಂದು ಕೇಳಿದಳು. ನನಗೆ ತುಂಬ ಅಚ್ಚರಿಯಾಯ್ತು. ರಾಮಪ್ಪ ಅಂದಾಕ್ಷಣ ಯೋಚಿಸುವಂತಾದೆ. ಅವರು ನಮ್ಮೆಲ್ಲರಿಗೂ ಪರಿಚಿತರಾದ 'ಆತ್ಮೀಯ ರಾಮಣ್ಣ' ಎಂದು ಗೊತ್ತಾಗಿ ಸಂತಸಗೊಂಡೆ.

ನನ್ನ ತವರೂರು ಸಂತೇಬೆನ್ನೂರು. ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿಗೆ ಸೇರಿದೆ. ನಮ್ಮ ಮನೆಯನ್ನು ದೊಡ್ಮನೆ, ಶಾನುಭೋಗರ ಮನೆ ಅಂತ ಕರೀತಿದ್ರು. ನಮ್ಮ ತಂದೆ ಶಾನುಭೋಗ್ ಕೆ. ಸಂಜೀವರಾವ್, ತಾಯಿ ಗಂಗಮ್ಮ. ನಮ್ಮ ಮನೆಯ ಪಕ್ಕದಲ್ಲಿಯೇ ರಾಮಣ್ಣನವರ ಮನೆಯೂ ಇದ್ದದ್ದು. ಅವರ ಮನೆಗೂ ನಮ್ಮ ಮನೆಗೂ ಸಂಪರ್ಕ ಇದ್ದೇ ಇತ್ತು. ನಮ್ಮ ಅಣ್ಣಂದಿರುಗಳ ಜೊತೆಗೆ ರಾಮಣ್ಣ ನಮ್ಮ ಮನೆಗೆ ಬರುತ್ತಿದ್ದರು. ಒಟ್ಟಿಗೆ ಓದುವುದು, ಆಟ ಆಡುವುದು ಮಾಡುತ್ತಿದ್ದೆವು.

ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಯಲ್ಲಿ ನಾನು ಮತ್ತು ರಾಮಣ್ಣ ಒಟ್ಟಿಗೆ ಓದುತ್ತಿದ್ದೆವು. ಯಾವಾಗಲೂ ನನಗೂ ಮತ್ತು ರಾಮಣ್ಣನಿಗೆ ಓದು, ಬರಹ, ಆಟಗಳಲ್ಲಿ ಸದಾ ಪೈಪೋಟಿ ಇರುತ್ತಿತ್ತು.

ಶಾಲೆ ಮುಗಿಸಿಕೊಂಡು ಬಂದಾಕ್ಷಣವೇ ಸ್ಕೂಲ್ ಬ್ಯಾಗ್‌ಗಳನ್ನು ಮನೆಯ ಮೂಲೆಗೆ ಎಸೆದು ನಮ್ಮ ಮನೆಯ ಮುಂದಿದ್ದ ಮೈದಾನದಲ್ಲಿ ಚೆಂಡಾಟ ಆಡಲು ಸೇರುತ್ತಿದ್ದೆವು.

ನನ್ನೊಂದಿಗೆ ನನ್ನ ಗೆಳತಿಯರಾದ ವೆಂಕಮ್ಮ, ಕೋಮಲ ಮೊದಲಾದವರೂ ಸೇರುತ್ತಿದ್ದರು. ಆ ಸಮಯದಲ್ಲಿ ರಾಮಣ್ಣ ಸಹ ನಮ್ಮೊಂದಿಗೆ ಆಟವಾಡಲು ಬರುತ್ತಿದ್ದರು. ಆ ಬಾಲ್ಯದ ದಿನಗಳನ್ನು ನೆನಪಿಸಿಕೊಂಡರೆ ಮತ್ತೆ ಬಾಲ್ಯ ಬರಬಾರದೇ ಎನ್ನಿಸುತ್ತದೆ. ಅಷ್ಟು ನಾವುಗಳು ಜೊತೆಯಾಗಿ ಕುಣಿದು ಕುಪ್ಪಳಿಸಿದ್ದೇವೆ. ನಮ್ಮ ಬಾಲ್ಯವನ್ನು ನೆನಪಿಸಿಕೊಳ್ಳಲು ರಾಮಣ್ಣನ ಅಭಿನಂದನ ಗ್ರಂಥಕ್ಕೆ ಬರೆಯುತ್ತಿರುವ ಲೇಖನದಿಂದ ಪುನಃ ಆ ನೆನಪುಗಳನ್ನು ಮರುಕಳಿಸಿಕೊಳ್ಳಲು ಅವಕಾಶವಾದದ್ದಕ್ಕೆ ತುಂಬ ಸಂತೋಷವೆನಿಸುತ್ತದೆ.

ಪ್ರೌಢಶಾಲೆ ಮತ್ತು ಅನಂತರದ ಶಿಕ್ಷಣವನ್ನು ಅವರು ದಾವಣಗೆರೆ ಮತ್ತು ಶಿವಮೊಗ್ಗದಲ್ಲಿ ಮುಂದುವರಿಸಿದರೆಂದು ತೋರುತ್ತದೆ. ನನ್ನ ವಿವಾಹವಾಗಿ ನಾನು ಚನ್ನಗಿರಿಗೆ ಬಂದೆ. ಇಲ್ಲಿ ನಮ್ಮ ಯಜಮಾನರ ಮನೆಯಲ್ಲಿಯೂ ಸಹ ಉಪ್ಪಾರ ಬಂಧುಗಳ ಜೊತೆ ಇರುವ ಅವಕಾಶ ದೊರೆಯಿತು. ನನ್ನ ಎಲ್ಲ ಮಕ್ಕಳನ್ನೂ ಉಪ್ಪಾರ ಬಂಧುಗಳೇ ಸಾಕಿ ಸಲಹಿದ್ದಾರೆ. ಇಂದಿಗೂ ನಮ್ಮ ಸಂಸಾರದೊಂದಿಗೆ ಅವರುಗಳ ಒಡನಾಟ ಇದ್ದೇ ಇದೆ.

ರಾಮಣ್ಣ ಬಿ.ಇ. ಮಾಡಿ ಇಂಜಿನಿಯರ್ ಆದ ವಿಚಾರ ತಿಳಿಯಿತು. ಈಗ ದಾವಣಗೆರೆಯಲ್ಲಿ ವಿಶ್ರಾಂತ ಜೀವನ ನಡೆಸುತ್ತಿರುವ ವಿಚಾರ ಸಹ ತಿಳಿದು ಸಂತೋಷವಾಯಿತು.

ಉಪ್ಪಾರ ಸಮುದಾಯದಲ್ಲಿ ಹುಟ್ಟಿದ ರಾಮಣ್ಣನಲ್ಲಿ ಉದಾತ್ತ ಗುಣಗಳಿದ್ದವು. ಬಡತನದಲ್ಲಿ ಹುಟ್ಟಿದ ರಾಮಣ್ಣನಿಗೆ ಬಡವರನ್ನು ಕಂಡರೆ ಬಹಳ ಅನುಕಂಪ. ಹಾಗಾಗಿ ತಮ್ಮ ಸಮಾಜದ ಜನರಿಗೆ ಅವರು ಮಾಡದ ಸಹಾಯವೇ ಇಲ್ಲ. ಹಿಂದುಳಿದವರಾದ ತಮ್ಮ ಕುಲಬಾಂಧವರು ಹೇಗಾದರೂ ಮುಂದುವರಿಯಲಿ ಎಂದು ಅವರು ಮಾಡದ ಪ್ರಯತ್ನವೇ ಇಲ್ಲ. ನಮ್ಮ ಮನೆಯಲ್ಲಿ ವಾರಾನ್ನಕ್ಕೆ ಬರುತ್ತಿದ್ದ ರಾಮಣ್ಣನ ಮೇರುವ್ಯಕ್ತಿತ್ವವನ್ನು ಎಷ್ಟು ಹೇಳಿದರೂ ಸಾಲದೆನಿಸುತ್ತದೆ. ನನ್ನ ಅಮ್ಮನ ಕೈತುತ್ತನ್ನು ಉಂಡು ಬೆಳೆದ ರಾಮಣ್ಣನ ಬಗ್ಗೆ ನನ್ನಲ್ಲಿ ಸಹೋದರತ್ವದ ಅಭಿಮಾನ ಮೂಡುತ್ತದೆ.

ವಿದ್ಯಾರ್ಥಿಯಾಗಿದ್ದಾಗಲೇ ರಾಮಣ್ಣ ತನಗಿಂತ ಬಡವರಾದವರಿಗೆ ಸಹಾಯ ಮಾಡುತ್ತಿದ್ದರು. 'ಬೆಳೆಯುವ ಸಿರಿ ಮೊಳಕೆಯಲ್ಲಿ' ಎಂಬಂತೆ ಆಗಲೇ ಅವರ ವ್ಯಕ್ತಿತ್ವದ ವಿಕಸನ ತಿಳಿಯುತ್ತಿತ್ತು. ಅವರು ಉಪ್ಪಾರ ಸಮುದಾಯದ ವಿದ್ಯಾರ್ಥಿಗಳಿಗೆ ವಸತಿಗೃಹ (ಹಾಸ್ಟೆಲ್) ಸೌಲಭ್ಯ ಒದಗಿಸಿಕೊಟ್ಟಿದ್ದಾರೆ. ತಮ್ಮ ಸಮಾಜದವರು ಮುಂದೆ ಬರಲಿ ಎಂಬ ಆದರ್ಶವನ್ನು ಹೊತ್ತಿರುವ ರಾಮಣ್ಣನ ಶ್ರಮವನ್ನು ನೆನಪಿಸಿಕೊಂಡರೆ ನನಗೆ ಹೆಮ್ಮೆಯಾಗುತ್ತದೆ.

ಅವರುಗಳು ಇಬ್ಬರು ಅಣ್ಣತಮ್ಮಂದಿರು. ರಾಮಣ್ಣ ಮತ್ತು ರಂಗಣ್ಣ. ರಂಗಣ್ಣ ಊರಿನಲ್ಲಿಯೇ ಇದ್ದು ವ್ಯವಸಾಯ ಮಾಡುತ್ತಿದ್ದರು. ಅವರಿಗೆ ವಿದ್ಯೆಯ ಬಗ್ಗೆ ಅಷ್ಟು ಒಲವಿರಲಿಲ್ಲ. ಹಾಗಾಗಿ ಅವರು ವಿದ್ಯಾಭ್ಯಾಸ ಮಾಡದೇ ಮನೆಯಲ್ಲಿಯೇ ತನ್ನವರಿಗೆ ಸಹಾಯ ಮಾಡುತ್ತಾ

ಬೇಸಾಯ ಮಾಡಿಕೊಂಡಿದ್ದರು. ಬಾಲ್ಯದಲ್ಲೇ ತಾಯಿಯನ್ನು ಕಳೆದುಕೊಂಡ ರಾಮಣ್ಣನನ್ನು ಆ ದೈವಸ್ವರೂಪದ ಮಾತೃವಾತ್ಸಲ್ಯವೇ ಇಷ್ಟು ಎತ್ತರಕ್ಕೆ ಏರಿಸಲು ಕಾರಣವಾಗಿರಬಹುದು.

"ರಾಮಣ್ಣ, ರಂಗಣ್ಣ ಬರ್ರ್ರೋ ಗಂಗಳದಲ್ಲಿ ಮುದ್ದೆ ಹಾಕಿದ್ದೀನಿ" ಅಂತ ಅವರ ಮನೆಯಲ್ಲಿ ಕರೆಯುತ್ತಿದ್ದ ಕೂಗು ಇಂದಿಗೂ ನನ್ನ ಕಿವಿಯಲ್ಲಿ ಮಾರ್ದನಿಗೊಳ್ಳುತ್ತಿದೆ.

ಬಂಗಾರವನ್ನು ಬೆಂಕಿಯಲ್ಲಿ ಕಾಯಿಸಿದಷ್ಟೂ ಅದರ ಮೆರಗು ಹೆಚ್ಚುತ್ತದಂತೆ. ಹಾಗೆಯೇ ಬಡತನದ ಬೇಗೆಯಲ್ಲಿ ಬೆಂದ ರಾಮಣ್ಣ ಅಪ್ಪಟ ಚಿನ್ನವಾಗಿದ್ದಾರೆ ಅಂದರೆ ತಪ್ಪಿಲ್ಲ.

ವಿದ್ಯೆ ವಿನಯವನ್ನು ನೀಡುತ್ತದೆ ಎಂಬುದಕ್ಕೆ ನಮ್ಮ ರಾಮಣ್ಣನೇ ಸಾಕ್ಷಿ. ರಾಮಣ್ಣನ ವ್ಯಕ್ತಿತ್ವವನ್ನು ನೆನಪಿಸಿಕೊಂಡರೆ ನನಗೆ ಬಸವಣ್ಣನವರ ವಚನ ಜ್ಞಾಪಿಸಿಕೊಳ್ಳುವಂತಾಗುತ್ತದೆ :

ಅಡ್ಡ ದೊಡ್ಡ ನಾನಲ್ಲಯ್ಯಾ, ದೊಡ್ಡ ಬಸುರು ಎನಗಿಲ್ಲಯ್ಯ

* * * *

ಬೋಧಿಸಲು ಪ್ರಾರ್ಥಿಸಲು ಮುನ್ನ ನಾನರಿಯೆನಯ್ಯಾ
ದೊಡ್ಡತನವೆನಗಿಲ್ಲ : ಅಂಜುವೆನಂಜುವೆ ನಿಮ್ಮ ಪ್ರಮಥರಿಗೆ
ಅನಾಥ ನಾನಯ್ಯ ಕೂಡಲಸಂಗದೇವಾ !

ಇಂತಹ ರಾಮಣ್ಣ ನೂರ್ಕಾಲ ಸುಖವಾಗಿ ಬಾಳಲಿ ಎಂದು ಹಾರೈಸುತ್ತೇನೆ.

*

# ವ್ಯಕ್ತಿಯಲ್ಲ, ಸಮುದಾಯದ ಶಕ್ತಿ

ಯು. ಕರಿಯಪ್ಪ ಬುಳ್ಳಿ
ಚನ್ನಗಿರಿ

ಪ್ರಪಂಚದ ಐತಿಹಾಸಿಕ ಘಟನೆಗಳನ್ನು ಗಮನಿಸಿದಾಗ ಅಜ್ಞಾನ, ಅಂಧಕಾರದಲ್ಲಿ ದಿಕ್ಕು ಕಾಣದ ಮುಗ್ಧ ಮಾನವರ ಉದ್ಧಾರಕ್ಕಾಗಿ ಅನೇಕ ಮಹಾಪುರುಷರು ಜನ್ಮವೆತ್ತಿ ಲೋಕೋದ್ಧಾರ ಮಾಡಿದ್ದಾರೆ. ಭಗವಾನ್ ಬುದ್ಧ, ಬಸವಣ್ಣ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಮಹಾತ್ಮಗಾಂಧೀಜಿ, ಡಾ. ಬಿ.ಆರ್. ಅಂಬೇಡ್ಕರ್, ಸರ್ ಎಂ. ವಿಶ್ವೇಶ್ವರಯ್ಯ — ಹೀಗೆ ಅನೇಕ ಮಹನೀಯರುಗಳು ನಡೆಸಿರುವ ಹೋರಾಟದ ಜೀವನಾದರ್ಶನಗಳು ಭಾರತೀಯರ ಚೇತನಕ್ಕೆ ಬೆಳಕಿನ ಹಣತೆಗಳಾಗಿವೆ.

ಸನ್ಮಾನ್ಯ ಶ್ರೀ ಡಿ.ಎಸ್. ರಾಮಪ್ಪನವರು ತಮ್ಮ ಶಾಲಾ ಕಾಲೇಜುಗಳಲ್ಲಿ ಪಡೆದ ಜೀವನದ ಅನುಭವಗಳ ಚಿಂತನೆಯ ಜೊತೆಗೆ ಈ ಮಹನೀಯರುಗಳ ಶ್ರೇಷ್ಠ ಸಾಧನೆಗಳಿಂದ ಪ್ರಭಾವಿತರಾಗಿದ್ದು, ತಮ್ಮ ಜೀವನವನ್ನು ಜನೋದ್ಧಾರ ಕಾರ್ಯಗಳಿಗೆ ಮೀಸಲಾಗಿಟ್ಟಿದ್ದಾರೆ. ಉಪ್ಪಾರ ಸಮಾಜದ ಸೇವೆಗೆ ಕಂಕಣಬದ್ಧರಾಗಿ ದುಡಿದಿರುವ ಹಾಗು ದುಡಿಯುತ್ತಿರುವ ಅವರನ್ನು ಪರಿಚಯಿಸುವ ಕಾರ್ಯವನ್ನು ಒಬ್ಬ ಪತ್ರಕರ್ತನಾಗಿ ಮಾಡಿದ್ದೇನೆ.

ಶ್ರೀ ಡಿ.ಎಸ್. ರಾಮಪ್ಪನವರು ಬಡಕುಟುಂಬದಲ್ಲಿ ಹುಟ್ಟಿ, ಎಳೆಯ ವಯಸ್ಸಿನಲ್ಲಿ ತಾಯಿ ತಂದೆಯರನ್ನು ಕಳೆದುಕೊಂಡು, ಅನಾಥರಾದರೂ ಅನೇಕ ಮಹನೀಯರುಗಳ ಸಹಕಾರ ಪ್ರೋತ್ಸಾಹದ ಫಲವಾಗಿ ಕರ್ನಾಟಕ ರಾಜ್ಯದ ಉಪ್ಪಾರ ಸಮಾಜದ ದ್ವಿತೀಯ ಇಂಜಿನಿಯರಿಂಗ್ ಪದವೀಧರರಾದರು. ಅನಂತರ 29½ ವರ್ಷಗಳ

ಕಾಲ ಸರ್ಕಾರಿ ಸೇವೆ ಸಲ್ಲಿಸಿದ ಇವರು ಐಷಾರಾಮ ಭೋಗಜೀವನದಲ್ಲಿ ವಿಶ್ರಾಂತ ಜೀವನ ನಡೆಸಬಹುದಿತ್ತು. ಆದರೆ ಅಂತಹ ವೈಭವದ ಜೀವನಕ್ಕೆ ಮಾರುಹೋಗದೆ ಸಮಾಜ ಸೇವೆಗೆ ತಮ್ಮನ್ನು ಅರ್ಪಣೆ ಮಾಡಿಕೊಂಡಿರುವ ಸಾತ್ವಿಕ ಗುಣಗಳನ್ನು ಅವರಲ್ಲಿ ಕಾಣಬಹುದಾಗಿದೆ.

ನನ್ನ ಅವರ ಸ್ನೇಹ ಹತ್ತಿರವಾದಾಗ ಶ್ರೀಯುತರು ಹೇಳುತ್ತಿದ್ದ ಮಾತುಗಳು ನನ್ನ ಜ್ಞಾಪಕದಲ್ಲಿ ಅಚ್ಚಳಿಯದೆ ನಿಂತಿವೆ : "ನಾನು ಹುಟ್ಟಿದ್ದು ಸಾರ್ಥಕವಾಗಬೇಕಾದರೆ ನಮ್ಮ ಸಮಾಜದ ಜನರಿಗೆ ಏನನ್ನಾದರೂ ಉಪಕಾರ ಮಾಡುವುದರ ಮೂಲಕ ನನ್ನ ಋಣವನ್ನು ತೀರಿಸುವ ಬಯಕೆ ನನ್ನದಾಗಿದೆ. ಉಪ್ಪಾರ ಸಮಾಜದ ಉನ್ನತಿಗೆ ಶ್ರಮಿಸುವುದಕ್ಕಿಂತ ಬೇರಾವುದರಲ್ಲೂ ದೇವರನ್ನು ಕಾಣಲು ಸಾಧ್ಯವಿಲ್ಲ" — ಎಂದು ಅಂದು ಅವರಾಡಿದ ಮಾತಿನಲ್ಲಿ ಹುದುಗಿದ್ದ ಸಮಾಜೋದ್ಧಾರದ, ಹೃದಯ ವೈಶಾಲ್ಯತೆಯ ತುಡಿತ ಹಾಗೂ ದೂರದೃಷ್ಟಿ ನಿಜಕ್ಕೂ ಅಭಿನಂದನಾರ್ಹವಾದದು.

ಶ್ರೀ ಡಿ.ಎಸ್. ರಾಮಪ್ಪನವರು ಸರ್ಕಾರಿ ಸೇವೆಯಿಂದ ನಿವೃತ್ತಿ ಪಡೆದ ನಂತರ 1983ನೇ ಇಸವಿಯಿಂದ ಉಪ್ಪಾರ ಸಮಾಜದ ಏಳಿಗೆಗೆ ಪದಾರ್ಪಣ ಮಾಡಿರುವ ಘಟನೆ ಎಲ್ಲರಿಗೂ ತಿಳಿದ ವಿಚಾರ. ಮೊದಲಿಗೆ  ಶ್ರೀಯುತರ ಹುಟ್ಟು, ವಿದ್ಯೆ ಹಾಗೂ ಬಡತನ ಎಂತಹವರ ಹೃದಯದಲ್ಲೂ ಕನಿಕರ ಮೂಡಿಸಿದರೆ ಆಶ್ಚರ್ಯವೇನೂ ಇಲ್ಲ.

ಇವರ ಪರಿಚಯಕ್ಕೆ ಮುನ್ನ ಬಾಲ್ಯದಲ್ಲಿಯೇ ನನಗಾದ ರೋಮಾಂಚನ ಸಂಗತಿ, ನನ್ನ ಜೀವನದಲ್ಲಿ ಮಹತ್ತರ ಪರಿಣಾಮ ಬೀರಿದೆ. ನಾನು ಆರನೆಯ ತರಗತಿಯಲ್ಲಿ (ಮಿಡ್ಲ್ ಸ್ಕೂಲ್) ಓದುತ್ತಿರುವಾಗ ಒಬ್ಬ ಶಿಕ್ಷಕರು (ಈಗಲೂ ಇದ್ದಾರೆ) ನಾನು ಅವರು ಕೇಳಿದ ಪ್ರಶ್ನೆಗೆ ಉತ್ತರ ಹೇಳದಿದ್ದಾಗ "ಏ ಗುರುವಿಲ್ಲದ ಉಪ್ಪಾರ, ನಿನಗೆ ವಿದ್ಯೆ  ಹೆಂಗೊ ಬರ್ತದೆ, ನೀನು ದನ ಕಾಯಲಿಕ್ಕೆ ಲಾಯಕ್ಕಿದ್ದೀಯ, ಹತ್ತೋ ಬೆಂಚನ್ನ" ಎಂದು ಗದರಿಸಿ ಬೆಂಚಿನ ಮೇಲೆ ನಿಲ್ಲಿಸಿದ್ದರು. ಆಗ ನನ್ನ ಮನಸಿನಲ್ಲಿ ಯಾರಲ್ಲೂ ಹೇಳಲಾಗದ ನೋವು ಮಡುಗಟ್ಟಿತ್ತು. ಉಪ್ಪಾರ ಜಾತಿಗೆ ಗುರುಗಳು ಏಕೆ ಇಲ್ಲ, ಇದ್ದರೆ ಎಲ್ಲಿದ್ದಾರೆ — ಇದೇ ಆಗಿನ ನನ್ನ ಪ್ರಶ್ನೆಯಾಗಿತ್ತು. ಅದಕ್ಕೆ 1952ರಲ್ಲಿ ಉತ್ತರ ಸಿಕ್ಕಿತು. ಆಗ ನನಗೆ 23 ವರ್ಷ ಇರಬಹುದು.

ಉಪ್ಪಾರ ಸಮಾಜದಲ್ಲೂ ಜಗದ್ಗುರುಗಳು ಇದ್ದಾರೆ. ಚಳ್ಳಕೆರೆ ತಾಲ್ಲೂಕು ನಾಯ್ಕನಹಟ್ಟಿಗೆ 16ಕಿ.ಮೀ. ದೂರಕ್ಕಿರುವ ಕರ್ಲಹಟ್ಟಿ (ಉಪ್ಪಾರಹಟ್ಟಿ) ಗ್ರಾಮದಲ್ಲಿ ಸುಮಾರು ಐನೂರು ವರ್ಷಗಳಿಗೂ ಹೆಚ್ಚು ಗುರು ಪರಂಪರೆ ಹೊಂದಿರುವ ಶ್ರೀ ಚಿನ್ಮೂಲಾದ್ರಿ ಶಿಲಾಪುರಿ ಮಹಾ ಸಂಸ್ಥಾನವೆಂಬ ಉಪ್ಪಾರ ಗುರುಮಠವಿದೆ. ಕರ್ನಾಟಕ ರಾಜ್ಯ ಉಪ್ಪಾರ ಸಮಾಜಕ್ಕೆ ಶ್ರೀ ಲೇಪಾಕ್ಷ ಮಹಾಸ್ವಾಮೀಜಿಯವರು 1953ರಲ್ಲಿ 12ನೇ ಜಗದ್ಗುರುಗಳಾಗಿ ಪಟ್ಟಾಧಿಕಾರ ವಹಿಸಿಕೊಂಡ ನಂತರ ಪ್ರಥಮ ಬಾರಿಗೆ ಚನ್ನಗಿರಿ ಉಪ್ಪಾರ ಸಮಾಜದ ಮುಖಂಡರುಗಳು ಸ್ವಾಮೀಜಿಯವರನ್ನು ಬರಮಾಡಿಕೊಂಡು ಅಡ್ಡಪಲ್ಲಕ್ಕಿ ಮಹೋತ್ಸವವನ್ನು ನಡೆಸಿದ್ದರು. ಇವರ

ಆಗಮನದಿಂದಾಗಿ ಉಪ್ಪಾರ ಸಮಾಜಕ್ಕೂ ಹಾಗು ಇತರ ಸೋದರ ಸಮಾಜಗಳಿಗೆ ಉಪ್ಪಾರ ಸಮಾಜದಲ್ಲೂ ಜಗದ್ಗುರುಗಳು ಇದ್ದಾರೆನ್ನುವ ಅರಿವು ಬೆಳೆಯಲು ಕಾರಣವಾಗಿದೆ.

ಅಂದಿನಿಂದ ನಾನೂ ಕೂಡ ತಾಲ್ಲೂಕಿನಲ್ಲಿ ಉಪ್ಪಾರ ಸಮಾಜವನ್ನು ಸಂಘಟಿಸಲು ಪ್ರಯತ್ನಿಸಿದ್ದೇನೆ. ಚನ್ನಗಿರಿ ತಾಲ್ಲೂಕಿನ ನಲ್ಲೂರು, ದೇವರಹಳ್ಳಿ, ಸಂತೆಬೆನ್ನೂರು, ಕುಳೇನೂರು, ಇಟ್ಟಿಗೆ, ಹೊದಿಗೆರೆ, ಅಜ್ಜಿಹಳ್ಳಿ ಗ್ರಾಮಗಳ ಮುಖಂಡರುಗಳ ಸಹಕಾರದೊಂದಿಗೆ ತಾಲ್ಲೂಕು ಉಪ್ಪಾರ ಸಂಘವನ್ನು ಹುಟ್ಟುಹಾಕಿ ಇಪ್ಪತ್ತೈದು ವರ್ಷಗಳ ಕಾಲ ರಚನಾತ್ಮಕ ಕೆಲಸಗಳನ್ನು ನಿರ್ವಹಿಸಿ 2000 ದ ಇಸವಿಯಲ್ಲಿ ನನ್ನ ಅನಾರೋಗ್ಯದ ನಿಮಿತ್ತ ತಾಲ್ಲೂಕು ಉಪ್ಪಾರ ಸಂಘದ ಅಧ್ಯಕ್ಷ ಸ್ಥಾನದಿಂದ ನಿರ್ಗಮಿಸಿರುತ್ತೇನೆ. ಸಮಾಜದ ಸಂಘಟನೆ ಹಿತದೃಷ್ಟಿಯಿಂದ ಈ ಅಂಶಗಳನ್ನು ತಿಳಿಸುವುದು ತಪ್ಪಾಗಲಾರದೆಂದು ಭಾವಿಸಿದ್ದೇನೆ.

ಚನ್ನಗಿರಿ ತಾಲ್ಲೂಕಿನ ಕುಳೇನೂರು ಗ್ರಾಮದಲ್ಲಿ 1928ರಲ್ಲಿ ಶ್ರೀ ಡಿ.ಎಸ್. ರಾಮಪ್ಪನವರು ಜನಿಸಿದರು. ಇವರ ತಂದೆ ಸಿಕ್ಕುಡಿಯಪ್ಪ, ತಾಯಿ ಕರಿಯಮ್ಮ, ಇವರ ತವರು ದೇವರಹಳ್ಳಿ, ಪತ್ನಿಯ ಹೆಸರು ಸಣ್ಣಮ್ಮ, ತವರು ಕುಂಸಿ. ಇಬ್ಬರು ಪುತ್ರರು ಹಾಗು ಇಬ್ಬರು ಪುತ್ರಿಯರನ್ನು ಹೊಂದಿದ್ದು ಹತ್ತು ಜನ ಮೊಮ್ಮಕ್ಕಳನ್ನು ಪಡೆದ ಚೊಕ್ಕ ಕುಟುಂಬ ಇವರದು. ವಾಸ ದಾವಣಗೆರೆ. ಶ್ರೀ ರಾಮಪ್ಪ ಭಾಗ್ಯಶಾಲಿಯಾಗಿ ಹುಟ್ಟಿರಲಿಲ್ಲ, ಐದನೆಯ ವಯಸಿನಲ್ಲಿ ತಾಯಿಯನ್ನೂ, ಎಂಟನೆಯ ವಯಸ್ಸಿನಲ್ಲಿ ತಂದೆಯನ್ನೂ ಕಳೆದುಕೊಂಡು ಅನಾಥ ಬಾಲಕರಾಗಿ ಬೆಳೆದದ್ದು ಎಂತಹ ದುರ್ದೈವ.

ಬಾಲ್ಯದ ವಿಷಯ ಬರೆಯಲು ಶ್ರೀ ರಾಮಪ್ಪನವರು ಹುಟ್ಟಿದ ಕುಳೇನೂರಿಗೂ ನನಗೂ ನಂಟು ಇದೆ. ಈ ಗ್ರಾಮದಲ್ಲಿ ನನ್ನ ಪೂರ್ವಜರು ಬಾಂಧವ್ಯ ಬೆಳಸಿದ್ದರು. ನನ್ನ ತಂದೆಯ ಹಿರಿಯ ಅಣ್ಣನಿಗೆ ಪೂಜಾರಿ ತಿಮ್ಮಪ್ಪನವರ ಅಕ್ಕ ಮಲ್ಲವ್ವ ಎಂಬಾಕೆಯನ್ನು ಕೊಟ್ಟು ಮದುವೆ ಮಾಡಲಾಗಿತ್ತು. ನನ್ನ ತಂದೆಯ ಹಿರಿಯ ಅಕ್ಕ ನೀಲವ್ವಳನ್ನು ಕೂಡ ಹನುಮಪ್ಪನ ಮಗ ರಂಗಪ್ಪನಿಗೆ ಕೊಟ್ಟು ವಿವಾಹ ಮಾಡಿದ್ದರು. ಈ ಸಂದರ್ಭದಲ್ಲಿ ಅವರೆಲ್ಲ ಶ್ರೀ ರಾಮಪ್ಪನವರು ತಬ್ಬಲಿಯಾದ ಸಂಗತಿಯನ್ನು ಹೇಳುತ್ತಿದ್ದರು.

ಶ್ರೀ ಡಿ.ಎಸ್. ರಾಮಪ್ಪನವರ ಧರ್ಮಪತ್ನಿ ಶ್ರೀಮತಿ ಸಣ್ಣಮ್ಮನವರು ಹೆಚ್ಚು ಓದಿದವರಲ್ಲ. ಶ್ರೀ ರಾಮಪ್ಪನವರು ಪಟ್ಟಣದಲ್ಲಿ ಉನ್ನತ ಹುದ್ದೆಯಲ್ಲಿ ಅಧಿಕಾರ ನಡೆಸಿದ ಸಂದರ್ಭದಲ್ಲಿ ಅವರ ಶ್ರೀಮತಿಯವರು ಪಟ್ಟಣದ ವೈಭವದ ಜೀವನಕ್ಕೆ ಅಂಟಿಕೊಳ್ಳದೆ ಗ್ರಾಮೀಣ ಹೆಣ್ಣುಮಗಳಾಗಿ ಶ್ರೀ ರಾಮಪ್ಪ ಇಟ್ಟ ಹೆಜ್ಜೆಯಲ್ಲೇ ಸಾಗಿದ್ದಾರೆ. ಮನೆತನದ ಎಲ್ಲ ಆಗುಹೋಗುಗಳಲ್ಲಿ ಪತ್ನಿಯಾಗಿ-ತಾಯಿಯಾಗಿ ನೋಡಿಕೊಂಡು ಸಹಕರಿಸಿದ ಶ್ರೀಮತಿ ಸಣ್ಣಮ್ಮನವರನ್ನು ಶ್ರೀ ರಾಮಪ್ಪನವರು ಕೃತಜ್ಞತಾಭಾವನೆಯಿಂದ ಸ್ಮರಿಸುತ್ತಾರೆ. ಇಲ್ಲಿ ಶ್ರೀಮತಿ ಸಣ್ಣಮ್ಮನವರ ನಿರಾಡಂಬರ ಬದುಕು ಸ್ಮರಣೆಗೆ ಅರ್ಹವಾಗಿದೆ.

## ವಿದ್ಯೆ ಕಲಿಕೆಗೆ ಮುಂದಾದವರು

ಶ್ರೀ ರಾಮಪ್ಪ ಹುಟ್ಟಿನಲ್ಲಿ ಅನಾಥ ಬಾಲಕನಾದರೂ ಪ್ರಾಥಮಿಕ ಹಂತದ ವಿದ್ಯೆಯನ್ನು ಕುಳೇನೂರಿನಲ್ಲಿ ಸೋದರಮಾವ ನೀಲಪ್ಪನವರ ಆಶ್ರಯದಲ್ಲಿ ಮುಗಿಸಿದರು. ಸೋದರಮಾವನ ಪ್ರಯತ್ನದಿಂದ ಸಂತೆಬೆನ್ನೂರಿನ ಶಾನುಭೋಗರಾದ ಶ್ರೀ ಸುಬ್ಬರಾಯರ ಸಹಕಾರದಿಂದ ಪ್ರೌಢಶಿಕ್ಷಣದ ವಿದ್ಯಾಭ್ಯಾಸ ಮುಗಿಸಿದರು. ಶ್ರೀ ಸುಬ್ಬರಾಯರ ಧರ್ಮಪತ್ನಿಯವರ ಅಂತಃಕರಣದ ವಾತ್ಸಲ್ಯವನ್ನು ಇಂದು ಸಹ ಶ್ರೀ ರಾಮಪ್ಪ ಅವರು ಭಕ್ತಿಪೂರ್ವಕವಾಗಿ ಸ್ಮರಿಸುತ್ತಾರೆ.

## ಪ್ರಯತ್ನಶೀಲರು

ಪ್ರೌಢ ಶಿಕ್ಷಣದ ತರುವಾಯ ಇಂಟರ್‌ಮಿಡಿಯೇಟ್ ವಿದ್ಯಾರ್ಜನೆಗೆ ಹೆಚ್ಚು ಶ್ರಮ ಎದುರಾಗದೆ ಸಹ್ಯಾದ್ರಿ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಕಡು ಕಷ್ಟದ ಬವಣೆಯಲ್ಲಿ 1949ರಲ್ಲಿ ಇಂಟರ್‌ಮಿಡಿಯೇಟ್ ವಿದ್ಯೆಯನ್ನು ಪೂರೈಸಲು ಊಟ, ತಿಂಡಿ ಮತ್ತು ಹಣದ ನೆರವು ನೀಡಿ ಸಹಕರಿಸಿದ ಶಿವಮೊಗ್ಗ, ಭದ್ರಾವತಿ, ಬೀರೂರು, ತರೀಕೆರೆ, ಹೊಳೆಹೊನ್ನೂರು, ಬ್ಯಾಗಡೇಹಳ್ಳಿ ಊರುಗಳ ಎಲ್ಲ ಮಹನೀಯರನ್ನು ಆಗಾಗ ಸ್ಮರಿಸುತ್ತಾರೆ.

## ಸ್ವಾತಂತ್ರ್ಯ ಚಳವಳಿ

ದೇಶ ವಿಮೋಚನೆಗೆ ಮಹಾತ್ಮ ಗಾಂಧೀಜಿಯವರು ನಡೆಸಿದ ಸ್ವಾತಂತ್ರ್ಯ ಚಳವಳಿಯಿಂದ ಆಕರ್ಷಿತರಾಗಿ 1947ರಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರು. ಆಗ ಪೊಲೀಸರ ಲಾಠಿ ಏಟಿನಿಂದ ಇವರ ಹಣೆ ಮತ್ತು ತಲೆಗೆ ಹೊಡೆತ ಬಿತ್ತು. ಅನಂತರ ಎರಡು ತಿಂಗಳು ಜೈಲುವಾಸ ಅನುಭವಿಸಿ ಆ ಬಳಿಕ ಬಿಡುಗಡೆ ಹೊಂದಿದ್ದರು. ಈ ಆಕಸ್ಮಿಕ ವಿಘ್ನಕ್ಕೆ ಕಿಂಚಿತ್ತು ಯೋಚಿಸದೆ 'ದೇಶ ಸೇವೆಯ ಮಹತ್ಕಾರ್ಯದಲ್ಲಿ ಭಾಗವಹಿಸಿವುದು ನನ್ನ ಪುಣ್ಯದ ಕೆಲಸ'ವೆಂದು ಅವರು ಹರ್ಷ ವ್ಯಕ್ತಪಡಿಸುತ್ತಾರೆ.

ಶ್ರೀ ರಾಮಪ್ಪನವರು ವಿದ್ಯಾರ್ಜನೆಯನ್ನು ಪೂರೈಸಲು ಈ ಸಂದರ್ಭದಲ್ಲಿ ಯಾರ ನೆರವಿಗೆ ಹೋಗುವುದು ಸೂಕ್ತವಲ್ಲವೆಂದು ನಿರ್ಧರಿಸಿ ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆ ಮೇಲೆ ಲಕ್ಕವಳ್ಳಿಯಲ್ಲಿ ಭದ್ರಾ ನೀರಾವರಿ ರಿಜರ್‌ವಾಯರ್ ಇಲಾಖೆಯಲ್ಲಿ ಗುಮಾಸ್ತೆ ನೌಕರಿ ಪಡೆದು ಒಂಬತ್ತು ತಿಂಗಳು ತಾತ್ಕಾಲಿಕ ಕೆಲಸ ಮಾಡಿ, ಅಪೂರ್ಣಗೊಂಡಿದ್ದ ಇಂಟರ್‌ಮಿಡಿಯೇಟ್ ವ್ಯಾಸಂಗವನ್ನು ಪೂರೈಸಿದರು.

## ಅಂತಿಮ ಗುರಿ - ಇಂಜಿನಿಯರಿಂಗ್ ಪದವಿ

ತಾತ್ಕಾಲಿಕ ನೌಕರಿಗೆ ಸೇರಿದ ಸಂದರ್ಭದಲ್ಲಿ ಅಲ್ಲಿ ಡ್ರಾಫ್ಟ್ಸ್‌ಮನ್ ಆಗಿದ್ದ ಶ್ರೀ ನಂಜುಂಡಯ್ಯ ಎಂಬುವವರು ವಿದ್ಯೆಯನ್ನು ಇಲ್ಲಿಗೇ ನಿಲ್ಲಿಸಬಾರದೆಂಬ ಎಚ್ಚರಿಕೆಯ ಮಾತು ಹೇಳಿದ್ದರು. ಇದನ್ನು ಪದೇ ಪದೇ ಸ್ಮರಿಸಿಕೊಂಡ ಶ್ರೀ ರಾಮಪ್ಪನವರು ಇಂಜಿನಿಯರಿಂಗ್

ಪದವಿ ಪೊಂದಲೇಬೇಕೆಂದು ನಿರ್ಣಯಿಸಿ ಅರ್ಜಿ ಸಲ್ಲಿಸಿದರು. ನಂತರ ಬೆಂಗಳೂರಿನಂತಹ ಸ್ಥಳದಲ್ಲಿ ಓದಲು ಹಣದ ಸಹಾಯ ಪಡೆಯಲು ಯಾರ ಬಳಿ ಹೋಗುವುದು, ವಾಸಕ್ಕೆ ಸ್ಥಳ, ಊಟ, ಪುಸ್ತಕ, ಫೀಜುಗಳಿಗೆ ಹಣ ಜೋಡಿಸಿಕೊಳ್ಳುವುದು ಸಾಧ್ಯವೇ ಎಂಬ ಆತಂಕದಲ್ಲಿದ್ದರು.

**ಬೆನ್ನೇರಿ ಬಂದ ಭಾಗ್ಯ**

ಪ್ರವಾಹದ ವಿರುದ್ಧ ಈಜಿದಷ್ಟೇ ಸಾಹಸವನ್ನು ಇಂಜಿನಿಯರಿಂಗ್ ಪದವಿ ಪಡೆಯಲು ನಡೆಸಿದರು. ಶಿವಮೊಗ್ಗೆಯ ತಿಮ್ಮಪ್ಪ, ಅಕೌಂಟೆಂಟ್ ನಾಗಪ್ಪ, ಕುಳೇನೂರಿನ ಮಾಸ್ಟರ್ ಹನುಮಂತಪ್ಪ ಇವರುಗಳು ಮೊದಲಿನಿಂದಲೂ ಹಣದ ಸಹಕಾರ ನೀಡುತ್ತಿದ್ದರು. ಶ್ರೀ ತಿಮ್ಮಪ್ಪ ಎಂಬುವವರು ಶ್ರೀ ರಾಮಪ್ಪನವರ ವಿದ್ಯೆಗೆ ಭಂಗ ಬರಬಾರದೆಂದು ಯೋಚಿಸಿ ಒಬ್ಬ ಭಾವೀ ಮಾವನನ್ನು ಜೋಡಿಸಿ ಕೊಟ್ಟರು. ಆ ಮಹನೀಯರೆಂದರೆ ಶಿವಮೊಗ್ಗ ತಾಲ್ಲೂಕಿನ ಕುಂಸಿ ಗ್ರಾಮದ ಶ್ರೀ ಬಾಬು ಹುಚ್ಚಣ್ಣನವರು. ಇವರು ತಮ್ಮ ನಾಲ್ಕನೆಯ ಮಗಳನ್ನು ರಾಮಪ್ಪನವರಿಗೆ ಕೊಟ್ಟು ವಿವಾಹ ಮಾಡಿ ವಿದ್ಯಾರ್ಜನೆಗೆ ಸಹಾಯ ಮಾಡಿದರು. ಇಬ್ಬರು ಮಕ್ಕಳ ತಂದೆಯಾಗಿಯೂ ಸಂಸಾರ ಜೀವನದೊಂದಿಗೆ ವಿದ್ಯೆಯನ್ನು ನಿರ್ಲಕ್ಷಿಸದೆ 1963ರಲ್ಲಿ ಬಿ.ಇ. ಪದವೀಧರರಾದರು.

**ಸರ್ಕಾರಿಸೇವೆ**

ಇಂಜಿನಿಯರಿಂಗ್ ಪದವಿ (ಬಿ.ಇ.) ದೊರೆತ ನಂತರ 1964ರಲ್ಲಿ ಮೈಸೂರು ಸರ್ಕಾರದ ಲೋಕೋಪಯೋಗಿ ಇಲಾಖೆ (P.W.D.) ಯಲ್ಲಿ ನೌಕರಿಗೆ ಸೇರ್ಪಡೆಯಾಗಿ ಅಲ್ಲಿಂದ 29 ವರ್ಷ 6 ತಿಂಗಳು ಕಾಲ ಸುದೀರ್ಘ ಸೇವೆ ಸಲ್ಲಿಸಿ ಎಗ್ಜಿಕ್ಯುಟಿವ್ ಇಂಜಿನಿಯರ್ ಹುದ್ದೆಯಿಂದ 1983ರಲ್ಲಿ ನಿವೃತ್ತಿ ಪಡೆದು, ಇದೀಗ ದಾವಣಗೆರೆಯಲ್ಲಿ ವಾಸವಾಗಿದ್ದಾರೆ.

**ಶಿವಮೊಗ್ಗ ಉಪ್ಪಾರ ಸಂಘದ ಜಿಲ್ಲಾ ಅಧ್ಯಕ್ಷರು**

ನೌಕರಿಯಿಂದ ನಿವೃತ್ತಿಯ ನಂತರ ಸಮಾಜಕ್ಕೆ ಹೊರೆಯಾಗಿ ಬದುಕುವ ನಿದರ್ಶನಗಳನ್ನು ನಾವು ನೋಡುತ್ತಿದ್ದೇವೆ. ಆದರೆ ಶ್ರೀ ಡಿ.ಎಸ್. ರಾಮಪ್ಪನವರು ನಿರಾಶರಾಗದೆ ಸಮಾಜ ಸೇವೆಗೆ ತಮ್ಮ ಜೀವನವನ್ನು ಮುಡುಪಾಗಿಟ್ಟರು. ನಿವೃತ್ತರಾದ ಒಂದೆರಡು ತಿಂಗಳಲ್ಲೇ ಸಮಾಜ ಬಾಂಧವರ ಒತ್ತಾಸೆಗೆ ಮಣಿದು ಶಿವಮೊಗ್ಗ ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷ ಸ್ಥಾನಕ್ಕೆ ಅವಿರೋಧವಾಗಿ ಆಯ್ಕೆಗೊಂಡರು. ದುಸ್ಥಿತಿಯಲ್ಲಿದ್ದ ಸಂಘದ ಉತ್ಥಾನಕ್ಕೆ ಏಳೆಂಟು ತಿಂಗಳ ಅವಧಿಯಲ್ಲೇ ಸಮಾಜದ ಪ್ರಮುಖರೊಂದಿಗೆ ಜಿಲ್ಲೆಯಲ್ಲಿ ಪ್ರವಾಸ ಮಾಡಿ ಜನರನ್ನು ಸಂಘಟಿಸುವ ಕಾರ್ಯದಲ್ಲಿ ತೊಡಗಿಸಿಕೊಂಡರು. ಶಿವಮೊಗ್ಗ ನಗರದ ಉಪ್ಪಾರ ವಿದ್ಯಾರ್ಥಿ ನಿಲಯದ ಅಸ್ತಿತ್ವವನ್ನು ಬಲಪಡಿಸಲು ನೀಲಿನಕ್ಷೆಯನ್ನು ತಯಾರಿಸಿ ಕಟ್ಟಡದ ಕೆಲಸವನ್ನು ಪ್ರಾರಂಭ ಮಾಡಿದರು. ಚೀಫ್ ಇಂಜಿನಿಯರ್ ಹುದ್ದೆಯಲ್ಲಿದ್ದ ಶ್ರೀ ಹಳದಪ್ಪನವರ

ಸಹಕಾರದೊಂದಿಗೆ ಐವತ್ತು ಸಹಸ್ರ ರೂಪಾಯಿಗಳನ್ನು ಸಂಗ್ರಹಿಸಿ ಕಟ್ಟಡ ನಿರ್ಮಾಣವನ್ನು ಪೂರ್ಣಗೊಳಿಸಿದರು.

**ರಾಜ್ಯ ಉಪ್ಪಾರ ಸಂಘದ ಹೊಣೆಗಾರಿಕೆ**

1984ರ ಕೊನೆಯಲ್ಲಿ ಬೆಂಗಳೂರಿನಲ್ಲಿ ಸಮಾಜದ ಗಣ್ಯರು ಕರ್ನಾಟಕ ರಾಜ್ಯದ ಉಪ್ಪಾರ ಸಂಘದ ಅಧ್ಯಕ್ಷ ಸ್ಥಾನಕ್ಕೆ ರಾಮಪ್ಪನವರ ಹೆಸರನ್ನು ಸೂಚಿಸಿ ಅವರನ್ನು ಅಧ್ಯಕ್ಷರನ್ನಾಗಿಸಿದರು. ಅಧ್ಯಕ್ಷ ಸ್ಥಾನ ಸ್ವೀಕರಿಸಿದ ನಂತರ ಸಂಘದ ಪದಾಧಿಕಾರಿಗಳು ಹಾಗು ಕೆಲವು ಮುಖಂಡರುಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು ಸಂಘದಲ್ಲಿ ತಲೆದೋರಿದ್ದ ಅನಿಶ್ಚಿತ ಅಸಹಕಾರ ಪರಿಸ್ಥಿತಿಯನ್ನು ತಿಳಿಗೊಳಿಸಿದರು. ಉಪ್ಪಾರ ಸಮಾಜದ ಜಗದ್ಗುರು ಶ್ರೀ ಲೇಪಾಕ್ಷ ಮಹಾಸ್ವಾಮೀಜಿಯವರೊಂದಿಗೆ ಸಮಾಲೋಚಿಸಿ ಸಮಾಜದ ಬಲವರ್ಧನೆಗೆ ಭೂಮಿಕೆಯನ್ನು ಸಿದ್ಧಗೊಳಿಸಿದರು. ಆ ಪ್ರಯತ್ನವೇ ಶ್ರೀ ಡಿ.ಎಸ್. ರಾಮಪ್ಪನವರ ದೊಡ್ಡ ಸಾಧನೆಯಾಗಿದೆ.

ಇಲ್ಲಿಂದ ಹಿಂದಕ್ಕೆ ನೋಡದೆ ಸ್ವಾಮಿಜೀಯವರ ಮಾರ್ಗದರ್ಶನದೊಂದಿಗೆ ರಾಜ್ಯದೆಲ್ಲೆಡೆ ಎರಡು ವರ್ಷಗಳ ಕಾಲ ಸಂಚಾರ ಮಾಡಿ 1986 ರಲ್ಲಿ ಬೆಂಗಳೂರು ಮಹಾನಗರದಲ್ಲಿ ಉಪ್ಪಾರ ಸಮಾಜದ ನಾಲ್ಕನೆಯ ಬೃಹತ್ ಸಮ್ಮೇಳನವನ್ನು ಸಂಘಟಿಸಿದರು. ಸಂಗ್ರಹಿಸಿದ ಹಣದಲ್ಲಿ ಈ ಸಮ್ಮೇಳನದ ಖರ್ಚನ್ನು ಪೂರೈಸಿ ಐವತ್ತು ಸಹಸ್ರ ರೂಪಾಯಿಗಳನ್ನು ಉಳಿತಾಯ ಮಾಡಿ ಸಂಘದ ಕಾರ್ಯನಿರ್ವಹಣೆಗೆ ಶಾಶ್ವತ ನಿಧಿಯನ್ನು ಸ್ಥಾಪಿಸಿದ ಪ್ರಾಮಾಣಿಕರಿವರು.

ಶ್ರೀ ಡಿ.ಎಸ್. ರಾಮಪ್ಪನವರು 1987ರಲ್ಲಿ ಜಗದ್ಗುರುಗಳವರ ಆಶೀರ್ವಾದದೊಂದಿಗೆ ಸಮಾಜದ ಮುಖಂಡರುಗಳ ಸಹಕಾರ ಪಡೆದು 'ಭಗೀರಥ ಉಪ್ಪಾರ ಧಾರ್ಮಿಕ ಟ್ರಸ್ಟ್' ಸ್ಥಾಪಿಸಿದರು. ಅದಕ್ಕೆ ಪೂಜ್ಯ ಶ್ರೀ ಲೇಪಾಕ್ಷ ಮಹಾಸ್ವಾಮೀಜಿಯವರನ್ನು ಅಧ್ಯಕ್ಷರನ್ನಾಗಿ ಮಾಡಿದರು.

ಸಮಾಜದ ಅಭಿವೃದ್ಧಿಗೆ ವಿವಿಧ ಯೋಜನೆಗಳನ್ನು ರೂಪಿಸಿ ಅದನ್ನು ಅನುಷ್ಠಾನಗೊಳಿಸಿದರು. ಈ ಸಂದರ್ಭದಲ್ಲಿ ಅವರ ನೆರವಿಗೆ ಬಂದವರಲ್ಲಿ ನಮ್ಮ ಸಮಾಜದ ಮುಖಂಡರು ಹಾಗೂ ದಕ್ಷ ಹಿರಿಯ ಕೆ.ಎ.ಎಸ್. ಅಧಿಕಾರಿಗಳಾದ ಶ್ರೀ ಹೆಚ್.ಸಿ. ನೀರಾವರಿಯವರು ಪ್ರಮುಖರು. ಇವರು ಆಗ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವಿಶೇಷ ಜಿಲ್ಲಾಧಿಕಾರಿಗಳಾಗಿದ್ದವರು. ಇದು ಉಪ್ಪಾರ ಸಮಾಜದ ಏಳಿಗೆಗೆ ವರದಾನವಾಯಿತು.

ಸಂಘದ ಪ್ರಧಾನ ಕಾರ್ಯದರ್ಶಿಗಳಾಗಿ ಅಪಾರ ಅನುಭವ ಪಡೆದ ಶ್ರೀ ಎಂ. ಹನುಮಯ್ಯನವರ ನೆರವು ಪಡೆದ ಡಿ.ಎಸ್. ರಾಮಪ್ಪನವರು ಬೆಂಗಳೂರಿನ ಕತ್ತರಿಗುಪ್ಪ ಲೇಔಟ್‌ನಲ್ಲಿ 3½ ಎಕರೆ ನಿವೇಶನವನ್ನು ಶ್ರೀ ಹೆಚ್.ಸಿ. ನೀರಾವರಿಯವರ ಸಹಕಾರದಿಂದ ಉಪ್ಪಾರ ಭಗೀರಥ ಧಾರ್ಮಿಕ ಟ್ರಸ್ಟ್‌ಗೆ ಪಡೆದರು. ಅದಕ್ಕೆ ಅಗತ್ಯವಾಗಿ ಬೇಕಾಗಿದ್ದ ಹಣವನ್ನು ಶ್ರೀ ಬಿ.ಎಂ. ರಾಮಯ್ಯ, ಡಾ. ಮುನಿವೆಂಕಟಸ್ವಾಮಿ ಹಾಗು ಇತರೆ ಸಂಘದ ಪದಾಧಿಕಾರಿಗಳು

ಸಂಗ್ರಹಿಸಿಕೊಟ್ಟರು. ಅಂದರೆ ಒಂದು ಲಕ್ಷ ಮೂವತ್ತೈದು ಸಾವಿರ ರೂ.ಗಳನ್ನು ಈ ಸಂದರ್ಭದಲ್ಲಿ ಸಂಗ್ರಹಿಸಲಾಯಿತು.

ಇಷ್ಟಕ್ಕೇ ತೃಪ್ತರಾಗದ ಶ್ರೀ ಡಿ.ಎಸ್. ರಾಮಪ್ಪನವರು ಸಂಘದ ಕಛೇರಿ, ಜಗದ್ಗುರುಗಳ ವಾಸ್ತವ್ಯಕ್ಕೆ ಕೊಠಡಿ ಹಾಗೂ ನಿವೇಶನದ ಸುತ್ತ ಬೇಲಿಯನ್ನು ಹಾಕಿ ಆಸ್ತಿಯನ್ನು ರಕ್ಷಿಸಿಕೊಳ್ಳಲು ಮುಂದಾದರು. ಹಾಗೆಯೇ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಕಂತು ಕಟ್ಟಲು ಐದು ಲಕ್ಷ ರೂ.ಗಳನ್ನು ಇಡಿಗಂಟಾಗಿಟ್ಟರು. ಅದು ಸದುಪಯೋಗವಾಗಲಿಲ್ಲ. ಅದು ಬೇರೆ ಮಾತು. ಆದರೆ ರಾಮಪ್ಪನವರ ದೂರದೃಷ್ಟಿ ಇಲ್ಲಿ ಮುಖ್ಯವಾದುದು. ಸಾಮಾನ್ಯ ಸಭೆಯಲ್ಲಿ ನಡೆದ ಗೂಂಡಾಗಿರಿಯನ್ನು ಕಂಡು ಮನಸ್ನೊಂದು ತಮ್ಮ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು.

**ಶಾಖಾಮಠದ ಪ್ರಾರಂಭ**

ದಾವಣಗೆರೆಯಲ್ಲಿ ವಾಸ್ತವ್ಯ ಮಾಡಿದ ಇವರು ಶ್ರೀ ಲೇಪಾಕ್ಷ ಸ್ವಾಮೀಜಿಯವರ ಸಾನ್ನಿಧ್ಯದಲ್ಲಿ ಐದು ಜಿಲ್ಲೆಗಳಲ್ಲಿ ಶಾಖಾಮಠ ಮಾಡಲು ನಿರ್ಧರಿಸಿದ್ದರು. ಮೊದಲ ಶಾಖೆಯನ್ನು ದಾವಣಗೆರೆಯಲ್ಲಿ ನಿರ್ಮಿಸಲು ದೃಢ ಹೋರಾಟ ನಡೆಸಿ ಜಗದ್ಗುರುಗಳವರ ಒಪ್ಪಿಗೆ ಪಡೆದು 1999ರಲ್ಲಿ ಅಲ್ಲಿ ಶಾಖಾಮಠವನ್ನು ನಿರ್ಮಿಸಿದರು.

ದಾವಣಗೆರೆ ಜಿಲ್ಲೆಯ ಮುಖಂಡರುಗಳು ಹಾಗು ಈಗಿನ ಜಗದ್ಗುರುಗಳಾದ ಶ್ರೀ ಪುರುಷೋತ್ತಮಾನಂದಪುರಿ ಮಹಾಸ್ವಾಮಿಗಳ ಪ್ರಯತ್ನ ವಿಫಲವಾಗಿ ಶಾಖಾಮಠ ನಿಸ್ತೇಜವಾದ ಬಗ್ಗೆ ರಾಮಪ್ಪನವರಲ್ಲಿ ನಿರಾಶೆ ಇದ್ದರೂ ಹೊಸ ಜ್ಯೋತಿಗಾಗಿ ಹುಡುಕಾಡುತ್ತಿದ್ದಾರೆ. ಈ ಶಾಖಾಮಠದ ಆಶ್ರಯದಲ್ಲಿ ನಮ್ಮ ಸಮಾಜದ ವಿದ್ಯಾರ್ಥಿಗಳಿಗೆ ವಸತಿ ನಿಲಯವೊಂದನ್ನು ಪ್ರಾರಂಭಿಸಲಾಗಿದೆ.

**ಜಗದ್ಗುರುಗಳಿಗೆ ಪಟ್ಟಾಭಿಷೇಕ**

ನೂತನ ಜಗದ್ಗುರು ಶ್ರೀ ಶ್ರೀ ಶ್ರೀ ಪುರುಷೋತ್ತಮಾನಂದಪುರಿ ಮಹಾಸ್ವಾಮಿಗಳವರ ಪಟ್ಟಾಭಿಷೇಕ ಸಂದರ್ಭದಲ್ಲಿ ಶ್ರೀ ರಾಮಪ್ಪನವರ ಸೇವೆ ಶ್ಲಾಘನೀಯ. ಕರ್ನಾಟಕ ರಾಜ್ಯದಲ್ಲಿ ಶ್ರೀ ಚಿನ್ಮೂಲಾದ್ರಿ ಶಿಲಾಪುರಿ ಮಹಾ ಸಂಸ್ಥಾನದ ಹೆಸರು ಎಲ್ಲೆಲ್ಲೂ ರಾರಾಜಿಸಬೇಕೆಂಬ ಹಂಬಲ ಇವರದು.

ಇಂತಹ ಸರಳ ಸಜ್ಜನಿಕೆಯುಳ್ಳ ಶ್ರೀ ಡಿ.ಎಸ್. ರಾಮಪ್ಪನವರನ್ನು ಅಭಿನಂದಿಸಲು ಹೆಚ್.ಸಿ. ನೀರಾವರಿಯವರು ಭೂಮಿಕೆಯನ್ನು ಸಿದ್ಧಪಡಿಸಿರುವುದು ರಾಜ್ಯದ ಪ್ರತಿಯೊಬ್ಬ ಉಪ್ಪಾರರಿಗೂ ಕಣ್ತೆರೆಸುವ ಮಹತ್ಕಾರ್ಯವಾಗಿದೆ. ಶ್ರೀಯುತರು ನಡೆದಿರುವ ಹಾದಿ, ಮುಂದಿನ ಪೀಳಿಗೆಯವರಿಗೆ ಆದರ್ಶವಾಗಿದೆ.

ಈ ಆದರ್ಶಗಳ ಹಿನ್ನೆಲೆಯಲ್ಲಿ ಶ್ರೀ ಡಿ.ಎಸ್. ರಾಮಪ್ಪನವರ ಜೀವನವನ್ನು ನೋಡಿದಾಗ ಅವರು ಒಂದು ವ್ಯಕ್ತಿಯಲ್ಲ, ಬದಲು ಒಂದು ಶಕ್ತಿಯಾಗಿ ಕಾಣಿಸುತ್ತಾರೆ.

❋

# * ಅಪರೂಪದ ವ್ಯಕ್ತಿ

- ಎಂ. ಹನುಮಯ್ಯ
ಬೆಂಗಳೂರು

ಶ್ರೀ ಡಿ.ಎಸ್. ರಾಮಪ್ಪನವರಿಗೆ ಸನ್ಮಾನ ಸಮಾರಂಭ ಆಚರಣೆ ಮಾಡಲು ಎಲ್ಲ ಸಿದ್ಧತೆಗಳು ನಡೆಯುತ್ತಿವೆ, ಇದನ್ನು ಕೇಳಿ ತುಂಬ ಸಂತೋಷವಾಯಿತು. ರಾಮಪ್ಪನವರ ವ್ಯಕ್ತಿತ್ವದ ಬಗ್ಗೆ ಅಪಾರ ಮನ್ನಣೆ ಮತ್ತು ಗೌರವ ಸಲ್ಲಿಸಬೇಕಾದ ಸದವಕಾಶ ಈಗ ಒದಗಿ ಬಂದಿರುವುದಕ್ಕೆ ಅತ್ಯಂತ ಆನಂದವಾಗಿದೆ.

ಶ್ರೀಗಂಧ ತನ್ನನ್ನು ತಾನು ತೇದುಕೊಂಡು ಸುಗಂಧ ನೀಡುತ್ತದೆ, ಹಾಗೆ ಶ್ರೀ ರಾಮಪ್ಪನವರ ಜೀವನ. ಅವರ ವಯಸ್ಸು ಅವರ ಹುಮ್ಮಸ್ಸಿಗೆ ಅಡ್ಡ ಬಂದಿಲ್ಲ. ಅವರ ಅರ್ಪಣಾಭಾವನೆ ಅನುಕರಣೀಯವೆಂಬುದು ಉಪ್ಪಾರ ಸಮಾಜದ ಪ್ರತಿಯೊಬ್ಬರಿಗೂ ಈಗಾಗಲೇ ಅರಿವಾಗಿದೆ. ಅವರು ಪರರ ಕಲ್ಯಾಣಕ್ಕಾಗಿ ನಿರಂತರವೂ ದುಡಿಯುವವರೆಂಬುದು ಅವರನ್ನು ಬಲ್ಲವರೆಲ್ಲರಿಗೂ ಗೊತ್ತಿರುವ ವಿಚಾರ.

ಇವರು ಸ್ವಾತಂತ್ರ್ಯ ಹೋರಾಟಗಾರರೆಂದು ಕರ್ನಾಟಕ ಸರ್ಕಾರದಿಂದ ಸನ್ಮಾನಿತರಾಗಿದ್ದಾರೆ ಎಂಬ ಸಂತಸದ ಸುದ್ದಿ ಅನೇಕ ರಿಗೆ ತಿಳಿದಿಲ್ಲವೆಂದು ಮನಗಂಡು ಮತ್ತೊಮ್ಮೆ ಈ ಸಂದರ್ಭದಲ್ಲಿ ನೆನಪು ಮಾಡುವ ಅವಶ್ಯಕತೆ ಬಂದಿದೆ.

ಉಪ್ಪಾರ ಸಮಾಜವು ಪುರಾಣ ಪ್ರಸಿದ್ಧವಾದ ಭಗೀರಥ ಮಹಾರಾಜನ ಹೆಸರನ್ನು ಪ್ರಚಾರ ಮಾಡಬೇಕೆಂದೂ ಅದಕ್ಕೆ ಸಾಧುವಾದ ಎಲ್ಲ ರೀತಿಯ ಕಾರ್ಯಕ್ರಮವನ್ನು ರೂಪಿಸಿಕೊಳ್ಳ ಬೇಕೆಂದೂ ಸತತವಾಗಿ ಶ್ರಮಿಸುತ್ತಿದ್ದಾರೆ ಶ್ರೀ ರಾಮಪ್ಪನವರು.

ಸಮಾಜದಲ್ಲಿ ಬಡವರ ಸುಖಕ್ಕಾಗಿ ದುಡಿಯಬೇಕೆಂಬ ಹಂಬಲವುಳ್ಳವರು. ಯಾವಾಗಲೂ ತಾವು ಮಾಡಿದ್ದು ಸೇವೆಯಲ್ಲವೆಂದೂ ಆದ್ಯಕರ್ತವ್ಯವೆಂದು ಹೇಳುತ್ತಿರುವ ನಿಷ್ಠಾವಂತ ಸಮಾಜ ಸೇವಕರಿವರು.

ಉಪ್ಪಾರ ಸಮಾಜದಲ್ಲಿ ಕಂಡುಬಂದ ಸುಮಾರು 27 ಉಪಪಂಗಡಗಳನ್ನು ಒಂದುಗೂಡಿಸಬೇಕೆಂದು ಕರ್ನಾಟಕ ರಾಜ್ಯದಲ್ಲೆಲ್ಲ ಹಗಲಿರುಳೆನ್ನದೆ ಪ್ರವಾಸ ಮಾಡಿ ದುಡಿದ ಧೀಮಂತ ನಾಯಕ — ಶ್ರೀ ರಾಮಪ್ಪನವರು.

ಶ್ರೀ ರಾಮಪ್ಪನವರು ನಿಷ್ಠೆ ಮತ್ತು ಪ್ರಾಮಾಣಿಕತೆಯ ಪ್ರತೀಕವಾಗಿ ಅವರು ಕರ್ನಾಟಕದಲ್ಲೆಲ್ಲಾ ಹೆಸರು ಗಳಿಸಿದ್ದಾರೆ. ಸಮಾಜದ ಉದ್ಧಾರಕ್ಕೆ ಯಾವ ಕಾರ್ಯಕ್ರಮವನ್ನು ಕೈಗೆತ್ತಿಕೊಂಡರೂ ಸದಾ ಚಟುವಟಿಕೆಯ ಚಿಲುಮೆಯಾಗಿ ದುಡಿದವರು, ಸಮಾಜ ಸೇವಕರಿಗೆಲ್ಲ ಆದರ್ಶಪ್ರಾಯವಾಗಿ ತಮ್ಮ ಕಾರ್ಯಚಟುವಟಿಕೆಗಳನ್ನು ರೂಪಿಸಿಕೊಂಡವರು ಶ್ರೀ ರಾಮಪ್ಪನವರು. ಇವರ ಬಹುಮುಖದ ಸೇವೆಯು ಎಲ್ಲರಿಗೂ ಅನುಕರಣೀಯವೆಂದು ಹೇಳಿದರೆ ಅದು ಅತಿಶಯೋಕ್ತಿಯ ಮಾತಾಗುವುದಿಲ್ಲ.

ಮನುಷ್ಯ ಎಷ್ಟರಮಟ್ಟಿಗೆ ಇತರರ ಕ್ಷೇಮಕ್ಕಾಗಿ ದುಡಿಯುತ್ತಾನೋ ಅಷ್ಟರಮಟ್ಟಿಗೆ ಅವನು ದೊಡ್ಡವನಾಗುತ್ತಾನೆ ಎಂಬ ಬಹು ದೊಡ್ಡ ಗುರಿಯಿಟ್ಟುಕೊಂಡವರು ಶ್ರೀ ರಾಮಪ್ಪನವರು.

ಒಳ್ಳೆಯ ಕೆಲಸ ಮಾಡಬೇಕೆಂಬ ಹಂಬಲ ಅವರಲ್ಲಿ ಸದಾ ನೆಲೆಯಾಗಿ ನಿಂತಿರುವುದು ಅವರ ವ್ಯಕ್ತಿತ್ವದ ಬಹು ದೊಡ್ಡ ಹಿರಿಮೆ.

ಅವರು ತಮ್ಮ ಪ್ರಾಮಾಣಿಕತೆ, ನಿಷ್ಠೆ, ಸೇವಾಮನೋಭಾವ, ತಾತ್ವಿಕ ವಿಚಾರದಲ್ಲಿ ಕುಂದುಂಟಾಗುವ ಹೊಂದಾಣಿಕೆ ಮಾಡಿಕೊಳ್ಳದ ನಿಷ್ಠುರ ಸ್ವಭಾವದಿಂದಾಗಿ ಸದಾ ಸ್ಮರಣೆಯಲ್ಲಿ ಉಳಿಯುತ್ತಾರೆ.

*

# * ಪ್ರೇಮ ಸ್ವರೂಪಿಗಳು

- ಕೆ. ಕರಿಯಪ್ಪ
ಶಿವಮೊಗ್ಗ

ನಮ್ಮ ಉಪ್ಪಾರ ಜನಾಂಗದ ಬಗ್ಗೆ ತಿಳಿಯುತ್ತಾಹೋದರೆ ಅಭಿವೃದ್ದಿಯ ಕೆಲವು ಮಜಲುಗಳನ್ನು ನಾವು ಕಾಣಬಹುದು. 19ನೇ ಶತಮಾನದ ಆದಿಭಾಗ ಅಥವಾ ಅದಕ್ಕಿಂತ ಹಿಂದೆ ಸರ್ಕಾರ ನೇಮಿಸಿದ ಹಿಂದುಳಿದ ಆಯೋಗಗಳಿಗೆ ನಮ್ಮ ಜನಾಂಗದ ಮುಖ್ಯಸ್ಥರು ಹಿಂದುಳಿದಿರುವ ಬಗ್ಗೆ ಸರಿಯಾದ ಅಂಕಿ ಅಂಶ ಕೊಡಲು ವಿಫಲರಾಗಿದ್ದಾರೆ. ಅದರಿಂದಾಗಿ ನಮ್ಮ ಜಾತಿಯು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿಲ್ಲದಿರುವುದು ವಿಷಾದನೀಯ ಸಂಗತಿಯಾಗಿದೆ.

ಸ್ವಾತಂತ್ರ್ಯಾನಂತರ ನಮ್ಮ ಕುಲಗುರುಗಳಾದ ಶ್ರೀ ಶ್ರೀ ಶ್ರೀ ಲೇಪಾಕ್ಷಸ್ವಾಮೀಜಿಯವರು ರಾಜ್ಯಾದ್ಯಂತ ಸಂಚರಿಸಿ ಹಲವು ಮುಖಂಡರನ್ನು ಸೇರಿಸಿ, ರಾಜ್ಯ ಸಂಘ ಸ್ಥಾಪಿಸಿ, ಜನಾಂಗದ ಸಂಘಟನೆ ಮಾಡುತ್ತಾ, ಹಿಂದುಳಿದ ಆಯೋಗಗಳಿಗೆ ವರದಿ ಸಲ್ಲಿಸುತ್ತಾ ಬಂದಿರುವರು.

19ನೇ ಶತಮಾನದ ಅಂತ್ಯ ಭಾಗದಿಂದ ಹಲವಾರು ಮುಖಂಡರು ಅಭಿವೃದ್ಧಿಗೆ ಶ್ರಮಿಸುತ್ತಾ ಬಂದಿದ್ದಾರೆ. ಈ ಪೈಕಿ ಶ್ರೀ ಡಿ.ಎಸ್. ರಾಮಪ್ಪನವರ ಕಾಣಿಕೆ ತುಂಬ ಉಪಯುಕ್ತವಾಗಿದೆ.

ಶ್ರೀಯುತ ಡಿ.ಎಸ್. ರಾಮಪ್ಪನವರು ಹಿಂದಿನ ಶಿವಮೊಗ್ಗ ಜಿಲ್ಲೆ ಚನ್ನಗಿರಿ ತಾಲ್ಲೂಕು ದೇವರಹಳ್ಳಿಯಲ್ಲಿ ಒಂದು ಸಾಮಾನ್ಯ ರೈತ ಕುಟುಂಬದಲ್ಲಿ ಜನಿಸಿದರು. ಇವರ ಜನನ ತಾ|| 28-6-1928. ಇವರ ತಂದೆ ಸಿಕ್ಕುಡಿಯಪ್ಪ ಹಾಗು ಇವರ ತಾಯಿ ಕರಿಯಮ್ಮ. ಇವರ ಪ್ರಾಥಮಿಕ ವಿದ್ಯಾಭ್ಯಾಸ ಇವರ ಸೋದರಮಾವ ನೀಲಪ್ಪನವರ

ಊರಾದ ಕುಳೇನೂರಿನಲ್ಲಿ ನಡೆಯಿತು. ಮಾಧ್ಯಮಿಕ ವಿದ್ಯಾಭ್ಯಾಸ ಸಂತೆಬೆನ್ನೂರಿನಲ್ಲಿ ನಡೆಯಿತು. ಈ ಸಂದರ್ಭದಲ್ಲಿ ಸಂತೆಬೆನ್ನೂರಿನ ಶಾನುಭೋಗರಾದ ಶ್ರೀ ಸುಬ್ಬರಾವ್‌ರವರು ಇವರ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿ ಪ್ರೋತ್ಸಾಹಿಸಿದರು. ವಾರದ ಮನೆಯಲ್ಲಿ ಊಟ ಮಾಡಿಕೊಂಡು ವ್ಯಾಸಂಗ ಮಾಡಿದ್ದಾರೆ. ಶಾನುಭೋಗರಾದ ಸುಬ್ಬರಾವ್‌ರವರಿಂದ ನಾನು ಈ ಮಟ್ಟಕ್ಕೆ ಬಂದೆನೆಂದು ಇವರು ಆಗಾಗ ಸ್ಮರಿಸುತ್ತಾರೆ.

ಶಿವಮೊಗ್ಗದಲ್ಲಿ ಪ್ರೌಢಶಾಲೆ ಪೂರೈಸಿ 1949ರಲ್ಲಿ ಇಂಟರ್‌ಮಿಡಿಯಟ್‌ನಲ್ಲಿ ಉತ್ತೀರ್ಣಗೊಂಡಿದ್ದಾರೆ. ಈ ವಿದ್ಯಾಭ್ಯಾಸದ ಅವಧಿಯಲ್ಲಿ ವಾರಾನ್ನ ಊಟ ಮಾಡಿಕೊಂಡು ವ್ಯಾಸಂಗ ಮಾಡಿದ್ದಾರೆ. ನಮ್ಮ ಸಮಾಜದವರು ಇವರಿಗೆ ಧನಸಹಾಯ ಮುಂತಾದ ಎಲ್ಲ ವಿಧದ ನೆರವು ನೀಡಿದ್ದಾರೆ.

29 ಜನವರಿ 1954ರಲ್ಲಿ ಸೂಪರ್‌ವೈಸರ್ ಆಗಿ ತೀರ್ಥಹಳ್ಳಿಯ ಲೋಕೋಪಯೋಗಿ ಇಲಾಖೆಯಲ್ಲಿ ಸರ್ಕಾರಿ ಸೇವೆಗೆ ಸೇರಿದರು. ಅನಂತರ ನರಸಿಂಹರಾಜಪುರದಲ್ಲಿ ಸೇವೆ, ಅನಂತರ 1960ರಲ್ಲಿ ಎ.ಎಫ್. ಆಗಿ ಪ್ರಮೋಷನ್ ಪಡೆದು ಸಿದ್ದಾಪುರದಲ್ಲಿ ಸೇವೆ ಮಾಡಿರುತ್ತಾರೆ. ವಿರಾಜಪೇಟೆಯಲ್ಲಿ ಮೂರು ವರ್ಷ ಸೇವೆ ಸಲ್ಲಿಸಿದನಂತರ ಎ.ಇ.ಇ. ಆಗಿ ಪ್ರಮೋಷನ್ ಪಡೆದು ಕುಮಟ, ನಂತರ ಮುಂಡಗೋಡು, ಕುಷ್ಟಗಿ ನಂತರ 1978ರವರೆಗೆ ಹೊಸಪೇಟೆ, 1980ರವರೆಗೆ ಹೂವಿನಹಡಗಲಿ, ನಂತರ ಇ.ಇ. ಆಗಿ ಪ್ರಮೋಷನ್ ಪಡೆದು ಸಾಗರಕ್ಕೆ ವರ್ಗಾವಣೆ ಹೊಂದಿರುತ್ತಾರೆ. ಎಲ್ಲ ಕಡೆಯೂ ಉತ್ತಮ ಸೇವೆ ಸಲ್ಲಿಸಿ ಜನರ ಹಾಗು ಸರ್ಕಾರದ ಮೆಚ್ಚುಗೆ ಪಡೆದಿದ್ದಾರೆ. 1983 ಜೂನ್ ತಿಂಗಳು ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದರು. ಇವರು ಸೇವೆಯಲ್ಲಿದ್ದಾಗ 1980ರಲ್ಲಿ ದಾವಣಗೆರೆ ಹಾಸ್ಟಲ್‌ಗೆ ಎರಡು ಕೊಠಡಿಗಳನ್ನು ಕಟ್ಟಿಸಿಕೊಟ್ಟು ಬಡ ಮಕ್ಕಳ ವ್ಯಾಸಂಗಕ್ಕೆ ಸಹಾಯ ಮಾಡಿದ್ದಾರೆ. ಸೇವೆಯಲ್ಲಿದ್ದಾಗಲೇ ಜನಾಂಗದ ಹಾಗು ಜಗದ್ಗುರುಗಳ ಸಂಪರ್ಕ ಇವರಿಗೆ ಇತ್ತು.

1978ರಲ್ಲಿ ಇವರ ಈರ್ವರು ಹೆಣ್ಣುಮಕ್ಕಳ ಮದುವೆ ದಾವಣಗೆರೆಯಲ್ಲಿ ನಡೆಯಿತು. ರಾಜ್ಯದ ಎಲ್ಲ ಸಮಾಜದ ಗಣ್ಯರು ಭಾಗವಹಿಸಿದ್ದರು. ಇದೊಂದು ಉಪ್ಪಾರರ ಸಮ್ಮೇಳನವೇ ಆಗಿತ್ತೆಂದರೆ ತಪ್ಪಾಗಲಾರದು.

1983ರಲ್ಲಿ ನಿವೃತ್ತಿ ಹೊಂದಿದ ನಂತರ ಶಿವಮೊಗ್ಗ ಜಿಲ್ಲೆ ಉಪ್ಪಾರ ಸಂಘದ ಅಧ್ಯಕ್ಷರಾದರು. ಅಧ್ಯಕ್ಷರಾದ ಸಂದರ್ಭದಲ್ಲಿ ವಿದ್ಯಾರ್ಥಿ ನಿಲಯಕ್ಕೆ ಭೋಜನಶಾಲೆ, ಅಡಿಗೆಮನೆ, ಸ್ನಾನದ ಕೊಠಡಿ, ವಗೈರೆ ಕಟ್ಟಿಸಿದ್ದಾರೆ.

1984ರಲ್ಲಿ ಕರ್ನಾಟಕ ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾಗಿ ಹನ್ನೊಂದು ವರ್ಷಗಳ ಕಾಲ ಸಮಾಜದ ಸೇವೆ ಮಾಡಿದ್ದಾರ. ಈ ಅವಧಿಯಲ್ಲಿ ಅವಿನ್ಯೂ ರೋಡಿನಲ್ಲಿ ನಂತರ ಕಾವೇರಿ ಫೈಪ್‌ಲೈನ್‌ನಲ್ಲಿ ಬಾಡಿಗೆ ಆಫೀಸು ತೆರೆದು ಕಾರ್ಯನಿರ್ವಹಿಸಿದ್ದರು. ಅಲ್ಲದೆ ಸ್ವಾಮೀಜಿಗಳ ವಾಸ್ತವ್ಯಕ್ಕೂ ಅನುಕೂಲ ಮಾಡಿಕೊಟ್ಟಿದ್ದರು. 1986ರಲ್ಲಿ ಬೆಂಗಳೂರು

ಪುರಭವನದಲ್ಲಿ ರಾಜ್ಯ ಉಪ್ಪಾರ ಮೊದಲನೆ ಸಮ್ಮೇಳನ ನಡೆಸಿದರು. ರಾಜ್ಯದಾದ್ಯಂತ ಪ್ರವಾಸ ಮಾಡಿ ಜಿಲ್ಲಾ ಸಂಘ, ತಾಲ್ಲೂಕು ಸಂಘಗಳನ್ನು ಸ್ಥಾಪಿಸಿ, ರಾಜ್ಯ ಸಂಘದ ಬಲವರ್ಧನೆ ಮಾಡಿದ್ದಾರೆ.

ಜಗದ್ಗುರು ಶ್ರೀ ಶ್ರೀ ಶ್ರೀ ಲೇಪಾಕ್ಷಸ್ವಾಮೀಜಿಯವರ ಮಾರ್ಗದರ್ಶನದಂತೆ ಶ್ರೀಯುತ ಡಿ.ಎಸ್. ರಾಮಪ್ಪನವರು ಎಂ. ಹನುಮಯ್ಯನವರೊಡನೆ ಚಿಂತನೆ ಮಾಡಿ ಬೆಂಗಳೂರಲ್ಲಿ ನಿವೇಶನ ಪಡೆಯುವ ಉದ್ದೇಶದಿಂದ 1989ರಲ್ಲಿ ಶ್ರೀ ಭಗೀರಥ ಧಾರ್ಮಿಕ ಉಪ್ಪಾರ ಟ್ರಸ್ಟನ್ನು ಸ್ಥಾಪಿಸಿದರು. ಟ್ರಸ್ಟ್‌ನಿಂದ ಸಮಾಜದ ಸರ್ವತೋಮುಖ ಅಭಿವೃದ್ಧಿ ಸಾಧ್ಯವೆಂದು ಇವರೀರ್ವರು ನಂಬಿದ್ದರು. ಇವರ ಪ್ರಯತ್ನದಿಂದ ಶ್ರೀಯುತ ಹೆಚ್.ಸಿ. ನೀರಾವರಿಯವರು ಬಿ.ಡಿ.ಎ.ನಲ್ಲಿ ಕಾರ್ಯದರ್ಶಿಯಾದ ಸಂದರ್ಭದಲ್ಲಿ ಚೆನ್ನಮ್ಮನಕೆರೆ ಅಚ್ಚುಕಟ್ಟಿನಲ್ಲಿ 1) 150'x100' ಹಾಗು 2) 60'x75' ಅಳತೆ ಉಳ್ಳ ನಿವೇಶನ ದೊರೆಯಿತು. ನಿವೇಶನದ ಕಿಮ್ಮತ್ತು ಇಂದು ಲಕ್ಷಾಂತರ ರೂ.ಗಳಾಗುತ್ತವೆ.

ಆ ನಿವೇಶನವನ್ನು ಡಿ.ಎಸ್. ರಾಮಪ್ಪನವರು ಸ್ವಾಮೀಜಿಯವರ ವಾಸ್ತವ್ಯಕ್ಕೆ ಹತ್ತು ಸಾವಿರ ರೂ. ಕೊಟ್ಟು ಒಂದು ಕೊಠಡಿಯನ್ನು ಕಟ್ಟಿಸಿದ್ದಾರೆ. ಇವರು ಶ್ರೀ ಹೆಚ್.ಸಿ. ನೀರಾವರಿಯವರ ಸಹಾಯದಿಂದ ಹಾಗು ಕುಷ್ಟಗಿ ತಾಲ್ಲೂಕಿನ ಸಮಾಜದವರಿಂದ ಸುಮಾರು 75 ಸಾವಿರ ರೂಪಾಯಿ ದೇಣಿಗೆ ಪಡೆದು ಸಭಾಂಗಣ ಕಟ್ಟಿಸಿದ್ದಾರೆ.

ಕರ್ನಾಟಕ ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾದ ಸಂದರ್ಭದಲ್ಲಿ ಮೇಲ್ಕಂಡಂತೆ ಅಭಿವೃದ್ಧಿ ಸಾಧಿಸಿರುವುದು ಶ್ಲಾಘನೀಯ. 1995ರಲ್ಲಿ ಅಧ್ಯಕ್ಷ ಪದವಿಯಿಂದ ನಿವೃತ್ತಿ ಹೊಂದಿದ್ದಾರೆ. ಗಮನಿಸಬೇಕಾದ ಮತ್ತೊಂದು ಅಂಶವೇನೆಂದರೆ ಇವರು ಅಧ್ಯಕ್ಷರಾದ ಸಂದರ್ಭದಲ್ಲಿ ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಉಪ್ಪಾರ ಸಮಾಜದ ಜನಸಂಖ್ಯೆಯ ಗಣತಿ ಮಾಡಿದ್ದಾರೆ.

1996ರಲ್ಲಿ ಇವರು ದಾವಣಗೆರೆಯಲ್ಲಿ ಶಾಖಾಮಠವನ್ನು ಸ್ಥಾಪಿಸಿದ್ದಾರೆ. ಚಿನ್ಮೂಲಾದ್ರಿ ಶಿಲಾಪುರಿ ಶ್ರೀ ಶ್ರೀ ಶ್ರೀ ಲೇಪಾಕ್ಷ ಮಹಾಸ್ವಾಮೀಜಿಯವರು ಈ ಶಾಖಾಮಠವನ್ನು ಉದ್ಘಾಟಿಸಿದ್ದಾರೆ. ಉಪ್ಪಾರ ಹಾಸ್ಟೆಲ್ ಮೇಲಂತಸ್ತಿನಲ್ಲಿ ಸ್ವಾಮೀಜಿಯವರ ವಾಸದ ಗೃಹ, ಆಫೀಸ್ ರೂಂ, ಮೀಟಿಂಗ್ ಹಾಲ್ ಕಟ್ಟಿಸಿದ್ದಾರೆ. ಇದಕ್ಕೆಲ್ಲಾ ದಾವಣಗೆರೆ ಸುತ್ತಮುತ್ತಲ ಸಮಾಜ ಬಾಂಧವರು ಸಹಾಯ-ಸಹಕಾರ ನೀಡಿದ್ದಾರೆ. 1998ರಲ್ಲಿ ಈ ಮಠದ ವ್ಯಾಪ್ತಿಗೊಳಪಟ್ಟ ಸಮಾಜದವರ ಸಹಕಾರದಿಂದ ಶಾಖಾಮಠದ ಗುರುಗಳ ಪಟ್ಟಾಭಿಷೇಕ ನೆರವೇರಿಸಿದ್ದಾರೆ.

ಇವರು ಬೆಂಗಳೂರಿನ ಶ್ರೀ ಭಗೀರಥ ಧಾರ್ಮಿಕ ಉಪ್ಪಾರ ಟ್ರಸ್ಟ್ ಉಪಾಧ್ಯಕ್ಷರಾದ ಸಂದರ್ಭದಲ್ಲಿ ಐದು ಲಕ್ಷ ರೂಪಾಯಿಯನ್ನು ಟ್ರಸ್ಟಿಗೆ ಡಿಪಾಜಿಟ್ ಮಾಡಿದ್ದಾರೆ. ಹದಿನಾರು ಕೊಠಡಿಗಳುಳ್ಳ ಭವ್ಯವಾದ ವಿದ್ಯಾರ್ಥಿ ನಿಲಯ ಕಟ್ಟಿಸಿದ್ದಾರೆ. ಈ ವಿದ್ಯಾರ್ಥಿನಿಲಯಕ್ಕೆ ಬಹಳಷ್ಟು ದಾನಿಗಳು ನೆರವು ನೀಡಿದ್ದಾರೆ. ಇವರ ಹೆಸರಿನಲ್ಲಿ ಒಂದು ಕೊಠಡಿ ಹಾಗು ಇವರ ಧರ್ಮಪತ್ನಿಯವರಾದ ಶ್ರೀಮತಿ ಸಣ್ಣಮ್ಮನವರ ಹೆಸರಿನಲ್ಲಿ ಒಂದು ಕೊಠಡಿ ಸೇರಿದಂತೆ

ಒಟ್ಟು ಎರಡು ಕೊಠಡಿ ಹಾಗೂ ದಾನಿಗಳ ನೆರವಿನಿಂದ ಹದಿನಾರು ಕೊಠಡಿಗಳನ್ನು ವಿದ್ಯಾರ್ಥಿ ನಿಲಯಕ್ಕೆ ಕಟ್ಟಿಸಿ ಕೊಟ್ಟಿದ್ದಾರೆ.

'ಸಮಾಜಸೇವೆ ಮಾಡಬೇಕೆಂಬ ಕಾಯಕ ನನ್ನದಾಗಿದೆ. ನಾನು ನನ್ನ ಸ್ವಂತ ಕೆಲಸಕ್ಕೆ ಗಮನ ಕೊಡುತ್ತಿಲ್ಲ. ಸೇವೆ ಮತ್ತು ಪ್ರೇಮ ನನ್ನ ಉಸಿರಾಗಿದೆ. ನಾನು ಯಾರನ್ನು ದ್ವೇಷಿಸುವುದಿಲ್ಲ, ಎಲ್ಲರನ್ನೂ ಪ್ರೀತಿಸುತ್ತೇನೆ. ನನ್ನ ಸಾಮಾಜಿಕ ಸೇವೆಗೆ ನನ್ನ ಧರ್ಮಪತ್ನಿಯಾದ ಶ್ರೀಮತಿ ಸಣ್ಣಮ್ಮ ಅವರು ಎಲ್ಲಾ ರೀತಿಯ ಸಹಕಾರ ಕೊಟ್ಟಿದ್ದಾರೆಂದು' ಶ್ರೀ ರಾಮಪ್ಪ ಹೇಳುತ್ತಾರೆ.

ನಿಮ್ಮ ಮುಂದಿನ ಯೋಜನೆಗಳೇನು ? ಎಂದು ಕೇಳಿದರೆ ಅವರು ಹೀಗೆ ಹೇಳುತ್ತಾರೆ:

ಈಗಾಗಲೇ ದಾವಣಗೆರೆ ಹಾಸ್ಟೆಲ್‌ನಲ್ಲಿ ವಿದ್ಯಾರ್ಥಿಗಳಿಗೆ ಭೋಜನ ವ್ಯವಸ್ಥೆ ಮಾಡಲಾಗಿದೆ. ಮುಂದೆ ಬಡ ವಿದ್ಯಾರ್ಥಿಗಳಿಗೆ ಉಚಿತ ಊಟದ ವ್ಯವಸ್ಥೆ ಮಾಡಬೇಕು.

ಸಮಾಜದ ವತಿಯಿಂದ ಸಾಮೂಹಿಕ ವಿವಾಹಗಳನ್ನು ನಡೆಸಬೇಕು.

ಸಮಾಜದಲ್ಲಿರುವ ಮೂಢನಂಬಿಕೆ ಹಾಗೂ ಅಂಧ ಸಂಪ್ರದಾಯಗಳನ್ನು ತೊಡೆದುಹಾಕಿ ಶುದ್ಧವಾದ ನಾಗರಿಕ ಸಮಾಜ ನಿರ್ಮಾಣ ಮಾಡಬೇಕು.

ಟ್ರಸ್ಟಿಗೆ ಒಳಪಟ್ಟ ಬೇರೆ ಬೇರೆ ಸ್ಥಳಗಳಲ್ಲಿ ವಿದ್ಯಾರ್ಥಿನಿಲಯ ಸ್ಥಾಪನೆ ಮಾಡಿ ಸಮಾಜದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಕೊಡಬೇಕು.

ಟ್ರಸ್ಟಿಗೆ ದಾವಣಗೆರೆಯ ಹತ್ತಿರ ಮೂರು ಎಕರೆ ಜಮೀನು ಕೊಂಡಿದ್ದು ಅಲ್ಲಿಯೇ ಶಾಖಾಮಠ ಸ್ಥಾಪನೆ ಮಾಡಿ ಗುರುಗಳು ಇರುವಂತೆ ಮಾಡಬೇಕು. ಧಾರ್ಮಿಕ ಪ್ರಚಾರಕ್ಕೆ ಹೆಚ್ಚಿನ ಒತ್ತು ಕೊಡಬೇಕು.

ಇವರ ಮಾತುಗಳನ್ನು ಕೇಳಿದಾಗ ಇವರಲ್ಲಿನ ಸಮಾಜ ಸೇವೆಯ ಕಳಕಳಿ ಎದ್ದು ಕಾಣುತ್ತದೆ. ಇವರ ಸರಳ ಹಾಗು ಮೃದು ಸ್ವಭಾವದ ವ್ಯಕ್ತಿತ್ವ ಎಲ್ಲರಿಗೂ ಪ್ರಿಯವಾದುದು. ತಮ್ಮ ಎಪ್ಪತ್ತೈದನೆಯ ವಯಸ್ಸಿನಲ್ಲಿಯೂ ಇವರು ಲವಲವಿಕೆಯಿಂದ, ಉತ್ಸಾಹದಿಂದ ಸಮಾಜ ಸೇವೆ ಮಾಡುವುದನ್ನು ನೋಡಿದರೆ ತುಂಬ ಆಶ್ಚರ್ಯವಾಗುತ್ತದೆ. ಸಮಾಜಸೇವೆ ಮಾಡಬೇಕೆಂಬ ಹಂಬಲ ಇವರಿಗೆ ಹಗಲಿರುಳು ಮನದಾಳದಲ್ಲಿ ತುಂಬಿದೆ. ಇಂತಹ ನಿಗರ್ವಿ ಸಮಾಜ ಸೇವಕರನ್ನು ಗುರುತಿಸುವುದು ತುಂಬ ಸ್ತುತ್ಯಾರ್ಹ ಕೆಲಸ. ಈ ಸಂದರ್ಭದಲ್ಲಿ ಇವರಿಗೆ 'ಉಪ್ಪಾರ ಕುಲ ತಿಲಕ' ಅಥವಾ 'ಉಪವೀರ ಶ್ರೇಷ್ಠ' ಎಂಬ ಬಿರುದನ್ನು ಕೊಡುವುದು ಸೂಕ್ತವಾಗಿದೆ. ನಮ್ಮ ಕುಲದೈವ ಶ್ರೀ ಚನ್ನಕೇಶವ ಹಾಗು ಕುಲಗುರುಗಳ ಆಶೀರ್ವಾದದಿಂದ ಇವರು ನೂರು ಕಾಲ ಬಾಳಲೆಂದು ಪ್ರಾರ್ಥಿಸುತ್ತೇನೆ.

*

## * ಉಪ್ಕಾರ ಕಣ್ಮಣಿ

- ಡಿ.ಜಿ. ಕಡಕೋಳ
ಸಿರಸಿ

ನಿವೃತ್ತ ಎಕ್ಸಿಕ್ಯೂಟಿವ್ ಇಂಜಿನಿಯರ್ ಶ್ರೀ ಡಿ.ಎಸ್. ರಾಮಪ್ಪ ಅವರಿಗೆ ಎಪ್ಪತ್ತೈದು ವರುಷ ತುಂಬಿದ ಶುಭಸಂದರ್ಭದಲ್ಲಿ ಸಮಾರಂಭ ಇಟ್ಟುಕೊಂಡಿರುವ ವಿಚಾರ ತಿಳಿದು ತುಂಬ ಸಂತೋಷ ವಾಯಿತು. 1960ರಲ್ಲಿ ಡಿ.ಎಸ್. ರಾಮಪ್ಪ ಅವರು ಉತ್ತರ ಕನ್ನಡ ಜಿಲ್ಲೆಯ ಶಿರಸಿ ಹಾಗು ಸಿದ್ಧಾಪುರಗಳಲ್ಲಿ ಅಸಿಸ್ಟೆಂಟ್ ಇಂಜಿನಿಯರ್ ಆಗಿದ್ದರು. ಆಗವರು ಕೆಲಸ ಮಾಡುತ್ತಿದ್ದ ರೀತಿ ಇಂದಿಗೂ ನೆನೆಸಿಕೊಳ್ಳು ವಂತಹದು. ನನ್ನ ಬೀಗರಾದ ವರ್ಕ್ ಇನ್ಸ್‌ಪೆಕ್ಟರ್ ಸತ್ಯಪ್ಪ ಬಿ. ಅಳಗುಡಿ ಮೂಲಕ ಇವರ ಪರಿಚಯವಾಯಿತು.

ಕೆಳವರ್ಗದಲ್ಲಿ ಹುಟ್ಟಿ ವಿದ್ಯಾವಂತರಾಗಿ ದೊಡ್ಡ ಕೆಲಸಕ್ಕೆ ಸೇರಿದ ವ್ಯಕ್ತಿಗಳ ಮನೋಭಾವವೇ ಬೇರೆಯಾಗಿರುತ್ತದೆ. ಅವರ ದೃಷ್ಟಿಯೆಲ್ಲಾ ಮೇಲ್ಮುಖವಾಗಿರುತ್ತದೆ. ತಾವೂ ಅವರಂತಾಗ ಬೇಕೆಂಬ, ಲೌಕಿಕವಾಗಿ ದೊರೆಯುವ ಎಲ್ಲ ಸವಲತ್ತುಗಳನ್ನು ತಮ್ಮ ಕುಟುಂಬಕ್ಕೆ ದೊರಕಿಸಿಕೊಡಬೇಕೆಂಬ ಛಲ ಅವರಲ್ಲಿರುತ್ತದೆ. ತಮ್ಮ ಸಮುದಾಯದ ಬಗ್ಗೆ ಸದಾ ಅಸಮಾಧಾನವಿರುತ್ತದೆ. ಇಂತಹ ವಿರೋಧಾಭಾಸಗಳ ನಡುವೆ ಡಿ.ಎಸ್. ರಾಮಪ್ಪನವರು ಪ್ರತ್ಯೇಕ ವಾಗಿ ನಿಲ್ಲವಂತಹವರು. ಅಂದಮಾತ್ರಕ್ಕೆ ಮೇಲ್ವರ್ಗದವರನ್ನು ವೃಥಾ ಕೆರಳಿಸಿ ಸ್ವಾರ್ಥ ಸಾಧಿಸಿಕೊಳ್ಳುತ್ತಿರಲಿಲ್ಲ. ತಮ್ಮ ಪ್ರಾಮಾಣಿಕ ನಡೆ-ನುಡಿಯಿಂದ ಎಲ್ಲರ ವಿಶ್ವಾಸಗಳಿಸಿದ್ದರು. ಇದೇ ಅವರ ಯಶಸ್ಸಿನ ಗುಟ್ಟು.

ನನ್ನ ಪರಿಚಯವಾದಮೇಲೆ ಒಮ್ಮೆ ರಾತ್ರಿಯೂಟಕ್ಕೆ ಅವರ

ಮನೆಗೆ ಆಹ್ವಾನಿಸಿದ್ದರು. ಏನೂ ಗೊತ್ತಿಲ್ಲದ ನನಗೆ ಅಂದು ಅವರು 5,000 ರೂಪಾಯಿಗಳ ಕೆಲಸ ಕೊಟ್ಟರು. ಕಾಮಗಾರಿಯ ಬಗ್ಗೆ ನನಗೆ ಸಾಮಾನ್ಯ ಜ್ಞಾನವೂ ಇರಲಿಲ್ಲ. ಅವರೇ ನನ್ನೊಡನೆ ಮಾತನಾಡಿ 'ಸಂಕೋಚ ಬೇಡ, ಪ್ರಾಮಾಣಿಕವಾಗಿ ಕೆಲಸಮಾಡಿ, ಮೇಲೆ ಬರಬಹುದು' ಎಂದರು. ಅವರ ಮಾತಿನಂತೆ ನಡೆದು ಇಂದು ಮೊದಲ ದರ್ಜೆ ಕಂಟ್ರಾಕ್ಟರ್ ಆಗಿದ್ದೇನೆ. ಅದು ಅವರು ಕೇವಲ ಉಪ್ಪಾರರಿಗೆ ಕೊಟ್ಟಿಲ್ಲ, ಹತ್ತಾರು ಬಡವರಿಗೆ ಉಪಕಾರ ಮಾಡಿದ್ದಾರೆ. ಅವರೆಲ್ಲಾ ಇಂದಿಗೂ ರಾಮಪ್ಪ ಅವರ ಹೆಸರು ಹೇಳಿಕೊಂಡು ಬದುಕುತ್ತಿದ್ದಾರೆ.

ಆ ಕಾಲದಲ್ಲಿ ನಮ್ಮಂತಹವರಿಗೆ ಪಿಡಬ್ಲ್ಯೂಡಿ ಕೆಲಸ ಕೊಡಬೇಕಾದರೆ ರಾಮಪ್ಪ ಅವರ ವ್ಯಕ್ತಿತ್ವ ಎಂತಹದು ಎಂಬುದನ್ನು ಯೋಚಿಸಿ. ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದವರು ಮಾತ್ರ ಇಂತಹ ಧೈರ್ಯ ವಹಿಸಬಹುದು. ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೇಳಿದಂತೆ ಯಾವುದೇ ಪ್ರತಿಫಲಾಪೇಕ್ಷೆಯನ್ನು ಬಯಸದೆ ಕೆಲಸ ಮಾಡುವ ಪ್ರವೃತ್ತಿ ರಾಮಪ್ಪ ಅವರದು.

ರಾಮಪ್ಪ ಅವರಲ್ಲಿ ಇಂತಹ ಲೋಕೋತ್ತರವಾದ ಗುಣ ಬೆಳೆಯಲು ಕಾರಣ ಅವರ ಬಾಲ್ಯದ ಪರಿಸರ. ಬಾಲ್ಯದಲ್ಲೇ ತಾಯಿಯನ್ನು ಕಳೆದುಕೊಂಡು ಬೇರೆಯವರ ಮನೆಯಲ್ಲಿ ಬೆಳೆದ ರಾಮಪ್ಪ ಅವರ ಬದುಕೇ ಒಂದು ಹೋರಾಟ. ತ್ಯಾಗ, ಪರೋಪಕಾರ, ಕಷ್ಟಸಹಿಷ್ಣುತೆ ಹಾಗು ತಾಳ್ಮೆ ಅವರ ಜೀವನಮಂತ್ರವಾಗಿತ್ತು. ಹಣತೆ ಉರಿದು ಲೋಕಕ್ಕೆ ಬೆಳಕು ಕೊಡುತ್ತದೆ. ಬೆಳಕನ್ನು ಕೊಡುತ್ತಲೇ ಅದು ನಶಿಸಿಹೋಗಬಹುದು. ಆದರೆ ಅದು ಉರಿದಷ್ಟು ಕಾಲ ಲೋಕದಲ್ಲಿ ಕತ್ತಲೆಯ ವಿರುದ್ಧ ಹೋರಾಡಿದ ಸಂತೃಪ್ತಿ ಅದಕ್ಕಿದೆ. ಬೆಳಕು ಕಿರಿದಾಗಿರಬಹುದು. ಆದರೆ ಮಹತ್ವ ಕಡಿಮೆಯಿಲ್ಲ. ಶ್ರೀ ಡಿ.ಎಸ್. ರಾಮಪ್ಪ ಅವರದು ಇಂತಹ ನಿಸ್ಪೃಹವಾದ ವ್ಯಕ್ತಿತ್ವ. ತಮ್ಮಷ್ಟಕ್ಕೆ ತಾವೇ ಕೆಲಸ ಮಾಡುತ್ತಾ ತಮ್ಮ ಸುತ್ತಮುತ್ತಲಿನ ಪರಿಸರವನ್ನು ಬೆಳಗಿಸುತ್ತಾ ಕಿರಿಯರಿಗೆ ದಾರಿ ತೋರಿಸುತ್ತಾ ಸಾಗುತ್ತಾರೆ. ಇಂತಹವರ ಸಂಖ್ಯೆ ಹೆಚ್ಚಾದರೆ ಆ ಸಮಾಜ ಸಮೃದ್ಧವಾಗುವುದರಲ್ಲಿ ಸಂಶಯವಿಲ್ಲ. ನಮ್ಮ ಸಮುದಾಯದ ಕಿರಿಯರು ಡಿ.ಎಸ್. ರಾಮಪ್ಪ ಅವರಿಂದ ಸ್ಫೂರ್ತಿ ಪಡೆಯಲೆಂದು ಆಶಿಸುತ್ತೇನೆ.

*

# * ಬಡತನದ ಬೇಗೆಯಲ್ಲಿ ಅರಳಿದ ಪುಷ್ಪ

– ಯು. ಶಿವನಪ್ಪ
ನಲ್ಲೂರು

ಆ ಪುಷ್ಪವೇ ದೇವರಹಳ್ಳಿಯ ಸನ್ಮಾನ್ಯ ಡಿ.ಎಸ್. ರಾಮಪ್ಪ.

ದೇವರಹಳ್ಳಿ ಚನ್ನಗಿರಿ ತಾಲ್ಲೂಕಿನ ಪ್ರಮುಖ ಗ್ರಾಮಗಳಲ್ಲಿ ಒಂದು. ಗ್ರಾಮಕ್ಕೆ ಹೊಂದಿಕೊಂಡಂತೆ ಒಂದು ಗಿರಿಧಾಮ, ಮೇಲೇರಲು ನೂರಾರು ಸೋಪಾನಗಳು, ಸೋಪಾನಗಳ ಎಡ, ಬಲಗಳಲ್ಲಿ ಹಲವಾರು ದೇವತೆಗಳ ಸಣ್ಣ ಪುಟ್ಟ ದೇವಾಲಯಗಳು. ವರ್ಷಕ್ಕೊಮ್ಮೆ ಕಂಗೊಳಿಸಿ ನಿರಾಡಂಬರವಾಗಿ ನಿಂತಿರುವ ರಥ. ಬಲಗಡೆ ತಿರುಗಿ ನೋಡಿದಾಗ ವಿಶಾಲವಾದ ಸಿಹಿನೀರಿನ ಹೊಂಡ. ಸ್ವಲ್ಪ ದೂರದಲ್ಲಿಯೇ ಕರಿಯಮ್ಮನ ಭವ್ಯ ಮಂದಿರ. ಹೀಗೆ ಹಲವಾರು ದೃಶ್ಯಗಳೊಂದಿಗೆ ಮೇಲೇರಿದಾಗ ತುತ್ತ ತುದಿಯಲ್ಲಿ ವಿಶಾಲವಾದ ಮೈದಾನ. ಅಲ್ಲಿರುವುದೇ ಇತಿಹಾಸ ಪ್ರಸಿದ್ಧವಾದ ಶ್ರೀಲಕ್ಷ್ಮೀ ರಂಗನಾಥಸ್ವಾಮಿಯ ಭವ್ಯ ದೇವಾಲಯ. ಪೂರ್ವಾಭಿಮುಖವಾಗಿ ಕುಳಿತಿರುವ, ಶ್ರೀರಂಗನಾಥಸ್ವಾಮಿ. ಪಶ್ಚಿಮಾಭಿಮುಖವಾಗಿ ಕುಳಿತಿರುವ ಶ್ರೀಲಕ್ಷ್ಮೀದೇವಿ. ಭಕ್ತರ ಕಣ್ಮನ ಸೆಳೆಯುವ ಗರುಡ ಹಾಗು ತೇಜಿಸ್ವಾಮಿಯನ್ನೊಳಗೊಂಡ ಹಲವಾರು ದೇವತೆಗಳ ಪೂಜೆಯನ್ನು ಸಾವಿರಾರು ವರ್ಷಗಳಿಂದ ವಿಧಿವತ್ತಾಗಿ ನಡೆದುಕೊಂಡು ಬರಲಾಗುತ್ತಿದೆ. ಗ್ರಾಮದ ಹೆಸರಿಗೆ ತಕ್ಕಂತೆ ದೇವರ ಮಹಿಮೆಯನ್ನು ಕಾಪಾಡಿಕೊಂಡು ಬರುತ್ತಿರುವ ಭಕ್ತರಲ್ಲಿ ನ್ಯಾಯ, ನೀತಿ, ಧರ್ಮ, ಸತ್ಯ, ಈ ಕಾಲದಲ್ಲೂ ವಿರಾಜಿಸುತ್ತದೆ. ಲಕ್ಷೋಪಲಕ್ಷ ಭಕ್ತಾದಿಗಳ ಇಷ್ಟಾರ್ಥಗಳನ್ನು ನೆರವೇರಿಸಿಕೊಡುತ್ತಿರುವ ಶ್ರೀಲಕ್ಷ್ಮೀರಂಗನಾಥ

ಸ್ವಾಮಿ ರಥೋತ್ಸವ ವರ್ಷಕ್ಕೊಮ್ಮೆ ಬಹು ವಿಜೃಂಭಣೆಯಿಂದ ನಡೆದು ದೇವರಹಳ್ಳಿ ಪುಣ್ಯಕ್ಷೇತ್ರವೆಂಬ ಹೆಸರು ಪಡೆದಿದೆ.

ಜನನ : ಇಂತಹ ಪುಣ್ಯಕ್ಷೇತ್ರದಲ್ಲಿ ಮುಗ್ಧ, ಕಡು, ಬಡಕುಟುಂಬ ಒಂದರಲ್ಲಿ ತಾ. 28-6-1928 ರಲ್ಲಿ ಜನಿಸಿದ ಮಗುವೇ ಡಿ.ಎಸ್. ರಾಮಪ್ಪ. ಇವರ ತಂದೆ ಸಿಕ್ಕುಡಿಯಪ್ಪ, ತಾಯಿ ಕರಿಯಮ್ಮ. ಕೂಲಿಯಿಂದಲೇ ಜೀವಿಸುತ್ತಿದ್ದರು. ಹೊಟ್ಟೆಯ ಪಾಡೇ ಕಷ್ಟವಾಗಿರುವಾಗ ಈ ಮಗುವನ್ನು ಸಾಕುವುದು ಎಷ್ಟು ಕಷ್ಟ ಎಂಬುದು ಅವರ ಚಿಂತೆಯಾಗಿತ್ತು. ಹೀಗಿರುವಾಗ ಐದನೆಯ ವರ್ಷಕ್ಕೆ ಇವರ ತಾಯಿ ತೀರಿಹೋದರು. ತಂದೆ ಸಿಕ್ಕುಡಿಯಪ್ಪ ಕಂಗಾಲಾದರು. ದಿಕ್ಕೇ ತೋಚದಾಯಿತು. ಅಪಾರ ಬಂಧುಗಳಿದ್ದರೂ ಯಾರೂ ಸಹಾಯ ಮಾಡುವ ಸ್ಥಿತಿಯಲ್ಲಿರಲಿಲ್ಲ. ತಾಯಿ ದಿ|| ಕರಿಯಮ್ಮನ ತೌರೂರು ಕುಳೇನೂರಿಗೆ ಮಗುವನ್ನು ಕಳುಹಿಸುವಂತೆ ಆಜುಬಾಜು ಮನೆಯವರು ಸಿಕ್ಕುಡಿಯಪ್ಪನಿಗೆ ಮಾರ್ಗದರ್ಶನ ಮಾಡಿದರು. ಅಂತೂ ಮಗು ತಾಯಿಯ ತೌರುಮನೆ ಸೇರಿತು. ಅಲ್ಲಿಯೂ ಸುಖ ಸಮೃದ್ಧಿ ಕಾಣಲಾಗಲಿಲ್ಲ. ತಂದೆ ದೇವರಹಳ್ಳಿಯಲ್ಲಿಯೇ ಕೂಲಿ ಮಾಡಿಕೊಂಡು ಬಹು ಕಷ್ಟದಿಂದಲೇ ಜೀವಿಸುತ್ತಿದ್ದರು. ವಿದ್ಯೆಯ ಗಂಧವೇ ಇಲ್ಲದ ಆವೊಂದು ಕಾಲದಲ್ಲಿ ಮಗುವನ್ನು ಶಾಲೆಗೆ ಸೇರಿಸಿದ್ದು ನಿಜಕ್ಕೂ ದೊಡ್ಡ ಆಕಸ್ಮಿಕ ಘಟನೆಯೆಂದೇ ಹೇಳಬೇಕು. ಪ್ರಾಥಮಿಕ ಶಾಲೆಯ ಎರಡು ತರಗತಿಗಳನ್ನು ಮುಗಿಸಿದ ವೇಳೆಗೆ ಮಗು ತನ್ನ ಎಂಟನೆ ವಯಸ್ಸಿನಲ್ಲಿ ತನ್ನ ತಂದೆಯನ್ನೂ ಕಳೆದುಕೊಂಡಿತು. ಆಗಿನ ಕಾಲದಲ್ಲಿ 2-3ನೆಯ ತರಗತಿಯೇ ದೊಡ್ಡ ವಿದ್ಯೆಯಾಗಿತ್ತು. ತಂದೆ ತಾಯಿಯನ್ನು ಕಳೆದುಕೊಂಡು ಮಗು ಅನಾಥವಾದರೂ ಮಗುವಿಗೆ ವಿದ್ಯೆಯ ರಕ್ಷಣೆ ದೊರೆಯಿತು. ಅಜ್ಜ, ಅಜ್ಜಿ, ಸೋದರಮಾವ, ಮಗುವಿನ ಕಡೆ ಗಮನಹರಿಸಲಾಗಿ ನಾಲ್ಕನೆಯ ತರಗತಿಯನ್ನು ಮುಗಿಸಿದರು.

ಮುಂದಿನ ತರಗತಿಗೆ ಸೇರಿಸಲು ಸಂತೆಬೆನ್ನೂರು ಶ್ಯಾನಭೋಗ್ ಸುಬ್ಬರಾಯರ ಆಶ್ರಯ ಪಡೆಯಬೇಕಾಯಿತು. ವಿದ್ಯೆಯ ಮಹತ್ವವನ್ನರಿತ ಸುಬ್ಬರಾಯರು ಹುಡುಗನ ಬುದ್ಧಿವಂತಿಕೆ, ತೀಕ್ಷ್ಣ ಸ್ವಭಾವ, ಚಟುವಟಿಕೆಯನ್ನು ಗಮನಿಸಿ, ಹಲವಾರು ಕಡೆಯಿಂದ ಸಹಾಯ ಪಡೆದು ಲೋಯರ್ ಸೆಕೆಂಡರಿಯವರೆಗೂ ಓದಿಸಿದರು.

ಆ ಕಾಲದಲ್ಲಿ ಪ್ರೌಢಶಾಲೆ ಸೇರಲು ಜಿಲ್ಲಾ ಕೇಂದ್ರಗಳಿಗೆ ಹೋಗಬೇಕಿತ್ತು. ಲೋಯರ್ ಸೆಕೆಂಡರಿ ಮುಗಿಸಿದ್ದೇ ಪವಾಡಸದೃಶವಾದಾಗ ಪ್ರೌಢಶಿಕ್ಷಣ ಮುಗಿಸುವುದು ಹೇಗೆಂದು ಹಂಬಲಿಸಿದರು. ಸೋದರಮಾವ ಹಾಗು ಶ್ಯಾನುಭೋಗ್ ಸುಬ್ಬರಾಯರು ನಾಲ್ಕಾರು ಸಲ ಕೂಡಿ ಮುಂದಿನ ವ್ಯಾಸಂಗದ ಬಗ್ಗೆ ಸಮಾಲೋಚನೆ ನಡೆಸಿದರು. ಆ ಸಂದರ್ಭದಲ್ಲಿ ಹುಡುಗನು ತೋರಿದ ಆಸೆಯನ್ನು ಕಂಡು ಅವರು ಓದಿಸಲೇಬೇಕೆಂದು ದೃಢ ಸಂಕಲ್ಪ ಮಾಡಿದರು. ಮೈಸೂರು ಸಂಸ್ಥಾನದಲ್ಲಿ ವಿದ್ಯೆಯ ಆರಂಭಿಕ ಕಾಲವೂ ಅದೇ ಆಗಿತ್ತು. ಶ್ರೀಯುತ ಶ್ಯಾನುಭೋಗ ಸುಬ್ಬರಾಯರು ಹುಡುಗನನ್ನು ಶಿವಮೊಗ್ಗಕ್ಕೆ ಕರೆದೊಯ್ದು ವಿದ್ಯಾಭಿಮಾನಿಯಾದ ಸ್ವಜಾತಿಯ

ಹನುಮಂತಪ್ಪನವರಿಗೆ ಪರಿಚಯಿಸಿದರು. ಹುಡುಗನ ಕಲಿಕೆಯ ಆಸಕ್ತಿ ಹಾಗು ಜಾಣ್ಮೆಯನ್ನು ಗುರುತಿಸಿದ ಹನುಮಂತಪ್ಪನವರು ಶ್ರಮಪಟ್ಟು ಏಳು ವಾರದ ಮನೆಗಳನ್ನು ನಿಗದಿ ಮಾಡಿಕೊಟ್ಟರು. ಬೆಳಗಿನ ತಿಂಡಿ ಅಕೌಂಟೆಂಟ್ ಎಸ್. ನಾಗಪ್ಪನವರ ಮನೆಯಲ್ಲಿ ನಿಗದಿಯಾಗಿದ್ದು ಹುಡುಗನ ಪುಣ್ಯವೇ ಸರಿ. ಶಾಲಾವೇಳೆಗೆ ಅಡುಗೆಯಾಗದ ಸಂದರ್ಭಗಳಲ್ಲಿ ಬೆಳಗಿನ ತಿಂಡಿಯೇ ದಿನವಿಡಿಯ ಆಹಾರವಾಗುತ್ತಿತ್ತು. ಶ್ರೀಯುತ ಎಸ್. ನಾಗಪ್ಪನವರ ಮಮಕಾರದಿಂದ, ಹೊಳೆಹೊನ್ನೂರು, ಭದ್ರಾವತಿ, ಬೀರೂರು, ತರೀಕೆರೆಯ ಕುಲಬಾಂಧವರ ಪರಿಚಯ ಮಾಡಿಕೊಟ್ಟರು. ರಜಾದಿನಗಳಲ್ಲಿ ಅಭಿಮಾನಿಗಳ ಭೇಟಿ ಮಾಡಿ ಸ್ವಲ್ಪ ಹಣ ಸಂಗ್ರಹಿಸಿಕೊಂಡು ಅಗತ್ಯದ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದರು. ಆ ವೇಳೆಗೆ ರಾಷ್ಟ್ರೀಯ ಕಾರ್ಯಚಟುವಟಿಕೆಯಲ್ಲಿ ವಿಧಿವತ್ತಾಗಿ ಭಾಗವಹಿಸಿ ಹಲವಾರು ಸ್ನೇಹಿತರನ್ನು ಮಾಡಿಕೊಂಡರು. ಹೊಟ್ಟೆ, ಬಟ್ಟೆಯ ತೊಂದರೆಗಳನ್ನು ಸ್ನೇಹಿತರಿಗೆ ತಿಳಿಸದೆ ಅಭಿಮಾನಿಗಳ ತಾತ್ಕಾಲಿಕ ನೆರವಿನಿಂದ ಪ್ರೌಢಶಿಕ್ಷಣವನ್ನು ಮುಗಿಸಿದರು. 1946-1947ರಲ್ಲಿ ಶಿವಮೊಗ್ಗ ಸಹ್ಯಾದ್ರಿ ಕಾಲೇಜು ಸೇರಿದ ಕೆಲವೇ ದಿನಗಳಲ್ಲಿ ಭಾರತದಾದ್ಯಂತ ಸ್ವಾತಂತ್ರ್ಯ ಹೋರಾಟ ಪ್ರಾರಂಭವಾಯಿತು. ಸನ್ಮಾನ್ಯ ದಿ॥ ಶಾಂತವೇರಿ ಗೋಪಾಲಗೌಡ, ಸಂತೋಜಿರಾವ್, ಪಾಪಣ್ಣ ಇವರ ನೇತೃತ್ವದಲ್ಲಿ ಶಾಲಾ ಕಾಲೇಜುಗಳು ಈ ಅಂದೋಲನದಲ್ಲಿ ಸಕ್ರಿಯವಾಗಿ ಪಾಲುಗೊಂಡು ಶ್ರೀಯುತ ಡಿ.ಎಸ್. ರಾಮಪ್ಪನವರು ಅಪಾರ ಸ್ನೇಹಿತರೊಂದಿಗೆ ಜೈಲು ಸೇರಿದರು. ಆ ವರ್ಷ ಪರೀಕ್ಷೆಯನ್ನೇ ನಡೆಸದೆ ವಿದ್ಯಾರ್ಥಿಗಳನ್ನೆಲ್ಲಾ ಸಾಮೂಹಿಕವಾಗಿ ಇಂಟರ್‌ಮಿಡಿಯೇಟ್ ಸೀನಿಯರ್ ತರಗತಿಗೆ ಕಳುಹಿಸಲಾಯಿತು. ಅವಿಶ್ರಾಂತ ಶ್ರಮದ ಫಲವಾಗಿ ಬುನಾದಿಯಿಲ್ಲದೆ ಸೇರಿದ ತರಗತಿಯನ್ನೂ ನಿರಾಯಾಸವಾಗಿ ಮುಗಿಸಿದರು. ಮುಂದಿನ ತರಗತಿಗೆ ಹೋಗಲು ಅಪಾರ ಹಣದ ಕೊರತೆಯಾಗಬಹುದೆಂದು ಮನಗಂಡು, ಶ್ರೀಯುತ ನಾಗಪ್ಪನವರ ಪ್ರೇರಣೆಯಂತೆ ಭದ್ರಾ ನೀರಾವರಿ ಇಲಾಖೆಯಲ್ಲಿ ನೌಕರಿಗೆ ಸೇರಿಕೊಂಡರು. ಹಾಗು ಹೀಗೂ ಸ್ವಲ್ಪ ಹಣ ಕ್ರೋಡೀಕರಿಸಿಕೊಂಡರು. ಮುಂದಿನ ವ್ಯಾಸಂಗಕ್ಕಾಗಿ ಪರಿತಪಿಸುತ್ತಿದ್ದ ಡಿ.ಎಸ್. ರಾಮಪ್ಪನವರನ್ನು ಕಂಡ ಅದೇ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದ ಇಂಜಿನಿಯರ್ ನಂಜುಂಡಯ್ಯನವರು, ಬಿ.ಇ. ತರಗತಿಗೆ ಸೇರಬೇಕೆಂದು ಮಾರ್ಗದರ್ಶನ ಮಾಡಿದರು. ದಿಗ್ಭ್ರಮೆಗೊಂಡ ಡಿ.ಎಸ್. ರಾಮಪ್ಪನವರು, ತಂದೆ, ತಾಯಿ ಹಾಗು ಪಾಲಕರೇ ಇಲ್ಲದ ಈ ಅನಾಥ ವ್ಯಕ್ತಿ ಇಂಜನಿಯರಿಂಗ್ ಪಾಸು ಮಾಡಲು ಸಾಧ್ಯವೇ? ಎಂದು ಆಪ್ತ ಗೆಳೆಯರೆಲ್ಲರನ್ನೂ ಪ್ರಶ್ನೆ ಮಾಡಿ ಕೇಳಿದರು. ಮನಸ್ಸು ದೃಢಪಡಿಸಿಕೊಂಡರು. ಆ ವೇಳೆಗೆ ಸರಿಯಾಗಿ ಶಿವಮೊಗ್ಗ ಜಿಲ್ಲೆಯ ಕುಂಸಿ ಗ್ರಾಮದ ಶ್ರೀ ಬಾಬು ಹುಚ್ಚಣ್ಣನವರು ವರಾನ್ವೇಷಣೆ ನಡೆಸಿದ್ದರು. ಹಲವರ ಪ್ರಯತ್ನದಿಂದಾಗಿ ಅವರು ತಮ್ಮ ಮಗಳು ಸಣ್ಣಮ್ಮನವರನ್ನು ಶ್ರೀ ರಾಮಪ್ಪನವರಿಗೆ ಕೊಟ್ಟು

ವಿವಾಹ ನೆರವೇರಿಸಿದರು. ವ್ಯಾಸಂಗದ ಮಧ್ಯದಲ್ಲಿಯೇ ಮದುವೆಯಾದರೂ ನಿರಾತಂಕವಾಗಿ ಬಹು ಸುಲಭವಾಗಿ ಉಳಿದ ತರಗತಿಗಳಲ್ಲಿ ಉತ್ತೀರ್ಣರಾದರು.

**ನೌಕರಿ** : 1954ರಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಸೂಪರ್‌ವೈಜರ್ ಆಗಿ ನೇಮಕಗೊಂಡು ಮೂರು ವರ್ಷ ತೀರ್ಥಹಳ್ಳಿ, ಮೂರು ವರ್ಷ ನರಸಿಂಹರಾಜಪುರದಲ್ಲಿ ಸೇವೆ ಸಲ್ಲಿಸಿದರು. ದಕ್ಷ ಆಡಳಿತಗಾರರೆನಿಸಿದ್ದ ಎಸ್.ಕೆ. ಹನುಮಂತರೆಡ್ಡಿಯವರ ಮಾರ್ಗದರ್ಶನದಲ್ಲಿ ಉತ್ತಮ ಸೇವೆ ಸಲ್ಲಿಸುವ ಅವಕಾಶ ಇರಿಗೆ ದೊರಕಿತ್ತು. 1960ರಲ್ಲಿ ಬಡ್ತಿ ಪಡೆದು ಕಾರವಾರ ಜಿಲ್ಲೆ ಸಿದ್ದಾಪುರದಲ್ಲಿ ಐದು ವರ್ಷ ಕಾರ್ಯನಿರ್ವಹಿಸಿ, ಕೊಡಗು ಜಿಲ್ಲೆ ವಿರಾಜಪೇಟೆಗೆ ನಂತರ ಕಾರವಾರ ಜಿಲ್ಲೆ ಕುಮಟ, ಮುಂಡಗೋಡಿನಲ್ಲಿ ಸೇವೆ ಸಲ್ಲಿಸಿದರು. 1972ರಲ್ಲಿ ರಾಯಚೂರು ಜಿಲ್ಲೆ ಕುಷ್ಟಗಿಯಲ್ಲಿ ಮೂರು ವರ್ಷ, ಹೊಸಪೇಟೆಯಲ್ಲಿ ಮೂರು ವರ್ಷ, ಹೂವಿನ ಹಡಗಲಿಯಲ್ಲಿ ಎರಡು ವರ್ಷ ಸೇವೆ ಸಲ್ಲಿಸಿದರು. ಕಾರ್ಯಪಾಲಕ ಅಭಿಯಂತರಾಗಿ ಬಡ್ತಿ ಪಡೆದು ಶಿವಮೊಗ್ಗ ಜಿಲ್ಲೆ ಸಾಗರದಲ್ಲಿ ಮೂರು ವರ್ಷ ಸೇವೆ ಸಲ್ಲಿಸಿ ದಿನಾಂಕ 30-6-1983 ರಲ್ಲಿ ನಿವೃತ್ತಿ ಹೊಂದಿದರು.

ಬಡತನದ ಬವಣೆಯಿಂದ ಉನ್ನತ ಸ್ಥಾನಕ್ಕೇರಿದ ಶ್ರೀಯುತ ಡಿ.ಎಸ್. ರಾಮಪ್ಪನವರು ತಮ್ಮ ಸರ್ಕಾರಿ ಸೇವೆಯ ಸುದೀರ್ಘಾವಧಿಯಲ್ಲಿ ಹಲವಾರು ಬಡ ವಿದ್ಯಾರ್ಥಿಗಳಿಗೆ, ಬಡ ರೋಗಿಗಳಿಗೆ ಹಾಗು ನಿರ್ಗತಿಕರಿಗೆ ಹಲವಾರು ರೀತಿಯ ಸಹಾಯ ಮಾಡಿ ತಮ್ಮ ವಿದ್ಯಾರ್ಥಿ ಜೀವನದ ಋಣ ತೀರಿಸಿಕೊಳ್ಳಲು ನಡೆಸಿದ ಪ್ರಯತ್ನ ನಿಜಕ್ಕೂ ಮನನೀಯ. ನಿವೃತ್ತರಾದಮೇಲೆ ತಮ್ಮ ಜನಾಂಗದವರು ಅಧಿಕವಾಗಿರುವ ಚಿತ್ರದುರ್ಗ ಹಾಗು ಶಿವಮೊಗ್ಗ ಜಿಲ್ಲೆಯ ಕೇಂದ್ರ ಬಿಂದುವಿನಂತಿರುವ ದಾವಣಗೆರೆಯಲ್ಲಿ ವಾಸ್ತವ್ಯ ಹೂಡಿ, ಆಜುಬಾಜು ಜಿಲ್ಲೆಗಳ ಕುಲಬಂಧುಗಳೊಡನೆ ತಾವಾಗಿಯೇ ಬೆರೆತು ಅವರ ಪ್ರೀತಿ, ವಿಶ್ವಾಸ, ಆತ್ಮೀಯತೆಗೆ ಪಾತ್ರರಾದರು. ಅವರ ನಡೆ, ನುಡಿ, ಆಚಾರ ವಿಚಾರ ಹಾಗು ಅವರಿಗೆ ಜನಾಂಗದ ಬಗ್ಗೆ ಇದ್ದ ಅಭಿಮಾನ ಕಂಡು ಸರ್ವರೂ ಮಾನ್ಯತೆ ನೀಡಿ ತಮ್ಮ ಮುಖಂಡರೆಂದು ಪರಿಗಣಿಸಿದರು. ದಾವಣಗೆರೆ ತಾಲ್ಲೂಕಿನ ಕುಲಬಂಧುಗಳು ಅವರಿಗೆ ಸ್ಪಂದಿಸಿದ ರೀತಿ ನಿಜಕ್ಕೂ ಅಮೋಘ. ಅನಂತರ ಶಿವಮೊಗ್ಗ ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾದರು. ಎಲೆ ಮರೆಯ ಕಾಯಿನಂತೆ ಸೇವೆ ಮಾಡುತ್ತಿದ್ದ ಡಿ.ಎಸ್. ರಾಮಪ್ಪನವರು, ಅಧಿಕೃತ ಸ್ಥಾನದಿಂದ ನಿವೃತ್ತರಾದ ಬಳಿಕ ಸೇವೆಗೆ ಹೊರಬಂದರು. ಸಮಾಜದ ಪ್ರಗತಿಗೆ ವಿದ್ಯೆಯೇ ಪ್ರಥಮ ಸೋಪಾನವೆಂದರಿತಿದ್ದ ಅವರು ವಿದ್ಯಾರ್ಥಿನಿಲಯದ ಅಭಿವೃದ್ಧಿ ಕಡೆ ಗಮನಹರಿಸಿದರು. ಈ ಮೊದಲೇ ಅಪೂರ್ಣಗೊಂಡಿದ್ದ ವಿದ್ಯಾರ್ಥಿನಿಲಯವನ್ನು ಪೂರ್ಣಗೊಳಿಸಿದರು.

'ಮನೆ ಗೆದ್ದು ಮಾರು ಗೆಲ್ಲು' ಎನ್ನುವ ನಾಣ್ಣುಡಿಯಂತೆ ತಮ್ಮ ಜಿಲ್ಲೆ ಹಾಗು ಆಜುಬಾಜು ಜಿಲ್ಲೆಗಳ ಸೇವೆಯ ನಂತರ 1984ರಲ್ಲಿ ಕರ್ನಾಟಕ ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾಗಿ

ಅವಿರೋಧವಾಗಿ ನೇಮಕಗೊಂಡರು. ಅವರ ಕಾರ್ಯಕ್ಷೇತ್ರ ವಿಶಾಲವಾದಷ್ಟೂ ಕಾರ್ಯಚಟುವಟಿಕೆ ಅತಿ ಚುರುಕಾಯಿತು. ಕುಲಗುರುಗಳಾದ ಶ್ರೀ ಶ್ರೀ ಶ್ರೀ ಲೇಪಾಕ್ಷ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಭಗೀರಥ ಧಾರ್ಮಿಕ ಉಪ್ಪಾರ ಟ್ರಸ್ಟ್ ರಚಿಸಿದರು. ಉಪ್ಪಾರ ಜನಾಂಗದಲ್ಲೇ ಉನ್ನತ ಹುದ್ದೆಯಲ್ಲಿದ್ದು, ಸಮಾಜದ ಏಳಿಗೆಗಾಗಿ ಪರೋಕ್ಷವಾಗಿ ಅಹೋರಾತ್ರಿ ಶ್ರಮಿಸುತ್ತಿದ್ದ ಶ್ರೀಯುತ ಎಚ್.ಸಿ. ನೀರಾವರಿಯವರ ಸಲಹೆ ಸಹಕಾರದಿಂದ ಕತ್ತರಗುಪ್ಪೆ ಬಡಾವಣೆಯಲ್ಲಿ ಮೂರು ಸೈಟುಗಳ ಒಂದು ನಿವೇಶನವನ್ನು ಖರೀದಿಸಿ, ವಿದ್ಯಾರ್ಥಿನಿಲಯ ಹಾಗು ಕುಲಗುರುಗಳು ರಾಜಧಾನಿಗೆ ಬಂದಾಗ ತಂಗಲು ವ್ಯವಸ್ಥಿತ ಕೊಠಡಿಗಳನ್ನು ನಿರ್ಮಿಸಿದ ಕೀರ್ತಿ ಶ್ರೀಯುತ ಡಿ.ಎಸ್. ರಾಮಪ್ಪ ಮತ್ತು ಶ್ರೀಯುತ ಎಚ್.ಸಿ. ನೀರಾವರಿಯವರಿಗೆ ಸಲ್ಲುತ್ತದೆ.

ಸಮಾಜದ ದುರ್ದೈವ ಎಂಬಂತೆ 1995-96ರಲ್ಲಿ ರಾಜ್ಯ ಸಂಘದ ಸರ್ವಸದಸ್ಯರ ಸಭೆಯಲ್ಲಿ ಅಧ್ಯಕ್ಷಸ್ಥಾನಕ್ಕಾಗಿ ಕೋಲಾಹಲವೇ ಪ್ರಾರಂಭವಾಗಿ ಸಭೆ ಅಪೂರ್ಣಗೊಂಡಿತು. ಅಂದಿನಿಂದ ಡಿ.ಎಸ್. ರಾಮಪ್ಪನವರು ರಾಜ್ಯ ಸಂಘದ ಚಟುವಟಿಕೆಯಿಂದ ದೂರವಾದರು. ರಾಜ್ಯ ಸಂಘದಿಂದ ಹಿಂದೆ ಸರಿದರೂ ಸಮಾಜಸೇವೆಯಿಂದ ದೂರವಾಗಲಿಲ್ಲ. ಕುಲಗುರುಗಳ ಸಾನ್ನಿಧ್ಯದಲ್ಲಿ ಧಾರ್ಮಿಕವಾಗಿ ಸ್ಫೂರ್ತಿಗೊಂಡಿದ್ದ ಶ್ರೀ ಡಿ.ಎಸ್. ರಾಮಪ್ಪನವರು ಸ್ವಕ್ಷೇತ್ರ ದಾವಣಗೆರೆಯಲ್ಲಿ ಉಪ್ಪಾರ ಜಗದ್ಗುರು ಶಾಖಾಮಠವನ್ನು, ಆರು ಜಿಲ್ಲೆಗಳಿಗೆ ಸಂಬಂಧಪಟ್ಟಂತೆ ರಚನೆ ಮಾಡಿದರು.

ಶ್ರೀಯುತ ಡಿ.ಎಸ್. ರಾಮಪ್ಪನವರು ಜನಿಸಿದ ಸಮಯದಲ್ಲಿ ದೇವರಹಳ್ಳಿಯಲ್ಲಿ ಒಬ್ಬಿಬ್ಬರು ವಿದ್ಯಾವಂತರು ಸಿಕ್ಕುವುದು ದುರ್ಲಭವಾಗಿತ್ತು. ಚನ್ನಗಿರಿ ತಾಲ್ಲೂಕಿನಲ್ಲಿ ಅತಿ ಹೆಚ್ಚು ಉಪ್ಪಾರ ಜನಾಂಗದವರಿರುವ ಗ್ರಾಮವಿದು. ಈಗ ಈ ಗ್ರಾಮದಲ್ಲಿ ಮನೆಗೆ ಒಂದೆರಡು ಪದವೀಧರರಿದ್ದಾರೆ. ರಾಮಪ್ಪನವರ ಬದುಕೇ ಸ್ಫೂರ್ತಿಯಾಗಿ ದೇವರಹಳ್ಳಿಯಲ್ಲಿ ಉಪ್ಪಾರ ಯುವಕ-ಯುವತಿಯರು ವಿದ್ಯಾವಂತರಾಗಿದ್ದಾರೆ.

ದೇವರಹಳ್ಳಿ ಗ್ರಾಮದಲ್ಲಿ ಜನಿಸಿ, ಕಡು ಬಡತನದಲ್ಲಿ ಅರಳಿದ ಪುಷ್ಪ ನಮ್ಮ ರಾಮಪ್ಪ. ಕರ್ನಾಟಕದ ಉಪ್ಪಾರ ಜನತೆಗೆ ಸೇವೆಸಲ್ಲಿಸಿರುವ ಶ್ರೀಯುತ ಡಿ.ಎಸ್. ರಾಮಪ್ಪನವರಿಗೆ, ಲೋಕಸೇವಾ ಆಯೋಗದ ಮಾಜಿ ಸದಸ್ಯರಾದ ಶ್ರೀಯುತ ನೀರಾವರಿಯವರು, ದಾವಣಗೆರೆ ಜಿಲ್ಲಾ ಕೇಂದ್ರದಲ್ಲಿಯೇ ಸನ್ಮಾನ ಸಮಾರಂಭ ಏರ್ಪಡಿಸಿರುವುದು ನಿಜಕ್ಕೂ ಅಭಿನಂದನೀಯವಾದುದು. ಇವರಿಬ್ಬರೂ ನಮ್ಮ ಸಮಾಜದ ಎರಡು ಕಣ್ಣುಗಳಿದ್ದಂತೆ!

*

## * ನಾನು ಕಂಡಂತೆ

- ಕೆ.ವಿ. ಬಸವರಾಜ
ದಾವಣಗೆರೆ

ಶ್ರೀ ಡಿ.ಎಸ್. ರಾಮಪ್ಪನವರು 1980-83ನೇ ಸಾಲಿನಲ್ಲಿ ಎಕ್ಸಿಕ್ಯೂಟಿವ್ ಇಂಜಿನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ನನಗೆ ಅವರ ಅಧೀನದಲ್ಲಿ ಎ.ಇ.ಇ. ಆಗಿ ಕೆಲಸ ಮಾಡುವ ಸುಯೋಗವು ಒದಗಿಬಂದಿತು. ಇಬ್ಬರೂ ಬಡ್ತಿಯ ಮೇಲೆ ಅಲ್ಲಿಗೆ ಬಂದಿದ್ದರಿಂದ ಇಬ್ಬರಲ್ಲಿಯೂ ಒಂದೇ ರೀತಿಯ ಉತ್ಸಾಹವಿತ್ತು. ಸಮೀಪದಿಂದ ಇವರ ಜೊತೆ ಕೆಲಸ ಮಾಡುತ್ತಾ ನೋಡಿದಾಗ ಇವರು ಒಬ್ಬ ಶ್ರಮಜೀವಿ ಮತ್ತು ಕಠಿಣ ಪರಿಶ್ರಮದಿಂದ ಮುಂದೆ ಬಂದಿರುವವರು ಎನ್ನಿಸಿತು. ಇವರಿಗೆ ಸರ್ಕಾರಿ ಕೆಲಸ ವಿನಹ ಬೇರೆ ಯಾವುದರಲ್ಲಿಯೂ ಆಸಕ್ತಿ ಅಥವಾ ಅಭಿರುಚಿ ಇರುವುದು ಕಂಡುಬರುತ್ತಿರಲಿಲ್ಲ. ಜೀವನದ ಯಾವುದೇ ಭೋಗಾಪೇಕ್ಷೆ ಇವರಿಗೆ ಬೇಕಿರಲಿಲ್ಲ. ಕನಿಷ್ಠ ವಿಶ್ರಾಂತಿ ಮತ್ತು ಮಿತವಾದ ಹಾಗು ಸರಳವಾದ ಆಹಾರ ಇವರಿಗೆ ಇಷ್ಟ. ಸ್ವಂತ ಸುಖಗಳನ್ನು ಕಡೆಗಣಿಸಿ ಆರೋಗ್ಯದಲ್ಲಿ ತೊಂದರೆಗಳಿದ್ದರೂ ಕೂಡ ಸಂಸಾರ ತಾಪತ್ರಯಗಳನ್ನು ಗಮನಕ್ಕೆ ತೆಗೆದುಕೊಳ್ಳದೆ ಹಗಲು-ರಾತ್ರಿ ದುಡಿಯುವ ಹವ್ಯಾಸ ಇವರ ಪಾಲಿನದು. ಮನಸ್ಸು ಮಾಡಿದ್ದರೆ ಸುಖದ ಸುಪ್ಪತ್ತಿಗೆ ಮೇಲೆ ಇರಬಹುದಾದಂತಹ ಅವಕಾಶಗಳು ಇದ್ದರೂ, ಎಲ್ಲವನ್ನು ತಿರಸ್ಕರಿಸಿ ಸರ್ಕಾರಿ ಸೇವೆಗೋಸ್ಕರ ತಮ್ಮನ್ನು ತಾವೇ ಸಮರ್ಪಿಸಿಕೊಂಡ ಪುಣ್ಯಜೀವಿ ಇವರು.

ಇವರ ಜೊತೆಯಲ್ಲಿ ಕೆಲಸ ಮಾಡುವುದೆಂದರೆ ದೊಡ್ಡ ಸಾಹಸವೇ ಸರಿ. ತಮ್ಮ ಕೆಳಗಿನ ಅಧಿಕಾರ ವರ್ಗದವರ ಮೇಲೆ

ಇವರು ಚಾಣಾಕ್ಷತನದಿಂದ ಪದೇ ಪದೇ ಒತ್ತಡ ಹಾಕಿ ಕೆಲಸ ಮಾಡಿ ಮುಗಿಸಲೇಬೇಕಾದಂತಹ ಸನ್ನಿವೇಶವನ್ನು ನಿರ್ಮಿಸುತ್ತಿದ್ದರು. ಮಗುವಿನ ಸ್ವಭಾವದ ಇವರು ಎಷ್ಟೋ ಸಾರಿ ಪಟ್ಟು ಹಿಡಿದು ತಮ್ಮ ಲೆಕ್ಕಾಚಾರದಂತೆ ಎಲ್ಲವನ್ನು ಮಾಡಿ ಮುಗಿಸುತ್ತಿದ್ದರು. ಇವರ ಸ್ವಭಾವದಿಂದ ಕೆಲವು ಸಾರಿ ಬೇಜಾರು ಮತ್ತೆ ಕೆಲವು ಸಾರಿ ಕೆಲಸ ಮಾಡಿದ್ದರ ತೃಪ್ತಿ ಸಿಗುತ್ತಿತ್ತು. ಇಷ್ಟೆಲ್ಲದರ ಹಿಂದೆ ಇವರಿಗಿದ್ದ ಒಂದೇ ಒಂದು ಕಳಕಳಿ ಎಂದರೆ ನಾವು ಸರ್ಕಾರದ ಹಣದಿಂದ ಹೊಟ್ಟೆ ತುಂಬಿಸಿಕೊಳ್ಳುವವರು; ಆದ್ದರಿಂದ ಸರ್ಕಾರಕ್ಕೆ ನಾವು ಎಂದೂ ದ್ರೋಹ ಬಗೆಯಬಾರದು ಮತ್ತು ಸರ್ಕಾರದ ನಿರೀಕ್ಷೆಯಲ್ಲಿ ನಾವು ವಿಫಲರಾಗಬಾರದು.

ಜಗತ್ತಿನಲ್ಲಿ ತಮಗಾಗಿ ಬದುಕುವವರೇ ಹೆಚ್ಚು. ಆದರೆ ಶ್ರೀ ಡಿ.ಎಸ್. ರಾಮಪ್ಪನವರು ತಾವು ಬದುಕುವುದರ ಜೊತೆಗೆ ಪರರ ಹಿತಾಸಕ್ತಿಗಳ ಕಡೆಗೆ ಗಮನ ಕೊಡುತ್ತಿದ್ದರು. "ನಿಸ್ವಾರ್ಥ ಸೇವೆ ಮತ್ತು ಪೂರ್ಣ ಕಾರ್ಯತತ್ಪರತೆ"-ಈ ಗುಣಗಳನ್ನು ಬೆಳೆಸಿಕೊಂಡಿರುವುದರಿಂದ ಇವರು ಸಾರ್ವಜನಿಕ ಕ್ಷೇತ್ರದಲ್ಲಿ ಒಬ್ಬ ಶ್ರೇಷ್ಠ ವ್ಯಕ್ತಿಯಾಗಿದ್ದಾರೆ. ಎಪ್ಪತ್ತೈದರ ಇಳಿವಯಸ್ಸಿನಲ್ಲೂ, ಶ್ರೀರಾಮಪ್ಪನವರ ಕಾರ್ಯಚಟುವಟಿಕೆಯಲ್ಲಿ ಸ್ವಲ್ಪವೂ ಬದಲಾವಣೆಯಾಗಿಲ್ಲ. ಇದಕ್ಕೆ ಕಾರಣ ಅವರ ನಿಷ್ಕಲ್ಮಶವಾದ ಮನಸ್ಸು. ಇವರ ದೈಹಿಕ ಆರೋಗ್ಯ ಎಷ್ಟು ಸುದೃಢವಾಗಿದೆಯೋ ಇವರ ಮನಸ್ಸು ಕೂಡ ಅಷ್ಟೇ ಆರೋಗ್ಯಕರವಾಗಿದೆ. ಇದೇ ಅವರಿಗೆ ಚೇತನ ಹಾಗು ಪ್ರೇರಣೆಯನ್ನು ಒದಗಿಸುವ ಒಂದು ಶಕ್ತಿಯಾಗಿದೆ.

*

* ## ಸಾಧಕ ಸಿರಿ

- ಹೆಚ್. ನೀಲಪ್ಪ
ಸಂತೆಬೆನ್ನೂರು

ಒಬ್ಬ ಮನೆ ಕಟ್ಟುವವನು ಶ್ರೀಮಂತರ ಮನೆಯ ಗೋಡೆ ಕಟ್ಟುತ್ತಿದ್ದ. ಹೆಚ್ಚು ಬೆಲೆಬಾಳುವ ಹಾಲುಗಲ್ಲಿನ ಗೋಡೆ ಕಟ್ಟುವವ ದೊಡ್ಡ ಕಲ್ಲುಗಳ ಮಧ್ಯೆ ಚೀಪುಕಲ್ಲುಗಳನ್ನು ಇಡುತ್ತಿದ್ದ. ಇದನ್ನು ಕಂಡ ಶ್ರೀಮಂತ ಕೇಳಿದ 'ಈ ಸಣ್ಣ ಕಲ್ಲು ಏಕೆ? ಕೇವಲ ದೊಡ್ಡ ಕಲ್ಲು ಜೋಡಿಸಿದರೆ ಆಗದೇ ?' ಮನೆ ಕಟ್ಟುವವನು ನುಡಿದ 'ಮಾಲೀಕರೇ ಅಮೂಲ್ಯವಾದ ದೊಡ್ಡ ಕಲ್ಲುಗಳು ತಮ್ಮ ತಮ್ಮ ಸ್ಥಾನದಲ್ಲಿ ಗಟ್ಟಿಯಾಗಿ, ಸದೃಢವಾಗಿ ನಿಲ್ಲಬೇಕಾದರೆ ಈ ಪುಟ್ಟಕಲ್ಲುಗಳು ಅವಶ್ಯಕ'. ಈ ದೃಷ್ಟಾಂತ ನಮಗೊಂದು ಪಾಠ ಹೇಳುತ್ತದೆ. ಯಾವುದೇ ಸಮಾಜ ಕೇವಲ ಶ್ರೀಮಂತರ, ಉನ್ನತ ಹುದ್ದೆಯಲ್ಲಿರುವ ಕೆಲವರಿಂದ ಮಾತ್ರ ಅಭಿವೃದ್ಧಿ ಹೊಂದಲಾರದು. ಬಹುಸಂಖ್ಯಾತ ಮಧ್ಯಮವರ್ಗದವರು, ಬಡವರು, ಕಡುಬಡವರು, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಅಭಿವೃದ್ಧಿ ಕಂಡಲ್ಲಿ ಮಾತ್ರ ಆ ಸಮಾಜ ಏಳ್ಗೆ ಹೊಂದಬಲ್ಲದು. ಅವರೇ ಸಮಾಜದ ಭದ್ರ ಬುನಾದಿಯ ರಕ್ಷಕರು. ಈ ಮಹತ್ವವನ್ನು ಅರಿತು ತಾನು ಹುಟ್ಟಿ ಬೆಳೆದ, ತನಗೊಂದು ಬದುಕು ಕೊಟ್ಟು ಮೇಲೆತ್ತಿದ ಸಮಾಜದ ಋಣ ತೀರಿಸುವ ದೃಢಸಂಕಲ್ಪದಿಂದ ಎರಡು ದಶಕಗಳಿಗಿಂತ ಹೆಚ್ಚು ಕಾಲದಿಂದ ಶ್ರಮಿಸುತ್ತಿರುವ ನಿಷ್ಕಾಮಕರ್ಮಿಯೊಬ್ಬರನ್ನು ಪರಿಚಯಿಸಲು ಹೆಮ್ಮೆ ಅನ್ನಿಸುತ್ತದೆ.

1968ರ ಏಪ್ರಿಲ್ ತಿಂಗಳಲ್ಲಿರಬಹುದು. ನಾನಾಗ ಪಿಯುಸಿ ಪರೀಕ್ಷೆ ಬರೆದು ಊರಿಗೆ ಬಂದಿದ್ದೆ. ನಮ್ಮ ಅಣ್ಣ (ದೊಡ್ಡಪ್ಪನವರ ಮಗ) ಜಿ. ನೀಲಪ್ಪ ಬಿ.ಇ. ಪದವೀಧರರೂ ಊರಲ್ಲಿದ್ದರು. ಅವರ

ವಿವಾಹ ಸಂಬಂಧ ಧೀರೋದಾತ್ತ ವ್ಯಕ್ತಿಯಂತೆ ಕಾಣುವವರೊಬ್ಬರು ನಮ್ಮೂರು ದೇವರಹಳ್ಳಿಗೆ ಬಂದಿದ್ದರು. ನಾನು ಕುತೂಹಲದಿಂದ ಅವರಾರೆಂದು ವಿಚಾರಿಸಿದೆ. ಅವರು ಡಿ.ಎಸ್. ರಾಮಪ್ಪ ಎಂಬುದಾಗಿ ತಿಳಿಯಿತು. ಶ್ರೀಯುತರ ಹೆಸರನ್ನು ಕೇಳಿ ತಿಳಿದಿದ್ದೆ. ಆದರೆ ಅವರನ್ನು ಮುಖತಃ ಕಂಡದ್ದು ಅದೇ ಪ್ರಥಮ. ಅವರು ಮಾತನಾಡುತ್ತಿದ್ದ ರೀತಿ, ವಿನಮ್ರಭಾವದ ನಡವಳಿಕೆಗೆ ನಾನು ಬೆರಗುಗೊಂಡೆ. ಅವರು ನಮ್ಮೂರಿನವರು ಎಂಬುದು ತಿಳಿದಾಗಲಂತೂ ಅವರ ಬಗ್ಗೆ ಅಭಿಮಾನ ತುಂಬಿಬಂತು. ಚಿಕ್ಕಂದಿನಲ್ಲೇ ತಾಯಿ-ತಂದೆಯರನ್ನು ಕಳೆದುಕೊಂಡು ತಬ್ಬಲಿಯಾಗಿ ನಮ್ಮೂರು ಬಿಟ್ಟು, ತಾಯಿಯ ತವರೂರಾದ ಕುಳೇನೂರು ಸೇರಿಕೊಂಡರಂತೆ! ತಾನೂ ಓದಿ ವಿದ್ಯಾವಂತನಾಗಬೇಕೆಂಬ ಎಳೆಯ ಮನಸ್ಸಿನ ಹಂಬಲ; ವಾರಾನ್ನ ಊಟ ಮಾಡಿಕೊಂಡು ಪ್ರೌಢಶಾಲೆ ಹಾಗು ಇಂಟರ್‌ಮಿಡಿಯೇಟ್ ವ್ಯಾಸಂಗ ಮುಗಿಸಿ ಸಮಾಜದ ಹಲವು ಸಹೃದಯಿಗಳ ಸಹಾಯಹಸ್ತದಿಂದಾಗಿ ಬಿ.ಇ. ಪದವೀಧರರಾದ ನಮ್ಮೂರಿನ ಮೊದಲ ಇಂಜಿನಿಯರ್!

1971ರಲ್ಲಿ ನಾನು ಬಿ.ಎಸ್ಸಿ. ಪದವೀಧರನಾಗಿ ಸ್ವಲ್ಪ ಕಾಲ ಊರಲ್ಲಿದ್ದೆ. ಆ ಸಂದರ್ಭದಲ್ಲಿ ಡಿ.ಎಸ್. ರಾಮಪ್ಪನವರು ತಮ್ಮ ಮನೆದೇವರಾದ ಶ್ರೀ ಮೈಲಾರಲಿಂಗೇಶ್ವರ ದೇವಸ್ಥಾನದ (ದೇವರಹಳ್ಳಿಯಲ್ಲಿದ್ದ) ಜೀರ್ಣೋದ್ಧಾರದ ಕಾರ್ಯದ ಸಲುವಾಗಿ ಬಂದಿದ್ದ ನೆನಪು. ಬಸ್ ನಿಲ್ದಾಣದಲ್ಲಿ ಹಿರಿಯರೊಬ್ಬರು ನನ್ನನ್ನು ಅವರಿಗೆ ಪರಿಚಯಿಸಿದರು. ನಾನೊಬ್ಬ ಪದವೀಧರ ಎಂಬುದು ತಿಳಿದಾಗ ಅವರಿಗೆ ಅಮಿತಾನಂದವಾಯಿತು. ನನ್ನ ಬೆನ್ನು ತಟ್ಟಿ 'ವೆರಿಗುಡ್' ನಮ್ಮ ಸಮಾಜದಲ್ಲಿ ಪದವೀಧರರ ಸಂಖ್ಯೆ ಬಹಳ ಕಡಿಮೆ. ನೀವು ಮುಂದೆ ಓದಿ ಎಂ.ಎಸ್ಸಿ. ಇಲ್ಲವೇ ಬಿ.ಇಡಿ. ಪದವಿ ಪಡೆದರೆ ಒಳ್ಳೆಯ ಭವಿಷ್ಯವಿದೆ ಎಂದರು. ಕಿರಿಯವನಾದ ನನ್ನನ್ನು ಗೌರವ ಭಾವನೆಯಿಂದ ಮಾತನಾಡಿಸಿದ ಅವರು ಆಡಿದ ಮಾತುಗಳು ಇಂದಿಗೂ ನನ್ನ ಮನದಂಗಳದಲ್ಲಿ ಮಾರ್ದನಿಸುತ್ತಿವೆ.

ಮಾನ್ಯ ರಾಮಪ್ಪನವರು ಕಾರ್ಯನಿರ್ವಾಹಕ ಅಭಿಯಂತರಾಗಿ ಸೇವೆ ಸಲ್ಲಿಸಿ 1983ರಲ್ಲಿ ನಿವೃತ್ತರಾದರು. ಆ ವೇಳೆಗಾಗಲೇ ಅವರು ಸಮಾಜ-ಗುರುಮಠ ಇವುಗಳ ಬಗ್ಗೆ ತುಡಿತ-ಮಿಡಿತಗಳನ್ನು ಹೊಂದಿದ್ದು ಪರೋಕ್ಷವಾಗಿ ಸಮಾಜಸೇವಾಕಾರ್ಯದಲ್ಲಿ ತಮ್ಮ ಮನಸ್ಸನ್ನು ಹರಿಯಬಿಟ್ಟಿದ್ದರು. 1984ರಲ್ಲಿ ಶಿವಮೊಗ್ಗ ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷರಾದರು. ಜಿಲ್ಲಾ ಕಾರ್ಯಕಾರಿ ಸಮಿತಿಯಲ್ಲಿ ನಾನೂ ಒಬ್ಬ ಸದಸ್ಯನಾಗಿದ್ದುದರಿಂದ ಮಾಸಿಕ ಸಭೆಗಳಲ್ಲಿ ಭಾಗವಹಿಸುತ್ತಿದ್ದೆ. ಅವರ ಸಾಮಾಜಿಕ ಅಭಿವೃದ್ಧಿಯ ಕಳಕಳಿ, ಅದಮ್ಯ ಉತ್ಸಾಹ, ಧೀಮಂತ ಧ್ಯೇಯೋದ್ದೇಶಗಳು ನಿಜಕ್ಕೂ ಅಚ್ಚರಿ ಮೂಡಿಸುವಂತಹವಾಗಿದ್ದವು. ಶಿವಮೊಗ್ಗದ ವಿದ್ಯಾರ್ಥಿನಿಲಯಕ್ಕೆ ಕಾಯಕಲ್ಪ ಮಾಡುವ ನಿಟ್ಟಿನಲ್ಲಿ ಹಲವು ಯೋಜನೆಗಳನ್ನು ಹಾಕಿದರು. ಆದರೆ ನಾಲ್ಕಾರು ತಿಂಗಳು ಕಳೆಯುವಷ್ಟರಲ್ಲೇ ಅವರು ಸರ್ವಾನುಮತದಿಂದ ಕುಲಗುರುಗಳ ಆಶಯದಂತೆ ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾಗಿ ಬೆಂಗಳೂರು ಸೇರಬೇಕಾಯ್ತು.

ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಂಘಿಕವಾಗಿ ನೆಲಕಚ್ಚಿದ್ದ

ಸಮಾಜವನ್ನು ಎಚ್ಚರಿಸುವ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕುಲಗುರುಗಳಾದ ಶ್ರೀ ಶ್ರೀ ಲೇಪಾಕ್ಷ ಸ್ವಾಮೀಜಿಯವರ ಆಶೀರ್ವಾದ ಮತ್ತು ಮಾರ್ಗದರ್ಶನದಲ್ಲಿ ರಾಜ್ಯದ ಹಳ್ಳಿ ಹಳ್ಳಿಗಳನ್ನು ಸುತ್ತಿದುದು ಭಗೀರಥನ ಅಪರಾವತಾರದಂತೆ ಒಂದು ಇತಿಹಾಸವೇ ಆಗಿದೆ.

1986ರಲ್ಲಿ ರಾಜ್ಯಮಟ್ಟದ ಉಪ್ಪಾರ ಸಮ್ಮೇಳನವನ್ನು ಬೆಂಗಳೂರಿನಲ್ಲಿ ನಡೆಸಲು ಆಯೋಜಿಸಲಾಗಿತ್ತು. ಆ ವೇಳೆಗಾಗಲೆ ಸಾಹಿತ್ಯಿಕ ಕಾಳಜಿಯಿಂದ ನಾನು ಮೂರು ಕೃತಿಗಳನ್ನು ಪ್ರಕಟಣೆ ಮಾಡಿದ್ದು ತಿಳಿದಿದ್ದ ರಾಮಪ್ಪನವರು ಸಮ್ಮೇಳನದ ಸ್ಮರಣ ಸಂಚಿಕೆಯ ಜವಾಬ್ದಾರಿಯನ್ನು ನನ್ನ ಹೆಗಲ ಮೇಲಿಟ್ಟರು. ಆ ಸಂದರ್ಭದ ಸಮ್ಮೇಳನ ಪೂರ್ವಭಾವಿ ಸಭೆಗೆ ಮಾನ್ಯ ಶ್ರೀ ಹೆಚ್.ಸಿ. ನೀರಾವರಿಯವರೂ ಆಗಮಿಸಿದ್ದರು. ಅದೇ ಪ್ರಥಮ ನಾನು ನೀರಾವರಿಯವರನ್ನು ಕಂಡದ್ದು. ಅವರು ನಮ್ಮ ಉಪ್ಪಾರ ಸಮಾಜದಲ್ಲಿ ರಾಜ್ಯಕ್ಕೆ ಪ್ರಥಮ ಕೆ.ಎ.ಎಸ್. ಅಧಿಕಾರಿ ಎಂಬುದನ್ನು ಕೇಳಿ ತಿಳಿದಿದ್ದೆ. ಅವರ ಸೊಸೆ ಸಾಹಿತಿ ಶ್ರೀಮತಿ ಹನುಮಾಕ್ಷಿಗೋಗಿಯವರೂ ನಮ್ಮ ಸಂಪಾದಕ ಮಂಡಳಿಯಲ್ಲಿದ್ದರು. ರಾಮಪ್ಪನವರು ನನ್ನನ್ನು ಅವರಿಗೆ ಪರಿಚಯಿಸಿದರು. ಸ್ವಲ್ಪ ಬಿಗುಮಾನದ ನಿಲುವಿನಂತೆ ಕಂಡರೂ ಅವರು ಸಹೃದಯಿಗಳು, ವಿಚಾರಪರರೂ ಆದವರು ಎಂಬುದನ್ನು ತಿಳಿಯಲು ಹೆಚ್ಚು ಸಮಯ ಬೇಕಾಗಲಿಲ್ಲ. ನಮ್ಮಂಥ ಹಿಂದುಳಿದ ಸಮಾಜ ಮೊದಲು ಶೈಕ್ಷಣಿಕವಾಗಿ ಮೇಲೆ ಬರಬೇಕೆಂಬ ಹೆಬ್ಬಯಕೆ ಅವರ ಮಾತುಗಳಿಂದ ವ್ಯಕ್ತವಾಗುತ್ತಿತ್ತು. ಅವರು ಕೆಲವು ಸಲಹೆಗಳನ್ನು ನಮಗೆ ನೀಡಿದರು. ಸ್ಮರಣ ಸಂಚಿಕೆಯನ್ನು ಆದಷ್ಟೂ ಉತ್ತಮ ರೀತಿಯಲ್ಲಿ ತರುವಲ್ಲಿ ಡಿ.ಎಸ್. ರಾಮಪ್ಪನವರೂ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಎಂ. ಹನುಮಯ್ಯನವರೂ, ಗೆಳೆಯ ಪದಡಿ ಮಹೇಶ್ ಹಾಗು ಸಂಪಾದಕ ಮಂಡಳಿಯ ಕೆಲವು ಸದಸ್ಯರು ತುಂಬ ಸಹಕಾರಿಗಳಾದರು.

1987ರಲ್ಲಿ ಕುಲಗುರುಗಳ ಅಧ್ಯಕ್ಷತೆಯಲ್ಲಿ ರಾಜ್ಯ ಭಗೀರಥ ಧಾರ್ಮಿಕ ಟ್ರಸ್ಟ್ ರಚನೆಯಾದಾಗ ಉಪಾಧ್ಯಕ್ಷರಾಗಿ ಡಿ.ಎಸ್. ರಾಮಪ್ಪನವರು ಆ ಸಂಸ್ಥೆಯ ಜವಾಬ್ದಾರಿಯನ್ನು ಹೊರಬೇಕಾಯ್ತು. ವಾಸ್ತವವಾಗಿ ಹೇಳಬೇಕೆಂದರೆ ಇದೊಂದು ರಾಮಪ್ಪನವರ, ನೀರಾವರಿಯವರ ಹಾಗು ಹನುಮಯ್ಯನವರ ಕನಸಿನ ಕೂಸೇ ಆಗಿತ್ತು. ಒಂದು ಧಾರ್ಮಿಕ ನೆಲೆಗಟ್ಟಿನಲ್ಲಿ ಭಗೀರಥ ವಂಶಜರನ್ನು ಎಚ್ಚರಗೊಳಿಸಬೇಕೆಂಬುದು, ಅಜ್ಞಾನ ಅಳಿಸಿ ಸುಜ್ಞಾನ ಬಿತ್ತಬೇಕೆಂಬುದು ಇವರುಗಳ ಆಶಯವಾಗಿತ್ತು. ಶ್ರೀಗಳವರು ಅದನ್ನು ಪುರಸ್ಕರಿಸಿ ಆಶೀರ್ವದಿಸಿದರು. ಅಂಧಕಾರದ ಸಮಾಜಕ್ಕೆ ಉದಯರವಿಯಂತೆ ನೀರಾವರಿಯವರು ಕಾಣಿಸಿಕೊಂಡರು. ಆಗ ಅವರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಉನ್ನತ ಅಧಿಕಾರದಲ್ಲಿದ್ದರು. ಮಾನ್ಯ ರಾಮಪ್ಪನವರು ನೀರಾವರಿಯವರ ಪೂರ್ಣ ಸಹಕಾರ ಮತ್ತು ಸಹಾಯಹಸ್ತದಿಂದ ಬೆಂಗಳೂರಿನ ಕತ್ತರಿಗುಪ್ಪದಲ್ಲಿ ಲಕ್ಷಾಂತರ ರೂಪಾಯಿ ಬೆಲೆಯ ನಿವೇಶನ ಸ್ಥಿರಾಸ್ಥಿ ಮಾಡಿ ನಂತರದ ವರ್ಷಗಳಲ್ಲಿ ಹಲವಾರು ದಾನಿಗಳ ಸಹಕಾರದಿಂದ ಇಪ್ಪತ್ತು ಕೊಠಡಿಗಳ ಬೃಹತ್ ಕಟ್ಟಡವನ್ನು ಅಪಾರ ಪರಿಶ್ರಮದಿಂದ, ಭಗೀರಥಪ್ರಯತ್ನದಿಂದ ನಿರ್ಮಿಸಿದರು.

1996ರಲ್ಲಿ ರಾಜ್ಯ ಉಪ್ಪಾರ ಸಂಘಕ್ಕೆ ಅಧ್ಯಕ್ಷರ ಆಯ್ಕೆಯಲ್ಲಿ ಅನಾರೋಗ್ಯಕರ ಬೆಳವಣಿಗೆ ಉಂಟಾದಾಗ ರಾಮಪ್ಪನವರು ಅಲ್ಲಿಂದ ಹೊರಬಂದು ಕುಲಗುರುಗಳ ಆಶಯದಂತೆ ನಾಡಿನಲ್ಲಿ ಪಂಚಶಾಖಾಪೀಠಗಳ ಸ್ಥಾಪನೆಯ ಹಿನ್ನೆಲೆಯಲ್ಲಿ ದಾವಣಗೆರೆಯಲ್ಲಿ 'ಭಗೀರಥಾನಂದ' ವಲಯ ಶಾಖಾಮಠವನ್ನು ಅಸ್ತಿತ್ವಕ್ಕೆ ತರುವಲ್ಲಿ ಯಶಸ್ವಿಯಾದದ್ದು ನಿಜಕ್ಕೂ ಅಭಿನಂದನಾರ್ಹವಾದ ವಿಷಯವಾಗಿದೆ.

ನಾನು ಗಮನಿಸಿದಂತೆ ಡಿ.ಎಸ್. ರಾಮಪ್ಪನವರು ಕೇವಲ ಮಾತುಗಾರರಲ್ಲ. ಬಣ್ಣದ ರಂಜನೀಯ ಗುಣಸ್ವಭಾವದವರೂ ಅಲ್ಲ. ನೇರ ನುಡಿಯ ನಿಷ್ಠುರವಾದಿ, ಅಂತರಂಗ-ಬಹಿರಂಗ ಒಂದೇ ಆದಂತಿರುವ ಕಾರ್ಯಕ್ಷಮತೆಯ ಧೀಮಂತ ಚೇತನ. ಕೆಲವರು ಹೇಳುವಂತೆ ರಾಮಪ್ಪನವರ ಒಂದು ದೋಷವೆಂದರೆ ಸಮಾಜದ ವೇದಿಕೆಗಳಲ್ಲಿ ಮಾತನಾಡುವಾಗ ತಮ್ಮ ಸೇವೆಯ ಬಗ್ಗೆ ತಾವೇ ಹೆಗ್ಗಳಿಕೆಯ ಮಾತುಗಳನ್ನಾಡುವುದು. ಆದರೆ ನನಗನಿಸುತ್ತೆ, ಇದು ಅಹಂಭಾವದ ಮಾತಲ್ಲ. ಎರಡು ದಶಕಗಳಿಗೂ ಹೆಚ್ಚು ಕಾಲ ತನು-ಮನ-ಧನವನ್ನರ್ಪಿಸಿ ದುಡಿದ ಜೀವ ಮನಸ್ಸಿಗೆ ನೋವಾಗುವ ಸಂದರ್ಭಗಳನ್ನು ಕಂಡಾಗ, ಉಪೇಕ್ಷೆಯ ಭಾವನೆಗಳು ವ್ಯಕ್ತವಾದಾಗ ; ಭೂಮಿಯ ಅಂತರಾಳದ ಒತ್ತಡದಿಂದಾಗಿ ಚಿಮ್ಮಿಬರುವ ಗಂಗೆಯಂತೆ ಬಂದ ಮಾತುಗಳಿವು ಎಂದು ಭಾವಿಸುತ್ತೇನೆ. ಅಷ್ಟೇ ಅಲ್ಲ, ಸಮಾಜ ಸೇವೆ ಮಾಡುವವರಿಗೆ ತಮ್ಮ ಕೆಲಸಗಳು ಮಾರ್ಗದರ್ಶನ ನೀಡಲಿ ಎಂಬುದು ಅವರ ಆಸೆಯಾಗಿರಬಹುದು. ಅವರ ಮಾತುಗಳು ಅಹಂಕಾರದ ಮಾತುಗಳಲ್ಲ. ಯುವಕರಿಗೆ ಪ್ರೋತ್ಸಾಹದಾಯಕ ಎಂಬುದನ್ನು ಪುಷ್ಟೀಕರಿಸಲು ಒಂದು ಸಾದೃಶವನ್ನು ತಿಳಿಸಬಯಸುತ್ತೇನೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ರನ್ನ'ನದು ಬಹುದೊಡ್ಡ ಹೆಸರು. ಸಾಹಸಭೀಮವಿಜಯ ಮತ್ತು ಅಜಿತನಾಥ ಪುರಾಣ ಎಂಬ ಮಹಾನ್ ಕೃತಿಗಳ ರಚನಕಾರ. ಆತ ಹೇಳುತ್ತಾನೆ 'ಸರಸ್ವತಿಯ ಭಂಡಾರವನ್ನು ಸೂರೆಗೊಂಡೆ'. ಹಾಗೆಯೇ ಮುಂದುವರಿದು 'ನನ್ನ ಕೃತಿಗಳನ್ನು ವಿಮರ್ಶಿಸಲು ಎಂಟೆದೆ ಬೇಕು'. ರನ್ನನ ಈ ಮಾತುಗಳು ಉದ್ಧಟತನದಿಂದ, ಅಹಂಭಾವದಿಂದ ಕೂಡಿದವೆಂದು ಮೇಲ್ನೋಟಕ್ಕೆ ಅನ್ನಿಸಬಹುದಾದರೂ ಆ ಕೃತಿಗಳ ಸತ್ವ ಮತ್ತು ಸದೃಢತೆ ಹಾಗು ಅಧಿಕೃತ ಜ್ಞಾನಸಂಚಯ, ವಸ್ತು ವಿಶೇಷ-ವಿಶ್ಲೇಷಣೆಗಳನ್ನು ಶ್ರುತಪಡಿಸುವ ಸಾಹಿತ್ಯಿಕ ಸಾಮರ್ಥ್ಯದ ಅರಿವಾದಾಗ ರನ್ನನ ಆತ್ಮವಿಶ್ವಾಸದ, ಹೆಮ್ಮೆಯ ಈ ಮಾತುಗಳು ಗೌರವಯುತವಾಗಿ ಸ್ವೀಕಾರಾರ್ಹವಾಗುತ್ತವೆ. ಈ ಸಾದೃಶದ ಹಿನ್ನೆಲೆಯಲ್ಲಿ ಮಾನ್ಯ ಶ್ರೀ ಡಿ.ಎಸ್. ರಾಮಪ್ಪನವರ ಬದುಕು-ಸಾಧಕತನವನ್ನು ನಾವು ಹೆಮ್ಮೆಯಿಂದಲೇ ಗೌರವಿಸುವ ಸಹೃದಯತೆಯಿದ್ದರೆ ಅದು ನಮ್ಮನ್ನು ನಾವೇ ಗೌರವಿಸಿಕೊಂಡಂತೆ. ಈ ಸಾಧಕಸಿರಿ ನೂರ್ಕಾಲ ನಮ್ಮೊಡನಿದ್ದು ಬೆಳಕು ನೀಡುತ್ತಿರಲೆಂದು ಆಶಿಸುತ್ತೇನೆ.

*



# ✻ ಸ್ಮರಣೀಯರು

- ವಿಶ್ವನಾಥ್
ತುಮಕೂರು

ನಾನು ಡಿ.ಎಸ್. ರಾಮಪ್ಪನವರನ್ನು 1984ರಿಂದೀಚೆಗೆ ಬಲ್ಲೆ. ಇವರು ಪ್ರಾಮಾಣಿಕತೆ, ತ್ಯಾಗ, ಸಹನೆ, ಕಷ್ಟಸಹಿಷ್ಣುತೆಗಳಿಂದ ಕರ್ನಾಟಕ ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾಗಿ ರಾಜ್ಯದ ಎಲ್ಲ ಜಿಲ್ಲೆಗಳ/ತಾಲ್ಲೂಕುಗಳ/ಗ್ರಾಮಗಳ ಭೇಟಿ ನೀಡಿ ಜನಾಂಗದ ಸಂಘಟನೆಗೆ ಹರಿಕಾರರಾಗಿದ್ದಾರೆ. ಇದಕ್ಕೆ ಶ್ರೀ ಶ್ರೀ ಲೇಪಾಕ್ಷ ಸ್ವಾಮೀಜಿಗಳವರು, ಪ್ರಧಾನ ಕಾರ್ಯದರ್ಶಿಗಳಾದ ಎಂ. ಹನುಮಯ್ಯನವರು ಮತ್ತು ಇದಕ್ಕಾಗಿ ಶ್ರಮಿಸಿದ ರಾಜ್ಯ ಸಂಘದ ಪದಾಧಿಕಾರಿಗಳ ಕೊಡುಗೆ ಅಪಾರ ಹಾಗು ವಿಶಿಷ್ಟಪೂರ್ಣವಾದುದು. ಇವರ ರಾಜ್ಯ ಪ್ರವಾಸವಾದ ಮೇಲೆ ಎಲ್ಲ ಜಿಲ್ಲೆ/ಗ್ರಾಮದವರೆವಿಗೆ ಇಂದು ನಾವೆಲ್ಲ ಒಂದೇ ಎಂಬ ಭಾವನೆ ರೂಪುಗೊಂಡಿದೆ. ಇದಕ್ಕೆ ಶ್ರೀಯುತ ರಾಮಪ್ಪನವರ ಮುಂಖಡತ್ವದ ಕೊಡುಗೆ ಸ್ಮರಣೀಯ.

ಇಂದು ಯಾರು ಏನುಬೇಕಾದರೂ ಹೇಳಬಹುದು. ಅವರೆಲ್ಲ ಸೀಮಿತವಾಗಿದ್ದಾರೆಯೇ ಹೊರತು ರಾಜ್ಯದ ಎಲ್ಲ ಜಿಲ್ಲೆಯ ತಾಲ್ಲೂಕುಗಳನ್ನು ನೋಡಿಲ್ಲ.

ಇವರ ಕೊಡುಗೆಗೆ ಪೂರಕವಾಗಿ ಶ್ರೀ ಎಚ್.ಸಿ. ನೀರಾವರಿ ಅವರಂತಹ ಅಭಿಮಾನಿಗಳಿಂದ ಸಮಾಜಕ್ಕೆ ರಾಜ್ಯಮಟ್ಟದಲ್ಲಿ ನಿವೇಶನ ದೊರೆತಿದೆ. ಅಲ್ಲಿ ಕಟ್ಟಡದ ಬೆಳವಣಿಗೆಗೆ ಪರೋಕ್ಷವಾಗಿ ಸಹಾಯಹಸ್ತ ನೀಡಿದ್ದಾರೆ. ಧಾರ್ಮಿಕ ಟ್ರಸ್ಟಿಗಳು. ಟ್ರಸ್ಟಿನ ಉಪಾಧ್ಯಕ್ಷರಾದ ಡಿ.ಎಸ್. ರಾಮಪ್ಪನವರ ಕೊಡುಗೆ ಅಪಾರ. ಶ್ರೀ ಲೇಪಾಕ್ಷ ಸ್ವಾಮೀಜಿಗಳ ಪ್ರೋತ್ಸಾಹ ಹಾಗು ಶ್ರೀ ಎಂ.

ಹನುಮಯ್ಯ, ಮ್ಯಾನೇಜಿಂಗ್‌ಟ್ರಸ್ಟಿ ಅದನ್ನು ಕಾರ್ಯಕ್ಷಮತೆಯಿಂದ ಇಂದು ಬೆಂಗಳೂರಿನಲ್ಲಿ ಉಪ್ಪಾರರ ಧಾರ್ಮಿಕ ಟ್ರಸ್ಟಿಗೆ ನೆಲೆಯೊಂದಿರುವುದು ಪ್ರಶಂಶಾರ್ಹ.

ಶ್ರೀ ಡಿ.ಎಸ್. ರಾಮಪ್ಪನವರು ದಾವಣಗೆರೆಯ ಭಗೀರಥ ಧಾರ್ಮಿಕ ಟ್ರಸ್ಟಿನ ಮ್ಯಾನೇಜಿಂಗ್ ಟ್ರಸ್ಟಿಯಾಗಿ ಅಲ್ಲಿ ಒಂದು ಧಾರ್ಮಿಕ ಶಾಖಾಮಠದ ಸ್ಥಾಪನೆಗೆ ಶ್ರಮಿಸಿ, ಸಫಲರಾಗಿರುವುದು ಕರ್ನಾಟಕದ ಉಪ್ಪಾರ ಜನಾಂಗಕ್ಕೆ ಹೆಮ್ಮೆಯ ವಿಷಯ.

ಇಂಥ ವ್ಯಕ್ತಿತ್ವದ ಶ್ರೀ ಡಿ.ಎಸ್. ರಾಮಪ್ಪನವರ ಸೇವೆಗೆ ಶ್ರೀ ಎಚ್.ಸಿ. ನೀರಾವರಿಯವರಂಥ ಗಣ್ಯರು ಅಭಿನಂದನ ಸಮಾರಂಭ ಏರ್ಪಡಿಸಿದ್ದಾರೆ. ಅದಕ್ಕಾಗಿ ಅವರಿಗೂ ಶ್ರಮಿಸಿದ ಎಲ್ಲ ವ್ಯಕ್ತಿಗಳಿಗೂ ಹೃತ್ಪೂರ್ವಕ ಧನ್ಯವಾದಗಳು.

*

* ## ಉಪ್ಕಾರ ಸಮಾಜದ ರಕ್ಷಕರು

- ಶಿವಪ್ಪ ನೀರಾವರಿ
ರಾಯಚೂರು

ಶ್ರೀ ಡಿ.ಎಸ್. ರಾಮಪ್ಪನವರನ್ನು ನಾನು ಕಂಡದ್ದು 1973ರಲ್ಲಿ ಕುಷ್ಟಗಿಯ ಅವರ ಕಛೇರಿಯಲ್ಲಿ. ರಾಮಪ್ಪನವರು ಅಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಆಗಿನ ಸಹಾಯಕ ಅಭಿಯಂತರಾಗಿ ಕಾರ್ಯನಿರ್ವಹಿಸುತ್ತಿದ್ದರು. ಅವರ ಕಛೇರಿಯ ಜವಾನರ ಮೂಲಕ ನಾನು ಅವರ ಭೇಟಿಗಾಗಿ ಹೋಗಿರುವ ವಿಷಯ ತಿಳಿಸಿದಾಗ, ಕೂಡಲೇ ಒಳಗೆ ಕರೆದು ಕೂಡಲು ಹೇಳಿದರು. ಅನಂತರ, ನನ್ನ ಪರಿಚಯ ತಿಳಿಸಿ, ನಾನೊಬ್ಬ ವಿಜ್ಞಾನ ಪದವೀಧರ, ಕೆಲಸದ ಹುಡುಕಾಟದಲ್ಲಿ ಇದ್ದೇನೆ ಎಂದು ತಿಳಿಸಿದೆ. ಇನ್ನಿತರ ಹೆಚ್ಚಿನ ಮಾಹಿತಿ ನೀಡಿದ ಮೇಲೆ ಚಹ ಕುಡಿದು ಹೊರಡಲು ಸಜ್ಜಾದೆ. ಆದರೆ, ಅವರು ನನ್ನನ್ನು ಬಿಡದೇ ತಮ್ಮ ಮನೆಗೆ ಕರೆದೊಯ್ದರು. ಊಟ ಮಾಡಿಸಿ ಕಳುಹಿಸಿಕೊಟ್ಟರು. ಹೀಗೆ, ಅವರು ಕುಷ್ಟಗಿಯಲ್ಲಿದ್ದಾಗ ನನ್ನ ಭೇಟಿ ಮೇಲಿಂದ ಮೇಲೆ ನಡೆಯುತ್ತಿತ್ತು ಹಾಗು ಸಮಾಜದ ಬಗ್ಗೆ ಚರ್ಚೆ ದೀರ್ಘವಾಗಿ ಸಾಗುತ್ತಿತ್ತು. ಇದು ನನ್ನ ಅವರ ಸಂಬಂಧದ ನಾಂದಿಯಾಯಿತು.

ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಒಂದು ಕುಗ್ರಾಮವಾದ ದೇವರಹಳ್ಳಿಯಲ್ಲಿ ಸಿಕ್ಕುಡಿಯಪ್ಪ ಮತ್ತು ಕರಿಯಮ್ಮ ಎಂಬ ದಂಪತಿಗಳ ಮಗುವಾಗಿ ಜನಿಸಿದ ರಾಮಪ್ಪನವರು ಇಂದು ಸ್ವಾಭಿಮಾನದ ಬದುಕನ್ನು ನಡೆಸುತ್ತಿರುವುದು ಸಂತೋಷದ ವಿಷಯ. ಅನಕ್ಷರಸ್ಥ ತಂದೆ-ತಾಯಿ ಒಂದೆಡೆಯಾದರೆ, ಅವರನ್ನು ಕಳೆದು ಕೊಂಡು ತಬ್ಬಲಿಯಾಗಿ ಬೆಳೆದದ್ದು ಮತ್ತೊಂದೆಡೆ. ಇಂತಹ

ವಾತಾವರಣದಲ್ಲಿ ಅವರ ಬೆಳವಣಿಗೆ ಹಾಗು ಸಾಧನೆ ಒಂದು ವಿಶೇಷವೇ ಸರಿ.

1928 ಜೂನ್ 28ರಂದು ಜನಿಸಿದ ಶ್ರೀ ರಾಮಪ್ಪನವರು ತಮ್ಮ ಎಪ್ಪತ್ತೈದು ವಸಂತಗಳನ್ನು ಪೂರೈಸಿದ್ದಾರೆ. ಇಪ್ಪತ್ತೈದರ ಯುವಕರನ್ನು ನಾಚಿಸುವ ಲವಲವಿಕೆಯ ಯುವಕ. ರಾಮಪ್ಪನವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸೋದರಮಾವನ ಆಶ್ರಯದಲ್ಲಿ ಚನ್ನಗಿರಿ ತಾಲ್ಲೂಕು ಕುಳೇನೂರಿನಲ್ಲಿ, ಮಾಧ್ಯಮಿಕ ಶಿಕ್ಷಣವನ್ನು, ಸಂತೇಬೆನ್ನೂರಿನ ಶಾನುಭೋಗರ ಆಶ್ರಯದಲ್ಲಿ ಹಾಗು ಪ್ರೌಢಶಿಕ್ಷಣ ಮತ್ತು ಪದವಿಪೂರ್ವ ಶಿಕ್ಷಣವನ್ನು ಶಿವಮೊಗ್ಗದಲ್ಲಿ ವಾರದ ಮನೆ ಆಶ್ರಯದಲ್ಲಿ ಮುಗಿಸಿದ್ದಾರೆ. ನಂತರ, ಇಂಜಿನಿಯರಿಂಗ್ ಪದವಿಯನ್ನು ಬೆಂಗಳೂರಿನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ಸೆಪ್ಟಂಬರ್ 1953ರಲ್ಲಿ ಪಡೆದಿದ್ದಾರೆ. ಶಿಕ್ಷಣ ಪಡೆಯುವಲ್ಲಿ ಸಹಾಯ ಮಾಡಿದವರನ್ನು ಕೃತಜ್ಞತಾಭಾವನೆಯಿಂದ ನೆನಪಿಸಿಕೊಳ್ಳುತ್ತಾರಲ್ಲದೆ ಅವರು ಮಾಡಿದ ಉಪಕಾರವನ್ನು ಮರಳಿಸಲು ಮತ್ತು ಆ ಋಣದಿಂದ ಮುಕ್ತಿ ಪಡೆಯಲು ಪ್ರಯತ್ನಿಸಿದ್ದಾರೆ. ಸಹಾಯ ಮಾಡಿದವರನ್ನು ಮರೆಯುವ ಇಂದಿನ ಕಾಲದಲ್ಲಿ ಶ್ರೀ ರಾಮಪ್ಪನವರಂಥವರು ಅಪವಾದದ ವ್ಯಕ್ತಿಯಾಗಿದ್ದಾರೆ ಹಾಗು ಕಲ್ಲುಮುಳ್ಳುಗಳು ತುಂಬಿರುವ ಪ್ರದೇಶದಲ್ಲಿ ನಡೆದು ದಾರಿ ಮಾಡಿದ್ದಾರೆ.

1954 ಜನವರಿ 29ರಂದು ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಆಗಿನ ಸೂಪರ್‌ವೈಸರ್ ಆಗಿ ಕೆಲಸಕ್ಕೆ ಸೇರಿ, ಬೇರೆ ಬೇರೆ ಹುದ್ದೆಗಳಲ್ಲಿ, ಬೇರೆ ಬೇರೆ ಸ್ಥಳಗಳಲ್ಲಿ ಕೆಲಸ ನಿರ್ವಹಿಸಿ, ಕೊನೆಗೆ 1980 ಅಕ್ಟೋಬರ್ ತಿಂಗಳಲ್ಲಿ ಕಾರ್ಯನಿರ್ವಾಹಕ ಅಭಿಯಂತರೆಂದು ಬಡ್ತಿ ಪಡೆದು, ಶಿವಮೊಗ್ಗ ಜಿಲ್ಲೆಯ ಸಾಗರದಲ್ಲಿ ಅರ್ಥಪೂರ್ಣ ಸೇವೆ ಸಲ್ಲಿಸಿ, ದಿನಾಂಕ 30 ಜೂನ್ 1983ರಲ್ಲಿ ನಿವೃತ್ತಿ ಹೊಂದಿದ್ದಾರೆ. ಸೇವೆಯಿಂದ ನಿವೃತ್ತಿ ಹೊಂದಿದ್ದರೂ ಪ್ರವೃತ್ತಿಯಿಂದ ಸಮಾಜಸೇವೆಯ ಪ್ರವೃತ್ತಿಯಿಂದ ಇನ್ನೂ ನಿವೃತ್ತಿ ಹೊಂದಿಲ್ಲ. ಅವರು ಸೇವೆಯಲ್ಲಿದ್ದಾಗ, ಒಬ್ಬ ಪ್ರಾಮಾಣಿಕ ಸರ್ಕಾರಿ ಅಧಿಕಾರಿಯಾಗಿ, ಸ್ವಾಭಿಮಾನದ ಬದುಕನ್ನು ನಡೆಸಿದವರು. ಹಿರಿಯ ಮತ್ತು ಕಿರಿಯ ಅಧಿಕಾರಿಗಳ ವಿಷಯವಾಗಿ ಒಂದೇ ಗೌರವ ಭಾವನೆ ಹೊಂದಿದವರು ಮತ್ತು ಮಾನವೀಯತೆಯಿಂದ ಮೆರೆದವರು. ಸಾಮಾನ್ಯವಾಗಿ, ಅಧಿಕಾರಿವರ್ಗದಲ್ಲಿದ್ದವರು ಕೆಳಗಿನವರ ಮೇಲೆ ಸವಾರಿ ಮಾಡುವುದು ಮತ್ತು ಮೇಲಿನವರ ಕಾಲು ನೆಕ್ಕುವುದು ಆಗಿರುತ್ತದೆ. ಆದರೆ, ಇದಕ್ಕೆ ಹೊರತಾಗಿ ಎನ್ನುವಂತೆ ರಾಮಪ್ಪನವರು ತಮ್ಮ ಸೇವೆಯನ್ನು ಪೂರೈಸಿದ್ದಾರೆ.

ಶ್ರೀ ರಾಮಪ್ಪನವರು ಸಜ್ಜನರು, ವಿಚಾರವಾದಿಗಳು ಹಾಗು ಸಮಾಜ ಸುಧಾರಕರು. ಹಿಂದುಳಿದವರ ಬಗ್ಗೆ ಅವರಿಗೆ ಎಲ್ಲಿಲ್ಲದ ಅನುಕಂಪ. ಹಿಂದುಳಿದವರ ಸಾಮಾಜಿಕ ನ್ಯಾಯಕ್ಕಾಗಿ ಹೋರಾಟ ನಡೆಸಿದವರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ, ಜೈಲಿನ ಸವಿಯನ್ನು ಕಂಡವರು. ತಾವು ಹುಟ್ಟಿದ ಸಮಾಜಕ್ಕೆ ಏನಾದರೂ ಮಾಡಬೇಕೆಂಬ ಹಂಬಲ ಉಳ್ಳವರು. ಸಮಾಜದ ಬೆಳವಣಿಗೆಗೆ ಕೊಡುಗೈ ದಾನಿಗಳೆಂದು ಹೆಸರು ಪಡೆದವರು. ಸಮಾಜದ

ವಿದ್ಯಾರ್ಥಿಗಳ ಸಹಾಯಕ್ಕೆ ಟೊಂಕ ಕಟ್ಟಿ ನಿಂತವರು. ಜೀವನದಲ್ಲಿ ಏನಾದರೂ ಒಂದು ಗುರಿ ಸಾಧಿಸಲೇಬೇಕು ಎನ್ನುವ ಛಲದವರು ಹಾಗು ಅದರ ಅನುಷ್ಠಾನಕ್ಕೆ ಪ್ರಾಮಾಣಿಕ ಪ್ರಯತ್ನ ಮಾಡುವವರು.

ಬದುಕಲಿಕೆ ತಿನಬೇಕು, ತಿನ್ನಲು ಬದುಕಲ್ಲ,
ಗುರಿ ಬೇಕು ಬಾಳಿಂಗೆ, ಗುರಿ ಹಿರಿದು ಬೇಕು

ಇದು ರಾಮಪ್ಪನವರಿಗೆ ಪೂರ್ಣವಾಗಿ ಅನ್ವಯವಾಗುತ್ತದೆ.

1950ರಲ್ಲಿ ಶ್ರೀಮತಿ ಸಣ್ಣಮ್ಮನವರೊಡನೆ ಮದುವೆಯಾದ ಶ್ರೀ ಡಿ.ಎಸ್. ರಾಮಪ್ಪನವರು ನಾಲ್ಕು ಮಕ್ಕಳ ತಂದೆ. ಅದರಲ್ಲಿಯೂ ಸಮಾನತೆಯ ಹಿರಿಮೆಯನ್ನು ಮೆರೆದಿದ್ದಾರೆ. ಇಬ್ಬರು ಗಂಡುಮಕ್ಕಳಿದ್ದಾರೆ, ಇಬ್ಬರು ಹೆಣ್ಣುಮಕ್ಕಳು. ಮೊದಲನೆಯ ಮಗ, ಭಾರತ ರಕ್ಷಣಾ ಇಲಾಖೆಯಲ್ಲಿ ವಿಜ್ಞಾನಿಯಾಗಿ ಕೆಲಸ ಮಾಡುತ್ತಿದ್ದಾರೆ. ಎರಡನೆಯ ಮಗ ವ್ಯಾಪಾರಿ. ಇನ್ನು ಹೆಣ್ಣುಮಕ್ಕಳನ್ನು ವೈದ್ಯರಿಗೆ ಮದುವೆ ಮಾಡಿಕೊಟ್ಟಿದ್ದಾರೆ. ಹೀಗೆ, ರಾಮಪ್ಪನವರು ಒಂದು ಆದರ್ಶ ಕುಟುಂಬ ನಿರ್ಮಿಸಿದ್ದಾರೆ. ಶ್ರೀ ಡಿ.ಎಸ್. ರಾಮಪ್ಪನವರ ಸಾಧನೆಗಳಿಗೆ ಬೆನ್ನೆಲುಬಾಗಿ ನಿಂತವರು ಅವರ ಧರ್ಮಪತ್ನಿ ಶ್ರೀಮತಿ ಸಣ್ಣಮ್ಮನವರು. ಶ್ರೀ ಡಿ.ಎಸ್. ರಾಮಪ್ಪನವರ ಯೋಗಕ್ಷೇಮ, ಅವರ ಆರೋಗ್ಯದ ಬಗ್ಗೆ ಕಾಳಜಿ ವಹಿಸಿ, ಅವರ ಜೊತೆಗೆ ಮಾನಸಿಕವಾಗಿ ಒಂದಾದವರು ಮತ್ತು ಕುಟುಂಬವನ್ನು ಸುಖಿಯಾಗಿ ಇಟ್ಟವರು.

ಶ್ರೀ ಡಿ.ಎಸ್. ರಾಮಪ್ಪನವರಂಥವರ ಕುಟುಂಬವನ್ನು ನೋಡಿ, ಬಹುಶಃ ಸರ್ವಜ್ಞ ಹೀಗೆ ಹೇಳಿರಬೇಕು :

"ಬೆಚ್ಚನೆಯ ಮನೆಯಾಗಿ, ವೆಚ್ಚಕ್ಕೆ ಹೊನ್ನಾಗಿ
ಇಚ್ಛೆಯನರಿವ ಸತಿಯಾಗೆ,
ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ"

ಹೀಗೆ, ಸಾರ್ಥಕ ಬದುಕನ್ನು ನಡೆಸಿದ ಶ್ರೀ ಡಿ.ಎಸ್. ರಾಮಪ್ಪನವರು ನೂರು ವರ್ಷ ಬಾಳಲಿ, ಶತಮಾನೋತ್ಸವ ಆಚರಿಸಲಿ ಮತ್ತು ಅವರ ಬದುಕಿನ ಉಳಿದ ಅವಧಿಯನ್ನು ಸಮಾಜದ ಏಳಿಗೆಗಾಗಿ ಮುಡುಪಾಗಿಡಲಿ, ಭಗವಂತ ಅವರಿಗೆ ಸುಖ, ಶಾಂತಿ, ನೆಮ್ಮದಿ ಮತ್ತು ಶಕ್ತಿ ಕೊಡಲೆಂದು ಹಾರೈಸುವೆ.

*

## * ಅಜಾತಶತ್ರು

- ಹೆಚ್. ರಾಮಪ್ಪ
ಶಿವಮೊಗ್ಗ

ಅಂದು ಬೆಳಗ್ಗೆ ಎದ್ದು ದಿನಪತ್ರಿಕೆ ತಿರುವಿಹಾಕುತ್ತಿರುವಾಗ ದೂರದ ಬೆಂಗಳೂರಿನಿಂದ ಒಂದು ದೂರವಾಣಿ ಕರೆ ನನಗೆ ಆಶ್ಚರ್ಯ ತಂದಿತು. ಆ ದೂರವಾಣಿ ಕರೆ ಬೇರಾರದೂ ಆಗಿರದೆ ಕರ್ನಾಟಕ ಸರ್ಕಾರದಲ್ಲಿ ಕಂದಾಯ ಮತ್ತು ಇತರೆ ಇಲಾಖೆಗಳಲ್ಲಿ ಜಿಲ್ಲಾಧಿಕಾರಿ ಹುದ್ದೆಯ ಹಂತ ತಲುಪಿ ಮಹತ್ತರ ಜವಾಬ್ದಾರಿ ಕೆಲಸ ನಿರ್ವಹಿಸಿ ದಕ್ಷ ಅಧಿಕಾರಿ ಎಂದು ಹೆಸರು ಪಡೆದವರು ಮತ್ತು ಅರ್ಹತೆಯನ್ನು ಪರಿಗಣಿಸಿ ಕರ್ನಾಟಕ ಲೋಕಸೇವಾ ಆಯೋಗದ ಸದಸ್ಯರಾಗಿ ಉಪ್ಪಾರ ಜನಾಂಗದ ಹಾಗು ಇತರ ಕೋಮುಗಳ ವಿದ್ಯಾವಂತರಿಗೆ ಗೆಜೆಟೆಡ್ ಹುದ್ದೆಗಳನ್ನು ಕೊಟ್ಟು ನೂರಾರು ವರ್ಷಗಳ ಕೊರಗನ್ನು ಸ್ವಲ್ಪವಾದರೂ ನಿವಾರಿಸಿದ ನಮ್ಮೆಲ್ಲರ ಕಣ್ಮಣಿ, ಭವಿಷ್ಯತ್ತಿನ ನೇತಾರ ಶ್ರೀ ಹೆಚ್.ಸಿ. ನೀರಾವರಿ ಸಾಹೇಬರದ್ದಾಗಿತ್ತು. ದೂರವಾಣಿ ಕರೆಯ ಮುಖ್ಯ ಉದ್ದೇಶ ಪ್ರಸ್ತಾಪಿಸುತ್ತಾ, ನಮ್ಮೆಲ್ಲರ ಅಚ್ಚುಮೆಚ್ಚಿನ ಜನಪ್ರಿಯ ಜನನಾಯಕ ಶ್ರೀ ಡಿ.ಎಸ್. ರಾಮಪ್ಪನವರ 75ನೇ ಹುಟ್ಟುಹಬ್ಬಕ್ಕೆ ಅದ್ದೂರಿ ಸನ್ಮಾನ ಸಮಾರಂಭ ಏರ್ಪಡಿಸುವ ಉದ್ದೇಶವಿದೆ ಎನ್ನುವ ಸಿಹಿಸುದ್ದಿ, ವಿವರವಾದ ಪತ್ರ ಬರೆಯಲಾಗಿದೆ ಎಂದು ತಿಳಿಸಿ ಬೆಂಗಳೂರಿನಲ್ಲಿ ನಡೆಸಲು ಉದ್ದೇಶಿಸಿರುವ ಸಭೆಗೆ ನನ್ನನ್ನು ಆಹ್ವಾನಿಸಿದರು. ಹರ್ಷಚಿತ್ತನಾಗಿ ಒಪ್ಪಿಕೊಂಡೆನು.

ಬೆಂಗಳೂರಿನಲ್ಲಿ ನಡೆದ ಸಭೆಯನಂತರ ಪುನಃ ದಾವಣಗೆರೆಯಲ್ಲಿ ನಡೆದ ಸಭೆಯಲ್ಲಿ ಶ್ರೀ ಹೆಚ್.ಸಿ. ನೀರಾವರಿ ಸಾಹೇಬರು ಶ್ರೀ ಡಿ.ಎಸ್. ರಾಮಪ್ಪನವರ ಬಗ್ಗೆ ಇಟ್ಟಿರುವ ಅಚಲ ವಿಶ್ವಾಸ,

ನಂಬಿಕೆ ಪ್ರತಿಬಿಂಬಿಸುತ್ತಾ ಉದ್ದೇಶಿತ ಸಮಾರಂಭವು ಸಾವಿರಾರು ಅಭಿಮಾನಿಗಳು ಸೇರುವ ಅಭೂತಪೂರ್ವ ಸಮ್ಮೇಳನವಾಗಬೇಕು ಮತ್ತು 'ನ ಭೂತೋ, ನ ಭವಿಷ್ಯತಿ' ಎನ್ನುವಂತಿದ್ದು ಮುಂದಿನ ಪೀಳಿಗೆಗೆ ನಾಂದಿಯಾಗುವಂತಿರಬೇಕು ಎಂಬ ಇಚ್ಛೆಯನ್ನು ವ್ಯಕ್ತಪಡಿಸಿದರು. ಈ ಮಾತುಗಳನ್ನು ಕೇಳಿ ನಾನು ಪುಳಕಿತನಾದೆ.

ಮಾಡಿದ ಪುಣ್ಯಕ್ಕೆ ಫಲವೇ ಸಾಕ್ಷಿ
ತೋಡಿದ ಬಾವಿಗೆ ಜಲವೇ ಸಾಕ್ಷಿ

ಎನ್ನುವ ನಾಣ್ಣುಡಿಯಂತೆ ಶ್ರೀ ಡಿ.ಎಸ್. ರಾಮಪ್ಪನವರು ಮಾಡಿರುವ ಸಮಾಜಸೇವೆಯನ್ನು ಸಾರ್ಥಕಗೊಳಿಸುವಂತಹದ್ದಾಗಿದೆ ಈ ಸಮಾರಂಭ. ಪ್ರತಿಭೆಗೆ ಪುರಸ್ಕಾರವಿದೆ ಎನ್ನುವ ಮಾತು ಸತ್ಯ.

ಶ್ರೀ ಡಿ.ಎಸ್. ರಾಮಪ್ಪನವರ ಬಾಲ್ಯ ಮತ್ತು ವಿದ್ಯಾಭ್ಯಾಸ ಬಡತನದಲ್ಲಿ ಸಾಗಿದರೂ ಸಿವಿಲ್ ಇಂಜನಿಯರಿಂಗ್ ವಿಷಯದಲ್ಲಿ ಪದವೀಧರರಾದರು. ಕರ್ನಾಟಕ ಸರ್ಕಾರದ ಸಾರ್ವಜನಿಕ ಕಾಮಗಾರಿ ಇಲಾಖೆಯಲ್ಲಿ ಕಾರ್ಯನಿರ್ವಾಹಕ ಅಭಿಯಂತರಾಗಿ ನಿವೃತ್ತರಾದರು. ಇವರ ಯಶಸ್ಸಿನ ಗುಟ್ಟು ಕಠಿಣ ಪರಿಶ್ರಮ, ಕಾರ್ಯದಕ್ಷತೆ, ಶಿಸ್ತು, ಪ್ರಾಮಾಣಿಕತೆ, ಜೊತೆಗೆ ಸದಾ ಹಚ್ಚಹಸುರಾಗಿರುವ ಸಾಮಾಜಿಕ ಕಳಕಳಿ. ಎಲೆಮರೆಯ ಕಾಯಿಯಂತೆ ತಾವು ಅಧಿಕಾರದಲ್ಲಿದ್ದಾಗ ಅನೇಕ ಬಡವಿದ್ಯಾರ್ಥಿಗಳಿಗೆ, ತನ್ನನ್ನು ಯಾಚಿಸಿ ಬಂದ ಅರ್ಹರಿಗೆ, ತನ್ನನ್ನು ಪೋಷಿಸಿ ಬೆಳಸಿದ ಸಮಾಜಕ್ಕೆ ಶಕ್ತಿಮೀರಿ ಸಹಾಯ ಮಾಡಿದ್ದಾರೆ. ಸರಕಾರದಲ್ಲಿ, ಖಾಸಗಿ ವಲಯದಲ್ಲಿ ಅನೇಕ ಹುದ್ದೆಗಳನ್ನು ನಮ್ಮವರೊಂದಿಗೆ ದೊರಕಿಸಿಕೊಡುವಲ್ಲಿ ಜಯಶೀಲರಾಗಿದ್ದಾರೆ. ಶ್ರೀಯುತರೊಂದಿಗೆ ಆಗಾಗ್ಗೆ ಸಂವಾದ ನಡೆಸುವಾಗ ಇನ್ನೂ ಸಮಾಜಕ್ಕೆ ಸೇವೆ ಸಲ್ಲಿಸುವುದು ಅಪಾರವಿದೆ, ಉಪ್ಪಾರ ಸಮಾಜವು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಬಹಳ ಹಿಂದಿದೆ. ರಾಜಕೀಯವಾಗಿ ನಮ್ಮ ಸಮಾಜದ ಪ್ರಾತಿನಿಧ್ಯ ಶೂನ್ಯ. ಈ ದಿಶೆಯಲ್ಲಿ ಭಗೀರಥ ಪ್ರಯತ್ನ ಮಾಡಬೇಕೆಂಬ ಅವರ ಹಂಬಲ ಅನನ್ಯ.

ಇವರು ಸರಳ ಸಜ್ಜನಿಕೆಯ ಸಾಕಾರ ಮೂರ್ತಿ. ಇವರೊಂದಿಗೆ ಒಡನಾಟ ಎಲ್ಲಿಲ್ಲದ ಆನಂದ. ದೊಡ್ಡವರು-ಚಿಕ್ಕವರು, ಬಡವರು-ಬಲ್ಲಿದರು ಎಂಬ ಭೇದ ಭಾವ ತೋರಿಸದ, ಸರ್ವರಲ್ಲೂ ಏಕಭಾವನೆಯಿಂದ ವರ್ತಿಸುವ ಅಸಾಮಾನ್ಯ ವ್ಯಕ್ತಿತ್ವ. ಆಡು ಮುಟ್ಟದ ಸೊಪ್ಪಿಲ್ಲ, ಇವರು ರಾಜ್ಯದಲ್ಲಿ ಭೇಟಿ ಮಾಡದ ಉಪ್ಪಾರ ಸಮಾಜದ ಊರಿಲ್ಲ, ಸೂರಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ಸಂಘಟನಾಶಕ್ತಿ ಚಿರಾಯುವಾಗಲಿ ಎನ್ನುವಂಥ ದಿವ್ಯಮಂತ್ರವನ್ನು ಪಠಿಸುತ್ತಾ, ತನ್ಮೂಲಕ ಅಸಂಘಟಿತ ಉಪ್ಪಾರ ಸಮಾಜವನ್ನು ರಾಜ್ಯದ್ಯಾಂತ ಸ್ವಂತ ಶಕ್ತಿಯಿಂದ ಪ್ರವಾಸ ಮಾಡಿ ಸಂಘಟಿಸಿದ್ದಾರೆ. ತನ್ನನ್ನು ತಾನು ಸಂಪೂರ್ಣ ಸಮರ್ಪಿಸಿಕೊಳ್ಳದಿದ್ದರೆ,

ಮನುಷ್ಯನು ಸಮಾಜಕ್ಕೆ ಏನನ್ನೂ ಕೊಡಲಾರ ಎನ್ನುವುದರ ಸತ್ಯವನ್ನು ಅರಿತು ಕಾಯ, ವಾಚ ಮನಸಾ ಸರ್ಕಾರಿ ನೌಕರಿಯಲ್ಲಿದ್ದಾಗಲೂ, ನಿವೃತ್ತರಾದಮೇಲೂ ಉಳಿದ ಜೀವನಾವಧಿಯನ್ನು ಸಮಾಜದ ಶ್ರೇಯೋಭಿವೃದ್ಧಿಗೆ ಸಮರ್ಪಿಸಿಕೊಂಡಿದ್ದಾರೆ.

ಶ್ರೀ ಡಿ.ಎಸ್. ರಾಮಪ್ಪನವರು 1983ರಲ್ಲಿ ಸರ್ಕಾರಿ ನೌಕರಿಯಿಂದ ನಿವೃತ್ತರಾದ ಮೇಲೆ ಶಿವಮೊಗ್ಗ ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷರಾಗಿ ಚುನಾಯಿತರಾದರು. ಅನಂತರ ಸಂಘ ಚಟುವಟಿಕೆಯಲ್ಲಿ ಕಾರ್ಯಕರ್ತರಿಗೆ ಚೈತನ್ಯಪೂರಿತ ಹೊಸ ಹುರುಪು. ಆರ್ಥಿಕ ಮುಗ್ಗಟ್ಟಿನಿಂದ ನರಳುತ್ತಿದ್ದ ಸಂಘಕ್ಕೆ ಸ್ವಾವಲಂಬನೆಯ ಚೈತನ್ಯ. ಜ್ಞಾನ ದಾನವು ಜಗತ್ತಿನ ಎಲ್ಲ ದಾನಕ್ಕಿಂತ ಶ್ರೇಷ್ಠ. ಗುಡಿಗೋಪುರ ಕಟ್ಟುವ ಬದಲು ಮಕ್ಕಳ ವಿದ್ಯಾಭ್ಯಾಸಕ್ಕೆ ವಿದ್ಯಾರ್ಥಿನಿಲಯ ಮಾಡೋಣ. ಅವರ ಉಜ್ವಲ ಭವಿಷ್ಯಕ್ಕೆ ಅವಕಾಶ ಮಾಡಿಕೊಡೋಣವೆನ್ನುತ್ತಿದ್ದರು.

ಶಿವಮೊಗ್ಗ ನಗರದ ಉಪ್ಪಾರ ವಿದ್ಯಾರ್ಥಿನಿಲಯದಲ್ಲಿ ಕೇವಲ ಕೆಲವು ಕೊಠಡಿಗಳಿದ್ದು, ವಸತಿ ಮಾತ್ರ ಒದಗಿಸಲಾಗುತ್ತಿತ್ತು. ಅದಕ್ಕೆ ಊಟದಮನೆಯನ್ನು ಸೇರ್ಪಡೆ ಮಾಡಿದರು. ಜಿಲ್ಲಾ ಸಂಘದ ಅಧ್ಯಕ್ಷರಾಗಿ ತರುವಾಯ ಚುನಾಯಿತರಾದ ಶ್ರೀ ಯು. ಹಾಲಪ್ಪನವರು, ಅತ್ತಿಗುಂದ ಶ್ರೀ ಜಿ. ರಾಮಪ್ಪನವರು, ನಲ್ಲೂರಿನ ಶ್ರೀ ಯು. ಶಿವನಪ್ಪನವರು, ಶ್ರೀ ದೇವರಹಳ್ಳಿ ಎ. ಸಿದ್ದಪ್ಪನವರು, ಶ್ರೀ ಇಟ್ಟಿಗೆ ರಂಗಪ್ಪನವರು, ಹೊಳೆಹೊನ್ನೂರು ಶ್ರೀ ಯು. ದಾಸಪ್ಪನವರು ಮತ್ತು ಇನ್ನೂ ಅಸಂಖ್ಯಾತ ಉಪ್ಪಾರ ಬಂಧುಗಳ ಉದಾರ ಸಹಾಯ ಈ ಸಂದರ್ಭದಲ್ಲಿ ಅವಿಸ್ಮರಣೀಯ. ಅದರಲ್ಲೂ ಚನ್ನಗಿರಿ ತಾಲ್ಲೂಕು ಉಪ್ಪಾರ ಸಮಾಜದ ಬಂಧುಗಳು ಮತ್ತು ಹೊಳೆಹೊನ್ನೂರು ಉಪ್ಪಾರ ಸಮಾಜದ ಬಂಧುಗಳು ಕೊಠಡಿಗಳ ನಿರ್ಮಾಣ ವೆಚ್ಚ ತಾವೇ ಭರಿಸಿದ್ದು ಉಲ್ಲೇಖಾರ್ಹವಾದದ್ದು.

ನಾನು ಶಿವಮೊಗ್ಗ ಜಿಲ್ಲಾ ಉಪ್ಪಾರ ಸಂಘದಲ್ಲಿ ಸುಮಾರು 25 ವರ್ಷಗಳ ಪ್ರಧಾನ ಕಾರ್ಯದರ್ಶಿಯಾಗಿ ಜೊತೆಗೆ ಭದ್ರಾವತಿ ವಿಶ್ವೇಶ್ವರಯ್ಯ ಉಕ್ಕಿನ ಕಾರ್ಖಾನೆಯಲ್ಲಿ ಒಬ್ಬ ಅಧಿಕಾರಿಯಾಗಿ ಕಾರ್ಯನಿರ್ವಹಿಸಿದ್ದೇನೆ. ಆ ಅವಧಿಯಲ್ಲಿ ನಾಲ್ವರು ಅಧ್ಯಕ್ಷರೊಂದಿಗೆ ಸೇವೆ ಸಲ್ಲಿಸುವ ಸುಯೋಗ ಒದಗಿತ್ತು. ಅವರುಗಳೆಂದರೆ ಶ್ರೀ ಇಟ್ಟಿಗೆ ರಂಗಪ್ಪನವರು, ಶ್ರೀ ಎ. ಸಿದ್ದಪ್ಪನವರು, ಶ್ರೀ ಡಿ.ಎಸ್. ರಾಮಪ್ಪನವರು ಮತ್ತು ಶ್ರೀ ಯು. ಹಾಲಪ್ಪನವರು. ಮೊದಲಿಬ್ಬರು ಅಧ್ಯಕ್ಷರುಗಳು ಪ್ರಬುದ್ಧ ರಾಜಕಾರಣಿಗಳು ಮತ್ತು ಪ್ರಗತಿಪರ ರೈತರು. ಉಳಿದಿಬ್ಬರು ಇಂಜನಿಯರ್‌ಗಳು. ಈ ಸಂದರ್ಭದಲ್ಲಿ ಶ್ರೀ ಡಿ.ಎಸ್. ರಾಮಪ್ಪನವರು ಅಧ್ಯಕ್ಷರಾಗಿದ್ದಾಗ ಅವರ ಸರಳತೆ, ಕಾರ್ಯತತ್ಪರತೆ ಪ್ರತಿಬಿಂಬಿಸುವ ಕೆಲವು ಘಟನೆಗಳನ್ನು ಇಲ್ಲಿ ನೆನಪಿಸಿಕೊಳ್ಳುವುದು ಸೂಕ್ತವೆನಿಸುವುದು.

ಅಂದು ಶಿವಮೊಗ್ಗ ಜಿಲ್ಲಾ ಸಂಘದ ಪ್ರಮುಖ ಕಾರ್ಯಕರ್ತರು ಗಾಜನೂರು ಮತ್ತು ಇತರೆ ಅಕ್ಕಪಕ್ಕದ ಹಳ್ಳಿಗಳಿಗೆ ನಿಧಿ ಸಂಗ್ರಹಿಸಲು ಹೋಗುವ ಕಾರ್ಯಕ್ರಮವಿತ್ತು. ಹೋಗಿ

ಬರಲು ವಾಹನಗಳ ಅನನುಕೂಲ ಮತ್ತು ಸಮಯದ ಅಭಾವ. ಅಂತೂ ಶಿವಮೊಗ್ಗ ಪೋಸ್ಟ್ ರಾಮಪ್ಪನವರ ಪುತ್ರ ಶ್ರೀ ಸತ್ಯನಾರಾಯಣರವರ ಕಾರಿನಲ್ಲಿ ಹೋಗಲು ವ್ಯವಸ್ಥೆಯಾಯಿತು. ಅಂದೇ ವಾಹನಚಾಲಕನ ಗೈರುಹಾಜರು. ಶ್ರೀಯುತರು ಸ್ವಲ್ಪವೂ ವಿಚಲಿತರಾಗದೆ, ತಾವೇ ವಾಹನಚಾಲನೆ ಮಾಡುತ್ತೇನೆಂದು ವಾಹನ ಮಾಲೀಕರಿಗೆ ತಿಳಿಸಿದರು. ಈ ಮಾತುಗಳನ್ನು ಕೇಳಿ ಯಾವಾಗಲೂ ಜೀಪು ಮತ್ತು ಕಾರಿನಲ್ಲಿ ಕೂತು ಪ್ರಯಾಣ ಮಾಡುತ್ತಿದ್ದ ವ್ಯಕ್ತಿ ಕಾರು ಚಾಲಕನಾಗಿ ಕೆಲಸ ನಿರ್ವಹಿಸುತ್ತಾರಲ್ಲಾ ಎಂಬ ನೋವು, ಅಳುಕು; ಆದರೂ, ಆ ಸಮಯದಲ್ಲಿ ಅನಿವಾರ್ಯವಾಗಿತ್ತು.

ಮತ್ತೊಂದು ದಿವಸ ಪುನಃ ಗಾಜನೂರಿಗೆ ವಾಹನವಿಲ್ಲದೆ ಬಸ್ಸಿನಲ್ಲಿ ಹೋಗುವಂಥ ಪರಿಸ್ಥಿತಿ ನಿರ್ಮಾಣವಾಯಿತು. ಮಧ್ಯಾಹ್ನವೇ ಸಭೆ ಕರೆದಿದ್ದರೂ ಸಹ ಅನಿವಾರ್ಯ ಕಾರಣಗಳಿಂದ ಸಭೆ ಸೇರುವುದು ವಿಳಂಬವಾಗಿ ಸಭೆ ರಾತ್ರಿ 10 ಗಂಟೆವರೆವಿಗೂ ನಡೆಯಿತು. ಕಾರ್ಯಕರ್ತರೆಲ್ಲ ಅಂದೇ ತಮ್ಮೂರುಗಳಿಗೆ ವಾಪಸ್ಸಾಗುವ ಇಚ್ಛೆ ವ್ಯಕ್ತಪಡಿಸಿದ್ದರಿಂದ ರಸ್ತೆ ಬದಿಯಲ್ಲಿ ಮಧ್ಯರಾತ್ರಿಯವರೆವಿಗೂ ಕಾದು ಶಿವಮೊಗ್ಗಕ್ಕೆ ಲಾರಿಯಲ್ಲಿ ಪ್ರಯಾಣ ಮಾಡಬೇಕಾಯಿತು. ಸರ್ಕಾರದಲ್ಲಿ ಒಬ್ಬ ದೊಡ್ಡ ಅಧಿಕಾರಿಯಾಗಿ ಸೇವೆ ಸಲ್ಲಿಸಿ ಶ್ರೀಸಾಮಾನ್ಯರಂತೆ ವರ್ತಿಸಿದ್ದು ನಮಗೆ ಮಹದಾಶ್ಚರ್ಯವಾಯಿತು.

ಆಗಿನ್ನೂ ಸನ್ಮಾನಿತರು ಸಾಗರದಲ್ಲಿ ಕಾರ್ಯನಿರ್ವಾಹಕ ಅಭಿಯಂತರರಾಗಿ ಸೇವೆ ಸಲ್ಲಿಸುತ್ತಿದ್ದರು. ಜಿಲ್ಲಾ ಸಂಘದ ಕಾರ್ಯಕಾರಿ ಸಮಿತಿ ಸಭೆ ಮತ್ತು ಸಾಗರ ತಾಲ್ಲೂಕಿನ ಸಂಘಟನಾ ಸಭೆಯನ್ನು ಕರೆಯಲಾಗಿತ್ತು. ಸಭೆಗೆ ಶ್ರೀಯುತರು ಗೈರುಹಾಜರಾದರೂ, ಸಭೆ ನಡೆಸಲು ಅದ್ದೂರಿ ವ್ಯವಸ್ಥೆ, ಆರ್ಥಿಕ ಸಹಾಯ ನೀಡಿದ್ದು ಇವರೇ ಎಂದು ಮೇಲ್ವಿಚಾರಕರಿಂದ ತಿಳಿದುಬಂತು.

ಶಿವಮೊಗ್ಗ ಜಿಲ್ಲಾ ನೌಕರರ ಮತ್ತು ನಿವೃತ್ತ ನೌಕರರ ಮಹಾಸಮ್ಮೇಳನ ನಡೆಸಿ, ನೌಕರರಿಂದ ನಿಧಿ ಸಂಗ್ರಹಿಸುವುದು ಶ್ರೀ ಡಿ.ಎಸ್. ರಾಮಪ್ಪ ಮತ್ತು ಶ್ರೀ ಎಸ್. ಹಳದಪ್ಪನವರ ಇಚ್ಛೆಯಾಗಿತ್ತು. ಶಿವಮೊಗ್ಗ ಜಿಲ್ಲೆಯ ನೌಕರರ ಮತ್ತು ಆ ಜಿಲ್ಲೆಯವರಾಗಿದ್ದು ಬೇರೆ ಬೇರೆ ಜಿಲ್ಲೆಗಳಲ್ಲಿ ವೃತ್ತಿ ಮಾಡುತ್ತಿರುವವರ ವಿಳಾಸಗಳನ್ನು ಭಗೀರಥ ಪ್ರಯತ್ನದಿಂದ ಸಂಗ್ರಹಿಸಲಾಯಿತು. ರಾಜ್ಯಮಟ್ಟದ ಮತ್ತು ಜಿಲ್ಲಾಮಟ್ಟದ ಮುಖಂಡರನ್ನು ಆಹ್ವಾನಿಸಿ ತಾ. 12-2-1984ರಂದು ಅತ್ಯಂತ ಯಶಸ್ವಿಯಾಗಿ ಸಮ್ಮೇಳನವನ್ನು ನಡೆಸಲಾಯಿತು. ಈ ಸಮ್ಮೇಳನವು ಮೊದಲನೆಯದೆಂಬ ಹೆಗ್ಗಳಿಕೆಗೂ ಮತ್ತು ಇತರೆ ಹಿಂದುಳಿದ ಕೋಮುಗಳ ಮೆಚ್ಚುಗೆಗೆ ಪಾತ್ರವಾಯಿತು. ಜಿಲ್ಲಾ ಮತ್ತು ರಾಜ್ಯದ ಮೂಲೆಮೂಲೆಗಳಿಂದ ಸಹಸ್ರ ಸಂಖ್ಯೆಯಲ್ಲಿ ಅಭಿಮಾನಿ ನೌಕರರು ಮತ್ತು ಇತರೆಯವರು ಆಗಮಿಸಿದ್ದರು. ಇದರಿಂದಾಗಿ ವಿದ್ಯಾರ್ಥಿನಿಲಯದ ಅಭಿವೃದ್ಧಿಗೆ ನಿಧಿ ಸಂಗ್ರಹಿಸಲು ನೌಕರರ ಒಪ್ಪಿಗೆಗೆ ಮತ್ತು ಚಾಲನೆಗೆ ನಾಂದಿಯಾಯಿತು.

ಅರ್ಹರನ್ನು ಗೌರವಿಸುವುದೆಂದರೆ ಇವರಿಗೆ ತುಂಬ ಅಭಿಮಾನ, ಸಂತೋಷ ಮತ್ತು ಹೆಮ್ಮೆ. ಆಗತಾನೆ ಸಂಡೂರಿನಿಂದ ವಿಧಾನಸಭೆಗೆ ಆಯ್ಕೆಯಾಗಿದ್ದ ಶಾಸಕ ಶ್ರೀ ಯು. ಭೂಪತಿಯವರಿಗೆ ಭದ್ರಾವತಿ ತಾಲ್ಲೂಕು ಸೀತಾರಾಮಪುರ ಪ್ರೌಢಶಾಲಾವರಣದಲ್ಲಿ ಅತ್ತಿಗುಂದ ಗ್ರಾಮಸ್ಥರ ಸಂಪೂರ್ಣ ಸಹಕಾರ, ವ್ಯವಸ್ಥೆಯಿಂದ ಜಿಲ್ಲಾ ಸಂಘದ ಆಶ್ರಯದಲ್ಲಿ ಅದ್ದೂರಿಯಾಗಿ ತಾ. 21-4-1985 ರಂದು ಸನ್ಮಾನ ಸಮಾರಂಭ ನಡೆಸಿದರು.

ಶ್ರೀ ಡಿ.ಎಸ್. ರಾಮಪ್ಪನವರು ಆಗಲೇ ಕರ್ನಾಟಕ ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾಗಿ ಆಯ್ಕೆಯಾದ್ದರಿಂದ ಶಿವಮೊಗ್ಗ ಜಿಲ್ಲಾ ಸಂಘದ ಅಧ್ಯಕ್ಷ ಸ್ಥಾನವನ್ನು ತೆರವುಗೊಳಿಸಲಿಚ್ಛಿಸಿ ತರುವಾಯ ಚನ್ನಗಿರಿ ತಾಲ್ಲೂಕು ನಲ್ಲೂರಿನ ನಿವೃತ್ತ ಕಾರ್ಯನಿರ್ವಾಹಕ ಅಭಿಯಂತರಾಗಿದ್ದ ಶ್ರೀ ಯು. ಹಾಲಪ್ಪನವರಿಗೆ ಅದೇ ಸಂದರ್ಭದಲ್ಲಿ ಅಧ್ಯಕ್ಷ ಸ್ಥಾನದ ಅಧಿಕಾರವನ್ನು ಹಸ್ತಾಂತರಿಸಿದರು.

ಕರ್ಮಣ್ಯೇವಾಧಿಕಾರಸ್ತೇ

ಮಾ ಫಲೇಷು ಕದಾಚನ-ಎನ್ನುವ

ಗೀತಾವಾಣಿಯಂತೆ ಕರ್ಮ ಮಾಡುವುದರಲ್ಲಿ ಮಾತ್ರ ಅಧಿಕಾರ, ಫಲದ ಬಗ್ಗೆ ಆಸಕ್ತಿ ಇಟ್ಟವರಲ್ಲ ಶ್ರೀ ಡಿ.ಎಸ್. ರಾಮಪ್ಪನವರು. ಯಾವ ಮನುಷ್ಯ ನಿಷ್ಕಾಮ, ನಿಷ್ಕಪಟ ಕರ್ಮವೆಸಗುತ್ತಾನೋ ಅವನಿಗೆ ದೇವರ ಅನುಗ್ರಹದಿಂದ ಫಲ ದೊರಕುವುದೆಂದು ನಂಬಿದವರು. ಪೂಜ್ಯಗುರುಗಳು ಮತ್ತು ಜನಾಂಗದ ಅನೇಕ ಗಣ್ಯ ಬಂಧುಗಳ ತ್ಯಾಗ, ಪರಿಶ್ರಮದೊಂದಿಗೆ ಬೆಂಗಳೂರಿನಲ್ಲಿ ಒಂದು ವಿದ್ಯಾರ್ಥಿನಿಲಯ, ದಾವಣಗೆರೆಯಲ್ಲಿ ಶಾಖಾಮಠ ನಿರ್ಮಾಣವಾದವು. ಇವುಗಳಲ್ಲಿ ಶ್ರೀ ಡಿ.ಎಸ್. ರಾಮಪ್ಪನವರ ಮತ್ತು ಶ್ರೀ ಹೆಚ್.ಸಿ. ನೀರಾವರಿಯವರ ಕೊಡುಗೆ ಅಪಾರ.

ಇವರೊಬ್ಬ ಶಿಸ್ತುಗಾರರು, ಸಮಯಪಾಲಕರು, ಶುದ್ಧಹಸ್ತರು, ದ್ವೇಷ-ಅಸೂಯೆಯಿಂದ ಹೊರತಾದವರು. ಪದವಿ ಪ್ರತಿಷ್ಠೆ ಯಾಚಿಸಿ ಪಡೆಯುವ ಗುಣಕ್ಕೆ ಒಗ್ಗದವರು. ಮೌಲ್ಯವರ್ಧಿತ ಗುಣಾಂಶವುಳ್ಳವರು. ಇಂಥ ಧೀಮಂತ ವ್ಯಕ್ತಿಯ ಮಾರ್ಗದರ್ಶನ ನಮ್ಮ ಸಮಾಜಕ್ಕೆ ದಾರಿದೀಪವಾಗಲಿ.

ಚೈತನ್ಯದ ಚಿಲುಮೆಯಂತಿರುವ ಅವರ ಮನಸ್ಸು ಮತ್ತು ಕಾರ್ಯ ಇನ್ನೂ ಹಲವು ದಶಕಗಳು ಉಪ್ಪಾರ ಸಮಾಜದ ಮುನ್ನಡೆಗೆ ಮುಡಿಪಾಗಲಿ. ಇಂಥ ಮಹಾನ್ ಆದರ್ಶ ವ್ಯಕ್ತಿತ್ವವುಳ್ಳವರನ್ನು 'ಅಜಾತಶತ್ರು' ಎಂದು ಸಂಬೋಧಿಸಿದರೆ ಅತಿಶಯೋಕ್ತಿಯಾಗಲಾರದು.

*

* ## ಮಹಾಚೇತನ

- ಮೈಲಾರಪ್ಪ
ಶ್ರೀರಂಗ

ಭರತಖಂಡವು ಬಂಜೆಯ ನೆಲವಲ್ಲ. ಈ ನೆಲದಲ್ಲಿ ಅನೇಕ ಜೀವಾತ್ಮಗಳು ಬೆಳೆದು ಒಂದಿಲ್ಲೊಂದು ತೆರನಾಗಿ ಪರೋಪಕಾರದ ಕೆಲಸವನ್ನು ಮಾಡುತ್ತಿವೆ. ಒಂದು ಇನ್ನೊಂದನ್ನು ಹೋಲುವುದಿಲ್ಲ. ಅದೇ ಸೃಷ್ಟಿಯ ಶ್ರೇಷ್ಠತೆಯ ಗುಣ.

ಉಪ್ಪಾರ ಸಮಾಜದ ಉನ್ನತಿಗೆ ಶ್ರಮಿಸಿದ ಡಿ. ಎಸ್. ರಾಮಪ್ಪ ವ್ಯಕ್ತಿ ಅಲ್ಲ ; ಒಂದು ದಿವ್ಯಶಕ್ತಿ.

**ಮಲೆನಾಡು** : ಚನ್ನಗಿರಿಯ ಉತ್ತರದ ಉಡುಗಿರಿ ರಂಗನಾಥನ ಬೆಟ್ಟದ ತಡಿಯ ತಟಾಕದ ಬಳಿ ಇರುವ ದೇವರಹಳ್ಳಿ ಯಲ್ಲಿ ಉಪ್ಪಿನ ಕಾಯಕದ ವೃತ್ತಿಯ ಕಡುಬಡತನದ ಬೇಗೆಯಲಿ ಜೀವನ ಸಾಗಿಸುತ್ತಿದ್ದ ಸಿಕ್ಕುಡಿಯಪ್ಪ, ಕರಿಯಮ್ಮ ದಂಪತಿಗಳಿಗೆ ಜನಿಸಿದವರು ಶ್ರೀ ರಾಮಪ್ಪ.

ಜನನ : 1928ರಲ್ಲಿ ಜನಿಸಿದ ರಾಮಪ್ಪನವರು ಕುಂಟುತ್ತ, ಎಡವುತ್ತ, ತೊದಲುತ್ತ ಅಂಬೆಗಾಲಿಡುತ್ತ ಬಿಳಿಯ ಚೆಂಡುಹೂವಿನ ದುಂಡನೆಯ ಮುಖದ ಕಂದನಾಗಿ ದಿನೇ ದಿನೇ ಕಾಂತಿಯುತವಾಗಿ ಬೆಳೆಯತೊಡಗಿದರು.

ಶಿಕ್ಷಣ : ಗ್ರಾಮದ ಕೂಲಿಮಠ, ಅನಂತರ ಪ್ರಾಥಮಿಕ ಶಾಲೆಯಲ್ಲಿ ಇವರ ವಿದ್ಯಾಭ್ಯಾಸ ನಡೆಯಿತು. ತುಂಬ ಆಸಕ್ತಿ ವಹಿಸಿ ರಾಮಪ್ಪ ಶಿಕ್ಷಕರ ಪಾಠವನ್ನು ಚೆನ್ನಾಗಿ ಗ್ರಹಿಸುತ್ತಿದ್ದರು. ಮಾಧ್ಯಮಿಕ ಶಿಕ್ಷಣವನ್ನು ಸಂತೆಬೆನ್ನೂರಿನಲ್ಲಿ ಬ್ರಾಹ್ಮಣ ಕುಟುಂಬದ ನೆರವಿನಿಂದ ಪಡೆದರು. ಜಾತಿ ಸಂಘರ್ಷದ ಕಾಲದಲ್ಲಿ 'ಜಾತಿ ಮೆಟ್ಟಿ ನಿಂತ

ಧೀರ ಬಾಲಕ' ಎಂಬ ಹೆಗ್ಗಳಿಕೆ ಇವರದು. ನಂತರ ಇವರ ಪ್ರೌಢಶಾಲೆ ಶಿಕ್ಷಣವು ವಾರಾನ್ನದ ವ್ಯವಸ್ಥೆಯಲ್ಲಿ ಶಿವಮೊಗ್ಗದಲ್ಲಿ ನಡೆಯಿತು.

ಶ್ರೀಯುತರು 'ಹೊಟ್ಟೆಯ ಅನ್ನಕ್ಕಾಗಿ ಪರದಾಡಲಿಲ್ಲ' ಜ್ಞಾನದ ಅರಿವಿಗಾಗಿ ಪರದಾಡಿದರು. ಅನ್ನವಿಲ್ಲ, ಬಟ್ಟೆ ಇಲ್ಲ, ಪುಸ್ತಕವಿಲ್ಲದಿದ್ದಾಗ ಶಿವಮೊಗ್ಗ, ಚಿಕ್ಕಮಗಳೂರು, ಭದ್ರಾವತಿ, ಹೊಳೆಹೊನ್ನೂರು, ಚನ್ನಗಿರಿ ಮುಂತಾದ ಕಡೆಯ ದಾನಿಗಳು ಇವರ ವಿದ್ಯೆಗೆ ನೆರವಾದರು.

ಇಂಟರ್‌ಮಿಡಿಯೇಟ್ ಕಾಲೇಜು ಶಿಕ್ಷಣ ಸಹ ದಾನಿಗಳ ನೆರವಿನಿಂದಲೇ ಶಿವಮೊಗ್ಗದಲ್ಲಿ ನಡೆಯಿತು.

**ಸ್ವಾತಂತ್ರ್ಯ ಚಳವಳಿ** : 1947ರ ಸ್ವಾತಂತ್ರ್ಯ ಚಳವಳಿಯಲ್ಲಿ ಇವರು ಭಾಗವಹಿಸಿ ಪೊಲೀಸರ ಲಾಠಿಏಟು ತಿಂದು ಸೆರೆವಾಸ ಅನುಭವಿಸಿದರು.

1949ರಲ್ಲಿ ನೀರಾವರಿ ಇಲಾಖೆಯಲ್ಲಿ ತಾತ್ಕಾಲಿಕ ಕಾರಕೂನ ಹುದ್ದೆಗೆ ಸೇರಿಕೊಂಡರು. ಉನ್ನತ ಶಿಕ್ಷಣ ಪಡೆಯಬೇಕೆಂಬ ಹಂಬಲದಿಂದ ಆ ಕಾರಕೂನ ಹುದ್ದೆಯನ್ನು ತ್ಯಜಿಸಿದರು.

**ಇಂಜಿನಿಯರಿಂಗ್ ಪದವಿ** : ಬೆಂಗಳೂರಿನ ವಿಶ್ವೇಶ್ವರಯ್ಯ ತಾಂತ್ರಿಕ ಕಾಲೇಜಿನಲ್ಲಿ ಸಿವಿಲ್ ವಿಷಯದಲ್ಲಿ ಬಿಇ ಪದವಿ ಪಡೆದರು. ಆ ಕಾಲದಲ್ಲಿ ಕಡಿದಾಳು ಮಂಜಪ್ಪನವರ ಸಹಾಯದಿಂದ ಯಾದವ ವಸತಿನಿಲಯದಲ್ಲಿ ಪ್ರಸಾದ ಪಡೆದರು.

**ಮದುವೆ** : ಕುಂಸಿ ಶ್ರೀ ಬಾಬು ಹುಚ್ಚಣ್ಣನವರ ನಾಲ್ಕನೆಯ ಮಗಳು ಸಣ್ಣಮ್ಮನವರೊಂದಿಗೆ ವಿದ್ಯಾಭ್ಯಾಸದ ಅವಧಿಯಲ್ಲೇ ಮದುವೆ ಆಯಿತು.

**ನೌಕರಿ** : ಇಂಜಿನಿಯರ್ ಪದವಿ ಆದ ತಕ್ಷಣ ಉಪ್ಪಾರ ಸಮಾಜದ ಎರಡನೆಯ ಇಂಜಿನಿಯರ್ ಎನಿಸಿಕೊಂಡು ತೀರ್ಥಹಳ್ಳಿಯಲ್ಲಿ ಲೋಕೋಪಯೋಗಿ ಇಲಾಖೆ ಮೂಲಕ ಸರ್ಕಾರಿ ವೃತ್ತಿ ಆರಂಭಿಸಿದರು. ನಾಡಿನ ಅನೇಕ ಕಡೆ ದಕ್ಷತೆ ಹಾಗೂ ಪ್ರಾಮಾಣಿಕತೆಯಿಂದ ದುಡಿದು ನಿವೃತ್ತಿಯಾಗಿ ಇದೀಗ ದಾವಣಗೆರೆಯಲ್ಲಿ ವಾಸವಾಗಿದ್ದಾರೆ.

**ದೇಶಸೇವೆ ಇಲ್ಲ ಸಮಾಜಸೇವೆ** : ದೇಶಸೇವೆ ಹಾಗು ಸಮಾಜಸೇವೆ ಹಂಬಲ ಹೊಂದಿದ ಇವರು ನಿವೃತ್ತಿನಂತರ ಶಿವಮೊಗ್ಗ ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷರಾಗಿ ಪ್ರಾಮಾಣಿಕ ಸೇವೆ ಸಲ್ಲಿಸಿ ಅನಂತರ ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾದರು.

**ರಾಮಹನುಮರು** : ಜೋಡಿ ಎತ್ತುಗಳಾಗಿ ನಾಡಿನ ಉಪ್ಪಾರ ಕೃಷಿಕರ ಮನೆ ಬಾಗಿಲು ತಟ್ಟಿ ಅವರ ಕಷ್ಟಕಾರ್ಪಣ್ಯ ಕೇಳಿ ಸಮಾಜದ ಹೊಸ ಹೊಸ ಬದಲಾವಣೆಗೆ ದಾರಿ ಮಾಡಿದ ವಿಭೂತಿಪುರುಷರೆಂದರೆ ಅಧ್ಯಕ್ಷರಾದ ಡಿ.ಎಸ್. ರಾಮಪ್ಪ ಹಾಗೂ ಕಾರ್ಯದರ್ಶಿ ಎಂ. ಹನುಮಯ್ಯ.

**ಸಮ್ಮೇಳನ** : ಬೆಂಗಳೂರಿನ ಪುರಭವನದಲ್ಲಿ ನಾಲ್ಕನೇ ಉಪ್ಪಾರರ ಮಹಾಸಮ್ಮೇಳನ ನಡೆಸಿ ರಾಜ್ಯದ ಮಂತ್ರಿ ಮಹೋದಯರನ್ನು ಕರೆಸಿ ಸಮಾಜದ ಬೆಳವಣಿಗೆಗೆ ನಾಂದಿಯಾದರು.

ಸಮಾಜದ ಮುಖಂಡರಿಗೆ ವಿಧಾನಪರಿಷತ್, ನಿಗಮ, ಮಂಡಲಿಗಳಿಗೆ ನಾಮಕರಣ ಹೊಂದಲು ಅವಕಾಶ ಮಾಡಿಕೊಟ್ಟ ಧೀರ ವ್ಯಕ್ತಿತ್ವದ ಬಹುಮುಖ ಪ್ರತಿಭೆಯ ವ್ಯಕ್ತಿ ಇವರು.

**ಜನಗಣತಿ :** ರಾಜ್ಯದಲ್ಲೆಲ್ಲ ತಿರುಗಿ ಉಪ್ಪಾರ ಜನಗಣತಿ ಕಾರ್ಯವನ್ನು ಪ್ರಾರಂಭಿಸಿದ್ದರು.

**ಗೋಕಾಕ್ ಸಮ್ಮೇಳನ :** ರಾಜ್ಯಮಟ್ಟದ ಐದನೆಯ ಸಮ್ಮೇಳನವನ್ನು ಉತ್ತರ ಕರ್ನಾಟಕದಲ್ಲಿ ಮಾಡಿ ಅಲ್ಲಿನ ಜನತೆಗೆ ಹೊಸ ಆಯಾಮ ಹಾಗೂ ಪ್ರೋತ್ಸಾಹ ತುಂಬಿದ ಚೇತನ ಇವರದು.

**ಬೆಂಗಳೂರಿನಲ್ಲಿ ಉಪ್ಪಾರ ಸಮಾಜಕ್ಕೊಂದು ನೆಲೆ :** ರಾಜ್ಯದ ಜನತೆಗೆ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು ಶ್ರೀ ಹೆಚ್. ಸಿ. ನೀರಾವರಿ ಅವರ ಸಹಕಾರ, ಸಲಹೆ, ಮಾರ್ಗದರ್ಶನ ಪಡೆದು ಬಿಡಿಎ ಮೂಲಕ ನಿವೇಶನ ಪಡೆದರು. ಈ ಹಿಂದೆ ಬಾಡಿಗೆ-ವಸತಿನಿಲಯದಲ್ಲಿ ಶ್ರೀ ಲೇಪಾಕ್ಷ ಶ್ರೀಗಳು ಸಭೆ ನಡೆಸುವ ಪರಿಪಾಠ ನೋಡಿದ್ದ ನಮಗೆ ಇದೊಂದು ಪವಾಡದಂತೆ ಕಾಣಿಸಿತು.

**ಧಾರ್ಮಿಕ ಟ್ರಸ್ಟ್ :** ಉಪ್ಪಾರ ಜನಾಂಗದ ಗಣ್ಯರು ಮುಖಂಡರ ಸಹಕಾರದಿಂದ ಧಾರ್ಮಿಕ ಟ್ರಸ್ಟ್‌ವೊಂದನ್ನು ಸ್ಥಾಪಿಸಿದರು. ಶ್ರೀ ಮಠದ ವ್ಯಾಪ್ತಿಯಲ್ಲೇ ಈ ಟ್ರಸ್ಟ್ ಕಾರ್ಯನಿರ್ವಹಿಸುತ್ತಿದೆ. ಪೂಜ್ಯ ಲೇಪಾಕ್ಷ ಸ್ವಾಮಿಗಳು ಇದರ ಮೊದಲ ಅಧ್ಯಕ್ಷರು.

**ರಾಜ್ಯವ್ಯಾಪ್ತಿಯ ಪ್ರಸಾದ ನಿಲಯ :** ರಾಜ್ಯದ ಅನೇಕ ಕಡೆ ವಿದ್ಯಾರ್ಥಿನಿಲಯ ಸ್ಥಾಪಿಸಲು ಸಭೆ-ಸಮಾರಂಭ ಏರ್ಪಡಿಸಿ ಉಪ್ಪಾರ ಜನಾಂಗವನ್ನು ಹುರಿದುಂಬಿಸಿದರು. ಹೊಸದುರ್ಗ ತಾಲ್ಲೂಕಿನ ಆಗಿನ ಕಾರ್ಯದರ್ಶಿ ಶ್ರೀ ರಾಮಚಂದ್ರಪ್ಪನವರನ್ನು ಕೇಳಿಕೊಂಡಾಗ ಅವರೇ ವಿದ್ಯಾರ್ಥಿನಿಲಯದ ಶಂಕುಸ್ಥಾಪನೆ ಮಾಡಿದರು. ಇಂದು ಹದಿನಾರು ಕೊಠಡಿಗಳ ವಿದ್ಯಾರ್ಥಿನಿಲಯ ಬೆಂಗಳೂರಿನಲ್ಲಿದೆ.

**ಶಾಖಾಮಠಗಳು :** ವಿಶಾಲ ಕರ್ನಾಟಕದಲ್ಲಿ ಉಪ್ಪಾರ ಸಮಾಜದ ಮೂಲ ಮಠದ ಆಶ್ರಯದಡಿಯಲ್ಲಿ ಪಂಚ ಶಾಖಾಮಠಗಳಾಗಬೇಕೆಂಬ ಕನಸು ಕಂಡವರು ಶ್ರೀ ರಾಮಪ್ಪ. ಅದರ ಫಲವಾಗಿ ದಾವಣಗೆರೆಯಲ್ಲಿ ಶ್ರೀ ರಾಮಪ್ಪನವರೇ ಮೊದಲು ಶಾಖಾಮಠ ಪ್ರಾರಂಭಿಸಿದರು.

**ಸಾಹಿತ್ಯ :** ಉಪ್ಪಾರ ಸಮಾಜದ ಇತಿಹಾಸ, ಜನಪದ, ಕಾವ್ಯ, ಶಾಸನ, ಪರಂಪರೆ, ಸಂಗೀತ, ಕಲೆ, ಶಿಕ್ಷಣ, ಸಾಮಾಜಿಕ ಜೀವನ, ಕ್ರೀಡೆ, ಸೇವೆ, ವಿವಿಧ ರೀತಿ ಕಸುಬು ಮಾಡುವ ವ್ಯಕ್ತಿಗಳನ್ನು ಗುರುತಿಸಿ ಅವರ ಪರಿಚಯವನ್ನು ಒಳಗೊಂಡ ಮೌಲಿಕ ಸ್ಮರಣ ಸಂಚಿಕೆಯನ್ನು ಹೊರ ತಂದ ಕೀರ್ತಿ ಇವರದು.

ಶ್ರದ್ಧಾಂಜಲಿ : ಸಾಮಾಜಿಕ ನೇತಾರ ಸಿ. ರಾಮಚಂದ್ರಪ್ಪನವರ ಶ್ರದ್ಧಾಂಜಲಿ ಸಭೆ ಏರ್ಪಡಿಸಿ ಸಮಾಜದವರಲ್ಲಿ ಜಾಗೃತಿ ಮೂಡಿಸಿದ ವ್ಯಕ್ತಿ.

**ಪೂಜ್ಯ ಶ್ರೀ ಲೇಪಾಕ್ಷ ಸ್ವಾಮೀಜಿ ಶ್ರದ್ಧಾಂಜಲಿ** : ಶ್ರೀ ಶ್ರೀ ಶ್ರೀ ಲೇಪಾಕ್ಷಸ್ವಾಮೀಜಿ ಅವರ ಅತ್ಯಂತ ಆತ್ಮೀಯ ಶಿಷ್ಯರಲ್ಲಿ ರಾಮಪ್ಪನವರು ಪ್ರಮುಖರು. ಸ್ವಾಮೀಜಿಯವರು ನ್ಯುಮೋನಿಯಾದಿಂದ ಬಳಲುತ್ತಿದ್ದಾಗ ಬೆಂಗಳೂರಿನ ಆಸ್ಪತ್ರೆಗೆ ಹೋಗಿ ಅವರ ಆರೋಗ್ಯ ವಿಚಾರಿಸಿ ಅವರೊಟ್ಟಿಗೆ ಇದ್ದು, ಅವರ ಸಂದೇಶದಂತೆ 7-3-98 ರಲ್ಲಿ ಸಭೆ ಏರ್ಪಡಿಸಿದರು. ಅಷ್ಟರ ಹೊತ್ತಿಗೆ ಶ್ರೀಗಳು ಇಹಲೋಕವಾಸ ಮುಗಿಸಿದ ಸುದ್ದಿ ಬಂತು. ಉಪ್ಪಾರ ಹಟ್ಟಿಯಲ್ಲಿ ಜನಸಾಗರ ಸೇರಿತು.

ಪೂಜ್ಯ ಶಿವಪುರಿ ಸ್ವಾಮೀಜಿಯವರ ಮಾರ್ಗದರ್ಶನದಂತೆ ಪೂಜ್ಯ ಲೇಪಾಕ್ಷ ಸ್ವಾಮಿಗಳ ಪಾರ್ಥಿವ ಶರೀರವನ್ನು ಬ್ರಹ್ಮವಿದ್ಯಾನಗರಕ್ಕೆ ತಂದು ನಾಡಿನ ಜನತೆಗೆ ಈ ವಿಷಯ ಮುಟ್ಟಿಸಿ ಶ್ರೀಗಳ ಅಂತ್ಯಸಂಸ್ಕಾರವನ್ನು ಯಶಸ್ವಿಯಾಗಿ ನೆರವೇರಿಸಿದ ಕೀರ್ತಿಗೆ ಡಿ.ಎಸ್. ರಾಮಪ್ಪನವರದು.

**ಉತ್ತರಾಧಿಕಾರಿಗಳಿಗೆ ಪಟ್ಟಾಭಿಷೇಕ** : ಸಮಾಜ ಕಟ್ಟಿ ಸಂಘಟನೆ ಮಾಡಿ ಜನಮನ ಗೆದ್ದ ಇವರು ಶ್ರೀಮಠಕ್ಕೆ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಪುರುಷೋತ್ತಮಾನಂದಪುರಿ ಸ್ವಾಮೀಜಿ ಅವರಿಗೆ ಅದ್ದೂರಿಯಾಗಿ ಪಟ್ಟಾಭಿಷೇಕ ಮಾಡಿದರು. ರಾಮಹನುಮರಿಬ್ಬರಿರುವ ಧಾರ್ಮಿಕ ಟ್ರಸ್ಟ್ ಈ ಪಟ್ಟಾಭಿಷೇಕ ಸಮಾರಂಭವನ್ನು ಯಶಸ್ವಿಯಾಗಿ ಮಾಡಿತು. ಇದಕ್ಕೆ ಹೊಸದುರ್ಗದ ಜನತೆ ಹಾಗೂ ರಾಜ್ಯದ ಸಮಸ್ತ ಉಪ್ಪಾರರು ಉದಾರ ರೀತಿಯ ಸಹಾಯ ಮಾಡಿದರು.

**ಉತ್ತರಾಧಿಕಾರಿ** : ಪೂಜ್ಯ ಲೇಪಾಕ್ಷ ಸ್ವಾಮಿಗಳ ಉತ್ತರಾಧಿಕಾರಿಗಳಾದ ಶ್ರೀ ಪುರುಷೋತ್ತಮಾನಂದ ಸ್ವಾಮೀಜಿಯವರು ಶ್ರೀ ರಾಮಪ್ಪನವರ ಆಶಯದಂತೆ ಮಿಂಚಿನ ಪ್ರವಾಸವನ್ನು ಕೈಗೊಂಡರು. ಕುಷ್ಟಗಿಯಲ್ಲಿ ನಡೆದ ರಾಜ್ಯಮಟ್ಟದ ಭಗೀರಥ ಸಮ್ಮೇಳನದಲ್ಲಿ ಪೂಜ್ಯ ಸ್ವಾಮೀಜಿಯವರ ಆಶೀರ್ವಚನ ಎಲ್ಲಾ ಜನತೆಗೂ ಸಂತೃಪ್ತಿ ನೀಡಿತು.

ಶ್ರೀ ರಾಮಪ್ಪನವರು ಉಪ್ಪಾರ ಸಮಾಜ ಕಂಡ ಅಪರೂಪದ ನಾಯಕರಾಗಿದ್ದಾರೆ. ಅವರಲ್ಲಿ ದೂರದೃಷ್ಟಿ ಹಾಗೂ ಹಿಡಿದ ಕೆಲಸವನ್ನು ಮಾಡುವ ಛಲವಿದೆ. ಇವರು ಯಾವುದೇ ಸ್ವಾರ್ಥವಿಲ್ಲದೆ ಸಮಾಜಕ್ಕೆ ಅರ್ಪಿಸಿಕೊಂಡು ದುಡಿಯುವ ಮನೋಭಾವವುಳ್ಳವರು. ಸಕಾಲದಲ್ಲಿ ಉಪ್ಪಾರ ಸಮಾಜಕ್ಕೆ ಇವರ ಸೇವೆ ದೊರಕಿದೆ. ಆದರೂ ಈ ಸಮಾಜಕ್ಕೆ ಇನ್ನಷ್ಟು ಕೆಲಸಗಳು ಆಗಬೇಕಾಗಿದೆ. ಅದಕ್ಕೆ ಶ್ರೀ ರಾಮಪ್ಪನವರ ಬದುಕು ಹಾಗೂ ಕೆಲಸ ಎಲ್ಲರಿಗೂ ಸ್ಫೂರ್ತಿಯಾಗಲೆಂದು ಹಾರೈಸುತ್ತೇನೆ.

*

# * ಸ್ವಾಭಿಮಾನಿ

- ನಾಗಪ್ಪ ಉಪ್ಪಾರ
ಹಿರೇಬನ್ನಿಗೋಳ, ಕುಷ್ಟಗಿ

ಎಪ್ಪತ್ತೈದರ ಹರೆಯವನ್ನು ಸದ್ಯದಲ್ಲಿಯೇ ತಲುಪುತ್ತಿರುವ ಡಿ.ಎಸ್. ರಾಮಪ್ಪನವರಿಗೆ ಅವರು ನೆಲೆಸಿರುವ ದಾವಣಗೆರೆ ನಗರದಲ್ಲಿ ಸನ್ಮಾನ ಮಾಡಬೇಕೆಂದು ಅವರ ಅಭಿಮಾನಿಗಳು ತೀರ್ಮಾನಿಸಿದ್ದು ಸಂತೋಷದ ಸಂಗತಿ. ಈ ಸಂದರ್ಭದಲ್ಲಿ ಇದಕ್ಕೆ ಮುಖ್ಯ ಕಾರಣೀಭೂತರಾದ ಹೆಚ್.ಸಿ. ನೀರಾವರಿ ಅವರನ್ನು ನಾನು ಅಭಿನಂದಿಸ ಬಯಸುತ್ತೇನೆ. ಬೆಂಗಳೂರಿನಲ್ಲಿ ಈ ಸಂಬಂಧದಲ್ಲಿ ಜರುಗಿದ ಸಭೆಯಲ್ಲಿ ನಾನು ಭಾಗವಹಿಸುವ ಅವಕಾಶ ದೊರಕಿತ್ತು. ಆ ಸಭೆಯಲ್ಲಿ ಡಿ.ಎಸ್. ರಾಮಪ್ಪನವರಿಗೆ ಅದ್ದೂರಿ ಸನ್ಮಾನ ಮಾಡುವುದರ ಜೊತೆಗೆ ಅವರ ಜೀವನ-ಸಾಧನೆ ಇತ್ಯಾದಿಗಳ ಕುರಿತು ಒಂದು ಅಭಿನಂದನಗ್ರಂಥವನ್ನು ಹೊರತರುವಂತೆ ತೀರ್ಮಾನಿಸಲಾಗಿತ್ತು. ಆದರೆ ನಾನು ಈ ಗ್ರಂಥಕ್ಕೆ ಲೇಖನ ಬರೆಯಬೇಕಾಗುವುದೆಂದು ಕನಸು ಮನಸ್ಸಿನಲ್ಲಿಯೂ ಯೋಚಿಸಿರ ಲಿಲ್ಲ. ನಾನು ಎಂದೂ ಇಂತಹ ಸಾಹಿತ್ಯಿಕ ಚಟುವಟಿಕೆಗಳಲ್ಲಿ ನನ್ನನ್ನು ತೊಡಗಿಸಿಕೊಂಡವನಲ್ಲ. ಆದರೆ ಸಂಪಾದಕ ಮಂಡಳಿಯ ಆಗ್ರಹದ ಮೇರೆಗೆ ಡಿ.ಎಸ್. ರಾಮಪ್ಪನವರನ್ನು ಕುರಿತು ನಾಲ್ಕು ಸಾಲುಗಳನ್ನು ಬರೆಯುತ್ತಿದ್ದೇನೆ.

1950 ಮತ್ತು 1970ರ ದಶಕಗಳಲ್ಲಿ ಈಗಿನ ಹಾಗೆ ಜಾತಿ ರಾಜಕೀಯ ಇರಲಿಲ್ಲ. ಮತ್ತು ಆಯಾ ಜಾತಿಗಳ ಜನರಿಗೆ ಈಗಿನಷ್ಟು ಜಾತಿ ಪ್ರಜ್ಞೆ ಇರಲಿಲ್ಲ. ಸರಕಾರಿ ನೌಕರರು ಅವರಲ್ಲಿಯೂ ಉನ್ನತ ಮಟ್ಟದ ಅಧಿಕಾರಿಗಳು ತಮ್ಮದೇ ಆದ ಗತ್ತುಗಾರಿಕೆಯಲ್ಲಿ ಇರುತ್ತಿದ್ದ

ಕಾಲವದು. ಅದರಲ್ಲಿಯೂ ಹಿಂದುಳಿದ ವರ್ಗಗಳಿಗೆ ಸೇರಿದ ಅಧಿಕಾರಿಗಳಿದ್ದಲ್ಲಿ ಅವರು ತಮ್ಮ ಕುಲ, ನೆಲೆ ಇತ್ಯಾದಿ ವಿವರಗಳನ್ನು ಹೇಳಿಕೊಳ್ಳಲು ಸಂಕೋಚ ಪಡಬೇಕಾಗಿದ್ದ ಕಾಲವದು. ಇಂತಹ ಪರಿಸ್ಥಿತಿಯಲ್ಲಿ ಡಿ.ಎಸ್. ರಾಮಪ್ಪನವರು ಕುಷ್ಟಗಿಗೆ ಪಿ.ಡಬ್ಲ್ಯು.ಡಿ. ಸಬ್ ಡಿವಿಜನ್ ಅಫೀಸರ್ ಆಗಿ ಬಂದರು. ನಾನು ಅವರನ್ನು ನೋಡಿದ್ದು 1972ರಲ್ಲಿ ಕುಷ್ಟಗಿಯಲ್ಲಿ ಮಿಡ್ಲ್‌ಸ್ಕೂಲ್ ಹಾಗು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ. ಹಲವಾರು ಪಿ.ಡಬ್ಲ್ಯು.ಡಿ. ಇಂಜಿನಿಯರುಗಳು ಆವರೆಗೆ ಬಂದುಹೋಗಿದ್ದುಂಟು. ಆಗಿನ ಕಾಲದಲ್ಲಿ ಅಧಿಕಾರಿಗಳಿಗೆ ತುಂಬ ಗೌರವ ಇತ್ತು. ಸಾಮಾನ್ಯವಾಗಿ ಹೆಚ್ಚಿನ ಜನ ಅನಗತ್ಯವಾಗಿ ಅಧಿಕಾರಿಗಳ ಬಳಿ ಸುಳಿಯುತ್ತಿರಲಿಲ್ಲ. ಅಧಿಕಾರಿಗಳಾದರೂ ಅಷ್ಟೆ ಅವರಾಯ್ತು ಅವರ ಕೆಲಸವಾಯ್ತು. ಜನಸಾಮಾನ್ಯರ ಜೊತೆಗೆ ಅವರ ಒಡನಾಟ ಇದ್ದಿಲ್ಲವೆಂದೇ ಹೇಳಬೇಕು. ಇಂತಹ ವಾತಾವರಣದಲ್ಲಿ ಅಧಿಕಾರಿಗಳು ಅಭಿಮಾನದಿಂದ ತಮ್ಮ ಕೋಮಿಗೆ ಸೇರಿದ ಸಾಮಾನ್ಯ ಜನರನ್ನು ಹುಡುಕಿಕೊಂಡು ಹೋಗುವುದು ವಿರಳ. ಆದರೆ ಡಿ.ಎಸ್. ರಾಮಪ್ಪನವರು ದೊಡ್ಡ ಹುದ್ದೆಯಲ್ಲಿದ್ದರೂ ತಮ್ಮವರ ಬಗ್ಗೆ ತೋರಿಸಿದ ಅಭಿಮಾನ, ಕಾಳಜಿ ಅಪೂರ್ವವಾದದ್ದು. ತಾಲ್ಲೂಕಿನಲ್ಲಿ ತಮ್ಮವರನ್ನು ಹುಡುಕಿಕೊಂಡು ಹೋಗಿ ಅವರ ಮನೆಗಳಲ್ಲಿ ಅದು ಸಣ್ಣ ಮನೆಯೇ ಇರಬಹುದು, ಗುಡಿಸಿಲಿನ ಮನೆಯೇ ಇರಬಹುದು, ಯಾವುದೇ ಸಂಕೋಚವಿಲ್ಲದೆ ಅಂತಹ ಕುಟುಂಬ ಸದಸ್ಯರೊಂದಿಗೆ ಒಂದಾಗಿ ಬೆರೆತು ಅವರ ಕಷ್ಟ ಸುಖ ವಿಚಾರಿಸಿ ಅವರು ಕೊಟ್ಟ ಆತಿಥ್ಯವನ್ನು ಆದರದಿಂದ ಸ್ವೀಕರಿಸಿ ಬರುತ್ತಿದ್ದರು. ಎಷ್ಟೋ ಸಲ ಅವರು ತಮ್ಮ ಧರ್ಮಪತ್ನಿ ಹಾಗು ಮಕ್ಕಳನ್ನು ಕೂಡ ತಮ್ಮವರ ಮನೆಗಳಿಗೆ ಕರೆದುಹೋಗಿದ್ದುಂಟು.

ಇಲ್ಲಿ ನಮ್ಮ ಜನಾಂಗದ ಹೆಚ್ಚಿನ ಜನರು ಒಕ್ಕಲುತನ ಮತ್ತು ಕೃಷಿ ಕೂಲಿ ಮಾಡಿಕೊಂಡು ಜೀವನ ಸಾಗಿಸುತ್ತಿದ್ದರು. ಗಂಡಸರ ಸಾಮಾನ್ಯ ಉಡುಪು ಧೋತರ ಮತ್ತು ಅಂಗಿ. ಹಿಂದೆ ತಲೆಗೆ ಪಟಗ ಸುತ್ತುತ್ತಿದ್ದರು. ಇತ್ತಿತ್ತಲಾಗಿ ಅದು ಬಹಳ ಕಡಿಮೆ ಆಗಿದೆ. ಹೆಣ್ಣು ಮಕ್ಕಳು ದಪ್ಪ ನೂಲಿನ ಸ್ಥಳೀಯ ಸೀರೆ ಮತ್ತು ಕುಪ್ಪಸ ಉಡುವ ವಾಡಿಕೆ. ಕುಪ್ಪಸಗಳ ಬಳಕೆ ಕೂಡ ಇತ್ತಿತ್ತಲಾಗಿ ಕಡಿಮೆ ಆಗಿದೆ. ಇವರೆಲ್ಲ ಒಕ್ಕಲುತನದ ಕೆಲಸದಿಂದಲೇ ಹೊಟ್ಟೆ ಹೊರೆಯಬೇಕು. ಮತ್ತು ಮಕ್ಕಳು ಮರಿಗಳನ್ನು ಸಾಕಬೇಕು. ಖುಷ್ಕಿ ಭೂಮಿ, ಮಳೆ ಬಂದರೆ ಅಲ್ಪ ಸ್ವಲ್ಪ ಬೆಳೆ, ಇಲ್ಲದಿದ್ದರೆ ಕೂಲಿ ಕೆಲಸವೇ ಗತಿ. ನಿರಕ್ಷರತೆ ನೂರಕ್ಕೆ 95ರಷ್ಟು; ಹೆಚ್ಚಿನ ಕುಟುಂಬಗಳು ಬಡತನ ರೇಖೆಗಿಂತ ಕೆಳಗೆ. ವಾಸಕ್ಕೆ ಗ್ರಾಮಗಳಲ್ಲಿ ಮನೆಗಳಿವೆ. ಆದರೆ ಆ ಮನೆಗಳ ಸರಿಯಾದ ಮಾಹಿತಿ ಕೊಟ್ಟರೆ ಹೆಚ್ಚಿನ ಜನ ಅದನ್ನು ನಂಬಲಿಕ್ಕಿಲ್ಲ. ಹೆಚ್ಚಿನ ಕುಟುಂಬಗಳಿಗೆ ಮೂರು ಅಂಕಣದ ಮನೆ. ಅಂದರೆ ಒಂದು ಸಣ್ಣ ಅಡುಗೆ ಕೋಣೆ, ಒಂದು ಪಡಸಾಲೆ, ಅದರ ಮುಂದೆ ದನದ ಕೊಟ್ಟಿಗೆ, ಮನೆಯ ಮುಂದೆ ಚಪ್ಪರ. ಇಂತಹ ಮನೆಗಳಲ್ಲಿ ನಾಲ್ಕೈದು ಅಣ್ಣ ತಮ್ಮಂದಿರು ಸಂಸಾರ ಮಾಡಬೇಕು. ನಾನು ಇದನ್ನೆಲ್ಲ ಯಾಕೆ ಹೇಳಿದೆ ಅಂದರೆ ನಮ್ಮ ಜನರ

ಸ್ಥಿತಿಗತಿ ಹೀಗೆ ಇದೆ. ಆದರೆ ಡಿ.ಎಸ್. ರಾಮಪ್ಪನವರು ಇಂತಹ ಮನೆಗಳಿಗೆ ಹೋಗಿ ಬರುತ್ತಿದ್ದರು. ನನ್ನ ಅನುಭವದಲ್ಲಿ ಯಾವುದೇ ಅಧಿಕಾರಿ ತನ್ನ ಕರ್ತವ್ಯದ ಹೊರತಾಗಿ ಉಳಿದ ವೇಳೆಯಲ್ಲಿ ಅಭಿಮಾನಪೂರ್ವಕವಾಗಿ ಹೀಗೆ ನಡೆದುಕೊಂಡದ್ದು ನನಗೆ ಗೊತ್ತಿಲ್ಲ. ಇದು ಅವರ ಅಭಿಮಾನ, ಸರಳತೆ ಹಾಗು ಸಜ್ಜನಿಕೆ ತೋರಿಸುತ್ತದೆ.

ಆದರೆ ಡಿ.ಎಸ್. ರಾಮಪ್ಪನವರು ತಮ್ಮ ಕರ್ತವ್ಯದಲ್ಲಿ ಎಂದೂ ಚ್ಯುತಿ ಮಾಡಿದವರಲ್ಲ. ಕಾನೂನು ಚೌಕಟ್ಟು ಮೀರಿ ಕೆಲಸ ಮಾಡಿದವರಲ್ಲ. ಇನ್ನೊಂದು ಸಮಾಜದವರನ್ನು ಎಂದೂ ಪೂರ್ವಾಗ್ರಹಪೀಡಿತ ದೃಷ್ಟಿಯಿಂದ ನೋಡಿದವರಲ್ಲ. ಎಲ್ಲ ವರ್ಗದ ಜನರ ಜೊತೆಗೆ ಅದೇ ಪ್ರೀತಿ, ಅದೇ ವಿಶ್ವಾಸ. ರಾಜಕಾರಣಿಗಳ ಮನೆ ಬಾಗಿಲು ಎಂದೂ ತುಳಿದವರಲ್ಲ. ಅಂತೆಯೇ ಇಂದಿಗೂ ಅವರ ಹೆಸರು ಕುಷ್ಟಗಿ ತಾಲ್ಲೂಕಿನಲ್ಲಿ ಎಲ್ಲರ ಪ್ರೀತಿ, ವಿಶ್ವಾಸಕ್ಕೆ ಪಾತ್ರವಾಗಿದೆ. ಕೆಲವೇ ಮಾತಿನಲ್ಲಿ ಹೇಳುವುದಾದರೆ ಅವರು ಅಭಿಮಾನಿ, ಸ್ವಾಭಿಮಾನಿ ಮತ್ತು ಅಪ್ಪಟ ಚಿನ್ನ, ಸರಳ ಸಜ್ಜನಿಕೆಗೆ ಇನ್ನೊಂದು ಹೆಸರು.

ಅವರು ಹನ್ನೊಂದು ವರ್ಷಗಳ ದೀರ್ಘಕಾಲ ರಾಜ್ಯ ಸಂಘದ ಅಧ್ಯಕ್ಷರಾಗಿ ನಮ್ಮ ಸಮಾಜಕ್ಕೆ ಮಾಡಿದ ಸೇವೆಯನ್ನು ದಾಖಲಿಸಲು ಸಣ್ಣವನಾದ ನನ್ನಿಂದ ತಿಳಿಯುವದಕ್ಕಿಂತ ಅವರ ಒಡನಾಡಿಗಳಾದ ಹಿರಿಯರಿಂದ ತಿಳಿಯುವುದು ಹೆಚ್ಚು ಸಮರ್ಪಕವೆಂದು ನಾನು ಭಾವಿಸುತ್ತೇನೆ. ದೇವರು ಅವರಿಗೂ, ಅವರ ಕುಟುಂಬವರ್ಗದವರಿಗೂ ಆಯುರಾರೋಗ್ಯ ಭಾಗ್ಯ ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ.

*

# ✻ ನಮ್ಮ ಸಮಾಜ ಕಟ್ಟಿದವರು

- ಜಿ. ಶರಣಪ್ಪ
ಚಿತ್ರದುರ್ಗ

ಅಂದು ರವಿವಾರವಿರಬಹುದು. 1984ನೆಯ ಕೊನೆಯ ತಿಂಗಳಲ್ಲಿ ನಡೆದ ಸಾರ್ವತ್ರಿಕ ಲೋಕಸಭಾ ಚುನಾವಣೆ, ಚಿತ್ರದುರ್ಗ ಲೋಕಸಭಾ ಕ್ಷೇತ್ರದಿಂದ ದಿವಂಗತ ಮಾಜಿ ಮಂತ್ರಿ ಸನ್ಮಾನ್ಯ ಬಿ.ಎಲ್. ಗೌಡರು, ಕೆ.ಎಚ್. ರಂಗನಾಥ್ ಅವರ ವಿರುದ್ಧ ಸ್ಪರ್ಧಿಸಿದ್ದರು. ಬಿ.ಎಲ್. ಗೌಡರು ಡಿ.ಎಸ್. ರಾಮಪ್ಪನವರನ್ನು ಖುದ್ದಾಗಿ ತಾವು ಬಂದು ನನ್ನ ಪರ ಕೆಲಸ ಮಾಡಬೇಕೆಂದು ಒತ್ತಾಯಿಸಿ ಒಂದು ಸ್ನೇಹಪತ್ರವನ್ನು ಲಿಖಿಸಿದ್ದರು. ಅವರಿಬ್ಬರ ಸ್ನೇಹ ಹಿರಿದೆಂದು ತೋರುತ್ತಿತ್ತು. ನಾನು ಆಗತಾನೆ ಕೆಲಸಕ್ಕೆ ಸೇರಿಕೊಂಡಿದ್ದೆ. ಚಳ್ಳಕೆರೆ ತಾಲ್ಲೂಕಿನ ಕೆಲವು ಪ್ರಮುಖರು ನನ್ನನ್ನೂ ರಾಮಪ್ಪನವರ ಸಂಗಡ ಹಳ್ಳಿ ಹಳ್ಳಿಗೆ ಕರೆದುಕೊಂಡು ಹೋಗಿದ್ದರು.

ಚುನಾವಣಾ ಕಾಲದ ಅಬ್ಬರದ ದಿನಗಳು. ಖಂಡುಹಳ್ಳಿ, ರಾತ್ರಿ 12 ಘಂಟೆ ಕೊರೆವ ಚಳಿ, ಹಸಿದ ಹೊಟ್ಟೆಗಳು, ಬಿಡಿವಿಲ್ಲದೆ ಹಗಲೆಲ್ಲಾ ತಿರುಗಿ ಸುಸ್ತಾದ ಕಳೆ ರಹಿತ ಮುಖಗಳು. ಎಲ್ಲೂ ಊಟ ದೊರೆಯುವ ಸ್ಥಿತಿ ಇರಲಿಲ್ಲ. ಕಾರು ಸಹ ಕೆಟ್ಟು ನಿಂತಿತ್ತು. ರಾಮಪ್ಪನವರು ಆಗ ತಾನೆ ನಿವೃತ್ತಿ ಹೊಂದಿದ್ದರೆಂದು ತೋರುತ್ತದೆ. ನಾನು ಚಳಿ ತಡೆಯಲಾರದೆ ತತ್ತರಿಸುತ್ತಿದ್ದೆ. ಜೊತೆಗೆ ನಿದ್ರೆ. ಎಷ್ಟು ಹೊತ್ತಿಗೆ ಚಳ್ಳಕೆರೆಗೆ ಹೋದೇವೋ ಎಂದು ಚಡಪಡಿಸುತ್ತಿದ್ದೆ. ಆದರೆ ಆ ಇಳಿವಯಸ್ಸಿನಲ್ಲೂ ರಾಮಪ್ಪನವರು ಹಸಿವೆಯ ಸುಳಿವನ್ನೂ ಸುಳಿಸದೆ, ನಿದ್ರೆಯ ಆಮಂತ್ರಣವನ್ನೂ ಧಿಕ್ಕರಿಸಿ, ನೆಲದ ಮೇಲೆ ಕೂತು ನಾಳೆ ಎಲ್ಲೆಲ್ಲಿಗೆ, ಯಾರ್ಯಾರ ಸಂಗಡ ಹೋಗಬೇಕು,

ನಮ್ಮವರು ಅಲ್ಲಿ ಎಷ್ಟು ಜನರಿದ್ದಾರೆ, ಯಾವ್ಯಾವ ಮುಖಂಡರನ್ನು ಕಾಣಬೇಕು. ಎಂದು ನಾಳಿನ ಲೆಕ್ಕ ಹಾಕುತ್ತಿದ್ದರೇ ವಿನಃ ಸ್ವಲ್ಪವೂ ಅಲುಗಾಡದೆ, ಅನುಭವಿಸಿದ ಅಧಿಕಾರದ ಗತ್ತಿಗೆ ತಿಲಾಂಜಲಿಯನ್ನಿತ್ತು ಒಪ್ಪಿಕೊಂಡು ಬಂದ ಕೆಲಸದ ಬಗ್ಗೆಯೇ ಅವರ ಯೋಚನೆ ಹರಿದಾಡುತ್ತಿತ್ತು. ಇವರು ಅಧಿಕಾರದಲ್ಲಿದ್ದಾಗ ಎಲ್ಲ ಪ್ರವಾಸಿಮಂದಿರಗಳೂ ಇವರ ಹಿಡಿತದಲ್ಲಿದ್ದವು. ಅಲ್ಲಿಗೆ ಹೋದರೆ ಸಾಕು, ರಾಜಮರ್ಯಾದೆ. ಅಂತಹ ರಸಭರಿತ ಅನುಭವವನ್ನು ಸ್ವಲ್ಪವೂ ನೆನೆಯದೆ, ನೆಲದ ಮೇಲೆ ಕುಳಿತು ಅವರು ಹಾಕುತ್ತಿದ್ದ ನಾಳಿನ ಲೆಕ್ಕಾಚಾರ ಎಲ್ಲರನ್ನೂ ದಂಗುಬಡಿಸುತ್ತಿತ್ತು.

ನಿಂತ ಕಾರನ್ನು ರಿಪೇರಿ ಮಾಡಿಕೊಂಡು ಹಿಂತಿರುಗಿ ಬಂದಾಗ ರಾತ್ರಿ ಎರಡು ಗಂಟೆ ಇರಬಹುದು. ಅಷ್ಟೊತ್ತಿನಲ್ಲಿ ರಾಮಪ್ಪನವರು ಮಾಜಿಮಂತ್ರಿ ಸನ್ಮಾನ್ಯ ಡಿ. ಮಂಜುನಾಥ್ ಅವರ ಸಂಗಡ ನಮ್ಮ ಮನೆಗೆ ಬಂದು ಇದ್ದದ್ದನ್ನ ತಿಂದು ನಾಳಿನ ಪ್ರವಾಸವನ್ನು ಬೇಗ ಪ್ರಾರಂಭಿಸೋಣವೆಂದು ಮಾತಾಡಿಕೊಳ್ಳುತ್ತಾ ಮಲಗಲು ಟಿ.ಬಿ. ಕಡೆಗೆ ಹೊರಟರು. ಈ ಮನುಷ್ಯನ ಜೊತೆಗೆ ನಾಳೆಯೂ ಹೋದರೆ ಇಂದಿನ ಗತಿಯೇ ಅಂದುಕೊಂಡು, ಹೇಗೋ ಮಾಡಿ ಅರಳಿಕರೆ ಕರಿಯಪ್ಪ ಮೇಷ್ಟ್ರು ಮತ್ತು ಗೋಪನಹಳ್ಳಿ ಯಲ್ಲಪ್ಪ ಮೇಷ್ಟ್ರನ್ನು ಅವರ ಜೊತೆಗೆ ಬಿಟ್ಟು ನಾನು ಜಾರಿಕೊಂಡೆ.

ದೊಡ್ಡ ಸ್ವಾಮೀಜಿಯವರ ಸಂಗಡ ಒಂದು ಸಾರಿ ಹೊಸಪೇಟೆ ಕಡೆಯಿಂದ ಶ್ರೀ ಹನುಮಯ್ಯನವರ ಜೊತೆಗೆ ರಾಮಪ್ಪನವರು ಬರುತ್ತಿದ್ದರಂತೆ. ರಾತ್ರಿ ಪ್ರಯಾಣ, ಡ್ರೈವರ್ ಯಾರೋ ಒಬ್ಬ ಧಿಮಾಕಿನವನಂತೆ, ಗುರುಹಿರಿಯರಲ್ಲಿ ಭಕ್ತಿ ಇಲ್ಲದವನು. ಅವನು ಕಾರು ನಡೆಸುತ್ತಿದ್ದ ಭಂಗಿ ಎಲ್ಲರಿಗೂ ಎದೆ ನಡುಗಿಸುವಂತೆ ಮಾಡುತ್ತಿತ್ತಂತೆ. ಸ್ವಾಮೀಜಿಯವರು ಅವನ ಮೊಂಡಾಟಕ್ಕೆ ಬೇಸತ್ತು "ಅಯ್ಯಾ ನಿದ್ರೆ ಬರುವಂತಿದ್ದರೆ ಸ್ವಲ್ಪ ಹೊತ್ತು ನಿದ್ರೆ ಮಾಡು. ಆಮೇಲೆ ಬೇಕಾದರೆ ಹೊರಡೋಣ" ಅಂದರಂತೆ. ಯಾವುದಕ್ಕೂ ಕಿವಿಗೊಡದ ಅವನು ಯದ್ವಾತದ್ವಾ ಗಾಡಿ ಬಿಟ್ಟುಕೊಂಡು ಬಂದ ರೀತಿ ನೋಡಿ ಅದುವರೆಗೂ ಮೌನ ತಾಳಿದ್ದ ರಾಮಪ್ಪನವರು "ಲೋ, ನಿಲ್ಸೋ ಕಾರಾ, ದೊಡ್ಡೋರ್ಮಾತಿಗೆ ಬೆಲೆ ಕೊಡ್ದೋನು ಇದ್ರೇನು, ಹೋದ್ರೇನು" ಎಂದು ಕೆಂಡಮಂಡಲವಾದರಂತೆ. ಇವರ ಮಾತಿನ ವರಸೆಯನ್ನು ಕೇಳಿದ ಡ್ರೈವರ್ ಮತ್ತಷ್ಟು ಕೆರಳಿ ಇವರು ರಸ್ತೆಯಲ್ಲೇ ಬಿದ್ದಿರಲೆಂದುಕೊಂಡೋ ಏನೋ ಸಲೀಸಾಗಿ ಕಾರು ನಿಲ್ಲಿಸಿ, ರಸ್ತೆ ದಾಟಿ, ಪಕ್ಕದಲ್ಲೇ ಇದ್ದ ಒಂದು ಹೋಟೆಲ್‌ಗೆ ನುಗ್ಗಿ ಮಹಾಸಾಧನೆ ಮಾಡಿದ ರೀತಿಯಲ್ಲಿ ಇವರತ್ತ ನೋಡುತ್ತಾ ಸಿಗರೇಟ್ ಹಚ್ಚಿದನಂತೆ. ಸ್ವಲ್ಪವೂ ವಿಚಲಿತರಾಗದ ರಾಮಪ್ಪನವರು ಸೀಟ್ ಬಿಟ್ಟು ಎದ್ದದ್ದೇ ತಡ, ಮಾಮೂಲಾಗಿ ಕಾರನ್ನ ಸರಾಗವಾಗಿ ಓಡಿಸಿಕೊಂಡು ಸ್ವಾಮೀಜಿಯವರನ್ನು ಕರೆದುಕೊಂಡು ದಾವಣಗೆರೆಗೆ ಬಿಟ್ಟರಂತೆ. ಘಟನೆಯನ್ನು ದೊಡ್ಡ ಸ್ವಾಮೀಜಿಯವರು 'ರಾಮಪ್ಪಂದು ಬಹಳ ಸಿಟ್ಟಪ್ಪಾ' ಅಂದು ಇಂಥಾ ಉದಾಹರಣೆಗಳನ್ನು ಕೊಡುತ್ತಾ ಜ್ಞಾಪಿಸಿಕೊಳ್ಳುತ್ತಿದ್ದರು.

ಪರಿಪಕ್ವವಾಗಿ ಮಾರ್ಪಾಟುಗೊಂಡಮೇಲೆ ರಾಮಪ್ಪನವರ ಬೃಹದಾಕಾರದ ಆಸೆ ದಾವಣಗೆರೆಯಲ್ಲಿ ಒಂದು ವಿದ್ಯಾರ್ಥಿನಿಲಯದ ಜೊತೆಗೆ ಸ್ವಾಮೀಜಿಯವರ ದುಡಿತಕ್ಕೆ ಸ್ವಲ್ಪ ಇಂಬುಕೊಡಲು ಒಂದು 'ಶಾಖಾಮಠ' ಪ್ರಾರಂಭಿಸುವದು. ಈ ದಿಸೆಯಲ್ಲಿ ಅವರು ಮಾಡಿರುವ ಸೇವೆ ಅವಿಸ್ಮರಣೀಯ. ಈ ಸಮಾಜದಲ್ಲಿ ಹುಟ್ಟಿ ಈ ತಾಯಿಯ ಶೃಂಗಾರಕ್ಕೆ ತನ್ನನ್ನ ತಾನು ಸಂಪೂರ್ಣ ಸಮರ್ಪಿಸಿಕೊಂಡು ತನ್ನೆಲ್ಲಾ ಸುಖಮಯ ಜೀವನಕ್ಕೆ ತಿಲಾಂಜಲಿಯನಿತ್ತು ಹಗಲಿರುಳೆನ್ನದೆ ದುಡಿದಿದ್ದಾರೆ. ಇವರ ಕನಸು ನನಸಾಗಿದೆ ; ಈ ಸಮಾಜ ಕಟ್ಟುವ ಕೆಲಸಕ್ಕೆ ದುಡಿದವರ, ದುಡಿಯುತ್ತಿರುವವರ ಪಂಕ್ತಿಯಲ್ಲಿ ಇವರ ಹೆಸರು ಒಂದು ಧ್ರುವತಾರೆ ಇದ್ದಂತೆ ಅನ್ನುವುದರಲ್ಲಿ ಮತ್ತೊಂದು ಮಾತಿಲ್ಲ.

ಬೆಂಗಳೂರಿನಲ್ಲಿ ಸೊಗಸಾಗಿ ಅರಳಿದೆ ಈ ಕಟ್ಟಡ. ಆ ನಿವೇಶನದ ಮಂಜೂರಾತಿಗೆ ಶ್ರೀ ನೀರಾವರಿಯವರ ಮತ್ತು ಹನುಮಯ್ಯನವರ ಜೊತೆಗೆ ಕೈ ಜೋಡಿಸಿ ಕೋಟ್ಯಾಂತರ ರೂಪಾಯಿಯ ಆಸ್ತಿಯನ್ನು ಈ ಸಮಾಜಕ್ಕೆ ಮಾಡಿಕೊಟ್ಟಿದ್ದಾರೆ. ರಾಜಧಾನಿಯಲ್ಲಿ ಸಮಸ್ತ ಸಮಾಜದ ಬಂಧುಗಳಿಗೆ ಮಾಡಿರುವ ಇವರ ಈ ಕೆಲಸವನ್ನೇನಾದರೂ ನಾವು ಮರೆತದ್ದೇ ಆದರೆ, ಇವರನ್ನ ಸ್ಮರಿಸದಿದ್ದರೆ ನಮ್ಮಂಥ ಪಾಪಿಗಳು ಮತ್ತಾರಿರಲಾರರೇನೋ! ಇನ್ನೂ ಏನೇನೋ ಕನಸು ಇವರದಾಗಿತ್ತು. ದೊಡ್ಡಸ್ವಾಮೀಜಿಯವರಿಗೆ ಬೆಂಗಳೂರಿನಲ್ಲೇ ಮಠ ಕಟ್ಟಿ ಅವರು ಸಾಮಾಜಿಕ, ಅಧ್ಯಾತ್ಮಿಕ ಉನ್ನತಿಗೆ ಶ್ರಮಿಸಬೇಕೆಂಬ ಆಶಯವಿತ್ತು.

ದಾವಣಗೆರೆ ಮಠದ ಮಾರ್ಪಾಟಿಗೆ ಇವರು ಪಟ್ಟ ಶ್ರಮ ಹತ್ತಿರ ಇದ್ದವರಿಗೆ ಮಾತ್ರ ಗೊತ್ತು. ಸೂಕ್ತ ಸ್ವಾಮೀಜಿಗಳನ್ನು ಹುಡುಕಿ ತರುವಲ್ಲಿ ಇವರು ಮಾಡಿದ ಪ್ರಯತ್ನ ಇಂದು ಸೋತಿದೆ. ತನಗೆ ಜನ್ಮಕೊಟ್ಟ ಈ ಸಮಾಜದ ಜೊತೆಗೆ ಸೋದರ ಸಮಾಜಕ್ಕೆ ಮಾಡಿರುವ ಸಾಮಾಜಿಕ ಸೇವೆಯನ್ನು ಮನಗಂಡ ದಾವಣಗೆರೆಯ ನಾಯಕರನೇಕರು ಲಕ್ಷಾಂತರ ರೂಪಾಯಿ ಗಳನ್ನು ದಾನವಾಗಿ ಕೊಟ್ಟಿದ್ದಾರೆ. ಬೇರೆ ಸಮಾಜದ ಬಂಧುಗಳನೇಕರು ಇವರ ದುಡಿತಕ್ಕೆ ಮಾರುಹೋಗಿ ಉದಾಹರಣೆಗಾಗಿ ಇವರ ಹೆಸರನ್ನು ಬಳಸಿಕೊಳ್ಳುತ್ತಿದ್ದಾರೆ. ಹೆಸರಿಗೆ ತಕ್ಕಂತೆ ಶ್ರೀರಾಮನೇ ಆಗಿ ಬಂದ ಬವಣೆಗಳೆಲ್ಲವನ್ನೂ ಬದಿಗೊತ್ತಿ ನ್ಯಾಯಕ್ಕಾಗಿ ಹೋರಾಡಿದ್ದಾರೆ. ಅನೇಕ ಘಟನೆಗಳು ಇವರಿಗೆ ಘಾಸಿ ಮಾಡಿದವು. ಆ ಘಾಸಿಗಳೆಲ್ಲಾ ಇವರನ್ನು ಬಿಸಿ ಮಾಡಿದವೇ ಹೊರತು ಸೋಲಿಸಲಿಲ್ಲ. ಇವು ಅವರನ್ನು ಗಟ್ಟಿ ಮಾಡಿದವೇ ಹೊರತು ಟೊಳ್ಳಾಗಿಸಲಿಲ್ಲ. ವೈಯಕ್ತಿಕ ಜೀವನದ ಸವಿ ಬದಿಗೊತ್ತಿ ಸಮಾಜವನ್ನೇ ಜೀವನವಾಗಿಸಿಕೊಂಡು ದುಡಿದಿದ್ದನ್ನು ಹಂಚಿ ಉಂಡಿದ್ದಾರೆ. ಕರೆದು ಕೂರಿಸಿಕೊಂಡಿದ್ದಾರೆ, ಎಲೆಮರೆಯ ಕಾಯಾಗಿದ್ದಾರೆ.

ಒಂದು ಟ್ರಸ್ಟ್ ಮೀಟಿಂಗ್ ಬೆಂಗಳೂರಲ್ಲಿ ನಡೆಯುತ್ತಿತ್ತು. ಶ್ರೀ ಲಾಥೂರ್ ಅವರು ಹೊಸದಾಗಿ ಅಧ್ಯಕ್ಷರಾಗಿದ್ದ ಕಾಲ. ಮೀಟಿಂಗ್‌ನಲ್ಲಿ ಮುಂದಿನ ಆಗುಹೋಗುಗಳ ಬಗ್ಗೆ ವಿಚಾರ ವಿನಿಮಯವಾಗುತ್ತಿತ್ತು. ರಾಮಪ್ಪನವರು ಅಧ್ಯಕ್ಷ ಪದವಿಯನ್ನು ತ್ಯಜಿಸಿದ್ದರು. ಟ್ರಸ್ಟ್‌ನ ಜಾಗವನ್ನು

ಹೇಗೆ ಉಳಿಸಿಕೊಳ್ಳಬೇಕೆಂಬುದೇ ಪ್ರಮುಖ ಚಿಂತೆ. ಹನುಮಯ್ಯನವರು ಒದ್ದಾಡುತ್ತಿದ್ದರು. ಆ ಕ್ಷಣದಲ್ಲಿ ಶ್ರೀ ರಾಮಪ್ಪನವರು ಸಲೀಸಾಗಿ ನಮ್ಮ ಕಡೆಯಿಂದ ಎರಡು ಲಕ್ಷ, (ಅಥವಾ ಮೂರು ಲಕ್ಷವಿರಬಹುದು ಮರತಿದ್ದೇನೆ) ಇದು ದೇಣಿಗೆ ದುಡ್ಡು, ಇದನ್ನು ಬ್ಯಾಂಕ್‌ನಲ್ಲಿಟ್ಟು ಬರುವ ಬಡ್ಡಿಯಿಂದ ವಾರ್ಷಿಕ ಕಂತು ಕಟ್ಟಬಹುದಲ್ಲಾ ಎಂದು ಮಾಮೂಲಾಗಿ ಹೇಳಿ ಕುಳಿತುಕೊಂಡರು. ಈ ಘಟನೆ ಮುಂದೆ ಮಾಜಿ ಮುಖ್ಯಮಂತ್ರಿ ಜೆ.ಎಚ್. ಪಟೇಲ್ ಅಧಿಕಾರ ಕಳೆದುಕೊಂಡು ಸ್ವಲ್ಪವೂ ವಿಚಲಿತರಾಗದೆ ಇಂದಿನ ಮುಖ್ಯಮಂತ್ರಿ ಎಸ್.ಎಂ. ಕೃಷ್ಣರವರ ಪ್ರಮಾಣವಚನ ಸ್ವೀಕಾರ ಸಮಾರಂಭದಲ್ಲಿ ಮಂದಸ್ಮಿತರಾಗಿ ಭಾಗವಹಿಸಿದ ಘಟನೆ ನನ್ನ ಸ್ಮೃತಿಪಟಲದ ಮೇಲೆ ಹಾದುಹೋಗುತ್ತದೆ. ಹಾಗೆಯೇ ಅಧ್ಯಕ್ಷ ಪದವಿಯನ್ನು ತ್ಯಜಿಸಿದ ರಾಮಪ್ಪನವರು ದೇಣಿಗೆ ಕೊಟ್ಟು ಲಾಥೂರ್ ಮುಂದೆ ಶಾಂತಚಿತ್ತರಾಗಿ ಕುಳಿತರು.

*

## * ಸ್ಮರಣಾರ್ಹರು

- ಯು. ದಾಸಪ್ಪ
ಹೊಳೆಹೊನ್ನೂರು

ಶ್ರೀ ಡಿ.ಎಸ್. ರಾಮಪ್ಪನವರು ಶಿವಮೊಗ್ಗದಲ್ಲಿ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ, ನನ್ನ ಮತ್ತು ಅವರ ಮೊದಲ ಪರಿಚಯ ವಾಯಿತು. ಅನಂತರ ಸಮಾಜವಾದಿ ಮುಖಂಡರಾಗಿದ್ದ ರಾಮಮನೋಹರ ಲೋಹಿಯರವರ ಸೇವಕರು ಮತ್ತು ವಿದ್ಯಾರ್ಥಿ ಗಳ ಗುಂಪಿನಲ್ಲಿದ್ದ ಶ್ರೀ ರಾಮಪ್ಪನವರು ನನ್ನನ್ನು ಕಂಡು ಧಾವಿಸಿ ಬಂದು, ಲೋಹಿಯಾರ ಬಗ್ಗೆ ಮತ್ತು ಸಮಾಜವಾದದ ಸಿದ್ಧಾಂತಗಳ ಬಗ್ಗೆ ಚಿಕ್ಕ ಭಾಷಣವನ್ನೇ ಮಾಡಿದರು. ಕಾಗೋಡು ಸತ್ಯಾಗ್ರಹ ಮತ್ತು ಶಾಂತವೇರಿ ಗೋಪಾಲಗೌಡರ ಹೋರಾಟದಿಂದ ಪ್ರಭಾವಿತ ನಾಗಿದ್ದ ನನಗೆ ರಾಮಪ್ಪನವರಿಗೆ ಸಮಾಜವಾದದಲ್ಲಿ ಇದ್ದ ಉತ್ಸಾಹ ವನ್ನು ಕಂಡು ಇವರಿಗೆ ಉಜ್ವಲ ಭವಿಷ್ಯವಿದೆ ಎಂದು ಮನಗಂಡೆ.

ಬಡತನದಲ್ಲೇ ಹುಟ್ಟಿ ಬಡತನದಿಂದಲೇ ಬೆಳೆದ ಅವರು ನಿರುತ್ಸಾಹಗೊಳ್ಳದೆ, ಧೈರ್ಯಗೆಡದೆ, ಸ್ವಪ್ರಯತ್ನದಿಂದಲೇ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸುತ್ತಾ ಬಂದರು. ದುರ್ಗಿಗುಡಿ ಮತ್ತು ಉಪ್ಪಾರಕೇರಿಯಲ್ಲಿ 'ವಾರದಮನೆ'ಗಳಲ್ಲಿ ಊಟ ಮಾಡುತ್ತಾ ಕಷ್ಟಪಟ್ಟು ವ್ಯಾಸಂಗ ಮಾಡಿ ಪಿಯುಸಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಯಾರ ನೆರವೂ ಇಲ್ಲದೆ, ಸ್ವಪ್ರಯತ್ನದಿಂದ ಬೆಂಗಳೂರು ಇಂಜನಿಯರಿಂಗ್ ಕಾಲೇಜಿನಲ್ಲಿ ಬಿ.ಇ. ಸಿವಿಲ್‌ನಲ್ಲಿ ಸೀಟು ಪಡೆದು ವಿದ್ಯಾಭ್ಯಾಸ ಮುಂದುವರಿಸಿದರು. ನಮ್ಮ ಸಮಾಜದ ದುಸ್ಥಿತಿಯನ್ನು ಕಂಡು ವ್ಯಥೆ ಪಡುತ್ತಿದ್ದರು, ಉದ್ವೇಗಗೊಳ್ಳುತ್ತಿದ್ದರು. ತಮ್ಮದೇ ಆದ ಯೋಜನೆಗಳನ್ನು ರೂಪಿಸಿಕೊಂಡಿದ್ದರು. ಆರ್ಥಿಕ

ತೊಂದರೆಗಳಿದ್ದರೂ ಕಾಲಕ್ಕೆ ಸರಿಯಾಗಿ ಊಟ ದೊರೆಯದಿದ್ದರೂ ಅದನ್ನು ಎದುರಿಸುತ್ತಾ ಬಂದರು. ತರೀಕೆರೆ, ಭದ್ರಾವತಿ, ಹೊಳೆಹೊನ್ನೂರು ಮತ್ತು ಶಿವಮೊಗ್ಗಗಳಲ್ಲಿನ ನಮ್ಮ ಸಮಾಜದವರು ಅಲ್ಪಸ್ವಲ್ಪ ಹಣ ಕೂಡಿಸಿಕೊಡುತ್ತಿದ್ದರು. ಇದನ್ನು ರಾಮಪ್ಪನವರು ಪುನಃ ಪುನಃ ಕೃತಜ್ಞತೆಯಿಂದ ಜ್ಞಾಪಿಸಿಕೊಳ್ಳುತ್ತಾರೆ. ಇಂಥವರು ಎಷ್ಟು ಜನರಿದ್ದಾರೆ?

ಶಿವಮೊಗ್ಗ ದುರ್ಗಿಗುಡಿ ದಿವಂಗತ ನರಸಿಂಹಣ್ಣನವರೂ ಮತ್ತು ಅವರ ಪತ್ನಿಯವರು ಇವರ ನೆರವಿನಿಂದ ಶಿವಮೊಗ್ಗ ತಾಲ್ಲೂಕು ಕುಂಸಿಯ ಬಾಬು ಹುಚ್ಚಣ್ಣನವರ ಮಗಳೊಂದಿಗೆ ಇವರ ವಿವಾಹವಾಯಿತು. ಅಂತಹ ಅನುಕೂಲಸ್ಥರಲ್ಲದಿದ್ದರೂ, ಬಾಬು ಹುಚ್ಚಣ್ಣನವರು ಕೈಲಾದಷ್ಟು ಶಕ್ತಿಮೀರಿ ರಾಮಪ್ಪನವರ ವಿದ್ಯಾಭ್ಯಾಸಕ್ಕೆ ನೆರವು ನೀಡಿದರು. ಅಂತೂ ಯಶಸ್ವಿಯಾಗಿ ತಮ್ಮ ಬಿ.ಇ. ಡಿಗ್ರಿ ಮುಗಿಸಿದರು. ಕಡುಬಡತನದಲ್ಲಿದ್ದು ಸ್ವಪ್ರಯತ್ನ ಸಾಹಸದಿಂದ ಮುಂದೆ ಬಂದ ಇವರು ಇತರರಿಗೆ ಮಾದರಿಯಾಗಿದ್ದಾರೆ.

ಆಗ ರಾಮಪ್ಪನವರಲ್ಲದೆ ಹೊನ್ನಾಳಿ ತಾಲ್ಲೂಕು ಸುಂಕದಕಟ್ಟೆಯ ಹಳದಪ್ಪನವರು, ಚನ್ನಗಿರಿ ತಾಲ್ಲೂಕು ನಲ್ಲೂರಿನ ದಿವಂಗತ ಯು. ಹಾಲಪ್ಪನವರು, ಬಿ.ಇ. ಸಿವಿಲ್‌ನಲ್ಲಿ ತೇರ್ಗಡೆ ಹೊಂದಿದ್ದರು. ಶಿವಮೊಗ್ಗ ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷರು ಮತ್ತು ಶಿವಮೊಗ್ಗ ಕಟ್ಟೆಮನೆ ಗೌಡರೂ ಆಗಿದ್ದ ಕಂಟ್ರಾಕ್ಟರ್ ಭೈರಪ್ಪನವರ ಮತ್ತು ಸಂಘದ ಕಾರ್ಯದರ್ಶಿಯಾಗಿದ್ದ ಹೆಲ್ತ್ ಇನ್ಸ್‌ಪೆಕ್ಟರ್ ಚನ್ನಗಿರಿ ವೆಂಕಟಪ್ಪನವರ ನೇತೃತ್ವದಲ್ಲಿ ನಾನೂ ಸೇರಿದಂತೆ ಶಿವಮೊಗ್ಗೆ ಆಗಮಿಸಿದ್ದ ಪಿ.ಡಬ್ಲ್ಯು.ಡಿ. ಮಂತ್ರಿಗಳಾಗಿದ್ದ ಕಡಿದಾಳು ಮಂಜಪ್ಪನವರಲ್ಲಿಗೆ ನಿಯೋಗ ಹೋಗಿ ಮೇಲ್ಕಂಡ ಮೂರು ಜನರಿಗೂ ಇಂಜನಿಯರಿಂಗ್ ಹುದ್ದೆ ಕೊಡುವಂತೆ ಕೇಳಿಕೊಂಡೆವು. ಅವರು ಮೂವರಿಗೂ ನೇಮಕ ಮಾಡಿದರು. ಮೆರಿಟ್‌ನಲ್ಲಿದ್ದ ಹಳದಪ್ಪನವರಿಗೆ 'ಪ್ರೊಬೆಷನರ್' ಆಗಿ ನೇಮಿಸಿದರು. ಅವರು ಮುಖ್ಯ ಇಂಜಿನಿಯರ್‌ಆಗಿ ನಿವೃತ್ತಿ ಹೊಂದಿರುತ್ತಾರೆ. ಇದೇ ಕಡಿದಾಳು ಮಂಜಪ್ಪನವರು ರೆವಿನ್ಯೂ ಮಂತ್ರಿಗಳಾಗಿದ್ದಾಗ ಶಿವಮೊಗ್ಗ ಜಿಲ್ಲಾ ಸಂಘದ ಹಾಸ್ಟೆಲ್ ನಿವೇಶನ ಮಂಜೂರು ಮಾಡಿದರು ಮತ್ತು ನಮ್ಮ ಕುಲಗುರುಗಳಿಗೆ ಆಗಿನ ನಿಯಮದ ಪ್ರಕಾರ ಜಗದ್ಗುರು ಸ್ಥಾನ ಮತ್ತು ಬಿರುದಾವಳಿಗಳನ್ನು ನೀಡಿದರು. ಇವರು ಮಾಡಿರುವ ಸಹಾಯವನ್ನು ಸದಾ ಕೃತಜ್ಞತೆಯಿಂದ ಜ್ಞಾಪಿಸಿಕೊಳ್ಳಬೇಕು.

ರಾಮಪ್ಪನವರು ನೌಕರಿಯುಲ್ಲಿದ್ದಾಗ ನಮ್ಮ ಜಿಲ್ಲಾ ಸಂಘದ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಸುಮಾರು ಎಂಟು ತಿಂಗಳು ಕಾಲ ನಮ್ಮ ಜಿಲ್ಲಾ ಸಂಘದ ಅಧ್ಯಕ್ಷರಾಗಿ ವಿದ್ಯಾರ್ಥಿನಿಲಯದ ಏಳಿಗೆಗೆ ಶ್ರಮಿಸಿದ್ದಾರೆ. ನಾನು ಉತ್ತರ ಕರ್ನಾಟಕದಲ್ಲಿ ನೌಕರಿಯಲ್ಲಿದ್ದಾಗ ನಮ್ಮ ಕುಲಗುರುಗಳು ಉತ್ತರ ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಪ್ರವಾಸ ಕೈಗೊಂಡಾಗ ಸಭೆ ಸಮಾರಂಭಗಳಲ್ಲಿ ಶ್ರೀ ರಾಮಪ್ಪನವರು ಮುಂದಾಳತ್ವ ವಹಿಸಿ ಹಳೇ ಮೈಸೂರು ಮತ್ತು ಉತ್ತರ ಕರ್ನಾಟಕಕ್ಕೆ ಕೊಂಡಿಯಂತೆ ಇದ್ದರು. ಇವರು ಎಕ್ಸಿಕ್ಯೂಟಿವ್ ಇಂಜಿನಿಯರಾಗಿ ಅನಂತರ ನಿವೃತ್ತಿ ಹೊಂದಿದರು. ಶ್ರೀ ಸ್ವಾಮಿಗಳೊಂದಿಗೆ, ಸಂಘದೊಂದಿಗೆ ತಮ್ಮನ್ನೇ

ತೊಡಗಿಸಿಕೊಂಡರು. ರಾಜ್ಯ ಸಂಘದ ಅಧ್ಯಕ್ಷರಾಗಿ ಹನ್ನೊಂದು ವರ್ಷಗಳ ಕಾಲ ಯಶಸ್ವಿ ಸೇವೆ ಸಲ್ಲಿಸಿದರು. ನಮ್ಮ ಸಮಾಜದಲ್ಲಿ ಚೈತನ್ಯವುಂಟುಮಾಡಿದರು.

ಬೆಂಗಳೂರಿನಲ್ಲಿ ರಾಜ್ಯ ಸಂಘಕ್ಕೆ ತನ್ನದೇ ಆದ ಕಛೇರಿ ಇಲ್ಲದೆ, ಸುಗ್ರೀವ ವೆಂಕಟರಮಣಸ್ವಾಮಿ ದೇವಸ್ಥಾನದಲ್ಲಿ, ಕೆಲವು ವರ್ಷಗಳ ಕಾಲ ಬಾಡಿಗೆ ಕಟ್ಟಡಗಳಲ್ಲಿ ಸಭೆ ನಡೆಸುತ್ತಿದ್ದರು. ಶ್ರೀ ಸ್ವಾಮೀಜಿಯವರ ಮಾರ್ಗದರ್ಶನದಲ್ಲಿ ರಾಮಪ್ಪನವರು ಪ್ರಧಾನ ಕಾರ್ಯದರ್ಶಿ ಶ್ರೀ ಎಂ. ಹನುಮಯ್ಯನವರು ಸೇರಿ ಬೆಂಗಳೂರು ಪ್ರಾಧಿಕಾರದಿಂದ ನಂ. 191, ಕತ್ತರಿಗುಪ್ಪೆ ಪೂರ್ವ, ಬನಶಂಕರಿ 3 ನೇ ಹಂತ, 4ನೇ ಘಟ್ಟ, 7ನೇ ಅಡ್ಡರಸ್ತೆ, ವಿದ್ಯಾಪೀಠ ರಸ್ತೆ, ಬೆಂಗಳೂರು-85 ಇಲ್ಲಿ ಭಗೀರಥ ಉಪ್ಪಾರ ಧಾರ್ಮಿಕ ಟ್ರಸ್ಟ್ ಹೆಸರಿನಲ್ಲಿ ಒಂದು ನಿವೇಶನವನ್ನು ಪಡೆದರು.

ಆಗ ಪ್ರಾಧಿಕಾರದ ಛೇರ್ಮನ್ನರಾಗಿದ್ದ ಎಸ್. ಪಿ. ಸಿಂಗ್, ಮಾಜಿ ಮಂತ್ರಿ ದಿವಂಗತ ಟಿ.ಎಸ್. ನರಸಿಂಹಮೂರ್ತಿಯವರು ಮತ್ತು ಕಾರ್ಯದರ್ಶಿಗಳಾಗಿದ್ದ ಶ್ರೀ ಎಚ್.ಸಿ. ನೀರಾವರಿಯವರನ್ನು ಮರೆಯದೆ ಕೃತಜ್ಞತೆಯಿಂದ ನಮ್ಮ ಸಮಾಜವು ಸ್ಮರಿಸಬೇಕು. ಇಲ್ಲಿ ವಿದ್ಯಾರ್ಥಿನಿಲಯದ 16 ರೂಮುಗಳು, ಶ್ರೀ ಸ್ವಾಮಿಗಳಿಗೆ ತಾತ್ಕಾಲಿಕ ವಸತಿ ಹಾಗು ಸಭೆ ನಡೆಸಲು ರೂಮುಗಳು ನಿರ್ಮಾಣವಾಗಿವೆ. ನಮ್ಮ ಮುಂದಿರುವ ಯೋಜನೆ (ಪ್ಲಾನು) ಪ್ರಕಾರ ಕಟ್ಟಡಗಳನ್ನು ನಿರ್ಮಿಸಲು 2-3 ಕೋಟಿ ರೂಪಾಯಿಗಳ ಅವಶ್ಯಕತೆ ಇದೆ. ಅಲ್ಲದೆ ಶ್ರೀ ರಾಮಪ್ಪನವರು ಮತ್ತು ಅವರ ಪತ್ನಿಯವರ ಹೆಸರಿನಲ್ಲಿ ಒಂದು ಲಕ್ಷ ರೂ. ನೀಡಿ ಎರಡು ರೂಮುಗಳನ್ನು ಕಟ್ಟಿಸಿಕೊಟ್ಟಿದ್ದಾರೆ.

**ಕೊನೆ ಮಾತು** : ಶ್ರೀ ಸ್ವಾಮಿಗಳ ಐವತ್ತು ವರ್ಷಗಳ ನಿರಂತರ ಶ್ರಮ ಮತ್ತು ರಾಜ್ಯ ಸಂಘದ ಮುಖಂಡರ ಮೂವತ್ತು ವರ್ಷಗಳ ಕಾಲ ನಡೆಸಿದ ಹೋರಾಟದಿಂದ ಸಮಾಜದಲ್ಲಿ ಪರಸ್ಪರ ಪರಿಚಯ, ಸಂಘಟನೆ, ಅಭಿವೃದ್ಧಿ ಕಾರ್ಯಗಳು ತಕ್ಕಮಟ್ಟಿಗೆ ನಡೆದಿರುತ್ತವೆ. ಆದರೆ ಆಗಿರುವ ಸಾಧನೆ ಸ್ವಲ್ಪ, ಆಗಬೇಕಿದ್ದು ಅಪಾರವಾಗಿದೆ. ರಾಜ್ಯ ಸಂಘವು ಬೆಳೆಯಬೇಕಾದ ಮಟ್ಟದಲ್ಲಿ ಬೆಳೆಯಲಿಲ್ಲ. ಪ್ರತಿಯಾಗಿ ಕಳೆದ ಐದು ವರ್ಷಗಳಿಂದ ಸಂಘವೇ ಇಲ್ಲವೆಂದರೆ ಅತಿಶಯೋಕ್ತಿ ಅಲ್ಲ. ಮುಖ್ಯವಾಗಿ ಜಿಲ್ಲಾ ಸಂಘಗಳು ಎಲ್ಲ ಜಿಲ್ಲೆಗಳಲ್ಲಿ ಇಲ್ಲವೆಂದರೆ ನಾಚಿಕೆಯಾಗುತ್ತದೆ. ಸಂಘಗಳಿದ್ದರೂ ಯಾವ ಕಾರ್ಯಕ್ರಮ ಚಟುವಟಿಕೆ ಇಲ್ಲದೆ ನಾಮಾಕಾವಸ್ಥೆಗಳಾಗಿವೆ. ಮೊತ್ತಮೊದಲು ಮಾಡಬೇಕಾದ್ದು ರಾಜ್ಯ ಸಂಘದ ಪುನಃಶ್ಚೇತನ ಮತ್ತು ಎಲ್ಲ ಜಿಲ್ಲೆಗಳಲ್ಲೂ ಸಂಘದ ಪುನರ್ರಚನೆ. ಈ ಬಗ್ಗೆ ನಮ್ಮ ಸ್ವಾಮಿಗಳು ನೇತೃತ್ವ ವಹಿಸಿಕೊಳ್ಳಬೇಕು. ಮುಖಂಡರುಗಳು ಹಿಂದಿನದೆಲ್ಲವನ್ನು ಮರೆತು ಎಲ್ಲರೂ ಒಂದೇ ವೇದಿಕೆಯಲ್ಲಿ ಸೇರಿ, ಚರ್ಚಿಸಿ, ಮುಂದಿನ ಮಾರ್ಗೋಪಾಯಗಳನ್ನು ರೂಪಿಸಿಕೊಳ್ಳಬೇಕು ಎಂದು ಪ್ರಾರ್ಥಿಸುತ್ತೇನೆ. ಮನಸ್ಸಿದ್ದರೆ ಮಾರ್ಗವಿದೆಯಲ್ಲವೆ?

*

## * ಅನಿಸಿಕೆಗಳು

- ಯು.ಕೆ. ಸೀತಾರಾಂ
ಶ್ರೀಮಂಗಲ, ದಕ್ಷಿಣ ಕೊಡಗು

"ಹೊಸ ನೀರು ಬಂದಾಗ, ಹಳೇ ನೀರು ಕೊಚ್ಚಿಹೋಗುತ್ತದೆ. ಅದೇ ರೀತಿ ಹೊಸದೊಂದು ಸುದ್ದಿ ಬಂದಾಗ ಹಳೆಯ ಸುದ್ದಿಗಳು ಪ್ರಾಮುಖ್ಯತೆ ಕಳೆದುಕೊಳ್ಳುತ್ತವೆ"

ಈ ಮೇಲಿನ ಉಕ್ತಿ ಒಂದು ರೂಢಿ. ಶ್ರೀ ರಾಮಪ್ಪನವರು ಇಂದು ಸಮಾಜಸೇವೆಯಿಂದ ನಿವೃತ್ತರಾದರೂ ಅವರು ಸಮಾಜಕ್ಕೆ ಸಲ್ಲಿಸಿದ ನಿರಂತರ ಸೇವೆ ನಿತ್ಯನೂತನ. ಆದ್ದರಿಂದ ಮೇಲಿನ ಉಕ್ತಿಯು ಶ್ರೀ ರಾಮಪ್ಪನವರ ಬಗೆಗೆ ಅನ್ವಯವಾಗದೆಂಬ ಅಭಿಪ್ರಾಯ ನನ್ನದು.

ಕಲೆಯು ಹೇಗೆ ಸೃಷ್ಟಿಯಲ್ಲಿ ಅಂತರ್ಗತವಾಗಿದೆಯೋ ಹಾಗೆ ಮನುಕುಲದಲ್ಲಿ ಜಾತಿ, ಪಂಗಡ, ವರ್ಗ, ಜನಾಂಗಗಳೆಲ್ಲವೂ ಸಮಾಜದಲ್ಲಿ ಬೆರೆತುಕೊಂಡಿವೆ. 'ಜೀವನ' ಎಂಬ ಆಶ್ರಮದಲ್ಲಿ ನಿರಂತರ ಪ್ರಕ್ರಿಯೆ ಕಲಿಯುವಿಕೆಯೇ ಆಗಿದೆ. ಸಮಾಜದಲ್ಲಿ ಮಾನವನ ಜೀವನ ಬೆರೆತುಹೋಗಿದೆ.

ಈ ಕಾರಣದಿಂದಲೇ ವ್ಯಕ್ತಿಗೂ-ಸಮಾಜಕ್ಕೂ ಅನಾದಿ ಕಾಲದಿಂದ ಬೆಳೆದು ಬಂದ ನಂಟು. ಸಮಾಜದಿಂದ ವ್ಯಕ್ತಿ ಪಡೆಯಬಹುದಾದ ಸೌಲಭ್ಯಗಳೇನು, ಹಾಗು ವ್ಯಕ್ತಿ ಸಮಾಜಕ್ಕೆ ಕೊಡುವ ಕೊಡುಗೆಗಳೇನು ಎಂಬುದನ್ನು ವಿಮರ್ಶಿಸಿದಾಗ ವ್ಯಕ್ತಿಯು ತನ್ನಲ್ಲಿ ಕೊಡಲು ಏನಿದೆ ಎಂಬುದನ್ನು ನಿರ್ಣಯಿಸಬೇಕಾಗುತ್ತದೆ.

ವ್ಯಕ್ತಿಯು ಈ ನೆಲದಲ್ಲಿ ನೂರೆಂಟು ಕ್ಷೇತ್ರಗಳಲ್ಲಿ ಸೇವೆಯನ್ನು ಸಮಾಜಕ್ಕೆ ಸಲ್ಲಿಸಬಹುದು. ಹೀಗೆ ಸೇವೆ ಸಲ್ಲಿಸುವಾಗ ಸಮಾಜ ಕೈ ಜೋಡಿಸುವುದರ ಬದಲು ಕಲ್ಲೆಸೆಯಬಹುದು. ಸೇವೆಯ ಅನೇಕ ಕ್ಷೇತ್ರಗಳಿದ್ದರೂ, ಅವುಗಳೆಲ್ಲದರಲ್ಲಿಯೂ ಪರಿಪೂರ್ಣತೆಯನ್ನು

ಕಾಣಬೇಕೆಂಬ ಭಾವನೆಯಿಂದ ಸೇವೆ ಸಲ್ಲಿಸಿದವರಲ್ಲಿ ಶ್ರೀ ರಾಮಪ್ಪನವರು ಮೊದಲಿಗರು.

ಶ್ರೀ ರಾಮಪ್ಪನವರು ಶಿವಮೊಗ್ಗ ಜಿಲ್ಲೆಯವರಾಗಿದ್ದು, ಬಡಕುಟುಂಬದಲ್ಲಿ ಹುಟ್ಟಿ, ಇಂಜಿನಿಯರಿಂಗ್ ಪದವಿಯನ್ನು ಪಡೆದು, ಲೋಕೋಪಯೋಗಿ ಇಲಾಖೆಯಲ್ಲಿ ಸುದೀರ್ಘ ಕಾಲ ಸೇವೆ ಸಲ್ಲಿಸಿದರು. ಇವರು ಸರ್ಕಾರಿ ಸೇವೆಯಲ್ಲಿ ಇದ್ದಾಗಲೂ ಜನಾಂಗದ ಅಭಿಮಾನದಿಂದ ಉಪ್ಪಾರ ಜನಾಂಗದ ಜನರನ್ನು ಗುರುತಿಸಿ ಅವರನ್ನು ಸಂಪರ್ಕದಲ್ಲಿಟ್ಟುಕೊಂಡು ಅವರ ಆಗುಹೋಗುಗಳಿಗೆ ಸ್ಪಂದಿಸುತ್ತಿದ್ದರು.

ಕರ್ನಾಟಕ ಪ್ರಾಂತದ ಉದ್ದಗಲಕ್ಕೂ ಉಪ್ಪಾರ ಜನಾಂಗಕ್ಕೆ ಸೇತುವೆ ಕಟ್ಟಿದ ಒಬ್ಬ ಗಣ್ಯವ್ಯಕ್ತಿ. ಶುದ್ಧಹಸ್ತ, ಪರಿಶುದ್ಧ ಮನಸ್ಸು, ವಿಶಾಲ ಮನೋಭಾವವುಳ್ಳ ವ್ಯಕ್ತಿಯಾಗಿದ್ದುಕೊಂಡು ಸಮಾಜಕ್ಕೆ ಅಪಾರ ಸೇವೆ ಸಲ್ಲಿಸಿರುತ್ತಾರೆ. ಸರ್ಕಾರದ ಸೇವೆಯಲ್ಲಿದ್ದಾಗಲೂ, ತಮ್ಮ ಸೇವೆಗೆ ಹಿರಿಯ ಅಧಿಕಾರಿಗಳಿಂದ ಮೆಚ್ಚುಗೆ ಪಡೆದವರಾಗಿದ್ದರು.

ಇವರು ಸೇವೆಯಲ್ಲಿದ್ದಾಗ ಆ ಸ್ಥಳ ನಗರವಾದಲ್ಲಿ, ಅಲ್ಲಿನ ಉಪ್ಪಾರ ಜನಾಂಗದ ಗಣ್ಯರನ್ನು ಸಂಪರ್ಕಿಸಿ, ಜಿಲ್ಲೆಯ ಮುಖ್ಯ ಪಟ್ಟಣಗಳಲ್ಲಿ ಹಳ್ಳಿಯ ಬಡವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿನಿಲಯವನ್ನು ಕಟ್ಟಲು ಪ್ರಯತ್ನಿಸಿದರು. ಇವರ ಸತತ ಪ್ರಯತ್ನದ ಫಲ ಇಂದು ದಾವಣಗೆರೆಯಲ್ಲಿ ಒಂದು ಭವ್ಯವಾದ ವಿದ್ಯಾರ್ಥಿನಿಲಯ ಸ್ಥಾಪನೆಯಾಗಲು ಕಾರಣವಾಯಿತು.

ಇದೇ ರೀತಿಯಲ್ಲಿ ಬೆಂಗಳೂರು ಮಹಾನಗರದಲ್ಲಿ ಹಳ್ಳಿಯ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸಕ್ಕೆ ಅನುಕೂಲವಾಗಲು ಒಂದು ಸಮಾಜಕ್ಕೆ ನಿವೇಶನ ಬೇಕೆಂದು ಸರ್ಕಾರದೊಡನೆ ಪ್ರಯತ್ನಿಸಿ ನಿವೇಶನವನ್ನು ಪಡೆಯಲು ಸಫಲರಾದರು ಹಾಗು ನಿವೇಶನದಲ್ಲಿ ಕಟ್ಟಡವನ್ನು ನಿರ್ಮಿಸಲು ಹಣ ಸಂಗ್ರಹಿಸಲು ನೆರವಾದರು. ಸಮಾಜಕ್ಕೆ ನಿವೇಶನವನ್ನು ದೊರಕಿಸಿಕೊಡಲು ಮುಖ್ಯ ಕಾರಣಕರ್ತರಾದರು. ಆ ಸಂದರ್ಭದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿಯಾಗಿದ್ದ ಶ್ರೀ ಎಚ್. ಸಿ. ನೀರಾವರಿಯವರನ್ನು ಈ ಸಂದರ್ಭದಲ್ಲಿ ಸಮಾಜ ನೆನಪಿಸಿಕೊಳ್ಳಬೇಕಾಗಿದೆ. ಇದಲ್ಲದೆ ಶ್ರೀ ರಾಮಪ್ಪನವರು ಉಪ್ಪಾರ ಸಮಾಜದ ಅಧ್ಯಕ್ಷರಾಗಿದ್ದಾಗ ನಮ್ಮ ಸಮಾಜವು ಇತರ ಸಮಾಜಗಳೊಡನೆ ಎಲ್ಲ ಕ್ಷೇತ್ರಗಳಲ್ಲಿ ಪೈಪೋಟಿ ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿದು, ಸಮಾಜವನ್ನು ಒಂದನೆಯ ಪ್ರವರ್ಗಕ್ಕೆ ತರಲು ಸರ್ಕಾರದೊಡನೆ ವ್ಯವಹರಿಸಿದರು. ಅಧ್ಯಕ್ಷರಾಗಿದ್ದಾಗ ಅನೇಕ ಹಳ್ಳಿಗಳಿಗೆ ಸ್ವಂತ ಖರ್ಚಿನಿಂದಲೇ ಪ್ರಯಾಣ ಬೆಳೆಸಿ ಜನರನ್ನು ಸಂಘಟಿಸಿ ಜನರ ಕಷ್ಟ ಸುಖಗಳಿಗೆ ಸ್ಪಂದಿಸುತ್ತಿದ್ದರು.

ಶ್ರೀ ರಾಮಪ್ಪನವರ ವ್ಯಕ್ತಿತ್ವವನ್ನು ವರ್ಣಿಸಲು ನಾನು ಅಸಮರ್ಥ. ಆದರೂ ಅವರ ಶುದ್ಧಮನಸ್ಸು, ವಿಶಾಲ ಮನೋಭಾವ, ನಿಸ್ವಾರ್ಥ ಸೇವೆ, ಶುದ್ಧಹಸ್ತ ನನ್ನ ಮನಸ್ಸಿನಲ್ಲಿ ಹಚ್ಚ ಹಸಿರಾಗಿಯೇ ಇದೆ. ಇಂಥ ವ್ಯಕ್ತಿತ್ವವುಳ್ಳ ವ್ಯಕ್ತಿ ನಮ್ಮ ಸಮಾಜಕ್ಕೆ ದೊರಕಿದ್ದು ಸಮಾಜದ ಭಾಗ್ಯವೇ ಸರಿ. ಇವರ ಸೇವೆ ಸಮಾಜಕ್ಕೆ ಇನ್ನೂ ಬೇಕಿದ್ದು, ದೇವರು ಇವರಿಗೆ, ಇವರ ಕುಟುಂಬಕ್ಕೆ ಆಯಸ್ಸು, ಅಷ್ಟೈಶ್ವರ್ಯ ಭಾಗ್ಯವನ್ನು ಕೊಡಬೇಕೆಂದು ಪ್ರಾರ್ಥಿಸುತ್ತೇನೆ.

*

## * ಸಮಾಜದ ಋಣ ತೀರಿಸಿದವರು

- ಓ. ನಾಗೇಂದ್ರಯ್ಯ
ಹೊಸದುರ್ಗ

ಶಿವಮೊಗ್ಗ ಜಿಲ್ಲೆಯ ಅರೆಮಲೆನಾಡಿನ ಚನ್ನಗಿರಿ ತಾಲ್ಲೂಕಿನ ದೇವರಹಳ್ಳಿಯಲ್ಲಿ ಉಪ್ಪಾರ ಜನಾಂಗವು ಬಹುಸಂಖ್ಯೆಯಲ್ಲಿ ಇದೆ. ಇವರು ಅತಿ ಬಡವರು. ಅಲ್ಲಿ ಹುಟ್ಟಿ ಬೆಳೆದ ಶ್ರೀ ಡಿ.ಎಸ್. ರಾಮಪ್ಪನವರು ಏರಿದ ಸ್ಥಿತಿ ನೋಡಿದ ನಾವೆಲ್ಲ ಅವರ ಸಾಹಸವನ್ನು ಮೆಚ್ಚಬೇಕಾಗಿದೆ.

ಸಿಕ್ಕುಡಿಯಪ್ಪ-ಕರಿಯಮ್ಮ 'ಇವರು ಸಮಾಜಕ್ಕೆ ಏನು ಕೊಟ್ಟಿದ್ದಾರೆ' ಎನ್ನುವ ಮಾತನ್ನು ಗಮನಿಸಿದರೆ ಅವರು ರಾಮಪ್ಪನವರಂತಹ ಸುಪುತ್ರನನ್ನು ಕೊಟ್ಟಿದ್ದಾರೆ, ಎನ್ನಬೇಕು. ಶ್ರೀ ರಾಮಪ್ಪನವರು ಪರಾವಲಂಬಿಯಾಗದೆ ತನಗೆ ಬಂದಂಥ ಎಲ್ಲ ಕಷ್ಟಗಳನ್ನು ನಿಭಾಯಿಸಿಕೊಂಡು ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆ, ಕಾಲೇಜು ಶಿಕ್ಷಣ ಹಾಗೂ ಬಿ.ಇ. ಪದವಿಗಳನ್ನು ಪಡೆದ ಕಥೆಯನ್ನು ಕೇಳಿದಾಗ ಇಂದಿಗೂ ನನ್ನ ಕಣ್ಣಂಚಿನಲ್ಲಿ ನೀರು ಹರಿಯುತ್ತದೆ.

ಬಿ.ಇ. ವ್ಯಾಸಂಗದ ಪ್ರಾರಂಭದ ಅವಧಿಯಲ್ಲೇ ಮದುವೆಯಾದರೂ ವಿದ್ಯಾಭ್ಯಾಸವನ್ನು ಕಡೆಗಣಿಸದೆ ಪದವಿ ಪಡೆದು ಸ್ವಯಂಶಕ್ತಿಯಿಂದ ಉದ್ಯೋಗ ಪಡೆದರು. ಯಾವುದೇ ಪ್ರತಿಫಲ ಅಪೇಕ್ಷೆಯಿಲ್ಲದೆ ಯಂತ್ರಮಾನವರಂತೆ ದುಡಿದು, ನಿಷ್ಠುರ ಅಧಿಕಾರಿಯಾಗಿ, ಉಪ್ಪು ತಿಂದ ಇಲಾಖೆಗೆ ದ್ರೋಹ ಬಗೆಯದಂತೆ ಸರ್ಕಾರದ ಸೇವೆ ಮಾಡಿದ ಕರ್ಮಯೋಗಿ. ಶಿಸ್ತು, ಪರಿಶ್ರಮ, ಆಸಕ್ತಿ ಹಾಗೂ ಪ್ರಾಮಾಣಿಕತೆಯೇ ಇವರ ಸರ್ಕಾರಿ ಸೇವೆಯ

ಪ್ರತಿಫಲಗಳಾಗಿವೆ. ತನಗೆ ಅನ್ನ ಹಾಕಿದ ಸರ್ಕಾರಕ್ಕೆ ತಾನು ದ್ರೋಹ ಬಗೆಯುವುದಿಲ್ಲ ಎಂಬ ಕಠೋರ ನಿಲುವು ತಾಳಿದ ರಾಮಪ್ಪನವರು ಎಲ್ಲರಿಗೂ ಆದರ್ಶಪ್ರಾಯರು.

ಉಪ್ಪಾರ ಸಮಾಜವನ್ನು ಸಂಘಟನೆ ಮಾಡಬೇಕೆಂಬುದು ಇವರಿಗೆ ಬಾಲ್ಯದಿಂದಲೂ ಬಂದ ಆದರ್ಶವಾಗಿತ್ತು. ನಿವೃತ್ತಿಯ ನಂತರ ಚನ್ನಗಿರಿ ತಾಲ್ಲೂಕಿನ ಮುಂದಾಳುಗಳು ಶಿವಮೊಗ್ಗ ಜಿಲ್ಲೆಯ ಉಪ್ಪಾರ ಸಂಘದ ಅಧ್ಯಕ್ಷರನ್ನಾಗಿ ನೇಮಿಸಿದರು. ಕಾಯೇನ, ವಾಚಾ ಮನಸಾ ಶ್ರಮಿಸಿ ಅಲ್ಲಿನ ವಿದ್ಯಾರ್ಥಿನಿಲಯಕ್ಕೆ ಹೆಚ್ಚುವರಿ ಕಟ್ಟಡ ಮಾಡಿಸಿದ ಕೀರ್ತಿ ಇವರದು. ಈ ಸಮಾಜ ಸೇವೆಗಾಗಿ ಪೂಜ್ಯ ಶ್ರೀ ಲೇಪಾಕ್ಷ ಸ್ವಾಮೀಜಿಯವರೇ ಇವರನ್ನು ಶ್ಲಾಘನೆ ಮಾಡಿದ್ದರು.

ಆದರ್ಶ ಹಾಗೂ ಕ್ರಿಯಾಶೀಲರಾದ ಇವರನ್ನು ಉಪ್ಪಾರ ಸಮಾಜದ ಹಿತೈಷಿಗಳು 1984ರಲ್ಲಿ ರಾಜ್ಯ ಸಂಘದ ಅಧ್ಯಕ್ಷರನ್ನಾಗಿ ಮಾಡಿದರು. ಇವರು ರಾಜ್ಯ ಸಂಘದ ಅಧ್ಯಕ್ಷರಾಗಿ ಹನ್ನೊಂದು ವರುಷಗಳ ಕಾಲ ಸುದೀರ್ಘ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಸಮಾಜದ ಏಳ್ಗೆಗೆ ಅನೇಕ ಅಭಿವೃದ್ಧಿ ಕೆಲಸಗಳನ್ನು ನಿಸ್ವಾರ್ಥತೆಯಿಂದ ಮಾಡಿದ್ದಾರೆ.

ರಾಜ್ಯ ಉಪ್ಪಾರ ಸಂಘ ಆದರ್ಶವಾಗಿ ಬೆಳೆಯಲು ರೂಪರೇಷೆಗಳನ್ನು ಸಿದ್ಧಮಾಡಿ ನ್ಯಾಯೋಚಿತ ರೀತಿಯಲ್ಲಿ ಸಂಘವನ್ನು ಮುನ್ನಡೆಸಿದ್ದಾರೆ. ಬೆಂಗಳೂರಿನಲ್ಲಿ ಬಾಡಿಗೆ ಕೊಠಡಿಯಲ್ಲಿ ಕಛೇರಿ ಆರಂಭಿಸಿದರು. ಅನಂತರ ಅಧಿಕಾರಿಯೊಬ್ಬರ ಮನೆಯನ್ನು ಬಾಡಿಗೆಗೆ ಪಡೆದು ಅಲ್ಲಿಗೆ ಕಛೇರಿಯನ್ನು ಸ್ಥಳಾಂತರಿಸಿದರು. ರಾಜ್ಯದಲ್ಲಿರುವ ಚಿಕ್ಕಪುಟ್ಟ ನೌಕರರ ಪಟ್ಟಿಯನ್ನು ತಯಾರಿಸಿ ಅವರ ಮನ ಒಲಿಸಿ ಅವರುಗಳನ್ನು ಸಂಘದ ಸದಸ್ಯರನ್ನಾಗಿಸಿದರು. ಉದಾರ ಕೊಡುಗೈದಾನಿಗಳನ್ನು ಸಂಪರ್ಕಿಸಿ ಅವರ ಸಹಕಾರ ಪಡೆದರು.

'ಹನಿ ಹನಿಗೂಡಿದರೆ ಹಳ್ಳ' ಎಂಬಂತೆ ಹಣ ಸಂಗ್ರಹಿಸಿ ನಮ್ಮ ಸಮಾಜದ ಹಿರಿಯ ಅಧಿಕಾರಿಗಳಾದ ಹೆಚ್.ಸಿ. ನೀರಾವರಿ ಅವರ ಮಾರ್ಗದರ್ಶನ-ಸಹಕಾರ ಸಲಹೆಯೊಂದಿಗೆ ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ ನಿವೇಶನವನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಪಡೆದ ಧೀಮಂತ ವ್ಯಕ್ತಿ ಡಿ.ಎಸ್. ರಾಮಪ್ಪ. ಸದಾ ಶಿಸ್ತು, ಸಂಯಮ, ತಾಳ್ಮೆ ಹಾಗೂ ಪರೋಪಕಾರ ಗುಣಗಳನ್ನು ಮೈಗೂಡಿಸಿಕೊಂಡಿರುವ ಇವರು ರಾಜ್ಯದ ಪೂಜ್ಯಶ್ರೀಗಳ ಮಾರ್ಗದರ್ಶನದಂತೆ ಭಗೀರಥ ಉಪ್ಪಾರ ಧಾರ್ಮಿಕ ಟ್ರಸ್ಟ್ ಪ್ರಾರಂಭಿಸಿದರು. ಅದರ ಮೂಲಕ ಬೆಂಗಳೂರಿನ ನಿವೇಶನದಲ್ಲಿ ವಿದ್ಯಾರ್ಥಿನಿಲಯ ಹಾಗೂ ಸ್ವಾಮೀಜಿಯವರ ವಾಸಕ್ಕೆ ಯೋಗ್ಯ ಅತಿಥಿ ಗೃಹವನ್ನು ನಿರ್ಮಿಸಿದ್ದಾರೆ. ಇದೊಂದು ಸಾಮಾನ್ಯ ಸಾಧನೆಯಲ್ಲ. ಉಪ್ಪಾರ ಸಮಾಜಕ್ಕೆ ಬೆಂಗಳೂರಿನಲ್ಲಿ ನಿವೇಶನ ಪಡೆಯುವುದು ಕನಸಿನ ಮಾತಾಗಿತ್ತು. ಹೆಚ್.ಸಿ. ನೀರಾವರಿ ಹಾಗೂ ರಾಮಪ್ಪ ಅವರು ತಮ್ಮ ವ್ಯಕ್ತಿತ್ವದ ಪ್ರಭಾವದಿಂದಾಗಿ ಇಂತಹ ಕೆಲಸವನ್ನು ನಮ್ಮ ಸಮಾಜಕ್ಕೆ ಮಾಡಿಕೊಟ್ಟಿದ್ದಾರೆ. ಅದನ್ನು ಸದ್ಬಳಕೆ ಮಾಡಿಕೊಳ್ಳುವುದೇ ನಮ್ಮೆಲ್ಲರ ಹೊಣೆ.

ರಾಜ್ಯದಲ್ಲಿ ನಿಷ್ಕ್ರಿಯವಾಗಿದ್ದ ಜಿಲ್ಲಾ ಹಾಗೂ ತಾಲ್ಲೂಕು ಸಂಘಗಳಿಗೆ ಚೈತನ್ಯದ ಬೀಜ ಬಿತ್ತಿದರು. ದಾವಣಗೆರೆಯಲ್ಲಿ ಶಾಖಾಮಠವನ್ನು ಪ್ರಾರಂಭಿಸಿ ಅಲ್ಲಿ ವಿದ್ಯಾರ್ಥಿ ನಿಲಯವನ್ನು ಕಟ್ಟಿದ ಕೀರ್ತಿ ಕೂಡಾ ಶ್ರೀ ರಾಮಪ್ಪನವರಿಗೆ ಸೇರುತ್ತದೆ. ಚಿತ್ರದುರ್ಗ, ಶಿವಮೊಗ್ಗ, ಹೊಸದುರ್ಗ, ಮೈಸೂರು, ರಾಯಚೂರು, ಚಾಮರಾಜನಗರ, ಗೋಕಾಕ್, ಧಾರವಾಡ ಹೀಗೆ ಎಲ್ಲಿ ಉಪ್ಪಾರರ ಜನಸಂಖ್ಯೆ ಇದೆಯೋ ಅಲ್ಲೆಲ್ಲಾ ರಾಮಪ್ಪನವರ ನಿಸ್ವಾರ್ಥ ಸೇವೆ ಗೋಚರವಾಗುತ್ತದೆ. ಪೂಜ್ಯ ಪುರುಷೋತ್ತಮಾನಂದ ಸ್ವಾಮೀಜಿಯವರ ಪಟ್ಟಾಭಿಷೇಕವನ್ನು ಅದ್ದೂರಿಯಿಂದ ಮಾಡಿ ನಮ್ಮ ಸಮಾಜಕ್ಕೆ ಶ್ರೇಯಸ್ಸನ್ನು ತಂದುಕೊಟ್ಟಿದ್ದಾರೆ. ಇವರು ಮಾಡಿರುವ ಸತ್ಕಾರ್ಯಗಳನ್ನು ಯಥಾರೀತಿ ಮುಂದುವರಿಸಿಕೊಂಡು ಹೋಗುವ ಜವಾಬ್ದಾರಿ ನಮ್ಮೆಲ್ಲರ ಮೇಲೂ ಇದೆ.

*

## ✻ ಮಾರ್ಗದರ್ಶಿಗಳು

- ಜಿ. ಪುರುಷೋತ್ತಮ್
ಕೊಪ್ಪಳ

ಸದಾ ಉತ್ಸಾಹ ಚಿಲುಮೆಯಂತಿರುವ ಪೂಜ್ಯರಾದ ರಾಮಪ್ಪನವರು ಜನಾಂಗದ ಸಂಘಟನೆಗೆ ಸಂಕಲ್ಪ ಮಾಡಿಕೊಂಡು ನಿಂತವರು. ಜನಸೇವೆಯೇ ಈಶಸೇವೆ ಹಾಗು ದೇಶಸೇವೆಗಳೆಂದು ತಿಳಿದು ಬದುಕುತ್ತಿರುವವರು. ಕಾಯಕಯೋಗಿ ರಾಮಪ್ಪನವರು ಜಂಗಮತ್ವ (ಚಲನಶೀಲತೆ)ದಲ್ಲಿ ನಂಬಿಕೆಯಿಟ್ಟವರು. ಯಾವ ತರಹದ ಬೇಸರವಿಲ್ಲದೆ ಜನಾಂಗದ ಉನ್ನತಿಗಾಗಿ ನಾಡಿನಾದ್ಯಂತ ಹಾಗು ನಾಡಿನ ಹೊರಗೆ ಅಲೆದಿದ್ದಾರೆ. ಸಾರ್ವಜನಿಕ ಸೇವೆಯೇ ತಮ್ಮ ಸಾಧನೆಯೆಂದು ತಿಳಿದು ಹಗಲಿರುಳೂ ತಮ್ಮ ಅಮೂಲ್ಯ ಜೀವನಾವಧಿಯನ್ನು ಸವೆಸಿದ್ದಾರೆ. ವಾಸ್ತವವಾದಿಗಳಾದ ಇವರು ಜನಾಂಗದ ಅಪಾರ ಹಾಗು ಅನಂತಶಕ್ತಿಯನ್ನು ಬಲ್ಲವರು. ಇಂಥ ಕಷ್ಟಸಾಧ್ಯವಾದ ಕಾರ್ಯದಲ್ಲಿ ಅವರು ಮೊದಲು ಹೆಜ್ಜೆ ತುಳಿದು ಸಂಘಟನೆಯೆಂಬ ಹಾದಿಯನ್ನು ನಿರ್ಮಿಸಿದ್ದಾರೆ.

ಉಪ್ಪಾರ ಜನಾಂಗದ ದಾರಿದೀಪವಾಗಿ ಸುಮಾರು ಇಪ್ಪತ್ತು ವರ್ಷಗಳ ಇವರ ಪರಿಶ್ರಮದಿಂದ ಸಂಘಟನೆಯು ಹೊಸರೂಪ ಪಡೆಯುವಂತಾಗಿದೆ. ವಿಲಾಸಿ ಜೀವನದಿಂದ ಬಹುದೂರ ನಿಂತು ಸಂಘಟನೆಯ ಅಡಿಪಾಯವನ್ನು ಗಟ್ಟಿಗೊಳಿಸಿದ್ದಾರೆ. ಬಾಲ್ಯದಲ್ಲೇ ತಂದೆ-ತಾಯಿಗಳ ಪ್ರೀತಿಯಿಂದ ವಂಚಿತರಾದ ಇವರು ಬಡತನದ ಬೇಗುದಿಯಲ್ಲಿ ಬೆಂದವರು. ಛಲಗಾರ ರಾಮಪ್ಪನವರು ಜಿದ್ದಿನ ಜೀವನ ನಿರ್ವಹಿಸಿದವರು. ವಿನಯವನ್ನು ಮೈಗೂಡಿಸಿಕೊಂಡಿರುವ ಇವರು ತಮಗೆ ಮಾಡಿದ ಉಪಕಾರವನ್ನು ಮರೆತವರಲ್ಲ.

ಋಣಭಾರವನ್ನ ಸದಾ ತಮ್ಮ ಸ್ಮೃತಿಪಟಲದಲ್ಲಿರಿಸಿಕೊಂಡು ನೆನೆಯುವಂತಹವರು. ಸಮಾಜದಲ್ಲಿ ತಾಯಿಯನ್ನು ಕಾಣುವುದು ಇವರ ದೊಡ್ಡಗುಣ. ಇವು ಎಲ್ಲಾ ಮನುಷ್ಯರಲ್ಲಿ ಸದಾ ಹಸಿರಾಗಿರಬೇಕು. ಅಂದಾಗಲೇ ದೊಡ್ಡವರೆನಿಸಿಕೊಳ್ಳುವುದು. ಕಡುಕಷ್ಟದಲ್ಲಿ ತಮ್ಮ ಬಿಇ ಪದವಿಯನ್ನು ಬಹು ಪ್ರಯತ್ನದಿಂದ ಗಳಿಸಿಕೊಂಡವರು. ವಿದ್ಯೆ, ಅನುಭವ, ಪರಿಣತಿಗಳು ನಾವು ಮಾಡುವ ಮಹತ್ ಸಾಧನೆಗಳಿಂದಲೇ ಬರುವಂಥವುಗಳು. ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳದೇ ಯಾವ ವಿದ್ಯೆಯೂ ಸಿದ್ಧಿಯಾಗುವುದಿಲ್ಲ. ಸಿದ್ಧಿಗಳಿಲ್ಲದೇ ನಾವು ಕಲ್ಪಿಸಿಕೊಂಡ ಗುರಿಗಳು ಅಸಾಧ್ಯವೆನಿಸುತ್ತವೆ. ಭಗೀರಥ ಪ್ರಯತ್ನದಲ್ಲಿ ವಿಶ್ವಾಸವಿರಿಸಿ ಬಹುದೂರದ ನಕ್ಷತ್ರಗಳನ್ನು ಹಿಡಿಯುವಲ್ಲಿ ಜಯಶಾಲಿಗಳಾಗಿದ್ದಾರೆ. ತಮ್ಮ ಜೀವನದಲ್ಲಿ ಉಂಡ ಕಹಿ ಅನುಭವಗಳು ಬೇರೆಯವರನ್ನು ಸೋಕದಿರಲೆಂದು ಕೆಲವು ವಸತಿನಿಲಯಗಳನ್ನು ನಿರ್ಮಿಸುವಲ್ಲಿ ಯಶಸ್ವಿಗಳಾಗಿದ್ದಾರೆ. ಕೆಲವರು ದೊಡ್ಡವರಾಗಿ ಜನ್ಮವೆತ್ತಿ ಬಂದಿರುತ್ತಾರೆ. ಇನ್ನು ಕೆಲವರು ದೊಡ್ಡಸ್ತಿಕೆಯನ್ನು ಸಂಪಾದಿಸಿಕೊಂಡಿರುತ್ತಾರೆ. ಪ್ರಯತ್ನಶೀಲರಾದ ರಾಮಪ್ಪನವರು ದೊಡ್ಡಸ್ತಿಕೆ ಹಾಗೂ ಸಂಪತ್ತನ್ನು ತಮ್ಮ ಸತತ ಪರಿಶ್ರಮದ ಮೇಲೆ ಕಟ್ಟಿಕೊಂಡವರು. ಪ್ರಾಮಾಣಿಕವಾಗಿ ಹಾಗು ನಿಷ್ಠೆಯಿಂದಲೇ ವೃತ್ತಿ ಬದುಕನ್ನು ನಿರ್ವಹಿಸಿ ವಿಶ್ರಾಂತರಾಗಿದ್ದಾರೆ.

ಜೀವನದ ಸಾರ್ಥಕತೆ ನಾವು ಬದುಕುವ ಬದುಕಿನಿಂದ ನಿರ್ಣಯಿಸಲ್ಪಡುವಂತಹದ್ದು, ಹಠವಾದಿಗಳು ಯಾವಾಗಲೂ ಪ್ರವಾಹದ ವಿರುದ್ಧ ಈಜಿಜಯಿಸುವಂತಹವರು. ಜೀವನದ ಪರ್ಯಂತ ತೊಂದರೆಗಳ ಸರಮಾಲೆಯನ್ನು ಧರಿಸಿದ್ದಾರೆ. ಗಂಧವು ತನ್ನನ್ನು ತಾನು ಸವೆಸಿಕೊಂಡು ಹೇಗೆ ಪರಿಮಳ ಬೀರುತ್ತದೆಯೋ ಹಾಗೇ ತಮ್ಮನ್ನು ಸಂಪೂರ್ಣವಾಗಿ ಸಂಘಟನೆಯಲ್ಲಿ ತೊಡಗಿಸಿಕೊಂಡಿರುವರು. ನೀರಿನಲ್ಲಿ ಬಿದ್ದ ಒಂದು ಕಲ್ಲು ವರ್ತುಲಗಳನ್ನು ನಿರ್ಮಿಸುವಂತೆ ತಮ್ಮ ಪ್ರಭಾವಲಯಗಳನ್ನು ಸಮಾಜದ ಎಲ್ಲ ನಾಗರಿಕರೊಂದಿಗೆ ವಿಸ್ತರಿಸಿಕೊಂಡು ಮುನ್ನುಗ್ಗುತ್ತಿರುವರು. ಉನ್ನತವಾದ ಧ್ಯೇಯವನ್ನು ಸಂಕಲ್ಪಿಸಿಕೊಂಡು ಸೇವೆಗೆ ಇಳಿದಿದ್ದಾರೆ. ಯಾವ ಕಾರಣಕ್ಕೂ ವಿಚಲಿತರಾಗುವ ಮನಸ್ಸು ಇವರದಲ್ಲ. ಕೃತಿ ಮೂಲಕ ಮಾಡಿ ತೋರಿಸುವ ಶೂರತ್ವವನ್ನು ಪಡೆದಿದ್ದಾರೆ ಹೊರತು ಬಾಯಿಮಾತಿನ ಬಂಟರಲ್ಲ. ಪಾದರಸದ ಗುಣವುಳ್ಳ ಸಂಘಟನಾಶಕ್ತಿ ಇವರನ್ನು ಆವರಿಸಿಕೊಂಡಿದೆ. ಶ್ರೇಷ್ಠ ಚಿಂತಕ ಬರ್ನಾರ್ಡ್ ಷಾ ಅವರ ಉಕ್ತಿಯಂತೆ ಮಾಡಬಲ್ಲವರು ಮಾಡುತ್ತಾರೆ, ಮಾಡಲರಿಯದವರು ಹೇಳುತ್ತಾರೆ. ಆದರೆ ರಾಮಪ್ಪನವರು ವೈಶಿಷ್ಟತೆಯಿಂದ ಕೂಡಿರುವ ಮಹಾನುಭಾವರು. ಇವರು ಮಾಡುವ ಹಾಗು ಮಾತನಾಡುವ ಎರಡೂ ಗುಣಗಳನ್ನು ರೂಢಿಸಿಕೊಂಡಿರುವುದು. ಒಂದು ಘನವಾದ ವಿಚಾರ.

ಸಂಘಟನಾಚತುರರಾದ ರಾಮಪ್ಪನವರು ಯಾವಾಗಲೂ ನಿಷ್ಠೆ, ಪ್ರಾಮಾಣಿಕತೆಗಳನ್ನು ಮರೆತವರಲ್ಲ. ಉಪ್ಪು ಸದಾ ತನ್ನ ರುಚಿಯನ್ನು ಕಾಯ್ದುಕೊಂಡಂತೆ ತಮ್ಮ ಕರ್ತವ್ಯಪ್ರಜ್ಞೆಯನ್ನು ಸದಾ ಹಸಿರಾಗಿರಿಸಿಕೊಂಡವರು. ಮಾಡಬಲ್ಲವನು ಜೀವನದಲ್ಲಿ ಏನೆಲ್ಲಾ ಸಾಧಿಸಬಹು

ದೆಂಬುದಕ್ಕೆ ಹಿರಿಯರಾದ ರಾಮಪ್ಪನವರು ಮಾಡಿರುವ ಕಾರ್ಯಗಳೇ ಸಾಕ್ಷಿಯಾಗಿ ನಿಂತಿವೆ. ಶೂನ್ಯದಲ್ಲಿ ಸೃಷ್ಟಿಸುವ ಛಲದಂಕಮಲ್ಲರಾದ ಇವರು ಇಡೀ ಸಮಾಜವೇ ನಿಂತು ನೋಡುವ ಕಾರ್ಯ ಮಾಡಿದ್ದಾರೆ. ಉಪ್ಪಾರ ಜನಾಂಗದ ಸಂಘಟನೆಯೆಂಬ ಸಸಿ ನೆಟ್ಟು ಅದರ ಫಲವನ್ನು ನಮ್ಮ ಸಮಾಜಕ್ಕೆ ಕೊಡಿಸಿದ್ದಾರೆ. ಪ್ರತಿಫಲವನ್ನು ಅಪೇಕ್ಷಿಸದ ಇವರು ತಾಯಿ-ಮಗುವಿನ ಸಂಬಂಧದ ತರಹ ನಮ್ಮ ಸಮೂಹದ ಜೊತೆಗೆ ಸಂಬಂಧವನ್ನು ಇರಿಸಿಕೊಂಡಿರುವರು. ಹಾಲಿನಲ್ಲಿ ಸಕ್ಕರೆ ಬೆರೆತಂತೆ ಸರ್ವರ ಜೊತೆಗೂ ಬೆರತುಕೊಂಡಿದ್ದಾರೆ. ಆಯಸ್ಕಾಂತೀಯ ಗುಣವುಳ್ಳ ರಾಮಪ್ಪನವರು ಯಾರನ್ನೂ ತಮ್ಮ ಪರಿಧಿಯಿಂದ ಬಿಟ್ಟವರಲ್ಲ. ಒತ್ತಾಯದ ಪ್ರೀತಿಯ ಮೂಲಕ ಯುವಕರನ್ನು, ಹಿರಿಯರನ್ನು ಹಾಗು ಮಹಿಳೆಯರನ್ನು ಸಮಾಜದ ಸಂಘಟನೆಯಲ್ಲಿ ಪಾಲ್ಗೊಳ್ಳುವಂತೆ ಮಾಡಿದ್ದಾರೆ. ನಮ್ಮ ಸಮಾಜದಲ್ಲಿಯೇ ಇರತಕ್ಕಂಥ ಒಳಬೇಧಗಳ ಬಗೆಗೆ ನೊಂದಿದ್ದಾರೆ. ಅವುಗಳನ್ನು ಸರಿದಾರಿಗೆ ತರುವ ಸಾಹಸ ಮಾಡಿದ್ದಾರೆ. ಉಪ್ಪಾರ ಸಂಘಟನೆ ಎಂದರೆ ಕೇವಲ ತಲೆಗಳ ಎಣಿಕೆ ಅಲ್ಲ. ಸಂಘಟನೆಯು ಸಾಂಸ್ಕೃತಿಕವಾಗಿ ಶ್ರೀಮಂತವಾಗಬೇಕೆಂಬ ಮಹಾನ್ ಕಳಕಳಿಯನ್ನು ಹೊಂದಿರುವರು. ಸ್ನೇಹಪರತೆ, ಕುಶಲತೆ ಹಾಗು ಕ್ರಿಯಾಶೀಲತೆಗಳನ್ನು ಮೈಗೂಡಿಸಿಕೊಂಡಿರುವ ರಾಮಪ್ಪನವರು, ಆಕಾರವಿಲ್ಲದ ದೇವರನ್ನು ಅಚಲವಾದ ಮನಸ್ಸಿನಿಂದ ಪೂಜಿಸುವಂತೆ ಹಗಲಿರುಳು ಸಂಘಟನೆಯ ಕಾರ್ಯದಲ್ಲಿ ದುಡಿಯುತ್ತಿದ್ದಾರೆ.

ಸರಳತೆ, ಸಹಜತೆ, ಮುಗ್ಧತೆ, ಸ್ವಚ್ಛತೆ, ಸ್ಪಷ್ಟತೆ, ಆತ್ಮೀಯತೆ ಹಾಗು ಸಂಘಜೀವನವನ್ನು ಬಯಸುವ ಇವರು ತಮ್ಮ ಸದ್ಗುಣಗಳಿಂದ ಹಾಗು ಸತ್ಕಾರ್ಯಗಳಿಂದ ದೊಡ್ಡ ಸ್ಥಾನದಲ್ಲಿ ನಿಂತಿದ್ದಾರೆ. ಸಮಾಜವೆಂಬ ಸುಂದರವಾದ ಕನ್ನಡಿಯಲ್ಲಿ ಸತ್ಯಬಿಂಬವನ್ನು ಕಾಣುವ ಪ್ರಯತ್ನ ಇವರದು. ವ್ಯರ್ಥವಾಗಿ ಕಾಲಹರಣ ಮಾಡದ ಇವರು, 'ಈಸಬೇಕು, ಇದ್ದು ಜಯಿಸಬೇಕು' ಎಂಬ ಛಲದಿಂದ ಬದುಕುತ್ತಿರುವರು.

❋

# * ನನ್ನವರು

- ಸಣ್ಣಮ್ಮ ರಾಮಪ್ಪ
ದಾವಣಗೆರೆ

ಹಿರಿಯರಾದ ಹೆಚ್.ಸಿ. ನೀರಾವರಿ ಅವರು ಒಮ್ಮೆ ದಾವಣಗೆರೆಗೆ ಬಂದಾಗ "ನೋಡ್ರಮ್ಮ, ಹಿಂದೆ ಷಷ್ಠಬ್ದಿ ಅಂತ ಗಂಡ-ಹೆಂಡತಿಗೆ ಮಾಡುತ್ತಿದ್ದರು. ಈಗ ನಾವು ನಿಮ್ಮ ಯಜಮಾನರ ಎಪ್ಪತ್ತೈದನೆಯ ವರ್ಷಕ್ಕೆ ಇಂತಹ ಸಮಾರಂಭ ಮಾಡಬೇಕೆಂದುಕೊಂಡಿದ್ದೇವೆ. ಆ ಸಂದರ್ಭದಲ್ಲಿ ತರುವ ಗ್ರಂಥಕ್ಕೆ ನಿಮ್ಮ ನೆನಪು ಕುರಿತು ಏನಾದರೂ ಹೇಳಿ" ಎಂದರು. ನನಗೆ ಒಮ್ಮೆಲೇ ಗಾಬರಿಯಾಯಿತು. ದಿಕ್ಕೇ ತೋಚಲಿಲ್ಲ. ನಾವು ಮದುವೆಯಾಗಿ ಐವತ್ತು ವರ್ಷಗಳೇ ಆದವು. ಈ ನಡುವೆ ಅನುಭವಿಸಿದ ಸುಖ-ದುಃಖಗಳನ್ನು ಒಮ್ಮೆಲೆ ಹೇಳೋಕೆ ಸಾಧ್ಯವೇ?

1950ರಲ್ಲಿ ನಮ್ಮ ಮದುವೆಯಾಯಿತು. ನಮ್ಮೂರು ಶಿವಮೊಗ್ಗ ಜಿಲ್ಲೆ ಕುಂಸಿ. ತಂದೆ ಬಾಬು ಹುಚ್ಚಣ್ಣ, ತಾಯಿ ಎಲ್ಲಮ್ಮ. ನಮ್ಮ ತಂದೆಗೆ ನಾವು ಆರು ಹೆಣ್ಣುಮಕ್ಕಳು. ಇಬ್ಬರು ಗಂಡು ಮಕ್ಕಳು. ನಮ್ಮ ತಂದೆ ಸಣ್ಣ ರೈತರು. ಅದೇ ರೀತಿ ಸಣ್ಣ ಪ್ರಮಾಣದಲ್ಲಿ ವೀಳ್ಯದೆಲೆ ಮಾರುತ್ತಿದ್ದರು. ಇವರು ಮೊದಲ ವರ್ಷದ ಬಿ.ಇ. ಓದುತ್ತಿದ್ದಾಗಲೇ ನಮ್ಮ ಮದುವೆಯಾಯಿತು. ಇವರ ಸೋದರಿಕೆಯ ಅಣ್ಣಸವರಾದ ದುರ್ಗಿಗುಡಿ ತಿಮ್ಮಪ್ಪ ಇವರನ್ನು ನಮ್ಮ ಮನೆಗೆ ಕರೆದುಕೊಂಡು ಬಂದರು. ಮೊದಲು ನಮ್ಮ ಅಕ್ಕನ ಮಗಳನ್ನು ಇವರಿಗೆ ಕೊಡಬೇಕೆಂಬ ಮಾತುಕತೆ ನಡೆಯುತ್ತಿದ್ದಾಗ ಧರ್ಮ ಕರ್ಮ ಸಂಯೋಗದಿಂದ ನನ್ನ ಜೊತೆ ವಿವಾಹ ನಿಶ್ಚಯವಾಯಿತು. ಇವರಿಗೆ ಆಗ ಇಪ್ಪತ್ತೆರಡು ವರ್ಷ. ನನಗೆ ಹದಿನಾರು ವರ್ಷ.

ಬಾಲ್ಯದಲ್ಲಿ ಅಪ್ಪ-ಅಮ್ಮನ್ನ ಕಳೆದುಕೊಂಡ ಇವರು ಅಲ್ಲಲ್ಲಿ ಕೆಲಸ ಮಾಡುತ್ತಾ 'ವಾರಾನ್ನ' ಮಾಡ್ಕೊಂಡು ಓದುತ್ತಿದ್ದರು. ನಮ್ಮ ಮದುವೆಯಾದಮೇಲೆ ನಮ್ಮ ತಂದೆ ಇವರ ಓದಿಗೆ ಆಸರೆಯಾದರು. ಅದು ದೊಡ್ಡ ಪ್ರಮಾಣದಲ್ಲೇನೂ ಅಲ್ಲ. ಬೆಂಗಳೂರಿನ ರೂಂನಲ್ಲಿ ಅಡುಗೆ ಮಾಡಿಕೊಂಡು ಓದುತ್ತಿದ್ದರು. ಆ ರೂಮಿನಲ್ಲೂ ಬಿ.ಇ. ಓದುತ್ತಿದ್ದ ಇಬ್ಬರು, ಮೂರು ಜನ ಹುಡುಗರು ಇರುತ್ತಿದ್ದರು. ಇವರಿಗೆ ಡ್ರಾಯಿಂಗ್‌ಗೆ ಬೇಕಾದ ಸಲಕರಣೆಗಳನ್ನು ಕೊಳ್ಳಲು ಎಲ್ಲಿತ್ತು ಚೈತನ್ಯ ! ಆ ಸಹಪಾಠಿಗಳು ಮಲಗಿದ ಮೇಲೆ ಅವರ ಡ್ರಾಯಿಂಗ್ ಬೋರ್ಡ್ ಉಪಯೋಗಿಸಿಕೊಂಡು ಇವರು ತಮ್ಮ ಕೆಲಸ ಮಾಡಿಕೊಳ್ಳುತ್ತಿದ್ದರು. ಹೀಗೆ ಬಹಳ ಬವಣೆ ಪಟ್ಟು ವಿದ್ಯಾಭ್ಯಾಸ ಮುಗಿಸಿದರು.

1954ರಲ್ಲಿ ತೀರ್ಥಹಳ್ಳಿಯಲ್ಲಿ ಇವರ ಮೊದಲ ಕೆಲಸ. ನಮಗೆ ಅಲ್ಲಿ ಎರಡು ಮಕ್ಕಳು ಹುಟ್ಟಿದವು. ಒಟ್ಟು ನಮಗೆ ಏಳು ಮಕ್ಕಳು. ಈಗ ಎರಡು ಗಂಡು, ಎರಡು ಹೆಣ್ಣು ಮಕ್ಕಳುಗಳಿವೆ. ಉಳಿದವು ಬಹು ಹಿಂದೆಯೇ ದೇವರ ಪಾದ ಸೇರಿದ್ದವು. ಇವರು ತೀರ್ಥಹಳ್ಳಿ, ಎನ್.ಆರ್. ಪುರ, ಸಿದ್ದಾಪುರ, ವಿರಾಜಪೇಟೆ, ಮುಂಡಗೋಡು, ಕುಷ್ಟಗಿ, ಹೊಸಪೇಟೆ, ಹೂವಿನ ಹಡಗಲಿ, ಸಾಗರ ಮೊದಲಾದೆಡೆ ಕೆಲಸ ಮಾಡಿದ್ದಾರೆ. 'ಎಲ್ಲೂ ಯಾರೂ ಇವರ ಕಡೆ ಬೆರಳು ಮಾಡಿ ತೋರಿಸಿದವರಿಲ್ಲ'. ಸರ್ಕಾರಿ ಕೆಲಸ ಅಂದ್ರೆ ಮುಗಿದುಹೋಯ್ತು, ಅವರು ಅನ್ನ ಕೊಡೋ ದಣಿಗಳು ಅಂತ ಮೋಸ, ತಟವಟ ಮಾಡದೆ ದುಡಿಯುತ್ತಿದ್ದರು.

ಓದುತ್ತಿರಬೇಕಾದರೆ ಸ್ವಾತಂತ್ರ್ಯ ಹೋರಾಟದಲ್ಲೂ ಭಾಗವಹಿಸಿದ್ದರಂತೆ. ಹೀಗಾಗಿ ಸದಾ ಪ್ರಾಮಾಣಿಕತೆ, ಕರ್ತವ್ಯನಿಷ್ಠೆ ಅವರ ಜೀವನದ ಧ್ಯೇಯವಾಗಿತ್ತು. ಎಂದೂ ಇತರ ಇಂಜಿನಿಯರ್‌ಗಳಂತೆ ಕಂಟ್ರಾಕ್ಟ್‌ದಾರರಿಂದ ಅದು-ಇದು ಕೇಳಿದವರಲ್ಲ ಅಥವಾ ಅವರು ತಂದುಕೊಟ್ಟರೆ ತೆಗೆದುಕೊಂಡವರಲ್ಲ. ನಾವ್ಯಾರೂ ಸರ್ಕಾರಿ ಜೀಪು ಹತ್ತಿದ ನೆನಪು ನಮಗಿಲ್ಲ. ಅಂದ್ರೆ ಅವರ ಮನೋಭಾವ ತಿಳಿಯಬಹುದು.

ಮನೆಯಲ್ಲಿಯೂ ಕೂಡ ಅವರದು ಗಂಭೀರ ವ್ಯಕ್ತಿತ್ವ. ಎಂದೂ ಮಕ್ಕಳನ್ನು ಹೊಡೆದು ಬೈದವರಲ್ಲ. ಆದರೆ ಒಂದು ನೈತಿಕ ಭಯ ಎಲ್ಲರಲ್ಲೂ ಇತ್ತು. ಮನೆಯಲ್ಲಿ ಯಾರೂ ಇನ್ನೊಬ್ಬರ ಮೇಲೆ ಆರೋಪ ಮಾಡಬಾರದು. ವೃಥಾ ಸುಳ್ಳು ಹೇಳಬಾರದು. ಸಿನಿಮಾ-ನಾಟಕ ಮುಂತಾದವುಗಳಿಗೆ ಹೋದರೆ ಎಲ್ಲರೂ ಒಟ್ಟಾಗಿಯೇ ಹೋಗಬೇಕು. ಹೆಣ್ಣುಮಕ್ಕಳು ಮನೆಗೆ ಬಂದವರನ್ನು ಪ್ರೀತಿಯಿಂದ ಉಪಚರಿಸಬೇಕು. ಅದರಲ್ಲೂ ನಮ್ಮ ಸಮುದಾಯದ ಹಾಗೂ ಸೋದರ ಸಮುದಾಯದ ಬಾಂಧವರು ಬಂದಾಗ ಅವರನ್ನ ಅಕ್ಕರೆಯಿಂದ ಕಾಣಬೇಕು ಎಂಬುದು ಅವರ ಕಟ್ಟಾಜ್ಞೆಯಾಗಿತ್ತು. ಮನೆಯ ದಿನನಿತ್ಯದ ವ್ಯವಹಾರದ ಬಗ್ಗೆ ಅವರು ತಲೆಕೆಡಿಸಿ ಕೊಂಡವರಲ್ಲ. ಅದನ್ನೆಲ್ಲಾ ನಾನೇ ನಿಭಾಯಿಸುತ್ತಿದ್ದೆ. ಅವರದು ತುಂಬ ಸರಳ ಬದುಕು. ಇಂತಹದೇ ಊಟ ತಿಂಡಿ ಬೇಕೆಂಬ ಕಟ್ಟುಪಾಡುಗಳಿಲ್ಲ. ಹೆಣ್ಣುಮಕ್ಕಳೇ ಅವರ ಬಟ್ಟೆಬರೆಗಳನ್ನು

ನೋಡಿಕೊಳ್ಳುತ್ತಿದ್ದರು. ಮುದ್ದೆ, ಸೊಪ್ಪಿನ ಸಾರು ಇದ್ದರೆ ಅವರ ಊಟ ಮುಗಿದೇಹೋಗುತ್ತಿತ್ತು.

ಕೆಲಸಕ್ಕೆ ಸೇರಿದಾಗಿನಿಂದಲೂ ನಮ್ಮವರನ್ನ ಹುಡುಕಿಕೊಂಡು ಅಲೆಯುತ್ತಿದ್ದರು. ನಿವೃತ್ತಿಯಾದಮೇಲಂತೂ ಅವರು ಮನೆ ಸೇರುವುದೇ ಅಪರೂಪ. ಬೀದರ್‌ನಿಂದ ಕೋಲಾರದ ತನಕ ಎಲ್ಲ ತಾಲ್ಲೂಕುಗಳನ್ನು ಸುತ್ತಿದ್ದಾರೆ. ಪೂಜ್ಯ ಲೇಪಾಕ್ಷ ಸ್ವಾಮೀಜಿಗಳ ಹಾಗು ಹೆಚ್.ಸಿ. ನೀರಾವರಿ ಅವರ ಆಶಯದಂತೆ ಬೆಂಗಳೂರು-ದಾವಣಗೆರೆಗಳಲ್ಲಿ ನಮ್ಮ ಜನಾಂಗದ ಹಾಸ್ಟಲ್ ಪ್ರಾರಂಭಿಸಲು ಸಾಕಷ್ಟು ದುಡಿದಿದ್ದಾರೆ.

ಅವರಲ್ಲಿ 'ಸಣ್ಣತನ' ಎಂಬುದೇ ಇಲ್ಲ. ಯಾರಾದರೂ ವಿದ್ಯಾರ್ಥಿಗಳು ಬಂದು ಸಹಾಯ ಕೇಳಿದರೆ ಮುಗಿದುಹೋಯ್ತು. ಕೈಯಲ್ಲಿ ಏನು ಇದ್ದರೂ ಕೊಟ್ಟುಬಿಡುತ್ತಾರೆ. ಹಿಂದೆ ಮುಂದೆ ಯೋಚಿಸುವುದಿಲ್ಲ. ಒಮ್ಮೆ ಹೊಸಪೇಟೆಯಲ್ಲಿ ನಾವಿದ್ದಾಗ ಲಕ್ಷ್ಮಣ ದಂಡಿನ ಎಂಬ ಯುವಕ ಇವರ ಬಳಿ ಎಂ.ಬಿ.ಬಿ.ಎಸ್.ಗೆ ಸಹಾಯ ಕೇಳಿ ಬಂದರು. ಅವರಿಗೆ ಎಲ್ಲ ರೀತಿಯ ಸಹಾಯ ಮಾಡಿಸಿದರು. ನಮ್ಮ ಹೆಣ್ಣುಮಕ್ಕಳಲ್ಲಿ ಒಬ್ಬರನ್ನ ಇವರಿಗೆ ಕೊಡುತ್ತಾರೆಂದು ಕೊಂಡಿದ್ದೆ. ಆದರೆ ನಮ್ಮ ಸಂಬಂಧಿಕರಲ್ಲಿ ಒಬ್ಬರು ಆ ಹುಡುಗನ ಬಗ್ಗೆ ಆಸಕ್ತಿ ತೋರಿಸಿದಾಗ ತಾವೇ ನಿಂತು ಮದುವೆ ಮಾಡಿಸಿದರು. ಈಗ ಅವರು ಸಂತೋಷವಾಗಿಯೇ ಇದ್ದಾರೆ. ಇದರಿಂದ ನಮಗೇನೂ ತೊಂದರೆಯಾಗಿಲ್ಲ. ಇವರಿಗೆ ನೂರಾರು ಜನರ ಪರಿಚಯವಿದ್ದುದರಿಂದ ನಮಗೂ ಒಳ್ಳೆಯ ಅಳಿಯಂದಿರು ದೊರಕಿದರು. ಇಬ್ಬರೂ ಡಾಕ್ಟರೇ.

ಇವರಿಗೆ ಎಲ್ಲರಲ್ಲೂ ಒಂದೇ ಸಮನಾದ ಪ್ರೀತಿ. ಅವರು ಹೆಣ್ಮಕ್ಕಳಾಗಲಿ, ಗಂಡು ಮಕ್ಕಳಾಗಲಿ, ಸೊಸೆಯಂದಿರಾಗಲಿ ಅಥವಾ ಅಳಿಯಂದಿರಾಗಲಿ ಯಾರಲ್ಲೂ ಭೇದಭಾವವಿಲ್ಲ. ಹಾಗೆಯೇ ಮನೆಗೆ ಬರೋ ವಿದ್ಯಾರ್ಥಿಗಳ ಬಗ್ಗೆ ಕೂಡ ಈ ತರಹದ ಅಕ್ಕರೆಯೇ ಇವರದು.

ಅಂದು ಶ್ರೀ ನೀರಾವರಿಯವರು ಕೊನೆಯಲ್ಲಿ "ದಂಪತಿಗಳಾದ ನಿಮಗೆ ತೀರ್ಥಯಾತ್ರೆ ಮಾಡಬೇಕೆಂಬ ಬಯಕೆ ಇರಬೇಕಲ್ಲವೆ?" ಎಂದು ಪ್ರಶ್ನಿಸಿದರು. ಬೇರೆಯವರನ್ನ ನೋಡಿದಾಗ ಒಮ್ಮೆ ಈ ಆಸೆ ಮನಸ್ಸಿನಲ್ಲಿ ಮೂಡಬಹುದು. ಆದರೆ ಇವರ ಮನೋಭಾವ ಬೇರೆಯದು. ಇವರಿಗೆ ಕಾಶಿ, ಗಯ, ರಾಮೇಶ್ವರಕ್ಕೆ ಹೋಗಿ ಬಂದರೆ ಪುಣ್ಯ ಬರುತ್ತದೆ ಎಂಬ ನಂಬಿಕೆಯಿಲ್ಲ. 'ನಮ್ಮ ಪಾಲಿನ ಕೆಲಸವನ್ನ ನಾವು ಶ್ರದ್ಧೆಯಿಂದ ಮಾಡಬೇಕು. ಬಸವಣ್ಣ ಹೇಳೋ 'ಕಾಯಕವೇ ಕೈಲಾಸ' ಎಂಬುದು ಸುಳ್ಳಿನ ಮಾತಲ್ಲ. ಅಕ್ಷರಶಃ ನಿಜ. ನಮ್ಮ ಜೊತೆಯಲ್ಲಿರೋ ಕಷ್ಟ ಸುಖಕ್ಕೆ ಎಲ್ಲಿಗೆ ಹೋದರೆ ತಾನೆ ಏನು ಪ್ರಯೋಜನ?' ಅಂತಾರೆ ಇವರು.

ಅವರು ತೋರಿದ ದಾರಿಯಲ್ಲಿ ನಡೆಯೋ ಕೆಲಸವಷ್ಟೇ ನನಗೆ ಗೊತ್ತಿರೋದು. ಅದರಲ್ಲಿ ಯಾರ ಬಲವಂತವೂ ಇಲ್ಲ. ಅದೊಂದು ಆತ್ಮತೃಪ್ತಿಯ ಕೆಲಸ. ಪರಸ್ಪರ ಅರಿತು ನಡೆಯುವ ರಾಜಮಾರ್ಗ. ಅದೇ ನಮ್ಮ ದಾಂಪತ್ಯ ಜೀವನದ ಗುಟ್ಟೂ ಹೌದು.

*

## * ನಮ್ಮ ಅಪ್ಪಾಜಿ

- ಕೆ. ವಿಜಯಲಕ್ಷ್ಮಿ
ನಂಜನಗೂಡು

'ತಂಪು ಹೊತ್ತಿನಲ್ಲಿ ನೆನೆಯಬೇಕು', 'ತವರು ಮನೆ ಹೆಣ್ಣಿಗೆ ಕೊನೆಯ ತನಕ ಇರುವ ಆಸರೆ' ಎಂಬ ಮಾತುಗಳು ನನ್ನ ಬದುಕಿನಲ್ಲಿ ಅಕ್ಷರಶಃ ಸತ್ಯವೆನಿಸಿದೆ. ನಮ್ಮ ತಂದೆ ಡಿ.ಎಸ್. ರಾಮಪ್ಪ, ತಾಯಿ ಸಣ್ಣಮ್ಮ. ಇವರ ಮೊದಲ ಪುತ್ರಿ ನಾನು. ನನ್ನ ತಂದೆ ಕೇವಲ ನನಗೆ ಮಾತ್ರ ಹಿರಿಯರಲ್ಲ. ನಮ್ಮ ಸಮಾಜಕ್ಕೆ ಹಿರಿಯರು. ಅಂದರೆ ವಯಸ್ಸಿನಲ್ಲಿ ಅವರದು ಹಿರಿತನವಲ್ಲ. ಅವರು ಈ ಸಮಾಜಕ್ಕೆ ಸಲ್ಲಿಸಿದ ಸೇವೆಯಿಂದಾಗಿ ಅವರಿಗೆ ಹಿರಿತನದ ಸ್ಥಾನ ದೊರಕಿದೆ. ಅದಕ್ಕಾಗಿ ನಮ್ಮ ಸಮಾಜ ಅವರನ್ನು ಸದಾ ತಂಪು ಹೊತ್ತಿನಲ್ಲಿ ನೆನೆಯಬೇಕು.

ನಮ್ಮ ತಂದೆ ಚಿಕ್ಕಂದಿನಿಂದಲೂ ತುಂಬ ಕಷ್ಟಪಟ್ಟಿರುವವರು. ಅವರಿಗೆ ಒಬ್ಬ ತಮ್ಮ ಮಾತ್ರ ಇದ್ದ. ಬಾಲ್ಯದಲ್ಲೇ ತಂದೆ ತಾಯಿಗಳಿಬ್ಬರನ್ನೂ ಕಳೆದುಕೊಂಡ ನಮ್ಮ ತಂದೆ ಪಟ್ಟ ಕಷ್ಟ ವರ್ಣಿಸಲು ಸಾಧ್ಯವಿಲ್ಲ. ಊಹಿಸಲೂ ಆಗುವುದಿಲ್ಲ. ಅರ್ಥಾತ್ ಬೀದೀಲಿ ಬಿದ್ದವರು ಅಂತಾರಲ್ಲ, ಹಾಗಿತ್ತು ನಮ್ಮ ತಂದೆ ಹಾಗೂ ಅವರ ತಮ್ಮನ ಸ್ಥಿತಿ. ಆದರೆ ನಮ್ಮ ತಂದೆಯಲ್ಲಿ ಅಸಾಧಾರಣವಾದ ಛಲ ಇತ್ತು. ಏನಾದ್ರೂ ಮಾಡಿ ಮುಂದೆ ಬರಲೇಬೇಕೆಂಬ ದೃಢ ಸಂಕಲ್ಪ ಇತ್ತು. 'ವಾರಾನ್ನ' ಮಾಡಿಕೊಂಡು ವಿದ್ಯಾಭ್ಯಾಸಕ್ಕೆ ಮುಂದಾದರು. ಎಸ್.ಎಸ್.ಎಲ್.ಸಿ., ಪಿ.ಯು.ಸಿ., ಬಿ.ಇ. ಮೊದಲಾದ ಪರೀಕ್ಷೆಗಳಲ್ಲಿ ಅತ್ಯುತ್ತಮವಾಗಿ ತೇರ್ಗಡೆಯಾಗುತ್ತಾ ಬಂದರು. ಉಪ್ಪಾರ ಸಮುದಾಯದಲ್ಲಿ ಕಳೆದ ಅರವತ್ತು ವರ್ಷಗಳ ಹಿಂದೆ ಏನು ಜಾಗೃತಿ ಇತ್ತು! ಅಥವಾ ವಿದ್ಯೆಯ ಮಹತ್ವವಾದರೂ ಯಾರಿಗೆ ತಾನೆ ಗೊತ್ತಿತ್ತು. ಬ್ರಾಹ್ಮಣ ಸಮುದಾಯದಲ್ಲಿ ಬಡತನವಿದ್ದರೂ ಮೊದಲಿನಿಂದಲೂ ವಿದ್ಯೆಯ ಮಹತ್ವ ಅವರುಗಳಿಗೆ

ಚೆನ್ನಾಗಿ ಗೊತ್ತಿರುತ್ತಿತ್ತು. "ವಾರಾನ್ನ, ಬೀದಿ ದೀಪದ ಕೆಳಗೆ ವ್ಯಾಸಂಗ, ಇತರರನ್ನು ಆಶ್ರಯಿಸಿ ವ್ಯಾಸಂಗದ ಮುಂದುವರಿಕೆ"- ಇವೆಲ್ಲಾ ಆ ಸಮಾಜದಲ್ಲಿ ಸಾಮಾನ್ಯವಾದ ವಿಚಾರಗಳು. ಸರ್ ಎಂ. ವಿಶ್ವೇಶ್ವರಯ್ಯನಂತಹ ಮಹಾ ಮೇಧಾವಿಗಳೇ, ಬೀದಿ ದೀಪದ ಕೆಳಗೆ ವ್ಯಾಸಂಗ ಮಾಡಿದರೆಂಬುದು ಎಲ್ಲರಿಗೂ ತಿಳಿದ ವಿಚಾರ. ಆದರೆ ನಮ್ಮ ಸಮಾಜದಲ್ಲಿ ವಿದ್ಯೆಗೆ ಕೊನೆಯ ಸ್ಥಾನ. ಅಂತಹದರಲ್ಲಿ ನಮ್ಮ ತಂದೆ ಬಾಲ್ಯದಲ್ಲೇ ಛಲ ರೂಢಿಸಿಕೊಂಡು ವಿದ್ಯೆ ಕಲಿಯಲು ಮನಸ್ಸು ಮಾಡಿದ್ದು ನಮ್ಮ ಕುಟುಂಬದ-ಅದಕ್ಕಿಂತ ಹೆಚ್ಚಾಗಿ ನಮ್ಮ ಸಮುದಾಯದ ಪುಣ್ಯ.

ನಮ್ಮ ತಂದೆ ಬಾಲ್ಯದಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರೆಂಬುದು ಅನೇಕರಿಗೆ ಗೊತ್ತಿಲ್ಲ. ಆಗ ಪೊಲೀಸರಿಂದ ತಲೆಗೆ ಬಿದ್ದ ಏಟು ಮಧ್ಯ ವಯಸ್ಸಿನಲ್ಲಿ ಅವರಿಗೆ ಅದನ್ನು ನೆನೆಯುವಂತೆ ಮಾಡಿತು. ನಿಮ್ಹಾನ್ಸ್‌ನಲ್ಲಿ ಇದರ ಬಗ್ಗೆ ತಪಾಸಣೆ ಮಾಡಿಸಿದಾಗ ಅವರುಗಳು ನಮ್ಮ ತಂದೆಗೆ ಸ್ವಾತಂತ್ರ್ಯ ಹೋರಾಟದ ನೆನಪನ್ನು ಮೂಡಿಸಿದರು.

ನಮ್ಮ ತಾಯಿ ತಮ್ಮ ತಂದೆಯ ಸಂಬಂಧಿಕರೇ ಹೌದು. ನಮ್ಮಜ್ಜ ಅಂದರೆ ತಾಯಿಯ ತಂದೆ ನಮ್ಮಾಪ್ಪಾಜಿಯ ಓದಿಗೆ ತುಂಬ ನೆರವಾಗಿದ್ದರು. ಪ್ರಥಮ ಬಿ.ಇ. ಓದುವಾಗಲೇ ಅವರ ಮದುವೆ ನೆರವೇರಿತು. ಮದುವೆ ವಿದ್ಯೆಗೆ ಶತ್ರು ಎಂಬುದನ್ನು ನಮ್ಮ ತಂದೆ ಸುಳ್ಳಾಗಿಸಿ ವಿದ್ಯಾವಂತರಾದರು.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ, ಸಾಗರ, ಚಿಕ್ಕಮಗಳೂರು ಜಿಲ್ಲೆಯ ಎನ್.ಆರ್. ಪುರ, ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ, ಮುಂಡಗೋಡು, ಕುಮುಟಾ, ಕೊಡಗು ಜಿಲ್ಲೆಯ ವಿರಾಜಪೇಟೆ, ರಾಯಚೂರು ಜಿಲ್ಲೆಯ ಕುಷ್ಟಗಿ, ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಹಡಗಲಿ ಇತ್ಯಾದಿ ಕಡೆಗಳಲ್ಲಿ ನಮ್ಮ ತಂದೆ ಪಿ.ಡಬ್ಲ್ಯು.ಡಿ. ಇಂಜಿನಿಯರ್ ಆಗಿ ಕೆಲಸ ಮಾಡಿದ್ದಾರೆ. ನಿವೃತ್ತಿಯ ಸಂದರ್ಭದಲ್ಲಿ ಎಕ್ಸಿಕ್ಯೂಟಿವ್ ಇಂಜಿನಿಯರ್ ಆಗಿದ್ದರು. ಆ ಕಾಲದಲ್ಲಿ ಇಂಜಿನಿಯರ್ ಅಂದರೆ ಸಾಮಾನ್ಯದ ಹುದ್ದೆಯಲ್ಲ. ಲಕ್ಷಾಂತರ ರೂಪಾಯಿಗಳನ್ನು ಅಕ್ರಮವಾಗಿ ಸಂಪಾದನೆ ಮಾಡಲು ಅವಕಾಶವಿತ್ತು. ಆದರೆ ನಮ್ಮ ತಂದೆ ತುಂಬ ನಿಷ್ಠಾವಂತರು. ಬಡತನದಿಂದ ಬಂದ ಅವರಿಗೆ ಅತಿಯಾದ ಸ್ವಾಭಿಮಾನ. ಯಾರೂ ತಮ್ಮ ಕಡೆ ಬೆರಳು ಮಾಡಿ ತೋರಿಸಬಾರದೆಂಬ ಛಲ. ಮೊದಲಿನಿಂದಲೂ ತಾವು ಜನಿಸಿದ ಸಮಾಜದ ಋಣ ತೀರಿಸಬೇಕೆಂಬ ಕಾಳಜಿ. ಹೀಗಾಗಿ ಸಮಾಜಸೇವೆಗೆ ಅವರು ತಮ್ಮ ಬದುಕನ್ನು ಮೀಸಲಿಟ್ಟರು. ಪೂಜ್ಯರಾದ ಹೆಚ್.ಸಿ. ನೀರಾವರಿ ಮತ್ತು ನಮ್ಮ ಜನಾಂಗದ ಗುರುಗಳಾದ ಪೂಜ್ಯ ಲೇಪಾಕ್ಷ ಸ್ವಾಮಿಗಳ ಆಶಯದಂತೆ ಕರ್ನಾಟಕವನ್ನೆಲ್ಲಾ ಸುತ್ತಿದರು. ಅವರು ನೋಡದ ತಾಲ್ಲೂಕುಗಳಿಲ್ಲ. ಅವರ ಅನಿಸಿಕೆಗಳನ್ನು ಅಕ್ಷರಶಃ ಅನುಸರಿಸದಿದ್ದರೂ ಅದರಲ್ಲಿ ಶೇಕಡ 10%ರಷ್ಟನ್ನಾದರೂ ನಮ್ಮ ಸಮುದಾಯ ಅನುಸರಿಸಿದ್ದರೆ ಇಂದು ಬಾರಿ ಬದಲಾವಣೆಯಾಗುತ್ತಿತ್ತು.

ನಮ್ಮ ತಂದೆಯ ಸ್ವಭಾವವನ್ನು ಪರಿಚಯಿಸಲು ಎರಡು ಘಟನೆಗಳನ್ನು ನಿರೂಪಿಸಲು ಇಚ್ಛಿಸುತ್ತೇನೆ. ನನ್ನ ತಮ್ಮ ನಮ್ಮ ಮನೆಯಲ್ಲೇ ವಿರುದ್ಧವಾದ ನಡವಳಿಕೆಯುಳ್ಳವ. ಅವನ ಹೆಂಡತಿ ಅಂದರೆ ನನ್ನ ನಾದಿನಿ ತನ್ನ ಗಂಡನ ನಡವಳಿಕೆಗೆ ಬೇಸತ್ತು ಆತ್ಮಹತ್ಯೆ ಮಾಡಿಕೊಂಡಳು.

ಇಂತಹ ಅವಕಾಶವನ್ನೇ ಕಾಯುತ್ತಿದ್ದ ನಮ್ಮ ಸಮಾಜದ ಪಿಸುಣರು ನಮ್ಮ ತಂದೆ ಮೇಲೆ ಸೇಡು ತೀರಿಸಿಕೊಳ್ಳಲು ಸನ್ನದ್ಧರಾದರು. ಅವರುಗಳೇ ಮುಂದಾಗಿ ಪೊಲೀಸ್ ಠಾಣೆಗೆ ಹೋದರು. ಆದರೆ ನಮ್ಮ ತಂದೆಯ ವ್ಯಕ್ತಿತ್ವ ತಿಳಿದಿದ್ದ ನನ್ನ ನಾದಿನಿಯ ತಂದೆ-ತಾಯಿ-ಅಣ್ಣ-ತಮ್ಮಂದಿರು ನಮ್ಮ ಕುಟುಂಬದ ಬೆಂಗಾವಲಾಗಿ ನಿಂತರು. ಆ ದುಷ್ಟಕೂಟದ ಕಾರಸ್ಥಾನ ನಡೆಯದಂತೆ ಜೋಪಾನ ಮಾಡಿದರು. ನಮ್ಮ ತಂದೆಯ ತ್ಯಾಗ, ಸೇವಾಮನೋಭಾವ, ಪ್ರಾಮಾಣಿಕತೆ, ಸಹಜವಾದ ಅಕ್ಕರೆ ಗುಣಗಳೇ ನಮ್ಮನ್ನು ಈ ವಿಪತ್ತಿನಿಂದ ಪಾರಾಗುವಂತೆ ಮಾಡಿತು.

ಇತ್ತೀಚೆಗೆ ಅಂದರೆ ಮೂರು ವರ್ಷಗಳ ಹಿಂದೆ ನನ್ನ ಬಾಳಿನಲ್ಲಿ ಘೋರ ದುರಂತ ನಡೆದುಹೋಯಿತು. ನನ್ನವರೂ ಅಕಾಲಿಕ ಮರಣ ಹೊಂದಿದರು. ಒಂದು ಗಂಡು ಹಾಗು ಎರಡು ಹೆಣ್ಣು ಮಕ್ಕಳು ನನಗೆ. ನನ್ನವರು ತಾವು ಕಷ್ಟಪಟ್ಟು ದುಡಿದಿದ್ದ ಆಸ್ತಿಯನ್ನೆಲ್ಲಾ ದಿಕ್ಕಾಪಾಲಾಗಿ ಮಾಡಿದ್ದರು. ಊರಿಗೆ ಉಪಕಾರಿ ಎನಿಸಿಕೊಂಡ ಅವರು ನಮಗೆ ಯಾವುದನ್ನೂ ಹೇಳದೆ ಹೊರಟುಹೋದರು. ಮುಂದಿನ ಜೀವನವಿಡೀ ಘೋರ ಅಂಧಕಾರವೆನಿಸಿತ್ತು. ಕಷ್ಟದ ಸಮಯದಲ್ಲಿ ಯಾರು ತಾನೆ ನಮ್ಮ ಹತ್ತಿರ ನಿಲ್ಲುತ್ತಾರೆ. ಅದು ತಂದೆ ತಾಯಿ ಮಾತ್ರ ತಾನೆ ! ನಮ್ಮ ತಂದೆ ಹೋರಾಟಗಾರರು. ಇಂತಹ ಸಂದರ್ಭದಲ್ಲಿ ನನ್ನಂತೆ ಅಧೈರ್ಯರಾಗದೆ ಹೆಚ್ಚು ವ್ಯವಹಾರ ಕುಶಲಿಗಳಾದರು. ಒಂದೊಂದೇ ಸಮಸ್ಯೆಗಳನ್ನು ಪರಿಹರಿಸುತ್ತಾ ಬಂದು ನಮ್ಮ ಕುಟುಂಬವನ್ನು ತಹಬಂದಿಗೆ ತಂದಿರುತ್ತಾರೆ. ಅವರಿಲ್ಲದೆ ಹೋಗಿದ್ದರೆ ನಾವೆಲ್ಲಾ ಬೀದಿ ಪಾಲಾಗುತ್ತಿದ್ದೆವೆಂಬುದಂತೂ ನಿಶ್ಚಿತ.

ನಮ್ಮ ತಂದೆ ಚಿಕ್ಕಂದಿನಿಂದ ಹೇಳುತ್ತಿದ್ದ ವಿಚಾರ ನನ್ನ ಬದುಕಿನಲ್ಲೇ ಸತ್ಯವೆಂದು ಸಾಬೀತಾಗಿದೆ. ಅದನ್ನ ಹೇಳುವುದರ ಮೂಲಕ ನನ್ನ ತಂದೆಯ ಮನೋಭಾವ ಹಾಗು ನಮ್ಮ ಸಮಾಜದ ಆದ್ಯತೆಯನ್ನು ತೋರಿಸಬಹುದು.

ನಾನು ಚಿಕ್ಕವಳಿದ್ದಾಗ ಓದಿನ ಬಗ್ಗೆ ತುಂಬ ನಿರ್ಲಕ್ಷ್ಯ ತೋರಿಸುತ್ತಿದ್ದೆ. ಆಗೆಲ್ಲಾ ಅವರು ಓದಿಗೆ ಸ್ತ್ರೀ-ಪುರುಷರೆಂಬ ಬೇಧವಿಲ್ಲ. ಓದದೇ ಇದ್ದರೆ ಅವರು ಈ ಲೋಕದಲ್ಲೇ ಬಾಳಲಿಕ್ಕೆ ಸಾಧ್ಯವಿಲ್ಲ. ಅವರಿಗೆ ಆಗುವ ಶೋಷಣೆ ಒಂದಲ್ಲ, ಎರಡಲ್ಲ ಹಲವು ಎನ್ನುತ್ತಿದ್ದರು. ಆಗ ನಾನು ನಿಮಗೆ ಹಾಗೆ ಅನ್ನಿಸಿರಬಹುದು, ಅದು ಎಲ್ಲರಿಗೂ ಅಲ್ಲ ಎಂದು ಉಡಾಫೆ ಮಾತು ಹೇಳುತ್ತಿದ್ದೆ. ಆದರೆ ಈಗ ನಮ್ಮ ತಂದೆ ಮಾತು ಸಂಪೂರ್ಣ ಸತ್ಯ ಅನಿಸಿದೆ. ಹೆಚ್ಚು ಓದಿದ್ದರೆ ಒಳಿತು ಯಾವುದು ಕೆಡಕು ಯಾವುದು ಅಂತ ಗೊತ್ತಾಗುತ್ತಿತ್ತು. ಆಗ ನಮ್ಮನ್ನ ನಾವು ರಕ್ಷಿಸಿಕೊಳ್ಳಬಹುದಾಗಿತ್ತು. ಆದರೆ ಕಷ್ಟ ಸಮಯದಲ್ಲಿ ನನ್ನ ಅಪ್ಪಾಜಿ ಜೊತೆಯಲ್ಲಿದ್ದರಿಂದ ಆ ಕೊರತೆ ನನಗೆ ಗೋಚರವಾಗಲಿಲ್ಲ. ನಮ್ಮ ತಂದೆಯ ಮಾತು ಎಲ್ಲರಿಗೂ ಸ್ಫೂರ್ತಿ ನೀಡಲಿ ಎಂಬುದೇ ನನ್ನ ಈಗಿನ ಆಸೆ. ನಮ್ಮ ತಂದೆಯ ಎಲ್ಲ ಸಾಧನೆಯ ಹಿಂದೆ ನಮ್ಮ ತಾಯಿಯ ಪ್ರೋತ್ಸಾಹ ನೆನೆಯುವಂತಹದು. ನಮ್ಮ ಸಮಾಜದ ಕೆಲಸಕ್ಕೆ ನಮ್ಮ ತಂದೆಯನ್ನು ಬಿಟ್ಟುಕೊಟ್ಟವರೇ ನಮ್ಮ ತಾಯಿ. ಹೀಗಾಗಿ ಎರಡು ಕಣ್ಣುಗಳಂತೆ ನಮ್ಮ ತಂದೆತಾಯಿ ನನ್ನೊಡನೆ ಇದ್ದಾರೆ.

*

## * ಜೀವನಮೌಲ್ಯ ಬೋಧಿಸಿದವರು

- ಉಷಾದೇವಿ ಬಿ. ನಾಯಕ್
ಬೆಳಗಾವಿ

ನಮ್ಮ ಅಪ್ಪಾಜಿಯನ್ನ ನೆನೆದಾಗಲೆಲ್ಲ ಒಂದು ಘಟನೆ ನೆನಪಿಗೆ ಬರುತ್ತದ. ಚಿಕ್ಕಂದಿನಲ್ಲಿ ಅವರು ಮನದಲ್ಲಿ ಬಿತ್ತಿದ ವಿಚಾರಗಳು ಇಂದಿಗೂ ನಮ್ಮನ್ನು ಮುನ್ನಡೆಸುತ್ತಿವೆ. ನಾವು ಸಣ್ಣವರಾಗಿದ್ದಾಗ ನಮ್ಮ ಅಪ್ಪಾಜಿ ಹೇಳುತ್ತಿದ್ದ ವಿಚಾರವೆಂದರೆ, "ಯಾವುದಕ್ಕೂ ಸುಳ್ಳು ಹೇಳಬಾರದು. ಅಕ್ಕ, ಅಣ್ಣ, ತಮ್ಮ ಇವರ ಜೊತೆ ಹೊಂದಿಕೊಂಡು ಹೋಗಬೇಕು. ಕೆಟ್ಟ ಶಬ್ದ ಮಾತನಾಡಬಾರದು" ಇತ್ಯಾದಿ.

ಒಮ್ಮೆ ಒಂದು ಸಣ್ಣ ವಿಚಾರಕ್ಕೆ ನಾನು-ನಮ್ಮಕ್ಕ ಮಾತು ಬಿಟ್ಟೆವು. ಆ ಸಂಜೆ ಡ್ಯೂಟಿ ಮುಗಿಸಿಕೊಂಡು ಬಂದ ನಮ್ಮ ಅಪ್ಪಾಜಿಗೆ ಈ ವಿಷಯ ಗೊತ್ತಾಯಿತು. ಅವರು ನಮ್ಮಿಬ್ಬರನ್ನು ಬೈಯಲಿಲ್ಲ, ಹೊಡೆಯಲಿಲ್ಲ. ಮನೆಯಿಂದ ಹೊರಗೆ ನಿಲ್ಲಿಸಿ 'ಒಂದೇ ರಕ್ತ ಹಂಚಿಕೊಂಡು ಹುಟ್ಟಿ ಬೆಳೆಯುತ್ತಿರುವ ನೀವೇ ಜಗಳವಾಡಿಕೊಂಡು ಮಾತು ಬಿಟ್ಟರೆ ಹೇಗೆ? ಕೊಟ್ಟ ಮನೆಯಲ್ಲಿ ನೀವು ಹೇಗೆ ಬಾಳುತ್ತೀರಿ? ಅಲ್ಲಿನವರ ಜೊತೆ ಹೊಂದುಕೊಳ್ಳುವುದಾದರೂ ಹೇಗೆ? ಇನ್ಮುಂದೆ ಯಾವ ಕಾರಣಕ್ಕೂ ನೀವು ಜಗಳ ಕಾಯೋಲ್ಲ ಅಂತ ಪ್ರತಿಜ್ಞೆ ಮಾಡಿ ಒಳಗೆ ಬನ್ನಿ. ಇಲ್ಲದಿದ್ದರೆ ನನಗೆ ಹೆಣ್ಣುಮಕ್ಕಳೇ ಬೇಡ" ಎಂದರು. ಆಗ ಹೇಗೋ ತಪ್ಪೊಪ್ಪಿಕೊಂಡು ಮನೆ ಒಳಗೆ ಬಂದೆವು. ಆದರೆ ಆಗ ನಮ್ಮ ತಂದೆ ಹೇಳಿದ ಮಾತು ನಮ್ಮಿಬ್ಬರ ಮನಸದ ಆಳಕ್ಕೆ ಇಳಿಯಿತು.

ಮುಂದೆ ನಾವೆಂದೂ ಪರಸ್ಪರ ಜಗಳ ಮಾಡಲಿಲ್ಲ. ನಮ್ಮ ತಂದೆ ಕಠೋರವಾದರೂ ಸಹಬಾಳ್ವೆಯ ಪಾಠವನ್ನ ನಮ್ಮಗಳಿಗೆ ಚೆನ್ನಾಗಿ ಬೋಧಿಸಿದರು. ಇಂದಿಗೂ ಅವರು ನನ್ನ ಮದುವೆ

ಸಂದರ್ಭದಲ್ಲಿ ಆಡಿದ ಮಾತುಗಳು ನನ್ನ ಕಿವಿಯಲ್ಲಿ ಗುಂಯ್ಯುಗುಟ್ಟುತ್ತಿರುತ್ತವೆ. "ನೋಡು ಉಷಾಮ್ಮ, ನೀನು ಹೋಗುತ್ತಿರುವುದು ತುಂಬಿದ ಮನೆಗೆ, ಅಲ್ಲಿರುವ ಹಿರಿಯರೆಲ್ಲಾ ನಿನಗೆ ಅಕ್ಕಂದಿರು-ಅಣ್ಣಂದಿರು. ಕಿರಿಯರೆಲ್ಲಾ ತಂಗಿ-ತಮ್ಮಂದಿರು..." ಎಂದಿದ್ದ ಮಾತುಗಳು ಅವರ ವ್ಯಕ್ತಿತ್ವವನ್ನು ಮತ್ತಷ್ಟು ಸ್ಫುಟಗೊಳಿಸುತ್ತವೆ.

ಇಂದು ನಮ್ಮ ಸಮಾಜದಲ್ಲಿರುವ ಅನೇಕ ಸಮಸ್ಯೆಗಳಿಗೆ 'ಸಹಬಾಳ್ವೆ'ಯ ಕೊರತೆ 'ಅಸಹನೆ'ಯ ಹೆಚ್ಚಳ ಕಾರಣವಾಗಿದೆ. ಎಷ್ಟೇ ಸಂಪತ್ತಿದ್ದರೂ ಅದನ್ನು ಅನುಭವಿಸದಿರುವುದಕ್ಕೆ ಕಾರಣ ನಮ್ಮಲ್ಲಿನ ಕೊನೆಗಾಣದ ಅತೃಪ್ತಿ. ನಮ್ಮ ತಂದೆಗೆ ಬಾಲ್ಯದಲ್ಲಿ ಅನುಭವಿಸಿದ ಬಡತನವೇ ಅವರಿಗೆ ದೊಡ್ಡ ಪಾಠ ಕಲಿಸಿದೆ. ಜೀವನದಲ್ಲಿ ಯಾವುದಕ್ಕೆ ಹೆಚ್ಚಿನ ಮಹತ್ವ ಕೊಡಬೇಕೆಂಬ ಅರಿವು ಅವರಿಗೆ ಯಾವಾಗಲೂ ಇತ್ತು. ಸ್ವತಃ ಕಷ್ಟಪಟ್ಟು ಮೇಲೆಬಂದ ಅವರು ಎಂದೂ ಏರಿದ ಏಣಿ ಒದ್ದವರಲ್ಲ. ಸದಾ ನಮಗಿಂತ ಕೆಳಹಂತದಲ್ಲಿದ್ದ ಜನರ ಬಗ್ಗೆ ಅವರ ಕಾಳಜಿ. ಸಿರಸಿ, ಸಾಗರ, ವಿರಾಜಪೇಟೆ, ಕುಷ್ಟಗಿ, ಹೂವಿನಹಡಗಲಿ ಮುಂತಾದ ಕಡೆ ಕೆಲಸ ಮಾಡುತ್ತಿದ್ದಾಗಲೆಲ್ಲಾ ನಮ್ಮ ಉಪ್ಪಾರ ಸಮುದಾಯದವರ ಮನೆಗಳನ್ನು ಹುಡುಕಿಕೊಂಡು ಹೋಗುತ್ತಿದ್ದರು. ಅವರ ಕಷ್ಟ ದುಃಖಗಳ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸುತ್ತಿದ್ದರು. ನಾನು ದೊಡ್ಡ ಅಸಿಸ್ಟೆಂಟ್ ಇಂಜಿನಿಯರ್ ಎಂಬ ಅಹಂ ಅವರಿಗೆ ಎಂದೂ ಇರಲಿಲ್ಲ. ಎಲ್ಲರೂ ನಮ್ಮವರು, ನನ್ನ ಒಡಹುಟ್ಟಿದವರು ಎಂಬ ವಿಶಾಲ ಭಾವನೆ ಅವರದು.

ಅವರು ನೌಕರಿಯಲ್ಲಿದ್ದಾಗ ಬಹಳ ಶಿಸ್ತಿನ ವ್ಯಕ್ತಿಯೆಂದು ಹೆಸರಾಗಿದ್ದರು. ಆಫೀಸ್ ಕೆಲಸ ಅಂದರೆ ಹಗಲು-ರಾತ್ರಿ ಎಂಬ ಬೇಧಭಾವ ಇರುತ್ತಿರಲಿಲ್ಲ. ಆಗ ಬೇಕಾದರೆ ಮನೆ ಕೂಡ ಮರೆತುಬಿಡುತ್ತಿದ್ದರು. ಮೂಲತಃ ಸಿವಿಲ್ ಇಂಜಿನಿಯರ್ ಆದ ಅವರು ಸೈಟ್ ಮೇಲೆ ಹೋದಾಗ 8-10 ಕಿ.ಮೀ. ನಡೆದುಕೊಂಡು ಹೋಗುತ್ತಿದ್ದರು. ಸಂಜೆ ಮನೆಗೆ ಬಂದಾಗ ಕೆಲಸದ ಆಯಾಸ ಅಂತ ನಮ್ಮ ಮೇಲೆ ಹರಿಹಾಯ್ದವರಲ್ಲ. ಸರ್ಕಾರಿ ಕೆಲಸವೆಂದರೆ ದೇವರ ಕೆಲಸ ಅಂತ ಭಾವಿಸಿಕೊಂಡ ವ್ಯಕ್ತಿ. ಆಗಲೂ ಕೂಡ ಅಸಿಸ್ಟೆಂಟ್ ಇಂಜಿನಿಯರ್ ಆದ ಅವರಿಗೆ 'ಜೀಪ್' ಕೊಡುತ್ತಿದ್ದರು. ನಮ್ಮ ತಂದೆ ಎಂದೂ ಜೀಪ್‌ನಲ್ಲಿ ನಮ್ಮನ್ನು ಕೂಡಿಸಿಕೊಂಡು ಓಡಾಡಿದವರಲ್ಲ. ಜೀಪ್ ಸರ್ಕಾರಿ ಕೆಲಸಕ್ಕೆ ಮಾತ್ರ ಎಂಬುದು ಅವರ ಖಚಿತ ನಿಲುವು. ಅವರ ಕೈ ಕೆಳಗೆ 40-45 ಜನ ಕೆಲಸ ಮಾಡುತ್ತಿದ್ದರು. ಅವರನ್ನೆಲ್ಲಾ ನಮ್ಮ ತಂದೆ ಒಡಹುಟ್ಟಿದವರ ಹಾಗೆ ನೋಡಿಕೊಳ್ಳುತ್ತಿದ್ದರು. ಈಗ ಅವರಲ್ಲಿ ಯಾರಾದರೂ ಒಬ್ಬರು ಆಗಾಗ್ಗ ಭೇಟಿಯಾಗುತ್ತಾರೆ. 'ನಿಮ್ಮ ತಂದೆ, ಧರ್ಮಾತ್ಮ', ಎನ್ನುತ್ತಾರೆ. ಆಗೆಲ್ಲಾ ನನಗೆ ನಮ್ಮ ಅಪ್ಪಾಜಿಯ ಬಗ್ಗೆ ಹೆಮ್ಮೆ ಮೂಡುತ್ತದೆ.

ನಮ್ಮ ತಂದೆಗೆ ಕುಟುಂಬದ ಬಗ್ಗೆ ಇದ್ದ ಒಲವು ಅಸಾಧಾರಣವಾದುದು. ಅವರು ನಮಗಾಗಿ ಮಾಡಿರುವ ತ್ಯಾಗ ನೂರಾರು. ನಾಲ್ಕು ಜನ ಮಕ್ಕಳೂ ಅವರನ್ನು ಕೃತಜ್ಞತೆಯಿಂದ

ಎಷ್ಟು ನೆನೆದರೂ ಅಲ್ಪವೇ. ಅವರ ನಲವತ್ತನೆಯ ವಯಸ್ಸಿನಲ್ಲಿ ಮುಖದ ಎಡಪಾರ್ಶ್ವದಲ್ಲಿ ನೋವಾಗಿ ಅಪಾರ ಹಿಂಸೆಗೆ ಕಾರಣವಾಯಿತು. ಇಂತಹ ಕಾಯಿಲೆ ಹತ್ತು ಸಾವಿರ ಜನರಲ್ಲಿ ಒಬ್ಬರಿಗೆ ಬರುತ್ತದಂತೆ. ದಿನಕ್ಕೆ 20-25 ಬಾರಿ ನೋವು ಕಾಣಿಸಿಕೊಂಡು 'ಒಂದು ಐದು ನಿಮಿಷದಲ್ಲಿ ಜೀವ ಸಾಕಪ್ಪಾ' ಎನಿಸಿಬಿಡುತ್ತಿತ್ತು. ಊಟಕ್ಕೆ ಕುಳಿತಾಗ ಈ ನೋವು ಕಾಣಿಸಿಕೊಂಡು ಮಧ್ಯದಲ್ಲಿ ಕೈ ತೊಳೆದುಕೊಂಡು ಹೋಗಿಬಿಡುತ್ತಿದ್ದರು. ಅಂತಹ ನೋವಿನಲ್ಲೂ ಅವರು ತಮ್ಮ ಕೆಲಸ ಕಾರ್ಯಗಳನ್ನು ಬಿಟ್ಟವರಲ್ಲ. 'ಮದ್ರಾಸ್‌ನಲ್ಲಿ ಅಪರೇಷನ್ ಮಾಡಿಸಿಕೊಂಡರೆ ಇದು ಸರಿ ಹೋಗುತ್ತದೆ' ಎಂದು ವೈದ್ಯರೊಬ್ಬರು ಹೇಳಿದರು. ನಮ್ಮ ತಂದೆ ಆಪರೇಷನ್‌ಗೆ ಬೇಕಾದ ಸಲಕರಣೆಗಳನ್ನು ಹೊಂದಿಸಿಕೊಂಡು ಮದ್ರಾಸ್ ಕಡೆ ಹೊರಟರು. ರೈಲಿನಲ್ಲಿ ಇವರ ಆಪ್ತರೊಬ್ಬರು ಇವರನ್ನ ವಿಚಾರಿಸಿಕೊಂಡು 'ಹೀಗೆ ಆಪರೇಷನ್ ಮಾಡಿಸಿಕೊಂಡರೆ ಬ್ರೈನ್‌ಗೆ ತೊಂದರೆ ಆಗಬಹುದು' ಎಂದರಂತೆ.

ಆಗ ನಮ್ಮ ತಂದೆ "ಅಯ್ಯೋ ಇನ್ನು ಇಬ್ಬರು ಹೆಣ್ಣು ಮಕ್ಕಳು ಇದ್ದಾರೆ. ಗಂಡುಮಕ್ಕಳು ಇನ್ನು ಸೆಟಲ್ ಆಗಿಲ್ಲ. ನನಗೆ ಏನಾದ್ರೂ ಆದ್ರೆ ನಮ್ಮ ಸಂಸಾರದ ಗತಿಯೇನು" ಅಂದುಕೊಂಡು ಮನೆಗೆ ವಾಪಸ್ಸು ಬಂದರು. ಅನಂತರ ಎಷ್ಟೇ ನೋವಾದ್ರೂ ಯಾರ ಮುಂದೆಯೂ ಹೇಳಿಕೊಳ್ಳುತ್ತಿರಲಿಲ್ಲ. ತಾವೇ ಹಲ್ಲು ಕಚ್ಚಿ ಅನುಭವಿಸುತ್ತಿದ್ದರು. ನಮ್ಮದೆಲ್ಲಾ ಮದುವೆಯಾದ ಮೇಲೆ ಹತ್ತು ವರ್ಷದ ಹಿಂದೆ ಆಪರೇಷನ್ ಮಾಡಿಸಿಕೊಂಡು ಆ ನೋವಿನಿಂದ ಮುಕ್ತಿ ಪಡೆದರು. ನಮ್ಮ ಕುಟುಂಬದ ಸುಖಕ್ಕಾಗಿ ಮೂವತ್ತು ವರ್ಷಕ್ಕೂ ಮೇಲ್ಪಟ್ಟು ದೈಹಿಕ ಹಿಂಸೆ ಅನುಭವಿಸೋದು ಅಂದ್ರೆ ಸಾಮಾನ್ಯವೇ? ಅವರಿಗೆ ನಮ್ಮಗಳ ಮೇಲಿದ್ದ ಪ್ರೀತಿ ಎಂತಹದು. ನಾನಿಲ್ಲದಿದ್ದರೆ ಮಕ್ಕಳೆಲ್ಲಾ ಏನಾಗುತ್ತಾರೋ ಎಂಬ ಅವರ ಕಳವಳ ಸುಲಭವಾಗಿ ತಳ್ಳಿಹಾಕುವಂತಹದಲ್ಲ. ತಮ್ಮನ್ನು ನೋಯಿಸಿಕೊಂಡು ಅವರು ನಮ್ಮನ್ನು ಸಾಕಿ ಸಲಹಿದ್ದಾರೆ.

ನಮ್ಮ ತಂದೆಗೆ ಗಂಡುಮಕ್ಕಳು-ಹೆಣ್ಣುಮಕ್ಕಳು, ಅಳಿಯಂದಿರು, ಸೊಸೆಯಂದಿರು ಎಂಬ ಬೇಧ-ಭಾವವಿಲ್ಲ. ಎಲ್ಲರೂ ಅವರ ದೃಷ್ಟಿಯಲ್ಲಿ ಒಂದೇ. ಅದೇ ತರಹ ಅವರ ಬಳಿ ಸಹಾಯ ಬೇಡಿ ಬಂದವರನ್ನು ತುಂಬ ಪ್ರೀತಿಯಿಂದ ಮಾತನಾಡಿಸಿ ಕೈಯಲ್ಲಾದ ನೆರವು ಕೊಟ್ಟು ಕಳುಹಿಸಿದ್ದಾರೆ. ಯಾರಾದರೂ ಮನೆಗೆ ಬಂದಾಗ ನಮ್ಮ ತಂದೆ ಆಗ ಹೇಳುತ್ತಿರುತ್ತಾರೆ. 'ಯಾರೂ ನಮ್ಮ ಮನೆಗೆ ಊಟ-ತಿಂಡಿಗೆ ಬರುವುದಿಲ್ಲ. ಅವರು ಬಂದಿರುವುದು ನಮ್ಮ ಭಾಗ್ಯ'. ಎಷ್ಟೋ ವಿದ್ಯಾರ್ಥಿಗಳು ಅವರ ನೆರವಿನಿಂದ ವಿದ್ಯಾಭ್ಯಾಸ ಮುಗಿಸಿದ್ದಾರೆ.

ನಮ್ಮ ತಂದೆ ಎಂದೂ ಮನೆಗೆ ಸಾಮಾನು ವಗ್ಯೆರೆಗಳನ್ನು ತಂದವರಲ್ಲ. ಅವೆಲ್ಲಾ ನಮ್ಮ ತಾಯಿಯದೇ ಹೊಣೆಗಾರಿಕೆ. ನಮ್ಮ ತಂದೆ ಆಫೀಸ್ ಕೆಲಸ, ಉಳಿಕೆ ಸಮಯ, ಸಮಾಜದ ಋಣ ತೀರಿಸೋ ಕಾಯಕ. ನಮ್ಮ ತಾಯಿ ಸಣ್ಣಮ್ಮ. ನಮ್ಮ ತಂದೆ ಮನೋಭಾವಕ್ಕೆ ಅನುಗುಣವಾಗಿರುವವರು. ಎಂದೂ ಗಂಡನ ಮಾತಿಗೆ ಎದುರು ಹೇಳಿದವರಲ್ಲ. ಅವರ

ದಾರಿಯಲ್ಲೇ ನಡೆದು ಶ್ರೇಯಸ್ಸು ಪಡೆದವರು. ಅವರಿಬ್ಬರ ಮನೋಭಾವ ಹೀಗಿರುವಾಗ ನಮಗೆ ಸಮಾಜದಲ್ಲಿ 'ರಾಮಪ್ಪನವರ ಮಕ್ಕಳು' ಎಂಬ ಮೆಚ್ಚುಗೆಯ ಮಾತು ದೊರಕಿದೆ.

ನಮ್ಮ ತಂದೆಯ ಬಾಲ್ಯವೇ ಅವರಿಗೆ ಜೀವನಮೌಲ್ಯಗಳನ್ನು ಕಲಿಸಿದೆ. ಹುಟ್ಟಿದ ಸಮಾಜದ ಋಣ ತೀರಿಸುವುದು. ಸಹಬಾಳ್ವೆ, ಪರೋಪಕಾರ, ವಿನಯ, ಕಷ್ಟ ಸಹಿಷ್ಣುತೆ, ಸದಾ ಬೇರೆಯವರಿಗೆ ಸಹಾಯ ಮಾಡುವ ಪ್ರವೃತ್ತಿ ಅವರಲ್ಲಿ ಬೆಳೆದುಬಂದ ಗುಣಗಳು. ಅವರೊಬ್ಬರು ಜೊತೆಯಲ್ಲಿದ್ದರೆ ನಮ್ಮ ಕುಟುಂಬಕ್ಕೆ ನೂರಾನೆ ಬಲವಿದ್ದಂತೆ! ಇಂತಹ ತಂದೆ-ತಾಯಿಗಳನ್ನು ಪಡೆದ ನಾವುಗಳು ನಿಜಕ್ಕೂ ಧನ್ಯರು.

*

# * ನಮ್ಮ ಮಾವನವರು

- ಡಾ|| ಬಿ.ಬಿ. ನಾಯಕ್
ಬೆಳಗಾವಿ

ಶ್ರೀಮಾನ್ ಡಿ.ಎಸ್. ರಾಮಪ್ಪನವರು ನನ್ನ ಪರಮಪೂಜ್ಯ ಮಾವನವರು. ದೇವರಹಳ್ಳಿಯ ಸಿಕ್ಕುಡಿಯಪ್ಪನವರ ಮಗ ರಾಮಪ್ಪನವರು ಬಾಲ್ಯದಿಂದಲೂ ಬಡತನದಲ್ಲಿಯೇ ಬೆಳೆದು ಬಂದವರು. ವಾರಾನ್ನದ ಊಟ, ಸಹಪಾಠಿಗಳ ಸಲಕರಣೆಗಳ ಸಹಾಯದಿಂದಲೇ ಓದು ಬರಹ ಮುಂದುವರಿಸಿ ಬೆಂಗಳೂರಿನ ಸರ್ ಎಂ. ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜಿನಿಂದ ಬಿ.ಇ. ಪದವಿಯನ್ನು ಪಡೆದ ಪ್ರತಿಭಾಶಾಲಿಗಳು. ಶ್ರೀ ರಾಮಪ್ಪನವರು ಸರಕಾರದ ಇಂಜಿನಿಯರಿಂಗ್ ವಿಭಾಗದ ಸೇವೆಗೆ ಸೇರಿ ವಿವಿಧ ಹುದ್ದೆಗಳಲ್ಲಿದ್ದು ರಾಜ್ಯದ ವಿವಿಧ ನಗರ ಪಟ್ಟಣಗಳಲ್ಲಿ ಅಪೂರ್ವ ಸೇವೆ ಸಲ್ಲಿಸಿದ್ದಾರೆ. ಅತ್ಯಂತ ನಿಸ್ವಾರ್ಥ ಬುದ್ಧಿಯಿಂದ ಪ್ರಾಮಾಣಿಕ ಸೇವೆ ಸಲ್ಲಿಸಿದ ಕಣ್ಮಣಿ ನಮ್ಮ ಮಾವನವರು. ಲಂಚ ಭ್ರಷ್ಟಾಚಾರಗಳು ಎಂದೂ ಅವರ ಬಳಿ ಸುಳಿಯಲಿಲ್ಲ. ಅವುಗಳು ಅವರಿಗೆ ವೈರಿಗಳಿದ್ದಂತೆ. ಗೀತೋಕ್ತಿಯಂತೆ ನಿಷ್ಕಾಮ ಸೇವೆ ಸಲ್ಲಿಸಿದ ಕರ್ಮಯೋಗಿಗಳು, ಸಮಯಪ್ರಜ್ಞೆ, ಕರ್ತವ್ಯ ಪ್ರಜ್ಞೆಗಳನ್ನು ಮೈಗೂಡಿಸಿಕೊಂಡವರು. ಲೋಕೋಪಯೋಗಿ ಹಾಗು ಇತರೆ ಕೆಲಸ ಕಾರ್ಯಗಳ ಪರಿವೀಕ್ಷಣೆ ಹಾಗು ಪರಾಮರ್ಶೆಗಳಲ್ಲಿ ಪಾರದರ್ಶಕತೆಯನ್ನು ಸದಾ ಕಾಲಕ್ಕೂ ಪರಿಪಾಲಿಸಿಕೊಂಡು ಬಂದವರು.

ತಮ್ಮ ವೃತ್ತಿಜೀವನದ ಕಾಲದಿಂದ ಇಂದಿನ ನಿವೃತ್ತ ಜೀವನದ ಪರ್ಯಂತವೂ ತಮ್ಮ ಸಮಾಜ ಬಾಂಧವರ ಕ್ಷೇಮಾಭಿವೃದ್ಧಿಗಾಗಿ ಅಹರ್ನಿಶಿ ದುಡಿದವರು ಶ್ರೀಯುತರು. ನಮ್ಮ

ಉಪ್ಪಾರ ಜನಾಂಗ, ಸಾಮಾಜಿಕವಾಗಿ ತೀರ ಹಿಂದುಳಿದ ಜನಾಂಗ. ಅದರ ಶ್ರೇಯೋಭಿವೃದ್ಧಿಗಾಗಿ ಬಹಳಷ್ಟು ಶ್ರಮಿಸಿದ ಸಮಾಜಸೇವಕರು ಇವರಾಗಿದ್ದಾರೆ. ಉಪ್ಪಾರ ಸಮಾಜ ಸಂಘಟನೆ, ಸಮಾಜಕ್ಕೊಂದು ಗುರುಪೀಠ, ತನ್ಮೂಲಕ ಸಮಾಜದ ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೇರಣೆ, ಪ್ರೋತ್ಸಾಹ ಇತ್ಯಾದಿಗಳ ಹಿನ್ನೆಲೆಯಲ್ಲಿ 'ಎಲೆಮರೆಯ ಕಾಯಿಯಂತೆ' ಕಾರ್ಯನಿರ್ವಹಿಸಿದವರು ಮಾವ ರಾಮಪ್ಪನವರು. ದಾವಣಗೆರೆಯಲ್ಲಿ ಉಪ್ಪಾರ ಜನಾಂಗದ ಬಡವಿದ್ಯಾರ್ಥಿಗಳ ಶೈಕ್ಷಣಿಕ ಅನುಕೂಲತೆಗಾಗಿ ಪ್ರಸಾದ ನಿಲಯ ಹಾಗು ವಸತಿಗೃಹಗಳನ್ನು ಪ್ರಾರಂಭಿಸಿದ್ದಾರೆ. ರಾಜ್ಯದ ಎಲ್ಲ ಭಾಗಗಳಲ್ಲಿ ಸಂಚರಿಸಿ ಸಮಾಜ ಬಾಂಧವರು ಹಾಗು ಇತರ ಜನರಿಂದ ಚಂದಾ ಕೂಡಿಸಿ ಪ್ರಸಾದ ನಿಲಯವನ್ನು ಅತಿ ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗುವುದರಲ್ಲಿ ಇವರದು ಮಹತ್ವದ ಪಾತ್ರವಿದೆ. ಇದೇ ರೀತಿ ಬೆಂಗಳೂರಿನಲ್ಲಿಯೂ ಸಮಾಜ ಬಾಂಧವರ ವಸತಿಗಾಗಿ 'ಉಪ್ಪಾರ ಸಮಾಜದ ವಸತಿಗೃಹ' ಪ್ರಾರಂಭಿಸಿದ್ದಾರೆ. ಬೆಂಗಳೂರಿಗೆ ಹೋಗಿಬರುವ ನಮ್ಮ ಸಮಾಜ ಬಾಂಧವರಿಗೆ ಈ ಸಂಸ್ಥೆ ಕಾಮಧೇನುವಿದ್ದಂತೆ. ರಾಜಕೀಯ ಕ್ಷೇತ್ರದಿಂದ ಇವರು ಬಹು ದೂರ; ಆದಾಗ್ಯೂ ರಾಜ್ಯದ ಮಾಜಿ ಮುಖ್ಯಮಂತ್ರಿಗಳಾಗಿದ್ದ ಶ್ರೀಮಾನ್ ರಾಮಕೃಷ್ಣ ಹೆಗಡೆ ಹಾಗು ಶ್ರೀಮಾನ್ ವೀರಪ್ಪ ಮೊಯಿಲಿಯವರಿಗೆ ಚಿರಪರಿಚಿತರು.

ಸಮಾಜದ ಏಳ್ಗೆಯೇ ತನ್ನ ಜೀವನದ ಗುರಿಯೆಂದು ಸದಾ ಚಿಂತಿಸುತ್ತಿರುವ ಹಾಗು ಕಾರ್ಯ ನಿರ್ವಹಿಸುತ್ತಿರುವ ಪೂಜ್ಯ ಮಾವನವರಾದ ಶ್ರೀ ರಾಮಪ್ಪನವರಿಗೆ ದೇವರು ಹೆಚ್ಚಿನ ಆಯುರಾರೋಗ್ಯ ಭಾಗ್ಯ ದಯಪಾಲಿಸಲೆಂದು ಬೇಡಿಕೊಳ್ಳುತ್ತೇನೆ.

*

## ❋ ಹೃದಯ ಶ್ರೀಮಂತರು

- ಎ.ಬಿ. ನಾಯಕ್
ಧಾರವಾಡ

ಶ್ರೀಯುತ ಡಿ.ಎಸ್. ರಾಮಪ್ಪನವರನ್ನು ನಾನು ಚಿಕ್ಕಂದಿನಿಂದಲೂ ಬಲ್ಲೆ. 1968ರಲ್ಲಿ ಪ್ರಥಮ ಬಾರಿಗೆ ಧಾರವಾಡದ ನಮ್ಮ ನಿವಾಸಕ್ಕೆ ಬಂದು ಸ್ವತಃ ಅವರೇ ಪರಿಚಯಿಸಿಕೊಂಡದ್ದು ನೆನಪು. ನಾನಿನ್ನೂ ಆಗ ಬಿ.ಎ. ಎರಡನೇ ತರಗತಿಯಲ್ಲಿ ಓದುತ್ತಿದ್ದೆ. ನನ್ನ ಸೋದರ ಮಾವನವರಾದ ದಿ|| ಎನ್.ಎಂ. ತೋರಗಲ್‌ರವರ ಹಿರಿಯ ಮಗಳ ಮದುವೆಗೆಂದು ಬಂದಾಗ ನಮ್ಮೆಲ್ಲರ ಪರಿಚಯವಾಯಿತು. ಲೋಕೋಪಯೋಗಿ ಇಲಾಖೆಯಲ್ಲಿ ಉನ್ನತ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದರೂ ಯಾವುದೇ ಅಂತಸ್ತುಗಳನ್ನು ಲೆಕ್ಕಿಸದೆ ಸಮಾಜ ಬಾಂಧವರನ್ನು ಕಾಣಬೇಕು, ಪರಿಚಯ ಮಾಡಿಕೊಂಡು ಸಮಾಜದ ಒಗ್ಗಟ್ಟಿಗೆ ಶ್ರಮಿಸಬೇಕು ಎಂಬುದೇ ಅವರ ಉಕ್ತಿಯಾಗಿತ್ತು. ಕರ್ನಾಟಕದ ಉಪ್ಪಾರ ಸಮಾಜ ಬಾಂಧವರನ್ನು ಅಧ್ಯಯನ ಮಾಡಲೆಂದು ಹಂಬಲಿಸಿದವರಲ್ಲಿ ಹಳೇ ಮೈಸೂರಿನವರಾಗಿದ್ದ ಶ್ರೀ ಡಿ.ಎಸ್. ರಾಮಪ್ಪನವರೇ ಪ್ರಥಮರು. ಗಂಭೀರ ವ್ಯಕ್ತಿತ್ವ, ಸದಾ ಹಸನ್ಮುಖಿ, ಮೇಲು-ಕೀಳೆನ್ನದೆ ಎಲ್ಲರನ್ನೂ ಕಂಡು ಮಾತನಾಡಿಸ ಬೇಕೆಂಬ ಹೆಬ್ಬಯಕೆ ಅವರ ಅಂತಃರಾಳದಲ್ಲಿ ಸದಾ ಗೋಚರಿಸು ವಂತಿತ್ತು. ನಮ್ಮ ತಂದೆಯವರು ವೃತ್ತಿಯಿಂದ ವೈದ್ಯರು. ಸ್ವಲ್ಪ ಮಟ್ಟಿಗೆ ಅನುಕೂಲಸ್ಥರು. ಸುಸಂಸ್ಕೃತ ಮನೆತನದವರು ಎಂದು ಬಹುಶಃ ಅವರು ಭಾವಿಸಿರಬೇಕು. ಹೀಗೆ ಅವರ ಭೇಟಿಯು ರಜಾ ದಿನಗಳಲ್ಲಿ ನಿಯಮಿತವಾಗಿ ಆಗುತ್ತಿತ್ತು.

ತಮ್ಮ ಎಡೆಬಿಡದ ವೃತ್ತಿಜೀವನದಲ್ಲಿ ಭಾನುವಾರ ಹಾಗು ರಜಾದಿನಗಳಲ್ಲಿ ಬಿಡುವು ಮಾಡಿಕೊಂಡು ಧಾರವಾಡಕ್ಕೆ

ಬಂದಾಗಲೆಲ್ಲ ಸಮಾಜ ಬಾಂಧವರನ್ನು ಕಾಣುವುದು ವಾಡಿಕೆಯಾಗಿತ್ತು. ಆಗ ದಿ|| ಲಕ್ಷ್ಮಣರಾವ್ ಸಾಂಗ್ಲೀಕರ್ ಅವರ ಧುರೀಣತ್ವದಲ್ಲಿ ಉಪ್ಪಾರ ಸಮಾಜದ ಸಂಘವಿತ್ತು. ಆ ಸಂಘದ ಅನೇಕ ಕಾರ್ಯಕ್ರಮಗಳಲ್ಲಿ ಸಮಾಜದ ಸಂಘಟನೆಗಾಗಿ ಸಮಾಜದ ಒಳಿತಿಗಾಗಿ ಯುವಕರಲ್ಲಿ ವಿದ್ಯಾಭ್ಯಾಸದ ಅರಿವು ಮೂಡಿಸುವಲ್ಲಿ ಸಮಾಜವನ್ನು ಮುನ್ನಡೆಸುವ ದಿಕ್ಕಿನಲ್ಲಿ ತಮ್ಮ ಚಿಂತನೆಗಳನ್ನು ಶ್ರೀ ಡಿ.ಎಸ್. ರಾಮಪ್ಪನವರು ಮಂಡಿಸಿದ್ದು ಜ್ಞಾಪಕವಿದೆ.

ಒಮ್ಮೆ ಜರುಗಿದ ದೃಷ್ಟಾಂತ ಧಾರವಾಡದ ಉಪ್ಪಾರರಲ್ಲಿ ಒಳಪಂಗಡಗಳ ಭೇದಭಾವ ಎದ್ದುಕಾಣುತ್ತಿತ್ತು. ಉತ್ತರ ಕರ್ನಾಟಕದವರಲ್ಲಿ ಮುಂದುವರಿದ ಸಮಾಜಗಳಾದ ಲಿಂಗಾಯಿತರು, ಬ್ರಾಹ್ಮಣರ ಪ್ರಭಾವ ಸಾಕಷ್ಟಿದೆ. ಹಾಗೆ ಉಪ್ಪಾರ ಸಮಾಜದವರಲ್ಲಿಯೂ ಲಿಂಗಾಯತ ಸಮಾಜಕ್ಕೆ ಹೊಂದಿಕೊಂಡಂತಹ ಸಮಾಜ ಬಾಂಧವರು ಲಿಂಗಧಾರಿಗಳೆಂದೂ, ಬ್ರಾಹ್ಮಣ ಸಮಾಜದ ಸಂಪ್ರದಾಯಗಳನ್ನು ಅನುಸರಿಸುತ್ತಿರುವವರು ತಮ್ಮನ್ನು ನಾಮಧಾರಿಗಳೆಂದೂ ಕರೆದುಕೊಳ್ಳುವುದುಂಟು. ಈ ಪದ್ಧತಿ ಎಷ್ಟೊಂದು ಪ್ರಾಬಲ್ಯವಿತ್ತೆಂದರೆ ನಾಮಧಾರಿ ಉಪ್ಪಾರರು ತಾವು ಶ್ರೇಷ್ಠ ಪಂಗಡದವರು, ಸುಸಂಸ್ಕೃತರು, ಆಚಾರ-ವಿಚಾರಗಳಲ್ಲಿ ಎಲ್ಲರಿಗಿಂತಲೂ ಮಿಗಿಲಾದವರೆಂದು ಭಾವಿಸಿ ಇತರರೊಡನೆ ಸಂಬಂಧ ಸಹ ಬೆಳೆಸುತ್ತಿರಲಿಲ್ಲ. ಈ ಪಂಗಡದವರ ನಡುವೆ ಇತರರ ಮದುವೆ ಸಮಾರಂಭಗಳೂ ಜರುಗುತ್ತಿರಲಿಲ್ಲ. ಇತ್ತೀಚೆಗೆ ಈ ಸಂಪ್ರದಾಯಕ್ಕೆ ಕಡಿವಾಣ ಬಿದ್ದಿದೆ. ಪ್ರಾಯಶಃ ಶಿಕ್ಷಣದ ಪ್ರಜ್ಞೆ ಇದಕ್ಕೆ ಕಡಿವಾಣ ಹಾಕಿರಬೇಕು. ಈ ಪದ್ಧತಿಯಿಂದ ಸಮಾಜದ ಒಗ್ಗಟ್ಟು ಸಾಧ್ಯವಿಲ್ಲವೆಂದು ಅರಿತ ಶ್ರೀಯುತ ಡಿ.ಎಸ್. ರಾಮಪ್ಪನವರು ಸಂಘದ ಸಭೆಯಲ್ಲಿ ಸಂಘಟನೆ ಪ್ರತಿಪಾದಿಸುತ್ತ ಬಂದವರಲ್ಲಿ ಪ್ರಮುಖರು. ಬೆಳಗಾವಿ-ಧಾರವಾಡ ಜಿಲ್ಲೆಗಳಲ್ಲಿ ವ್ಯಾಪಕ ಪ್ರವಾಸ ಕಾರ್ಯಕ್ರಮ ಹಮ್ಮಿಕೊಂಡು ಪ್ರತಿಯೊಬ್ಬ ಸಮಾಜ ಬಾಂಧವರ ಮನೆಗಳಿಗೆ ಭೇಟಿ ನೀಡಿ ಸಮಾಜದ ಒಗ್ಗಟ್ಟಿಗಾಗಿ ಶ್ರಮಿಸಿದವರು. ಯುವಕರಲ್ಲಿ ವಿದ್ಯಾಭ್ಯಾಸದ ಕೊರತೆ 1970 ರಲ್ಲಿ ಸಾಕಷ್ಟಿತ್ತು. ಪದವೀಧರರ ಸಂಖ್ಯೆಯಂತೂ ತೀರ ಕಡಿಮೆಯಾಗಿತ್ತು. ನೌಕರಸ್ಥ ಜನರೇ ಕಾಣಸಿಗುತ್ತಿರಲಿಲ್ಲ. ಈ ಸಂದರ್ಭಗಳಲ್ಲಿ ಶ್ರೀಯುತ ಡಿ.ಎಸ್. ರಾಮಪ್ಪನವರು ಪ್ರತಿ ಜಿಲ್ಲೆಗಳಲ್ಲಿ ವಿದ್ಯಾರ್ಥಿಗಳ ವಸತಿನಿಲಯಗಳು ಸ್ಥಾಪಿತವಾಗಬೇಕು. ಮುಂದುವರಿದ ಸಮಾಜದವರಂತೆ ಪ್ರತಿ ವಿದ್ಯಾರ್ಥಿನಿಲಯಗಳಿಗೆ ಒಬ್ಬ ಮಠಾಧೀಶರಿರಬೇಕು. ಮಠಗಳ ಮುಖಾಂತರ, ವಿದ್ಯಾರ್ಥಿಗಳ ಉಚಿತ ಊಟದ ವ್ಯವಸ್ಥೆ, ಶಿಕ್ಷಣ ಪ್ರಸಾರ, ಜ್ಞಾನ ಪ್ರಸಾರವಾಗಬೇಕೆಂಬ ಅವರ ನಿಲುವು ಸ್ಪಷ್ಟವಾಗಿತ್ತು. ಪ್ರತಿಭೆ ಯಾವುದೇ ಒಂದು ಜಿಲ್ಲೆಗೆ ಅಥವಾ ಪಂಗಡಕ್ಕೆ ಸೀಮಿತವಾಗಿಲ್ಲ. ಬಡವರಲ್ಲಿಯೂ ಪ್ರತಿಭಾವಂತರು ಸಾಕಷ್ಟಿರುತ್ತಾರೆ. ಅಂತಹವರನ್ನು ಗುರುತಿಸಿ ಮೇಲಕ್ಕೆತ್ತಬೇಕೆಂಬುದೇ ಅವರ ಹೆಬ್ಬಯಕೆಯಾಗಿತ್ತು.

1970ರ ದಶಕದಲ್ಲಿ ಹಳೇ ಮೈಸೂರಿನವರು ಹೊಳೆಯಾಚಿನ ಬೆಳಗಾವಿ-ಧಾರವಾಡ ಜಿಲ್ಲೆಗಳ ಸಮಾಜ ಬಾಂಧವರೊಡನೆ ಸಂಬಂಧ ಬೆಳೆಸುವುದೂ ಕೂಡ ವಿರಳವಾಗಿತ್ತು. ಇದಕ್ಕೆ ಹಲವಾರು ಕಾರಣಗಳಿರಬಹುದು. ನಡೆ-ನುಡಿಗಳಲ್ಲಿ ವ್ಯತ್ಯಾಸವಿರಬಹುದು. ಊಟದಲ್ಲಿ

ವ್ಯತ್ಯಾಸವಿರಬಹುದು. ಉಡುಗೆ-ತೊಡುಗೆಯಲ್ಲಿ ವ್ಯತ್ಯಾಸವಿರಬಹುದು; ಹಬ್ಬ-ಹರಿದಿನಗಳನ್ನು ಆಚರಿಸುವಲ್ಲಿ ಕೊಂಚ ವ್ಯತ್ಯಾಸವಿರಬಹುದು. ದಕ್ಷಿಣ ಮೈಸೂರಿನವರು ಮೃದು ಸ್ವಭಾವದವರು, ಮಿತಭಾಷಿಗಳು, ಉತ್ತರ ಕರ್ನಾಟಕದವರು ನೇರ ನಡೆ ನುಡಿಗಳಿಗೆ ಹೆಸರಾಗಿದ್ದವರು. ಸ್ವಲ್ಪ ಒರಟು ಭಾಷೆ. ಇವರಿಬ್ಬರ ನಡುವೆ ರಕ್ತ ಸಂಬಂಧಗಳು ನಡೆಯುತ್ತಿದ್ದುದು ತೀರ ವಿರಳವಾಗಿತ್ತು. ಎಲ್ಲದಕ್ಕಿಂತ ಮಿಗಿಲಾಗಿ ಉದಾಸೀನತೆ, ದೂರದ ಪ್ರಯಾಣ ಇವರ ಸಬೂಬು. ಆದರೆ ಶ್ರೀ ಡಿ.ಎಸ್. ರಾಮಪ್ಪನವರು ಈ ಇಬ್ಬರಲ್ಲಿಯೂ ಸಂಬಂಧ ಬೆಳೆದರೆ ಮಾತ್ರ ಸಮಾಜದ ಒಗ್ಗಟ್ಟಿಗೆ ಬಲ ಬಂದಂತಾಗುವುದೆಂದು ಅಚಲ ನಂಬಿಕೆಯಿಟ್ಟವರಾಗಿದ್ದರು. ಸಮಾಜದ ಅಭಿವೃದ್ಧಿಗೆ ಒಳ ಪಂಗಡಗಳು, ದೂರದ ಪ್ರಯಾಣ ಅಡ್ಡಿಯಾಗಬಾರದೆಂದು ಪ್ರತಿಪಾದಿಸುತ್ತಿದ್ದರು. ಅವರ ವಿಚಾರಧಾರೆ ತುಂಬ ಉದಾರ. ಮೇಲುಪಂಕ್ತಿ, ಕೆಳಪಂಕ್ತಿ ಎಂಬುದರ ವಿರುದ್ಧ ಹೋರಾಡಿದವರು. ಸಮಾಜ ಬೆಳೆಯಬೇಕಾದರೆ, ಸಂಬಂಧಗಳು ಕರ್ನಾಟಕದುದ್ದಕ್ಕೂ ಬೆಳೆಯಬೇಕು ಎಂದು ಪ್ರತಿಪಾದಿಸಿದರು. ನುಡಿದಂತೆ ನಡೆದರು. ತಮ್ಮ ಮಗಳನ್ನು ಉತ್ತರ ಕರ್ನಾಟಕದ ಬೆಳಗಾವಿ ಜಿಲ್ಲೆಗೆ ಧಾರೆ ಎರೆದುಕೊಟ್ಟರಲ್ಲದೆ ತಮ್ಮ ಮಗನಿಗೆ ಉತ್ತರ ಕರ್ನಾಟಕದಿಂದಲೇ ವಧುವನ್ನು ಪಡೆದರು.

ಶ್ರೀ ಶ್ರೀ ಚಿನ್ಮೂಲಾದ್ರಿ ಶಿಲಾಪುರಿ ಸಂಸ್ಥಾನ ಮಠದ ಜಗದ್ಗುರುಗಳಾದ ಶ್ರೀ ಲೇಪಾಕ್ಷ ಸ್ವಾಮಿಗಳನ್ನು ಉತ್ತರ ಕರ್ನಾಟಕದ ಜನತೆಗೆ ಪರಿಚಯಿಸಿದವರಲ್ಲಿ ಅವರೂ ಒಬ್ಬರು. ಗೋಕಾಕ ತಾಲ್ಲೂಕಿನ ನಾಗನೂರ ಗ್ರಾಮದಲ್ಲಿ ಜರುಗಿದ ಜಗದ್ಗುರುಗಳ ಮೆರವಣಿಗೆ, ಸಮಾಜದ ಒಗ್ಗಟ್ಟಿಗೆ ನಾಂದಿಯಾಯಿತು. ಪ್ರತಿ ಜಿಲ್ಲೆಯಲ್ಲಿಯೂ ಶಾಖಾಮಠಗಳಿರಬೇಕು. ಶಾಖಾ ಮಠಗಳ ಮುಖಾಂತರ ಶಿಕ್ಷಣ ಪ್ರಸಾರವಾಗಬೇಕು ಎಂಬುದು ಅವರ ಅಭಿಲಾಷೆ. ಸದರಿಯವರ ಅಭಿಲಾಷೆಯಂತೆ ದಾವಣಗೆರೆಯಲ್ಲಿ ಉಪ್ಪಾರ ಸಮಾಜದ ವಸತಿನಿಲಯ ಸ್ಥಾಪನೆಗೊಂಡಿದ್ದು ಎಲ್ಲರಿಗೂ ತಿಳಿದ ವಿಷಯ. ಹೀಗೆ ಡಿ.ಎಸ್. ರಾಮಪ್ಪನವರು ನುಡಿದಂತೆ ನಡೆದವರು, ಕ್ರಿಯಾಶೀಲರು, ತಮ್ಮ ಆಡಳಿತಾವಧಿಯಲ್ಲಿ ದಕ್ಷತೆಗೆ ಹೆಸರಾದವರು, ಎಲ್ಲರನ್ನೂ ಸಮಾನತೆಯಿಂದ ಕಂಡವರು, ಎಲ್ಲರಿಗೂ ಪರಿಚಯಸ್ಥರು, ಎಲ್ಲರ ಹೆಗ್ಗಳಿಕೆಗೆ ಪಾತ್ರರಾದವರು.

ಮಾನ್ಯರು ಮುಂಡಗೋಡದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಅವರ ಮನೆಯಲ್ಲಿ ಒಂದೆರಡು ದಿನ ತಂಗಿದ್ದೆ. ಅವರ ಮನೆ ಮಂದಿರವಿದ್ದಂತೆ. ಶ್ರೀ ರಾಮಪ್ಪನವರಂತೆ ಪತ್ನಿ ಶ್ರೀಮತಿ ಸಣ್ಣಮ್ಮನವರು ಕೂಡ ಹೃದಯ ಶ್ರೀಮಂತರು. ಅತಿಥಿಗಳನ್ನು ಸತ್ಕರಿಸುವಲ್ಲಿ ಧೀಮಂತರು. ಇಂತಹ ಮಹನೀಯರ ಬದುಕು ಸಮಾಜಕ್ಕೆ ಊರುಗೋಲು ಇದ್ದಹಾಗೆ. ಇಂತಹ ಆದರ್ಶಪ್ರಾಯ ಜೀವನ ಅನುಕರಣೀಯ. ಯುವಪೀಳಿಗೆ ಇಂತಹವರನ್ನು ಅನುಕರಿಸಿ ಸಮಾಜವನ್ನು ಮುನ್ನಡೆಸಬೇಕಾಗಿದೆ. ಅಂತಹ ಯುವಶಕ್ತಿ ಮುಂದಾಳುಗಳು, ಧುರೀಣರು ಹೊರಹೊಮ್ಮಲೆಂದು ಆಶಿಸೋಣ.

*

## * ನಮ್ಮ ಭಾಗ್ಯ

- ಕೆ. ಕಾವ್ಯಶ್ರೀ ಕೃಷ್ಣಪ್ಪ
ನಂಜನಗೂಡು

ನನ್ನಂತಹ ಅತ್ಯಂತ ಕಿರಿಯಳನ್ನು ಕುರಿತು "ನೋಡಮ್ಮ ನಿಮ್ಮ ಅಜ್ಜನ ಬಗ್ಗೆ ಲೇಖನವೊಂದನ್ನು ಬರೆದು ಕಳುಹಿಸು" ಎಂದು ಪೂಜ್ಯ ನೀರಾವರಿ ಸಾಹೇಬ್ರು ಹೇಳಿದಾಗ ನನಗೆ ತುಂಬ ಆಶ್ಚರ್ಯ. ಶ್ರೀ ಹೆಚ್.ಸಿ. ನೀರಾವರಿ ಹಾಗು ನಮ್ಮಜ್ಜ ಡಿ.ಎಸ್. ರಾಮಪ್ಪನವರ ಸ್ನೇಹ ಗಳಸ್ಯ-ಕಂಠಸ್ಯ ಎಂಬುದು ಗೊತ್ತಿತ್ತು. ನಮ್ಮಜ್ಜ ಅವರಿಗೆ ಅವರ ಎಪ್ಪತ್ತೈದನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಅಭಿನಂದನ ಗ್ರಂಥ ತರುತ್ತಿರುವ ವಿಚಾರ 'ಅಮ್ಮ'ನಿಂದ ನನಗೆ ತಿಳಿಯಿತು. ಈ ಮಧ್ಯೆ ಲೇಖನ ಕೇಳಿದಾಗ ತುಸು ಗಾಬರಿಗೊಂಡೆ.

ನಮ್ಮ ತಂದೆ ನಂಜನಗೂಡಿನ ದಿವಂಗತ ಡಾ|| ಕೆ. ಕೃಷ್ಣಪ್ಪ 1999ರಲ್ಲಿ ಹೃದಯಾಘಾತದಿಂದ ನಿಧನರಾದರು. ನಮ್ಮ ತಾಯಿ ವಿಜಯಲಕ್ಷ್ಮಿ-ರಾಮಪ್ಪ ಅವರ ಹಿರಿಯ ಮಗಳು. ನಾನು ಮತ್ತು ನನ್ನ ತಂಗಿ, ತಮ್ಮ ಅವರ ಮಕ್ಕಳು.

1999ರಲ್ಲಿ ನಮ್ಮ ತಂದೆ ನಿಧನರಾದಮೇಲೆ ನಮ್ಮ ತಾತ ರಾಮಪ್ಪ ನಂಜನಗೂಡಿಗೆ ಬರುವುದು ಹೆಚ್ಚಾಯಿತು. ನಮ್ಮ ತಾತ ಅವರ ಆತ್ಮವಿಶ್ವಾಸ, ಸಮಸ್ಯೆಯನ್ನು ಬಗೆಹರಿಸುವಲ್ಲಿ ಅವರ ಜಾಣ್ಮೆ ಹಾಗು ಅವರಿಗಿದ್ದ ಅಪಾರ ತಾಳ್ಮೆ ನಮ್ಮ ಕುಟುಂಬಕ್ಕೆಲ್ಲಾ ಹೊಸ ಪಾಠದಂತೆ ಗೋಚರವಾಯಿತು. ಮಗಳ ಕಷ್ಟಕ್ಕೆ ತಂದೆ ಆಗದೆ ಬೇರ್‍ಯಾರು ಆಗುತ್ತಾರೆಂದು ಆ ವಿಚಾರವನ್ನು ಸುಲಭವಾಗಿ ತಳ್ಳಿಹಾಕುವಂತಿಲ್ಲ. ನಮ್ಮ ತಾತ ಅವರಿಗೆ ಆಗಲೇ ಎಪ್ಪತ್ತು ವರ್ಷ

ವಯಸ್ಸು. ದಾವಣಗೆರೆಯಲ್ಲಿ ಸಾಮಾಜಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ಬೆಂಗಳೂರು ಹಾಗು ಇತರ ಕಡೆ ಇವರು ಪ್ರಾರಂಭಿಸಿದ ಅನೇಕ ಕೆಲಸಗಳು ಇವರನ್ನು ಬಯಸುತ್ತಿದ್ದವು. ಇಂತಹ ಸಂದರ್ಭದಲ್ಲಿ ಎದುರಾದ ಕೌಟುಂಬಿಕ ಆಘಾತಕ್ಕೆ ಅವರು ತೋರಿದ ಪ್ರತಿಕ್ರಿಯೆ ನಿಜಕ್ಕೂ ಮನನೀಯವಾದುದು. ನಮಗೆಲ್ಲಾ ಧೈರ್ಯ ಹೇಳಿ ಪ್ರತಿವಾರ, ತಿಂಗಳು ಅಗತ್ಯ ಬಿದ್ದರೆ ಎರಡು ದಿವಸಗಳಿಗೊಮ್ಮೆ ನಂಜನಗೂಡಿಗೆ ರಾತ್ರಿಯೇ ಬಂದು ಮಾಡಬೇಕಾದ ಕೆಲಸಗಳನ್ನು ಮಾಡಿ, ಬೆಳಗ್ಗೆ ಊರಿಗೆ ಹೊರಡುತ್ತಿದ್ದುದನ್ನು ನಾನು ಅನೇಕ ಸಾರಿ ನೋಡಿದ್ದೇನೆ. ದಾವಣಗೆರೆ, ನಂಜನಗೂಡು, ಬೆಂಗಳೂರು-ಹೀಗೆ ಕೆಎಸ್‌ಆರ್‌ಟಿಸಿ ಬಸ್‌ನಲ್ಲಿ ಕಾಲ ಕಳೆದು ತಾವು ವಹಿಸಿಕೊಂಡ ಎಲ್ಲ ಕೆಲಸಕ್ಕೂ ನ್ಯಾಯ ದೊರಕಿಸುತ್ತಿದ್ದುದು ಸಾಮಾನ್ಯದ ಸಂಗತಿಯಲ್ಲ. ಮನುಷ್ಯನಿಗೆ ಕಷ್ಟ ಬಂದಾಗ ಅಳ್ಳೆದೆಯವರಾಗದೆ ಸಾಕಷ್ಟು ಶ್ರಮ ವಹಿಸಬೇಕೆಂಬ ತತ್ವವನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ತೋರಿಸಿದವರು ನಮ್ಮ ತಾತ.

ಮೇಲ್ನೋಟಕ್ಕೆ ನಮ್ಮ ತಾತ ಬಿಗುವಿನ ಸ್ವಭಾವದವರೆಂದು ಗೋಚರಿಸುತ್ತದೆ. ತಾವು ಹಾಕಿಕೊಂಡ ಕಾರ್ಯಕ್ರಮಗಳನ್ನು ಎಷ್ಟೇ ತೊಂದರೆಯಾದರೂ ಅದನ್ನು ಅನುಷ್ಠಾನಗೊಳಿಸುವ ಛಲ ಅವರಲ್ಲಿದೆ. ಅವರ ಬದುಕನ್ನು ಕುರಿತಂತೆ ನಮ್ಮ ಅಮ್ಮ ಅನೇಕ ಸಾರಿ ನಮಗೆ ಹೇಳಿದ್ದಾರೆ. ತಂದೆ ತಾಯಿಗಳಿಬ್ಬರನ್ನೂ ಕಳೆದುಕೊಂಡ ನಮ್ಮ ತಾತ ಬೆಳೆದ ರೀತಿ ಸಾಹಸದ ಕತೆಯಾಗುವುದರಲ್ಲಿ ಸಂಶಯವಿಲ್ಲ. ಹೀಗೆ ಬೆಳೆದ ನಮ್ಮ ತಾತ ತಮಗೆ ಸಹಾಯ ಮಾಡಿದ ಪ್ರತಿಯೊಬ್ಬರಿಗೂ ಯಾವುದಾದರೊಂದು ರೀತಿಯಲ್ಲಿ ಸೇವೆ ಮಾಡಬೇಕೆಂಬ ಆಶಯವುಳ್ಳವರು. ಅದಕ್ಕಾಗಿ ತಮ್ಮನ್ನೇ ಉಪ್ಪಾರ ಸಮಾಜಕ್ಕೆ ಅರ್ಪಿಸಿಕೊಂಡುಬಿಟ್ಟಿದ್ದಾರೆ.

ನಮ್ಮ ತಾತನ ಸಮಾಜಸೇವೆಯಲ್ಲಿ ನಮ್ಮ ಅಜ್ಜಿ ಪೂಜ್ಯ ಸಣ್ಣಮ್ಮ ಅವರ ಪಾತ್ರ ಹೇಳಲೇಬೇಕು. ನನಗೆ ತಾತನಿಗಿಂತ ಅಜ್ಜಿಯದೇ ಬಳಕೆ. ದಾವಣಗೆರೆಗೆ ಹೋದಾಗೆಲ್ಲಾ ತಾತ ಎಲ್ಲಿ ಸಿಗುತ್ತಾರೆ. ಅಜ್ಜಿಯ ಜೊತೆಯೇ ಮಾತು, ಆಟ, ಪಾಠ. ಯಶಸ್ವಿ ಪುರುಷನ ಹಿಂದೆ ತ್ಯಾಗಮಯಿ ಮಹಿಳೆ ಇರುತ್ತಾಳೆಂಬ ಇಂಗ್ಲೀಷ್ ನಾಣ್ನುಡಿಗೆ ತಕ್ಕಂತಿದ್ದಾರೆ, ನಮ್ಮಜ್ಜಿ.

ನನ್ನ ತಾತ ಅವರ ಸಮಯಪ್ರಜ್ಞೆ, ಪರೋಪಕಾರ ಬುದ್ಧಿ, ಸಾಮಾಜಿಕ ಕಳಕಳಿ ಮತ್ತು ಕಷ್ಟಪಟ್ಟು ದುಡಿಯುವ ಪ್ರಜ್ಞೆ ನನಗೆ ಹಿಡಿಸಿದ ಗುಣಗಳು. ನನ್ನ ತಾತನದು 'ತ್ಯಾಗಮಯ' ಬದುಕು. ನನ್ನ ಮೇಲೆ ತುಂಬ ಪ್ರಭಾವ ಬೀರಿದೆ. ಇಂತಹವರ ಮೊಮ್ಮಗಳಾಗಿ ಜನಿಸಿದ ಬಗ್ಗೆ ನನಗೆ ಹೆಮ್ಮೆಯಿದೆ. ಅವರನ್ನು ಅನುಸರಿಸುವ ಆಸೆಯಿದೆ.

*

## * ಅಕ್ಕರೆಯ ತಾತ

- ಸೀಮಾನಾಯಕ್
ಬೆಳಗಾವಿ

ನಮ್ಮ ತಂದೆ ಬೆಳಗಾಂನ ಡಾ. ಬಾಬುನಾಯಕ್. ನಮ್ಮ ತಾಯಿ ಉಷಾನಾಯಕ್. ನಮ್ಮ ತಾಯಿಯವರ ತಂದೆ ಪೂಜ್ಯ ಡಿ.ಎಸ್. ರಾಮಪ್ಪ ಅವರು.

ದೂರದ ಬೆಳಗಾಂನಲ್ಲಿದ್ದರೂ ದಾವಣಗೆರೆಯಲ್ಲಿರುವ ತಾತ ಅವರನ್ನು ಕಂಡರೆ ವಿಶೇಷವಾದ ಅಕ್ಕರೆ. ರಜಾದಿನಗಳಲ್ಲಿ ದಾವಣಗೆರೆಯಲ್ಲಿ ಕಳೆದ ರಸಮಯ ದಿನಗಳನ್ನು ಮರೆಯುವಹಾಗಿಲ್ಲ. ಅವುಗಳನ್ನು ನೆನೆದಾಗಲೆಲ್ಲಾ ತಾತ ಅಜ್ಜಿಯರ ಮಧುರ ನೆನಪುಗಳು ಕಾಡುತ್ತವೆ.

ನಾವು ಊರಿಗೆ ಹೋದಾಗೆಲ್ಲಾ 'ತಾತ' ಸಿಕ್ಕುತ್ತಿದ್ದರೆಂದು ಹೇಳುವುದು ಕಷ್ಟ. ಅವರು ಬೆಂಗಳೂರೋ ಅಥವಾ ಎಲ್ಲಿಗೋ ಹೋಗಿರುತ್ತಿದ್ದರು. ನಮ್ಮ ಅಜ್ಜಿ ವಿಶೇಷ ಅಕ್ಕರೆಯಿಂದ ನೋಡಿ ಕೊಳ್ಳುತ್ತಿದ್ದರು. ಊರಿನಿಂದ ಬಂದ ನಂತರ ನಮ್ಮ ತಾತ ವಿಚಾರಿಸಿ ಕೊಳ್ಳುತ್ತಿದ್ದುದೇ ವಿಶಿಷ್ಟವಾದುದು. ಅವರ ಒಂದೆರಡು ಮಾತುಗಳಲ್ಲೇ ಎಲ್ಲಾ ರೀತಿಯ ಪ್ರೀತಿ-ಅಭಿಮಾನಗಳು ತುಂಬಿ ತುಳುಕುತ್ತಿದ್ದವು. ಅವರನ್ನು ನೋಡುತ್ತಿದ್ದಾಗ ಭಯವಾಗುವುದಿಲ್ಲ, ಬದಲಾಗಿ ಆತ್ಮ ವಿಶ್ವಾಸ ಸ್ಫುರಿಸುತ್ತದೆ.

ನಮ್ಮ ತಾತ ರಾಮಪ್ಪ ಅವರು ಮಾಡಿದ ಸೇವೆಯನ್ನು ನಮ್ಮ 'ಉಪ್ಪಾರ ಸಮಾಜ' ಸಾಕಷ್ಟು ಬಲ್ಲದು. ತಮ್ಮ ಸುಖ-ಸಂತೋಷಗಳನ್ನು ಎಂದೂ ಗಣನೆಗೆ ತೆಗೆದುಕೊಳ್ಳದೆ ಹಗಲಿರುಳೂ ಈ ಸಮಾಜಕ್ಕೆ ದುಡಿದ ಕೀರ್ತಿ ನಮ್ಮ ತಾತನಿಗೆ ಸಲ್ಲುತ್ತದೆ.

ನಮ್ಮ ತಾಯಿ ಹೇಳುತ್ತಿರುತ್ತಾರೆ, ಅವರ ತಂದೆ ಅರ್ಥಾತ್

ನಮ್ಮ ತಾತ ಇಂಜಿನಿಯರ್ ಆದರೂ ಎಂದೂ ಸರ್ಕಾರಿ ಜೀಪ್‌ನಲ್ಲಿ ಇವರುಗಳು ಕುಳಿತಿರಲಿಲ್ಲವಂತೆ! ಮನೆಯಲ್ಲಿ ಕೂಡ ವಿಶೇಷವಾದ ಅದ್ದೂರಿಯೇನಿಲ್ಲ.

ಕೆಲಸಕ್ಕೆ ಸೇರಿ ಇಪ್ಪತ್ತೈದು ವರುಷಗಳಾದರೂ ನಮ್ಮ ತಾತ ಮನೆ ಮಾಡಿಕೊಂಡಿರಲಿಲ್ಲ. ಬಾಲ್ಯದಲ್ಲಿ ಯಾರು ಇವರಿಗೆ ಸಹಾಯ ಮಾಡಿದರೋ ಅವರಿಗೆಲ್ಲಾ ಉಪಕಾರ ಮಾಡುತ್ತಾ ಬಂದವರು. ಷೋಕಿ ಎಂಬುದು ಅವರಿಗೆ ತಿಳಿದೇ ಇರಲಿಲ್ಲ. ಇನ್ನೊಬ್ಬರಿಗೆ ಉಪಕಾರ ಮಾಡಬೇಕೆಂಬ ಏಕೈಕ ಗುರಿ ಅವರದು. ಸರ್ಕಾರಿ ಸರ್ವೀಸ್‌ನಲ್ಲಿದ್ದಾಗ ಕಷ್ಟದಲ್ಲಿದ್ದವರನ್ನ ಹುಡುಕಿಕೊಂಡು ಹೋಗಿ ಸಹಾಯ ಮಾಡುವ ಹೊಸ ಪದ್ಧತಿ ಇವರದು. ಈ ಕಾರಣದಿಂದಾಗಿ ಕುಟುಂಬದ ಕಡೆಗೂ ಹೆಚ್ಚು ಸಮಯ ಮೀಸಲಾಗಿಡಲಿಲ್ಲ. ಆದರೆ ತಮ್ಮ ಮಕ್ಕಳನ್ನು ಶಿಸ್ತು ಹಾಗು ಜವಾಬ್ದಾರಿಯುತರನ್ನಾಗಿ ಬೆಳೆಸುವಲ್ಲಿ ಅವರು ಕರ್ತವ್ಯಲೋಪ ಮಾಡಲಿಲ್ಲ. ನಮ್ಮ ತಾಯಿ, ದೊಡ್ಡಮ್ಮ ಹಾಗು ಮಾವಂದಿರು-ಹೀಗೆ ಎಲ್ಲರೂ ಇಂದು ಸುಖವಾಗಿದ್ದಾರೆ. ಅದಕ್ಕೆ ಕಾರಣ ನಮ್ಮ ತಾತ-ಅಜ್ಜಿಯರ ತ್ಯಾಗ.

ಇಂದು ವಿಶ್ವ ಕಿರಿದಾಗಿರಬಹುದು. ಆದರೆ ಮನುಷ್ಯ ಹೆಚ್ಚು ಸ್ವಾರ್ಥಿಯಾಗುತ್ತಿದ್ದಾನೆ. ತಾನು ಹಾಗು ತನ್ನ ಕುಟುಂಬ ಎಂಬುದಕ್ಕಷ್ಟೇ ಸಿಮೀತವಾಗುತ್ತಿದ್ದಾನೆ. ಅದರಲ್ಲೂ ನಮ್ಮಂತಹ ಮಕ್ಕಳು ತಮ್ಮ ಹೊಟ್ಟೆಪಾಡು ತಾವೇ ಮಾಡಿಕೊಳ್ಳಬೇಕಾಗಿದೆ. ಅದಕ್ಕೆ ಪರಿಸರ ಕೂಡ ಪೂರಕವಾಗಿದೆ. ಅಂತಹದರಲ್ಲಿ ನಮ್ಮ ಉಪ್ಪಾರ ಸಮಾಜದ ಯಾವ ಹುಡುಗ-ಹುಡುಗಿಗೆ ಕೆಲಸ ಸಿಕ್ಕಿಲ್ಲ, ಅವನಿಗೆ ಏನಾಗಬೇಕು, ಎಂಬುದನ್ನು ಯಾರು ಯೋಚಿಸುತ್ತಾರೆ! ಆದರೆ ನಮ್ಮ ತಾತ ಈ ಬಗ್ಗೆ ಸದಾ ಚಿಂತಿಸಿದವರು. ಒಬ್ಬ ಹುಡುಗನ ಸಲುವಾಗಿ ಬಿಗುಮಾನವಿಲ್ಲದೆ ಯಾರ ಮನೆಬಾಗಿಲಿಗೆ ಬೇಕಾದರೂ ಹೋದವರು. ಒಬ್ಬ ಹುಡುಗಿಗೆ ಒಳ್ಳೆಯದಾಗುತ್ತದೆಂದರೆ ಯಾರಿಗೆ ಬೇಕಾದರೂ 'ಸಲಾಂ' ಹಾಕಲು ಸಿದ್ಧರಾದವರು.

"ಯಾರಿಗಾದರೂ ಸಹಾಯ ಮಾಡು, ಪರರಿಗೆ ಕಣ್ಣೀರು ಸುರಿಸು" ಎಂದು ಏಸುಕ್ರಿಸ್ತ ಹೇಳಿದ ಜೀವನಧ್ಯೇಯ ಅವರದು. ಆದರೆ ಅದನ್ನು ಅನುಸರಿಸಲು ಹೊರಟಾಗ ಆಗುವ ಕಷ್ಟ ಎಂತಹದು!

ನಮ್ಮ ತಾತ ಯಾವುದೇ ಮಹಾಗ್ರಂಥ, ಸ್ವಾಮೀಜಿಯವರ ಹಿತನುಡಿ ಅಥವಾ ಪುಣ್ಯಪುರುಷರ ಜೀವನ ನೋಡಿ ಸ್ಫೂರ್ತಿ ಪಡೆದು ಸಮಾಜಸೇವಕರಾದವರಲ್ಲ. ಅವರ ಬದುಕೇ ಅವರಿಗೆ ಪಾಠ ಕಲಿಸಿದೆ. ಬಾಲ್ಯದಲ್ಲಿ ಅನುಭವಿಸಿದ ಕಷ್ಟ ಕೋಟಲೆಗಳು ಅವರನ್ನು ನೈಜ ಮನುಷ್ಯನನ್ನಾಗಿಸಿವೆ. ಮಾನವೀಯ ಅನುಕಂಪದಿಂದ ಅವರು ಸಮಾಜಸೇವೆ ಮಾಡಿ ಯಶಸ್ಸು ಗಳಿಸಿದ್ದಾರೆ. ದೊಡ್ಡವರು ಮಾಡಿದ ಪುಣ್ಯ ಅವರ ಸಂತತಿಯನ್ನು ಕಾಪಾಡುತ್ತದೆಂಬ ಮಾತಿನ ಹಿನ್ನೆಲೆಯಲ್ಲಿ ನಾವು ಭಾಗ್ಯವಂತರು. ಅವರ ತ್ಯಾಗ, ಪರೋಪಕಾರ ಗುಣ, ಕಳಕಳಿ, ದುಡಿಯುವ ಮನೋಭಾವ ನನ್ನಂತಹ ಎಲ್ಲರಿಗೂ ಪ್ರೇರಣೆ ನೀಡಲಿ. ಹೊಸ ಸಮಾಜ ನಿರ್ಮಾಣವಾಗಲಿ ಎಂದು ಪ್ರಾರ್ಥಿಸುತ್ತೇನೆ.

*

## * ಸೌಜನ್ಯಶೀಲ, ಸಂಘಟನ ಚತುರ ಶ್ರೀ ಡಿ.ಎಸ್. ರಾಮಪ್ಪನವರು

**- ಕೆ.ಆರ್. ಕಮಲೇಶ್**
ಬೆಂಗಳೂರು

ನಿವೃತ್ತ ಎಕ್ಸಿಕ್ಯೂಟಿವ್ ಇಂಜಿನಿಯರ್ ದಾವಣಗೆರೆ ನಿವಾಸಿ ರಾಮಪ್ಪ ಅಂದರೆ ಬಹಳ ಜನಕ್ಕೆ ಇವರು ಯಾರೆಂದು ಬೇಗನೆ ಹೊಳೆಯುವುದಿಲ್ಲ. ಆದರೆ ಉಪ್ಪಾರ ಜನಾಂಗದ ಹಿತಚಿಂತಕರು, ಸ್ನೇಹಶೀಲ ಸ್ವಭಾದವರು, ಹಿಂದುಳಿದ ವರ್ಗದವರ ಬಗ್ಗೆ ಅಪಾರ ಅಭಿಮಾನವುಳ್ಳವರು, ಸದಾಕಾಲ ಯುವಕರಿಗೆ ಸಹಾಯಹಸ್ತ ಚಾಚಲು ಮುಂದಾಗುವರು ಎಂದಾಗ ಅನೇಕರು "ಇವರು ನಮ್ಮ ರಾಮಪ್ಪ" ಎಂದು ಕೃತಜ್ಞತೆಯಿಂದ ನೆನೆಯುತ್ತಾರೆ. ಎಪ್ಪತ್ತೈದು ವರುಷದ ಹರೆಯದ ರಾಮಪ್ಪ ಅವರು ಒಮ್ಮೆ ನೋಡಿದಾಗ ಐವತ್ತರ ಹರೆಯದವರಂತೆ ಗೋಚರಿಸುತ್ತಾರೆ. ಇನ್ನು ಅವರ ಜೊತೆ ಕೆಲಸ ಮಾಡಲು ತೊಡಗಿದರಂತೂ ಮುಗಿದೇಹೋಯಿತು. ನಲವತ್ತರ ಯುವಕರಂತೆ ಸದಾ ಚಟುವಟಿಕೆಯ ಬುಗ್ಗೆಯಂತೆ ಕಾಣುತ್ತಾರೆ. ಸದಾ ಕೆಲಸ ಮಾಡುವ ಮನೋಭಾವವೇ ಅವರನ್ನು ಚಿರಯೌವ್ವನಿಗರಾಗುವಂತೆ ಮಾಡಿದೆ. ದಾವಣಗೆರೆಯಿಂದ ಬೆಂಗಳೂರು, ಬೆಂಗಳೂರಿನಿಂದ ಬೀದರ್, ಅಲ್ಲಿಂದ ಚಾಮರಾಜ ನಗರಕ್ಕೆ ಕೆಎಸ್ಆರ್‌ಟಿಸಿ ಬಸ್ಸಿನಲ್ಲಿ ಉಪ್ಪಾರ ಸಮುದಾಯಕ್ಕಾಗಿ ಓಡಾಡುವ ಶ್ರೀ ರಾಮಪ್ಪನವರು ರಾಜ್ಯದ ಅನೇಕ ಕ್ರಿಯಾಶೀಲ ಕೆಲಸಗಾರರಿಗೆ ಚಿರಪರಿಚಿತರು. ಯಳಂದೂರು, ಕುಷ್ಟಗಿ, ಗೋಕಾಕ್ ಹಾಗು ಮಧುಗಿರಿಗಳಲ್ಲಿನ ಉಪ್ಪಾರ ಕುಟುಂಬಗಳು ಒಂದಲ್ಲಾ ಒಂದು ಕಾರಣಕ್ಕೆ ರಾಮಪ್ಪನವರನ್ನು ಸ್ಮರಿಸಿಕೊಳ್ಳುತ್ತವೆ. ಅದೇ ರೀತಿ ಹಿಂದುಳಿದ ಹಾಗು ಅಲ್ಪಸಂಖ್ಯಾತ ಸಮುದಾಯಕ್ಕೆ

ಸಂಬಂಧಪಟ್ಟ ಯಾವುದೇ ಚರ್ಚೆ, ವಿವಾದ ಹಾಗು ತೀರ್ಮಾನಗಳನ್ನು ಕೈಗೊಳ್ಳಬೇಕಾದ ಸಂದರ್ಭಗಳಲ್ಲಿ ಅವಶ್ಯಕವಾಗಿ ಕ್ಷೇತ್ರಕಾರ್ಯದ ಅನುಭವವಿರುವ ರಾಮಪ್ಪ ಅವರನ್ನು ನೆನಪಿಸಿಕೊಳ್ಳಲಾಗುತ್ತದೆ. ಅವರು ಮುಗ್ಧತೆ ಹಾಗು ವಿಚಾರವಂತಿಕೆಯ ನಡುವಣ ಸೇತುವೆ ಯಾಗಿದ್ದಾರೆ. ಎಪ್ಪತ್ತೈದರ ಶ್ರೀ ಡಿ.ಎಸ್. ರಾಮಪ್ಪ ಹಾಗು ಶ್ರೀಮತಿ ಸಣ್ಣಮ್ಮ ರಾಮಪ್ಪ ಅವರಿಗೆ ರಾಜ್ಯದ ಪ್ರಜ್ಞಾವಂತ ಜನತೆ 'ಉಪ್ಪಾರ ಹಣತೆ' ಅಭಿನಂದನ ಗ್ರಂಥ ತರುವ ಸಂದರ್ಭದಲ್ಲಿ ಅವರನ್ನು ಆತ್ಮೀಯವಾಗಿ ಸಂದರ್ಶಿಸಲಾಯಿತು. ಇಲ್ಲಿ ರಾಮಪ್ಪನವರು ತಮ್ಮ ಜೀವನದ ರಸನಿಮಿಷಗಳನ್ನು, ಬಂಧುಮಿತ್ರರನ್ನು, ಉಪ್ಪಾರ ಸಮುದಾಯದ ವಾಸ್ತವಿಕ ಚಿತ್ರಣವನ್ನು ನೀಡಿದ್ದಾರೆ. ಇದೋ ಇಲ್ಲಿದೆ ಅವರದೇ ಆದ ಮಾತುಗಳು.

*** ತಮ್ಮ ಊರು, ಬಾಲ್ಯ ಹಾಗು ತಂದೆ ತಾಯಿಗಳನ್ನು ಈಗ ನೆನಪಿಸಿಕೊಳ್ಳಲು ಸಾಧ್ಯವೇ?**

ಎಪ್ಪತ್ತೈದರ ಸಮೀಪದಲ್ಲಿರುವ ನನಗೆ ಅನೇಕ ಘಟನೆಗಳು ನೆನಪಿನಿಂದ ಅಳಿಸಿಹೋಗಿವೆ. ಬಾಲ್ಯದಲ್ಲಿ ನಾನು ಅನುಭವಿಸಿದ ತೀವ್ರತರವಾದ ಬಡತನ, ಅನಾಥತೆ ಹಾಗು ಏಕಾಂಗಿತನ ದಿಂದಾಗಿ ಯಾವುದೇ ವಿಚಾರ ನನ್ನ ನೆನಪಿಗೆ ಬರುತ್ತಿಲ್ಲ.

ನನ್ನೂರು ಈಗಿನ ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕು ದೇವರಹಳ್ಳಿ. ತಮಗೆ ದೇವರಹಳ್ಳಿಯ ಸಾಂಸ್ಕೃತಿಕ ಇತಿಹಾಸದ ಬಗ್ಗೆ ಹೆಚ್ಚಿಗೆ ಹೇಳುವ ಅಗತ್ಯವಿಲ್ಲ. ಶ್ರೀ ಉಡುಮರಡಿ ರಂಗನಾಥ ತಾಲ್ಲೂಕಿನಾದ್ಯಂತ ಪ್ರಸಿದ್ಧವಾದ ದೇವರು. ಅವನಿಗೆ ಸಕಲ ಸೇವೆಯನ್ನು ಮಾಡುವವರು ಉಪ್ಪಾರರೇ. ಇಲ್ಲಿ ಉಪ್ಪಾರ ಕುಟುಂಬಗಳು ಹೆಚ್ಚು. ನಮ್ಮ ತಂದೆ ಸಿಕ್ಕುಡಿಯಪ್ಪ, ತಾಯಿ ಕರಿಯಮ್ಮ, ನಾನು ಮತ್ತು ನನ್ನೊಬ್ಬ ತಮ್ಮ ಮಾತ್ರ ನಮ್ಮ ತಾಯಿಯ ಮಕ್ಕಳು. ನಮ್ಮಮ್ಮ ಹೆಸರಿಗೆ ಕರಿಯಮ್ಮ ಆಗಿದ್ದರೂ ಸ್ಫುರದ್ರೂಪಿ ಹೆಣ್ಣುಮಗಳು. ನನ್ನ ನಿಜವಾದ ಹುಟ್ಟಿದ ದಿನ ಗೊತ್ತಿಲ್ಲ, ಯಾರೋ ಅಧ್ಯಾಪಕರು ಬರೆದಿದ್ದು 28-6-1928. ನಾನು ಐದು ವರುಷ ಇರಬೇಕಾದರೆ ಆಕೆ ತೀರಿಹೋದರು. ನಮ್ಮಪ್ಪ ಎರಡನೆಯ ಮದುವೆ ಮಾಡಿಕೊಂಡರು.

ನಮ್ಮ ತಾಯಿಯ ಸೋದರರಾದ ನೀಲಪ್ಪ ಅವರು ನಮ್ಮಿಬ್ಬರನ್ನು ಕುಳೇನೂರಿಗೆ ಕರೆದುಕೊಂಡು ಬಂದರು. ಅಲ್ಲೇ ನಮ್ಮ ಬಾಲ್ಯ ಹಾಗು ವಿದ್ಯಾಭ್ಯಾಸ ನಡೆಯಿತು. ಅವರು ಕೂಡ ಅಂತಹ ಶ್ರೀಮಂತರೇನಲ್ಲ. ಆದರೆ ತಂಗಿ ಮಕ್ಕಳೆಂಬ ವಾತ್ಸಲ್ಯ ಅವರಲ್ಲಿತ್ತೇನೋ. ಪ್ರಾಥಮಿಕ ಶಾಲೆಯ ತನಕ ಕುಳೇನೂರಿನಲ್ಲೇ ವಿದ್ಯಾಭ್ಯಾಸ. ಅಲ್ಲೊಂದು ಆಂಜನೇಯನ ದೇವಸ್ಥಾನ ಇದ್ದ ನೆನಪು. ನನಗೆ ಮುಸ್ಲಿಂ ಅಧ್ಯಾಪಕರೊಬ್ಬರು ಕನ್ನಡ ಮತ್ತು ಇತರ ವಿಷಯಗಳ ಬಗ್ಗೆ ಪಾಠ ಹೇಳುತ್ತಿದ್ದರು. ಅವರ ಹೆಸರು ಜ್ಞಾಪಕವಿಲ್ಲ. ಅವರನ್ನ 'ಮದರಸ್ ಸಾಹೇಬ್ರು' ಅಂತ ಕರೀತಿದ್ವು.

ನಮ್ಮ ಸೋದರಮಾವ ಕುಳೇನೂರಿನಲ್ಲಿ ನಾನು ಕಿರಿಯ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿದ ಮೇಲೆ ಸಂತೇಬೆನ್ನೂರಿನಲ್ಲಿದ್ದ ಕುಳೇನೂರು ಶಾನುಭೋಗರಾದ ಸುಬ್ರಾಯರ ಮನೆಗೆ ತಂದುಬಿಟ್ಟರು. ಆಗ ನಾನು ಹಿರಿಯ (ಮಿಡ್ಲ್ ಸ್ಕೂಲ್) ಪ್ರಾಥಮಿಕ ಶಾಲೆ ಓದುತ್ತಿದ್ದೆ. ನಮ್ಮಜ್ಜ ಕರಿಯಲ್ಲಪ್ಪ ಕೂಡ ಸುಬ್ರಾಯರಿಗೆ ಬೇಕಾದವರು. ಶಾನುಭೋಗ್ ಸುಬ್ರಾಯರ ಮಡಿಲಿಗೆ ಬಿದ್ದ ನನಗೆ ನಿಶ್ಚಿತ ಗುರಿ ಗೋಚರಿಸಿತು. ಶಿಕ್ಷಣದ ಮಹತ್ವ ತನಗೆ ತಾನೇ ಹೊಳೆಯಿತು. ಆದರೆ ದುರ್ದೈವದ ವಿಚಾರ ನನ್ನ ತಮ್ಮನಿಗೂ ಕೂಡ ಇಂತಹ ಸಹಾಯ ದೊರಕಿದರೂ ಆತ ಅದನ್ನು ಉಪಯೋಗಿಸಿಕೊಳ್ಳಲಾಗಲಿಲ್ಲ. ನಾಲ್ಕನೆಯ ಇಯತ್ತೆಯ ನಂತರ ಆತ ಓದಲೇ ಇಲ್ಲ.

*** ನಿಮ್ಮ ಸೋದರಮಾವ ನಿಮ್ಮನ್ನ ಸಾಕಿದ ರೀತಿ ಹೇಗಿತ್ತು?**

ನಾನು ಆಗಲೇ ಹೇಳಿದಹಾಗೆ ಸೋದರಮಾವ ನೀಲಪ್ಪ ಅತಿ ಸಣ್ಣ ರೈತರು. ನಮ್ಮಜ್ಜ ಕರಿಯಲ್ಲಪ್ಪ ಕೂಡ ಹಾಗೇ ಇದ್ದರು. ಹೊಟ್ಟೆಪಾಡಿಗಾಗಿ ನಮ್ಮಜ್ಜ ಮತ್ತು ಸೋದರಮಾವ ಸಣ್ಣ ಪ್ರಮಾಣದ ವ್ಯವಸಾಯದ ಜೊತೆಗೆ ಚೌಳುಮಣ್ಣಿನ ಮಾಳಿಯಿಂದ ಮಣ್ಣುಪ್ಪು ತಯಾರಿಸುವ ಕಸುಬನ್ನು ಮಾಡುತ್ತಿದ್ದುದು ನನಗಿನ್ನೂ ನೆನಪಿದೆ.

ನಮ್ಮ ಮನೆಯ ಹೆಣ್ಣುಮಗಳ ಸಂತತಿ ಉತ್ತರೋತ್ತರವಾಗಿ ಬೆಳೆಯಬೇಕೆಂಬ ಆಶಯ ಅವರಿಬ್ಬರಲ್ಲೂ ಇತ್ತು. ತಾವು ಉಂಡಿದ್ದನ್ನ, ತಾವು ಉಟ್ಟಿದ್ದನ್ನ ನಿರ್ವಂಚನೆಯಿಂದ ನನಗೂ ನನ್ನ ತಮ್ಮನಿಗೂ ನೀಡಿದರು. ಆ ಕಾಲದ ಗ್ರಾಮೀಣ ಪರಿಸ್ಥಿತಿಯಲ್ಲಿ ಅಷ್ಟನ್ನು ಕೊಡೋದು ಸಹ ಅವರಿಗೆ ಕಷ್ಟವೇ ಇತ್ತು. ಮುಗ್ಧತೆ ಹಾಗು ಪರಸ್ಪರ ಸುಖ-ದುಃಖಗಳಿಗೆ ಸ್ಪಂದಿಸುವ ವಿಶಿಷ್ಟಗುಣ ಆ ಕಾಲದ ಎಲ್ಲ ಗ್ರಾಮೀಣ ಜನರಲ್ಲೂ ಇತ್ತು.

*** ನಿಮ್ಮಲ್ಲಿ ಮೊದಲಿನಿಂದಲೂ ಬೆಳೆದು ಬಂದಿರುವ ಪ್ರಾಮಾಣಿಕತೆ, ಸಹೃದಯತೆ, ಬೇರೆಯವರ ಕಷ್ಟಕ್ಕೆ ಮರುಗುವ ಸ್ವಭಾವ ಬೆಳೆಯಲು ಯಾವುದಾದರೂ ಘಟನೆಗಳು ಕಾರಣವಾದವೆ?**

ನಿಜ ಹೇಳಬೇಕಾದರೆ ಅಂತಹ ಘಟನೆಗಳು ನಡೆದದ್ದು ಜ್ಞಾಪಕವಿಲ್ಲ. ನನ್ನ ತಾಯಿ ತೀರಿಹೋದ ಮೇಲೆ ಹಾಗು ತಂದೆ ಮತ್ತೊಮ್ಮೆ ಮದುವೆ ಮಾಡಿಕೊಂಡಮೇಲೆ ಮೂಡಿದ ಅನಾಥಪ್ರಜ್ಞೆ ನನ್ನ ವ್ಯಕ್ತಿತ್ವವನ್ನು ಬೆಳೆಸುವಲ್ಲಿ ಸಹಾಯಕವಾದ ಅಂಶಗಳಾಗಿವೆ. ಬೇರೆಯವರ ಮನೆಯಲ್ಲಿ ಓದಿ ಮುಂದೆ ಬರಬೇಕಾದರೆ ನಾವು ಯಾರ ಮನೆಯಲ್ಲಿರುತ್ತೇವೆಯೋ ಅವರ ಮನಸ್ಸನ್ನು ಗೆಲ್ಲಬೇಕು. ಮೊತ್ತಮೊದಲ ಬಾರಿಗೆ ಎಲ್ಲರನ್ನೂ ಆಕರ್ಷಿಸುವ ಅಂಶ ಸುಳ್ಳು ತಟವಟವಿಲ್ಲದೆ ಪ್ರಾಮಾಣಿಕವಾಗಿ ಬದುಕುವುದು. ನಾನು ಸದಾಕಾಲ ತುತ್ತಿಗಾಗಿ ಹೋರಾಡುತ್ತಿದ್ದವನಾದ ಕಾರಣ ನನ್ನಂತಿರುವ ಇತರರನ್ನು ನೋಡಿ ಸ್ಪಂದಿಸುವುದು ಮೊದಲಿನಿಂದಲೂ ರೂಢಿಯಾದ ಗುಣವಾಯಿತು. ಬುದ್ಧಿವಂತಿಕೆ ಕಡಿಮೆಯಿದ್ದರೂ ಕಷ್ಟ

ಸಹಿಷ್ಣುತೆ ಹಾಗು ಪ್ರಾಮಾಣಿಕತೆಗಳಿದ್ದರೆ ಹೇಗೆ ಬೇಕಾದ್ರೂ ಮುಂದೆ ಬರಬಹುದು. ಇದನ್ನು ಮಹಾತ್ಮ ಗಾಂಧೀಜಿ ಅವರ ಬದುಕಿನಿಂದಲೇ ಕಲಿಯಬಹುದಾಗಿತ್ತು. ಆ ಕಾಲದಲ್ಲಿ ವೈಯಕ್ತಿಕ ಬಡತನ ಅಂತಹ ದೋಷವೇನೂ ಆಗಿರಲಿಲ್ಲ. ಅದನ್ನೊಂದು ಸವಾಲಾಗಿ ಸ್ವೀಕರಿಸುವವರು ಬಹಳ ಜನ ಇದ್ದರು. ಇದೇ ನನಗೆ ಪ್ರೇರಣೆ ಕೊಟ್ಟಿತು.

*** ಬಾಲ್ಯದಲ್ಲಿ ನಿಮಗೆ ಮೇಲ್ವರ್ಗದವರ ಬಗ್ಗೆ ಅಸಹನೆ ಉಂಟಾಗುವ ಪ್ರಸಂಗ ನಡೆಯಿತೆ? ಅಥವಾ ಅವರು ನಿಮ್ಮ ಬೆಳವಣಿಗೆಗೆ ಸಹಕಾರ ನೀಡಿದರೆ?**

ಖಂಡಿತಾ ನಿಜ, ಕುಳೇನೂರು ಶಾನುಭೋಗರಾದ ಸುಬ್ರಾಯರ ವಿಚಾರ ನಿಮಗಾಗಲೇ ಹೇಳಿದ್ದೆ. ಅವರ ಮಡದಿ ಪದ್ಮಾವತಮ್ಮ, ಮಕ್ಕಳು ಶೀನಣ್ಣ, ಸೋನಮ್ಮ, ರತ್ನಮ್ಮ ಇವರೆಲ್ಲಾ ನನ್ನ ಮತ್ತು ನನ್ನ ತಮ್ಮನನ್ನು ಮನೆಮಕ್ಕಳಂತೆ ನೋಡಿಕೊಳ್ಳುತ್ತಿದ್ದರು. ಅವರು ಬ್ರಾಹ್ಮಣರು ನೋಡಿ. ನಾವು ಊಟ ಮಾಡಿದ ತಟ್ಟೆಯನ್ನು ನಾವುಗಳೇ ತೊಳೆದುಕೊಳ್ಳಬೇಕಾಗಿತ್ತು. ನಾವು ಯಾವುದೋ ಒಂದು ದೂರದಲ್ಲೇ ಇರುತ್ತಿದ್ದೆವು. ಆದರೆ ಇಂತಹ ದೂರ ಬಾಹ್ಯದ ಆಚರಣೆಯಲ್ಲಿತ್ತೇ ಹೊರತು ಮಾನಸಿಕವಾಗಿ ಇರಲಿಲ್ಲ. ನಾನು ಶಿವಮೊಗ್ಗಕ್ಕೆ ಹೈಸ್ಕೂಲ್ ವಿದ್ಯಾಭ್ಯಾಸಕ್ಕೆ ಹೋದಾಗ ಕೂಡ ಸುಬ್ರಾಯರು ವಾರದ ಮನೆಗಳನ್ನು ತೋರಿಸಿಕೊಟ್ಟರು. ಅವರಿಗೆ ಕೋರ್ಟ್, ಕಛೇರಿ ಕೆಲಸ ಹೆಚ್ಚು. ಮಹಾಬಲಯ್ಯನವರ ಹೋಟೆಲ್‌ಗೆ ಹೇಳಿ ಬೆಳಗ್ಗೆ ಒಂದು ಚಹಾ ಉಚಿತವಾಗಿ ನನಗೆ ಕೊಡುವಂತೆ ವ್ಯವಸ್ಥೆ ಮಾಡಿದ್ದರು. ನಾನು ರೂಂ ಮಾಡಿಕೊಂಡಿದ್ದೆ. ಪ್ರಾಥಮಿಕ ಶಾಲೆಯ ಮಕ್ಕಳಿಗೆ ಪಾಠ ಹೇಳಿ ಪ್ರತಿ ತಿಂಗಳು ಆರು ರೂಪಾಯಿ ಸಂಪಾದನೆ ಮಾಡುತ್ತಿದ್ದೆ. ಅದು ರೂಂ ಬಾಡಿಗೆ ಇತರೆ ವೆಚ್ಚಗಳಿಗೆ ಸಾಕಾಗುತ್ತಿತ್ತು. ಪ್ರತಿ ವರ್ಷದ ರಜಾ ತಿಂಗಳುಗಳಲ್ಲಿ ಹೊಳೆಹೊನ್ನೂರು, ಭದ್ರಾವತಿ, ತರೀಕೆರೆ, ಬೀರೂರು, ಬ್ಯಾಗಡೆಹಳ್ಳಿ ಮೊದಲಾದ ಕಡೆ ನಮ್ಮ ಸಮುದಾಯದ ಸಿರಿವಂತರ ಹತ್ತಿರ ಹೋಗಿ ನಾಲ್ಕಾಣೆ, ಎಂಟಾಣೆ ಸಂಗ್ರಹಿಸಿ ಮುಂದಿನ ವರ್ಷದ ವಿದ್ಯಾಭ್ಯಾಸಕ್ಕೆ ದಾರಿ ಮಾಡಿಕೊಳ್ಳುತ್ತಿದ್ದೆ. ಆಗೆಲ್ಲಾ ಮೇಲ್ವರ್ಗದ ಅನೇಕರು ನನಗೆ ಸಹಾಯ ಮಾಡಿದ್ದಾರೆ. ಆಗ ಜಾತಿ ಭೇದ ಅಂತಹ ಪ್ರಮುಖ ವಿಚಾರವಾಗಿರಲಿಲ್ಲ. 'ಬಡ ಹುಡುಗ ಒಬ್ಬ ಓದ್ತಾನೆ, ಅವನಿಗೆ ಸಹಾಯ ಮಾಡ್ಬೇಕು' ಎಂಬುದೇ ಎಲ್ಲರ ಆಶಯವಾಗಿತ್ತು.

ಈ ಸಂದರ್ಭದಲ್ಲಿ ವಾರಾನ್ನ ಕೊಟ್ಟು ನನಗೆ ಸಹಾಯ ಮಾಡಿದ ಈ ಕೆಳಗಿನ ಮಹನೀಯರನ್ನು ನಾನು ಮನಸಾರೆ ನೆನಪಿಸಿಕೊಳ್ಳಲೇಬೇಕು. ಅವರೆಂದರೆ ಶಿವಮೊಗ್ಗದ ಹಳೇ ಉಪ್ಪಾರ ಬೀದಿ ಹನುಮಂತಪ್ಪ, ಇವರ ಶ್ರೀಮತಿ ಚೌಡಮ್ಮ, ಶ್ರೀಮತಿ ಗಿಡ್ಡಮ್ಮ ಮಗ ಈಶ್ವರಪ್ಪ, ಅಕೌಂಟೆಂಟ್ ನಾಗಪ್ಪ ಅವರ ಪತ್ನಿ ಶ್ರೀಮತಿ ಶಾರದಮ್ಮ, ಮೂಲೆಹಟ್ಟಿ ಸಣ್ಣಪ್ಪ, ಮಗ ರಾಮಣ್ಣ, ಸೊಸೆ ಮಾರಮ್ಮ, ಹೈಸ್ಕೂಲ್ ಜವಾನ ಸಿದ್ದಪ್ಪ, ಅವನ ಅಳಿಯ ಮಾರಪ್ಪ, ಗಾರೆ ಕೆಲಸದ ನಾಗಪ್ಪ, ಅವರ ಶ್ರೀಮತಿ ರುದ್ರಮ್ಮ, ಕುರುಬ ಸಮಾಜದ ಸಾಹುಕಾರ್ ಸಿದ್ದಪ್ಪ, ಅವರ ಶ್ರೀಮತಿಯವರು ಮತ್ತು ಅವರ ಸಂಬಂಧಿ ಈಶ್ವರಪ್ಪ ಮತ್ತು ರಜಪೂತ

ಸಮಾಜದ ಸರ್ಕಾರಿ ಅಮಿನ್ ಶ್ರೀ ಸಿಂಗ್ ಮತ್ತು ಅವರ ಶ್ರೀಮತಿಯವರು, ಅಲ್ಲದೆ ನನಗೆ ಪ್ರೌಢಶಾಲಾ ಮತ್ತು ಇಂಟರ್‌ಮೀಡಿಯಟ್ ವಿದ್ಯಾಭ್ಯಾಸದ ಸಮಯದಲ್ಲಿ ಪ್ರತಿ ವರ್ಷದ ರಜಾ ತಿಂಗಳುಗಳ ಸಮಯದಲ್ಲಿ ಹಣಕಾಸಿನ ಸಹಾಯ ಕೊಡುವುದರ ಜೊತೆಗೆ ಹಣ ಕೊಡಿಸಿಕೊಡಲು ಸಹಾಯ ಮಾಡಿದ ಹೊಳೆಹೊನ್ನೂರಿನ ಶಿಕ್ಷಕರಾದ ಯು. ದಾಸಪ್ಪ, ಭೈರಪ್ಪ ಮತ್ತು ಕರಿಯಪ್ಪ, ಭದ್ರಾವತಿ ರಂಗಪ್ಪ, ಅವರ ಶ್ರೀಮತಿಯವರು, ಅವರ ದತ್ತು ಮಗ ನನ್ನ ಸಹಪಾಠಿ ಕೆ.ಆರ್. ಕೆಂಚಪ್ಪ, ತರೀಕೆರೆಯ ಪೂಜಾರಪ್ಪ ಮತ್ತು ಗೌರಮ್ಮನವರ ಮಗ ಟಿ.ಪಿ. ಸಿದ್ದಪ್ಪ, ಅಣ್ಣ ಟಿ.ಪಿ. ಬಸವಯ್ಯ, ಶ್ರೀಮತಿ ಪಾರ್ವತಮ್ಮ, ಟಿ.ಜಿ. ರಾಮಯ್ಯ ಹಾಗು ಕಡೂರು ತಾಲ್ಲೂಕು ಬ್ಯಾಗದೇಹಳ್ಳಿ ಭೈರಪ್ಪ ಮೊದಲಾದವರು. ಅಲ್ಲದೆ ನನ್ನ ಇಂಜಿನಿಯರಿಂಗ್ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿದ ನನ್ನ ಸಂಬಂಧಿ ಸಿ. ತಿಮ್ಮಪ್ಪ, ಕುಂಸಿಯ ಮಾವ ಬಾಬು ಹುಚ್ಚಣ್ಣ ಮತ್ತು ಅತ್ತೆ ಶ್ರೀಮತಿ ಎಲ್ಲಮ್ಮ, ಕುಳೇನೂರಿನ ಟೀಚರ್ ಸಿ. ಹನುಮಂತಪ್ಪ ಮೊದಲಾದವರನ್ನು ನೆನಪಿಸಿಕೊಳ್ಳುವುದು ನನ್ನ ಕರ್ತವ್ಯ.

ಈ ಸಂದರ್ಭದಲ್ಲಿ ಒಂದು ವಿಚಾರ ಹೇಳ್ಬೇಕು. ಮರೆತುಹೋದೇನು. ನಮ್ಮ ತಂದೆಯ ಅಣ್ಣನ ಹೆಂಡತಿ ಸ್ವಂತ ಮಕ್ಕಳಿಲ್ಲದ ಲಕ್ಷ್ಮಮ್ಮ ನನಗೆ ಮಾತೃಸ್ವರೂಪಿಣಿಯಾಗಿ ಪ್ರೀತಿಯನ್ನು ಉಣಿಸಿದ್ದಾರೆ. ಅವರ ಪ್ರೀತಿಯ ಆಳವನ್ನು ಇಂದೂ ಕೂಡ ನಾನು ಊಹಿಸಲಾರೆ.

*** ಪ್ರೌಢಶಾಲೆ ಹಾಗು ಇಂಟರ್‌ಮಿಡಿಯಟ್ ವ್ಯಾಸಂಗದ ಕಾಲದಲ್ಲಿ ಶಿವಮೊಗ್ಗದ ಸ್ಥಿತಿ ಹೇಗಿತ್ತು? ನಿಮ್ಮ ಸಹಪಾಠಿಗಳು ಯಾರು?**

ನನಗಾಗ (ಮಿಡಲ್ ಸ್ಕೂಲ್) ಶಾಲೆಯಲ್ಲಿ ಸಂತೇಬೆನ್ನೂರಿನಲ್ಲಿ ಹನುಮಂತರಾಯರು ಮುಖ್ಯೋಪಾಧ್ಯಾಯರು, ಗೋವಿಂದರಾಯರು ಎಂಬುವವರು ಕನ್ನಡ ಹೇಳುತ್ತಿದ್ದರು. ರಾಮಚಂದ್ರರಾಯರು ಇಂಗ್ಲಿಷ್ ಅಧ್ಯಾಪಕರಾಗಿದ್ದರು. ಶಿವಮೊಗ್ಗದಲ್ಲಿ ಪ್ರೊ. ಎ.ಸಿ. ದೇವೇಗೌಡರು ನಮ್ಮ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರು ಹಾಗು ಗಣಿತದ ಅಧ್ಯಾಪಕರು. ಕೃಷ್ಣರಾಯರು, ಶ್ಯಾಮ್‌ಸಿಂಗ್, ಭರಮೇಗೌಡ ಮೊದಲಾದ ಅಧ್ಯಾಪಕರಿದ್ದರು. ನಲವತ್ತೆರಡು-ನಲವತ್ತೇಳು ಸ್ವಾತಂತ್ರ್ಯ ಹೋರಾಟದ ಕಾಲವಲ್ಲವೇ. ಎಲ್ಲೆಲ್ಲೂ ಚಳವಳಿಗಾರರ ಭರಾಟೆ. ನಮ್ಮಂತಹ ಹುಡುಗರಿಗಂತೂ ಅದು ಆಕರ್ಷಣೆಯ ವಿಷಯವಾಗಿತ್ತು. ಮೈಸೂರು ಚಲೋ ಚಳವಳಿಯಲ್ಲಿ 1947ರಲ್ಲಿ ಬಿದ್ದ ಪೊಲೀಸರ ಲಾಠಿ ಏಟಿನ ಆಳವಾದ ಗುರುತು ನನ್ನ ಹುಬ್ಬಿನ ಮೇಲೆ ಈಗಲೂ ಇದೆ. ಆ ಲಾಠಿ ಏಟಿನಿಂದ ನನ್ನ ಎಡಹುಬ್ಬಿನ ಮೇಲಿನ ಉಂಟಾದ ಗಾಯದ ಅತೀವ ನೋವು 1949-90 ಅಂದರೆ ಸುಮಾರು 41 ವರ್ಷಗಳವರೆಗೆ ನನ್ನ ಜೀವಿತದುದ್ದಕ್ಕೂ ನನ್ನನ್ನು ಕಾಡಿಸಿತ್ತು.

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಬಗ್ಗೆ ನನ್ನಲ್ಲಿ ಜೈಲುದಾಖಲೆ ಇದೆ. ಆ ಕಾಲದಲ್ಲಿ ಪಾರ್ಥನಾರಾಯಣ ಪಂಡಿತರು, ಕಡಿದಾಳು ಮಂಜಪ್ಪ, ಹೆಚ್. ಸಿದ್ದಯ್ಯ, ಎಸ್.ವಿ.

ಕೃಷ್ಣಮೂರ್ತಿರಾವ್, ಹೆಚ್.ಎಸ್. ರುದ್ರಪ್ಪ, ಹೆಚ್.ಎಸ್. ಗೋಪಾಲಕೃಷ್ಣಯ್ಯ ಮೊದಲಾದವರು ಮುಂಚೂಣಿಯಲ್ಲಿದ್ದರು. ಜೈಲು ಸಹಪಾಠಿಗಳಾಗಿದ್ದ ಶಾಂತವೇರಿ ಗೋಪಾಲಗೌಡ, ವೈ.ಆರ್. ಪರಮೇಶ್ವರಪ್ಪ ಅರ್ಥಾತ್ ಅಣ್ಣಯ್ಯ, ಎಂ.ಪಿ. ಈಶ್ವರಪ್ಪ, ಎಸ್.ಆರ್.ನಾಗಪ್ಪಶೆಟ್ಟಿ, ಮತ್ತು ಭದ್ರಾವತಿಯ ಸೀತಾರಾಮರಾವ್ ಮೊದಲಾದವರನ್ನು ಪ್ರತಿನಿತ್ಯ ನೋಡುತ್ತಿದ್ದೆ. ಹೆಚ್.ಜಿ. ಗೋವಿಂದಗೌಡ ಅವರು ಶಿವಮೊಗ್ಗದ ಸಹ್ಯಾದ್ರಿ ಕಾಲೇಜಿನಲ್ಲಿ ನನಗಿಂತ ಒಂದು ವರ್ಷ ಮುಂದಿನ ತರಗತಿಯಲ್ಲಿದ್ದರು. ಅದೊಂದು ರಾಷ್ಟ್ರೀಯ ಭಾವನೆಗಳನ್ನು ಪ್ರೇರಣೆಗೊಳಿಸುವ ಮಹತ್ವದ ಕಾಲವಾಗಿತ್ತು. ಅದರಲ್ಲೂ ಶಿವಮೊಗ್ಗದ ಕರ್ನಾಟಕ ಸಂಘ ಕ್ರಿಯಾಶೀಲವಾಗಿತ್ತು. ವೈಯಕ್ತಿಕವಾಗಿ ಹೊಟ್ಟೆಯ ಚಿಂತೆಯೆ ಹೆಚ್ಚಾದ ಕಾರಣ ನಾನು ಅಷ್ಟಾಗಿ ಆಸಕ್ತಿ ತೋರಿಸಲಿಲ್ಲ. ಆದರೂ ಆಗ ನಡೆಯುತ್ತಿದ್ದ ಘಟನೆಗಳು ನನ್ನ ಗಮನಕ್ಕೆ ಬಾರದೇ ಇರಲಿಲ್ಲ. ಮೇಲೆ ಹೇಳಿದಂತೆ ನಾನೊಬ್ಬ ಸ್ವಾತಂತ್ರ್ಯ ಹೋರಾಟಗಾರ. ಸ್ವಾತಂತ್ರ್ಯ ಹೋರಾಟಗಾರರಿಗೆ ಸರ್ಕಾರ ಕೊಡಮಾಡಿರುವ ಆರ್ಥಿಕ ಮತ್ತು ಉಚಿತ ಪ್ರಯಾಣದ ಸವಲತ್ತುಗಳನ್ನು ಸಮಾಜಸೇವೆಯಲ್ಲಿ ನನ್ನನ್ನು ಇನ್ನಷ್ಟು ಸಕ್ರಿಯವಾಗಿ ತೊಡಗಿಸಿಕೊಳ್ಳಲು ಸಹಾಯಕವಾಗಿವೆ. ಕಳೆದ ಮೂರು ವರ್ಷಗಳಿಂದ ಮಾತ್ರ ನಾನು ಈ ಸೌಲಭ್ಯ ಪಡೆದುಕೊಳ್ಳುತ್ತಿದ್ದೇನೆ.

*** ಉಪ್ಪಾರ ಜನಾಂಗದಂತಹ ಹಿಂದುಳಿದ ಜನಾಂಗದಲ್ಲಿ ವಿದ್ಯಾಭ್ಯಾಸಕ್ಕೆ ಯಾರು ತಾನೆ ಗಮನ ಕೊಡುತ್ತಿದ್ದರು? ತಾವು ಹೇಗೆ ಬಿ.ಇ.ಯಂತಹ ತಾಂತ್ರಿಕ ಶಿಕ್ಷಣ ಪಡೆಯಲು ಮುಂದಾದಿರಿ?**

ಜೀವನೋಪಾಯಕ್ಕೆ ಏನಾದ್ರೂ ಸರ್ಕಾರಿ ಸೌಕರಿ ಸಾಧಿಸಬೇಕೆಂಬ ಆಕಾಂಕ್ಷೆಯಂತೂ ನನ್ನ ಮನಸ್ಸಿನಲ್ಲಿತ್ತು. ಸುಬ್ರಾಯರ ಆಶೀರ್ವಾದದಿಂದ ನನಗೆ ಸ್ಪಷ್ಟ ದಿಕ್ಕು ಗೋಚರವಾಯಿತು. ಬ್ರಾಹ್ಮಣ ಹುಡುಗರು ಹೇಗೆ ವಿದ್ಯಾಭ್ಯಾಸ ಮಾಡುತ್ತಾರೆ, ಯಾರದೋ ಮನೆಯಲ್ಲಿ ಪೂಜೆ ಮಾಡಿಕೊಂಡು ವಾರಾನ್ನ ಮಾಡಿ ಮೇಲೆ ಬರುತ್ತಾರೆ ಎಂಬುದು ಆಗ ನನಗೆ ಗೊತ್ತಾಯಿತು. ಅಂದರೆ ಬಾಲ್ಯದಲ್ಲೇ ಅವರು ವಿದ್ಯೆ ಕಲಿಯಬೇಕೆಂಬ ತುಡಿತವನ್ನ ತಮ್ಮ ಮನಸ್ಸಿಗೆ ಹಾಕಿಕೊಳ್ಳುತ್ತಾರೆ. ವಿದ್ಯೆ ಬಂದರೆ ಎಲ್ಲ ಲೌಕಿಕ ವಿಚಾರಗಳು ತನಗೆ ತಾನೇ ಬರುತ್ತವೆ ಎಂಬುದು ಅವರ ವಿಚಾರವಾಗಿತ್ತು. ಇದು ನನ್ನ ಮನಸ್ಸಿನ ಆಳಕ್ಕಿಳಿಯಿತು. 1948ರಲ್ಲಿ ನಾನು ಇಂಟರ್‌ಮೀಡಿಯಟ್‌ನಲ್ಲಿ ಫೇಲಾಗಿ ಲಕ್ಕವಳ್ಳಿ ಪ್ರಾಜೆಕ್ಟ್‌ನಲ್ಲಿ ಗುಮಾಸ್ತನಾಗಿ ಕೆಲಸಕ್ಕೆ ಸೇರಿದೆ. ಅದೂ 9 ತಿಂಗಳು ಮಾತ್ರ. ಆಮೇಲೆ 3 ತಿಂಗಳು ರಾತ್ರಿ ಹಗಲು ಓದಿ ಸಪ್ಲಿಮೆಂಟರಿ ಪರೀಕ್ಷೆಯಲ್ಲಿ ಪಾಸಾಗಿಬಿಟ್ಟೆ. ಈ ಸಾಧನೆಗೆ ಆ ಸಮಯದಲ್ಲಿ ನಾನು ಗುಮಾಸ್ತನಾಗಿ ಸೇವೆ ಸಲ್ಲಿಸುತ್ತಿದ್ದ ನೀರಾವರಿ ಇಲಾಖೆಯಲ್ಲಿ ಬ್ರಾಹ್ಮಣ ಸಮಾಜದ ಡ್ರಾಫ್ಟ್‌ಮನ್ ನಂಜುಂಡಯ್ಯ ಎಂಬುವವರು ಕೊಟ್ಟ ಪ್ರಚೋದನೆ ಮರೆಯುವಂತಿಲ್ಲ. ನಾನು ಮತ್ತು ಅವರು ಒಟ್ಟಿಗೆ ಒಂದು ರೂಮಿನಲ್ಲಿ

ಸಹಪಾಠಿಗಳಾಗಿ ಇದ್ದೆವು. ಶ್ರೀ ನಂಜುಂಡಯ್ಯನವರು ಸಿವಿಲ್ ಇಂಜಿನಿಯರಿಂಗ್‌ನಲ್ಲಿ ಡಿಪ್ಲೋಮ ಮಾಡಿದ್ದರು. ಆಗ ಅವರು ನನ್ನ ಚುರುಕುತನ ನೋಡಿ 'ರಾಮಪ್ಪ ನೀನು ಬಿ.ಇ. ಸಿವಿಲ್ ಪರೀಕ್ಷೆ ಮಾಡಿಕೋ. ನಿನಗೆ ಭಾರೀ ಭವಿಷ್ಯ ಇದೆ' ಎಂಬ ಅವರ ಪ್ರೋತ್ಸಾಹ ನುಡಿ ನನಗೆ ಆದೇಶವಾಗಿ ಆ ದಿಕ್ಕಿನತ್ತ ಹೋಗಲು ನನಗೆ ಪ್ರೇರಣೆ ಸಿಕ್ಕಿತು. ಆಗಿನ ಅವರ ಸ್ನೇಹಪೂರ್ವಕವಾದ ನಡವಳಿಕೆಗಳನ್ನು ಈ ಸಂದರ್ಭದಲ್ಲಿ ನಾನು ನೆನಪಿಸಿಕೊಳ್ಳುವುದು ನನ್ನ ಕರ್ತವ್ಯವೆಂಬುದು ನನ್ನ ಭಾವನೆ.

***ನೀವು ಬಿ.ಇ. ಪರೀಕ್ಷೆ ಓದಲು ನಿಮಗೆ ಸಹಾಯಹಸ್ತ ಚಾಚಿದವರು ಯಾರು?**

ಈ ಹಿಂದೆ ಹೇಳಿದಂತೆ ನನಗೆ ಬಿ.ಇ. ಓದಲು ಲಕ್ಕವಳ್ಳಿಯಲ್ಲಿ ನೀರಾವರಿ ಇಲಾಖೆಯ ಸರ್ಕಾರಿ ಸೇವೆಯಲ್ಲಿ ನನ್ನ ಸಹಪಾಠಿಯಾಗಿದ್ದ ಬ್ರಾಹ್ಮಣ ಸಮಾಜದ ನಂಜುಂಡಯ್ಯನವರು ಪ್ರೇರಣೆ ನೀಡಿದರು. ಅಲ್ಲೇ ಅಕೌಂಟೆಂಟ್ ಆಗಿದ್ದ ನಮ್ಮವರಾದ ಶಿವಮೊಗ್ಗದ ನಾಗಪ್ಪನವರು ಕೂಡ ನನಗೆ ನೀರಾವರಿ ಇಲಾಖೆಯಲ್ಲಿ ತಾತ್ಕಾಲಿಕ ಕೆಲಸ ಕೊಡಿಸಲು ಕಾರಣರಾಗಿದ್ದರು ಮತ್ತು ಮುಂದೆ ಓದಲು ಪ್ರಚೋದಿಸುತ್ತಿದ್ದರು. ಇಷ್ಟು ಹೊತ್ತಿಗೆ ನನಗೆ ಕೂಡ ಪ್ರತಿ ಬೇಸಿಗೆಯಲ್ಲೂ ಬೇರೆಯವರನ್ನ ಕೇಳಿ ಹಣ ಸಂಗ್ರಹಿಸಿ ವಿದ್ಯಾಭ್ಯಾಸ ಮಾಡಲು ಕಷ್ಟ ಅನ್ನಿಸಿತ್ತು. ಶಿವಮೊಗ್ಗದಲ್ಲಿ ಕಂದಾಯ ಇಲಾಖೆಯಲ್ಲಿ ಕ್ಲರ್ಕ್ ಆಗಿದ್ದ ತಿಮ್ಮಪ್ಪ ಅವರು ನಮ್ಮ ದೊಡ್ಡಮ್ಮನ ಕಡೆಯಿಂದ ಸಂಬಂಧಿಕರು. ಅವರು ನನಗೆ ಪ್ರತಿ ತಿಂಗಳೂ 10 ರೂ.ಗಳನ್ನು ಕೊಟ್ಟಿದ್ದರ ಜೊತೆಗೆ ಕುಂಸಿಯಲ್ಲಿ ಸಣ್ಣ ಪ್ರಮಾಣದಲ್ಲಿ ವೀಳೇದೆಲೆ ವ್ಯಾಪಾರಿಯಾಗಿದ್ದ ನಮ್ಮವರೇ ಆದ ಬಾಬು ಹುಚ್ಚಣ್ಣನವರ ಪರಿಚಯ ಮಾಡಿಸಿಕೊಟ್ಟು ಅವರ ಮಗಳು ಸಣ್ಣಮ್ಮನವರ ಜೊತೆ ಬಿ.ಇ. ಎರಡನೇ ವರ್ಷದ ವಿದ್ಯಾರ್ಥಿಯಾಗಿದ್ದಾಗಲೇ [1949 ರಲ್ಲಿ] ಮದುವೆಗೆ ವ್ಯವಸ್ಥೆ ಮಾಡಿದರು. ಪ್ರತಿ ತಿಂಗಳು ನನಗೆ ಬಾಬು ಹುಚ್ಚಣ್ಣ ಅವರು ಇಪ್ಪತ್ತೈದು ರೂಪಾಯಿ, ಹಾಗು ತಿಮ್ಮಪ್ಪ ಹತ್ತು ರೂಪಾಯಿಗಳನ್ನು ಕಳುಹಿಸುತ್ತಿದ್ದರು. ಬೆಂಗಳೂರಿನ ವಿಶ್ವೇಶ್ವರಯ್ಯ ತಾಂತ್ರಿಕ ಕಾಲೇಜ್‌ನಲ್ಲಿ ನಾನು ಬಿ.ಇ. ಸಿವಿಲ್ ಪರೀಕ್ಷೆ ಮುಗಿಸಿದೆ. ಇಂದಿನ ಕೆಂಪೇಗೌಡ ಸರ್ಕಲ್ ಹತ್ತಿರದ ಬಂಡಿಶೇಷಮ್ಮ ಛತ್ರದಲ್ಲಿ ಹೆಚ್. ಸಿದ್ದಯ್ಯನವರ ಸಹಾಯದಿಂದ ಪುಕ್ಕಟೆ ಕೊಠಡಿ ದೊರಕಿಸಿಕೊಂಡು ಸ್ವತಃ ಅಡುಗೆ ಮಾಡಿಕೊಳ್ಳುತ್ತಿದ್ದೆ. ಆಗ ನಮ್ಮ ಪ್ರಿನ್ಸಿಪಾಲ್ ಸಿ.ಜೆ. ದಾಸ್, ಸಿ.ಜೆ. ಗೋಪಾಲಕೃಷ್ಣ, ಡಿ.ಬಿ. ನರಸಿಂಹಯ್ಯ, ನರಸಿಂಹ ಅಯ್ಯಂಗಾರ್ ನಮ್ಮ ಉಪನ್ಯಾಸಕರು. ಬಿ.ಇ. ಓದಿನ ಕೊನೆ ವರ್ಷದಲ್ಲಿ ಕಡಿದಾಳು ಮಂಜಪ್ಪನವರ ಸಹಾಯದಿಂದ ಯಾದವ ಹಾಸ್ಟೆಲ್‌ನಲ್ಲಿ ವಾಸ್ತವ್ಯಕ್ಕೆ ಅವಕಾಶ ಮಾಡಿಕೊಂಡು ಮತ್ತು ಕೆಂಪೇಗೌಡ ಸರ್ಕಲ್‌ನಲ್ಲಿದ್ದ ಸರ್ಪಭೂಷಣ ಮಠದವರ ಸಹಾಯ ಪಡೆದು ಅಂತೂ ಹೇಗೋ ಓದಿ ಪರೀಕ್ಷೆಯನ್ನು ಮುಗಿಸಿ ಸರ್ಕಾರಿ ನೌಕರಿಗೆ ಅರ್ಹನಾದೆ. 1954ರಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಸೂಪರ್‌ವೈಸರ್ ಹುದ್ದೆಗೆ ನೇಮಕವಾದೆ. ಆ ಹೊತ್ತಿಗೆ ನಾನಾಗಲೇ ಎರಡು ಮಕ್ಕಳ ತಂದೆಯಾಗಿದ್ದೆ.

*** ಕೃತಜ್ಞತೆ ಎಂಬುದು ನಿಮ್ಮ ವ್ಯಕ್ತಿತ್ವದಲ್ಲಿ ಮೇಳೈಸಿದ ಗುಣ. ವಿದ್ಯಾಭ್ಯಾಸದ ಕಾಲದಲ್ಲಿ ನಿಮಗೆ ನೆರವು ನೀಡಿದವರನ್ನು ನೀವು ಹೇಗೆ ಸ್ಮರಿಸಿಕೊಂಡಿದ್ದೀರಿ?**

ನಿಜ ಹೇಳುವುದಾದರೆ ನನಗೆ ಇದನ್ನು ಹೇಳಲು ಸಂಕೋಚವೆನಿಸುತ್ತದೆ. ನಾವು ಮಾಡಿದ ಸಹಾಯವನ್ನು ಹೇಳಿಕೊಂಡುಬಿಟ್ಟರೆ ನಾವು ಸಣ್ಣವರಾಗಿಬಿಡುತ್ತೇವೆ ಎಂಬುದು ನನ್ನ ಖಚಿತವಾದ ಅಭಿಪ್ರಾಯ. ಆದರೂ ತಾವು ಕೇಳಿದ ಮೇಲೆ ಒಂದೆರಡು ವಿಚಾರ ಹೇಳುತ್ತೇನೆ. ಶಾನುಭೋಗ್ ಸುಬ್ರಾಯರ ಕುಟುಂಬಕ್ಕಂತೂ ನಾನು ಮನೆಯ ಮಗನಾಗಿ ಸೇವೆ ಸಲ್ಲಿಸಿದ್ದೇನೆ. ಅವರ ವಿಧವೆ ಮಗಳು ಸೋನಮ್ಮನ ಮಗನಿಗೆ ಬಿ.ಎ. ಓದಿಸಿ ಅವನಿಗೆ ಟೊಬ್ಯಾಕೋ ಕಂಪೆನಿಯಲ್ಲಿ ಕೆಲಸ ಸಿಗಲು ಸಹಾಯ ಮಾಡಿದೆ. ಸುಬ್ರಾಯರು ಬದುಕಿರುವ ತನಕ ಅವರಿಗೆ ಪೆನ್ಶನ್‌ರೂಪದಲ್ಲಿ ಹಣ ಕಳುಹಿಸುತ್ತಿದ್ದೆ. ನಮ್ಮ ದೊಡ್ಡಮ್ಮ ಲಕ್ಷ್ಮಮ್ಮನಿಗೆ ಅವರು ಬದುಕಿರುವ ತನಕ ಪೆನ್ಶನ್ ಕೊಟ್ಟಿದ್ದೇನೆ. ನನಗೆ ಸಹಾಯ ಮಾಡಿದ ನನ್ನ ಸೋದರಮಾವ ಬಹಳ ಮುಂಚೆಯೇ ತೀರಿಕೊಂಡದ್ದರಿಂದ ಅವರ ಒಬ್ಬಳೇ ಮಗಳಿಗೆ ನನ್ನ ಕೈಲಾದ ಸಹಾಯ ಮಾಡಿದ್ದೇನೆ.

ಕಂದಾಯ ಇಲಾಖೆಯಲ್ಲಿ ಕ್ಲರ್ಕ್ ಆಗಿದ್ದ ತಿಮ್ಮಪ್ಪ ಅವರಿಗೆ ಅವರ ಹೆಣ್ಣುಮಕ್ಕಳ ಮದುವೆಗೆ ಸಹಾಯ ಮಾಡಿದೆ. ಅವರ ತಮ್ಮನಿಗೆ ಬಿ.ಎ. ತನಕ ಓದಿಸಿದ್ದೇನೆ. ನಮ್ಮ ಮಾವ ಬಾಬು ಹುಚ್ಚಣ್ಣ ಅವರ ಇನ್ನೊಬ್ಬ ಮಗಳನ್ನ ನನ್ನ ತಮ್ಮನಿಗೆ ಕೊಡಲಾಗಿತ್ತು. ಅವನಿಗೆ ಒಂದಿಪ್ಪತ್ತು ಎಕರೆ ಖುಷ್ಕಿ ಜಮೀನು ಕೊಡಿಸಿದೆ. ನಮ್ಮ ಮಾವನವರಿಗೂ ಸಹ ಅವರ ಕಷ್ಟ ಸುಖಕ್ಕೆ ಸಹಾಯಕನಾಗಿದ್ದೇನೆ. ನಾನು ಕೆಲಸಕ್ಕೆ ಸೇರಿ ಇಪ್ಪತ್ತು ವರುಷದ ತನಕ ನನಗಾಗಿ ನಾನು ಮನೆ ಮಾಡುವುದಾಗಲಿ, ಸೈಟ್ ಮಾಡುವುದಾಗಲಿ ಯೋಚನೆ ಮಾಡಲೇ ಇಲ್ಲ. ನನ್ನನ್ನು ಬೆಳೆಸಿದ ಎಲ್ಲರಿಗೂ ಅಷ್ಟಿಷ್ಟು ಸಹಾಯ ಮಾಡಬೇಕೆಂಬುದೇ ನನ್ನ ಮೊದಲನೇ ಉದ್ದೇಶವಾಗಿತ್ತು. ಇನ್ನು ಉಪ್ಪಾರ ಸಮುದಾಯದ ವಿಚಾರ ತಮಗೇ ಗೊತ್ತಿದೆ. ಇದೊಂದು ಅಳಿಲು ಸೇವೆಯೆಂದೇ ನನ್ನ ಭಾವನೆ. ಆ ಕಾಲದಲ್ಲಿ ಅವರುಗಳು ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ನನಗೆ ಮಾಡಿದ ಉಪಕಾರವನ್ನು ಯಾವ ಜನ್ಮದಲ್ಲೂ ತೀರಿಸಲು ಸಾಧ್ಯವಿಲ್ಲವೆಂಬುದು ನನ್ನ ಖಚಿತಾಭಿಪ್ರಾಯ.

*** ಆ ಕಾಲದಲ್ಲಿ ಸಿವಿಲ್ ವಿಷಯದಲ್ಲಿ ಬಿ.ಇ. ಪದವಿ ಪಡೆದವರು ತಾವು. ತಮಗೆ ನ್ಯಾಯವಾಗಿ ಪ್ರೊಬೇಷನರಿ ಅಸಿಸ್ಟೆಂಟ್ ಇಂಜಿನಿಯರ್ ಹುದ್ದೆ ದೊರೆಯಬೇಕಾಗಿತ್ತು. ಆದರೆ ಸೂಪರ್‌ವೈಸರ್ ಹುದ್ದೆ ದೊರೆತ ಬಗ್ಗೆ ನಿರಾಸೆ ಇದೆಯೇ?**

ನಾನು ಯಾವುದನ್ನೂ ನಿರೀಕ್ಷಿಸಿದವನಲ್ಲ. ಹಾಗೆ ನಿರೀಕ್ಷೆ ಮಾಡಲಿಕ್ಕೆ ನನಗಿದ್ದ ಬೆಂಬಲವಾದರೂ ಏನು? ಚಿತ್ರದುರ್ಗದ ಭೀಮಪ್ಪನಾಯಕ ಎಂಬುವರು ನನಗೆ ಸೂಪರ್‌ವೈಸರ್ ಕೆಲಸ ಕೊಡಿಸಲು ನೆರವಾದರು. ಪಾಲಿಗೆ ಬಂದದ್ದು ಪಂಚಾಮೃತ ಎಂದುಕೊಂಡವನು ನಾನು. ಕೆಲಸಕ್ಕೆ ಸೇರಿದ ಆರನೆಯ ವರ್ಷಕ್ಕೆ ಸಿಕ್ಕಿದ ಒಂದೇ ಒಂದು ಬಡ್ತಿ. ಇಪ್ಪತ್ತು ವರ್ಷ

ಬಡ್ತಿಯಿಲ್ಲದೆ ಕೆಲಸ ಮಾಡಿದ್ದರೂ ನಾನು ನೊಂದುಕೊಂಡಿಲ್ಲ. 1980ರಲ್ಲಿ ನನಗೆ ಎಗ್ಸಿಕ್ಯುಟಿವ್ ಇಂಜಿನಿಯರ್ ಆಗಿ ಎರಡನೆ ಬಡ್ತಿ ಸಿಕ್ಕಿತು. ಎಷ್ಟು ಅವಕಾಶ ದೊರಕಿದೆಯೋ ಅಷ್ಟರಮಟ್ಟಿಗೆ ನಾನು ನಿಷ್ಠೆಯಿಂದ ಕೆಲಸ ಮಾಡಿದ್ದೇನೆ. ನಾನು ಸರ್ಕಾರಿ ಸೇವೆಯಲ್ಲಿದ್ದಾಗ ಎಂದೂ ಜಾತಿಗೀತಿ ನೋಡಿದವನಲ್ಲ. ಕೆಲಸ ಮಾತ್ರ ನನ್ನ ಗುರಿಯಾಗಿತ್ತು. ಆ ಕಾಲದಲ್ಲೂ ಅಷ್ಟೇ, ಬೆಳಗ್ಗೆ ಮನೆ ಬಿಟ್ಟು ಹೋದರೆ ಸೈಟಲ್ಲೇ ನಾನು ಸಿಕ್ಕುತ್ತಿದ್ದುದು. ಆಗ ಪಿಡಬ್ಲ್ಯೂಡಿ ಇಲಾಖೆ ಕಂಟ್ರಾಕ್ಟರ್ ಮುಖಾಂತರವೇ ಹೆಚ್ಚಿನ ಕೆಲಸ ನಿರ್ವಹಿಸುವ ಸಂಪ್ರದಾಯ ರೂಢಿಸಿಕೊಂಡಿತ್ತು. ಹಾಗಾಗಿ ಹೆಚ್ಚಿನ ವೈಯುಕ್ತಿಕ ಮೇಲ್ವಿಚಾರಣೆಯಲ್ಲೇ ಒಳ್ಳೆ ಗುಣಮಟ್ಟದ ಕೆಲಸಗಳನ್ನು ನಾನು ಮಾಡಿಸಿದ್ದೇನೆಂಬ ಸಮಾಧಾನ ನನಗಿದೆ. ನಾನು ವಿದ್ಯಾರ್ಥಿದೆಸೆಯಿಂದಲೂ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದವನಾದ್ದರಿಂದ ದೇಶ ಕಟ್ಟುವಲ್ಲಿ ಶಿಸ್ತಿನ ಸಿಪಾಯಿಯಂತೆ ಸರ್ಕಾರಿ ಸೇವೆ ಮಾಡಿದ ಸಮಾಧಾನ ನನಗಿದೆ.

*** ಭಾರತ ಸ್ವಾತಂತ್ರ್ಯ ಪಡೆದ ತರುಣದಲ್ಲಿ ತಾವು ಲೋಕೋಪಯೋಗಿ ಇಲಾಖೆಯಲ್ಲಿ ಸಿವಿಲ್ ಇಂಜಿನಿಯರ್ ಆದವರು. ಆಗಿನ ರಾಜಕಾರಣಿಗಳು ಇಂತಹವರಿಗೆ ಕೆಲಸ ಕೊಡಬೇಕೆಂದು ಶಿಫಾರಸ್ಸು ಮಾಡುತ್ತಿದ್ದರಾ? ಪರ್ಸಂಟೇಜ್ ವ್ಯವಹಾರವಿತ್ತೆ?**

ನಿಮ್ಮ ಮಾತು ನಿಜ. ಸ್ವಾತಂತ್ರ್ಯ ಬಂದ ತಕ್ಷಣ ನಮ್ಮ ಆಶಯಗಳು ಎಲ್ಲೆಲ್ಲೂ ದೊಡ್ಡ ಧ್ವನಿಯಲ್ಲಿ ಕೇಳಬರುತ್ತಿದ್ದವು. ಅದರಲ್ಲೂ ಪ್ರತಿಯೊಂದು ಹಳ್ಳಿಗೂ ರಸ್ತೆ, ಸೇತುವೆ, ಶಾಲಾ ಕಟ್ಟಡ, ಪಂಚಾಯಿತಿ ಕಟ್ಟಡ ಮೊದಲಾದ ಅನುಕೂಲಗಳು ಬೇಕೆಂಬ ಬೇಡಿಕೆ ಬರುತ್ತಿತ್ತು. ಅವರೆಲ್ಲಾ ಬೇಡಿಕೆಗಳನ್ನೂ ಒಮ್ಮಿಂದೊಮ್ಮೆಲೇ ತೀರಿಸಲು ಸಾಧ್ಯವಾಗದಿದ್ದರೂ ಆಗಿನ ರಾಜಕಾರಣಿಗಳು ಜನತೆಯ ಭಾವನೆಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸುತ್ತಿದ್ದರು. ಯಾವ ರಾಜಕಾರಣಿಯು ಇಂತಹವರಿಗೆ ಕೆಲಸ ಕೊಡಬೇಕೆಂದು ಶಿಫಾರಸ್ಸು ಮಾಡುತ್ತಿರಲಿಲ್ಲ. ಟಿ. ಸಿದ್ಧಲಿಂಗಯ್ಯ, ಕಡಿದಾಳು ಮಂಜಪ್ಪ, ಹೆಚ್. ಸಿದ್ಧಯ್ಯ, ಹೆಚ್.ಎಂ. ಚನ್ನಬಸಪ್ಪ, ಟಿ. ಮರಿಯಪ್ಪ, ಕೆ.ವಿ. ಶಂಕರಗೌಡ ಮೊದಲಾದ ನಿಷ್ಠಾವಂತ ರಾಜಕಾರಣಿಗಳು ಕಣ್ಣಿಗೆ ಕಾಣಿಸುತ್ತಿದ್ದರು. ವಿಶೇಷವಾಗಿ ಹೇಳಬೇಕೆಂದರೆ ಈಗಿನಂತೆ ಆಗ ರಾಜಕಾರಣಿಗಳು ಅಂದರೆ ಶಾಸಕರು ಹಾಗು ಅವರ ಬಂಧುಗಳು ಕಂಟ್ರಾಕ್ಟರ್‌ಗಳೇ ಆಗಿರಲಿಲ್ಲ. ಅಧಿಕಾರಿಗಳ ಮೇಲೆ ಅಂತಹ ಒತ್ತಡವೇನೂ ಇರಲಿಲ್ಲ ಅಂತ ಹೇಳಬಹುದು.

ಪರ್ಸಂಟೇಜ್ ವ್ಯವಹಾರವೇನಿರಲಿಲ್ಲ. ಆದರೆ ಕಿರುಪ್ರಮಾಣದಲ್ಲಿ ವ್ಯವಹಾರ ನಡೆಯುತ್ತಿದ್ದುದುಂಟು. ಲೋಕೋಪಯೋಗಿ ಇಲಾಖೆಗೆ ಮೊದಲಿನಿಂದಲೂ ಯಾರಿಗೂ ಹೇಳಿಕೊಳ್ಳಲಾಗದಂತಹ ಹಲವಾರು ಖರ್ಚುಗಳು ಬರುತ್ತವೆ. ಅವುಗಳನ್ನು ನಿಭಾಯಿಸಲು ಇಲಾಖಾ ಇಂಜಿನಿಯರ್‌ಗಳಿಗೆ ಕಂಟ್ರಾಕ್ಟರ್‌ಗಳೇ ಸ್ವಯಂಪ್ರೇರಿತರಾಗಿ ಸಹಾಯ ಮಾಡುವುದುಂಟು. ಆದರೆ ಬಹುಮಟ್ಟಿನ ಅಧಿಕಾರಿಗಳು ನಿಸ್ಪೃಹರಾಗಿದ್ದರೆ ತಪ್ಪಿಲ್ಲ. ಈ

ಸಂದರ್ಭದಲ್ಲಿ ನನ್ನ ಸರ್ಕಾರಿ ಸೇವಾವಧಿಯಲ್ಲಿ ನಾನು ಸ್ಮರಿಸಿಕೊಳ್ಳಲೇಬೇಕಾದ ನನ್ನ ಮೇಲಧಿಕಾರಿಗಳೆಂದರೆ ಶ್ರೀಯುತರಾದ ಎಸ್.ಕೆ. ಹನುಮಂತರೆಡ್ಡಿ, ಎನ್. ಪುಟ್ಟಯ್ಯ, ಕೆ.ಆರ್. ರಾವ್, ಆರ್.ಎ. ರಾವ್, ಜಹಗೀರ್‌ದಾರ್, ರಂಗಸ್ವಾಮಿ, ಪಾಪಣ್ಣ, ರಂಗನಾಥನ್ ಮತ್ತು ಆರ್. ಚಿಕ್ಕಣ್ಣ ಮೊದಲಾದವರು. ರಾಜಕಾರಣಿಗಳಲ್ಲೂ ನಿಸ್ಪೃಹರು ಇದ್ದರೆಂಬುದಕ್ಕೆ ನನ್ನ ಸರ್ಕಾರಿ ಸೇವಾವಧಿಯಲ್ಲಿ ಸಂಪರ್ಕಕ್ಕೆ ಬಂದ ಕಡಿದಾಳು ಮಂಜಪ್ಪ, ರಾಮಕೃಷ್ಣ ಹೆಗಡೆ, ಕಾಂತರಾವ್ ದೇಸಾಯಿ, ಸತ್ಯನಾರಾಯಣಸಿಂಗ್, ಸಾಗರದ ಎಲ್.ಟಿ. ಹೆಗಡೆ, ಮತ್ತು ಕಾಗೋಡು ತಿಮ್ಮಪ್ಪ ಮಹನೀಯರುಗಳು ಉಲ್ಲೇಖನಾರ್ಹರು. ಇವರ್‍ಯಾರೂ ನನ್ನನ್ನು ಅವರ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡವರಲ್ಲ.

ಸನ್ಮಾನ್ಯ ಶ್ರೀ ಕಾಗೋಡು ತಿಮ್ಮಪ್ಪನವರು ಲೋಕೋಪಯೋಗಿ ಇಲಾಖಾ ಮಂತ್ರಿಗಳಾಗಿದ್ದ ಅವಧಿಯಲ್ಲಿ ನಾನು ಎಗ್ಜಿಕ್ಯುಟಿವ್ ಇಂಜನಿಯರ್‌ಆಗಿ ಸೇವೆ ಸಲ್ಲಿಸಿ 1983ನೇ ಜೂನ್ ತಿಂಗಳಲ್ಲಿ ನಿವೃತ್ತಿ ಹೊಂದಿದೆ. ಅಂದು ಸಾಗರದ ನನ್ನ ಅಭಿಮಾನಿಗಳು ಏರ್ಪಡಿಸಿದ್ದ ಬೀಳ್ಕೊಡುಗೆ ಸಮಾರಂಭದಲ್ಲಿ ಹಾಜರಿದ್ದ ಸ್ಥಳೀಯ ಪತ್ರಿಕಾ ಸಂಪಾದಕರೊಬ್ಬರು ವ್ಯಕ್ತ ಮಾಡಿದ ಅಭಿಪ್ರಾಯವನ್ನು ಈ ಸಂದರ್ಭದಲ್ಲಿ ಉಲ್ಲೇಖಿಸುತ್ತೇನೆ. ಸನ್ಮಾನ್ಯ ರಾಮಪ್ಪನವರೇ, ನಾನು ಈ ಪತ್ರಿಕೆ ನಡೆಸಿಕೊಂಡು ಬರುತ್ತಿರುವ ಅವಧಿಯಲ್ಲಿ ಈ ಸಾಗರ ಲೋಕೋಪಯೋಗಿ ಇಲಾಖಾ ವಿಭಾಗದಲ್ಲಿ ಹಲವಾರು ಜನ ಎಗ್ಜಿಕ್ಯುಟೀವ್ ಇಂಜಿನಿಯರ್‌ಗಳಾಗಿ ಸೇವೆ ಸಲ್ಲಿಸಿ ವರ್ಗವಾಗಿಹೋಗಿದ್ದಾರೆ. ಆದರೆ ಅವರಲ್ಲೆಲ್ಲಾ ಈ ವಿಭಾಗದಲ್ಲಿ ಮೂರು ವರ್ಷ ಸೇವೆ ಸಲ್ಲಿಸಿದರೂ, ಅಪವಾದವೆಂಬಂತೆ, ನಮ್ಮೀ ಪತ್ರಕರ್ತರ ಕೆಂಗಣ್ಣಿಗೆ ಬೀಳದೆ ತಪ್ಪಿಸಿಕೊಂಡು ಹೋಗುತ್ತಿರುವವರು ನೀವೊಬ್ಬರೇ ಎಂದಿದ್ದರು.

*** ತೀರ್ಥಹಳ್ಳಿ, ಸಾಗರಗಳಲ್ಲಿ ತಾವು ಇಂಜಿನಿಯರ್‌ಆಗಿ ಸೇವೆ ಸಲ್ಲಿಸಿರುವಿರಿ. ಆ ಕಾಲದಲ್ಲಿ ನಡೆದ ಯಾವುದಾದರೂ ಮಹತ್ವದ ವಿಚಾರವನ್ನು ತಾವು ಹೇಳಬಯಸುತ್ತೀರಾ?**

ನಾನು ಸಾಮಾನ್ಯವಾಗಿ ಕಣ್ಣಿಗೆ ಪಟ್ಟಿ ಹಾಕಿಕೊಂಡಿರೋ ಕುದುರೆ ರೀತಿ ಕೆಲಸ ಮಾಡಿದ್ದೋನು. ಹೆಚ್ಚಿನ ವಿಚಾರವೇನೂ ನೆನಪಿನಲ್ಲಿಲ್ಲ. ತೀರ್ಥಹಳ್ಳಿಯಲ್ಲಿ ವಾಟರ್‌ಟ್ಯಾಂಕ್ ಕಟ್ಟಿದ್ದು ನಾನು ಕೆಲಸಕ್ಕೆ ಸೇರಿದ ಹೊಸದರಲ್ಲೇ, ನಾನು ಎಕ್ಸಿಕ್ಯೂಟಿವ್ ಇಂಜಿನಿಯರ್‌ಆಗಿ ಸಾಗರದಲ್ಲಿ 1980-83ರಲ್ಲಿ ಸೇವೆ ಸಲ್ಲಿಸುವಷ್ಟು ಹೊತ್ತಿಗೆ ವ್ಯಾಪಕ ಬದಲಾವಣೆ ಸಮಾಜದಲ್ಲೇ ಆಗಿತ್ತು. ಜನಗಳಿಗೆ ನಮ್ಮ ಇಲಾಖೆ ಮೇಲೆ ವಿಶ್ವಾಸ ಕೂಡ ಇಳಿಮುಖವಾಗಿತ್ತು. ನಾನು ಕೆಲಸಕ್ಕೆ ಸೇರಿದ ಹೊಸದರಲ್ಲಿ ಚಿಕ್ಕಮಗಳೂರು ಜಿಲ್ಲೆಯ ಎನ್.ಆರ್. ಪುರದ ಮುಖ್ಯರಸ್ತೆ ಕಾಂಕ್ರೀಟ್ ರಸ್ತೆ ಮಾಡಿಸಿಕೊಟ್ಟಿದ್ದೆ. ಆಗೆಲ್ಲಾ ಜನ ನಮ್ಮನ್ನು ಎಷ್ಟೊಂದು ಗೌರವದಿಂದ ನೋಡುತ್ತಿದ್ದರು ಅಂತೀರಿ. ಆಗ ಕೊಪ್ಪದಲ್ಲಿ ಹೆಚ್.ಜಿ. ಗೋವಿಂದಗೌಡ ಅವರು ಒಂದು ಸಣ್ಣ ರೇಡಿಯೋ ಅಂಗಡಿ ಇಟ್ಟುಕೊಂಡಿದ್ದರು. ಅವರಿಂದಲೇ ಕಂತಿನ ಮೇಲೆ ನಾನು ಫಿಲಿಪ್ಸ್

ರೇಡಿಯೋ ಕೊಂಡಿದ್ದೆ. ಅದು ನನ್ನಲ್ಲಿ ಮೊನ್ನೆ ಮೊನ್ನೆ ತನಕ ಇತ್ತು. ಯಾಕೆ ಈ ಮಾತು ಹೇಳುತ್ತಿದ್ದೇನೆ ಎಂದರೆ ಅರವತ್ತರ ದಶಕದಲ್ಲಿ ರಾಜಕಾರಣಿ ಹಾಗು ಶ್ರೀಸಾಮಾನ್ಯನಲ್ಲಿ ಪರಸ್ಪರ ವಿಶ್ವಾಸ ಹಾಗು ನಂಬಿಕೆಯಿತ್ತು. ಎಸ್.ಆರ್. ಪುರದಲ್ಲಿ ಆ ಸಮಯದಲ್ಲಿ ಎಸ್.ಪಿ. ಗೋವಿಂದಗೌಡ ಎಂಬ ಸಮಾಜವಾದಿ ನಾಯಕರಿದ್ದರು. ತುಂಬ ಪ್ರಭಾವಶಾಲಿ ನಾಯಕರವರು. ಕಾಗೋಡು ಸತ್ಯಾಗ್ರಹದಿಂದಾಗಿ ಈ ಭಾಗದ ಹಿಂದುಳಿದವರಲ್ಲಿ ಒಂದು ತರಹದ ಸಂಘಟನೆ ನಡೆದಿತ್ತು. ಭೂರಹಿತ ಕೃಷಿಕರು ತಮಗೆ ಭೂಮಿ ಬೇಕೆಂದು ದೊಡ್ಡ ಧ್ವನಿಯಲ್ಲಿ ಹೇಳುವ ದೃಢ ಮನಸ್ಸು ಮಾಡಿದ್ದರು. ಇದೆಲ್ಲಾ ಆ ಕಾಲದಲ್ಲಿ ನಡೆಯುತ್ತಿದ್ದ ಜನಜಾಗೃತಿಯನ್ನು ತೋರಿಸುತ್ತಿತ್ತು.

*** ಉತ್ತರ ಕನ್ನಡದ ಸಿರಸಿ, ಸಿದ್ಧಾಪುರ, ವಿರಾಜಪೇಟೆ, ಮುಂಡಗೋಡುಗಳಲ್ಲಿ ಕೆಲಸ ಮಾಡಿದ ತಮಗೆ ಆಗಿನ ಪ್ರಮುಖ ರಾಜಕಾರಣಿ ರಾಮಕೃಷ್ಣಹೆಗಡೆ ಅವರ ಪರಿಚಯ ಹೇಗಿತ್ತು? ಅವರಿಂದೇನಾದರೂ ತಮಗೆ ಸ್ಫೂರ್ತಿ ದೊರೆಯಿತೆ? ಅಥವಾ ಕಿರಿಕಿರಿ ಅನುಭವಿಸಿದ ಸಂದರ್ಭ ಯಾವುದಾದರೂ ಉಂಟಾಯಿತೆ ?**

ನಾನು 1960 ರ ಸಮಯಕ್ಕೆ ಅಸಿಸ್ಟೆಂಟ್ ಇಂಜಿನಿಯರ್‌ಆಗಿ ಸಿದ್ದಾಪುರಕ್ಕೆ ಬಡ್ತಿ ಮೇಲೆ ಹೋದೆ. ಸಿದ್ದಾಪುರ, ವಿರಾಜಪೇಟೆ, ಮುಂಡಗೋಡುಗಳಲ್ಲಿ ಸುಮಾರು 13 ವರ್ಷ ಸೇವೆ ಸಲ್ಲಿಸಿದ್ದೇನೆ. ಅಷ್ಟು ಹೊತ್ತಿಗಾಗಲೇ ರಾಮಕೃಷ್ಣ ಹೆಗಡೆ ನಿಜಲಿಂಗಪ್ಪನವರ ಸಚಿವ ಸಂಪುಟದಲ್ಲಿ ಯೋಜನಾ ಖಾತೆಯ ಉಪಮಂತ್ರಿಯಾಗಿದ್ದರು. ನನಗೆ ರಾಮಕೃಷ್ಣ ಹೆಗಡೆ ಅವರ ನೇರ ಸಂಪರ್ಕ ತುಂಬ ಕಡಿಮೆ ಇತ್ತು. ಅವರ ಅಣ್ಣ ಗಣೇಶ ಹೆಗಡೆ, ಆಪ್ತ ಸಹಾಯಕರಾದ ರಾಮಪ್ಪನವರ ಒಡನಾಟ ಹೆಚ್ಚಿತ್ತು. ಗಣೇಶ ಹೆಗಡೆ ಅವರಂತೂ ತುಂಬಾ ಸ್ನೇಹಶೀಲ ವ್ಯಕ್ತಿ. ಅಧಿಕಾರಿಗಳಿಗೆ ಅವರನ್ನು ದುರುಪಯೋಗ ಮಾಡದೆ ಸೂಕ್ತ ನೆರವು ಕೊಡುವುದರಲ್ಲಿ ಅವರದು ಎತ್ತಿದ ಕೈ. ಅದೇ ರೀತಿ ರಾಮಪ್ಪ ಕೂಡ ತುಂಬ ಒಳ್ಳೆಯ ಕೆಲಸಗಾರ. ಅವರ ನೆನಪಿನ ಶಕ್ತಿಯಂತೂ ಅದ್ಭುತ. ಒಂದು ಕೆಲಸವನ್ನು ಒಮ್ಮೆ ಅವರಿಗೆ ಹೇಳಿದ್ದರೆ ಸಾಕಾಗುತ್ತಿತ್ತು. ಅದನ್ನು ಸಮರ್ಪಕವಾಗಿ ಮಾಡಿಯೇ ಹೆಗಡೆ ಅವರಿಗೆ ವರದಿ ಮಾಡುತ್ತಿದ್ದರು. ಶ್ರೀ ರಾಮಪ್ಪ ಸಾಗರ ತಾಲ್ಲೂಕಿನ ತಾಳಗುಪ್ಪದವರಾದ್ದರಿಂದ ಸಾಗರ ಲೋಕೋಪಯೋಗಿ ವಿಭಾಗಕ್ಕೆ ನನ್ನನ್ನು ಎಗ್ಜಿಕ್ಯುಟಿವ್ ಇಂಜಿನಿಯರನ್ನಾಗಿ ವರ್ಗಾಯಿಸಲು ರಾಮಪ್ಪ ಕಾರಣರು. ಇಲ್ಲಿ ಅನೇಕ ಅಭಿವೃದ್ಧಿ ಕೆಲಸಗಳನ್ನು ಮಾಡಿಸಿದ್ದೇನೆ. ಸಿರ್ಸಿ, ಸಿದ್ಧಾಪುರ ರಸ್ತೆ, ದೊಡ್ಡಮನೆತನಕ ರಸ್ತೆ ಇರಬಹುದು. ಚಿಗಳ್ಳಿ ಯೋಜನೆಯಾಗಬಹುದು. ಮುಂಡಗೋಡಿನ ಟಿಬೆಟ್ ಕಾಲೋನಿಗೆ ಮೂಲಭೂತ ಸೌಲಭ್ಯ ಕಲ್ಪಿಸುವುದೇ ಆಗಬಹುದು. ಸಣ್ಣವಳ್ಳಿ ಕೆರೆ ಆಗಬಹುದು. ನೆನಪಿನಲ್ಲಿ ಉಳಿಯುವಂತಹ ಅನೇಕ ಕೆಲಸಗಳನ್ನು ಮಾಡಿಸಿದ್ದೇನೆ. ಹೆಗಡೆ ಅವರು ಯೋಜನಾ ಖಾತೆಯ ಉಪಮಂತ್ರಿ ಹಾಗು ಪಂಚಾಯತ್‌ರಾಜ್ ಸಚಿವರಾಗಿದ್ದಾಗ ಅನೇಕ ಹೊಸ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಇವು ಕೇಂದ್ರ ಸರ್ಕಾರದ ಯೋಜನೆಗಳು ಆಗಿರಬಹುದು. ಸಮುದಾಯ ಅಭಿವೃದ್ಧಿ,

ಗ್ರಾಮೀಣ ರಸ್ತೆ ಅಭಿವೃದ್ಧಿ, ಗ್ರಾಮೀಣ ವಿದ್ಯುದೀಕರಣ, ಪ್ರಾಥಮಿಕ ಆರೋಗ್ಯ, ಕೇಂದ್ರ ಕಟ್ಟಡಗಳ ನಿರ್ಮಾಣ, ಕುಡಿಯುವ ನೀರಿನ ಯೋಜನೆ-ಹೀಗೆ ಅನೇಕ ಹೊಸ ಕಾರ್ಯಕ್ರಮಗಳು ಈ ಕಾಲದಲ್ಲಿ ಬೆಳಕಿಗೆ ಬಂದವು. ಅದನ್ನೆಲ್ಲಾ ನಾನು ಶ್ರದ್ಧಾಪೂರ್ವಕವಾಗಿ ಅನುಷ್ಠಾನಗೊಳಿಸಲು ಪ್ರಯತ್ನಿಸಿದ್ದೇನೆ. ಹೆಗಡೆ ಅವರ ಒಂದು ಸ್ವಭಾವ, ಬೆಳಗ್ಗೆಯೇ ವರ್ಕ್ಸ್ ಸ್ಪಾಟ್‌ಗೆ ಬಂದುಬಿಡುತ್ತಿದ್ದರು. ಅನೇಕ ಸಂದರ್ಭಗಳಲ್ಲಿ ಅವರನ್ನ ನಾನು ಕೆಲಸ ನಡೆಯುತ್ತಿದ್ದ ಸ್ಥಳದಲ್ಲೇ ಸ್ವಾಗತಿಸಿದ್ದೇನೆ. ಶಾಸಕರು, ಸಚಿವರುಗಳು ಆಸಕ್ತಿಪೂರ್ಣವಾಗಿ ಕೆಲಸ ನಡೆಯುತ್ತಿದ್ದ ಸ್ಥಳಕ್ಕೆ ಬಂದರೆ ಅಲ್ಲಿ ಕೆಲಸ ಮಾಡುತ್ತಿರುವ ಪ್ರಾಮಾಣಿಕ ಅಧಿಕಾರಿಗಳಿಗೂ ಉತ್ತೇಜನ ದೊರೆಯುತ್ತದೆ. ಸಾರ್ವಜನಿಕರು ಕೂಡ ಜನಪ್ರತಿನಿಧಿಗಳ ಬಗ್ಗೆ ಗೌರವ ಭಾವನೆ ತಾಳುತ್ತಾರೆ. ಹೆಗಡೆಯವರಾಗಲಿ, ಅವರಣ್ಣ ಗಣೇಶ ಹೆಗಡೆಯವರಾಗಲಿ ಆ ಭಾಗದಲ್ಲಿ ನನ್ನ ಹತ್ತು ವರ್ಷ ಸೇವಾವಧಿಯಲ್ಲಿ ತಮ್ಮ ಸ್ವಾರ್ಥಕ್ಕಾಗಿ ನನ್ನನ್ನು ಕಿಂಚಿತ್ತೂ ಬಳಸಿಕೊಳ್ಳದೆ ಇದ್ದುದು ಅವರ ದೊಡ್ಡತನ ತೋರಿಸುತ್ತದೆ.

*** ಸರ್ಕಾರಿ ಸೇವೆ ಮಾಡುತ್ತಿದ್ದಾಗಿನ ದಾಖಲು ಮಾಡಬೇಕಾದ ಅಂಶಗಳೇನಾದರೂ ಇವೆಯೇ?**

ಸರ್ಕಾರಿ ಸೇವೆಯಲ್ಲಿ ಎಲ್ಲ ಕಡೆ ಸಿಹಿ ಅನುಭವ ಆಗುವುದಕ್ಕೆ ಹೇಗೆ ಸಾಧ್ಯ? ನಾನು ಸಿದ್ದಾಪುರ ಉಪವಿಭಾಗದಲ್ಲಿ ಐದೂವರೆ ವರ್ಷ ಸೇವೆ ಸಲ್ಲಿಸಿದ ಮೇಲೆ ನನ್ನ ವೈಯಕ್ತಿಕ ಕೋರಿಕೆಯಂತೆ ಸ್ವತಃ ರಾಮಕೃಷ್ಣ ಹೆಗಡೆಯವರು ನನ್ನನ್ನು ಸಿದ್ದಾಪುರದಿಂದ ವಿರಾಜಪೇಟೆ ಉಪವಿಭಾಗಕ್ಕೆ ವರ್ಗ ಮಾಡಿಸಿಕೊಟ್ಟರು. ಆದರೆ ಈ ಮಧ್ಯೆ ಕೆಲವರ ಕಿತಾಪತಿಯಿಂದ ನನ್ನನ್ನು ವಿರಾಜಪೇಟೆಗೆ ಬದಲಾಗಿ ಮಂಗಳೂರಿಗೆ ವರ್ಗ ಮಾಡಿರುವ ವಿಷಯ ಹೆಗಡೆಯವರಿಗೆ ತಿಳಿದ ಕೆಲವೇ ಗಂಟೆಗಳಲ್ಲಿ ದೂರವಾಣಿ ಮುಖಾಂತರವೇ ವಿರಾಜಪೇಟೆ ಉಪವಿಭಾಗಕ್ಕೆ ಮತ್ತೆ ವರ್ಗ ಮಾಡಿಸಿಕೊಟ್ಟರು.

ಆಗ ನಾನು ಹತ್ತುಪೈಸೆ ಅಂತರದೇಶೀಯ ಪತ್ರಮುಖೇನ ನೈಜ ಪರಿಸ್ಥಿತಿಯನ್ನು ಗಣೇಶ ಹೆಗಡೆಯವರಿಗೆ ವಿವರಿಸಿ ವಾತಾವರಣವನ್ನು ತಿಳಿಗೊಳಿಸುವಂತೆ ವಿನಂತಿಸಿಕೊಂಡೆ. ಕೂಡಲೇ ಗಣೇಶ ಹೆಗಡೆಯವರು ತಮ್ಮ ಸ್ವಂತ ಖರ್ಚಿನಲ್ಲಿ ವಿರಾಜಪೇಟೆವರೆಗೆ ಬಂದು ನನ್ನೊಡನೆ ವಿಚಾರ ವಿನಿಮಯ ಮಾಡಿಕೊಂಡು ನಿಜ ಪರಿಸ್ಥಿತಿಯನ್ನು ರಾಮಕೃಷ್ಣ ಹೆಗಡೆಯವರಿಗೆ ಮನವರಿಕೆ ಮಾಡಿಕೊಟ್ಟು ಪರಿಸ್ಥಿತಿಯನ್ನು ತಿಳಿಗೊಳಿಸಿದರು. ಜೊತೆಗೆ ಅದೇ ವರ್ಷ ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡು ತಾಲ್ಲೂಕಿಗೆ ಹೊಸ ಲೋಕೋಪಯೋಗಿ ಇಲಾಖೆ ಉಪವಿಭಾಗವನ್ನು ಮಂಜೂರು ಮಾಡಿಸಿ ನನಗೆ ಆ ಉಪವಿಭಾಗದಲ್ಲಿ ಮತ್ತೆ ನಾಲ್ಕು ವರ್ಷ ಸೇವೆ ಸಲ್ಲಿಸಲು ಅವಕಾಶ ಮಾಡಿಸಿಕೊಟ್ಟರು.

1972ರಲ್ಲಿ ಬಂದ ಬರಗಾಲದಲ್ಲಿ ನಾನು ಕುಷ್ಟಗಿ ತಾಲ್ಲೂಕಿನಲ್ಲಿ ಕೆಲಸ ಮಾಡುತ್ತಿದ್ದೆ. ಶಾಸಕರಾದ ಕಾಂತರಾವ್ ದೇಸಾಯ್ ತುಂಬ ಒಳ್ಳೆಯ ಮನುಷ್ಯ. ಆಗ ಸಣ್ಣ ನೀರಾವರಿ

ಸಚಿವರಾಗಿದ್ದ ಎಸ್.ಬಿ. ನಾಗರಾಳ್ ಅವರು ಆಗಿನ ಲೋಕೋಪಯೋಗಿ ಇಲಾಖೆಯ ಮಂತ್ರಿಗಳಾಗಿದ್ದ ಚನ್ನಬಸಪ್ಪನವರಿಗೆ ಚಾಡಿ ಹೇಳಿ ಕಿತಾಪತಿ ಮಾಡಿದ್ದುಂಟು. ಆದರೆ ಸ್ಥಾನಿಕ ಮುಂದಾಳುಗಳೇ ಆ ಕಿತಾಪತಿಗೆ ಚನ್ನಬಸ್ಸಪ್ಪನವರಿಗೆ ತಕ್ಕ ಉತ್ತರ ಕೊಟ್ಟು ನನ್ನ ಗೌರವವನ್ನು ಹೆಚ್ಚು ಮಾಡಿದರು. ಬರಗಾಲ ಕಾಮಗಾರಿಯಿಂದ ಪ್ರಾಮಾಣಿಕವಾಗಿ ಕೆಲಸ ಮಾಡಿಸಿ, ಕುಷ್ಟಗಿ ತಾಲ್ಲೂಕಿನ ಎಲ್ಲ ಪ್ರಮುಖ ಹಳ್ಳಿಗಳಿಗಲ್ಲದೆ ತಾಲ್ಲೂಕಿನ ಅತ್ಯಂತ ಮೂಲೆಯ ಹಳ್ಳಿಯಾದ ರಾಮಪುರದಂತಹ ಹಳ್ಳಿಗೂ ಸಂಪರ್ಕ ರಸ್ತೆ ಮಾಡಿಸಿದೆ.

1978ರಲ್ಲಿ ಹೂವಿನಹಡಗಲಿಯಲ್ಲಿ ನಾನು ಕೆಲಸ ಮಾಡುತ್ತಿದ್ದಾಗ ಆಗಿನ ಅಲ್ಲಿನ ಶಾಸಕರೊಬ್ಬರು ಪ್ರತಿ ತಿಂಗಳು ತಮಗೆ ಮಾಮೂಲು ಕೊಡುವಂತೆ ಒತ್ತಾಯಿಸಿದರು. 'ಇಲ್ಲ ಸ್ವಾಮಿ, ನನ್ನ ಸರ್ವೀಸ್‌ನಲ್ಲಿ ಅದನ್ನ ಮಾಡಿಕೊಂಡು ಬಂದಿಲ್ಲವೆಂದು' ಖಡಾಖಂಡಿತವಾಗಿ ಹೇಳಿದೆ. ಪ್ರತಿಫಲ ನನಗೆ ತಕ್ಷಣ ಬೇರೆ ಉಪವಿಭಾಗಕ್ಕೆ ವರ್ಗಾವಣೆಯಾಯಿತು. ಈ ಶಾಸಕರು ನನ್ನ ಮೇಲಿನ ರೊಚ್ಚಿನಿಂದ ನನಗೆ ತಕ್ಷಣವೇ ಬರಬೇಕಾಗಿದ್ದ ಮುಂಬಡ್ತಿಯನ್ನು ಹಾಳು ಮಾಡಲು ಆಗಿನ ಲೋಕೋಪಯೋಗಿ ಇಲಾಖೆ ಮಂತ್ರಿಗಳಾಗಿದ್ದ ದೇವೇಂದ್ರಪ್ಪ ಘಾಳಪ್ಪನವರಿಗೂ ಹೇಳಿ ನೋಡಿದರು. ಪ್ರಯತ್ನಿಸಿ ವಿಫಲರಾದರು. ಆಮೇಲೆ ಕೆಲವೇ ದಿವಸಗಳಲ್ಲಿ ನಾನು ಹೂವಿನ ಹಡಗಲಿಯಿಂದ ಮುಂಬಡ್ತಿ ಮೇಲೆ ಸಾಗರಕ್ಕೆ ವರ್ಗಾವಣೆಯಾದೆ. ಆಗ ಇನ್ನೂ ಎಂ.ಪಿ. ಪ್ರಕಾಶ್‌ರವರು ಹೂವಿನ ಹಡಗಲಿಯಲ್ಲಿ ವಕೀಲಿ ವೃತ್ತಿ ಮಾಡುತ್ತಿದ್ದರು. ನಾನು ನಿವೃತ್ತನಾದಮೇಲೆ ಅವರು ಮಂತ್ರಿಗಳಾದರು. ಅವರಿಗೆ ಅಭಿನಂದನೆ ಹೇಳಲು ಅವರ ಮಂತ್ರಿ ಕಛೇರಿಗೆ ಹೋಗಿದ್ದೆ. ಆಗ ಅವರು ನನ್ನನ್ನು ಆತ್ಮೀಯತೆಯಿಂದ ಬರಮಾಡಿಕೊಂಡು ಅವರ ಭಾಗದಲ್ಲಿ ನಾನು ಸಲ್ಲಿಸಿದ ಸೇವೆ ಬಗ್ಗೆ ತುಂಬ ಮೆಚ್ಚುಗೆ ಮಾತನಾಡಿದರು. ಎಂಬತ್ತರ ದಶಕದಲ್ಲಿ ರಾಜ್ಯದ ರಾಜಕಾರಣದಲ್ಲಾದ ಬದಲಾವಣೆ ನಮ್ಮಂತಹ ಲೋಕೋಪಯೋಗಿ ಇಲಾಖೆಯ ಮೇಲೆ ತೀವ್ರತರವಾದ ಪ್ರಭಾವವನ್ನು ಬೀರಿತ್ತು. ಆತ್ಮಸಾಕ್ಷಿಯಿದ್ದಂತಹ ನಮ್ಮಂತಹ ಅಧಿಕಾರಿಗಳಿಗೆ ಇಂತಹ ವಾತಾವರಣದಲ್ಲಿ ಕೆಲಸ ಮಾಡುವುದು ಕಷ್ಟವೆಂದೇ ಹೇಳಬೇಕು. ಅಂತೂ ಹೇಗೋ ಸರ್ವೀಸನ್ನು ತೊಂದರೆಯಿಲ್ಲದೆ ಮುಗಿಸಿದೆ. ಅದೇ ನನ್ನ ಪಾಲಿಗೆ ತೃಪ್ತಿ.

*** ಉಪ್ಪಾರರ ಸಂಘಟನೆ ಮಾಡಲು ತಮಗೆ ದೊರೆತ ಪ್ರೇರಣೆ ಯಾವುದು? ಅದಕ್ಕೆ ಕಾರಣವೇನು?**

ಈಗಾಗಲೇ ನಿಮಗೆ ನನ್ನ ಬದುಕು ಚೆನ್ನಾಗಿ ತಿಳಿದಿದೆ. ನಾನು ಈ ಸ್ಥಿತಿಗೆ ಬರಲು ಅನೇಕ ಹಿರಿಯ ಚೇತನಗಳ ಕೃಪಾಶೀರ್ವಾದ ಕಾರಣವೆಂಬುದು ನನ್ನ ಪ್ರಾಮಾಣಿಕ ಅನಿಸಿಕೆ. ಇಂತಹ ಋಣ ನನ್ನ ಮೇಲೆ ಸದಾ ಕಾಲ ಇತ್ತು. ಅದನ್ನು ಬೇಕಾದರೆ ತಾವು ಜವಾಬ್ದಾರಿ ಎನ್ನಿ. ಪ್ರೌಢಶಾಲೆ ಹಾಗು ಇಂಟರ್‌ಮಿಡಿಯೇಟ್ ಓದಬೇಕಾದರೆ ತರೀಕೆರೆ, ಬೀರೂರು, ಚನ್ನಗಿರಿ, ಹೊಳೆಹೊನ್ನೂರು, ಶಿವಮೊಗ್ಗ, ಭದ್ರಾವತಿ ಮೊದಲಾದ ಗ್ರಾಮೀಣ ಪ್ರದೇಶಗಳಲ್ಲಿದ್ದ ನಮ್ಮವರ

ಮನೆಗಳಿಗೆ ಹೋಗಿ ಅವರಿಂದ ಸಣ್ಣ ಪುಟ್ಟ ಪ್ರಮಾಣದ ಆರ್ಥಿಕ ಸಹಾಯವನ್ನು ಪಡೆದಿದ್ದೇನೆ. ಆಗೆಲ್ಲಾ ಈ ಸಮಾಜದಲ್ಲಿನ ಯುವಕರಿಗೆ ಏನಾದರೂ ಮಾಡಬೇಕೆಂಬ ತುಡಿತ ನನ್ನಲ್ಲಿತ್ತು. ಉಪ್ಪಾರ ಸಮುದಾಯದವರೆಲ್ಲಾ ಸಂಘಟಿತರಾಗಿ ತಮ್ಮ ಬೇಕು ಬೇಡಗಳನ್ನು ಸಮಾಜದ ಮುಂದಿಡಬೇಕು. ಆಗ ಮಾತ್ರ ಏನಾದ್ರೂ ಆಗಬಹುದೆಂಬ ದೂರದ ಕನಸು ನನ್ನದು. ಈ ಹಿನ್ನೆಲೆಯಲ್ಲಿ ಉಪ್ಪಾರರ ಸಂಘಟನೆಗೆ ಮನಸ್ಸು ಮಾಡಿದೆ ಮತ್ತು ನಾನು ಸರ್ಕಾರಿ ಸೇವೆಯಿಂದ ನಿವೃತ್ತನಾದ ಕೆಲವೇ ತಿಂಗಳುಗಳಲ್ಲಿ ನನ್ನ ಸ್ವಂತ ಜಿಲ್ಲೆಯಾದ ಶಿವಮೊಗ್ಗ ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷನಾಗಿ ಅವಿರೋಧ ನೇಮಕಗೊಂಡೆ. 1984ರಲ್ಲಿ ರಾಜ್ಯಮಟ್ಟದ ಅಧ್ಯಕ್ಷನಾಗಿ ಅವಿರೋಧವಾಗಿ ನೇಮಕವಾಗುವವರೆಗೆ ಅಲ್ಲಿ ಸೇವೆ ಸಲ್ಲಿಸುವ ಭಾಗ್ಯ ನನ್ನದಾಗಿತ್ತು. ಸಚಿವರಾಗಿದ್ದ ಕಡಿದಾಳು ಮಂಜಪ್ಪನವರ ಆಶೀರ್ವಾದದಿಂದ ಶಿವಮೊಗ್ಗದಲ್ಲಿ ನಮ್ಮ ಸಮಾಜಕ್ಕೆ ನಿವೇಶನ ದೊರೆತಿತ್ತು. ಅಲ್ಲಿ ಕಟ್ಟಿದ್ದ ಹಾಸ್ಟೆಲ್ ಕಟ್ಟಡವನ್ನು ಅಭಿವೃದ್ಧಿಪಡಿಸಲು ಆ ಜಿಲ್ಲೆಯ ಮುಖಂಡರೊಡನೆ ನಾನೂ ದುಡಿದಿದ್ದೇನೆ.

*** ಉಪ್ಪಾರರನ್ನು ಸಂಘಟಿಸಲು ಮೊದಲು ತಾವು ಆಲೋಚಿಸಿದ ರೀತಿ ಯಾವುದು?**

ಉಪ್ಪಾರ ಸಮಾಜ ತಾವು ಊಹಿಸಲಾಗದ ವಿಶಿಷ್ಟ ಸಮಾಜ. ಅಲ್ಲಿ ಸಂಘಟನೆ ಮಾಡುವುದೆಂದರೆ ಅಷ್ಟು ಸುಲಭದ ಮಾತಲ್ಲ. ಅವರಿಗೆ ಮೊದಲಿಗೆ ತಾವು ಉಪ್ಪಾರರು ಎಂಬುದನ್ನ ಮನದಟ್ಟು ಮಾಡಿಕೊಡಬೇಕಾಯಿತು. ಕೀಳರಿಮೆಯಲ್ಲಿ ಬೇಯುತ್ತಿದ್ದ ಅವರಲ್ಲಿ ಆತ್ಮವಿಶ್ವಾಸ ತುಂಬಬೇಕಾಗಿತ್ತು. ಅದಕ್ಕಾಗಿ ನಾನು ಪ್ರತಿಯೊಂದು ಉಪ್ಪಾರ ಕುಟುಂಬವನ್ನು ಸಂಪರ್ಕಿಸಿ ಅವರೊಡನೆ ವೈಯಕ್ತಿಕ ಸ್ನೇಹ ಸಂಬಂಧವನ್ನು ವೃದ್ಧಿಸತೊಡಗಿದೆ. ಇಂತಹ ಸ್ನೇಹಶೀಲತೆಯಿಂದಾಗಿ ಅವರಲ್ಲಿ ನಂಬಿಕೆ ಮೂಡಿ ಅವರು ನನ್ನ ಜೊತೆ ಕೈ ಜೋಡಿಸಿದ್ದುಂಟು.

*** ಉಪ್ಪಾರ ಸಂಘದ ಅಧ್ಯಕ್ಷರಾಗಿ ಹನ್ನೊಂದು ವರ್ಷ ಕೆಲಸ ಮಾಡಿದ ಅನುಭವ ತಮ್ಮದು. ಈ ಸಂಘದ ಅಧ್ಯಕ್ಷರಾಗಲು ತಮಗೆ ಪ್ರೇರಣೆ ನೀಡಿದವರು ಯಾರು?**

1983ರಲ್ಲಿ ಸಾಗರದಲ್ಲಿ ಎಕ್ಸಿಕ್ಯೂಟೀವ್ ಇಂಜನಿಯರ್‌ಆಗಿ ನಿವೃತ್ತನಾದೆ. ಆಮೇಲೆ ಆಗಿನ ನನ್ನ ಸ್ವಂತ ಜಿಲ್ಲೆಯಾದ ಶಿವಮೊಗ್ಗ ಉಪ್ಪಾರ ಸಂಘದ ಜಿಲ್ಲಾ ಅಧ್ಯಕ್ಷನಾಗಿ ಅವಿರೋಧವಾಗಿ ಆಯ್ಕೆಗೊಂಡೆ. ಆ ಸಮಯದಲ್ಲಿ ನನ್ನ ಬಂಧು ಒಬ್ಬರು ರಾಜ್ಯ ಸಂಘದ ಅಧ್ಯಕ್ಷರಾಗಿದ್ದರು. 1984ರಲ್ಲಿ ಸಾಮಾನ್ಯ ಸಭೆ ನಡೆಯುವ ಹಿಂದಿನ ದಿನದಂದು ನಾನು ಹೆಚ್.ಸಿ. ನೀರಾವರಿ ಅವರ ಮನೆಗೆ ಹೋಗಿದ್ದೆ. ಅವರು ನೀವು ಸಂಘದ ಮುಂದಿನ ಅಧ್ಯಕ್ಷರಾಗಲು ಒಪ್ಪಿದರೆ ಮಾತ್ರ ನಾನು ಆ ಸಭೆಗೆ ಬರುತ್ತೇನೆ ಎಂದು ಒತ್ತಾಯ ಮಾಡಿದರು. "ಅಯ್ಯೋ ನಮ್ಮ ಬಂಧುಗಳೇ ಅಲ್ಲಿದ್ದಾರೆ. ಯಾಕೆ ಕುಟುಂಬದಲ್ಲಿ ಮನಸ್ತಾಪ" ಎಂದು ಸಬೂಬು ಹೇಳಿದೆ. ಆದರೆ ನೀರಾವರಿಯವರು ಬಿಲ್‌ಕುಲ್ ಒಪ್ಪದೇಹೋದರು. ಅನಿವಾರ್ಯವಾಗಿ ನಾನು ಸಮ್ಮತಿಸಲೇಬೇಕಾಯಿತು. ಅವರು ಹಾಗು ಪಿರಿಯಾಪಟ್ಟಣದ

ಡಾ. ತಮ್ಮಯ್ಯ ಮತ್ತು ಇತರ ಮಿತ್ರರು ಸೇರಿ ನನ್ನನ್ನು ಅವಿರೋಧವಾಗಿ ಉಪ್ಪಾರ ಸಂಘದ ಅಧ್ಯಕ್ಷರನ್ನಾಗಿಸಿದರು.

*** ಉಪ್ಪಾರ ಸಂಘದ ಅಧ್ಯಕ್ಷರಾದಮೇಲೆ ತಾವು ಹಾಕಿಕೊಂಡ ಕಾರ್ಯಕ್ರಮಗಳೇನು? ಅವುಗಳಲ್ಲಿ ಎಷ್ಟು ಅನುಷ್ಠಾನಗೊಂಡಿವೆ?**

ಉಪ್ಪಾರ ಸಂಘದ ಅಧ್ಯಕ್ಷನಾದಮೇಲೆ ನಾನು ಆ ಸಂಘದಡಿಯಲ್ಲಿ ರಾಜ್ಯದ ಎಲ್ಲ ಉಪ್ಪಾರ ಬಂಧುಗಳನ್ನು ಒಂದುಗೂಡಿಸಬೇಕೆಂದು ನಿಶ್ಚಯಿಸಿದೆ. ಅದಕ್ಕಾಗಿ ಬೀದರ್‌ನಿಂದ ಚಾಮರಾಜನಗರ, ಕೋಲಾರದಿಂದ ಮುಂಡಗೋಡು ತನಕ ಅನೇಕ ಸಾರಿ ರಸ್ತೆ ಸಾರಿಗೆ ಬಸ್‌ನಲ್ಲಿಯೇ ಪ್ರಯಾಣ ಮಾಡಿದೆ. ಒಮ್ಮೆ ಮನೆ ಬಿಟ್ಟು ಹೋದರೆ ಎಂಟೆಂಟು ದಿನ ಒಬ್ಬನೇ ಊರೂರು ಸುತ್ತುತ್ತಿದ್ದೆ. ಪ್ರತಿಯೊಂದು ತಾಲ್ಲೂಕಿನಲ್ಲೂ ಉಪ್ಪಾರರು ಹೆಚ್ಚಿರುವ ಹಳ್ಳಿಗೂ ಭೇಟಿ ಕೊಟ್ಟು ಅವರ ಪಡಸಾಲೆಯಲ್ಲಿ ಕುಳಿತು ಅವರ ಕಷ್ಟ ಸುಖವನ್ನು ಹಂಚಿಕೊಂಡೆ. ಅವರ ಮನೆಯಲ್ಲಿ ಊಟ ಮಾಡುತ್ತಾ ಸಮುದಾಯ ಏಕೆ ಸಂಘಟನೆಯಾಗಬೇಕು ಎಂಬುದನ್ನು ಅವರಿಗೆ ಬಿಡಿಸಿ ಹೇಳಿದೆ. ಆಯಾ ತಾಲ್ಲೂಕುಗಳಲ್ಲಿ ಉಪ್ಪಾರ ಕುಟುಂಬಕ್ಕೆ ಸಂಬಂಧಿಸಿದಂತೆ ಪೂರಕ ಮಾಹಿತಿ ಸಂಗ್ರಹಿಸಿದೆ. ಅದು ಸಂಪೂರ್ಣ ವೈಜ್ಞಾನಿಕ ರೀತಿಯ ಸರ್ವೆಯಾಗದಿದ್ದರೂ ಪ್ರಾಥಮಿಕ ಹಂತದ ಕ್ಷೇತ್ರಕಾರ್ಯವೆನ್ನಬಹುದು. ನಾನು ರಾಜ್ಯ ಸಂಘದ ಅಧ್ಯಕ್ಷನಾದಾಗ ಸಂಘಕ್ಕೆ ತನ್ನದೇ ಆದ ಕಛೇರಿ ಕೂಡ ಇರಲಿಲ್ಲ. ಸಂಘದ ಕಾಗದಪತ್ರಗಳೆಲ್ಲಾ ಪ್ರಧಾನ ಕಾರ್ಯದರ್ಶಿಯವರ ಇಲ್ಲವೇ ಆಗಿನ ಅಧ್ಯಕ್ಷರ ಮನೆಯಲ್ಲಿಯೇ ಇರುತ್ತಿದ್ದವು. ಸಂಘದ ಎಲ್ಲ ಸಭೆಗಳೂ ಬೆಂಗಳೂರಿನ ಬಳೇಪೇಟೆಯಲ್ಲಿರುವ ಸುಗ್ರೀವ ವೆಂಕಟರಮಣಸ್ವಾಮಿ ದೇವಸ್ಥಾನದಲ್ಲಿ ನಡೆಯುತ್ತಿದ್ದವು. ನಾನು ಅಧ್ಯಕ್ಷತೆಯ ಕಾರ್ಯಭಾರವನ್ನು ವಹಿಸಿಕೊಂಡ ಮೂರು ತಿಂಗಳಲ್ಲಿಯೇ ಒಂದು ಬಾಡಿಗೆ ಕಟ್ಟಡದಲ್ಲಿ ಕಛೇರಿ ಪ್ರಾರಂಭಿಸಿದೆ.

ಹೊಸದುರ್ಗ ತಾಲ್ಲೂಕಿನ ಬ್ರಹ್ಮವಿದ್ಯಾನಗರದಲ್ಲಿ ನಮ್ಮ ಸಮಾಜದ ಜಗದ್ಗುರುಗಳಾದ ಪೂಜ್ಯ ಲೇಪಾಕ್ಷ ಸ್ವಾಮಿಗಳವರು ಇರುತ್ತಿದ್ದರು. ಪೂಜ್ಯ ಜಗದ್ಗುರುಗಳವರು ಸಮಾಜದ ಬೆಳವಣಿಗೆಗೆ ಅವಶ್ಯಕವಾಗಿದ್ದ ರಾಜ್ಯಮಟ್ಟದ ಒಂದು ಸಂಘವನ್ನು 1972ರಲ್ಲಿ ಬೆಂಗಳೂರಿನಲ್ಲಿ ಅಂದಿನ ಮೈಸೂರು ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಮಧುವನಹಳ್ಳಿಯ ಶ್ರೀ ಮಸಣಶೆಟ್ಟಿಯವರ ಅಧ್ಯಕ್ಷತೆಯಲ್ಲಿ ನೋಂದಾಯಿಸಿದ್ದರು. 1972ರಿಂದ 80ರವರೆಗೆ ಪೂಜ್ಯ ಜಗದ್ಗುರುಗಳವರ ಮಾರ್ಗದರ್ಶನದಲ್ಲೇ ಆ ಸಂಘ ಕಾರ್ಯನಿರ್ವಹಿಸುತ್ತಿತ್ತು. ಅವರು 1980-84ರವರೆಗಿನ ಅವಧಿಯಲ್ಲಿ ರಾಜ್ಯ ಸಂಘದ ಆಗಿನ ಅಧ್ಯಕ್ಷರ ಸರ್ವಾಧಿಕಾರಿ ನಡವಳಿಕೆಗಳಿಗೆ ಬೇಸತ್ತು ಸಂಘದ ಚಟುವಟಿಕೆಗಳಿಂದ ದೂರ ಉಳಿದು ಹೊಸದುರ್ಗ ತಾಲ್ಲೂಕಿನಲ್ಲಿರುವ ತಮ್ಮ ಆಶ್ರಮಕ್ಕೆ ತಮ್ಮ ಚಟುವಟಿಕೆಗಳನ್ನು ಮಿತಿಗೊಳಿಸಿಕೊಂಡಿದ್ದರು. ನಾನು ಅಧ್ಯಕ್ಷನಾದಮೇಲೆ ಸಮಾಜದ ಜಗದ್ಗುರುಗಳವರ ಮಾರ್ಗದರ್ಶನ ಸಮಾಜದ ಬೆಳವಣಿಗೆಗೆ ಅವಶ್ಯಕವೆಂಬುದನ್ನು,

ಮನಗಂಡು ಸಂಘದ ಪ್ರಧಾನ ಕಾರ್ಯದರ್ಶಿಯವರಾದ ಶ್ರೀ ಎಂ. ಹನುಮಯ್ಯನವರೊಟ್ಟಿಗೆ ಜಗದ್ಗುರುಗಳೊಡನೆ ಸುದೀರ್ಘ ಸಮಾಲೋಚನೆ ಮಾಡಿ ಅವರ ಮನ ಒಲಿಸಿ ಜಗದ್ಗುರುಗಳು ಮತ್ತೆ ಸಮಾಜದ ಮತ್ತು ಸಂಘದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಿದೆವು. 1972ರಲ್ಲಿ ರಾಜ್ಯ ಸಂಘ ಸ್ಥಾಪಿತವಾದರೂ ಜಗದ್ಗುರುಗಳವರು 1984ರವರೆಗೆ ಬೆಂಗಳೂರಿಗೆ ಬಂದಾಗಲೆಲ್ಲಾ ಲಾಡ್ಜ್‌ನಲ್ಲಿ ಉಳಿಯುವ ಪ್ರಸಂಗವೇ ಇತ್ತು. ಬೆಂಗಳೂರಿನಲ್ಲಿ ಅನೇಕ ಉಪ್ಪಾರ ಕುಟುಂಬಗಳಿದ್ದಾಗ್ಯೂ ಅವರಿಗೆಲ್ಲಾ ನಮ್ಮ ಸಮಾಜದ ಜಗದ್ಗುರುಗಳಿಗೆ ಬೆಂಗಳೂರಿನಲ್ಲಿ ವಾಸ್ತವ್ಯಕ್ಕೆ ಒಂದು ಸೂಕ್ತ ವ್ಯವಸ್ಥೆ ಮಾಡುವ ಚಿಂತೆ ಇದ್ದಂತೆ ಕಾಣಲಿಲ್ಲ. ಆ ವಿಚಾರವೂ ಅವರಿಗೆ ಹೊಳೆದಿರಲಿಲ್ಲ. ಸಂಘ ಪ್ರಾರಂಭವಾಗಿ ಸುಮಾರು ಹದಿಮೂರು ವರ್ಷ ಕಳೆದಮೇಲೆ ನಾನು ಅಧ್ಯಕ್ಷನಾದ ಕೆಲವೇ ತಿಂಗಳುಗಳಲ್ಲಿ ಅವರಿಗೆ ಉಳಿಯಲು ಮತ್ತು ಸಂಘದ ಕಛೇರಿ ಉಪಯೋಗಕ್ಕೂ ಸೇರಿದಂತೆ ಒಂದು ಬಾಡಿಗೆ ಮನೆ ಮಾಡಿದೆ.

ಪ್ರತಿ ವರ್ಷ ರಾಜ್ಯಮಟ್ಟದಲ್ಲಿ ಭಗೀರಥ ಜಯಂತಿ ಆಚರಿಸಬೇಕು. ಹಿಂದುಳಿದ ಜನಾಂಗಗಳಲ್ಲಿ ದಯನೀಯ ಸ್ಥಿತಿಯಲ್ಲಿರುವ ಉಪ್ಪಾರ ಜನಾಂಗಕ್ಕೆ ಧ್ವನಿ ಕೊಡಬೇಕೆಂಬ ಆಶಯ ನನ್ನದಾಗಿತ್ತು. ಬೆಂಗಳೂರು ನಗರದಲ್ಲಿ ಸಂಘಕ್ಕೆ ಒಂದು ನಿವೇಶನ, ವಿದ್ಯಾರ್ಥಿ ನಿಲಯ, ವೃತ್ತಿ ಶಿಕ್ಷಣ ಕೇಂದ್ರ ಸ್ಥಾಪನೆಯಾಗಬೇಕೆಂದು ನಾನು ಕನಸು ಕಂಡಿದ್ದೆ. ಅದರಲ್ಲಿ ಕೆಲವಾದರೂ ನೆರವೇರಿದೆ. ಅದೇ ನನ್ನ ಭಾಗ್ಯ.

*** ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದಾಗ ನಿಮ್ಮ ಜೊತೆಗಿನ ಎಲ್ಲ ಪದಾಧಿಕಾರಿಗಳು ಏಕಮನಸ್ಕರಾಗಿ ದುಡಿದಿದ್ದರೆ ತಾವು ಇನ್ನಷ್ಟು ಪ್ರಗತಿ ಸಾಧಿಸಬಹುದಾಗಿತ್ತು ಎಂಬುದು ತಮ್ಮ ಅಭಿಪ್ರಾಯವೇ?**

ಖಂಡಿತ ನಿಮ್ಮ ಮಾತು ನಿಜ. ಸಮುದಾಯದ ಕೆಲಸ ಎಂದರೆ ಯಾರೊಬ್ಬರೂ ವೈಯಕ್ತಿಕವಾಗಿ ಮಾಡಿ ಮುಗಿಸುವಂತಹದ್ದಲ್ಲ. ಅದೊಂದು ತೇರು ಎಳೆಯುವ ಕಾರ್ಯದಂತೆ. ಒಬ್ಬರೇ ತೇರು ಎಳೆಯಲು ಹೋದರೆ ಅದೊಂದು ಅಸಾಧ್ಯವಾದ ಕೆಲಸವಾಗುತ್ತದೆ. ಎಲ್ಲರೂ ಕೈ ಜೋಡಿಸಿದರೆ ರಥದ ಗಾಲಿಗಳು ಉರುಳುತ್ತವೆ. ನಾನು ದಾವಣಗೆರೆಯಿಂದ ಪ್ರವಾಸ ಕಾರ್ಯಕ್ರಮ ನಿಶ್ಚಯ ಮಾಡಿಕೊಂಡು ಬೆಂಗಳೂರಿಗೆ ಬಂದರೆ ಸಂಘದ ಪ್ರಮುಖ ಪದಾಧಿಕಾರಿಗಳಿಂದ ನಾನೆಣಿಸಿದಷ್ಟು ಸಹಕಾರ ಸಿಗುತ್ತಿರಲಿಲ್ಲ. ಈ ಬಗ್ಗೆ ನನ್ನಲ್ಲುಂಟಾದ ಅಸಮಾಧಾನವನ್ನು ಸುದೀರ್ಘ ಪತ್ರಮುಖೇನ ಅವರಿಗೆ ತಿಳಿಸಿಯೂ ಇದ್ದೇನೆ. ಇದು ಬಹು ಜನರಿಗೆ ಗೊತ್ತಿರುವ ವಿಚಾರ.

*** ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದಕ್ಕೆ ವೈಯಕ್ತಿಕವಾಗಿ ಸಂಸಾರದಲ್ಲಿ ಸಾಕಷ್ಟು ನೋವನ್ನು ಅನುಭವಿಸಿದ್ದೀರೆಂದು ಕೆಲವರು ಹೇಳುತ್ತಾರೆ. ಇದು ನಿಜವೇ?**

ಸಂಘದ ಅಧ್ಯಕ್ಷ ಎಂಬುದು ನನ್ನ ದೃಷ್ಟಿಯಲ್ಲಿ ಅಧಿಕಾರ ಚಲಾಯಿಸುವ ಹುದ್ದೆಯಲ್ಲ.

ಸೇವೆ ಮಾಡಲು ಅಥವಾ ಸಮುದಾಯದ ಋಣವನ್ನು ತೀರಿಸಲು ಸಾಧನ ಮಾತ್ರ. ಕೆಲವರು ಇವನ್ನು ಬಳಸಿಕೊಂಡು ಲೌಕಿಕ ಪ್ರಯೋಜನ ಪಡೆಯಲು ಮುಂದಾಗುವವರಿದ್ದರು. ನಾನು ಅಧ್ಯಕ್ಷನಾದುದು ಅವರಿಗೆ ಈ ದೃಷ್ಟಿಯಿಂದ ಅಪಥ್ಯವೆನಿಸಿತು. ನನ್ನ ಬಗ್ಗೆ ಅವರಲ್ಲಿ ಅಸಹನೆ ಹೆಚ್ಚಾಯಿತು. ನಮ್ಮ ಕುಟುಂಬದಲ್ಲಾದ ಒಂದು ಆಘಾತವನ್ನು ಬಳಸಿಕೊಂಡು ನನ್ನ ಮುಖಕ್ಕೆ ಮಸಿ ಬಳಿಯಲು ವ್ಯವಸ್ಥಿತವಾಗಿ ಅವರು ಯೋಜಿಸಿದ್ದುಂಟು. ಆದರೆ ದೇವರು ದೊಡ್ಡವನು, ನನ್ನ ಸೊಸೆಯ ತಂದೆ-ತಾಯಿ ಹಾಗು ಆಕೆಯ ಹತ್ತಿರದ ಇತರ ಬಂಧುಗಳು ಮತ್ತು ಈ ಭಾಗದ ನಮ್ಮ ಸಮಾಜದ ಮುಂಚೂಣಿ ನಾಯಕರು ನಮ್ಮ ಕುಟುಂಬವನ್ನು ಹಾಗು ನನ್ನನ್ನು ಚೆನ್ನಾಗಿ ಬಲ್ಲವರಾಗಿದ್ದರು. ಅಂತಹ ಕಷ್ಟಕಾಲದಲ್ಲಿ ಅವರೆಲ್ಲಾ ನನ್ನನ್ನು ಆತುಕೊಂಡರು. ನಿಜಕ್ಕೂ ಅವರೇ ನನಗೆ ದೈವಸ್ವರೂಪಿಗಳು. ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಎಷ್ಟು ಕೆಳಗಿಳಿಯುತ್ತಾನೆಂಬುದು ಇಂದಿಗೂ ನನ್ನನ್ನು ಬಾಧಿಸುತ್ತಿರುವ ವಿಚಾರ.

*** ಬೆಂಗಳೂರಿನಲ್ಲಿ ಉಪ್ಪಾರ ಸಂಘಕ್ಕೆ ನಿವೇಶನ ಮಾಡಬೇಕೆಂಬ ತಮ್ಮ ಕನಸು ನೆರವೇರಲು ಕಾರಣಕರ್ತರು ಯಾರು?**

ಬೆಂಗಳೂರಿನಲ್ಲಿ ನಮ್ಮ ಸಮಾಜಕ್ಕೆ ಒಂದು ಸ್ವಂತ ನಿವೇಶನ ಇದ್ದರೆ ಅಲ್ಲೊಂದು ಕಟ್ಟಡ ಕಟ್ಟಿ ನಮ್ಮ ಜನಾಂಗದ ಜಗದ್ಗುರುಗಳು ಅಲ್ಲಿ ಉಳಿಯುವಂತೆ ಮಾಡಬೇಕೆಂಬ ಕನಸು ಬಹಳ ದಿನದ್ದು. ನಮ್ಮ ಎಲ್ಲ ಮುಖಂಡರುಗಳು ನಮಗೆ ನಿವೇಶನ ಕೊಡಿ ಎಂದು ಮಂತ್ರಿ ಮಹೋದಯರಿಗೆ ಹಾರ ತುರಾಯಿ ಕೊಟ್ಟು ಮನವಿ ಸಲ್ಲಿಸುತ್ತಲೇ ಬಂದಿದ್ದೆವು. ಆದರೆ ಪ್ರಯೋಜನ ಆಗಿರಲಿಲ್ಲ. ಅಚಾನಕ್ಕಾಗಿ ನಮ್ಮ ಎಚ್.ಸಿ. ನೀರಾವರಿ ಸಾಹೇಬ್ರು ಅವರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿಗಳಾದರು. ಅವರಿಗೆ ಈ ಬಗ್ಗೆ ನಾವೇನೂ ಹೇಳಬೇಕಾಗಿರಲಿಲ್ಲ. ಎಲ್ಲ ವಿಷಯಗಳು ಅವರಿಗೆ ತಿಳಿದಿದ್ದವು. ಆದ್ದರಿಂದ ನೀರಾವರಿಯವರ ಜೊತೆಗೆ ಆಗ ನಗರಾಭಿವೃದ್ಧಿ ಸಚಿವರಾಗಿದ್ದ ಟಿ.ಎನ್. ನರಸಿಂಹಮೂರ್ತಿಯವರನ್ನು ಭೇಟಿ ಮಾಡಿ ಮನವಿ ಮಾಡಿಕೊಂಡೆವು. ನೀರಾವರಿಯವರ ದಕ್ಷತೆ ಮತ್ತು ಕರ್ತವ್ಯ ಕೌಶಲದ ಬಗ್ಗೆ ಸಾಕಷ್ಟು ತಿಳಿದಿದ್ದ ನರಸಿಂಹಮೂರ್ತಿಯವರು ನಮ್ಮ ಮನವಿಗೆ ಸಕಾರಾತ್ಮಕವಾಗಿ ಸ್ಪಂದಿಸಿದರು. ಇದೇ ಸಂದರ್ಭದಲ್ಲಿ ನಮ್ಮಂತೆ ಇರುವ ಇತರ ಜಾತಿಗಳನ್ನು ಹುಡುಕಿ ನಿವೇಶನವನ್ನ ಕೊಡಲು ನೀರಾವರಿ ಕಾರಣಕರ್ತರಾದರು. ನಿವೇಶನ ಪಡೆಯಲು ಬಿಡಿಎಗೆ ಹಣ ಕಟ್ಟಲು ಸುಮಾರು 85,000 ರೂಪಾಯಿಗಳನ್ನು ಬೆಂಗಳೂರು ಉಪ್ಪಾರ ಬಂಧುಗಳು ನಮಗೆ ಕೂಡಿಸಿಕೊಟ್ಟರು.

ಈ ಸಂದರ್ಭದಲ್ಲಿ ಬೆಂಗಳೂರಿನ ಡಾ. ಎಸ್. ರಾಮಪ್ಪ, ಬಿ. ಎಂ. ರಾಮಯ್ಯ ದಿ। ಡಾ. ಎಂ. ಮುನಿವೆಂಕಟಸ್ವಾಮಿ, ಎಂ. ಹನುಮಯ್ಯ, ಅಹಲ್ಯಾದೇವಿ ವಿಜಯಸಾರಥಿ, ಸಿ. ಮುನಿಯಪ್ಪ, ಹನುಮಂತರಾಯಪ್ಪ ಮತ್ತು ನಮ್ಮ ಸಮಾಜದ ಹಲವಾರು ಗಣ್ಯರು ಉದಾರ

ಮನಸ್ಸಿನಿಂದ ಮಾಡಿದ ಸಹಾಯವನ್ನು ನೆನಪಿಸಿಕೊಳ್ಳುವುದು ನನ್ನ ಕರ್ತವ್ಯವಾಗಿದೆ ಎಂದು ಭಾವಿಸುತ್ತೇನೆ. ನಿವೇಶನ ಸಿಕ್ಕ ಕೂಡಲೇ ನಾನು ಹತ್ತು ಸಾವಿರ ಖರ್ಚು ಮಾಡಿ ಸ್ವಾಮೀಜಿಯವರು ಬೆಂಗಳೂರಿಗೆ ಬಂದಾಗ ಉಳಿದುಕೊಳ್ಳಲು ಅನುಕೂಲವಾಗುವಂತೆ ಒಂದು ತಾತ್ಕಾಲಿಕ ಕೊಠಡಿಯನ್ನು ನಿರ್ಮಿಸಿದೆ. ಒಟ್ಟಾರೆ ಅನೇಕರ ಪ್ರಯತ್ನದಿಂದಾಗಿ ನಮ್ಮ ಸಮುದಾಯಕ್ಕೆ ಒಂದು ನಿವೇಶನ ದೊರೆಯಿತು. ನೀರಾವರಿಯವರ ಹೆಚ್ಚಿನ ಪ್ರಯತ್ನದಿಂದಾಗಿ ಅವರ ಸ್ವಂತ ತಾಲ್ಲೂಕಾದ ಕುಷ್ಟಗಿಯ ಸಮಾಜ ಬಾಂಧವರಿಂದ ಬಂದ ದೇಣಿಗೆ ರೂ. 75000 ಗಳು ದೊರೆಯಿತು. ಅದನ್ನು ಉಪಯೋಗಿಸಿ ಈ ಚಿಕ್ಕ ಕೊಠಡಿಯನ್ನು ವಿಸ್ತರಿಸಿ ಈಗಿರುವ ಕಟ್ಟಡವನ್ನು ನಿರ್ಮಾಣ ಮಾಡಲಾಗಿದೆ.

*** ಬೆಂಗಳೂರಿನ ಕೇಂದ್ರ ಸ್ಥಾನದಲ್ಲಿ ತಮ್ಮ ಸಂಘಕ್ಕೆ ದೊರೆತ ನಿವೇಶನವನ್ನು ಹೇಗೆ ಬಳಸಿಕೊಳ್ಳಬೇಕೆಂದು ನಿರ್ಧರಿಸಿದ್ದೀರಿ? ಆ ಯೋಜನೆ ಅನುಷ್ಠಾನಗೊಳ್ಳದಿರುವ ಬಗ್ಗೆ ತಮಗೆ ನಿರಾಸೆ ಇದೆಯೆ?**

ಇದು ನನ್ನೊಬ್ಬನ ಯೋಜನೆ ಮಾತ್ರವಲ್ಲ. ನೀರಾವರಿಯವರು ಸಹ ಈ ಬಗ್ಗೆ ಸಾಕಷ್ಟು ಚಿಂತಿಸಿ ತಮ್ಮ ಅಪಾರ ಅನುಭವದೊಡನೆ ನೀಲಿನಕಾಶೆಯನ್ನು ತಯಾರಿಸಿದ್ದರು. 100' × 210' ಅಂತಹ ಅತಿ ದೊಡ್ಡ ನಿವೇಶನ ಬನಶಂಕರಿ 3ನೆಯ ಹಂತದಲ್ಲಿ ನಮ್ಮ ಸಮುದಾಯಕ್ಕೆ ದೊರಕಿರುವುದು ನಮ್ಮಗಳ ಭಾಗ್ಯ ಎಂದೇ ಹೇಳಬೇಕು. ಆ ನಿವೇಶನ ಕೂಡ ಅತ್ಯಂತ ಸೂಕ್ತವಾದ ಸ್ಥಳದಲ್ಲಿದೆ. ಅಲ್ಲಿ 16 ಕೊಠಡಿಗಳ ವಿದ್ಯಾರ್ಥಿನಿಲಯ ನಿರ್ಮಿಸಿದ್ದೇವೆ. ಸ್ವಾಮೀಜಿ ಅವರ ಪೂಜಾಮಂದಿರ ಹಾಗು ಭೋಜನಶಾಲೆ, ಕಟ್ಟಡದ ತಳಪಾಯದ ಕೆಲಸ ಮುಗಿದಿದೆ. ಉಳಿದ ನಿವೇಶನದಲ್ಲಿ ಸುಸಜ್ಜಿತವಾದ ಕಲ್ಯಾಣಮಂಟಪ ಕಟ್ಟಿಸಬೇಕೆಂಬ ಆಲೋಚನೆಯಿತ್ತು. ಈ ಯೋಜನೆಗೆ ರಾಷ್ಟ್ರೀಕೃತ ಬ್ಯಾಂಕೊಂದು ಸಾಲ ಕೊಡಲು ಸಮ್ಮತಿಸಿತ್ತು. ಈ ಬಗ್ಗೆ 1,37,000 ರೂಪಾಯಿ ಪಾವತಿ ಮಾಡಿ ಬಿಡಿಎಯಿಂದ ಲೈಸೆನ್ಸ್ ಕೂಡ ಪಡೆದಾಗಿತ್ತು. ಕಲ್ಯಾಣಮಂಟಪದಿಂದ ಪ್ರತಿವರ್ಷ ಐವತ್ತು ಲಕ್ಷ ರೂಪಾಯಿ ವರಮಾನ ಬರುತ್ತಿತ್ತು. ಉಪ್ಪಾರರು ಹೆಚ್ಚಿರುವ ಜಿಲ್ಲೆಗಳಲ್ಲಿ ಕೇಂದ್ರ ಟ್ರಸ್ಟಿನಿಂದಲೇ ಸಹಾಯ ಕೊಟ್ಟು ಒಂದೊಂದು ವಿದ್ಯಾರ್ಥಿನಿಲಯ ನಿರ್ಮಾಣ ಮಾಡಬೇಕು. ಎಲ್ಲೆಡೆ ಭಗೀರಥ ಜಯಂತಿ ಆಚರಿಸುವಂತೆ ಪ್ರೇರಣೆ ನೀಡಬೇಕು. ಬಿ.ಇ. ಎಂ.ಬಿ.ಬಿ.ಎಸ್. ಹಾಗು ಇತರ ತಾಂತ್ರಿಕ ವಿಷಯಗಳನ್ನು ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಕೊಡಬೇಕು. ಅನೇಕ ಗ್ರಾಮಗಳಲ್ಲಿ ಹಿರಿಯ ಉಪ್ಪಾರರು ತಮ್ಮ ಮಕ್ಕಳ ಹಾಗು ಇತರ ಬಂಧುಗಳ ಅವಗಣನೆಗೆ ಗುರಿಯಾಗಿ, ಜೀವನ ಸಾಗಿಸಲು ಭಿಕ್ಷೆ ಬೇಡಬಾರದು. ಅವರುಗಳ ಬದುಕಿನ ನಿರ್ವಹಣೆಗೆ ಬೇಕಾಗುವಷ್ಟು ಆಹಾರಧಾನ್ಯ ಹಾಗೂ ಇತರ ಸಹಾಯವನ್ನು ನೀಡುವ ಮಾನವೀಯತೆಯುಳ್ಳ ಚಿಂತನೆಯನ್ನು ನಾವುಗಳು ಮಾಡಿದ್ದೆವು. ನಾವು ನೆನೆಸಿಕೊಂಡಿದ್ದೆಲ್ಲಾ ಆಗುತ್ತದೆಯೇ? ದೈವದ ಮನಸ್ಸಿನಲ್ಲಿರುವುದಷ್ಟೇ ನೆರವೇರುವುದು.

*** ತಾವು ಇಡೀ ರಾಜ್ಯವನ್ನು ಸುತ್ತಿ ಉಪ್ಪಾರ ಜನಾಂಗದಲ್ಲಿ ಜಾಗೃತಿಯ ಕೈಂಕರ್ಯವನ್ನು ಕೈಗೊಂಡಿರುವಿರಿ. ಏಕೋ ಗೊತ್ತಿಲ್ಲ, ಅಷ್ಟೇ ಬೇಗ ಸಂಘದ ಸಂಪರ್ಕವನ್ನೂ ತೊರೆದಿರಿ. ಅಂದಮೇಲೆ ಉಪ್ಪಾರರ ಜಾಗೃತಿಯ ಕೆಲಸ ತಮ್ಮ ಕಣ್ಣೆದುರಲ್ಲೇ ತಟಸ್ಥ ಹೊಂದುತ್ತಿದೆಯೆಂದು ತಮ್ಮ ಭಾವನೆಯೆ?**

ನಾನು ಹಾಗೆ ಭಾವಿಸಿಕೊಳ್ಳುವುದಿಲ್ಲ. ನಾನು ಸಂಘ ತೊರೆದಮೇಲೆ ಯಾವ ಕೆಲಸ ಕೂಡ ಆಗುತ್ತಿಲ್ಲ ಎಂಬುದು ನನ್ನೊಬ್ಬನ ಭಾವನೆಯಲ್ಲ. ಇಡೀ ರಾಜ್ಯದ ಉಪ್ಪಾರ ಸಮಾಜದ ಅಳಲಾಗಿದೆ. ಜಾಗೃತಿ ಕೆಲಸ ಎಂಬುದು ರಿಲೇ ಓಟದಂತೆ. ರಿಲೇ ಓಟದಲ್ಲಿ ಒಬ್ಬ ಅಥ್ಲೆಟಿಕ್ ತುಸು ಅತ್ತ-ಇತ್ತ ನೋಡಿದರೂ ನೀವು ಗೆಲವು ಪಡೆಯಲು ಸಾಧ್ಯವಿಲ್ಲ. ನನ್ನಿಂದ ನಾನು ಅಧಿಕಾರ ಬಿಡುವ ಸಂದರ್ಭದಲ್ಲಿ ನಡೆದ ಘಟನೆಗಳ ಬಗ್ಗೆ ವಿಷಾದವಿದೆ. ಉಪ್ಪಾರ ಸಂಘಕ್ಕೆ ನಡೆದ ಚುನಾವಣೆ ಹೊಡೆದಾಟ ಬಡಿದಾಟದಿಂದ ಕೂಡಿತ್ತು ಎಂಬ ಅಪಖ್ಯಾತಿ ಬರಬಾರದೆಂಬ ಉದ್ದೇಶದಿಂದ ನಾನೇ ಚುನಾವಣಾ ಕಣದಿಂದ ಹಿಂದೆ ಸರಿದೆ. ಚಿಂತೆಯಿಲ್ಲ ಬಿಡಿ. ಮೂಲಭೂತವಾಗಿ ನಾನೊಬ್ಬ ಕೆಲಸಗಾರ. ಅವಕಾಶ ಸಿಕ್ಕಿದಷ್ಟು ಪ್ರಾಮಾಣಿಕವಾಗಿ ದುಡಿದಿದ್ದೇನೆ ಎಂಬ ಸಂತೃಪ್ತಿ ನನಗಿದೆ.

*** ಉಪ್ಪಾರರ ಜಾಗೃತಿಯಲ್ಲಿ ಶ್ರೀ ಶ್ರೀ ಪೂಜ್ಯ ಲೇಪಾಕ್ಷ ಸ್ವಾಮೀಜಿಯವರು ಗಣನೀಯ ಸೇವೆ ಸಲ್ಲಿಸಿರುವರೆಂದು ಹೇಳಲಾಗಿದೆ. ಆ ಬಗ್ಗೆ ತಮ್ಮ ಅನುಭವವೇನು?**

ಪೂಜ್ಯ ಲೇಪಾಕ್ಷ ಸ್ವಾಮೀಜಿಯವರು ಮಹಾತಪಸ್ವಿಗಳು ಹಾಗು ಕ್ರಿಯಾಶೀಲ ಕೆಲಸಗಾರರು. ಐವತ್ತರ ದಶಕದಲ್ಲಿ ಹೊಸದುರ್ಗ ತಾಲ್ಲೂಕಿನ ಬ್ರಹ್ಮವಿದ್ಯಾನಗರವನ್ನು ನಿರ್ಮಿಸಿದ್ದೇ ಅವರ ವ್ಯಕ್ತಿತ್ವಕ್ಕೆ ಶೋಭೆ ತರುವ ವಿಚಾರವಾಗಿದೆ. ಧಾರ್ಮಿಕ ಮಠಗಳು ಹಾಗು ರಾಜಕಾರಣಿಗಳು ಒಗ್ಗೂಡಿದರೆ ಹೇಗೆ ಸಮಾಜವನ್ನು ಸಂಘಟಿಸಬಹುದು ಎಂಬುದಕ್ಕೆ ನಮ್ಮೆದುರಿಗೆ ಆದಿಚುಂಚನಗಿರಿ ಸಂಸ್ಥಾನವಿದೆ. ಆ ನಂತರ ಅನೇಕ ಸಮುದಾಯದವರು ಧಾರ್ಮಿಕ ಮಠ ಕಟ್ಟಿಕೊಂಡು ತಮ್ಮ ಸಂಘಟನೆ ಮಾಡಿಕೊಂಡರು. ನಮ್ಮ ಸಮಾಜದ ಮಠಕ್ಕಾದರೂ ಅನೇಕ ವರ್ಷಗಳ ಇತಿಹಾಸವಿದೆ. ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ದೇವರಾಜ ಅರಸು ಮೊದಲಾದವರು ನಮ್ಮ ಪೂಜ್ಯ ಸ್ವಾಮೀಜಿ ಅವರ ಬಗ್ಗೆ ಅಪಾರ ಗೌರವ ಇಟ್ಟುಕೊಂಡಿದ್ದರು. ಅವರ ನೆರವನ್ನು ಸಮರ್ಪಕವಾಗಿ ಪಡೆದಿದ್ದರೆ ಈ ಸಮಾಜದ ಸಂಘಟನೆ ಮತ್ತಷ್ಟು ಬೇಗ ನಡೆಯುತ್ತಿತ್ತು. ಆದರೂ ಪೂಜ್ಯ ಲೇಪಾಕ್ಷ ಸ್ವಾಮೀಜಿಯವರು ಈ ಸಮಾಜದಲ್ಲಿ ಪಂಗಡಗಳ ಭೇದವನ್ನು ಮೂಲೋತ್ಪಾಟನೆ ಮಾಡಿ ನಾವೆಲ್ಲಾ ಒಂದೆಂಬ ಭಾವನೆ ಸ್ಫುರಿಸುವಂತೆ ಆಶೀರ್ವದಿಸಿದ್ದರು. ಅವರ ಒಪ್ಪಿಗೆ ಪಡೆದುಕೊಂಡು 1996ರಲ್ಲೇ ದಾವಣಗೆರೆ ಭಾಗದ ಸಮಾಜದ ಮುಂದಾಳುಗಳ ಪ್ರಯತ್ನದಿಂದ ಶಾಖಾಮಠವನ್ನು ಸ್ಥಾಪಿಸಲಾಗಿದೆ.

***ನಿವೃತ್ತಿಯ ನಂತರ ತಾವು ದಾವಣಗೆರೆಯನ್ನು ತಮ್ಮ ಕರ್ಮಭೂಮಿಯನ್ನಾಗಿ ಆರಿಸಿಕೊಳ್ಳಲು ಕಾರಣವೇನು? ಅಲ್ಲಿ ಕೈಗೊಂಡ ಪ್ರಗತಿಪರ ಕೆಲಸಗಳಾವುವು?**

ನಾನು ಕುಷ್ಟಗಿಯಲ್ಲಿ ಅಸಿಸ್ಟಂಟ್ ಎಕ್ಸಿಕ್ಯೂಟೀವ್ ಇಂಜಿನಿಯರ್ ಆಗಿದ್ದಾಗ 25,000 ರೂಪಾಯಿ ಸಾಲ ತೆಗೆದುಕೊಂಡು ದಾವಣಗೆರೆಯಲ್ಲಿ ಒಂದು ಮನೆ ಕಟ್ಟಿಸಿದ್ದೆ. ಕೆಲಸಕ್ಕೆ ಸೇರಿ 20 ವರ್ಷಗಳ ನಂತರ ನಾನು ಮನೆ ಕಟ್ಟಿದ್ದು. ನಾನು ಕೇಳಿದ್ದರೆ ಹೆಗಡೆ ಅವರೋ, ಅವರ ಆಪ್ತ ಸಹಾಯಕರಾದ ರಾಮಪ್ಪನವರೋ ನನಗೆ ಬೆಂಗಳೂರಿನಲ್ಲಿ ಸೈಟ್ ಕೊಡಿಸಲು ಸಹಾಯ ಮಾಡುತ್ತಿದ್ದರು. ಆದರೆ ಬೆಂಗಳೂರಿನಲ್ಲಿ ಸೈಟ್ ಕೊಳ್ಳುವಷ್ಟು ಆರ್ಥಿಕ ಚೈತನ್ಯ ಕೂಡ ನನ್ನಲ್ಲಿರಲಿಲ್ಲ. ಬಾಲ್ಯದಲ್ಲಿ ನನ್ನನ್ನು ಸಲಹಿದ ಅನೇಕ ಜನರಿಗೆ ನಾನು ನೆರವಾಗಬೇಕಾಗಿತ್ತು. ನಮಗೆ ನಾಲ್ಕು ಮಕ್ಕಳು. ಜೊತೆಗೆ ಉಪ್ಪಾರ ಸಮಾಜಕ್ಕಾಗಿ ಓಡಾಟ-ಹೀಗೆ ಬರುತ್ತಿದ್ದ ಸಂಬಳವೆಲ್ಲಾ ಅಲ್ಲಿಂದಲ್ಲಿಗೆ ಸರಿಹೋಗುತ್ತಿತ್ತು. ದಾವಣಗೆರೆಯಲ್ಲಿ ನಾನು ವಾಸ್ತವ್ಯ ಹೂಡಲು ಕಾರಣ ಈ ಭಾಗದಲ್ಲಿ ನಮ್ಮವರು ಬಹಳ ಸಂಖ್ಯೆಯಲ್ಲಿದ್ದಾರೆ. ಅವರೆಲ್ಲಾ ಅತ್ಯಂತ ಸುಸಂಸ್ಕೃತರು. ದಾವಣಗೆರೆಯಲ್ಲೇ ಉಳಿದಿರುವ ಜೀವಿತದ ಕಾಲವನ್ನು ಕಳೆಯುತ್ತೇನೆ. 1994-95ರಿಂದ ರಾಜ್ಯಸಂಘದ ಚಟುವಟಿಕೆಗಳಿಂದ ನಿವೃತ್ತನಾದಮೇಲೆ ಈ ಭಾಗದಲ್ಲಿ ನಾನು ಸಲ್ಲಿಸುತ್ತಿರುವ ಸೇವೆಯೇನೂ ನನಗೆ ನಿರಾಶೆಯನ್ನೇನು ಉಂಟು ಮಾಡಿಲ್ಲ. ಈ ಭಾಗದ ಸಮಾಜ ಬಂಧುಗಳೆಲ್ಲಾ ಸೇರಿ ದಾವಣಗೆರೆಯಲ್ಲಿ ಹದಿನಾರು ಕೊಠಡಿಗಳ ಸುಸಜ್ಜಿತ ವಿದ್ಯಾರ್ಥಿನಿಲಯವನ್ನು ನಿರ್ಮಾಣ ಮಾಡಿದ್ದಾರೆ. ಇದರಲ್ಲಿ ನನ್ನದೂ ಕೊಂಚ ಶ್ರಮ ಸೇರಿದೆ ಎನ್ನುವ ಸಮಾಧಾನ ನನಗಿದೆ. ಅಲ್ಲದೆ ದಾವಣಗೆರೆಯಲ್ಲಿ ನಮ್ಮ ಸಮಾಜದ ಮೊದಲನೇ ಶಾಖಾಮಠವನ್ನು ಪ್ರಾರಂಭಿಸಲಾಗಿದೆ. ಇದನ್ನು ಸ್ಥಾಪಿಸುವಲ್ಲಿ ಈ ಭಾಗದ ಸಮಾಜದವರು ನನ್ನ ಹಿಂದೆ ಬಂಡೆಯಂತೆ ನಿಂತು ನನಗೆ ಶಕ್ತಿ ತುಂಬಿರುವುದಕ್ಕೆ ಅವರುಗಳನ್ನು ತುಂಬು ಹೃದಯದಿಂದ ಅಭಿನಂದಿಸುತ್ತೇನೆ. ಅಲ್ಲದೆ ನನ್ನಂತಹ ಒಬ್ಬನಿಲ್ಲದಿದ್ದರೂ ಇನ್ನು ಮುಂದೆ ಈ ಶಾಖಾಮಠದಿಂದ ಈ ಭಾಗದ ಉಪ್ಪಾರರ ಸಂಘಟನೆ ಮತ್ತು ಜಾಗೃತಿಯ ಕೆಲಸ ನಿರಂತರವಾಗಿ ನಡೆಯುತ್ತದೆ ಎಂಬ ಭರವಸೆ ನನ್ನದು.

*** ತಮ್ಮ ಸಮಾಜ ಸೇವೆಯಲ್ಲಿ ಮನೆಯವರು ನೀಡಿದ ಸಹಕಾರ ಎಷ್ಟರ ಮಟ್ಟಿನದು?**

ಪ್ರತಿಯೊಬ್ಬ ಯಶಸ್ವಿ ಪುರುಷನ ಹಿಂದೆ ಒಬ್ಬ ಮಹಿಳೆ ಇರುತ್ತಾಳೆಂಬುದು ಲೋಕೋಕ್ತಿ. ನನ್ನ ಧರ್ಮಪತ್ನಿ ಸಣ್ಣಮ್ಮ ಈಗಾಗಲೇ ಎಪ್ಪತ್ತನ್ನು ದಾಟಿದ್ದಾಳೆ. ಪ್ರತಿನಿತ್ಯ ಬೆಳಿಗ್ಗೆ ನಾನು ಆರು ಗಂಟೆಗೆ ಮನೆ ಬಿಡುವ ಮೊದಲು ನನಗೆ ತಿಂಡಿ ಮಾಡಿಕೊಡುತ್ತಾಳೆ. ನಾನು ನನ್ನ ಸಂಸಾರದ ಜವಾಬ್ದಾರಿಯನ್ನು ಹಂಚಿಕೊಂಡವನೇ ಅಲ್ಲ. ಅದನ್ನೆಲ್ಲಾ ಆಕೆಯೇ ನಿರ್ವಹಿಸಿದ್ದಾಳೆ. ನಮಗೆ ಇಬ್ಬರು ಹೆಣ್ಣುಮಕ್ಕಳು, ಇಬ್ಬರು ಗಂಡುಮಕ್ಕಳು. ದೊಡ್ಡ ಮಗ ಬೆಂಗಳೂರಿನಲ್ಲಿ ರಕ್ಷಣಾ

ಇಲಾಖೆಯಲ್ಲಿದ್ದಾನೆ. ನಂಜನಗೂಡಿನಲ್ಲಿದ್ದ ದೊಡ್ಡ ಅಳಿಯ ಹಠಾತ್ತನೆ ಮೂರು ವರ್ಷದ ಹಿಂದೆ ತೀರಿಹೋದರು. ಮತ್ತೊಬ್ಬ ಮಗಳು ಬೆಳಗಾಂನಲ್ಲಿ ಗಂಡನ ಮನೆಯಲ್ಲಿ ಸುಖವಾಗಿದ್ದಾಳೆ. ಕೊನೆ ಮಗ ದಾವಣಗೆರೆಯಲ್ಲಿ ನನ್ನ ಜೊತೆ ಇದ್ದಾನೆ. ಹೇಳ್ಬೇಕಾದ್ರೆ ನನ್ನ ಸಂಸಾರದಲ್ಲಿ ಯಾವುದೇ ದೊಡ್ಡ ಕೊರತೆ ಕಾಣುತ್ತಿಲ್ಲ.

*** ಉಪ್ಪಾರ ಜನಾಂಗಕ್ಕೆ ಸೇವೆ ಸಲ್ಲಿಸಿದ ಮಹನೀಯರುಗಳಾರೆಂಬುದನ್ನೇನಾದರೂ ಹೇಳಬಲ್ಲಿರಾ?**

ಉಪ್ಪಾರ ಸಮುದಾಯಕ್ಕೆ ಅನೇಕ ನಾಯಕರು ಸಹಾಯ ಮಾಡಿದ್ದಾರೆ. ಅವರು ಜನ್ಮತಃ ಉಪ್ಪಾರರಲ್ಲದೇಹೋದರೂ, ಮಾನವೀಯ ಅನುಕಂಪದಿಂದ ಈ ಸಮಾಜಕ್ಕೆ ಸೇವೆ ಸಲ್ಲಿಸಿದ್ದಾರೆ. ನಮ್ಮ ಸಮುದಾಯದವರೆಂದರೆ ಬೆಳ್ಳೂರು ತಮ್ಮಯ್ಯ, ಈ ಹಿಂದೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು. ಅನಂತರ ಕುಣಿಗಲ್ ವೆಂಕಟಪ್ಪ, ಮಸಣಸೆಟ್ಟಿ, ಜವರಾಯಿಸೆಟ್ಟಿ ಇತ್ಯಾದಿ. ನಮ್ಮ ಸಮಾಜಕ್ಕೆ ಸಹಾಯ ಮಾಡಿದ ಇತರರೆಂದರೆ ಕಡಿದಾಳು ಮಂಜಪ್ಪ, ಡಿ. ದೇವರಾಜ ಅರಸು, ಎಸ್. ಬಂಗಾರಪ್ಪ, ಎಂ. ವೀರಪ್ಪ ಮೊಯಿಲಿ, ಭೀಮಪ್ಪನಾಯ್ಕ್, ಟಿ.ಎನ್. ನರಸಿಂಹಮೂರ್ತಿ ಮುಂತಾದವರು.

*** ಉಪ್ಪಾರ ಜನಾಂಗಕ್ಕೆ ಆಗಬೇಕಾದ ರಚನಾತ್ಮಕ ಕೆಲಸಗಳು ತಮ್ಮ ದೃಷ್ಟಿಯಿಂದ ಯಾವುವು?**

ಒಂದು ಜನಾಂಗದ ಭವಿಷ್ಯವನ್ನು ಊಹಿಸುವ ಪ್ರವಾದಿ ನಾನಾಗಲಾರೆ. ಏನೋ ನನಗೆ ತಿಳಿದ ಮಟ್ಟಿಗೆ ಒಂದಿಷ್ಟು ಕೆಲಸ ಮಾಡಿಕೊಂಡು ಬಂದಿದ್ದೇನೆ. ನನಗೆ ನನ್ನ ಕೆಲಸ ಮಾತ್ರ ಗೊತ್ತೇ ಹೊರತು ಇತರ ವಿಚಾರದ ಬಗ್ಗೆ ಅಂತಹ ಆಸಕ್ತಿಯಿಲ್ಲ. ಆದರೂ ತಾವು ಹೇಳಿದ ವಿಚಾರವಾಗಿ ಚಿಂತಿಸತೊಡಗಿದರೆ ಉಪ್ಪಾರರು ಮೊದಲು ಭಾವನಾತ್ಮಕವಾಗಿ ಒಂದಾಗಬೇಕು. ಪ್ರಾಂತ್ಯಭೇದ ಹಾಗು ಒಳಪಂಗಡಗಳ ಸುಳಿಯಿಂದ ಹೊರಬರಬೇಕು. ಗ್ರಾಮದ ಮುಗ್ಧ ಉಪ್ಪಾರರನ್ನು ತಲುಪುವ ಕನಿಷ್ಠ ಕಾರ್ಯಕ್ರಮವನ್ನು ಟ್ರಸ್ಟು, ಸಂಘ ಮತ್ತು ಸಮಾಜದ ಜಗದ್ಗುರುಗಳು ಹಾಕಿಕೊಳ್ಳಬೇಕು. ಉಪ್ಪಾರರಿಗೆ ಚಿನ್ನಪ್ಪರೆಡ್ಡಿ ಆಯೋಗದ ಅನುಷ್ಠಾನದಿಂದಾಗಿ ಅನೇಕ ಸವಲತ್ತುಗಳು ದೊರಕಿವೆ. ಅದರಲ್ಲೂ ವೀರಪ್ಪ ಮೊಯಿಲಿಯವರು ನಮ್ಮಂತಹ ತುಳಿತಕ್ಕೊಳಗಾದ ಅತ್ಯಂತ ಹಿಂದುಳಿದವರ ಮೇಲೆ ಇರಿಸಿದ ಅನುಕಂಪ ಸ್ಮರಣಾರ್ಹವಾದುದು. ಆಗ ವೀರಪ್ಪ ಮೊಯಿಲಿಯವರ ಆಪ್ತ ಕಾರ್ಯದರ್ಶಿಯವರಾಗಿದ್ದ ನೀರಾವರಿಯವರ ಚಾಣಾಕ್ಷ ಕಾರ್ಯದಕ್ಷತೆಯಿಂದ ಪ್ರವರ್ಗ Iಕ್ಕೆ ಈ ಸಮಾಜ ಸೇರ್ಪಡೆಯಾಗಿದೆ. ಕಾರಣ ನಮ್ಮವರಿಗೆ ಉದ್ಯೋಗಾವಕಾಶಗಳು ಸಾಕಷ್ಟು ಮಟ್ಟಿಗೆ ದೊರಕುತ್ತಿವೆ. ಸಿಇಟಿನಲ್ಲೂ ನಮ್ಮ ಹುಡುಗರಿಗೆ ಇಂಜಿನಿಯರಿಂಗ್ ಹಾಗು ಮೆಡಿಕಲ್ ಸೀಟುಗಳು ದೊರಕುತ್ತಿವೆ. ಇದೆಲ್ಲಾ ಲೌಕಿಕ ಪ್ರಯೋಜನ ಪಡೆಯಲು ಅವರುಗಳು ಉಪ್ಪಾರ ಜನಾಂಗದಲ್ಲಿ ಹುಟ್ಟಿರುವುದು ಕಾರಣ ಎಂಬುದನ್ನು

ಮರೆಯಬಾರದು. ಸವಲತ್ತಿನ ಉಪಯೋಗಕ್ಕೆ ಈ ಸಮುದಾಯ, ಬೇರೆಯದಕ್ಕೆ ಮತ್ತೊಂದು ಎಂದು ವಿದ್ಯಾವಂತ ಉಪ್ಪಾರರು ಯೋಚಿಸಬಾರದು. ಅವರುಗಳು ಸ್ವಾರ್ಥಿಗಳಾದರೆ ಅವರಿಗೆ ಜೀವನದಲ್ಲಿ ಭದ್ರತೆ ಗಳಿಸಿಕೊಳ್ಳಲು ಮೆಟ್ಟಿಲಾದ ಈ ಸಮಾಜದ ಭವಿಷ್ಯವೇ ಮಸುಕಾಗುತ್ತದೆ. ತಮ್ಮ ಉತ್ಪನ್ನದಲ್ಲಿ ಶೇ. 10 ರಷ್ಟನ್ನಾದರೂ ಜನಾಂಗದ ಒಳಿತಿಗೆ ಮೀಸಲಿಡಲೇಬೇಕು ಎಂಬುದು ನನ್ನ ಕಳಕಳಿಯ ಅನಿಸಿಕೆ.

ಉಪ್ಪಾರರಿಗೆ ರಾಜ್ಯಮಟ್ಟದಲ್ಲಿ ರಾಜಕೀಯ ಅಧಿಕಾರ ದೊರೆಯುವ ತನಕ ಆ ಸಮುದಾಯದಲ್ಲಿ ಪ್ರಬಲ ನಾಯಕತ್ವ ಮೂಡುವುದಿಲ್ಲ. ಶಾಸಕರು, ಮಂತ್ರಿಗಳು-ಹೀಗೆ ರಾಜಕೀಯ ಅಧಿಕಾರಿಗಳು ದೊರೆತಾಗ ತನಗೆ ತಾನೇ ಈ ಸಮುದಾಯ ಮುಂಚೂಣಿಗೆ ಬರುತ್ತದೆ. ಇದಕ್ಕೆ ರಾಜ್ಯದ ಎಲ್ಲ ಉಪ್ಪಾರರೂ ಒಮ್ಮತದಿಂದ ಚಿಂತಿಸಿ ಕಾರ್ಯಪ್ರವೃತ್ತ ರಾಗಬೇಕು.

ಯಾವುದೇ ಜನಾಂಗ ಮುಂದೆ ಬರಬೇಕಾದರೆ ಅಲ್ಲಿ ಸಾಂಸ್ಕೃತಿಕ ಲೋಕದ ವ್ಯಕ್ತಿಗಳು ತುಂಬ ಪ್ರಮುಖ ಪಾತ್ರವಹಿಸುತ್ತಾರೆ. ನಮ್ಮ ಸಮಾಜದಲ್ಲಿ ಅನೇಕ ಸೃಜನಶೀಲ ಪ್ರತಿಭೆಗಳು ಈಗೀಗ ಕಾಣಿಸಿಕೊಳ್ಳುತ್ತಿವೆ. ಅಂತಹವರ ಸಂಖ್ಯೆಯನ್ನು ಮತ್ತಷ್ಟು ವೃದ್ಧಿಗೊಳಿಸುವತ್ತ ನಮ್ಮ ಸಮಾಜ ಚಿಂತನೆ ಮಾಡಬೇಕು.

*** ಬದುಕಿನುದ್ದಕ್ಕೂ ತಾವು ಉಪ್ಪಾರರ ಕ್ಷೇಮಾಭಿವೃದ್ಧಿಯನ್ನು ಹಗಲಿರುಳು ಚಿಂತಿಸಿರುವಿರಿ. ತಮ್ಮ ಸಾಧನೆ ತಮಗೆ ಸಂತೃಪ್ತಿ ತಂದಿದೆಯೆ?**

ನಾನು ಮತ್ತೆ ಮತ್ತೆ ಹೇಳಬೇಕಾದ ವಿಚಾರವೆಂದರೆ ನಾನು ಯಾವುದೋ ಮಹತ್ವದ ವಿಚಾರವನ್ನು ಸಾಧಿಸಿದ್ದೇನೆಂಬ ಭ್ರಮೆ ನನಗಿಲ್ಲ ಅಥವಾ ಋಣ ತೀರಿಸಿದ್ದೇನೆಂಬ ಅಹಂಕಾರ ಕೂಡ ಇಲ್ಲ. ಒಂದು ಅವಕಾಶ ನನಗೆ ದೊರಕಿತ್ತು. ನನ್ನನ್ನು ಪೋಷಿಸಿ ಬೆಳೆಸಿದ ಸಮಾಜದ ಸ್ಥಿತಿಗತಿಯನ್ನು ಚಿಂತಿಸುವ ಅವಕಾಶ ಇದಾಗಿತ್ತು. ಸಣ್ಣ ಪ್ರಮಾಣದಲ್ಲಿ ಇದನ್ನು ನಾನು ಮಾಡಿದ್ದೇನೆ. ಅವಕಾಶ ದೊರಕಿದ್ದಕ್ಕೆ ಸಂತೃಪ್ತಿಯಿದೆ. ಸಮಾಜಕ್ಕೆ ಇನ್ನೂ ಬಹಳಷ್ಟು ಕೆಲಸಗಳಾಗಬೇಕೆಂಬ ಆಕಾಂಕ್ಷೆ ಇದೆ.

*** ಹಿಂದುಳಿದವರ ಐಕ್ಯತೆಯೆಂಬುದು ಪ್ರಸ್ತುತ ಸ್ಥಿತಿಯಲ್ಲಿ ಕನಸಿನ ಮಾತು ಎನ್ನುತ್ತಾರೆ ಕೆಲವರು. ಇದರ ಬಗ್ಗೆ ತಮ್ಮ ಅಭಿಪ್ರಾಯವೇನು?**

ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯ ಹಿನ್ನಲೆಯಲ್ಲಿ ತಾವು ಈ ಮಾತನ್ನು ಆಡಿರಬಹುದು. ಸರ್ಕಾರಗಳೇ ತಮ್ಮ ಜವಾಬ್ದಾರಿಯನ್ನು ಕಳಚಿಕೊಂಡು ಎಲ್ಲವನ್ನೂ ಖಾಸಗಿಯವರಿಗೆ ಒಪ್ಪಿಸುತ್ತಿರುವ ಹಿನ್ನಲೆಯಲ್ಲಿ ಹಿಂದುಳಿದವರ ಐಕ್ಯತೆಯ ಅಗತ್ಯವಾದರೂ ಏನಿದೆ ಎಂಬುದು ತಮ್ಮ ಮಾತಿನ ಆಂತರ್ಯವಿರಬಹುದು. ಹಿಂದುಳಿದ ಹಾಗು ಬಡವರ ಓಟಿನ ಮೇಲೆ ಅಧಿಕಾರಕ್ಕೆ ಬಂದ ಪ್ರಜಾಸರ್ಕಾರಗಳು ಅನಂತರ ಬಂಡವಾಳಶಾಹಿಗಳ

ಕೈಗೊಂಬೆ ಯಾಗುತ್ತಿರುವುದು ದುರ್ದೈವದ ವಿಚಾರ. ಚಿಂತೆಯಿಲ್ಲ, ನನಗೆ ಭವಿಷ್ಯದಲ್ಲಿ ನಂಬಿಕೆಯಿದೆ. ಈ ದೇಶದ ಹಿಂದುಳಿದ ಹಾಗು ಶ್ರೀಸಾಮಾನ್ಯ ಅಮಾಯಕನಿರಬಹುದು, ಮುಗ್ಧನಿರಬಹುದು. ಆದರೆ ದಡ್ಡನಲ್ಲ, ಅವನಿಗಿರುವ ಕಾಮನ್‌ಸೆನ್ಸ್ ಎಲ್ಲ ಓದಿನ ಜ್ಞಾನಕ್ಕಿಂತ ದೊಡ್ಡದು. ಆತನೇ ತನ್ನ ಸಮಸ್ಯೆಗೆ ಪರಿಹಾರ ಹುಡುಕಿಕೊಳ್ಳಲು ಮುಂದಾದಾಗ ಮತ್ತೆ ಹಿಂದುಳಿದವರ ಐಕ್ಯತೆಯ ಅಗತ್ಯ ಸ್ಪಷ್ಟವಾಗುತ್ತದೆ.

*** ವಂದನೆಗಳು, ಬಹಳ ಹೊತ್ತು ನಮ್ಮ ಪ್ರಶ್ನೆಗಳಿಗೆ ತುಂಬ ತಾಳ್ಮೆಯಿಂದ ಉತ್ತರಿಸಿರುವಿರಿ.**

ತಮಗೂ ಪ್ರತಿ ವಂದನೆಗಳು. ನಿಮ್ಮ ಪ್ರಶ್ನೆಗಳಿಂದಾಗಿ ನಾನು ನನ್ನ ಎಪ್ಪತ್ತೈದು ವರುಷದ ಹಿಂದಿನ ಬದುಕಿನ ಸಿಂಹಾವಲೋಕನ ಮಾಡಿದೆ. ಈಗ ನನ್ನಲ್ಲಿ ಮತ್ತೆ ಹೊಸ ಚೈತನ್ಯ ಮೂಡಿದೆ. ಬದುಕಿರುವ ತನಕ ಈ ಸಮಾಜಕ್ಕೆ ಏನಾದರೂ ಸೇವೆ ಮಾಡಬೇಕೆಂಬ ಆಶಯ ಸದೃಢಗೊಂಡಿದೆ.

**ರಾಮಪ್ಪನವರು ಹೀಗೆ ಪ್ರತಿಯೊಂದು ಘಟನೆಯನ್ನೂ ಸಕಾರಾತ್ಮಕವಾಗಿ ತೆಗೆದುಕೊಂಡು ತಮ್ಮ ವ್ಯಕ್ತಿತ್ವವನ್ನು ಹೊಳಪು ಮಾಡಿಕೊಳ್ಳುತ್ತಾ ಹೋಗುತ್ತಾರೆ. ಅವರ ನಿರಂತರ ದುಡಿಮೆ ಉಪ್ಪಾರ ಸಮಾಜದ ಬದುಕಿಗೆ ಸುಖಸಂತೃಪ್ತಿಯನ್ನು ಕೊಡಲೆಂದು ಹಾರೈಸುತ್ತೇನೆ.**

*

# ಉಪ್ಪಾರ ಸಮುದಾಯದ ಧಾರ್ಮಿಕ ಪರಂಪರೆ

- ಎನ್. ಭಾರತಿ
ಬೆಂಗಳೂರು

ಭಾರತೀಯ ಇತಿಹಾಸ ಹಾಗೂ ಸಂಸ್ಕೃತಿಯನ್ನು ಅವಲೋಕಿಸಿದಾಗ 'ಧರ್ಮ' ಇಲ್ಲಿ ಬೀರಿರುವ ಅಗಣಿತ ಪ್ರಭಾವವನ್ನು ಗುರುತಿಸಬಹುದು. ಧರ್ಮವಿಲ್ಲದೆ ಭಾರತೀಯರ ಬದುಕಿನ ಅಧ್ಯಯನ ಅಪೂರ್ಣ ಎನಿಸುತ್ತದೆ. ವೇದ, ಉಪನಿಷತ್ತು, ರಾಮಾಯಣ ಹಾಗೂ ಮಹಾಭಾರತಗಳಂತಹ ಕಾವ್ಯದ ಮುಖ್ಯ ತಿರುಳು ಮನುಷ್ಯ ಧರ್ಮ ಮಾರ್ಗ ಬಿಟ್ಟು ನಡೆಯಬಾರದು ಎಂಬುದೇ ಆಗಿದೆ. ಧರ್ಮದ ಲೇಪನವಿಲ್ಲದೆ ಮನುಷ್ಯ 'ತನ್ನತನ' ಪಡೆದುಕೊಳ್ಳಲಾರ.

ಕೌಟಿಲ್ಯನಿಂದ ಹಿಡಿದು ಮಹಾತ್ಮಗಾಂಧೀಜಿಯತನಕ ರಾಜಕಾರಣದಲ್ಲಿದ್ದ ಬಹುತೇಕ ಭಾರತೀಯರು ಧರ್ಮದ ತಳಹದಿಯಿಲ್ಲದ ರಾಜಕೀಯ ಅರ್ಥಶೂನ್ಯವೆಂದೇ ವಾದಿಸಿದ್ದಾರೆ.

ವಸಿಷ್ಠ, ವಿಶ್ವಾಮಿತ್ರ, ರಾಜರ್ಷಿ ಜನಕ, ಶ್ರೀರಾಮ, ಭೀಷ್ಮ, ವಿದುರ, ಧರ್ಮರಾಯ, ಶ್ರೀಕೃಷ್ಣ ಮುಂತಾದ ಪೌರಾಣಿಕ ವ್ಯಕ್ತಿಗಳು ರಾಜಕಾರಣದಲ್ಲಿ ಧರ್ಮ ಮಹತ್ವವನ್ನು ನಿದರ್ಶನದ ಮೂಲಕ ಸಾರಿದ್ದಾರೆ.

ಮೌರ್ಯ, ಗುಪ್ತ, ವರ್ಧನ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ಕಂಚಿಪಲ್ಲವ, ಹೊಯ್ಸಳ, ವಿಜಯನಗರದರಸರು-ಹೀಗೆ ಯಾವ ರಾಜಮನೆತನಗಳನ್ನು ಅಧ್ಯಯನಕ್ಕೆ ತೆಗೆದುಕೊಂಡರೂ ಅಲ್ಲೆಲ್ಲಾ ಧರ್ಮದ ಮಹತ್ವವನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿದೆ. ವಿಜಯನಗರ ಸಾಮ್ರಾಜ್ಯದ ಅತ್ಯುನ್ನತಿಗೆ ವಿದ್ಯಾರಣ್ಯರಂತಹ ಯತಿವರ್ಯರ ಪಾತ್ರವನ್ನು

ಗುರುತಿಸಬಹುದು. ಮುಸ್ಲಿಂರು ಸೇರಿದಂತೆ ಬ್ರಿಟಿಷರ ತನಕ ಅನೇಕ ದಾಳಿಗಳನ್ನು ಈ ನೆಲದ ಮೇಲೆ ಗುರುತಿಸಬಹುದು. ಆಗೆಲ್ಲಾ ಧರ್ಮದ ಪ್ರಭಾವಕ್ಕೆ ಯಾವ ಚ್ಯುತಿ ಬರಲಿಲ್ಲ. ಅಷ್ಟೇ ಅಲ್ಲ, ಭಾರತೀಯ ಧರ್ಮ, ಕಾಲ ಕಾಲಕ್ಕೆ ಪರಿವರ್ತನೆಗೊಂಡು ಹೊಸರೂಪ ಪಡೆಯಿತು. ಬ್ರಿಟಿಷರ ಆಳ್ವಿಕೆಯ ಕಾಲದಲ್ಲೂ ಧಾರ್ಮಿಕ ಕ್ಷೇತ್ರ ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಂಡೇ ಬಂದಿದೆ.

12ನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಕ್ರಾಂತಿಯಾದ ವೀರಶೈವ ಧರ್ಮ ಹೊಸ ಸ್ವರೂಪ ಪಡೆಯಿತು. ಜನತೆಯಲ್ಲಿ ನೈತಿಕ ಮೌಲ್ಯ ಹೆಚ್ಚಿಸುವುದರ ಜೊತೆಗೆ ಅವರ ಸಂಘಟನೆಯ ಹೊಣೆಯನ್ನು ವಹಿಸಿಕೊಂಡಿತು. ಅವರಿಗೆ ಧಾರ್ಮಿಕ ವಿಚಾರಗಳಲ್ಲಿ ಮಾರ್ಗದರ್ಶನ ಕೊಡುವುದಲ್ಲದೆ ಸಂಘಟನೆಯಿಂದ ಪಡೆಯಬಹುದಾದ ಲೌಕಿಕ ವಿಚಾರಗಳತ್ತ ತಮ್ಮ ಸಮಾಜವನ್ನು ಜಾಗೃತಿಗೊಳಿಸಿದರು. ಕ್ರಿಶ್ಚಿಯನ್ ಮಿಷನರಿಗಳು ಕೈಗೊಂಡ ಶಿಕ್ಷಣ ಪ್ರಸಾರ ಕಾರ್ಯವನ್ನು ಮೊದಲ ಬಾರಿಗೆ ಶ್ರದ್ಧೆಯಿಂದ ಕೈಗೆತ್ತಿಕೊಂಡವರು ವೀರಶೈವ ಮಠಗಳವರು. ಇಂದು ಕರ್ನಾಟಕವು ತಂತ್ರಜ್ಞಾನ ಕ್ಷೇತ್ರದಲ್ಲಿ ಭಾರತ ಹಾಗೂ ವಿಶ್ವದ ಗಮನ ಸೆಳೆದಿದ್ದರೆ, ಈ ಮಠಗಳು ಕೈಗೊಂಡ ಶೈಕ್ಷಣಿಕ ಸೇವೆಯೇ ಎನ್ನಬಹುದು. ಸಿದ್ಧಗಂಗೆ, ಸುತ್ತೂರು, ಮುರುಘರಾಜೇಂದ್ರ, ಸಿರಿಗೆರೆ, ಗದುಗಿನ ತೋಂಟದಾರ್ಯ, ಶರಣ ಬಸಪ್ಪ ಅಪ್ಪ ಮೊದಲಾದ ಧಾರ್ಮಿಕ ಮಠಗಳು ಮಾಡಿರುವ ಶೈಕ್ಷಣಿಕ ಸಾಧನೆ ವಿಶೇಷವಾಗಿ ದಾಖಲಾರ್ಹ ವಿಚಾರ. ಅವರುಗಳಿಂದ ಸ್ಫೂರ್ತಿ ಪಡೆದ ಒಕ್ಕಲಿಗರ ಆದಿಚುಂಚನಗಿರಿ ಮಠ ಎಲ್ಲ ಧಾರ್ಮಿಕ ಮಠಗಳನ್ನ ಮೀರಿಸುವ ಸಾಧನೆ ಮಾಡಿದೆ. ಕಾಗಿನೆಲೆಯ ಕನಕಗುರುಪೀಠ ಜನಾಂಗದ ಸಂಘಟನೆಗೆ ಆದ್ಯತೆ ನೀಡಿದೆ.

1986ರನಂತರ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ತಾವೇ ನಡೆಸಿಕೊಂಡು ಹೋಗುವ ಪರಿಸ್ಥಿತಿ ಉಂಟಾದಾಗ ಹಿಂದುಳಿದ ಮಠ-ಮಾನ್ಯ ಹಾಗೂ ಸಂಸ್ಥೆಗಳು ಹಿಂದೆ ಸರಿದಿದ್ದುಂಟು. ಸರ್ಕಾರ ಶಾಶ್ವತ ಅನುವಾದ ರಹಿತ ನೀತಿ ಜಾರಿಗೆ ತಂದ ಮೇಲೆ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದಾದರೂ ಹೇಗೆ ? ಸರಕಾರವೇ ಅತಿ ಹಿಂದುಳಿದ ವರ್ಗಗಳೆಂದು ಪರಿಗಣಿಸಿ ಕೆಲವು ಜಾತಿಗಳನ್ನು ಪ್ರವರ್ಗ-I ರಲ್ಲಿ ಸೇರಿಸಿದ್ದು, ಅಂಥವರ ಸ್ಥಿತಿ ಯೋಚನೀಯವಾಗಿದ್ದು, ಅಂತಹ ಜಾತಿ/ಪಂಗಡಗಳಿಗಾದರೂ ಕನಿಷ್ಠ ಪಕ್ಷ ಇಂತಹ ಸರಕಾರಿ ಆದೇಶಗಳಿಂದ ವಿನಾಯಿತಿ ಕೊಡುವದು ಅತಿ ಅವಶ್ಯವಿದೆ. ಇಂಜಿನಿಯರಿಂಗ್ ಹಾಗೂ ಮೆಡಿಕಲ್ ಕಾಲೇಜಿಗೆ ಹೂಡಬೇಕಾದ ಬಂಡವಾಳವನ್ನು ಅಸಂಘಟಿತ ಈ ಸಮುದಾಯಗಳಲ್ಲಿ ಗುರುತಿಸುವುದು ಕಷ್ಟ ಸಾಧ್ಯವಾದ ಕೆಲಸ.

ಆಯಾಯ ಸಮುದಾಯದವರೇ ಶಿಕ್ಷಣ ಸಂಸ್ಥೆ ತೆರೆದಾಗ ಆ ಪಂಗಡಗಳು ವಿದ್ಯಾವಂತರಾಗಲು ಹೆಚ್ಚಿನ ಅವಕಾಶ ದೊರೆಯುತ್ತದೆ. ವಿದ್ಯಾಭ್ಯಾಸದಿಂದ ಅವರ ಜೀವನಮಟ್ಟ

ಉತ್ತಮಗೊಳ್ಳಲು ಕಾರಣವಾಗುತ್ತದೆ. ಜಾಗೃತಿ ಪಡೆದ ಸಮುದಾಯ ಸಂಘಟನೆಯಾಗುತ್ತದೆ. ಸಂಘಟನೆಯ ಮೂಲಕ ರಾಜಕೀಯ ಸ್ಥಾನಮಾನ ಹಾಗೂ ಸಾಮಾಜಿಕ ಭದ್ರತೆ ಪಡೆಯುವುದು ಈ ಸಂಸ್ಥೆಗಳ ಹೆಗ್ಗುರಿಯಾಗಿರುತ್ತದೆ. ಹಾಗೆಯೇ ಜನತೆಯ ನೈತಿಕ ಮೌಲ್ಯ ಹೆಚ್ಚಿಸುವ ಕಾಯಕವನ್ನು ಈ ಸಂಸ್ಥೆಗಳು ಮಾಡಿವೆ.

ಈ ಹಿನ್ನೆಲೆಯಲ್ಲಿ ಉಪ್ಪಾರ ಜನಾಂಗದ ಧಾರ್ಮಿಕ ಪೀಠವನ್ನು ಅಧ್ಯಯನ ಮಾಡಹೊರಟರೆ ಅದು ಅಷ್ಟೊಂದು ಉತ್ತೇಜನಕಾರಿಯಾಗಿ ಕಂಡುಬರುವುದಿಲ್ಲ. ಉಪ್ಪಾರ ಧಾರ್ಮಿಕ ಮಠ ಚಿತ್ರದುರ್ಗ ತಾಲ್ಲೂಕಿನ ಕಠ್ಲಹಟ್ಟಿ ಗ್ರಾಮದಲ್ಲಿದೆ. ಇದರ ಪೂರ್ಣ ಹೆಸರು ಶ್ರೀ ಶ್ರೀ ಶ್ರೀ ಚಿನ್ಮೂಲಾದ್ರಿ ಶಿಲಾಪುರಿ ಮಠ. ಇದರ ಪ್ರಸಿದ್ಧ ಗುರುಗಳು ಬ್ರಹ್ಮೀಭೂತರಾದ ಪೂಜ್ಯ ಶ್ರೀ ಶ್ರೀ ಲೇಪಾಕ್ಷ ಸ್ವಾಮೀಜಿಗಳು. ಈಗಿನ ಪೀಠಾಧಿಕಾರಿಗಳು ಪೂಜ್ಯ ಶ್ರೀ ಶ್ರೀ ಪುರುಷೋತ್ತಮನಂದಪುರಿ ಸ್ವಾಮೀಜಿಗಳು.

21-7-1955 ರಲ್ಲಿ ಮೈಸೂರು ಸರ್ಕಾರ ವಿಶೇಷ ಆಜ್ಞೆ ಹೊರಡಿಸಿ ಉಪವೀರ ಅಥವಾ ಉಪ್ಪಾರ ಜನಾಂಗದ ಜಗದ್ಗುರುಗಳಿಗೆ ರಾಜಮನ್ನಣೆ ನೀಡಿತು. ಆ ಪ್ರಕಾರ ಶ್ರೀ ಶ್ರೀ ಲೇಪಾಕ್ಷಸ್ವಾಮೀಜಿ ಅವರಿಗೆ ರಾಜಬಿರುದು, ವಿಶೇಷ ಬಿರುದು ಹಾಗೂ ಸಾಧಾರಣ ಬಿರುದು ನೀಡಲಾಯಿತು. ಈ ಮಠದ ಸ್ವಾಮಿಗಳು ಸಂಚಾರ ಕೈಗೊಂಡಾಗ ಅವರಿಗೆ ರಾಜಮರ್ಯಾದೆ ನೀಡಿ ಸಕಲ ಸೌಕರ್ಯಗಳನ್ನು ಕಲ್ಪಿಸುವಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ಇದರ ಪ್ರಕಾರ ಬಹಳ ಹಿಂದೆಯೇ ಉಪ್ಪಾರ ಜನಾಂಗದ ಮಠ ರಾಜಮನ್ನಣೆ ಪಡೆದಿತ್ತೆಂದು ಹೇಳಲಾಗಿದೆ.

ಉಪ್ಪಾರ ಜನಾಂಗದ ಕುಲಗುರುಗಳು ಶ್ರೀ ಪದ್ಮ ಮಹರ್ಷಿಗಳು. ಇವರ ಸಂತತಿಯವರೇ ಹಿಂದಿನಿಂದಲೂ ಪರಂಪರೆಯ ಕುಲಗುರುಗಳಾಗಿರುತ್ತಾರೆ.

ಶ್ರೀ ಶ್ರೀ ಚಿನ್ಮೂಲಾದ್ರಿ ಶಿಲಾಪುರಿ ಮಹಾಸಂಸ್ಥಾನ ಮಠದ ಉಪ್ಪಾರ ಜಗದ್ಗುರುಗಳ ಪರಂಪರೆ ಹೀಗಿದೆ :

ಶ್ರೀ ಚಲುವರಾಯಸ್ವಾಮಿ

↓

ಶ್ರೀ ಜಯದೇವಸ್ವಾಮಿ

↓

ಶ್ರೀ ತಾವರೆ ತಿಮ್ಮರಾಯಸ್ವಾಮಿ

↓

ಶ್ರೀ ವೆಂಕಟಪ್ಪಸ್ವಾಮಿ

↓

ಶ್ರೀ ಚಪ್ಪರದಸ್ವಾಮಿ



ಶ್ರೀ ತಿಮ್ಮಪ್ಪಸ್ವಾಮಿ



ಶ್ರೀ ದಾಸಪ್ಪಸ್ವಾಮಿ



ಶ್ರೀ ತಿಮ್ಮಪ್ಪಸ್ವಾಮಿ



ಶ್ರೀ ಹನುಮಂತಪ್ಪಸ್ವಾಮಿ



ಶ್ರೀ ಬಂಗಾರಪ್ಪಸ್ವಾಮಿ



ಶ್ರೀ ಚಪ್ಪರದಪ್ಪಯ್ಯಸ್ವಾಮಿ



ಶ್ರೀ ಲೇಪಾಕ್ಷಸ್ವಾಮೀಜಿ (1953-2001)



ಶ್ರೀ ಪುರುಷೋತ್ತಮಾನಂದಪುರಿಸ್ವಾಮಿ

ಉಪ್ಪಾರ ಜನಾಂಗದ ಧಾರ್ಮಿಕ ಪೀಠಕ್ಕೆ ಮಾನ್ಯತೆ ತಂದುಕೊಟ್ಟ ಕೀರ್ತಿ ಶ್ರೀ ಶ್ರೀ ಶ್ರೀ ಲೇಪಾಕ್ಷ ಸ್ವಾಮೀಜಿ ಅವರಿಗೆ ಸಲ್ಲುತ್ತದೆ.

ಬ್ರ. ಲೇಪಾಕ್ಷ ಸ್ವಾಮೀಜಿ ಅವರು ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ಕರ್ಲಹಟ್ಟಿಯಲ್ಲಿ ಶ್ರೀ ಚಿನ್ಮೂಲಾದ್ರಿ ಶಿಲಾಪುರಿ ಮಹಾಸಂಸ್ಥಾನದ ಉಪ್ಪಾರ ಜಗದ್ಗುರುಗಳ ವಂಶದ ಶ್ರೀ ಚಪ್ಪರದಪ್ಪಯ್ಯ ಸ್ವಾಮೀಜಿಗಳ ಸುಪುತ್ರರಾಗಿ 1929 ರಲ್ಲಿ ಜನ್ಮ ತಾಳಿದರು.

ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಮುಗಿಯುವ ವೇಳೆಗಾಗಲೇ ಆಧ್ಯಾತ್ಮದತ್ತ ಒಲವು ಬೆಳೆದು ಆತ್ಮಜ್ಞಾನದ ಅಧ್ಯಯನಕ್ಕೆ ಗುರುಗಳನ್ನು ಅರಸುತ್ತಾ ಹೊರಟರು. ಆಗ ಸುದೈವದಿಂದ ದೊರೆತ ಗುರುಗಳು ಹಿಂದಿನ ಬಳ್ಳಾರಿ ಜಿಲ್ಲೆಯ ರಾಯದುರ್ಗದ ಅಪರೋಕ್ಷಾನುಭವಿಗಳಾದ ಶ್ರೀ ಸಕ್ರೆಪ್ಪ ಸ್ವಾಮಿಗಳು. ಈ ಸದ್ಗುರುಗಳಲ್ಲಿ ಪೂರ್ಣಜ್ಞಾನ ಪಡೆದ ಶ್ರೀ ಲೇಪಾಕ್ಷಸ್ವಾಮೀಜಿ ಯವರನ್ನು ಅವರ ತಂದೆ ತಾಯಿಗಳು ಸಮಾಜಕ್ಕೆ ಧಾರೆ ಎರೆದರು.

ಬ್ರ. ಲೇಪಾಕ್ಷ ಸ್ವಾಮೀಜಿಯವರು ಆಧ್ಯಾತ್ಮ ಜ್ಞಾನದ ಜೊತೆಗೆ ಜನಾಂಗದ ಸಂಘಟನೆಗೆ ಮೊದಲ ಆದ್ಯತೆ ನೀಡಿದರು. ಲೌಕಿಕ ಹಾಗೂ ಅಲೌಕಿಕ ವಿಚಾರಗಳ ಬಗ್ಗೆ ಮುಕ್ತ ಚರ್ಚೆಯಿಂದ

ಉಪ್ಪಾರ ಬಂಧುಗಳನ್ನು ಸೆಳೆದುಕೊಳ್ಳುತ್ತಿದ್ದರು. ಹೆಲಿಕ್ಯಾಪ್ಟರ್, ಕಾಂಟೆಸ್ಸಾ, ಕ್ವಾಲೀಸ್ ಮೊದಲಾದ ವಾಹನಗಳಲ್ಲಿ ವಿಹರಿಸುತ್ತಾ ಜನಜಾಗೃತಿಯನ್ನುಂಟು ಮಾಡುವ ಶ್ರೀಮಂತ ಸ್ವಾಮೀಜಿಗಳ ದೃಷ್ಟಿಯನ್ನು ಅವರ ಮಾತುಗಳಿಂದಲೇ ತಿಳಿದುಕೊಳ್ಳಬಹುದು.

"ನಾನು ಸಕಲ ಜೀವಿಗಳಿಗೂ ಅತ್ಯವಶ್ಯಕವಾಗಿ ಬೇಕಾಗಿರುವ ಲವಣ (ಉಪ್ಪು) ತಯಾರಿಸಿ ರುಚಿಕಟ್ಟಾದ ಪಾಕವನ್ನು ಒದಗಿಸುವ ಜನಾಂಗಕ್ಕೆ ಕುಲಗುರುವಾಗಿದ್ದೇನೆಯೇ ಹೊರತು ರುಚಿಯಾದ ಮೃಷ್ಟಾನ್ನ ಉಣ್ಣುವ ಜನಾಂಗಕ್ಕಲ್ಲ".

ಅವರ ಜೀವನ ದೃಷ್ಟಿಕೋನ ಹೀಗಿದೆ : "ನಾವು ಸಂಪಾದಿಸುವ ವಸ್ತು ಶಾಶ್ವತವಾದದ್ದಾಗಿರ ಬೇಕು. ಭಕ್ತಸಮೂಹ ಹಾಗೂ ಸಮಾಜ ಸೇರಿ ನನಗೆ ಅಲ್ಪಾಯುವಾದ, ಅಲ್ಪಾನಂದದ ಎಲ್ಲಾ ಸೌಕರ್ಯಗಳನ್ನು ಒದಗಿಸಬಹುದು. ನನಗೆ ಬೇಕಾಗಿರುವುದು ಆತ್ಮಾನಂದ. ಸಮಾಜದ ಸಂಘಟನೆ ಹಾಗೂ ಅಭಿವೃದ್ಧಿ ಮಾತ್ರ."

ಹೆಚ್.ಸಿ. ನೀರಾವರಿಯವರು ಹೇಳುವಂತೆ "ಉಪ್ಪಾರ ಜನಾಂಗದಲ್ಲಿನ ಒಳಪಂಗಡಗಳ ಭೇದ ಕಡಿಮೆ ಮಾಡಿ ಅವರನ್ನು ಸಂಘಟಿಸುವ ಕಾರ್ಯಕ್ಕೆ ಮುಂದಾಗಿದ್ದರು. ಮೇಲುಸಕ್ಕರೆ, ಉಪ್ಪಾರರು, ಬೆಲ್ದಾರ, ಚುನಾರ, ಗವಡಿ, ಗೌಂಡಿ, ಕಲ್ಲುಕುಟಿಗ ಉಪ್ಪಾರ, ಲೋನಾರಿ, ನಾಮದ ಉಪ್ಪಾರ, ಪಡಿತ, ಪಾಡುತಿ, ಸಗರ, ಸುಣ್ಣಗಾರ, ಸುಣ್ಣಉಪ್ಪಾರ, ಉಪ್ಪಲಿಗ, ಉಪ್ಪಲಿಗಸೆಟ್ಟಿ, ಉಪ್ಪಲಿಯಾನ್, ಯಕ್ಕಲರ, ಯಕ್ಕಲಿ, ಮುನ್ನೂರು ಉಪ್ಪಾರ, ರೆಡ್ಡಿ ಉಪ್ಪಾರ, ಲಿಂಗಾಯತ ಉಪ್ಪಾರ, ಕಾಮಾಟಿಗರು ಆಗೇರ್, ಖಾರ್ವಿ, ನವಾನಿಯಾ ಮೊದಲಾದ ಹಲವು ಬಗೆಯ ಒಳಪಂಗಡಗಳು ಉಪ್ಪಾರ ಸಮುದಾಯದಲ್ಲಿ ಇವೆ. ಇದು ಜನಾಂಗದ ಸಂಘಟನೆಗೆ ದೊಡ್ಡ ಅಡಚಣೆಯಾಗಿತ್ತು. ತಮ್ಮ ನಡೆನುಡಿಯಿಂದ ಲೇಪಾಕ್ಷ ಸ್ವಾಮೀಜಿಯವರು ಈ ಒಳಪಂಗಡದ ಭೇದ ಕಡಿಮೆ ಮಾಡಲು ಪ್ರಾಮಾಣಿಕ ಪ್ರಯತ್ನಪಟ್ಟು ಯಶಸ್ವಿಯಾದರು."

ಶ್ರೀ ಲೇಪಾಕ್ಷ ಮಹಾಸ್ವಾಮೀಜಿ ಅವರಿಗೆ ಸಹಕಾರ ತತ್ವದಲ್ಲಿ ಅನನ್ಯ ವಿಶ್ವಾಸ. "ಕೂಡಿ ದುಡಿದು ಬಾಳೋದು" ಅವರ ನಿತ್ಯಮಂತ್ರವಾಗಿತ್ತು. 1962ರಲ್ಲಿ ಹೊಸದುರ್ಗ ತಾಲ್ಲೂಕಿನ ಮಧುರೆ ಗ್ರಾಮದ ಬಳಿ ಬ್ರಹ್ಮವಿದ್ಯಾನಗರವೊಂದನ್ನು ಸ್ಥಾಪಿಸಿದರು. ಈ ಬಗ್ಗೆ ಮಾಜಿ ಮುಖ್ಯಮಂತ್ರಿಗಳೂ ಹಾಗೂ ರಾಷ್ಟ್ರನಾಯಕರಾದ ಎಸ್. ನಿಜಲಿಂಗಪ್ಪ ಅವರ ಮಾತುಗಳು ಹೀಗಿವೆ :

"ಲಿಂಗೈಕ್ಯ ಶ್ರೀ ಶ್ರೀ ಲೇಪಾಕ್ಷ ಸ್ವಾಮಿಗಳು ಈ ಮಠವನ್ನು ಸುಮಾರು ನಲವತ್ತು ವರ್ಷಗಳ ಕಾಲ ಯಶಸ್ವಿಯಾಗಿ ನಡೆಸಿಕೊಂಡು ಬಂದಿರುತ್ತಾರೆ. ಸರ್ಕಾರದಿಂದ 500 ಎಕರೆ ಜಮೀನನ್ನು ಮಠಕ್ಕೆ ಪಡೆದು ಸಹಕಾರ ತತ್ವದ ಮೂಲಕ ಕೃಷಿ ಕಾರ್ಯ ನಡೆಸಿ, ಬಡಜನರ ಅಭಿವೃದ್ಧಿಗೆ ಕಾರಣಕರ್ತರಾಗಿರುತ್ತಾರೆ".

ಮಾಜಿ ಮುಖ್ಯಮಂತ್ರಿಗಳಾದ ಎಸ್. ನಿಜಲಿಂಗಪ್ಪ ಅವರು ಹೇಳಿದಂತೆ ಸರ್ಕಾರದಿಂದ ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕು ಮಧುರೆ ಬಳಿ 500 ಎಕರೆ ಗೋಮಾಳ ಭೂಮಿಯನ್ನು ಸರ್ಕಾರದಿಂದ ಮಂಜೂರು ಮಾಡಿಸಿಕೊಂಡು ಬಡರೈತರಿಗೆ ಅದನ್ನು ಹಂಚಿ ಅವರೆಲ್ಲಾ ಸಾಮೂಹಿಕ ವ್ಯವಸಾಯ ಮಾಡುವಂತೆ ಮಾರ್ಗದರ್ಶನ ನೀಡಿದರು. ನೂರಾರು ರೈತ ಕುಟುಂಬಗಳಿಗೆ ಇದೊಂದು ಆಶ್ರಯತಾಣವಾಗಿದೆ. ಸಾವಿರಾರು ತೆಂಗಿನ ಮರಗಳು ಈ ಪ್ರದೇಶದಲ್ಲಿ ನಲಿದಾಡುತ್ತಿವೆ. ನಾಲ್ಕು ದಶಕದ ಹಿಂದೆ ಬರಡು ಭೂಮಿಯಾಗಿದ್ದು, ನಿರರ್ಥಕವಾಗಿದ್ದ ಈ ಭೂಪ್ರದೇಶ ಇಂದು ಸಾವಿರಾರು ಜನರ ಬದುಕಿಗೆ ಆಸರೆ ಎನಿಸಿ ಕಲ್ಪವೃಕ್ಷದ ತಾಣವಾಗಿದೆ. ಅವರ ಈ ಸಾಧನೆಯನ್ನು ಲೇಖಕರೊಬ್ಬರು ಹೀಗೆ ಹೇಳುತ್ತಾರೆ :

"ಶರೀರ, ಬುದ್ಧಿ ಹಾಗೂ ಮನಸ್ಸುಗಳನ್ನು ತಮ್ಮ ಅಧೀನ ಮಾಡಿಕೊಂಡಿದ್ದ ಶ್ರೀ ಲೇಪಾಕ್ಷ ಸ್ವಾಮೀಜಿಯವರು ಅಂದುಕೊಂಡಿದ್ದನ್ನು ಮಾಡಿಯೇ ತೀರುವ ದೈವಸ್ವರೂಪಿಗಳು".

ಮುಖ್ಯಮಂತ್ರಿಗಳಾದ ನಿಜಲಿಂಗಪ್ಪ, ದೇವರಾಜ ಅರಸು, ಬಂಗಾರಪ್ಪ ಹಾಗೂ ವೀರಪ್ಪಮೊಯಿಲಿ ಅವರುಗಳಿಗೆ ಆಪ್ತರಾಗಿದ್ದ ಪೂಜ್ಯ ಲೇಪಾಕ್ಷ ಸ್ವಾಮೀಜಿಗಳು ರಾಜ್ಯಾದ್ಯಂತ ಹಲವಾರು ಶಿಕ್ಷಣ ಸಂಸ್ಥೆಗಳನ್ನು ನಡೆಸಬಹುದಾಗಿತ್ತು. ಕೊನೆಯ ಪಕ್ಷ ಇಂಜಿನಿಯರಿಂಗ್ ಕಾಲೇಜು, ವೈದ್ಯಕೀಯ ಕಾಲೇಜು, ಶಿಕ್ಷಕರ ತರಬೇತಿ ಕೇಂದ್ರ ಇತ್ಯಾದಿಗಳನ್ನಾದರೂ ಪ್ರಾರಂಭಿಸಬಹುದಾಗಿತ್ತು. ಆದರೆ ಅಷ್ಟೇನೂ ಅನುಕೂಲವಲ್ಲದ ಸಮಾಜದ ಹಿನ್ನೆಲೆ ಹಾಗೂ ಸಮಾಜದ ಪ್ರೋತ್ಸಾಹದ ಕೊರತೆಯಿಂದಾಗಿ ಕೆಲವು ಶಿಕ್ಷಣ ಸಂಸ್ಥೆಗಳನ್ನು ಮಾತ್ರ ಸ್ವಾಮೀಜಿ ಅವರು ಸ್ಥಾಪಿಸಿದ್ದಾರೆ. ಅವುಗಳೆಂದರೆ ಭದ್ರಾವತಿಯ ಸೀತಾರಾಮಪುರದಲ್ಲಿ ಸಂಯುಕ್ತ ಪದವಿ ಪೂರ್ವ ಕಾಲೇಜು, ಹೊಸದುರ್ಗದ ಮಧುರೆ ಬಳಿಯ ಸಂಯುಕ್ತ ಪದವಿ ಪೂರ್ವ ಕಾಲೇಜು, ಹಾಗೂ ಚಿಕ್ಕಮಗಳೂರು ಜಿಲ್ಲೆಯ ಲಕ್ಯಾ ಮತ್ತು ಅಂತರಗಟ್ಟೆಯಲ್ಲಿ ಪ್ರೌಢಶಾಲೆಗಳು. ಇವುಗಳು ಅತ್ಯುತ್ತಮ ಫಲಿತಾಂಶ ತರುತ್ತಿವೆ. ಗ್ರಾಮೀಣ ವಿದ್ಯಾರ್ಥಿಗಳಿಗೆ ತುಂಬಾ ಸಹಕಾರಿಯಾಗಿರುವ ವಿದ್ಯಾಸಂಸ್ಥೆಗಳಾಗಿವೆ.

ಪೂಜ್ಯ ಲೇಪಾಕ್ಷ ಮಹಾಸ್ವಾಮೀಜಿಗಳಿಗೆ ಅಪಾರವಾದ ಆಯುರ್ವೇದ ಜ್ಞಾನವಿತ್ತು. ಅನೇಕ ಔಷಧೋಪಚಾರ ಮಾಡಿ ವಾಸಿಯಾಗದ ಕಾಯಿಲೆಗಳನ್ನು ಗುಣಪಡಿಸುತ್ತಿದ್ದರು.

ಉಪ್ಪಾರ ಜನಾಂಗದ ಈ ಸ್ವಾಮೀಜಿ ಅವರ ವ್ಯಕ್ತಿತ್ವವನ್ನು ಹೆಚ್.ಸಿ. ನೀರಾವರಿಯವರು ಹೀಗೆ ಕಂಡರಿಸಿದ್ದಾರೆ :

"ತುಸು ಸೊರಗಿದ ಶರೀರ, ನೀಳಾದ ಕೇಸರಿ ರೇಷ್ಮೆ ನಿಲುವಂಗಿ, ಹೊಳಪಾದ ಉದ್ದಗಡ್ಡ, ಪ್ರಾಚೀನ ಋಷಿಗಳಂತೆ ಜಟಾಧಾರಿ, ಬ್ರಹ್ಮದಂಡ, ಮುಖದ ಮೇಲೆ ಮಗುವಿನ ಮುಗ್ಧತೆ, ಇವು ಮೊದಲ ನೋಟದಲ್ಲೇ ಅವರಲ್ಲಿ ಗೋಚರಿಸುವ ವೈಶಿಷ್ಟ್ಯಗಳು."

ಕಾಲ ಕಳೆದಂತೆ ಅವರ ವಿದ್ವತ್ತು, ಸಮಕಾಲೀನ ಪ್ರಜ್ಞೆ, ಸದಾಕಾಲ ಸಮಾಜಕ್ಕೆ ಒಳಿತು ಮಾಡಬೇಕೆಂಬ ಹಂಬಲದ ಪರಿಚವಾಯಿತು. ಮುಖ್ಯಮಂತ್ರಿ ದೇವರಾಜ ಅರಸು ಹಾಗೂ ಬಂಗಾರಪ್ಪನವರು ಈ ಜನಾಂಗದ ಮಸಣಸೆಟ್ಟಿ ಹಾಗೂ ಜವರಾಯಿಸೆಟ್ಟಿ ಅವರನ್ನು ವಿಧಾನ ಪರಿಷತ್ತಿಗೆ ನಾಮಕರಣ ಮಾಡಲು ಪೂಜ್ಯ ಲೇಪಾಕ್ಷ ಸ್ವಾಮೀಜಿಯವರು ಕಾರಣಕರ್ತರಾಗಿದ್ದಾರೆ. ಉತ್ತರ ಹಾಗೂ ದಕ್ಷಿಣ ಕರ್ನಾಟಕದ ಉಪ್ಪಾರರನ್ನು ಮಾನಸಿಕವಾಗಿ ಬೆಸೆದ ಕೀರ್ತಿ ಶ್ರೀಗಳವರಿಗೆ ಸಲ್ಲುತ್ತದೆ.

ಬೆಂಗಳೂರಿನಲ್ಲಿ ಸ್ವಾಮೀಜಿ ಅವರ ಆಶೀರ್ವಾದ ಹಾಗೂ ಪ್ರೋತ್ಸಾಹದಿಂದ ಉಪ್ಪಾರ ಸಮಾಜ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ನಿವೇಶನ ಪಡೆಯಲು ಕಾರಣವಾಯಿತು.

ಪೂಜ್ಯ ಲೇಪಾಕ್ಷ ಸ್ವಾಮೀಜಿಗಳ ದೈವಸ್ವರೂಪದ ವ್ಯಕ್ತಿತ್ವವನ್ನು ಹೆಚ್.ಸಿ. ನೀರಾವರಿ ಅವರು ಕಾವ್ಯಮಯವಾಗಿ ವರ್ಣಿಸಿದ್ದಾರೆ : "ಪ್ರತಿಜೀವಿಗಳಲ್ಲೂ ದೇವರ ಇರುವಿಕೆಯನ್ನು ಗುರುತಿಸುತ್ತಾ ತಮ್ಮ ಲೋಕೋಪಕಾರ ಗುಣವನ್ನು ಬೆಳಗುತ್ತಾ ಸದಾಕಾಲ ಭಗವಂತನ ಪ್ರೀತಿಗೆ ಪಾತ್ರರಾಗುತ್ತಾ ತಾವು ಹುಟ್ಟಿದ ಜನಾಂಗದ ಏಳಿಗೆ ಬಯಸುತ್ತಾ, ಇಡೀ ಮನುಕುಲವನ್ನೇ ಪರತತ್ವದೆಡೆಗೆ ಒಯ್ಯುವ ವ್ರತ ನಿಷ್ಠರಾಗಿದ್ದ ಬ್ರ. ಲೇಪಾಕ್ಷ ಸ್ವಾಮೀಜಿಗಳು ಭಕ್ತಕವಿ ಡಾ॥ ಪುತಿನ ಹೇಳುವಂತೆ 'ವಿಶ್ವಕುಟುಂಬಿ'ಯಾಗಿದ್ದರು".

ಪೂಜ್ಯ ಲೇಪಾಕ್ಷ ಸ್ವಾಮೀಜಿಯವರು ಬ್ರಹ್ಮೈಕ್ಯರಾದ ನಂತರ ದಿನಾಂಕ 16-8-1997ರಂದು ಶ್ರೀ ಶ್ರೀ ಪುರುಷೋತ್ತಮಾನಂದಪುರಿ ಸ್ವಾಮೀಜಿಯವರು ಚಿನ್ಮೂಲಾದ್ರಿ ಸಂಸ್ಥಾನದ ಶಿಲಾಪುರಿ ಉಪ್ಪಾರ ಜನಾಂಗದ ಜಗದ್ಗುರುಗಳಾದರು. ದಿನಾಂಕ : 10-2-2000ದಂದು ಶ್ರೀ ಓಂಕಾರಾಶ್ರಮದ ಶಿವಪುರಿಸ್ವಾಮೀಜಿ ಅವರ ನೇತೃತ್ವದಲ್ಲಿ ಪೂಜ್ಯ ಪುರುಷೋತ್ತಮಾನಂದಪುರಿ ಸ್ವಾಮೀಜಿ ಅವರ ಪಟ್ಟಾಭಿಷೇಕ ಮಹೋತ್ಸವ ವಿಜೃಂಭಣೆಯಿಂದ ನಡೆಯಿತು.

ಪೂಜ್ಯಶ್ರೀಗಳು 1969ರ ನವೆಂಬರ್ 29ರಂದು ಚಿತ್ರದುರ್ಗ ತಾಲ್ಲೂಕಿನ ಕಲ್ಲಹಟ್ಟಿ (ಉಪ್ಪಾರಹಟ್ಟಿ)ಯಲ್ಲಿ ಹನುಮಂತಪ್ಪ ಹಾಗೂ ಬಂಗಾರಮ್ಮ ದಂಪತಿಗಳ ಪುತ್ರರಾಗಿ ಜನಿಸಿದರು. ಮನೆದೇವರಾದ ಚನ್ನಕೇಶವನ ಕೃಪೆಯಿಂದ ಹುಟ್ಟಿದ ಮಗನೆಂಬ ಭಾವನೆ ಎಲ್ಲೆಡೆ ಹರಡಿತು. ಬ್ರ. ಲೇಪಾಕ್ಷ ಸ್ವಾಮೀಜಿಯವರ ಅಪೇಕ್ಷೆಯಂತೆ ಮಗುವಿಗೆ 'ಪುರುಷೋತ್ತಮ' ಎಂಬ ಹೆಸರಿಟ್ಟರು. ಬ್ರಹ್ಮವಿದ್ಯಾನಗರದಲ್ಲಿ ಪ್ರಾಥಮಿಕ ಶಿಕ್ಷಣ, ಮಧುರೆಯಲ್ಲಿ ಪ್ರೌಢಶಿಕ್ಷಣ ಮತ್ತು ಮಲ್ಲಾಡಿಹಳ್ಳಿ ಅನಾಥ ಸೇವಾಶ್ರಮದಲ್ಲಿ ಪದವಿಪೂರ್ವ ಶಿಕ್ಷಣ ಮತ್ತು ಹೊಸದುರ್ಗದಲ್ಲಿ ಪದವಿ ಶಿಕ್ಷಣ ಪಡೆದರು. ಇವರ ಆಕರ್ಷಕ ರೂಪ, ತೇಜಸ್ಸು, ಪಾಂಡಿತ್ಯ, ಪ್ರತಿಭೆಗಳನ್ನು ಗಮನಿಸಿದ ಮಲ್ಲಾಡಿಹಳ್ಳಿ ಶ್ರೀ ಶ್ರೀ ಶ್ರೀ ರಾಘವೇಂದ್ರ ಸ್ವಾಮೀಜಿ ಅವರು "ಪುರುಷ ಸಿಂಹನಾಗು" ಎಂದು ಆಶೀರ್ವದಿಸಿದರು.

'ಬೆಳೆಯುವ ಪೈರನ್ನು ಮೊಳಕೆಯಲ್ಲೇ ಕಾಣು' ಎನ್ನುವಂತೆ ಶ್ರೀ ಶ್ರೀ ಪುರುಷೋತ್ತಮಾನಂದ

ಮಹಾಸ್ವಾಮೀಜಿ ಅವರು ತಮ್ಮ ಗುರುಗಳ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಅವರದೇ ಆದ ಮಾತುಗಳಿಂದ ಅವರ ಆದ್ಯತೆಗಳನ್ನು ಹೀಗೆ ಗುರುತಿಸಬಹುದು.

"ಕಲ್ಲಪಟ್ಟಿಯಲ್ಲಿದ್ದ ಗುರುಮನೆ ಬಿದ್ದುಹೋಗಿದೆ. ಅಲ್ಲಿ ನಮ್ಮ ಹಿರಿಯ ಗುರುಗಳ ಗದ್ದುಗೆಯಿದೆ. ಶ್ರೀ ಚನ್ನಕೇಶವ ದೇವಸ್ಥಾನ ಕಳೆದ ವರ್ಷ ಬಿದ್ದು ಹೋಯ್ತು. ಆದರೆ ಅದರ ಸುತ್ತಲಿನ ಪೌಳಿಗೋಡೆ ನಾಲ್ಕು ಕೊಠಡಿಗಳು ಉತ್ತಮವಾಗಿವೆ. ಗುರುಮನೆಯನ್ನು ಪುನರುಜ್ಜೀವನಗೊಳಿಸಬೇಕು. ಬಿದ್ದುಹೋಗಿರುವ ಚನ್ನಕೇಶವ ದೇವಸ್ಥಾನವನ್ನು ನಿರ್ಮಾಣ ಮಾಡಬೇಕು. ಶ್ರೀ ಚನ್ನಕೇಶವಸ್ವಾಮಿ ವಿಗ್ರಹ ಪ್ರತಿಷ್ಠಾಪನೆ ಮಾಡಬೇಕಾಗಿದೆ"

ಉಪ್ಪಾರ ಸಮಾಜವನ್ನು ಹೇಗೆ ಮುನ್ನಡೆಸಬೇಕೆಂಬುದಕ್ಕೆ ಶ್ರೀ ಶ್ರೀ ಪುರುಷೋತ್ತಮಾನಂದಪುರಿ ಮಹಾಸ್ವಾಮೀಜಿ ಅವರೇ ತಮ್ಮ ಕನಸುಗಳನ್ನು ಹೀಗೆ ಹಂಚಿಕೊಂಡಿದ್ದಾರೆ : "ಸಮಾಜದ ಮೌಢ್ಯಗಳನ್ನು ತಿದ್ದುವ, ಸಾಮಾಜಿಕ ಪಿಡುಗುಗಳನ್ನು ನಿರ್ಮೂಲನ ಮಾಡುವ, ಯುವಜನತೆಯಲ್ಲಿ ಜಾಗೃತಿ ಹಾಗೂ ಸಂಘಟನೆ, ಸಾಮೂಹಿಕ ವಿವಾಹ ಕಾರ್ಯ, ಮಹಿಳಾ ವೇದಿಕೆಗಳನ್ನು ನಿರ್ಮಿಸುವುದು, ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಒಟ್ಟಾರೆ ಉಪ್ಪಾರ ಸಮಾಜ ಸಾಮಾಜಿಕ, ಆಧ್ಯಾತ್ಮಿಕ ಹಾಗೂ ಧಾರ್ಮಿಕ ನೆಲೆಯಲ್ಲಿ ದೃಢ ಹೆಜ್ಜೆಯಿಡುವಂತೆ ಮಾಡುವುದು ನನ್ನ ಗುರಿ".

ಯಾವುದೇ ಸಮಾಜ ಮುಂದೆ ಬರಬೇಕಾದರೆ ಅದರ ನಾಯಕರು ದೊಡ್ಡ ಕನಸು ಕಾಣಬೇಕು. ಆ ಕನಸನ್ನು ಅನುಷ್ಠಾನ ಮಾಡುವ ಶ್ರದ್ಧಾವಂತ ಅನುಯಾಯಿಗಳು ಆ ನಾಯಕನ ಬಳಿ ಇರಬೇಕು. ಉಪ್ಪಾರ ಸಮಾಜದ ಜಗದ್ಗುರುಗಳಾದ ಪೂಜ್ಯ ಶ್ರೀ ಶ್ರೀ ಪುರುಷೋತ್ತಮಾನಂದಪುರಿ ಅವರು ಬಹುದೊಡ್ಡ ಕನಸು ಕಂಡಿದ್ದಾರೆ. ಅದನ್ನು ನನಸಾಗಿಸುವ ಹೊಣೆ ಸಮಾಜದ ಪ್ರತಿಯೊಬ್ಬರ ಮೇಲೂ ಇದೆ.

1996ರಲ್ಲಿ ದಾವಣಗೆರೆ ವಲಯಕ್ಕೆ ಶಾಖಾಮಠ ಪ್ರಾರಂಭವಾಯಿತು. ಪ್ರಸ್ತುತ ಈ ಶಾಖಾಮಠದ ಚರಮೂರ್ತಿ ಸ್ವಾಮಿಗಳಾಗಿ ಮೂಲ ಮಠದ ಮಾರ್ಗದರ್ಶನದಲ್ಲಿ ಪೂಜ್ಯ ಸಿದ್ಧರಾಮ ಸ್ವಾಮೀಜಿ ಅವರು ಧಾರ್ಮಿಕ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ. ದಾವಣಗೆರೆ ಉಪ್ಪಾರ ವಿದ್ಯಾರ್ಥಿನಿಲಯದ ಮೇಲ್ಭಾಗದಲ್ಲಿ ಸ್ವಾಮೀಜಿ ಅವರ ಅಧ್ಯಯನ ಕೊಠಡಿ, ದರ್ಶನ ಕೊಠಡಿ ಹಾಗೂ ಸುಮಾರು ಮುನ್ನೂರು ಜನ ಕುಳಿತುಕೊಳ್ಳುವ ಪ್ರಾರ್ಥನಾ ಕೊಠಡಿಯಿದೆ.

1987ರಲ್ಲಿ ರಾಜ್ಯ ಸಂಘ ತೀರ್ಮಾನಿಸಿದಂತೆ ಇನ್ನೂ ನಾಲ್ಕು ವಿಭಾಗಗಳಲ್ಲಿ ಶಾಖಾಮಠಗಳನ್ನು ಸಾಧ್ಯವಾದಷ್ಟು ಬೇಗ ಸ್ಥಾಪಿಸಬೇಕು. ಆಗ ಆಯಾ ವಿಭಾಗದ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ನಿರೀಕ್ಷಿಸಿದ ಮಟ್ಟದಲ್ಲಿ ಚಾಲನೆಯುಂಟಾಗುತ್ತದೆ. ಅದರ ಮೂಲಕ ಸಮಾಜದಲ್ಲಿ ಐಕಮತ್ಯವನ್ನು ಸಾಧಿತವಾಗುತ್ತದೆ.

ನೇರವಾಗಿ ಉಪ್ಪಾರ ಸಮುದಾಯದ ಮಠವಲ್ಲದಿದ್ದರೂ ಬೆಂಗಳೂರಿನ ಓಂಕಾರಾಶ್ರಮದ ಶ್ರೀ ಶ್ರೀ ಶಿವಪುರಿ ಮಹಾಸ್ವಾಮೀಜಿಯವರು ಈ ಜನಾಂಗದ ಶ್ರೇಯೋಭಿವೃದ್ಧಿಯ ಹಿತಚಿಂತಕರು. ತಮ್ಮ ಗುರುಗಳಾದ ತಿರುಚಿ ಸ್ವಾಮೀಜಿ ಅವರ ಆಶಯದಂತೆ ನಡೆಯುತ್ತಿರುವವರು. ಆದಿಚುಂಚನಗಿರಿ ಬಾಲಗಂಗಾಧರನಾಥ ಸ್ವಾಮೀಜಿ ಅವರ ಸಹಪಾಠಿ. ಮಡಿವಾಳ, ದೇವಾಂಗ, ವಿಶ್ವಕರ್ಮ, ವಾಲ್ಮೀಕಿ, ಉಪ್ಪಾರ, ಕುರುಬ ಮೊದಲಾದ ಅನೇಕ ಕೆಳವರ್ಗದ ಜನತೆಯ ಧರ್ಮ ಗುರುಗಳ ಪಟ್ಟಾಭಿಷೇಕ ನಿರ್ವಹಿಸಿಕೊಟ್ಟವರು. ಇದೀಗ ಅವರ ಆಶ್ರಮದಲ್ಲಿ ನಿರ್ಮಿಸಿರುವ ಬೃಹದಾಕಾರದ ಗಡಿಯಾರ ಎಲ್ಲರ ಗಮನಸೆಳೆದಿದೆ. ಈ ಗಡಿಯಾರವನ್ನು ಚಾಮರಾಜನಗರ ಕನ್ನಡಿಗರಾದ ಹೆಚ್‌ಎಂಟಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ರಾಮಾನುಜಂ ಸಿದ್ಧ ಮಾಡಿಕೊಟ್ಟಿದ್ದಾರೆ. ಜಗತ್ತಿನಲ್ಲಿ ಅತ್ಯಂತ ಪ್ರಸಿದ್ಧಿಯಾದ ಲಂಡನ್ ನಗರದಲ್ಲಿರುವ 22 ಅಡಿ ವ್ಯಾಸವುಳ್ಳ 'ಬಿಗ್ ಬೆನ್' ಗಿಂತಲೂ ಇದು ಪ್ರಸಿದ್ಧಿಯಾದುದು. ಓಂಕಾರಾಶ್ರಮದ ಗಡಿಯಾರದ ವ್ಯಾಸ 24 ಅಡಿ. ಸ್ವಾಮೀಜಿಯವರು ಹೇಳುವಂತೆ ಇದು ಕೇವಲ ಗಾತ್ರದಿಂದ ಮಾತ್ರವೇ ಪ್ರಸಿದ್ಧಿ ಪಡೆದಿಲ್ಲ. ಪ್ರತಿ ಗಂಟೆಗೊಮ್ಮೆ ಗಂಟೆ ಬಾರಿಸುವ ಮೊದಲು ಶಂಖನಾದ ಹಾಗೂ ಓಂಕಾರ ನಾದಗಳು ಗಡಿಯಾರದಿಂದ ಹೊರಹೊಮ್ಮುತ್ತವೆ. ಶಂಖನಾದ ಮತ್ತು ಓಂಕಾರ ನಾದಗಳು ಮಾನವನ ಆಧ್ಯಾತ್ಮಿಕ ಚಿಂತನೆಗೆ ಸ್ಫೂರ್ತಿ ಕೊಡುತ್ತವೆ. ಮಾನವ ಜನ್ಮ ಶ್ರೇಷ್ಠವಾದುದು ಹಾಗೂ ಅಲ್ಪಾಯುಷ್ಯವುಳ್ಳದ್ದು. ಅದು ಓಂಕಾರದಿಂದ ಬಂದಿದ್ದು, ಆಧ್ಯಾತ್ಮಿಕ ಸಾಧನೆಯ ಮೂಲಕ ಓಂಕಾರವನ್ನು ಸೇರುವದು ಮಾನವ ಜೀವನದ ಪರಮಗುರಿ. ಆ ಗುರಿ ಸಾಧನೆಯಲ್ಲಿ ಮಾನವನಿಗೆ ಇದು ಪ್ರತಿ ಗಂಟೆಗೂ ಎಚ್ಚರಿಕೆ ನೀಡುತ್ತದೆ. ಉಪ್ಪಾರರು ಸೇರಿದಂತೆ ಎಲ್ಲ ಕೆಳವರ್ಗದವರ ಸಂಘಟನೆಗೆ ಪೂಜ್ಯ ಶ್ರೀ ಶಿವಪುರಿ ಸ್ವಾಮೀಜಿಯವರ ಬದುಕು ಆದರ್ಶವಾಗಿದೆ.

ಉಪ್ಪಾರ ಸಮಾಜ ತಾನು ಹೊಂದಿರುವ ಹಿರಿದಾದ ಧಾರ್ಮಿಕ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವ ಜವಾಬ್ದಾರಿ ಹೊಂದಿದೆ. ಅದರಲ್ಲೂ ಶೈಕ್ಷಣಿಕವಾಗಿ ಎಲ್ಲಾ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿರುವ ಯುವಸಮುದಾಯಕ್ಕೆ ಸಮರ್ಪಕ ನೈತಿಕ ಮಾರ್ಗದರ್ಶನ ದೊರೆಯಬೇಕಾಗಿದೆ. ಅದನ್ನು ಈ ಸಮಾಜದ ಮುಖಂಡರು ಒದಗಿಸಬೇಕಾಗಿದೆ. ಧಾರ್ಮಿಕ ಕ್ಷೇತ್ರದ ಶ್ರೀ ಶ್ರೀಗಳು ಉಪ್ಪಾರ ಸಮುದಾಯದ ಹಿರಿಯ ನಾಯಕರಿಗೆ ಸರಿಯಾದ ಮಾರ್ಗದರ್ಶನ ನೀಡಿ ಈ ಸಮಾಜದ ಜನತೆಯನ್ನು ಮುನ್ನಡೆಸಬೇಕಾಗಿದೆ.

*




# * ಬೀದರ್ ಜಿಲ್ಲೆ

## ಐತಿಹಾಸಿಕ ಹಿನ್ನೋಟ

ಬಿದರೆ ಎಂದೇ ಹೆಸರಾಗಿರುವ ಬೀದರ್, ಜಿಲ್ಲೆಯ ಆಡಳಿತ ಕೇಂದ್ರ. ಬೀದರ ಜಿಲ್ಲೆ ರಾಜ್ಯದ ಉತ್ತರ ತುದಿಯಲ್ಲಿದ್ದು, ಪೂರ್ವಕ್ಕೆ ಆಂಧ್ರಪ್ರದೇಶದ ಮೇಡಕ್ ಮತ್ತು ನಿಜಾಮಬಾದ ಜಿಲ್ಲೆಗಳು, ಉತ್ತರ-ಪಶ್ಚಿಮಕ್ಕೆ ಮಹಾರಾಷ್ಟ್ರದ ಲಾತೂರು, ನಾಂದೇಡ ಮತ್ತು ಉಸ್ಮಾನಾಬಾದ ಜಿಲ್ಲೆಗಳು, ದಕ್ಷಿಣಕ್ಕೆ ಗುಲ್ಬರ್ಗಾ ಜಿಲ್ಲೆ ಇವೆ. ಬೀದರ್ ಜಿಲ್ಲೆಯು $17^{0}30'$ ರಿಂದ $18^{0}30'$ ಉತ್ತರ ಅಕ್ಷಾಂಶ ಹಾಗು $76^{0}42'$ ರಿಂದ $77^{0}36'$ ಪೂರ್ವ ರೇಖಾಂಶ ಇವುಗಳ ನಡುವೆ ಹಬ್ಬಿದೆ. ಜಿಲ್ಲೆಯ ವಿಸ್ತೀರ್ಣ 5451 ಚ.ಕಿ.ಮೀ.

ಕ್ರಿ.ಶ. 2001 ಜನಗಣತಿ ಪ್ರಕಾರ ಜಿಲ್ಲೆಯ ಜನಸಂಖ್ಯೆ 1501374. ಅದರಲ್ಲಿ ಪುರುಷರು 770679. ಸ್ತ್ರೀಯರು 730695 . ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 61.95. ಪುರುಷರು ಶೇ. 73.29. ಸ್ತ್ರೀಯರು ಶೇ. 50.01 ರಷ್ಟಿದ್ದಾರೆ. ಬೀದರ ಪಟ್ಟಣ ಬೆಂಗಳೂರಿನಿಂದ 669 ಕಿ.ಮೀ. ದೂರದಲ್ಲಿದೆ.

ಬೀದರ ಜಿಲ್ಲೆಯಲ್ಲಿ ಬೀದರ, ಔರಾದ, ಭಾಲ್ಕಿ, ಬಸವಕಲ್ಯಾಣ ಮತ್ತು ಹುಮನಾಬಾದ ಎಂಬ ಐದು ತಾಲ್ಲೂಕುಗಳಿವೆ. ಜಿಲ್ಲೆಯಲ್ಲಿ ಒಟ್ಟು 622 ಗ್ರಾಮಗಳು ಹಾಗೂ ಐದು ನಗರಗಳಿವೆ. ಸಮುದ್ರಮಟ್ಟದಿಂದ ಸರಾಸರಿ 914 ಮೀ. ಎತ್ತರದಲ್ಲಿರುವ ಈ ಜಿಲ್ಲೆಯ ಹವೆ ಆರೋಗ್ಯಕರವಾಗಿದೆ. ಬೇಸಿಗೆಯಲ್ಲಿ ಉಷ್ಣತೆ ಹೆಚ್ಚು. ಜಿಲ್ಲೆಯ ವಾರ್ಷಿಕ ಸರಾಸರಿ ಮಳೆ 907.5 ಮಿ.ಮೀ.

ಬೀದರ ಜಿಲ್ಲೆ ದಖನ್ ಪ್ರಸ್ಥಭೂಮಿಯ ಭಾಗ. ಹೆಚ್ಚು ಬೆಟ್ಟಗುಡ್ಡಗಳಿಲ್ಲದೆ ವಿಶಾಲ ಮಟ್ಟದ ಪ್ರದೇಶಗಳಿಂದ ಕೂಡಿದೆ. ಜಿಲ್ಲೆಯ ಯಾವುದೇ ಭಾಗದಲ್ಲೂ ಖನಿಜ ನಿಕ್ಷೇಪಗಳಿಲ್ಲ. ಮಾಂಜರಾ ಜಿಲ್ಲೆಯ ಪ್ರಮುಖ ನದಿ. ಕಾರಂಜಾ ಜಿಲ್ಲೆಯ ಮತ್ತೊಂದು ಮುಖ್ಯನದಿ. ಚುಳಕಿ, ಗಂಡೋರಿ, ನಗರವಾಲಾ, ಹುಡಗಿ ಹಾಗು ಹಳ್ಳಿಖೇಡ ನಾಲಾ-ಇವು ಚಿಕ್ಕನದಿಗಳು. ಹೆಚ್ಚಿನ ನದಿಗಳು ಮಳೆಗಾಲದಲ್ಲಿ ತುಂಬಿ ಹರಿಯುತ್ತವಾದರೂ ಬೇಸಗೆಯಲ್ಲಿ ಬತ್ತಿಹೋಗುತ್ತವೆ.

ಬೀದರ ಜಿಲ್ಲೆ ಕೃಷಿ ಪ್ರಧಾನವಾದ ಜಿಲ್ಲೆ. ಹೆಚ್ಚಿನ ಪ್ರದೇಶದಲ್ಲಿ ಒಣ ಬೇಸಾಯ. ಜಿಲ್ಲೆಯಲ್ಲಿ ಕಾರಂಜಾ, ಚುಳಕಿ ನಾಲಾ ಹಾಗು ಮುಲ್ಲಾಮಾರಿ ನದಿಗಳಿಗೆ ಆಣೆ ಕಟ್ಟುವ ಯೋಜನೆ ನಡೆದಿದೆ. ಜಿಲ್ಲೆಯ ಮುಖ್ಯ ಬೆಳೆಗಳು ಜೋಳ, ಸಜ್ಜೆ, ಗೋಧಿ, ಕಬ್ಬು, ಸೂರ್ಯಕಾಂತಿ, ತೊಗರಿ ಮತ್ತು ದ್ವಿದಳಧಾನ್ಯ ಮುಂತಾದವುಗಳು.

ಜಿಲ್ಲೆಯಲ್ಲಿ ಬೃಹತ್ ಉದ್ಯಮಾಭಿವೃದ್ಧಿಗೆ ಸೌಕರ್ಯಗಳಿಲ್ಲದಿದ್ದರೂ ಇತರ ಸಣ್ಣ ಕೈಗಾರಿಕೆಗಳು ಇವೆ. ಇತ್ತೀಚಿನ ಔದ್ಯಮಿಕ ಯೋಜನೆಗಳಿಂದ ಕೃಷಿ ಉಪಕರಣಗಳ ಕಾರ್ಖಾನೆ, ಗೊಬ್ಬರ ಕಾರ್ಖಾನೆ, ಖಂಡಸಾರಿ ಕಾರ್ಖಾನೆ ಇವು ಅಭಿವೃದ್ಧಿಯತ್ತ ಸಾಗಿದೆ. ಇಲ್ಲಿನ ಬಿದರಿ ವಸ್ತುಗಳ ಕೈಗಾರಿಕೆ ಪ್ರಸಿದ್ಧವಾಗಿದೆ.

ಜಿಲ್ಲೆಯ ಕೆಲವು ಭಾಗಗಳಲ್ಲಿ ನವಶಿಲಾಯುಗದ ಕಾಲದಿಂದಲೂ ಜನವಸತಿ ಇದ್ದಿತೆಂದು ತಿಳಿದುಬರುತ್ತದೆ. ಬೀದರ ಪಟ್ಟಣದ ಆಸುಪಾಸಿನಲ್ಲೇ ಆ ಕಾಲದ ಶಿಲಾಯುಧಗಳು ದೊರಕಿವೆ.

ಇತಿಹಾಸಕಾಲದಲ್ಲಿ ಈ ಜಿಲ್ಲೆ ಬಾದಾಮಿಯ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ದೇವಗಿರಿಯ ಯಾದವರು, ವಾರಂಗಲ್ಲಿನ ಕಾಕತೀಯರು, ದೆಹಲಿಯ ಸುಲ್ತಾನರು, ಬಹಮನಿ ಸುಲ್ತಾನರು, ಆದಿಲ್‌ಷಾಹೀ, ಔರಂಗಜೇಬ, ಹೈದರಾಬಾದ ನಿಜಾಮ ಮುಂತಾದವರ ಆಡಳಿತಕ್ಕೆ ಒಳಪಟ್ಟಿತ್ತು. ಕಲ್ಯಾಣ ಚಾಳುಕ್ಯರ ರಾಜಧಾನಿ ಈ ಜಿಲ್ಲೆಯಲ್ಲಿರುವ ಕಲ್ಯಾಣವಾಗಿತ್ತು. ಕಲ್ಯಾಣದ ಚಾಳುಕ್ಯರ ಆರನೆಯ ವಿಕ್ರಮಾದಿತ್ಯ ಪ್ರಸಿದ್ಧ ಚಕ್ರವರ್ತಿ. ಅವನ ಜೀವನಚರಿತ್ರೆಗೆ ಸಂಬಂಧಿಸಿದ ಹಲವಾರು ಸ್ವಾರಸ್ಯಾಂಶಗಳು ಅವನ ಆಸ್ಥಾನ ಕವಿ ಕಾಶ್ಮೀರದ ಬಿಲ್ಹಣನ 'ವಿಕ್ರಮಾಂಕದೇವಚರಿತಂ'ದಲ್ಲಿ ದೊರೆಯುತ್ತವೆ. ಅವನ ಕಾಲದಲ್ಲಿ 'ಈ ಭೂತಲದಲ್ಲಿ ಕಲ್ಯಾಣದಂತಹ ಬೇರೊಂದು ನಗರವು ಹಿಂದೆಂದೂ ಇರಲಿಲ್ಲ. ಇಂದೂ ಇಲ್ಲ, ಮುಂದೆಯೂ ಇರಲಾರದು' ಎಂದು ಬಿಲ್ಹಣ ವರ್ಣಿಸಿದ್ದು, ಕಲ್ಯಾಣ ಪಟ್ಟಣದ ಮಹಿಮೆಯನ್ನು ಊಹಿಸಿಕೊಳ್ಳಬಹುದಾಗಿದೆ. ಬೀದರ ಜಿಲ್ಲೆ ಎರಡನೇ ಬಾರಿಗೆ ಪ್ರಸಿದ್ಧಿಯಾದುದು ಭಕ್ತಿಭಂಡಾರಿ ಬಸವಣ್ಣನವರಿಂದ. ಬಿಜ್ಜಳನ ಅಮಾತ್ಯರಾಗಿದ್ದ ಬಸವಣ್ಣನವರು ಧಾರ್ಮಿಕ ಕ್ರಾಂತಿಯನ್ನೇ ಮಾಡಿದರು. ಅದು ವಾಸ್ತವಿಕವಾಗಿ ಕೇವಲ ವೀರಶೈವ ಮತದ ಪುನರುತ್ಥಾನವಲ್ಲ. ಮಾನವ ಧರ್ಮದ ಮೂಲವನ್ನೇ ತಿಳಿಯುವ ಕಾಲವಾಗಿತ್ತು. ಬದುಕಿನ ಮೌಲ್ಯಗಳ ಪುನರ್ ವಿಮರ್ಶೆಯ ಪರ್ವಕಾಲ. ಸಮಾಜ ಮತ್ತು ಧರ್ಮಕ್ಕೆ ಹೊಸ ವ್ಯಾಖ್ಯಾನ ಬರೆದ ಕಾಲ. ಆಧ್ಯಾತ್ಮ ಅನುಭಾವಗಳ ಸುಂದರ ಸಂಗಮ ವಚನ ಸಾಹಿತ್ಯದ ಅಮೃತ ಸಿಂಚನ.

ಮೂರನೆಯ ಸಲ ಬೀದರ ಪ್ರಸಿದ್ಧಿಗೆ ಬಂದದ್ದು, ಬಹುಮನಿ ವಂಶದ ಪ್ರಸಿದ್ಧ ಸುಲ್ತಾನ ಅಹಮ್ಮದ್ ಷಾಹ ಕ್ರಿ.ಶ. 1424ರಲ್ಲಿ ಬೀದರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಾಗ. ಕಲಬುರ್ಗಿಗಿಂತ ಬೀದರ ಹವಾಗುಣ ಹೆಚ್ಚು ಹಿತಕರವಾಗಿದ್ದುದರಿಂದಲೂ ಹಾಗೂ ಆಗಿನ ಬಹುಮನಿಯ ರಾಜಕೀಯ ಪರಿಸ್ಥಿತಿಯ ಕಾರಣಗಳಿಂದಲೂ ಬೀದರನಲ್ಲಿ ಬಲವಾದ ಕೋಟೆಯನ್ನು ಕಟ್ಟಿಸಿ, ಅಲ್ಲಿಗೆ ರಾಜಧಾನಿ ಸ್ಥಳಾಂತರಿಸಿದ. ಬಹುಮನಿ ರಾಜ್ಯ ಐದು ಭಾಗಗಳಾಗಿ ಒಡೆದಾಗ ಬೀದರ ಬರೀದ ಷಾಹೀಗಳ ರಾಜಧಾನಿಯಾಗಿ ಮುಂದುವರಿಯಿತು. ಬಿಜಾಪುರದ ಆದಿಲ್‌ಷಾ ಕ್ರಿ.ಶ. 1619ರಲ್ಲಿ ಇದನ್ನು ತನ್ನ ವಶಕ್ಕೆ ತೆಗೆದುಕೊಂಡಾಗ ಬೀದರದ ವೈಭವ ನಂದಿತು.

ಕಲ್ಯಾಣದಲ್ಲಿ ಶರಣರ ಸಮಾಗಮ, ಬೀದರನಲ್ಲಿ ಸೂಫಿ ಸಂತರ ಸಮಾಗಮ, ಮಹಮ್ಮದ ಗವಾನನ ಮದರಸಾ-ಇವುಗಳು ಬೀದರ ಕೀರ್ತಿಯನ್ನು ಹೆಚ್ಚಿಸಿವೆ.

ಬೀದರ ನಗರ ಜಿಲ್ಲಾ ಆಡಳಿತ ಕೇಂದ್ರವಾಗಿರುವಂತೆ, ತಾಲ್ಲೂಕಾ ಆಡಳಿತ ಕೇಂದ್ರವೂ ಹೌದು. ಬೀದರ ಪ್ರಾಚೀನ ಪಟ್ಟಣ. ಇತಿಹಾಸ ಪ್ರಸಿದ್ಧ ಸ್ಥಳ. ಮಹಾಭಾರತದ ಕಾಲಕ್ಕೆ ಇದು ವಿದುರನಗರವೆಂದು ಪ್ರಸಿದ್ಧಿಯನ್ನು ಪಡೆದಿತ್ತೆಂದೂ, ನಳ-ದಮಯಂತಿಯರ ಪ್ರಣಯದ ಉದ್ಯಾನವೆಂದೂ ಪ್ರತೀತಿ. ದಮಯಂತಿಯ ತಂದೆ ಭೀಮ ಭೂಪಾಲನ ರಾಜಧಾನಿ ಇದೇ ಆಗಿತ್ತೆಂದು ಊಹೆ. ಇದನ್ನೂ ಬಿದರೂರು ಪುರವೆಂತಲೂ ಕರೆದದ್ದುಂಟು. ಬರಬರುತ್ತ ಬೀದರ ಅನೇಕ ಹೆಸರುಗಳನ್ನು ಹೊಂದಿತ್ತು. ವಿದುರ ನಗರವೇ ತದ್ಭವವಾಗಿ ಬಿದಿರೆ-ಬೀದರ್ ಆಯಿತೆಂದು ಒಂದು ಪ್ರತಿಪಾದನೆ ಇದೆ. ಬೀದರ ಶಬ್ದದ ಮೂಲ ಬಿದಿರು. ಬಿದಿರೆ ಎಂದರೆ ಬಿದಿರು ಬೆಳೆಯುವ ಪ್ರದೇಶ ಎಂದರ್ಥ. ಬಿದಿರೆ-ಬಿದುರುಪುರ-ಬಿದನೂರು-ಬೀದರ್ ಎಂಬುದಾಗಿ ಹೆಸರಿನ ಬೆಳವಣಿಗೆಯಾಗಿದೆ ಎಂದು ಹೇಳಲಾಗಿದೆ. ಇಸ್ಲಾಮಿ ಸುಲ್ತಾನರ ಆಳ್ವಿಕೆಯಲ್ಲಿ ಅಹಮ್ಮದಾಬಾದ-ಬೀದರ ಎಂದು ಈಗ ಮಹ್ಮದಾಬಾದ್-ಬೀದರ್ ಎಂದೂ ಹೆಸರು ಗಳಿಸಿದೆ. ಬೀದರ ಕೋಟೆಯನ್ನು ಕ್ರಿ.ಶ. 1429 ರಿಂದ 1432ರ ಅವಧಿಯಲ್ಲಿ ಕಟ್ಟಿಸಲಾಗಿದೆ. ಕ್ರಿ.ಶ. 1667ರಲ್ಲಿ ಇಲ್ಲಿಗೆ ಭೇಟಿ ಕೊಟ್ಟಿದ್ದ ಫ್ರೆಂಚ್ ಪ್ರವಾಸಿ ದಿಲೆನಾಟ್ ಇದೊಂದು ಅದ್ಭುತ ಕೋಟೆ ಎಂದು ಬಣ್ಣಿಸಿದ್ದಾನೆ.

ಬೀದರ ಒಂದು ಅನುಪಮ ಪ್ರೇಕ್ಷಣೀಯ ಸ್ಥಳ. ಈ ಪಟ್ಟಣದ ಸುತ್ತ ನೀರಿನ ಅನೇಕ ಝರಿಗಳಿರುವದು ಒಂದು ವಿಶೇಷ. ಇಂತಹವುಗಳಲ್ಲಿ ಒಂದಾದ ಪಾಪನಾಶಿನಿ ಪವಿತ್ರ ಕ್ಷೇತ್ರವಾಗಿದೆ. ಇಲ್ಲಿನ ಬೃಹದಾಕಾರದ ಸ್ವಯಂಭೂ ಶಿವಲಿಂಗ ಯಾತ್ರಿಕರ, ಭಕ್ತರ ಮನಸ್ಸನ್ನು ಆಕರ್ಷಿಸುತ್ತದೆ. ಗುಹಾಂತರ ದೇವಾಲಯವೆಂದು ಪ್ರಸಿದ್ಧವಾದ ನರಸಿಂಹ ಝರಣೆ ಇನ್ನೊಂದು ಜಾಗೃತ ಕ್ಷೇತ್ರ. ಗುರುನಾನಕರು ಬೀದರ್‌ಗೆ ಬಂದಾಗ ಒಂದು ಸಂದರ್ಭದಲ್ಲಿ ಅವರ ಪಾದಸ್ಪರ್ಶದಿಂದ ಚಿಮ್ಮಿ ಬಂದದ್ದೆನ್ನುವ ನಾನಕ್‌ಝರಾ ಬಹು ಪ್ರಸಿದ್ಧ. ಶುಕ್ರಾಚಾರ್ಯರು ಅನುಷ್ಠಾನ ಮಾಡಿದ ಸ್ಥಾನವೆಂದು ಶುಕ್ಲತೀರ್ಥ ಪ್ರಸಿದ್ಧಿ ಪಡೆದಿದೆ. ಹಜರತ್ ಷಹ ಅಬುಲ್

ಫೈಜ ದರ್ಗಾ ಇನ್ನೊಂದು ಪ್ರಸಿದ್ಧ ಕ್ಷೇತ್ರ. ಕ್ರಿ.ಶ. 1472ರಲ್ಲಿ ರಷ್ಯಾದ ಪ್ರವಾಸಿ ನಿಕೆಟಿನ್ ಬೀದರಗೆ ಭೇಟಿ ಕೊಟ್ಟಿದ್ದ. ಹಿಂದುಸ್ತಾನದಲ್ಲಿಯೇ ಬೀದರ ಪ್ರಸಿದ್ಧ ನಗರವೆಂದು ಆತ ವರ್ಣಿಸಿದ್ದಾನೆ. ಅದು 'ಜಗತ್ಪ್ರಸಿದ್ಧ ವ್ಯಾಪಾರ ಕೇಂದ್ರ' ವೆಂದೂ ಹೇಳುತ್ತಾನೆ. ನಿಕೆಟಿನ್ ಆ ಕಾಲದ ಸಾಮಾಜಿಕ ಸ್ಥಿತಿಗತಿಗಳನ್ನು ಸ್ವಾರಸ್ಯಕರವಾಗಿ ಚಿತ್ರಿಸಿದ್ದಾನೆ.

'ಬಿದರಿ ವರ್ಕ್ಸ್' ಎಂದರೆ ದೇಶ ವಿದೇಶಗಳಲ್ಲಿ ಇಲ್ಲಿನ ಕಲಾಕೃತಿಗಳು ಪ್ರಸಿದ್ಧವಾಗಿವೆ. ಸತುವು ಮತ್ತು ತಾಮ್ರಗಳ ಲೋಹ ಮಿಶ್ರಣದಿಂದ ತಯಾರಾದ ಕುಶಲ ಕಲಾಕೃತಿಗಳ ಸೌಂದರ್ಯಕ್ಕೆ ಮಾರುಹೋಗದವರು ಯಾರು? ಬೆಳ್ಳಿ-ಬಂಗಾರದ ಸೂಕ್ಷ್ಮ ಕೆತ್ತನೆಗೆ ಬೀದರ ಪ್ರಸಿದ್ಧವಾಗಿದೆ.

ಜೈನ, ಬೌದ್ಧ, ಶೈವ, ವೀರಶೈವ, ಇಸ್ಲಾಂ ಸಂತರ ಮಂದಿರ-ಮಸೀದಿಗಳು ಭಕ್ತಿ ಶಾಂತಿಗಳ ಸ್ಥಾನಗಳಾಗಿವೆ.

ಭಾರತ ಸ್ವಾತಂತ್ರ್ಯ ಪಡೆದ ನಂತರ ನಿಜಾಮ ಆಳ್ವಿಕೆಯ ವಿರುದ್ಧ, ಸ್ವಾಮಿ ರಮಾನಂದ ತೀರ್ಥರ ಮುಂದಾಳತ್ವದಲ್ಲಿ ಬಳವಂತರಾವ್ ಖಾನಾಪುರಕರ್, ಮುರಲೀಧರರಾವ್, ಆರ್.ವಿ. ಬೀಡಪ್, ರಂಗರಾವ್ ಸೈಗಾಂವ್‌ಕರ್, ಶ್ರೀನಿವಾಸರಾವ್ ಎಕ್ಕೆಳ್ಳಿಕರ್, ಶ್ರೀನಿವಾಸ ಹವಾಲ್ದಾರ್, ಬಾಪುರಾವ್ ದೇಶಪಾಂಡೆ, ಪ್ರಭುರಾವ್ ವಕೀಲ, ಭೀಮರಾವ್ ಪಟವರ್ಧನ್, ರಾಮಚಂದ್ರ ವೀರಪ್ಪ ಇನ್ನೂ ಅನೇಕ ಸ್ವಾತಂತ್ರ್ಯ ಹೋರಾಟಗಾರರು ರಜಾಕಾರ ಹಾವಳಿಯನ್ನು ಬಗ್ಗು ಬಡಿದು ನಿಜಾಮ ಸತ್ತೆಯನ್ನು ನಿಷ್ಕ್ರಿಯಗೊಳಿಸುವಲ್ಲಿ ಯಶಸ್ವಿಯಾದರು.

ಬೀದರ್ ಲೋಕಸಭಾ ಕ್ಷೇತ್ರವಾಗಿದ್ದು ರಾಮಚಂದ್ರ ವೀರಪ್ಪ, ಶಂಕರದೇವ್ ಬಾಲಾಜಿರಾವ್, ನರಸಿಂಗರಾವ್ ಸೂರ್ಯವಂಶಿ, ಮಕ್ಸೂದ ಆಲಿಖಾನ್ ಮುಂತಾದವರು ಲೋಕಸಭೆಯ ಸದಸ್ಯರಾಗಿ ಚುನಾಯಿತರಾಗಿದ್ದಾರೆ.

ಬೀದರ ವಿಧಾನಸಭಾ ಕ್ಷೇತ್ರದಿಂದ ಮಕ್ಸೂದ ಅಲಿಖಾನ್, ಚಂದ್ರಕಾಂತ ಗುರುಪಾದಪ್ಪ, ಮಾಣಿಕರಾವ್ ಫುಲೇಕರ್, ವೀರಸೆಟ್ಟಿ ಕುಶನೂರ, ನಾರಾಯಣರಾವ್ ಮನಹಳ್ಳಿ, ಮಹಮ್ಮದ ಲೈಕುದ್ದೀನ್, ಸಯ್ಯದ ಜುಲ್ಫಿಕಾರ್ ಹಾಸ್ಮಿ, ರಮೇಶಕುಮಾರ ಪಾಂಡೆ ಮುಂತಾದವರು ಚುನಾಯಿತರಾಗಿದ್ದಾರೆ.

ಹುಮನಾಬಾದ ಬೀದರ ಜಿಲ್ಲೆಯ ಇನ್ನೊಂದು ತಾಲ್ಲೂಕು. 'ಜಯಸಿಂಗಪುರ' ಎಂಬುದು ಇದರ ಪ್ರಾಚೀನ ಹೆಸರು. ಮುಸ್ಲಿಂ ಆಳರಸರು ಇದಕ್ಕೆ ಕೊಟ್ಟ 'ಹುಮನಾಬಾದ' ಎಂಬ ಹೆಸರನ್ನೇ ಇದು ಈಗ ಉಳಿಸಿಕೊಂಡಿದೆ. ಮುಂಬಯಿ-ಹೈದರಾಬಾದ ಹೆದ್ದಾರಿಯ ಮೇಲಿದೆ. ಜಯಸಿಂಗಪುರವು ಒಂದು ಸುಂದರ ನಗರವಾಗಿರುವಂತೆ ಪ್ರಸಿದ್ಧ ಐತಿಹಾಸಿಕ ಸ್ಥಳವೂ ಆಗಿದೆ. 12ನೆಯ ಶತಮಾನದ ಶಿವಶರಣರ ಪಾದಸ್ಪರ್ಶದಿಂದ ಪಾವನಗೊಂಡ ಪುಣ್ಯಭೂಮಿ ಇದು. ಹಿಂದು-ಮುಸ್ಲಿಂ ಸಂಸ್ಕೃತಿಗಳ ಸಮನ್ವಯವನ್ನು ಇಲ್ಲಿ ಕಾಣಬಹುದು. ಇಲ್ಲಿ ಎಲ್ಲ ಜಾತಿಯ

ಜನವರ್ಗದವರಿದ್ದಾರೆ. ವೀರಶೈವರು, ಬ್ರಾಹ್ಮಣರು, ವೈಶ್ಯರು, ಮರಾಠರು, ರೆಡ್ಡಿ, ರಜಪೂತ, ಕಬ್ಬಲಿಗರು, ಕುರುಬರು, ಉಪ್ಪಾರರು, ಬೇಡರು, ಲಂಬಾಣಿ, ಮೇದಾರ, ಪರಿಶಿಷ್ಟ ಜಾತಿಯವರು, ಬೌದ್ಧರು, ಕ್ರಿಶ್ಚಿಯನ್ನರು, ಕುಂಬಾರರು, ಮುಸ್ಲಿಮರು ಮೊದಲಾದವರೆಲ್ಲ ಇದ್ದಾರೆ. ಈ ನಗರದಲ್ಲಿ ನೂರಾ ಒಂದು ಮಠಗಳು ಇದ್ದದ್ದು ತಿಳಿದುಬರುತ್ತದೆ. 12ನೇ ಶತಮಾನದ ಅನೇಕ ಶರಣರ ತಪಸ್ಸಿನ ಕೇಂದ್ರ ಇದಾಗಿತ್ತೆಂದು ತಿಳಿದು ಬರುತ್ತದೆ. ಈ ನಗರದ ಸುಮಾರು 2 ಕಿ.ಮೀ. ದೂರದಲ್ಲಿರುವ ಮಾಣಿಕನಗರವು ಸಕಲ ಮತಾಚಾರ್ಯರೆನಿಸಿದ ಸಂತ ಮಾಣಿಕ ಪ್ರಭುಗಳು ನೆಲೆಸಿದ ಪುಣ್ಯಕ್ಷೇತ್ರ. ಗಡವಂತಿಯಲ್ಲಿ ಬಸವಣ್ಣನವರ ಸಮಕಾಲೀನ ಶರಣ ಮುಗ್ಧ ಸಂಗಯ್ಯನವರ ಗವಿ ಇದೆ. ಮೋಳಖೇರಾದಲ್ಲಿ ಶರಣ ಮೋಳಿಗೆ ಮಾರಯ್ಯನ ಗವಿ ಇದೆ. ಕರಕನಹಳ್ಳಿ ಬಕ್ಕಪ್ರಭು ಶಿವಯೋಗಿಗಳು ನೆಲೆಸಿದ್ದ ತಾಣ. ಬೆಳಖೇರಾ ಚಾಲುಕ್ಯ ಹಾಗೂ ರಾಷ್ಟ್ರಕೂಟರ ರಾಜಗುರುವಾದ ರುದ್ರಮುನಿ ಶಿವಾಚಾರ್ಯರ ಗ್ರಾಮವೆಂದು ಪ್ರತೀತಿ ಇದೆ. ಈ ತಾಲ್ಲೂಕಿನಲ್ಲಿ ಹೆಸರುವಾಸಿಯಾದ ಕವಿಗಳು, ನಾಟಕಾರರು ಆಗಿಹೋಗಿದ್ದಾರೆ. ದುಮ್ಮನಸೂರಿನ ಸಿದ್ಧಪ್ರಭುಗಳು ಸಣ್ಣಾಟಗಳನ್ನು ಹಾಗು ಹಾಡುಗಳನ್ನು ರಚಿಸಿದ್ದಾರೆ. ಮಡಿವಾಳಪ್ಪನವರು ಹಾಡುಗಳನ್ನು ರಚಿಸಿದ್ದಾರೆಂದು ತಿಳಿದುಬರುತ್ತದೆ. ಈಗಿನ ಕವಿಗಳಲ್ಲಿ ಹುಡುಗಿಯ ಬಸವರಾಜ ಸೆಯಿನೀರ, ಗಡವಂತಿಯ ಬಂಡೆಪ್ಪ ಖೂಬಾ, ಮಾಣಿಕರಾವ್ ಧನಶ್ರೀ ಮುಂತಾದವರು ಪ್ರಮುಖರು. ವಚನ ಸಾಹಿತ್ಯದಂತಹ ವಿಶಿಷ್ಟ ಪರಂಪರೆ ಈ ತಾಲ್ಲೂಕಿನಲ್ಲಿದೆ.

ಈ ಕ್ಷೇತ್ರದಿಂದ ವಿಧಾನಸಭೆಗೆ ಮುರಲೀಧರರಾವ್, ಗೋಪಾಲರಾವ್ ಮುಡಬಿ, ವಿ.ಎನ್. ಪಾಟೀಲ, ಮಕ್ಸೂದ ಆಲಿಖಾನ್, ಬಸವರಾಜ ಹಾವಗಪ್ಪ, ಸುಭಾಷ ಕಲ್ಲೂರು ಮುಂತಾದವರು ಚುನಾಯಿತರಾಗಿದ್ದಾರೆ.

ಔರಾದ ಬೀದರ ಜಿಲ್ಲೆಯ ಇನ್ನೊಂದು ತಾಲ್ಲೂಕು. ಇದು ಕರ್ನಾಟಕ ರಾಜ್ಯದ ಅತ್ಯಂತ ಉತ್ತರದ ಗಡಿಯಲ್ಲಿದೆ. 149 ಗ್ರಾಮಗಳಿವೆ. ಔರಾದ, ತೋರಣ, ಸಂತಪೂರ ಹೋಬಳಿಗಳು. ತಾಲ್ಲೂಕಿನ ವಿಸ್ತೀರ್ಣ 1228.6 ಚ.ಕಿ.ಮೀ. ಇಲ್ಲಿ ಅಮರೇಶ್ವರ ದೇವಾಲಯವಿದ್ದು, ಪ್ರತಿವರ್ಷ ಶಿವರಾತ್ರಿಯಂದು ಜಾತ್ರೆ ನಡೆಯುತ್ತದೆ.

ಈ ಕ್ಷೇತ್ರದಿಂದ ವಿಧಾನಸಭೆಗೆ ಪ್ರಭುರಾವ್ ದೊಂಡಿಬಾ, ಮಾಣಿಕರಾವ್ ಪಾಟೀಲ, ಬಾಪುರಾವ್ ಪಾಟೀಲ, ಗುರುಪಾದಪ್ಪ ನಾಗಮಾರಪಲ್ಲಿ, ಗುಂಡಪ್ಪ ವಕೀಲ ಮುಂತಾದವರು ಚುನಾಯಿತರಾಗಿದ್ದಾರೆ.

ಭಾಲ್ಕಿ ಬೀದರ ಜಿಲ್ಲೆಯ ಇನ್ನೊಂದು ತಾಲ್ಲೂಕು. 122 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 1113.8 ಚ.ಕಿ.ಮೀ. ತಾಲ್ಲೂಕಿನ ಮುಖ್ಯನದಿಗಳು ಮಾಂಜರಾ ಮತ್ತು ಕಾರಂಜಾ. ವಾರ್ಷಿಕ ಸರಾಸರಿ ಮಳೆ 919 ಮಿ.ಮಿ. 'ಭಲ್ಲುಕೆ' ಇದರ ಹಿಂದಿನ ಹೆಸರು. ಘಟಕಾಯಕನಾಗಿದ್ದ

ಶಿವನಾಟ್ಯದ ಸವಿಯುಂಡ ಗುಂಡಯ್ಯನು ಬದುಕಿ ಬಾಳಿದ ತಾಣವಿದು. ಇಲ್ಲಿ ಕುಂಬಾರ ಗುಂಡಯ್ಯ ತಾನೂ ಕುಣಿದು ಶಿವನನ್ನೂ ಕುಣಿಸಿದ್ದಾನೆ. ಮಹಾಕವಿ ಹರಿಹರ ಮಾಡಿದ ಗುಂಡಯ್ಯನ ನಾಟ್ಯವರ್ಣನೆ ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾದ ವರ್ಣನೆಯಾಗಿದೆ. ಇಲ್ಲಿನ ಹಿರೇಮಠ 14ನೆಯ ಶತಮಾನದ್ದೆಂದು ಹೇಳಲಾಗುತ್ತದೆ.

ಈ ಕ್ಷೇತ್ರದಿಂದ ವಿಧಾನಸಭೆಗೆ ಬಳವಂತರಾವ್ ಖಾನಾಪುರಕರ್, ಭೀಮಣ್ಣಖಂಡ್ರೆ, ಭೀಮಣ್ಣ ಶಿವಲಿಂಗಪ್ಪ, ಸುಭಾಷ ಅಷ್ಟುರೆ, ಡಾ॥ ವಿಜಯಕುಮಾರ ಖಂಡ್ರೆ, ಪ್ರಕಾಶ ಖಂಡ್ರೆ ಮುಂತಾದವರು ಚುನಾಯಿತರಾಗಿದ್ದಾರೆ.

ಬಸವಕಲ್ಯಾಣ ಬೀದರ ಜಿಲ್ಲೆಯ ಇನ್ನೊಂದು ತಾಲ್ಲೂಕು. ಕಲ್ಯಾಣ ಚಾಳುಕ್ಯರ ರಾಜಧಾನಿಯಾಗಿದ್ದ ಕಲ್ಯಾಣವೇ ಈಗ ಬಸವಕಲ್ಯಾಣ. ಬಸವೇಶ್ವರರ ಎಂಟನೆಯ ಶತಮಾನೋತ್ಸವದ ಸವಿನೆಪಿನಗಾಗಿ ಇದನ್ನು ಬಸವಕಲ್ಯಾಣ ಎಂದು ಹೆಸರಿಸಲಾಗಿದೆ. ಕಲ್ಯಾಣದ ಚಾಳುಕ್ಯರ  ಇಮ್ಮಡಿ ಜಯಸಿಂಹನ (ಕ್ರಿ.ಶ. 1015 ರಿಂದ 1043) ಆಳ್ವಿಕೆಯಿಂದ ಕಲ್ಯಾಣ ಕ್ರಾಂತಿ (ಕ್ರಿ.ಶ. 1167) ಯವರೆಗೆ ವೈಭವದಿಂದ ಮೆರೆದ ಕಲ್ಯಾಣ ಪಟ್ಟಣ ಈಗ ಕೇವಲ ಒಂದು ತಾಲ್ಲೂಕು ಕೇಂದ್ರ. ಚಾಳುಕ್ಯ ಮತ್ತು ಕಳಚೂರಿ ಶಾಸನಗಳಲ್ಲಿ ಕಲ್ಯಾಣ, ಕಲ್ಯಾಣ ಪಟ್ಟಣ, ಕಲ್ಯಾಣಪುರಿ ಎಂದು ಕರೆಯಲಾಗಿರುವ ಈ ಪಟ್ಟಣಕ್ಕೆ ಇಸ್ಲಾಮೀಯರ ಆಳ್ವಿಕೆಯ ಕಾಲದಲ್ಲಿ ಕಲ್ಯಾಣಿ ಎಂಬ ಹೆಸರಿತ್ತು. ಇಲ್ಲಿ ಶರಣರು ವಾಸ ಮಾಡಿದ ಗವಿಗಳೂ, ಅನುಭವಮಂಟಪವಿದ್ದ ಸ್ಥಳವೂ ಇವೆ. ಅಲ್ಲದೆ ಅನೇಕ ಐತಿಹಾಸಿಕ ಮಹತ್ವದ ಸ್ಥಳಗಳಿವೆ. ಇತ್ತೀಚೆಗೆ ಬಸವ ಸಮಿತಿಯ ಆಸಕ್ತಿಯಿಂದ ಅನುಭವಮಂಟಪ ಮುಂತಾದ ಅನೇಕ ಹೊಸ ಕಟ್ಟಡಗಳು ರಚಿತವಾಗಿವೆ. ಬಸವಾದಿ ಪ್ರಮಥರು ನಡೆದಾಡಿದ ಪುಣ್ಯ ಸ್ಥಳವಿದು.

ಬಸವಕಲ್ಯಾಣ ಕ್ಷೇತ್ರದಿಂದ ವಿಧಾನಸಭೆಗೆ ಅನ್ನಪೂರ್ಣಬಾಯಿ, ಎಸ್. ಸಂಗನಬಸಪ್ಪ, ಬಾಪುರಾವ್ ಆನಂದರಾವ್, ಬಸವರಾಜ ಪಾಟೀಲ ಅಟ್ಟೂರ, ಎಂ.ಜಿ. ಮೂಳೆ ಮುಂತಾದವರು ಚುನಾಯಿತರಾಗಿದ್ದಾರೆ.

ಬೀದರ ಜಿಲ್ಲೆಯು ವಚನ ಸಾಹಿತ್ಯದ ಉಗಮ ಕೇಂದ್ರವೆಂದು ವರ್ಣಿತವಾಗಿದೆ. ತತ್ವಪದ ಅಥವಾ ಸ್ವರ ವಚನಕಾರರ ದಿವ್ಯಪರಂಪರೆ ಬೀದರ ಜಿಲ್ಲೆಯಲ್ಲಿ ಇಂದಿಗೂ ಮುಂದುವರಿದಿದೆ. ಕ್ರಿ.ಶ. 1780ರಿಂದ 1947ರವರೆಗೆ ಜಿಲ್ಲೆಯಲ್ಲಿ 25 ತತ್ವಪದ ರಚನೆಕಾರರಿದ್ದರೆಂದು ತಿಳಿದುಬರುತ್ತದೆ. ಬಸವಕಲ್ಯಾಣದಲ್ಲಿ ಇವರ ಸಂಖ್ಯೆ ಹೆಚ್ಚು. ಬೀದರ ಜಿಲ್ಲೆಯ ಸ್ವರ ವಚನಕಾರ ರೆಂದರೆ ಮರಕುಂದಿ ಬಸವಣ್ಣಪ್ಪ, ದುಮ್ಮನಸೂರಿನ ಸಿದ್ಧಪ್ರಭು, ಮಾಣಿಕನಗರದ ಮಾಣಿಕಪ್ರಭು, ಕೊಹಿನೂರ ಭದ್ರಪ್ಪ, ಕೊಹಿನೂರ ಹುಸೇನ್, ನಿಡವಂಚಿಯ ನಿಜಲಿಂಗ ಭದ್ರೇಶ್ವರ, ಲಾರಾ ಶಿವರಾಯ, ಭೂತಾಳಿ ಶಿಲ್ಲಪ್ಪ, ಮಂಕಲ ಹುಣಮಂತ, ಹುಡುಗಿಯ ಕರಿಬಸಪ್ಪ ಮೊದಲಾದವರು.

ಬೀದರ ಜಿಲ್ಲೆ ಅನೇಕ ಸೃಜನಶೀಲ ಬರಹಗಾರರಿಗೆ ಹಾಗೂ ಸಂಶೋಧನಕಾರರಿಗೆ ಪ್ರಸಿದ್ಧವಾಗಿದೆ. ನವೋದಯ ಕಾಲದ ಎಂ.ಜಿ. ದೇಶಪಾಂಡೆ, ಡಾ॥ ವೀರೇಂದ್ರ ಸಿಂಪಿ,

ಡಾ|| ಬಸವರಾಜ ಸಬರದ, ಜಿ.ಬಿ. ವಿಸಾಜಿ, ಪಂಚಾಕ್ಷರಿ ಪಟ್ಟಣಸೆಟ್ಟಿ, ಜಗನ್ನಾಥ ಹೆಬ್ಬಾಳೆ, ಕೆ.ಜಿ. ಮಾಶೆಟ್ಟಿ, ಎಸ್.ಎಸ್. ಪರಮೇಶ್ವರ, ಸುಬ್ಬಣ್ಣ ಅಂಬೆಸಂಗೆ, ಮುರಳಿಧರ ಕುಲಕರ್ಣಿ, ಡಾ|| ಎಲ್.ಆರ್. ಕುಲಕರ್ಣಿ, ಪ್ರೇಮಾ ಸಿರ್ಸೆ, ಡಾ|| ವಿಜಯಶ್ರೀ ಸಬರದ, ಗಂಗಾಂಬಿಕೆ, ಸಾಧನಾ ವಂಜೋಳಕರ್, ಯಶೋಧರಮ್ಮ ಸಿದ್ದಪ್ಪ, ಭಾರತಿ ವಸ್ತದ, ನೀಲಾ ಕೆ. ಚಂದೂಮಣಿ, ಸಾವಿತ್ರಿ ಮಧುಕರ, ಇಂದುಮತಿ ಬಂಡಿ, ಉಮಾದೇವಿ ಉದಯಗಿರಿ, ಟಿ.ಎಸ್. ರಶ್ಮಿ ಮುಂತಾದವರು ಜಿಲ್ಲೆಯ ಪ್ರಮುಖ ಬರಹಗಾರರಾಗಿದ್ದಾರೆ.

ಹಿರೇಮಠದ ಚನ್ನಬಸವ ಪಟ್ಟಣದೇವರು ಬೀದರ ಜಿಲ್ಲೆಯಲ್ಲಿ ಕನ್ನಡ ಉಳಿಸಿ ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ.

ಬೀದರನ ಶಿವರುದ್ರಪ್ಪ ವಕೀಲ, ಆರ್.ವಿ. ಬೀಡಪ್ ಮೊದಲಾದವರು ಜಿಲ್ಲೆಯ ಶೈಕ್ಷಣಿಕ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

'ಖ್ಯಾತಿ' ಪತ್ರಿಕೆಯ ಎಂ.ಜಿ. ದೇಶಪಾಂಡೆ, 'ಪಬ್ಲಿಕ್' ಪತ್ರಿಕೆಯ ಗಂಧರ್ವಸೇನಾ 'ಉತ್ತರ ಕರ್ನಾಟಕ' ಪತ್ರಿಕೆಯ ಶಿವಶರಣಪ್ಪವಾಲಿ 'ಜನದನಿ' ಪತ್ರಿಕೆಯ ಮಲ್ಲಿಕಾರ್ಜುನಸ್ವಾಮಿ ಹಾಗು 'ಜನಪದ' ಪತ್ರಿಕೆಯ ಜೋಶಿ ಇಲ್ಲಿನ ಪ್ರಮುಖ ಪತ್ರಕರ್ತರು. 'ಬೀದರ್ ಕಿ ಆವಾಜ್' ಬೀದರ್‌ನ ಪ್ರಮುಖ ಉರ್ದು ಪತ್ರಿಕೆ. ಮರಾಠಿ ಪತ್ರಿಕೆಗಳೂ ಸಹ ಈ ಜಿಲ್ಲೆಯ ಪ್ರಮುಖ ಸ್ಥಾನ ಆಕ್ರಮಿಸಿಕೊಂಡಿವೆ. ಮರಾಠಿ ಪತ್ರಿಕೆಗಳು ಬೀದರ್ ಜಿಲ್ಲೆಯ ಪ್ರಭಾವೀ ಪತ್ರಿಕೆಗಳಾಗಿವೆ.

ಬೀದರ್ ಜಿಲ್ಲೆಯ ಗೋರಟಾದಲ್ಲಿ ಹಿಂದೆ ಬೃಹತ್ ಸಂಗೀತ ಕೇಂದ್ರವಿತ್ತು. ಇಲ್ಲಿ ಸುಮಾರು ಇನ್ನೂರು ಅಧ್ಯಾಪಕರು ಸಂಗೀತ ವಿದ್ಯಾಪ್ರಸಾರದಲ್ಲಿ ನಿರತರಾಗಿದ್ದರೆಂದು, ಭಾಸ್ಕರ ಚಟ್ಟೋಪಾಧ್ಯಾಯ ಆ ವಿದ್ಯಾಮಂದಿರದ ಕುಲಪತಿಗಳಾಗಿದ್ದರೆಂದು ಗೋರಟಾ ಶಾಸನದಲ್ಲಿ ಉಲ್ಲೇಖಿತವಾಗಿದೆ. ಬಹಮನೀ ರಾಜ್ಯದ ಕೊನೆಯ ಸುಲ್ತಾನ ಕರೀಮುಲ್ಲಾನ ಕಾಲದಲ್ಲಿ ಬೀದರ್ ಪಟ್ಟಣದಲ್ಲಿ ಅನಂತ ಸಂಭಾಜಿ ಎಂಬ ಸಂಗೀತ ವಿದ್ವಾಂಸನಿದ್ದನು.

ಹನ್ನೆರಡನೆಯ ಶತಮಾನದಲ್ಲಿ ರಚಿತವಾದ ವಚನಸಾಹಿತ್ಯವಂತೂ ಸಂಗೀತ ಕ್ಷೇತ್ರಕ್ಕೆ ಅನನ್ಯ ಕೊಡುಗೆಯಾಗಿದೆ. ಗೊಂದಲಿಗರು, ಭೂತೇರು, ಬಹುರೂಪಿಗಳು ಹಾಗು ಪುರವಂತ ಜನಾಂಗದ ಜನಪದ ಕಲೆಗಳು ಬೀದರ್ ಜಿಲ್ಲೆಯ ಸಾಂಸ್ಕೃತಿಕ ಲೋಕವನ್ನು ಹಿರಿದುಗೊಳಿಸಿವೆ. ಬೀದರ್ ಜಿಲ್ಲೆಯ 'ಗೊಂಡಾ' ಸಮಾಜವು ಶಾಸ್ತ್ರೀಯ ದೃಷ್ಟಿಯಿಂದ ಅಧ್ಯಯನ ಮಾಡಬಹುದಾದ ಬುಡಕಟ್ಟಾಗಿದೆ. 1994ರ ಸಮೀಕ್ಷೆಯ ಪ್ರಕಾರ ಬೀದರ್ ಜಿಲ್ಲೆಯಲ್ಲಿ 97,531 ಗೊಂಡಾ ಸಮಾಜದವರಿದ್ದರು. ಇವರ ಸಾಮಾಜಿಕ, ಧಾರ್ಮಿಕ ಹಾಗು ಸಾಂಸ್ಕೃತಿಕ ವಿಷಯಗಳು ಅಧ್ಯಯನಕ್ಕೆ ಅರ್ಹವಾಗಿವೆ. ಪಾರಂಪಾರಿಕ ಅಲೆಮಾರಿತನದಿಂದಾಗಿ ಈ ಜನಾಂಗಕ್ಕೆ ಯಾವುದೇ ಸವಲತ್ತು ದೊರಕಿಲ್ಲ.

ಟೋಕರಿ ಸಮಾಜ ಮತ್ತು ಬೇಡ ಜನಾಂಗ ಈ ಜಿಲ್ಲೆಯಲ್ಲಿದೆ. ಟೋಕರಿ (ಕೋಳಿ) ಇವರನ್ನ 'ಟೋಪ್ರಿ' 'ಕಬ್ಬಲಿಗ' ಎಂದು ಕರೆಯಲಾಗುತ್ತದೆ. ಟೋಪ್ರಿ (ದೋಣಿ) ನದಿಯ ಆ

ದಂಡೆಯಿಂದ ಈ ದಂಡೆಗೆ ಜನರನ್ನ ಸಾಗಿಸುತ್ತಿದ್ದ ಕಾರಣ ಟೋಕ್ರಿ, ಕೋಳಿ ಅಥವಾ ಗಂಗಾಮತಸ್ಥರು ಎಂಬ ಹೆಸರು ಈ ಸಮಾಜಕ್ಕೆ ಬಂದಿದೆ.

## ಉಪ್ಪಾರ ಸಮಾಜ

ಬೀದರ್ ಜಿಲ್ಲೆಯಲ್ಲಿ ಉಪ್ಪಾರ ಜನಾಂಗ ಸಾಕಷ್ಟು ಗಣನೀಯ ಸಂಖ್ಯೆಯಲ್ಲಿದೆ. ಬೀದರ್‌ನ ಐದು ತಾಲ್ಲೂಕಿನಿಂದ 14,950 ಉಪ್ಪಾರ ಕುಟುಂಬಗಳನ್ನು ಸಮೀಕ್ಷೆಯಿಂದ ಗುರುತಿಸಲಾಗಿದೆ.

ಔರಾದ್ ತಾಲ್ಲೂಕಿನಲ್ಲಿ 3325 ಉಪ್ಪಾರ ಕುಟುಂಬಗಳಿದ್ದರೆ ಬೀದರ್‌ನಲ್ಲಿ 3010 ಹುಮನಾಬಾದ್ 3625 ಬಸವಕಲ್ಯಾಣ 1035 ಹಾಗು ಭಾಲ್ಕಿಯಲ್ಲಿ 2650 ಉಪ್ಪಾರ ಕುಟುಂಬಗಳಿವೆಯೆಂದು ತಿಳಿದುಬರುತ್ತದೆ.

ಔರಾದ್ ತಾಲ್ಲೂಕಿನಲ್ಲಿ 18,285, ಬೀದರ್‌ನಲ್ಲಿ 19,850, ಹುಮನಾಬಾದ್‌ನಲ್ಲಿ 20,985, ಬಸವಕಲ್ಯಾಣದಲ್ಲಿ 12,450 ಹಾಗೂ ಭಾಲ್ಕಿಯಲ್ಲಿ 13,930 ಜನ ಉಪ್ಪಾರರಿದ್ದಾರೆಂದು ಹೇಳಲಾಗಿದೆ.

ಬೀದರ್ ಜಿಲ್ಲೆಯಲ್ಲಿ 65,500 ಉಪ್ಪಾರ ಬಂಧುಗಳಿದ್ದಾರೆಂದು ಹೇಳಲಾಗಿದೆ. ಔರಾದ್ ತಾಲ್ಲೂಕಿನ ಮುಸ್ತಾಪುರ, ಶಂಬೆಳ್ಳಿ, ಕೊಳ್ಳೂರು, ಮಸ್ಕಲ, ಚಟನಾಳ, ವಡಗಾಂವ್, ಬೆಲದಾಳ, ಬಾದಲಗಾಂವ್, ಚಿಂತಾಕಿ, ಇಟಗ್ಯಾಳ, ನಂದ್ಯಾಳ, ಕರಂಜಿ, ನಾಗನಪಲ್ಲಿ, ತುಳಜಾಪುರ, ಔರಾದ್ (ಬಿ), ಕರಕ್ಯಾಳ, ದೊಂಗರಗಾಂವ್, ಬೆಮ್ಮೆಗಾಂವ್, ಬೊಂತಿ, ಸವರಗಾಂವ್, ಹಿಪ್ಪಳಗಾಂವ್, ಬೆಳಕೂಣಿ, ಹೊಕ್ಕರಣಾ, ಹಂಗರಣಾ, ತೋರಣ, ಮುರ್ಕಿ, ಕಮಲನಗರ, ಮುಧೋಳ, ಕುಶನೂರು, ಕೊಟಿಗ್ಯಾಳ, ನಾಗಮಾರಪಲ್ಲಿ, ದಾಬಕಾ ಬಂಡಾರಕುಮುಟಾ, ಚಿಕಲಿ ಹಾಗು ಮದನೂರು ಗ್ರಾಮಗಳಲ್ಲಿ ಉಪ್ಪಾರ ಬಂಧುಗಳು ಹೆಚ್ಚಿದ್ದಾರೆ.

ಈ ತಾಲ್ಲೂಕಿನ ಪ್ರಮುಖ ಉಪ್ಪಾರ ಕುಟುಂಬದವರೆಂದರೆ ಮುಸ್ತಾಪುರದ ಚಂದ್ರಪ್ಪ, ಮಾರುತಿ ಉಪ್ಪಾರ, ರಾಮಣ್ಣ ಚಂದ್ರಪ್ಪ ಉಪ್ಪಾರ, ಶಂಬೆಳ್ಳಿಯ ಗೋವಿಂದಪ್ಪ ಎಂಕಪ್ಪ ಕೊಳ್ಳೂರು, ಶಿವರಾಮನರಸಪ್ಪ ಉಪ್ಪಾರ, ಬಾಬುರಾವ್ ಕಾಶಿರಾಮ್, ಶೆಟ್ಟಿ ಉಪ್ಪಾರ, ಮಸ್ಕಲ್‌ನ ನರಸಪ್ಪ ನಾಗಪ್ಪ ಉಪ್ಪಾರ, ಚಟನಾಳದ ಪಂಡರಿ ಉಪ್ಪಾರ, ವಡಗಾಂವ್‌ನ ಪ್ರಭುರಾವ್ ಉಪ್ಪಾರ, ಕಾಶಿನಾಥ ಉಪ್ಪಾರ, ಬೆಲದಾಳದ ಮಾರುತಿ ಭೀಮಣ್ಣ ಉಪ್ಪಾರ, ಬಾದಲಗಾಂವ್‌ನ ಶಿವಾಜಿರಾವ್ ರಘುನಾಥ ಸಗರ, ದಿಗಂಬರ ಭಾಗಣ್ಣ ಸಗರ, ಚಿಂತಾಕಿಯ ರಾಮಣ್ಣ ಗುಂಡಪ್ಪ ಉಪ್ಪಾರ, ಇಟಗ್ಯಾಳದ ಬಾಲಮ್ಮ ಬಾಬುರಾವ್ ಉಪ್ಪಾರ, ಸಾಯುಲು ಪೀರಪ್ಪ ಉಪ್ಪಾರ, ನಂದಾಳಿ ಗ್ರಾಮದ ದೊಂಡಿಬಾ ಗಂಗಾರಾಮ ಉಪ್ಪಾರ, ಕರಂಜಿ ಮಲ್ಲಪ್ಪ ಉಪ್ಪಾರ, ನಾಗಪಲ್ಲಿಯ ದತ್ತುರಾವ್ ಉಪ್ಪಾರ, ತುಳಜಾಪುರದ ಬಾಲಪ್ಪ ಸಾಯಿಬಣ್ಣ ಉಪ್ಪಾರ, ಔರಾದ್‌ನ ಹನುಮಂತರಾವ್ ಉಪ್ಪಾರ, ಎಂ.ಎಸ್. ಗಂಗಾರಾಮ್, ಸುಭಾಶ್

ಮಾರುತಿರಾವ್ ಉಪ್ಪಾರ, ಮನೋಹರ ರಾಮಣ್ಣ ಉಪ್ಪಾರ ಶರಣಪ್ಪ ಧೂಳಪ್ಪ ಉಪ್ಪಾರ, ಕರಕ್ಯಾಳ ಗ್ರಾಮದ ತಾನಾಜಿ ನರಸಿಂಗರಾವ್ ಸಗರ್, ಕೊಂಡಿಬಾ ತುಳಸಿರಾಮ್ ಸಗರ್, ನರಸಿಂಗರಾವ್ ಶಂಕರರಾವ್ ಸಗರ್, ಕಾಶಿರಾಂ ಮರಡೆ, ಡೊಂಗರಗಾಂವ್‌ನ ಮನೋಹರ ಗಣಪತಿ ಉಪ್ಪಾರ, ಚೆಮ್ಮೆಗಾಂವ್‌ನ ದತ್ತು ಮಹಾರಾಜ್ ಬಾಪುಶಾ ಸಗರ್, ಯೊಕರಾಶಾ ದಿಗಂಬರ ಸಗರ್, ಶ್ರೀಪತರಾವ್ ಸಗರ ಸಾವರಗಾಂವ್, ಹಂಗರಗಾದ ಮಾರುತಿರಾವ್ ಸಗರ, ತೋರಣಾದ ನರಸಿಂಗರಾವ್ ಮನೋಹರ ಉಪ್ಪಾರ, ಮೂರ್ಕಿಯ ಮಾರುತಿರಾವ್ ಸಗರ್, ಹಿಪ್ಪಳಗಾಂವ್‌ನ ತುಕರಾಮ್ ಕಾಶಿನಾಥ ಸಗರ್, ಬೆಳಕೂಣೆಯ ಪ್ರಕಾಶ್ ಕಾಶಿನಾಥ ಉಪ್ಪಾರ, ಗ್ಯಾನೋಬಾಶಂಕರ ಉಪ್ಪಾರ, ಮುಧೋಳದ ಕಾಶೀನಾಥ್ ಉಪ್ಪಾರ, ಕಮಲ ನಗರದ ವಿಜಯಕುಮಾರ ಗಣಪತಿ ಉಪ್ಪಾರ, ಕುಶನೂರು ಗ್ರಾಮದ ವೀರಪ್ಪ ಮಲ್ಲಪ್ಪ ಉಪ್ಪಾರ, ನಾಗಮಾರಪಲ್ಲಿ ಹಣಮಂತರಾವ್ ಬರ್ಲೆ ಉಪ್ಪಾರ, ಗಣಪತಿ ಉಪ್ಪಾರ ಕೋಟಗ್ಯಾಳದ ವಿಠಲರಾವ್ ಉಟಕೊರೆ ಮುಂತಾದ ಉಪ್ಪಾರ ಕುಟುಂಬಗಳನ್ನು ಈ ತಾಲ್ಲೂಕಿನಲ್ಲಿ ಗುರುತಿಸಬಹುದು.

ಔರಾದ್‌ನಲ್ಲಿ 40 ಜನ ಎಸ್‌ಎಸ್‌ಎಲ್‌ಸಿ ಪಾಸು ಮಾಡಿದ್ದಾರೆ. 14 ಪದವಿಪೂರ್ವ, 12 ಪದವಿ, ಒಬ್ಬರು ಐಟಿಐ ಹಾಗು ಎಂಬಿಬಿಎಸ್ ಪದವಿ ಪಡೆದ ಏಕೈಕ ಯುವಕ ಈ ಸಮುದಾಯದಲ್ಲಿ ಕಾಣಬರುತ್ತಾರೆ.

ವ್ಯವಸಾಯ, ಕೂಲಿ, ಗೌಂಡಿ ಮತ್ತು ಅಲ್ಪಪ್ರಮಾಣದಲ್ಲಿ ಸರ್ಕಾರಿ ನೌಕರಿಯನ್ನು ಉಪ್ಪಾರ ಜನಾಂಗ ತಮ್ಮ ಜೀವನ ನಿರ್ವಹಣೆಗೆ ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಬೀದರ್ ತಾಲ್ಲೂಕಿನಲ್ಲಿ 12 ಜನ ಎಸ್‌ಎಸ್‌ಎಲ್‌ಸಿ, 4 ಜನ ಪಿಯುಸಿ ಹಾಗು ಒಬ್ಬರು ಬಿ.ಎ.ಬಿ.ಇಡಿ ಮುಗಿಸಿದವರು ಉಪ್ಪಾರ ಜನಾಂಗದಲ್ಲಿ ಕಾಣಬರುತ್ತಾರೆ.

ಬೀದರ್ ತಾಲ್ಲೂಕಿನ ತಡಪಳ್ಳಿ ಅಮಲಾಪುರ, ನಾಗೂರ (ವಕಾರೆ), ಬೆಳ್ಳೂರು, ಮನ್ನಳ್ಳಿ, ಬರೂರು, ಮರಕುಂದಾ, ಬಗದಲ್, ಅಣದೂರು, ನೆಲವಾಳ, ಬೀದರ್, ತಾದಲಾಪುರ, ಚಿಕ್ಕಪೇಟೆ, ಹಣಮಂತವಾಡಿ, ರಾಜೇಶ್ವರ, ಎಣಕೂರ್, ಸಿಕಂದರಾಪುರ, ಚಿಲ್ಲರಗಿ, ಚಿಟಾಗೋರನಪಳ್ಳಿ, ಖಾಜಾಪುರ, ಹಳೆಂಬರ, ತಿವಾಳ, ಮತ್ತು ಬಾವುಗಿ ಗ್ರಾಮಗಳಲ್ಲಿ 1680 ಉಪ್ಪಾರ ಕುಟುಂಬಗಳಿವೆ. ಅವುಗಳಲ್ಲಿ 9870 ಜನರಿದ್ದಾರೆಂದು ಹೇಳಲಾಗಿದೆ.

ಕಡಪಳ್ಳಿಯ ಶ್ರೀಮತಿ ನರಸಮ್ಮ ಹನುಮಂತಪ್ಪ ಉಪ್ಪಾರ ಗ್ರಾಮಪಂಚಾಯತ್ ಸದಸ್ಯರು, ಶ್ರೀಮತಿ ವೆಂಕಮ್ಮ ವಿಠಲ ಉಪ್ಪಾರ ಗ್ರಾಮಪಂಚಾಯತ್‌ನ ಮಾಜಿ ಸದಸ್ಯರು, ವಿಠಲ ಪಾಂಡಪ್ಪ ಉಪ್ಪಾರ ಕಾರ್ಯದರ್ಶಿ ಹಾಲು ಉತ್ಪಾದಕರ ಸಂಘ, ಚಂದ್ರಪ್ಪ ಉಪ್ಪಾರ, ಮಾಣಿಕಪ್ಪ ಉಪ್ಪಾರ ಮತ್ತು ಬಸವರಾಜ ಹನುಮಂತಪ್ಪ ಉಪ್ಪಾರ, ಅಮಲಾಪುರದ ರಾಜಣ್ಣ ಕೃಷ್ಣಪ್ಪ ಉಪ್ಪಾರ,  ನಾಗೂರ (ವಕಾಶಿ) ರಾಮುಲು ದಶರಥ ಉಪ್ಪಾರ, ಬೆಳ್ಳೂರು ತಿಪ್ಪಣ್ಣ

ಹನುಮಂತಪ್ಪ ಉಪ್ಪಾರ, ಮನ್ನಳ್ಳಿಯ ರಾಜಾ ಪುಂಡಲೀಕ ಉಪ್ಪಾರ, ಬರೂರಿನ ದತ್ತು ಮಾಣಿಕಪ್ಪ ಉಪ್ಪಾರ, ಮರಕುಂದಾದ ಬಕ್ಕಪ್ಪ ತುಕ್ಕಪ್ಪ ಉಪ್ಪಾರ, ಬಗದಲ ಪ್ರಭು ನರಸಪ್ಪ ಉಪ್ಪಾರ, ಅಣದೂರಿನ ತಿಪ್ಪಣ್ಣ ಚಂದ್ರಪ್ಪ ಉಪ್ಪಾರ, ನೆಲವಾಳದ ಮಾಣಿಕಸಾಯಿಬಣ್ಣಾ ಉಪ್ಪಾರ, ಬಾವುಗಿಯ ಬಾಬು ತುಕ್ಕಪ್ಪ ಉಪ್ಪಾರ ಹಾಗೂ ಬೀದರ್‌ನ ಹನುಮಂತರಾವ್ ಲಾದೇಕರ್, ಡಿಸಿಸಿ ಬ್ಯಾಂಕ್‌ನ ನಿವೃತ್ತ ಮ್ಯಾನೇಜರ್ ಮಹೇಶ್ ಮತ್ತು ಸುದರ್ಶನ್ ಜಿಲ್ಲಾ ಪಂಚಾಯತ್‌ನ ಇಂಜಿನಿಯರ್, ಬಾಬು ಉಪ್ಪಾರ, ಶಾಮರಾವ್ ಗುಂಡಪ್ಪ ಚಿಂತಾಮಣಿ ತಾಲ್ಲೂಕು ಬೋರ್ಡ್‌ನ ಮಾಜಿ ಸದಸ್ಯರು, ಮಹೇಶ್ ಶಾಮರಾವ್ ಚಿಂತಾಮಣಿ ಪ್ರಸ್ತುತ ನಗರಸಭಾ ಸದಸ್ಯರು, ರೇವಣ್ಣಪ್ಪರೆಡ್ಡಿ, ಕೆಎಸ್‌ಆರ್‌ಟಿಸಿಯ ಮ್ಯಾನೇಜರ್ ಹಾಗೂ ತಾದಲಾಪುರದ ಶರಣಪ್ಪ ಔರಾದ್‌ಕರ್ ಗ್ರಾಮಪಂಚಾಯತ್‌ನ ಸದಸ್ಯರು ಮುಂತಾದವರು ತಾಲ್ಲೂಕಿನ ಪ್ರಮುಖ ಉಪ್ಪಾರ ಸಮಾಜದ ವ್ಯಕ್ತಿಗಳಾಗಿದ್ದಾರೆ.

ಹುಮನಾಬಾದ್ ತಾಲ್ಲೂಕಿನ ಮನ್ನಯಕ್ಕಳ್ಳಿ, ಮಿನಕೇರಾ, ವಿಠಲಪುರ, ಬೆಮಳಖೇಡ, ಕಂದಗೋಳ, ಸಿರಕಟನಳ್ಳಿ, ಹಿಲಾಲಪುರ, ಹಳ್ಳಿಖೇಡ (ಬಿ), ಕಬೀರಾಬಾದ್‌ವಾಡಿ, ದುಬಲಗುಂಡಿ, ಚನ್ನಳ್ಳಿ, ನಿಂಬೂರು, ಬನ್ನಳ್ಳಿ, ಬೆಳಕೆರಾ, ಉಡಬಾಳ, ಮುಸ್ತುರಿ, ಚಿಟಗುಪ್ಪ, ಹುಡಗಿ, ಕುಡಂಬಲ, ಬೊತಗಿ, ಬೆನ್‌ಚಿಂಚೋಳಿ, ಅಮಿರಾಬಾದ್‌ವಾಡಿ, ಮದನಾಳ, ಮಾಣಿಕನಗರ, ಕನಕಟ್ಟ, ಘಾಟಿಬೊರೆಳ ಚಿನಕೆರಾ, ಜನತಾನಗರ, ಚಾಂಗಲೇರ, ಹುಮನಾಬಾದ್, ಪೋದರಪಳ್ಳಿ, ಕರಕನಳ್ಳಿ ಹಾಗು ಇಂದಿರಾನಗರಗಳಲ್ಲಿ ಉಪ್ಪಾರರು ಗಣನೀಯ ಪ್ರಮಾಣದಲ್ಲಿದ್ದಾರೆ.

ಮನ್ನಾ ಎಖ್ಖೆಳ್ಳಿ ಗ್ರಾಮದ ಈಶ್ವರ ಶಿವರಾಮ ಉಪ್ಪಾರ, ಈಶ್ವರ ಹಣಮಂತ ಉಪ್ಪಾರ ಹಾಗು ಮಂಜನಾಥ ಶಿವರಾಮ ಉಪ್ಪಾರ ಅವರು ಶಿಲ್ಪಿಗಳಾಗಿದ್ದಾರೆ.

ಮಿನಕೇರನ ವಿಠಲ ಉಪ್ಪಾರ, ವಿಠಲಪುರದ ನಾಗೇಂದ್ರ ಉಪ್ಪಾರ, ಬೆಮಳಖೇಡದ ಬಂಗಾರಪ್ಪ ಉಪ್ಪಾರ, ಕಂದಗೋಳದ ಗುಂಡಪ್ಪ ಉಪ್ಪಾರ, ಸಿರಕಾಟನಳ್ಳಿಯ ವಿಠಲರಾವ್ ಉಪ್ಪಾರ, ಹಿಲಾಲಪುರದ ಪ್ರಭುರಾವ್ ಉಪ್ಪಾರ, ನಿಂಬೂರು ಶರಣಪ್ಪ ಉಪ್ಪಾರ, ಹಳ್ಳಿಖೇಡ (ಬಿ)ದ ಶರಣಪ್ಪ ಹನುಮಂತಪ್ಪ ಉಪ್ಪಾರ, ಕಬೀರಬಾದ್‌ವಾಡಿ ದೇವೇಂದ್ರ ಉಪ್ಪಾರ, ದುಬಲಗುಂಡಿ ಗೋವಿಂದಉಪ್ಪಾರ, ಚನ್ನಳ್ಳಿ ಬಾಬುರಾವ್ ಉಪ್ಪಾರ, ಸಿರ್ಣಾದ ಗೋವಿಂದಪ್ಪ ಹನುಮಂತಪ್ಪ ಉಪ್ಪಾರ, ಬಕ್ಕಪ್ಪ ತುಕ್ಕಪ್ಪ ಉಪ್ಪಾರ, ಬನ್ನಳ್ಳಿ ಜಯರಾವ್ ಗುಂಡಪ್ಪ ಉಪ್ಪಾರ, ಶಿವರಾಜ ಶಾಮಪ್ಪ ಉಪ್ಪಾರ, ಸೋಬಾನೆ ಪದ ಹಾಡುಗಾರ್ತಿ ಶ್ರೀಮತಿ ಗಂಗಮ್ಮ ಗಂಗಪ್ಪ ಉಪ್ಪಾರ ಹಾಗು ಬೆಳಕೆರಾ ಗ್ರಾಮದ ತುಕರಾಮ ಕಲ್ಲಪ್ಪ ಉಪ್ಪಾರ, ಬಡಬಾಳ ಗ್ರಾಮದ ಗೋವಿಂದ ಚಂದ್ರಪ್ಪ ಉಪ್ಪಾರ, ಮುಸ್ತುರಿಯ ಶಂಕರ ಉಪ್ಪಾರ, ಚಿಟಗುಪ್ಪದ ರವಿಕುಮಾರ ದತ್ತು ಉಪ್ಪಾರ, ನಗರಸಭೆಯ ಸದಸ್ಯರು ವಿಶ್ವನಾಥ ಉಪ್ಪಾರ ಮತ್ತು ವೀರಣ್ಣ ಉಪ್ಪಾರ,

ಫೋಟೋ ಸ್ಟುಡಿಯೋ ಮಾಲೀಕರು ಹಾಗೂ ಪ್ರಥಮ ದರ್ಜೆ ಗುತ್ತಿಗೆದಾರರು ಕುಡಂಬಲದ ತುಕರಾಮ ಉಪ್ಪಾರ, ಗೊರೆತಗಿಯ ಗುಂಡಪ್ಪ ಉಪ್ಪಾರ, ಬೆನ್‌ಚಿಂಚೋಳಿಯ ಶಿವರಾಜ ಉಪ್ಪಾರ, ಅಮಿರಾಬಾದ್ (ವಾಡಿ) ಶಿವರಾಜ ಉಪ್ಪಾರ, ಮುದನಾಳದ ಶೇಷಪ್ಪ ಉಪ್ಪಾರ, ಮಾಣಿಕನಗರದ ಜನಾರ್ದನ ಉಪ್ಪಾರ, ಕನಕಟ್ಟಾ ಶಂಕರರಾವ್ ಉಪ್ಪಾರ, ಚಾಂಗಲೇರದ ಚಂದ್ರಕಾಂತ ಉಪ್ಪಾರ, ಹುಮನಾಬಾದ್‌ನ ಚನ್ನಪ್ಪ ಉಪ್ಪಾರ, ಶಿವರಾಜ ಉಪ್ಪಾರ ಹಾಗು ಪುಂಡಲೀಕರಾವ್ ಉಪ್ಪಾರ-ಈ ಕುಟುಂಬಗಳು ಉಪ್ಪಾರ ಸಮುದಾಯದವರಲ್ಲಿ ಪ್ರಮುಖರಾಗಿದ್ದಾರೆ. ಈ ತಾಲ್ಲೂಕಿನ ಎಸ್‌ಎಸ್‌ಎಲ್‌ಸಿ ಪಾಸು ಮಾಡಿದ 23 ಜನ, ಪಿಯುಸಿ ಮಾಡಿದ 16 ಹಾಗೂ ಪದವಿ ಮುಗಿಸಿದ 14 ಜನರನ್ನು ಈ ಸಮಾಜದಲ್ಲಿ ಗುರುತಿಸಬಹುದು.

ಬಸವಕಲ್ಯಾಣ ತಾಲ್ಲೂಕಿನ ಮಂಠಾಳ, ಏಲದಗುಂಡಿ, ಉಮಾಪುರ, ಮಿರಕಲ, ಬೆಲೂರು, ಗಡಿಗೌಂಡಗಾಂವ್ ಹಾಗು ಬಸವಕಲ್ಯಾಣದಲ್ಲಿ 800 ಉಪ್ಪಾರ ಕುಟುಂಬಗಳು ಕಾಣಬರುತ್ತವೆ. ಅದರಲ್ಲಿ 6,200 ಜನರಿದ್ದಾರೆಂದು ಹೇಳಲಾಗಿದೆ. ಈ ತಾಲ್ಲೂಕಿನಲ್ಲಿ ಎಸ್‌ಎಸ್‌ಎಲ್‌ಸಿ ಪಾಸು ಮಾಡಿದ 15, ಪಿಯುಸಿ 12 ಹಾಗೂ ಪದವಿ ಪಾಸು ಮಾಡಿದ ಇಬ್ಬರು ಈ ಜನಾಂಗಕ್ಕೆ ಸೇರಿದವರೆಂದು ಸಮೀಕ್ಷೆಯಿಂದ ತಿಳಿದುಬರುತ್ತದೆ.

ಮಂಠಾಳದ ಲಾರಿ ಮಾಲೀಕರಾದ ಚಂದ್ರಕಾಂತ ತುಕರಾಮಸಗರ, ಶಿಕ್ಷಕರಾದ ವೆಂಕಟ ಮಾರುತಿ ಉಪ್ಪಾರ, ಗ್ರಾಮಪಂಚಾಯತ್‌ನ ಸದಸ್ಯರಾದ ಶ್ರೀಮತಿ ಆಶಾಮ್ಮ ಉಪ್ಪಾರ, ಉಮಾಪುರದ ರಾಮಲಿಂಗ ತುಕಾರಾಮ ಉಪ್ಪಾರ, ಮಿರಕಲ ಗ್ರಾಮದ ತಾನಾಜಿ ಉಪ್ಪಾರ, ಬೆಲೂರಿನ ಮನೋಹರ ಉಪ್ಪಾರ, ಗಡಿಗೌಂಡ್‌ಗಾಂವ್‌ನ ಲಾರೀ ಮಾಲೀಕರಾದ ಬಾಬುರಾವ್ ಮಾರುತಿ ಉಪ್ಪಾರ ಹಾಗೂ ಬಸವಕಲ್ಯಾಣದ ವಿಠಲರಾವ್ ಸುರಳಕಟ್ಟಿ ಮುಂತಾದವರು ಪ್ರಮುಖ ಉಪ್ಪಾರ ಕುಟುಂಬಗಳೆಂದು ಹೇಳಲಾಗಿದೆ.

ಭಾಲ್ಕಿ ತಾಲ್ಲೂಕಿನ ಭಾಲ್ಕಿ, ಭಾತಂಬ್ರ, ಶಿವನಿ, ಕಾಕನಾಳ ತಳವಾಡ (ಕೆ) ಸಿದ್ದೇಶ್ವರ, ಹಲಬರ್ಗಾ, ಧನೂರಾ, ಖಾನಾಪುರ, ಏಳಸಾಪುರ, ಹಳಿಯಾಂಬರ, ವಾಡಾ, ಹಾಲಹಳ್ಳಿ, ಹಾಲಳ್ಳಿವಾಡಿ, ಗುಂಜರಗಾ, ಅಳವಾವಿ, ಹಲಸೀತೂಗಾಂವ್, ನಾಗೂರು, ವಣ್ಣೂರ ಮತ್ತು ಮೇಳಕುಂದ ಗ್ರಾಮಗಳಲ್ಲಿ ಉಪ್ಪಾರರು ಗಣನೀಯ ಪ್ರಮಾಣದಲ್ಲಿದ್ದಾರೆ. 1750 ಉಪ್ಪಾರ ಕುಟುಂಬಗಳಿದ್ದು 15,900 ಜನರಿದ್ದಾರೆಂದು ಹೇಳಲಾಗಿದೆ.

ಭಾಲ್ಕಿ ತಾಲ್ಲೂಕಿನಲ್ಲಿ 20 ಎಸ್‌ಎಸ್‌ಎಲ್‌ಸಿ, 15 ಪಿಯುಸಿ, 8 ಪದವಿ ಹಾಗು ಒಬ್ಬ ಡಿಪ್ಲೋಮಾ ಪಾಸು ಮಾಡಿದ ಯುವಕ/ಯುವತಿಯರು ಉಪ್ಪಾರ ಜನಾಂಗದವರಾಗಿದ್ದಾರೆ. ಭಾಲ್ಕಿ ತಾಲ್ಲೂಕಿನ ಭಾತಂಬ್ರದ ಶಿವಾಜಿರಾವ್ ಮಾರಪ್ಪ ಉಪ್ಪಾರ ಅವರು ಖ್ಯಾತ ಸಂಗೀತ ವಿದ್ವಾಂಸರು. ಹಿಂದೂಸ್ತಾನಿ ಸಂಗೀತದಲ್ಲಿ ಅಲಹಾಬಾದ ವಿಶ್ವವಿದ್ಯಾನಿಲಯದಿಂದ ಎಂ.ಎ. ಪದವಿ ಪಡೆದಿದ್ದಾರೆ. ಭಾತಂಬ್ರದಲ್ಲಿ ಸದ್ಗುರು ಸಂಗೀತ ವಿದ್ಯಾಲಯ ನಡೆಸುತ್ತಿದ್ದಾರೆ.

ಮುಂಬಯಿ, ಪೂಣಾ, ದೆಹಲಿ, ಇಂದೂರು, ಬನಾರಸ್, ಬಲಿಯೂ, ಗ್ವಾಲಿಯರ್, ಗುರುದಾಸಪುರ, ಆಗ್ರಾ, ಕೊಲಕತ್ತಾ, ಬೆಂಗಳೂರು, ಮೈಸೂರು, ಬೀದರ, ಮಾಣಿಕನಗರ ದೇವಸ್ಥಾನ, ಇತ್ಯಾದಿ ಮಹತ್ವದ ಸ್ಥಳಗಳಲ್ಲಿ ಹದಿನೈದು ವರ್ಷಗಳಿಂದ ಸಂಗೀತ ಕಚೇರಿಗಳನ್ನು ನಡೆಸಿದ್ದಾರೆ.ಕರ್ನಾಟಕ ಸಂಗೀತ ಅಕಾಡೆಮಿಯ ಸದಸ್ಯರು. ಕನ್ನಡ, ಮರಾಠಿ, ಹಿಂದಿ, ತೆಲಗು, ಬ್ರಜ್ ಭಾಷೆಗಳಲ್ಲಿ ಗಾಯನ ಮಾಡುತ್ತಾರೆ. ಸುಮಾರು 200 ವಿದ್ಯಾರ್ಥಿಗಳಿಗೆ ಸಂಗೀತ ನೀಡಿದ್ದಾರೆ. ಅದರಲ್ಲಿ 5-6 ವಿದ್ಯಾರ್ಥಿಗಳು ಸ್ವತಂತ್ರವಾಗಿ ಕಚೇರಿ ನಡೆಸಿಕೊಡುವ ಮಟ್ಟಕ್ಕೆ ತಯಾರಾಗಿರುತ್ತಾರೆ. ಶಿವಾಜಿರಾವ್ ಉಪ್ಪಾರ ಅವರು ಕೇವಲ 33 ವರ್ಷದ ತರುಣರಿದ್ದು, ಅವರಿಗೆ ಉಜ್ವಲ ಭವಿಷ್ಯವಿದೆ.

ಭಾತಂಬ್ರದ ಮನೋಹರ ಮಾರಪ್ಪ ಉಪ್ಪಾರ, ಶಿವನಿಯ ಶಿವರಾಜ ಉಪ್ಪಾರ, ಕಾಕನಾಳದ ಪಂಡಿತರಾವ್ ನಲಬಲೆ, ತಳವಾಡ (ಕೆ) ಶಿವರಾಜ ಉಪ್ಪಾರ, ಸಿದ್ದೇಶ್ವರದ ಕೃಷ್ಣಪ್ಪ ಉಪ್ಪಾರ ಹಾಗು ಧನೂರಾ ಗ್ರಾಮದ ಸಿದ್ರಾಮ ಮಾರುತಿ ಉಪ್ಪಾರ ಈ ಜನಾಂಗಕ್ಕೆ ಸೇರಿದ ಪ್ರಮುಖ ವ್ಯಕ್ತಿಗಳಾಗಿದ್ದಾರೆ.

ಹುಮನಾಬಾದ್ ತಾಲ್ಲೂಕಿನ ಹುಡಗಿ ಗ್ರಾಮವೊಂದರಲ್ಲಿ 400 ಉಪ್ಪಾರ ಕುಟುಂಬಗಳಿವೆಯೆಂಬ ವಿಶಿಷ್ಟ ಸಂಗತಿ ಸಮೀಕ್ಷೆಯಿಂದ ತಿಳಿದುಬರುತ್ತದೆ.

ಬೀದರ್ ಜಿಲ್ಲೆಯ ಉಪ್ಪಾರರಲ್ಲಿ ಸಗರ ಉಪ್ಪಾರ, ಮುನ್ನೂರು ಉಪ್ಪಾರ, ಗೌಂಡಿ ಉಪ್ಪಾರ ಹಾಗು ರೆಡ್ಡಿ ಉಪ್ಪಾರ ಎಂಬ ಪ್ರಭೇದಗಳಿವೆ.

ಬೀದರ್ ಜಿಲ್ಲೆಯ ಉಪ್ಪಾರರಲ್ಲಿ ಸಾಕ್ಷರತೆಯ ಪ್ರಮಾಣ ಶೇಕಡ 40 ಎಂದು ಹೇಳಲಾಗಿದೆ. ಜಿಲ್ಲೆಯಲ್ಲಿ ಒಬ್ಬ ವೈದ್ಯರು, ಒಬ್ಬರು ವೈದ್ಯಕೀಯ ವಿದ್ಯಾರ್ಥಿ, ಇಂಜಿನಿಯರಿಂಗ್ ಪದವೀಧರರು ಮೂರು, 17 ಸ್ನಾತಕೋತ್ತರ ಪದವಿ ಗಳಿಸಿದವರು, ಎಸ್‌ಎಸ್‌ಎಲ್‌ಸಿ ಪಾಸು ಮಾಡಿದವರು 119, ಪಿಯುಸಿ 64 , ಐಟಿಐ ಮಾಡಿದವರು 4 ಜನರಿದ್ದಾರೆಂದು ಹೇಳಲಾಗಿದೆ. ಈ ಸಮುದಾಯಕ್ಕೆ ಸೇರಿದ ವಕೀಲರು ಯಾರೂ ಕಾಣಬರುತ್ತಿಲ್ಲ. ಒಬ್ಬರು ಐಟಿಐ ಪ್ರಿನ್ಸಿಪಾಲರಿದ್ದಾರೆ.

ಮೂಲತಃ ಉಪ್ಪಾರರು ಬೀದರ್ ಜಿಲ್ಲೆಯಲ್ಲಿ ಕನ್ನಡವನ್ನು ಬಳಸುತ್ತಾರೆ. ಗಡೀ ಪ್ರಭಾವದಿಂದ ಶೇ. 50ರಷ್ಟು ಜನ ಮರಾಠಿ ಭಾಷೆಯನ್ನು ವ್ಯಾವಹಾರಿಕವಾಗಿ ಬಳಸುತ್ತಾರೆ. ತೆಲುಗು ಭಾಷೆಯ ಬಳಕೆ ಅಲ್ಪಪ್ರಮಾಣದಲ್ಲಿದೆ. ಅಂದರೆ ಜಿಲ್ಲೆಯ ಉಪ್ಪಾರರು ಮಗುವಿನಂತೆ ಪರಿಸರದ ಯಾವುದೇ ಭಾಷೆಯನ್ನಾದರೂ ತಕ್ಷಣ ಕಲಿತು ಬಳಕೆ ಮಾಡುವ ಸಾಮರ್ಥ್ಯ ಹೊಂದಿದ್ದಾರೆ.

ಜಿಲ್ಲೆಯ ಉಪ್ಪಾರರ ಆರ್ಥಿಕ ಸ್ಥಿತಿ ಉತ್ತಮವಾಗಿಯೇನೂಯಿಲ್ಲ. ಜನಾಂಗದ ಜನಸಂಖ್ಯೆಯಲ್ಲಿನ ಶೇ. ಐದರಷ್ಟು ಜನರಿಗೆ ಎರಡರಿಂದ ಮೂರು ಎಕರೆ ಜಮೀನಿದೆ.

ಉಳಿದವರು ಜಮೀನುರಹಿತ ಕೂಲಿ ಕಾರ್ಮಿಕರು. ಶೇ. 93ರಷ್ಟು ಜನ ವ್ಯವಸಾಯದ ಜೊತೆ ಕೂಲಿ ವೃತ್ತಿಯನ್ನು ಅವಲಂಬಿಸಿದ್ದಾರೆ. ಶೇ. 2ರಷ್ಟು ಜನ ವ್ಯಾಪಾರ ವೃತ್ತಿಯನ್ನು ಕೈಗೊಂಡಿದ್ದಾರೆ. ಈ ಸಮುದಾಯಕ್ಕೆ ಸೇರಿದ ಹುಮನಾಬಾದ್‌ನ ಮುಂತಾಳ ಗ್ರಾಮದ ಚಂದ್ರಕಾಂತ ತುಕಾರಾಮಸಗರ, ಅದೇ ತಾಲ್ಲೂಕಿನ ಗಡಿಗೊಂಡಗಾಂವ್‌ನ ಬಾಬುರಾವ್ ಮಾರುತಿ ಉಪ್ಪಾರ ಅವರುಗಳು ಸ್ವಂತ ಲಾರಿ ಹೊಂದಿದ್ದಾರೆ.

ಹುಮನಾಬಾದ್ ತಾಲ್ಲೂಕಿನ ಚಿಟಗುಪ್ಪ ಗ್ರಾಮದ ವೀರಣ್ಣ ಉಪ್ಪಾರ ಅವರು ಫೋಟೋ ಸ್ಟುಡಿಯೋವೊಂದರ ಮಾಲೀಕರು. ಅನೇಕ ಸಣ್ಣ ಪುಟ್ಟ ವ್ಯಾಪಾರಗಳಲ್ಲಿ ಈ ಸಮುದಾಯ ತಮ್ಮನ್ನು ತೊಡಗಿಸಿಕೊಂಡಿದೆ. ಇದರ ಜೊತೆ ಕಟ್ಟಡ ನಿರ್ಮಾಣದಲ್ಲೂ ಇವರಿಗೆ ಪರಿಣತಿಯಿದೆ.

ಉಪ್ಪಾರ ಸಮುದಾಯದಲ್ಲಿ ಶೇ. ಐದರಷ್ಟು ಜನ ಉತ್ತಮ ಜೀವನ ನಿರ್ವಹಿಸುತ್ತಿದ್ದಾರೆ. ಶೇ. 20ರಷ್ಟು ಜನತೆ ಮಧ್ಯಮ ಜೀವನ ನಿರ್ವಹಿಸುತ್ತಿದ್ದಾರೆ. ಇನ್ನುಳಿದ ಶೇ. 75ರಷ್ಟು ದೊಡ್ಡ ಸಮುದಾಯ ಬಡತನದ ರೇಖೆಗಿಂತ ಕೆಳಗಿದ್ದಾರೆ. ಅಂದರೆ ಸ್ವಾತಂತ್ರ್ಯ ಪಡೆದು ಐವತ್ತು ವರ್ಷಗಳಾದರೂ ಈ ಜಿಲ್ಲೆಯ ಉಪ್ಪಾರ ಸಮುದಾಯಕ್ಕೆ ನ್ಯಾಯೋಚಿತವಾಗಿ ದೊರೆಯಬೇಕಾದ ಯಾವುದೇ ಸೌಲಭ್ಯ ದೊರೆತಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ.

ಬೀದರ್ ಜಿಲ್ಲೆಯಲ್ಲಿ ಉಪ್ಪಾರ ಸಮಾಜದವರಿಗೆ ಸೇರಿದ ಯಾವುದೇ ಖಾಸಗಿ ಆಸ್ಪತ್ರೆ, ವಾಣಿಜ್ಯ ಮಳಿಗೆ ಅಥವಾ ಇನ್ಯಾವುದೇ ದೊಡ್ಡ ಪ್ರಮಾಣದ ವ್ಯಾಪಾರ ವಹಿವಾಟುಗಳಿಲ್ಲ.

ಔರಾದ್ ತಾಲ್ಲೂಕಿನ ಬೆಮ್ಮಗಾಂವ್‌ನ ದತ್ತು ಮಹರಾಜ್ ಬಾಪು ಸಗರ್ ಪ್ರಸಿದ್ಧ ಕೀರ್ತನಕಾರರು. ಸೂರ್ಯವಂಶದ ಅರಸ ಸಗರನ ವಂಶಸ್ಥರಾದ ಉಪ್ಪಾರ ಸಮುದಾಯಕ್ಕೆ ಸೇರಿದವರು.

ಬಾಬುರಾವ್ ಕಾಶೀರಾಮ ಶೆಟ್ಟಿ ಉಪ್ಪಾರ ಇವರು ಏಕಲಾದ ವಿ.ಎಸ್.ಎಸ್‌ಎನ್.ದ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರುಆಗಿ ಕಾರ್ಯನಿರ್ವಹಿಸಿದ್ದು, ಇವರು ಸಮಾಜದ ಅಭಿಮಾನಿ. ಒಳ್ಳೆಯ ಕಾರ್ಯಕರ್ತರು.

ಹುಮನಾಬಾದ್ ತಾಲ್ಲೂಕಿನ ಬಸ್ನಳ್ಳಿ ಗ್ರಾಮದ ಗಂಗಮ್ಮ ಗಂಗಪ್ಪಾ ಉಪ್ಪಾರ ಪ್ರಸಿದ್ಧ ಸೋಬಾನೆ ಪದದ ಹಾಡುಗಾರ್ತಿ. ಈಕೆಯ ಪ್ರತಿಭೆಗೆ ಸೂಕ್ತ ಮನ್ನಣೆ ದೊರೆಯಬೇಕಾಗಿದೆ. ಅದೇ ತಾಲ್ಲೂಕಿನ ಮನ್ನಾಎಖ್ಖೆಳ್ಳಿ ಮಂಜುನಾಥ ಶಿವರಾಯ ಉಪ್ಪಾರ ಹಾಗು ಔರಾದ ತಾಲ್ಲೂಕಿನ ಬೆಲದಾಳ ಗ್ರಾಮದ ಮಾರುತಿ ಉಪ್ಪಾರ ಈ ಸಮುದಾಯಕ್ಕೆ ಸೇರಿದ ಪ್ರಸಿದ್ಧ ಶಿಲ್ಪಕಾರರು. ಕರ್ನಾಟಕ ರಾಜ್ಯ ಶಿಲ್ಪಕಲಾ ಅಕಾಡೆಮಿ ಇವರ ಪ್ರತಿಭೆಯನ್ನು ದೊಡ್ಡ ಪ್ರಮಾಣದಲ್ಲಿ ಪರಿಚಯ ಮಾಡಿಕೊಡಬೇಕಾಗಿದೆ.

ಉಪ್ಪಾರ ಸಮುದಾಯದಲ್ಲಿ ಯಾವೊಬ್ಬ ರಾಜಕಾರಣಿಯನ್ನೂ ಪ್ರಮುಖವಾಗಿ ಜಿಲ್ಲೆಯಿಂದ ಗುರುತಿಸಲು ಸಾಧ್ಯವಾಗಿಲ್ಲ. ಅಂದರೆ ಇಲ್ಲಿ ಯಾವ ಪ್ರತಿಭೆಯೂ ಅರಳಲಿಕ್ಕೆ ಸಾಧ್ಯವಾಗಿಲ್ಲ. ಅದಕ್ಕೆ ಮೂಲ ಕಾರಣ ಉಪ್ಪಾರ ಜನಾಂಗದಲ್ಲಿ ಸಂಘಟನೆಯ ಕೊರತೆ. ಸಂಘಟನೆಗೆ ಬೇಕಾದ ಅರಿವೂ ಸಹ ಇಲ್ಲ. ಜೊತೆಗೆ ಈ ಸಮುದಾಯವನ್ನು ಮುಂಚೂಣಿಗೆ ತರಬೇಕೆಂದು ಸಮಾಜದಲ್ಲಿನ ಉಳಿದ ಹಿರಿಯ ಸಮುದಾಯಗಳು ಪ್ರಯತ್ನಿಸಿಲ್ಲ. ತಾಲ್ಲೂಕು ಪಂಚಾಯತ್ ಹಾಗು ಜಿಲ್ಲಾಪಂಚಾಯತ್ ಸದಸ್ಯರೂ ಇಲ್ಲ. ಗ್ರಾಮಪಂಚಾಯತ್‌ಗೆ ಈ ಸಮುದಾಯದ 22 ಸದಸ್ಯರು ಬೀದರ್ ಜಿಲ್ಲೆಯಲ್ಲಿದ್ದಾರೆ.

ಶಾಮರಾವ್ ಗುಂಡಪ್ಪ ಚಿಂತಾಮಣಿ ಬೀದರ್ ತಾಲ್ಲೂಕಿನವರು. ಹನ್ನೆರಡು ವರ್ಷ ತಾಲ್ಲೂಕು ಬೋರ್ಡ್ ಮತ್ತು ಎಪಿಎಂಸಿ ಸದಸ್ಯರಾಗಿ ಹಾಗೂ ಒಂಬತ್ತು ವರ್ಷ ಪಿಎಲ್‌ಡಿ ಬ್ಯಾಂಕ್‌ನ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಅವರ ಮಗ ಮಹೇಶ್ ಶಾಮರಾವ್ ಚಿಂತಾಮಣಿ ಪ್ರಸ್ತುತ ಬೀದರ್‌ನ ನಗರಸಭಾ ಸದಸ್ಯರು. ಹುಮನಾಬಾದ್ ಚಿಟಗುಪ್ಪ ಪಟ್ಟಣದ ಪುರಸಭೆಯ ಸದಸ್ಯರು ರವಿಕುಮಾರ ದತ್ತು ಉಪ್ಪಾರ.

ಈ ಸಮುದಾಯಕ್ಕೆ ಸೇರಿದ ಗ್ರಾಮಪಂಚಾಯತ್‌ನ ಸದಸ್ಯರೆಂದರೆ ಔರಾದ್ ತಾಲ್ಲೂಕಿನ ಮಸ್ಕಾಲ ಗ್ರಾಮದ ನರಸಪ್ಪ, ಏಕಲಾರ ಗ್ರಾಮದ ಶಿವರಾಜ ನರಸಪ್ಪ ಉಪ್ಪಾರ, ಇಟ್ಟಿಗ್ಯಾಳದ ಬಾಲಮ್ಮ ಬಾಬೂರಾವ್ ಉಪ್ಪಾರ, ಶಂಬೆಳ್ಳಿ ಗ್ರಾಮದ ಗೋವಿಂದ ಎಂಕಪ್ಪ ಉಪ್ಪಾರ, ತಡಪಲ್ಲಿ ಗ್ರಾಮದ ನರಸಮ್ಮ ಹಣಮಂತರಾವ್ ಉಪ್ಪಾರ, ತರಲಾಪುರದ ಶರಣಪ್ಪ ಔರಾದಕರ ಹಾಗು ಬಸವಕಲ್ಯಾಣ ತಾಲ್ಲೂಕಿನ ಮಂಠಾಳದ ಆಶಾಮ್ಮ.

ಗ್ರಾಮ ಪಂಚಾಯತ್‌ನ ಮಾಜಿ ಸದಸ್ಯರೆಂದರೆ ಔರಾದ ತಾಲ್ಲೂಕಿನ ಕರೆಕ್ಯಾಳದ ತಾನಾಜಿ ನರಸಿಂಗರಾವ್ ಸಗರ್, ಬೀದರ್ ತಾಲ್ಲೂಕಿನ ತಡಪಳ್ಳಿಯ ವೆಂಕಟಮ್ಮ ವಿಠಲ ಉಪ್ಪಾರ ಹಾಗೂ ಬಾಬುರಾವ್ ಕಾಶಿರಾಮ್ ಶೆಟ್ಟಿ ಉಪ್ಪಾರ.

ಹುಮನಾಬಾದ್ ತಾಲ್ಲೂಕಿನ ಹುಡುಗಿ ಗ್ರಾಮದ ಎಂಕಮ್ಮ ಉಪ್ಪಾರ, 'ಮಹಾನ್ ಶರಣೆ' ಎಂದು ಪ್ರಸಿದ್ಧರಾಗಿದ್ದಾರೆ. 12ನೆಯ ಶತಮಾನದಲ್ಲಿ ನಡೆದ ಕಲ್ಯಾಣ ಕ್ರಾಂತಿ ಸಂದರ್ಭದಲ್ಲಿ ಉಪ್ಪಾರ ಶರಣರೊಬ್ಬರು ಇದ್ದರೆಂದು ಸ್ವತಃ ಬಸವಣ್ಣನವರೇ ಇವರ ಭಕ್ತಿಗೆ ಮೆಚ್ಚಿದ್ದರೆಂಬ ಐತಿಹ್ಯವೊಂದಿದೆ. ಆದರೆ ಅವರ ವಿವರಗಳು ಯಾವುವೂ ಇವರಿಗೆ ಗೊತ್ತಿಲ್ಲ. ಅಷ್ಟೇ ಏಕೆ ಈ ಮಹಾನುಭಾವನ ಹೆಸರೂ ಸಹ ಗೊತ್ತಿಲ್ಲ. ಸಂಶೋಧಕರೊಬ್ಬರು ಈ ಬಗ್ಗೆ ಪ್ರಯತ್ನಶೀಲರಾದರ ಪ್ರತಿಫಲ ಸಿಗಬಹುದೇನೋ!

ಬೀದರ್ ಜಿಲ್ಲೆಯಲ್ಲಿ ಉಪ್ಪಾರ ಸಂಘ ಅಸ್ತಿತ್ವದಲ್ಲಿದೆ. ಶಿವಾಜಿರಾವ್ ಮಾರಪ್ಪ ಉಪ್ಪಾರ ಇವರ ಅಧ್ಯಕ್ಷರು. ಉಪ್ಪಾರ ಸಂಘ ಮತ್ತಷ್ಟು ಕ್ರಿಯಾಶೀಲವಾಗಿ ತಾಲ್ಲೂಕಿನ ಎಲ್ಲ ಕೇಂದ್ರಗಳಲ್ಲೂ ತನ್ನ ಶಾಖೆ ಹೊಂದಬೇಕು.

ಬೀದರ್ ಜಿಲ್ಲೆಯ ಉಪ್ಪಾರರಿಗೆ ಅಗತ್ಯವಾದ ಮಾರ್ಗದರ್ಶನ ಕೊಡುವ ಕಾರ್ಯವನ್ನು ಈ ಸಂಘ ಮಾಡಬೇಕು. ಜಿಲ್ಲೆಯಲ್ಲಿ ಒಂದೆರಡಾದರೂ ಸಮುದಾಯಭವನ ನಿರ್ಮಾಣವಾಗಬೇಕು. ಉಪ್ಪಾರ ವಿದ್ಯಾರ್ಥಿಗಳಿಗೆ ಅನುಕೂಲವಾಗುವ ರೀತಿಯಲ್ಲಿ ವಿದ್ಯಾರ್ಥಿನಿಲಯ ಸ್ಥಾಪಿತವಾಗಬೇಕು. ರಾಜ್ಯದ ಕೇಂದ್ರ ಸಂಘ ಕ್ರಿಯಾಶೀಲವಾಗಿದ್ದು, ಜಿಲ್ಲಾ ಕೇಂದ್ರಗಳಿಗೆ ಸೂಕ್ತ ಮಾರ್ಗದರ್ಶನ ನೀಡಿದರೆ ಮಾತ್ರ ಉಪ್ಪಾರ ಜನಾಂಗದಲ್ಲಿ ಒಂದಿಷ್ಟು ಬೆಳಕು ಕಾಣಲು ಸಾಧ್ಯ.

ರಾಜರ್ಷಿ ಭಗೀರಥ ಜಯಂತಿಯನ್ನು ಸರದಿಯಂತೆ ಪ್ರತಿ ತಾಲ್ಲೂಕಿನಲ್ಲೂ ಆಚರಿಸುತ್ತಾ ಹೋದರೆ ಜಿಲ್ಲೆಯ ಉಪ್ಪಾರರೆಲ್ಲಾ ಒಂದೆಡೆ ಸೇರುತ್ತಾರೆ. ತಮ್ಮ ಕಷ್ಟ ಸುಖಗಳ ಬಗ್ಗೆ ಪರಸ್ಪರ ಮಾತನಾಡಿ ಕಾರ್ಯೋನ್ಮುಖರಾಗಲು ಅನುಕೂಲವಾಗುತ್ತದೆ. ಅಂದರೆ ಜಡನಿದ್ರೆಯಲ್ಲಿರುವ ಉಪ್ಪಾರ ಬಂಧುಗಳನ್ನು ಎಚ್ಚರಗೊಳಿಸುವ ಕಾರ್ಯ ಮಾಡಬೇಕಾಗಿದೆ. ಸರ್ಕಾರದ ಅನೇಕ ಕಲ್ಯಾಣ ಕಾರ್ಯಕ್ರಮಗಳು ಬೆಂಗಳೂರಿನಿಂದ ಬೀದರ್‌ಗೆ ಮುಟ್ಟಲು ಸಾಧ್ಯವೇ ಇಲ್ಲ. ಅಲ್ಪಸ್ವಲ್ಪ ಮುಟ್ಟಿದರೂ ಅದು ಬಡ ಉಪ್ಪಾರ ಸಮುದಾಯದ ತನಕ ಬಂದಿಲ್ಲ. ಈ ಸಮುದಾಯದ ಯುವಕ/ಯುವತಿಯರು ಜಾಗೃತರಾಗಿ ಈ ಜನಾಂಗದಲ್ಲಿನ ಅಸಹಾಯಕರಿಗೆ ಸರ್ಕಾರದ ಪ್ರಯೋಜನಗಳನ್ನು ದೊರಕಿಸಿಕೊಡಬೇಕು. ಅದರಲ್ಲೂ ಜನಪ್ರತಿನಿಧಿಗಳ ಮೇಲೆ ಹೆಚ್ಚಿನ ಜವಾಬ್ದಾರಿ ಬಿದ್ದಿದೆ.

ಈ ಜಿಲ್ಲೆಯ ಉಪ್ಪಾರ ಸಮುದಾಯದಲ್ಲಿ ರೆಡ್ಡಿ ಉಪ್ಪಾರ ಹಾಗು ಮುನ್ನೂರು ಉಪ್ಪಾರ ಎಂಬ ಉಪಪಂಗಡಗಳಿವೆ. ಅವುಗಳಿಗೆ ಯಾವುದೇ ಸೌಲಭ್ಯ ದೊರಕಿಲ್ಲ. ಉಪ್ಪಾರರಲ್ಲೇ ಅದು ಅತ್ಯಂತ ಹಿಂದುಳಿದ ಪಂಗಡ. ಅವುಗಳಿಗೆ ಎಲ್ಲ ರೀತಿಯ ಸಹಾಯ ಕೊಡಿಸುವ ಜವಾಬ್ದಾರಿ ಜಿಲ್ಲೆಯ ಎಲ್ಲ ಉಪ್ಪಾರ ಬಂಧುಗಳ ಮೇಲೂ ಇದೆ. ಬೀದರ್ ರಾಜ್ಯದ ರಾಜಧಾನಿಯಿಂದ ದೂರವಿದೆಯೆಂಬ ಕಾರಣಕ್ಕೆ ಅದನ್ನು ರಾಜ್ಯಸಂಘ ಅಲಕ್ಷಿಸಬಾರದು. ಅವರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಜನಾಂಗದ ಬಲವರ್ಧನೆ ಮಾಡಬೇಕು. ಹಾಗೆಯೇ ರಾಜ್ಯಸರ್ಕಾರ ಬೀದರ್ ಜಿಲ್ಲೆಯಲ್ಲೇ ಅತ್ಯಂತ ಹಿಂದುಳಿದ ಉಪ್ಪಾರ ಸಮಾಜಕ್ಕೆ ನೂತನ ಪ್ಯಾಕೇಜ್ ಕಾರ್ಯಕ್ರಮವನ್ನು ಸಿದ್ಧಮಾಡಿ ಅದನ್ನು ಅನುಷ್ಠಾನಗೊಳಿಸುವಂತೆ ಸಮುದಾಯದ ನಾಯಕರು ಒತ್ತಡ ತರಬೇಕು.

**ಮಾಹಿತಿಸಂಗ್ರಹ : *ಶಿವಾಜಿರಾವ್ ಮಾರಪ್ಪ ಉಪ್ಪಾರ***

*




# * ಗುಲಬರ್ಗಾ ಜಿಲ್ಲೆ

## ಐತಿಹಾಸಿಕ ಹಿನ್ನೋಟ

ಗುಲಬರ್ಗಾ ಜಿಲ್ಲೆಯು ರಾಜ್ಯದ ಉತ್ತರ ಭಾಗದಲ್ಲಿದೆ. ಜಿಲ್ಲೆಯ ವಿಶಾಲ ಸಮತಟ್ಟಾದ ಪ್ರದೇಶವು 76° 04' ಮತ್ತು 77° 42' ಪೂರ್ವ ರೇಖಾಂಶ ಹಾಗೂ 16° 12' ಮತ್ತು 17° 46' ಉತ್ತರ ಅಕ್ಷಾಂಶ ಇವುಗಳ ನಡುವೆ ಹರಡಿಕೊಂಡಿದೆ. ದಕ್ಷಿಣ ಭಾಗದಲ್ಲಿ ಕೃಷ್ಣಾ ನದಿಯು ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳ ಎಲ್ಲೆಯಾಗಿ ಪ್ರವಹಿಸುತ್ತದೆ. ಪಶ್ಚಿಮ ಭಾಗದಲ್ಲಿ ಭೀಮಾ ನದಿಯು ಸ್ವಲ್ಪ ದೂರ ಗುಲಬರ್ಗಾ ಹಾಗೂ ಬಿಜಾಪುರ ಜಿಲ್ಲೆಗಳ ನೈಸರ್ಗಿಕ ಎಲ್ಲೆಯಾಗಿ ಹರಿಯುತ್ತದೆ. ಗುಲಬರ್ಗಾ ರಾಜ್ಯದ ರಾಜಧಾನಿಯಿಂದ 584 ಕಿ.ಮೀ. ದೂರದಲ್ಲಿದೆ.

ಗುಲಬರ್ಗಾ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶವು 16,224 ಚ.ಕಿ.ಮೀ. 2001ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ 31,24,858 ಜನಸಂಖ್ಯೆ ಇದೆ. ಅದರಲ್ಲಿ ಪುರುಷರು 15,91,379 ಹಾಗೂ ಸ್ತ್ರೀಯರು 15,33,479. ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 59.65ರಷ್ಟಿದೆ. ಪುರುಷರ ಸಾಕ್ಷರತೆ ಪ್ರಮಾಣ ಶೇ. 62.52. ಸ್ತ್ರೀಯರದು ಶೇ. 38.40.

ಗುಲಬರ್ಗಾ, ಆಳಂದ, ಅಫಜಲ್‌ಪುರ, ಜೇವರಗಿ, ಶಹಾಪುರ, ಸುರಪುರ, ಯಾದಗೀರ, ಚಿತಾಪುರ, ಸೇಡಂ ಮತ್ತು ಚಿಂಚೋಳಿ ಎಂಬ ಹತ್ತು ತಾಲ್ಲೂಕುಗಳು ಜಿಲ್ಲೆಯಲ್ಲಿವೆ.

ಜಿಲ್ಲೆಯ ಹೆಚ್ಚಿನ ಭಾಗ ಡೆಕ್ಕನ್ ಟ್ರ್ಯಾಪ್ ಶಿಲಾ

ಪ್ರದೇಶವಾಗಿದೆ. ಜಿಲ್ಲೆಯ ಮಧ್ಯದ ಭಾಗದಲ್ಲಿ ಸ್ವಲ್ಪ ಮಟ್ಟಿಗೆ ಭೀಮಾ ವರ್ಗಕ್ಕೆ ಸೇರಿದ ಸುಣ್ಣಕಲ್ಲು ಮತ್ತು ಶೆಲ್ ಪದರಗಳಿವೆ. ಇಡೀ ಜಿಲ್ಲೆ ಸಾಮಾನ್ಯವಾಗಿ ಸಮುದ್ರ ಮಟ್ಟದಿಂದ 300 ರಿಂದ 600 ಮೀ. ಎತ್ತರದಲ್ಲಿದೆ. ಭಾರತ ಪರ್ಯಾಯ ದ್ವೀಪವು ಗಡುಸಾದ ಸ್ಫಟಿಕ ಶಿಲೆಯಿಂದ ಕೂಡಿರುವುದರಿಂದ ವಿನಾಶಕಾರಿ ಭೂಕಂಪಗಳಿಂದ ಮುಕ್ತವಾಗಿದೆ ಎನ್ನಬಹುದು. ವಾಯುಗುಣವು ಹೆಚ್ಚಿನ ಭಾಗದಲ್ಲಿ ಶುಷ್ಕವಾಗಿದ್ದು, ಸರಾಸರಿ ಮಳೆಯು 600 ಮಿ.ಮೀ. ಜಿಲ್ಲೆಯ ಅಂತರ್ಜಲದ ಹರಿವು ಕೆಳಮಟ್ಟದಲ್ಲಿದೆ. ಜಿಲ್ಲೆಯು ವೈವಿಧ್ಯಮಯ ಖನಿಜ ನಿಕ್ಷೇಪಗಳಿಂದ ಸಂಪದ್ಭರಿತವಾಗಿದೆ. ಸುಣ್ಣದಕಲ್ಲು , ಎರಕದ (ಮೌಲ್ಡಿಂಗ್) ಮರಳು, ಚಿನ್ನ, ಕೆಂಪು ಕಾವಿ ಮಣ್ಣು, ಬಿಳುಚು ಜೇಡು ಹಾಗೂ ಬೆಣಚುಕಲ್ಲು ಪ್ರಮುಖವಾದ ಖನಿಜಗಳು. ಶಹಾಬಾದ್ ಕಲ್ಲು ಚಪ್ಪಡಿಗಳು ಕೈಗಾರಿಕೆಗಳ ಜೊತೆಗೆ ಕಟ್ಟಡ ನಿರ್ಮಾಣಕ್ಕೆ, ಕಾಲುದಾರಿ ನಿರ್ಮಾಣಕ್ಕೆ, ನೀರಾವರಿ ಕಾಲುವೆಗಳ ನಿರ್ಮಾಣಕ್ಕೆ ಹೀಗೆ ಬಹು ಉಪಯೋಗಿಯಾಗಿವೆ. ಜಿಲ್ಲೆಯ ಶಹಾಪುರ ತಾಲ್ಲೂಕಿನಲ್ಲಿ ಬೆಲೆಬಾಳುವ ಕೆಂಪು ಗ್ರಾನೈಟ್ ಕಲ್ಲುಗಳು ದೊರೆಯುತ್ತವೆ. ತಾಂಡೂರು ನೀಲಿ ಕಲ್ಲು ಎಂದು ಕರೆಯಲ್ಪಡುವ ಮಿರ್ಯಾಣ ನೀಲಿ ಕಲ್ಲು ಚಿಂಚೋಳಿ ತಾಲ್ಲೂಕಿನಲ್ಲಿ ದೊರೆಯುತ್ತಿದ್ದು, ಈ ನೀಲಿ ಕಲ್ಲಿಗೆ ತುಂಬಾ ಬೇಡಿಕೆ ಇದೆ.

ಕರ್ನಾಟಕದ ಜೀವ ನದಿಗಳಲ್ಲಿ ಒಂದಾಗಿರುವ ಕೃಷ್ಣಾ ಹಾಗೂ ಅದರ ಉಪನದಿ ಭೀಮಾ ಜಿಲ್ಲೆಯ ಮುಖ್ಯ ನದಿಗಳು. ಅಮರಜಾ, ಕಾಗಿಣಾ, ಮುಲ್ಲಾಮಾರಿ, ಬೆಣ್ಣೆತೊರೆ ಬೋರಿ ಮುಂತಾದವು ಜಿಲ್ಲೆಯಲ್ಲಿ ಹರಿಯುವ ಉಪನದಿಗಳು.

ಗುಲಬರ್ಗಾ ಜಿಲ್ಲೆಯ ಇಂದಿನ ಪರಿಸರದಲ್ಲಿ ವನ್ಯಮೃಗಗಳು ಹೆಚ್ಚಾಗಿಲ್ಲ. ಕಾಡುಗಳಲ್ಲಿ ಕೆಲವು ಕಡೆ ಚಿರತೆ, ಕಿರುಬ, ಕತ್ತೆಕಿರುಬ, ತೋಳ, ಜಿಂಕೆ, ನರಿ ಮುಂತಾದ ಪ್ರಾಣಿಗಳನ್ನು ಕಾಣಬಹುದು.

ಜಿಲ್ಲೆಯಲ್ಲಿ ಒಣ ಹವೆ ಇದ್ದು, 1,138 ಚ.ಕಿ.ಮೀ. ಅರಣ್ಯ ಪ್ರದೇಶವಿದ್ದು, ಅರಣ್ಯವು ಹೆಚ್ಚಿನ ಬಳಕೆಯಿಂದ ವಿರಳವಾಗಿದೆ. ಇತ್ತೀಚಿನ ದಶಕಗಳಲ್ಲಿ ಅರಣ್ಯೀಕರಣ ಮಾಡಲಾಗುತ್ತಿದೆ.

'ಗುಲಬರ್ಗಾ'ವನ್ನು ಕಲಬುರ್ಗಿ ಮತ್ತು ಗುಲ್ಬರ್ಗಾ ಎಂಬ ಪರ್ಯಾಯ ಹೆಸರುಗಳಿಂದ ಕರೆಯಲಾಗುತ್ತದೆ. ಇದು ಐತಿಹಾಸಿಕವಾಗಿ ಸುಮಾರು ಕ್ರಿ.ಶ. 12-13 ನೆಯ ಶತಮಾನದ ಚಿನಮುಳ್ಳಿ ಶಿಲಾಶಾಸನದಲ್ಲಿ 'ಕಲಂಬರಿಗೆ' ಎಂದು ಉಲ್ಲೇಖಗೊಂಡಿದ್ದು ಬೀದರ್ ಜಿಲ್ಲೆಯ ಶಾಸನ ಒಂದರಲ್ಲೂ ಇದೇ ರೂಪ ದಾಖಲಾಗಿದ್ದು, ಇವು ಗುಲಬರ್ಗಾದ ಪ್ರಾಚೀನ ರೂಪಗಳಾಗಿವೆ. ಕ್ರಿ.ಶ. 1397ರ ಬೇಲೂರು (ಹಾಸನ ಜಿಲ್ಲೆ) ಹಾಗೂ ಕ್ರಿ.ಶ. 1537ರ ಶಿರವಾಳದ ಶಿಲಾ ಶಾಸನಗಳಲ್ಲಿ ಇದು ಕ್ರಮವಾಗಿ 'ಕಲಬುರಗೆ' ಹಾಗೂ 'ಕಲಬುರಿಗೆ' ಎಂದು ದಾಖಲಾಗಿದೆ. ವಿಜಯನಗರಕ್ಕೆ ಬಂದಿದ್ದ ಪರ್ಶಿಯನ್ ರಾಯಭಾರಿ ಅಬ್ದುಲ್ ರಜಾಕ್ ಇದನ್ನು 'ಕಲಬುರ್ಗ್' ಎಂದೇ ಹೇಳಿದ್ದಾನೆ. ಗುಲಬರ್ಗಾ ಎಂಬ ನಾಮಪದದ ನಿಷ್ಪತ್ತಿಗೆ ಸಂಬಂಧಿಸಿದಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಗುಲಬರ್ಗಾ ಎಂಬುದು

ಹೆಚ್ಚು ಕಡಿಮೆ 'ಕರಬುರಗಿ' ಪದದ ಫಾರಸೀಕರಣವಾಗಿದ್ದು, ಫಾರಸಿಯಲ್ಲಿ 'ಗುಲ್' ಎಂದರೆ ಹೂವು, 'ಬರ್ಗ್' ಎಂದರೆ ಎಲೆ ಎಂಬ ಅರ್ಥವಿದೆ. 'ಕಲಬುರಗಿ' ಎಂಬ ಅಚ್ಚಕನ್ನಡ ರೂಪವೇ ಮಹಮದೀಯರಿಗೆ ಮೊದ ಮೊದಲು 'ಕಲಬುರ್ಗ್' ಎಂದೆನಿಸಿ ಮುಂದೆ ಅದೇ 'ಗುಲಬರ್ಗಾ' ಎಂದಾದಂತೆ ತೋರುತ್ತದೆ. ಒಟ್ಟಿನಲ್ಲಿ 'ಕಲಬುರಗಿ' ಎಂಬ ಹೆಸರು ಕ್ರಿ.ಶ. 16ನೆಯ ಶತಮಾನದವರೆಗೂ ರೂಢಿಯಲ್ಲಿದ್ದು ಮುಸ್ಲಿಮರ ಆಡಳಿತ ಪ್ರಭಾವದಿಂದಾಗಿ ನಂತರದಲ್ಲಿ 'ಗುಲಬರ್ಗಾ' ಎಂಬ ರೂಪವನ್ನು ಪಡೆದಿದೆ ಎಂದು ಅಭಿಪ್ರಾಯ ಪಡಲಾಗಿದೆ. ಆದರೂ 'ಕಲ್ಬುರ್ಗಿ' ಎಂಬ ಹೆಸರು ಈಗ ಹೆಚ್ಚು ಪ್ರಚಲಿತದಲ್ಲಿದೆ.

ಈ ಜಿಲ್ಲೆಯಲ್ಲಿ ಪೌರಾಣಿಕ ಹಿನ್ನೆಲೆಯುಳ್ಳ ಅನೇಕ ಸ್ಥಳಗಳಿದ್ದು ಕೆಲವು ಪವಿತ್ರ ಕ್ಷೇತ್ರಗಳೆಂದು ಜನಪ್ರಿಯವಾಗಿವೆ. ಶಹಾಪುರ, ಸುರಪುರ ಹಾಗೂ ಜೇವರ್ಗಿ ತಾಲ್ಲೂಕುಗಳ ಗಡಿಯಂತಿರುವ ಕೃಷ್ಣಾ-ಭೀಮೆಯರ ನಡುವೆ ವ್ಯಾಪಿಸಿರುವ ಪ್ರದೇಶ ಮತ್ತು ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ಹಾಗೂ ಸಿಂದಗಿ ತಾಲ್ಲೂಕುಗಳವರೆಗಿನ ವ್ಯಾಪ್ತಿಯುಳ್ಳ ಭಾಗಗಳನ್ನು 'ಸಗರನಾಡು' ಎಂದು ಕರೆಯಲಾಗುತ್ತದೆ. ಪೌರಾಣಿಕ ನಂಬಿಕೆಯ ಪ್ರಕಾರ ಪುರಾಣ ಪ್ರಸಿದ್ಧನೂ, ಮಹಾಬಲಶಾಲಿಯೂ, ಪರಮ ಧಾರ್ಮಿಕನೂ ಆದರ ಸಗರ ಚಕ್ರವರ್ತಿ ಸಗರನಾಡನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂದು ಪ್ರತೀತಿ ಇದೆ. ಪೌರಾಣಿಕ ಕಥೆಯ ಪ್ರಕಾರ ಇಕ್ವಾಕು ವಂಶದ ಅಂಬರೀಷನೆಂಬ ರಾಜನು ಪರಮಜ್ಞಾನಿಯೂ, ರಾಜರ್ಷಿಯೂ ಆಗಿದ್ದನು. ಆತನು ಮನುಪುತ್ರ. ನಭಗನ ಪುತ್ರನಾದ ನಾಭಗನ ಮಗನು. ಇದೇ ವಂಶದ ಸತ್ಯವ್ರತ (ತ್ರಿಶಂಕು)ನಿಗೆ ಹರಿಶ್ಚಂದ್ರನೆಂಬ ಪ್ರಖ್ಯಾತ ಮಗ ಹುಟ್ಟಿದ. ಹರಿಶ್ಚಂದ್ರನ ಮಗ ರೋಹಿತ. ಅವನ ಮಗ ಹರಿತ. ಅವನ ಮೊಮ್ಮಗ ಬಾಹುಕ. ಬಾಹುಕ ಯುದ್ಧದಲ್ಲಿ ಪರಾಭವಗೊಂಡು ತನ್ನ ಮಡದಿಯೊಡನೆ ಅಡವಿ ಸೇರಿ ವೃದ್ಯಾಪ್ಯದಿಂದ ಮರಣ ಹೊಂದಿದ. ಅವನ ಪತ್ನಿ ಓರ್ವ ಮಹರ್ಷಿಯ ಸಂಬಂಧದಿಂದ ಗರ್ಭವತಿಯಾದಳು. ಆಕೆಯ ಸವತಿಯರು ಅಸೂಯೆಯಿಂದ ಆಕೆಗೆ ವಿಷ ಕುಡಿಸಿ ಭ್ರೂಣ ನಾಶಕ್ಕೆ ಯತ್ನಿಸಿದರು. ಈ ವಿಷವು ಯಾವ ಪ್ರಭಾವ ಬೀರದೇ 'ಗರ' (ವಿಷ) ವನ್ನು ಮೈತಳೆದು ಜನಿಸಿದ ಮಗುವೇ 'ಸಗರ'ನೆಂಬ ಹೆಸರನ್ನು ಗಳಿಸಿತು. ಈತನೇ ಮುಂದೆ ಯಶಸ್ವಿ ಸಾಮ್ರಾಟನಾಗಿ 'ಸಗರಚಕ್ರವರ್ತಿ' ಎನಿಸಿಕೊಂಡು ಸಗರನಾಡನ್ನು ವೈಭವದಿಂದ ಆಳ್ವಿಕೆ ಮಾಡಿದನೆಂಬ ಪ್ರತೀತಿ ಇದೆ. ಸಗರನ ಮಗ ಅಸಮಂಜ. ಅವನ ಮಗ ಅಂಶುಮಂತ. ಅವನ ಮಗ ದಿಲೀಪ. ದಿಲೀಪನ ಮಗನೇ ಭಗೀರಥ. ತನ್ನ ಹಿರಿಯರಿಗಾಗಿ ಗಂಗೆಯನ್ನು ಭೂಮಿಗೆ ಇಳಿಸಿ ಆ ಜಲದಿಂದ ತನ್ನ ಮುತ್ತಾತಂದಿರಿಗೆಲ್ಲ ತರ್ಪಣ ನೀಡಬೇಕು, ಅವರಿಗೆಲ್ಲಾ ಸ್ವರ್ಗ ಪ್ರಾಪ್ತಿಯಾಗಬೇಕೆಂದು ಜಿತೇಂದ್ರಿಯನಾಗಿ, ಘೋರವಾದ ತಪಸ್ಸು ಮಾಡಿ, ಗಂಗೆಯನ್ನು ಧರೆಗೆ ತಂದ ಮಹಾನುಭಾವ. ಭಗೀರಥ ಪುರಾಣ ಪುರುಷನಾಗಿ ತನ್ನ ಸಾಹಸಕ್ಕೆ, ದೈವಭಕ್ತಿಗೆ, ಗುರುಭಕ್ತಿಗೆ, ಸೌಶೀಲ್ಯಕ್ಕೆ, ಪ್ರಯತ್ನಶೀಲತೆಗೆ, ಏಕಾಗ್ರ ಮನಸ್ಕತೆಗೆ, ಕಠಿಣ ಪರಿಶ್ರಮಕ್ಕೆ, ತಪೋನಿಷ್ಠೆಗೆ ಆದರ್ಶವಾಗಿ ಕಂಗೊಳಿಸುತ್ತಿದ್ದಾನೆ.

ಅವನ ಪ್ರಯತ್ನಶೀಲತೆಯಂತೂ 'ಭಗೀರಥ ಪ್ರಯತ್ನ' ಎಂಬ ನುಡಿಗಟ್ಟಾಗಿ ಕನ್ನಡಿಗರೆಲ್ಲರ ಸ್ಫೂರ್ತಿಯ ನೆಲೆಯಾಗಿದೆ. ಈ ಭಗೀರಥನೇ ಉಪ್ಪಾರ ಕುಲದ ಆದ್ಯ ಪುರುಷ.

ಅಮರಸಿಂಹನ ನಾಮಲಿಂಗಾನುಶಾಸನ ಅಥವಾ ಅಮರಕೋಶ, ಮಂಗಳಾಷ್ಟಕ ಶ್ಲೋಕ, ಮತ್ಸ್ಯ, ಬ್ರಹ್ಮ ಮತ್ತು ವಾಮನಪುರಾಣಗಳಲ್ಲಿ ಹಾಗೂ ಮಹಾಭಾರತದಲ್ಲಿ ಭೀಮಾನದಿಯ ಉಲ್ಲೇಖ ಬಂದಿದೆ. ತ್ರಿಪುರಾಸುರನನ್ನು ಸೋಲಿಸಿ ದಣಿದ ಶಿವನು ವಿಶ್ರಾಂತಿಗಾಗಿ ಸಹ್ಯಾದ್ರಿಗೆ ಬಂದನಂತೆ. ಆಗ ಇಬ್ಬರು ಋಷಿಗಳನ್ನು ಹತ್ಯೆಗೈದಿದ್ದ ಅಯೋಧ್ಯೆಯ ರಾಜಭೀಮಕನು ಪಾಪ ಪರಿಹಾರಕ್ಕೆ ತಪಸ್ಸಿಗೆಂದು ಇಲ್ಲಿಗೆ ಬಂದಿದ್ದನೆಂದು ಪ್ರತೀತಿಯಿದೆ. ಈತನ ತಪಸ್ಸಿಗೆ ಮೆಚ್ಚಿದ ಶಿವ ಪ್ರತ್ಯಕ್ಷನಾಗಿ ವರ ನೀಡುವ ಕೃಪೆ ಮಾಡಿದನಂತೆ. ಆಗ ಶಿವನ ಹಣೆ ಬೆವರುತ್ತಿತ್ತಂತೆ. ಇದನ್ನು ಕಂಡ ಭೀಮಕ ಆ ಹಣೆಯ ಬೆವರೇ ನದಿಯಾಗಿ ಪ್ರವಹಿಸಲಿ ಎಂದು ಪ್ರಾರ್ಥಿಸಿದನಂತೆ. ಈ ಪ್ರಾರ್ಥನೆಯಿಂದ ಮೂಡಿಬಂದ ನದಿಯೇ ಮುಂದೆ 'ಭೀಮರತಿ' ಅಥವಾ 'ಭೀಮಾ ನದಿ' ಎಂದು ಜನಪ್ರಿಯವಾಯಿತೆಂದು ಐತಿಹ್ಯವಿದೆ.

ಈ ಜಿಲ್ಲೆಯಲ್ಲಿರುವ ಸನ್ನತಿಯು ಒಂದು ಪುರಾತನ ಸ್ಥಳವಾಗಿರುವಂತೆ ಪೌರಾಣಿಕ ಹಿನ್ನೆಲೆಯನ್ನು ಹೊಂದಿದೆ. ಈ ನಂಬಿಕೆಯ ಪ್ರಕಾರ ರಾಮ ಮತ್ತು ಸೀತೆಯರು ಇಲ್ಲಿ ಮುನಿ ನಾರಾಯಣ ಹಾಗೂ ಚಂದ್ರವದನ ಅಥವಾ ಚಂದ್ರಲಾಂಬರಾಗಿ ಅವತರಿಸಿದರು. ಆಗ 'ಸೇತು' ಎಂಬ ರಾಜನು ಈ ಸ್ಥಳದಲ್ಲೇ ಸೀತೆಯನ್ನು ಕೆಣಕಿ ಆಕೆಯ ಶಾಪಕ್ಕೆ ಗುರಿಯಾದನು.

ಪೌರಾಣಿಕ ಹಿನ್ನೆಲೆಯನ್ನು ಪಡೆದಿರುವ ಮತ್ತೊಂದು ಸ್ಥಳವೆಂದರೆ ಕೃಷ್ಣಾನದಿ ತೀರದಲ್ಲಿರುವ ಛಾಯಾಭಗವತಿಯು ಸೂರ್ಯದೇವನಿಗೆ ಸಂಬಂಧಿಸಿದ ಕ್ಷೇತ್ರವಾಗಿದೆ. ಪೌರಾಣಿಕ ನಂಬಿಕೆಯ ಪ್ರಕಾರ ಸೂರ್ಯದೇವನ ನಿರಂತರ ತಾಪಮಯ ಕಿರಣಗಳಿಂದ ಪ್ರಸರಿಸಿದ ಉಷ್ಣತೆಯನ್ನು ತಾಳಲಾರದೆ ಆತನ ಮೊದಲ ಸತಿಯಾದ ಸಂಮಜ್ಞಳು ನಿರಾಸಕ್ತಳಾದಾಗ ಅವಳಷ್ಟೇ ಸುಂದರ ರೂಪವುಳ್ಳ ಛಾಯಾದೇವಿಯು ಸೂರ್ಯನನ್ನು ಕೂಡಿದಳು. ಸೂರ್ಯನು ಇವಳನ್ನು ತನ್ನ ನಿಜವಾದ ಸತಿ ಎಂದು ತಿಳಿದಿದ್ದನು. ಆದರೆ ಹಲವು ದಿನಗಳ ತರುವಾಯ ಈ ವಿಷಯದ ಬಗೆಗೆ ಇದ್ದ ಗೋಪ್ಯವಾದ ರಹಸ್ಯವು ಸೂರ್ಯದೇವನಿಗೆ ಗೊತ್ತಾಗಿ ಅವನು ಛಾಯಾದೇವಿಯನ್ನು ತ್ಯಜಿಸಿ ತನ್ನ ಮೊದಲ ಪತ್ನಿಯಾದ ಸಂಮಜ್ಞಳನ್ನು ಪುನಃ ಈ ಸ್ಥಳದಲ್ಲಿ ಕೂಡಿದನೆಂಬ ನಂಬಿಕೆ ಇದೆ. ಹೀಗೆ ಪೌರಾಣಿಕ ಹಿನ್ನೆಲೆಯುಳ್ಳ ಹಲವಾರು ಸ್ಥಳಗಳು ಈ ಜಿಲ್ಲೆಯಲ್ಲಿವೆ.

ನೈಸರ್ಗಿಕವಾಗಿ ಸಂಪದ್ಭರಿತವಾದ ಈ ಪ್ರದೇಶವು ಬಹಳ ಪ್ರಾಚೀನ ಕಾಲದಿಂದಲೂ ಜನರ ಆವಾಸ ಸ್ಥಾನವಾಗಿತ್ತೆಂದು ಸಂಶೋಧನೆಗಳಿಂದ ತಿಳಿದುಬರುತ್ತದೆ. ರಾಬರ್ಟ್ ಬ್ರೂಸ್ ಫೂಟ, ಕೆ. ಪದ್ದಯ್ಯ, ಕರ್ನಲ್ ಮೆಡೋಸ್ ಟೈಲರ್, ಎಸ್. ನಾಗರಾಜ, ಎಸ್. ಶೇಷಾದ್ರಿ, ಅ. ಸುಂದರ, ಪಿ.ಬಿ. ದೇಸಾಯಿ, ಎಂ.ಎಸ್. ನಾಗರಾಜರಾವ್ ಮುಂತಾದ ಮಹನೀಯರು ಈ ಪ್ರದೇಶದಲ್ಲಿ ಇತಿಹಾಸ ಪೂರ್ವದ ಪಳೆಯುಳಿಕೆಯ ಬಗ್ಗೆ ಸಂಶೋಧನೆ ನಡೆಸಿದ್ದಾರೆ. ಈ

ಸಂಶೋಧನೆಯ ಕಾಲದಲ್ಲಿ ಆದಿ ಹಳೇ ಶಿಲಾಯುಗದ ನೆಲೆಗಳು, ಮಧ್ಯ ಹಳೇ ಶಿಲಾಯುಗದ ಉಪಕರಣಗಳು, ಬೂದಿಗುಡ್ಡೆಗಳನ್ನು ಗುರುತಿಸಿದ್ದಾರೆ.

ವಿಭಾಗೀಯ ಕೇಂದ್ರವೂ ಆಗಿರುವ ಗುಲಬರ್ಗಾ ಜಿಲ್ಲೆಯು ಸುದೀರ್ಘವಾದ ಐತಿಹಾಸಿಕ ಹಿನ್ನೆಲೆ ಹಾಗೂ ಪರಂಪರೆಯನ್ನು ಹೊಂದಿದೆ. ರಾಷ್ಟ್ರಕೂಟರು ಈ ಪ್ರದೇಶದಿಂದಲೇ ಅಖಂಡ ಭಾರತವನ್ನಾಳಿದ್ದಾರೆ. ಒಂದನೇ ಕೃಷ್ಣ, ಮೂರನೆಯ ಗೋವಿಂದ, ಅಮೋಘವರ್ಷ ನೃಪತುಂಗ, ಮೂರನೆಯ ಕೃಷ್ಣ ಮುಂತಾದ ರಾಷ್ಟ್ರಕೂಟ ವಂಶದ ಖ್ಯಾತ ಚಕ್ರವರ್ತಿಗಳು ಇಲ್ಲಿಂದಲೇ ಆಳ್ವಿಕೆ ಮಾಡಿದರು.

ಕಲ್ಯಾಣದ ಚಾಲುಕ್ಯರು ಈ ಮಣ್ಣಿನ ಮಕ್ಕಳು. ಕಲಬುರಗಿ ಹಾಗೂ ಮಣ್ಣೂರುಗಳಲ್ಲಿರುವ ಚನ್ನಕೇಶವ ದೇವಾಲಯಗಳು ಕಲ್ಯಾಣಿ ಚಾಲುಕ್ಯರ ಶಿಲ್ಪಕಲಾ ವೈಭವವನ್ನು ಸಾರುತ್ತವೆ. ಬಿಜ್ಜಳನ ಆಡಳಿತಕ್ಕೆ ಈ ಪ್ರದೇಶ ಸೇರಿತ್ತು. ಹೀಗಾಗಿ ಬಸವಣ್ಣನವರ ವ್ಯಾಪಕ ಪ್ರಭಾವ ಈ ಜಿಲ್ಲೆಯಲ್ಲಿ ಕಾಣಬಹುದು. ಈ ಜಿಲ್ಲೆಯನ್ನು ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಳಚೂರ್ಯರು, ಬಹಮನ್ ಷಾಹಿಗಳು, ಬಿಜಾಪುರದ ಆದಿಲ್ ಷಾಹಿಗಳು ಸತತವಾಗಿ ಆಳಿದ್ದಾರೆ. ಕ್ರಿ.ಶ. 1686ರಲ್ಲಿ ಔರಂಗಜೇಬ ಬಿಜಾಪುರವನ್ನು ವಶಪಡಿಸಿಕೊಂಡಾಗ ಇದು ಮೊಗಲ ಸಾಮ್ರಾಜ್ಯಕ್ಕೆ ಸೇರಿತು. ಕ್ರಿ.ಶ. 1724ರಲ್ಲಿ ಹೈದರಾಬಾದ ನಿಜಾಮ ಸ್ವತಂತ್ರನೆಂದು ಸಾರಿದಾಗ ಇದು ನಿಜಾಮ ರಾಜ್ಯಕ್ಕೆ ಸೇರಿತು. ನಿಜಾಮ ಸಂಸ್ಥಾನದಲ್ಲಿ ಇದು ಸುಬೇದಾರಿಯಾಗಿತ್ತು. ಸೆಪ್ಟೆಂಬರ್ 18, 1948ರಂದು ನಿಜಾಮನಿಂದ ವಿಮೋಚನೆ ಪಡೆದು, ಹೈದರಾಬಾದ ರಾಜ್ಯದ ಭಾಗವಾಗಿ ಉಳಿದಿತ್ತು. 1956 ರಾಜ್ಯಗಳ ಪುನರ್ ವಿಂಗಡಣೆಯಾದ ಸಂದರ್ಭದಲ್ಲಿ ಈ ಜಿಲ್ಲೆ ವಿಶಾಲ ಮೈಸೂರಿನ ಭಾಗವಾಯಿತು.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈ ಪ್ರದೇಶದ ನಾಯಕರು ಸಕ್ರಿಯವಾಗಿ ಭಾಗವಹಿಸಿದ್ದಾರೆ. ಗಾಂಧೀಜಿಯವರು 1924ರಲ್ಲಿ ಅಧ್ಯಕ್ಷರಾಗಿದ್ದ ಬೆಳಗಾವಿ ಕಾಂಗ್ರೆಸ್ ಅಧಿವೇಶನದ ಪರಿಣಾಮವಾಗಿ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ದೇಶದ ಸ್ವಾತಂತ್ರ್ಯ ಸಂಗ್ರಾಮವು ತೀವ್ರಗೊಂಡಿತು. ಇದಕ್ಕೆ ಪೂರ್ವದಲ್ಲಿ 1921-22ರಲ್ಲಿ ಗುಲಬರ್ಗಾದಲ್ಲಿ ಕರಾಳ ಸ್ವರೂಪದ ಹಿಂದೂ-ಮುಸಲ್ಮಾನರ ದಂಗೆ ನಡೆಯಿತು. ಜನಾರ್ದನರಾವ್ ದೇಸಾಯಿಯವರು ತಿಳಿಸಿರುವಂತೆ "ನಗರದಲ್ಲಿರುವ ಗುಡಿಗಳನ್ನು ಹಾಗೂ ಶರಣಬಸವೇಶ್ವರ ಗುಡಿಯನ್ನು ಕೆಡವಲು ಪ್ರಯತ್ನಗಳು ನಡೆದವು. ಕೊನೆಗೆ ಸಿಐಡಿ ಡಿ.ಎಸ್.ಪಿ.ಯ ಮರಣವಾಯಿತು. ಸಂಸ್ಥಾನ ಸರಕಾರ ಇದನ್ನು ಮುಚ್ಚಲು ಪ್ರಯತ್ನಿಸಿತು. ಆದರೆ ನಾನೇ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯಲ್ಲಿ ಇದರ ವಿಚಾರವನ್ನು ಬರೆದು ಪ್ರಕಟಿಸಿದೆ. ನಂತರ ಗಾಂಧೀಜಿಯವರು ಹರಿಜನ (ಯಂಗ್ ಇಂಡಿಯಾ) ಪತ್ರಿಕೆಯಲ್ಲಿ 'ಗುಲಬರ್ಗಾ ಗಾನ್ ಮ್ಯಾಡ್' ಎಂಬ ಲೇಖನ ಬರೆದು ಪ್ರಕಟಿಸಿದರು. ಇದು ಆ ಕಾಲದ ಪ್ರಮುಖ ಪ್ರಚೋದಕ ಘಟನೆಯಾಗಿತ್ತು." ಗಾಂಧೀಜಿಯವರು 1927ರಲ್ಲಿ ಗುಲಬರ್ಗಾಕ್ಕೆ ಭೇಟಿ ನೀಡಿ ಶರಣಬಸವೇಶ್ವರ ದೇವಾಲಯವನ್ನು ಸಂದರ್ಶಿಸಿದರು. ಇವರ

ಭೇಟಿ ಸ್ವಾತಂತ್ರ್ಯ ಚಳವಳಿಗಾರರ ಮನಸ್ಸಿನ ಮೇಲೆ ಅಗಾಧ ಪರಿಣಾಮ ಬೀರಿತು. ಕಕ್ಕೇರಿ ಹನಮಂತರಾವ್, ಜನಾರ್ದನರಾವ್ ದೇಸಾಯಿ, ಸ್ವಾಮಿ ರಮಾನಂದತೀರ್ಥ, ಗೋವಿಂದರಾವ್ ನಾನಲ್, ರಾವಿನಾರಾಯಣರೆಡ್ಡಿ, ಶ್ರೀನಿವಾಸರಾವ್ ಬೋರಿಕರ್, ದತ್ತಾತ್ರೇಯ ಅವರಾದಿ, ಪ್ರೊ. ದೇವುಳಗಾಂವ್‌ಕರ್, ಕೊಲ್ಲೂರ ಮಲ್ಲಪ್ಪ, ನಾರಾಯಣರಾವ್, ಶರಣಗೌಡ ಇನಾಂದಾರ, ದಾಸರಾವ್ ಮೊಕ್ತೆದಾರ, ಜಗನ್ನಾಥರಾವ್ ಚಂಡರಕಿ, ಡಾ. ಜಿ.ಎಸ್. ಮೇಲುಕೋಟೆ, ಎಂ.ಕೆ. ವಾಘಮೋರೆ, ಇನ್ನೂ ಅನೇಕರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯ ಪಾತ್ರವಹಿಸಿದ್ದಾರೆ.

ಸ್ವಾತಂತ್ರ್ಯ ನಂತರ ರಜಾಕಾರರ ದೌರ್ಜನ್ಯಗಳನ್ನು ಈ ಪ್ರದೇಶದ ಜನರು ಎದುರಿಸಬೇಕಾಗಿ ಬಂದದ್ದು ದುರ್ದೈವದ ಸಂಗತಿ. 1947 ಆಗಸ್ಟ್ 15ರಂದು ಮಧ್ಯರಾತ್ರಿಯ ತರುವಾಯ ಹೈದರಾಬಾದ್ ಸಂಸ್ಥಾನದಲ್ಲಿ ನಡೆದ ವ್ಯಾಪಕ ದೌರ್ಜನ್ಯಗಳಿಗೆ ಧಾರ್ಮಿಕ ತೀವ್ರಗಾಮಿಗಳ ಸಂಸ್ಥೆಯಾದ ಇತ್ತೆಹಾದ್-ಉಲ್-ಮುಸಲ್‌ಮೀನ್ ಮುಖ್ಯವಾಗಿ ಕಾರಣವಾಗಿತ್ತು. ಈ ಸಂಸ್ಥೆಯ ಸ್ಥಾಪನೆಯನ್ನು ಇದಕ್ಕೆ ಮೊದಲೇ ಲಾತೂರಿನ ವಕೀಲ ಖಾಸಿಂ ರಜ್ವಿ ಮತ್ತು 'ರೆಹನ್ ಮಾಯೇ ದಕ್ಕನ್' ಪತ್ರಿಕೆಯ ಸಂಪಾದಕನಾಗಿದ್ದ ಮಹಮ್ಮದ ಸಿದ್ದಿಕಿ ಇವರುಗಳು (1940) ಕೈಗೊಂಡಿದ್ದರು. ಸ್ವಾಮಿ ರಮಾನಂದತೀರ್ಥರ ನೇತೃತ್ವದಲ್ಲಿ ಕಕ್ಕೇರಿ ಹನಮಂತರಾವ್, ಜನಾರ್ದನರಾವ್ ದೇಸಾಯಿ, ಡಾ. ಜಿ.ಎಸ್. ಮೇಲುಕೋಟೆ, ದತ್ತಾತ್ರೇಯ ಅವರಾದಿ, ನಾರಾಯಣರಾವ್ ಕಾನಿಹಾಳ, ಶರಣಗೌಡ ಇನಾಂದಾರ, ದಾಸರಾವ್ ಮೊಖ್ತೆದಾರ, ಹರಿರಾವ್ ಮೊರೀರಾ, ಜಗನ್ನಾಥರಾವ್ ಅಪ್ಪಗಿ, ಕಲ್ಯಾಣರಾವ್ ದೇಶಪಾಂಡೆ, ದೊಂಡೋಪಂತ್, ಭೀಮಾಶಂಕರ, ಅನಿರುದ್ಧ ದೇಸಾಯಿ, ಜಗನ್ನಾಥರಾವ್ ಚಂದ್ರಕಿ, ಭಾವುಸಾಹೇಬ ದೇವುಳ ಗಾಂವ್‌ಕರ್, ಶಿದ್ರಾಮಪ್ಪ ಶಿವರಾಯಿ, ವಿಶ್ವನಾಥರೆಡ್ಡಿ, ವೀರಭದ್ರಪ್ಪ, ರಾಜಾ ವೆಂಕಟಪ್ಪ ನಾಯಕ, ಚಂದ್ರಶೇಖರ ಪಾಟೀಲ, ದಿಗಂಬರರಾವ್ ಕಲ್ಮಣಕರ್, ವಿರೂಪಾಕ್ಷಪ್ಪ ಪಾಟೀಲ ಇನ್ನೂ ಅನೇಕರು ರಜಾಕಾರರ ವಿರುದ್ಧ ಸಂಘಟನೆ ಮಾಡಿ ಹೋರಾಟ ನಡೆಸಿದರು. ಕೊನೆಗೆ ಇವರುಗಳ ಹೋರಾಟದ ಫಲದಿಂದಲೂ ಹಾಗೂ ಕೇಂದ್ರ ಸರಕಾರದ ಪೊಲೀಸ್ ಕಾರ್ಯಾಚರಣೆಯ ಫಲದಿಂದಲೂ ನಿಜಾಮ 18 ಸೆಪ್ಟೆಂಬರ್ 1948ರಂದು ಶರಣಾಗತನಾಗುವ ಮೂಲಕ ಈ ಪ್ರದೇಶವೂ ಸೇರಿದಂತೆ ಹೈದರಾಬಾದ್ ಭಾರತ ಒಕ್ಕೂಟಕ್ಕೆ ಸೇರ್ಪಡೆಯಾಯಿತು.

ಗುಲಬರ್ಗಾ ಕೃಷಿ ಪ್ರಧಾನವಾದ ಜಿಲ್ಲೆ. 11.93.982 ಹೆಕ್ಟೇರ್ ಕೃಷಿ ಭೂಮಿ ಇದ್ದು, ಜಿಲ್ಲೆಯಲ್ಲಿ ಭೂಮಿ ಕರೆಕಲ್ಲು ಮಣ್ಣು, ಮಧ್ಯ ಕಪ್ಪು ಮಣ್ಣು, ಆಳವಾದ ಕಪ್ಪು ಮಣ್ಣುಗಳಿಂದ ಕೂಡಿದ್ದು, ಜೋಳ, ಸಜ್ಜೆ, ಗೋಧಿ, ಸೂರ್ಯಕಾಂತಿ, ಬೇಳೆಕಾಳುಗಳು, ಶೇಂಗಾ, ಕಡಲೆ, ತೊಗರಿ, ಕುಸುಬೆ ಇತ್ಯಾದಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಚಂದ್ರಪಳ್ಳಿ ನೀರಾವರಿ ಯೋಜನೆ, ಬೆಣ್ಣೆತೊರೆ ಯೋಜನೆ, ಅಮರಜಾ ಮಧ್ಯಮ ನೀರಾವರಿ ಯೋಜನೆ, ಮುಲ್ಲಮಾರಿ ಕೆಳದಂಡೆ

ಯೋಜನೆ, ಕೃಷ್ಣಾ ಮೇಲ್ದಂಡೆ ಯೋಜನಾ ಮುಂತಾದವುಗಳನ್ನು ರಾಜ್ಯ ಸರಕಾರ ಕೈಗೆತ್ತಿಕೊಂಡಿದ್ದು, ಸಂಪೂರ್ಣ ನೀರಾವರಿ ಸೌಲಭ್ಯ ಸಿಕ್ಕಾಗ ಈ ಪ್ರದೇಶವು ಸಮೃದ್ಧವಾಗುವುದರಲ್ಲಿ ಸಂಶಯವಿಲ್ಲ.

ಗುಲ್ಬರ್ಗಾ ಲೋಕಸಭೆಯ ಕ್ಷೇತ್ರವಾಗಿದ್ದು, ಸ್ವಾಮಿ ರಮಾನಂದ ತೀರ್ಥರು, ಮಹಾದೇವಪ್ಪ ರಾಂಪುರೆ, ಧರ್ಮರಾವ್ ಅಫಜಲ್‌ಪುರಕರ್, ಸಿದ್ರಾಮರೆಡ್ಡಿ, ಸಿ.ಎಂ. ಸ್ಟೀಫೆನ್, ಬಿ.ಜಿ. ಜವಳಿ, ಧರ್ಮಸಿಂಗ್, ವೀರೇಂಬ್ರ ಪಾಟೀಲ, ಖಮರುಲ್ ಇಸ್ಲಾಂ, ಬಸವರಾಜಸೇಡಂ, ಇಕ್ಬಾಲ್ ಅಹಮ್ಮದ್ ಸಾರಡಗಿ ಮುಂತಾದವರು ಈ ಕ್ಷೇತ್ರದಿಂದ ಲೋಕಸಭೆಗೆ ಚುನಾಯಿತರಾಗಿದ್ದಾರೆ.

ಕನ್ನಡ ಸಾಹಿತ್ಯಕ್ಕೆ ಅತ್ಯಂತ ಪ್ರಮುಖ ಕೊಡುಗೆ ಕೊಟ್ಟ ಕೀರ್ತಿ ಗುಲಬರ್ಗಾ ಜಿಲ್ಲೆಗೆ ಸೇರುತ್ತದೆ. ಕವಿರಾಜಮಾರ್ಗದ ಕರ್ತೃ ಮಾನ್ಯಖೇಟದ ದೊರೆ ಅಮೋಘವರ್ಷ ನೃಪತುಂಗ ಈ ಪ್ರದೇಶದವನು. ಆದಿಕವಿ ಪಂಪ, ಕವಿಚಕ್ರವರ್ತಿಗಳಾದ ಪೊನ್ನ ಮತ್ತು ರನ್ನ ಈ ಪ್ರದೇಶದಲ್ಲಿ ರಾಜಾಶ್ರಯ ಪಡೆದು ತಮ್ಮ ಅಮೋಘ ಸಾಹಿತ್ಯ ಕೃತಿಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ಕೊಟ್ಟಿದ್ದಾರೆ. ಪ್ರಸಿದ್ಧ ವಚನಕಾರನಾದ ದೇವರ ದಾಸಿಮಯ್ಯ ಈ ಪ್ರದೇಶದವನು. ಪ್ರಸಿದ್ಧ ಟೀಕಾಚಾರ್ಯರೆನಿಸಿದ್ದ ಶ್ರೀ ಜಯತೀರ್ಥರು ಇಲ್ಲಿನ ಮಳಖೇಡದವರು.

ರಾಜಾಕಾಳಚಂದ್ ಉನ್ನತ ಮಟ್ಟದ ಉರ್ದುಕವಿ. ಖಾಜಾಬಂದೇ ನವಾಜ ಉರ್ದು ಕವಿ ಮತ್ತು ಗದ್ಯ ಲೇಖಕರು. ಅವರೊಬ್ಬ ಪರಿಶುದ್ಧ ಜೀವನ ನಡೆಸಿದ ಪ್ರವಾದಿ. ಅರಳುಗಂಡಿಗೆ ಶರಣಬಸಪ್ಪ ಆಧ್ಯಾತ್ಮ ಸಾಧನೆಯಿಂದ ಮಹಾತ್ಮರೆನಿಸಿಕೊಂಡವರು.

ಬಿಲ್ಲಮಕೋಡಿ ಹೀರೇಮಠದ ಪಂಚಾಕ್ಷರಿ ಗವಾಯಿಗಳು, ಸಗರ ಕೃಷ್ಣಾಚಾರ್ಯ, ಶೈಲಜಾ ಚಡಚಣ, ಮ.ಗು. ಬಿರಾದಾರ ಪ್ರೊ. ವಸಂತ ಕುಷ್ಟಗಿ, ಚನ್ನಣ್ಣ ವಾಲೀಕರ, ಗೀತಾ ನಾಗಭೂಷಣ, ಕಪಟರಾಳ ಕೃಷ್ಣರಾವ್, ಲಿಂಗಣ್ಣ ಸತ್ಯಂಪೇಟೆ, ರಾಮಾಶಾಸ್ತ್ರೀ ಮುಂತಾದ ಲೇಖಕರನ್ನು ಗುರುತಿಸಬಹುದು.

ಗುಲಬರ್ಗಾದ ಎಸ್. ಎಂ. ಪಂಡಿತರು ಅಂತರಾಷ್ಟ್ರೀಯ ಖ್ಯಾತಿಯ ಕಲಾವಿದರು. ನಾಟಕ ತಂಡಗಳು ಉದಯವಾಗಿ ನಿರಂತರವಾಗಿ ನಾಟಕ ಪ್ರಯೋಗಗಳು ರಂಗಮಂದಿರಗಳಲ್ಲಿ ನಡೆಯುತ್ತಿವೆ. ರಾಜ್ಯಮಟ್ಟದಲ್ಲಿ ಮಾನ್ಯತೆ ಪಡೆದಿರುವ ಹಲವಾರು ಪ್ರಬುದ್ಧ ಸಂಗೀತಗಾರರಿದ್ದಾರೆ. ಗಜಲ್, ಶಹರಿ, ಮುಶಾಯೆರ ಇತ್ಯಾದಿ ಉರ್ದು ಕವಿತೆ ಹಾಡುವ ತಂಡಗಳು ಜಿಲ್ಲೆಯಲ್ಲಿವೆ. ಭರತನಾಟ್ಯ ಇತ್ತೀಚಿನ ವರ್ಷಗಳಲ್ಲಿ ಜಿಲ್ಲೆಯಲ್ಲಿ ಆಶಾದಾಯಕವಾಗಿ ಬೆಳೆಯುತ್ತಿದೆ. ಬಹಮನಿ ಸುಲ್ತಾನರ ಕಾಲದಲ್ಲಿ ಈಜಿಪ್ತಿನ ಪ್ರಸಿದ್ಧ ವೈಯ್ಯಾಕರಿಣಿ ರಾಮೋನಿ ಕಲಬುರ್ಗಿಗೆ ಭೇಟಿ ಕೊಟ್ಟಿದ್ದು, ಅಲ್ಲಿಯೇ ಅವನು ಅರಬ್ಬಿ ಭಾಷೆಯ ವ್ಯಾಕರಣ ರಚಿಸಿದನು.

ಕಲೆ, ವಿಜ್ಞಾನ, ವೈದ್ಯಕೀಯ, ಇಂಜನಿಯರಿಂಗ್ ಮುಂತಾದ ಹಲವಾರು ಮಹಾವಿದ್ಯಾಲಯಗಳನ್ನೊಳಗೊಂಡ ವಿಶ್ವವಿದ್ಯಾನಿಲಯ ತಲೆ ಎತ್ತಿದ್ದು ಇದೊಂದು ವಿದ್ಯಾಕೇಂದ್ರವಾಗಿದೆ.

ಗುಲಬರ್ಗಾ ತಾಲ್ಲೂಕಿನಲ್ಲಿ ಔರಾದ, ಗುಲಬರ್ಗಾ, ಕಮಲಾಪುರ, ಮಹಾಗಾಂವ್, ಪರುತಾಬಾದ್, ಪಟ್ಟಣ ಹೋಬಳಿಗಳು. ಈ ತಾಲ್ಲೂಕಿನಲ್ಲಿ 144 ಗ್ರಾಮಗಳಿವೆ. ಬಹಮನೀಯರ ರಾಜಧಾನಿಯಾಗಿದ್ದ ಗುಲಬರ್ಗಾದಲ್ಲಿ ಇಸ್ಲಾಮೀ ವಾಸ್ತುಶೈಲಿಯ ಅನೇಕ ಕಟ್ಟಡಗಳಿವೆ. ಶರಣಬಸವೇಶ್ವರ ದೇವಸ್ಥಾನವಿದೆ. ಮಹಮ್ಮದ ಆಲಿ, ಮೆಹಾತಾಬ ಆಲಿ, ಗಂಗಾಧರ ನಮೋಶಿ, ಎಸ್. ಕೆ. ಕಾಂತಾ, ಖಮರುಲ್ ಇಸ್ಲಾಂ ಮುಂತಾದವರು ಈ ಕ್ಷೇತ್ರದಿಂದ ವಿಧಾನಸಭೆಗೆ ಚುನಾಯಿತರಾಗಿದ್ದಾರೆ.

ಅಳಂದ ಗುಲಬರ್ಗಾ ಜಿಲ್ಲೆಯ ಇನ್ನೊಂದು ತಾಲ್ಲೂಕು. ಅಳಂದ, ನಿಂಬರಗಾ ಮತ್ತು ನರೋಣ ಹೋಬಳಿಗಳು. ತಾಲ್ಲೂಕಿನಲ್ಲಿ 129 ಗ್ರಾಮಗಳಿವೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಈ ಊರು 'ಅಳಂದೆ ಸಾಸಿರ' ಎಂಬ ಪ್ರಾಂತ್ಯವೊಂದರ ಮುಖ್ಯ ಪಟ್ಟಣವಾಗಿತ್ತೆಂದು ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಇಲ್ಲಿ ಆರನೆಯ ವಿಕ್ರಮಾದಿತ್ಯನ ಕಾಲದ ಒಂದು ಶಾಸನವೂ ದೊರಕಿದೆ. ಆ ಕಾಲದ ಹಲವು ಭಗ್ನಾವಶೇಷಗಳಲ್ಲದೆ ಸುಮಾರು 15 ನೇ ಶತಮಾನದ ಲಾಡ್ಲೆ ಮುಷಾಯಿಕ್ ದರ್ಗಾ ಇದೆ. ಅದರ ಸಮೀಪದಲ್ಲಿಯೇ ರಾಘವ ಚೈತನ್ಯರ ಸಮಾಧಿ ಇದೆ. ಈ ಊರಿನಲ್ಲಿ ಶಂಕರಾಚಾರ್ಯರ ಸದ್ಯ ಶಿಷ್ಯರಾದ ಹಸ್ತಾಮಲಕರು ನೆಲೆಸಿದ್ದರೆಂದು ಪ್ರತೀತಿ ಇದೆ. 15 ನೆಯ ಶತಮಾನದಲ್ಲಿ ರಷ್ಯಾ ಪ್ರವಾಸಿಯೊಬ್ಬ ಈ ಊರನ್ನು ಸಂದರ್ಶಿಸಿದ್ದ.

ಆಳಂದ ವಿಧಾಸಭಾ ಕ್ಷೇತ್ರದಿಂದ ರಾಮಚಂದ್ರ ವೀರಪ್ಪ, ಚಂದ್ರಶೇಖರ ಪಾಟೀಲ, ದೇವಪ್ಪ ಶಾಮಣ್ಣ, ದಿಗಂಬರರಾವ್ ಕಲ್ಮಣಕರ್, ಅಣ್ಣಾರಾವ್ ವೀರಭದ್ರಪ್ಪ, ಅಣ್ಣಾರಾವ್ ಪಾಟೀಲ, ಬಿ.ಆರ್. ಪಾಟೀಲ, ಶರಣಬಸಪ್ಪ ಮಾಲೀಪಾಟೀಲ, ಸುಭಾಷ ಗುತ್ತೇದಾರ ಮುಂತಾದವರು ಚುನಾಯಿತರಾಗಿದ್ದಾರೆ.

ಗುಲ್ಬರ್ಗಾ ಜಿಲ್ಲೆಯ ಇನ್ನೊಂದು ತಾಲ್ಲೂಕು ಅಫಜಲಪುರ್. ಅತ್ನೂರು, ಅಫಜಲ್‌ಪುರ ಹಾಗೂ ಕರಜಗಿ ಹೋಬಳಿಗಳು. ತಾಲ್ಲೂಕಿನಲ್ಲಿ 90 ಗ್ರಾಮಗಳಿವೆ. ಬಿಜಾಪುರದ 2ನೆಯ ಆದಿಲ್‌ಷಾನ ಸರದಾರನಾಗಿದ್ದು ಶಿವಾಜಿಯಿಂದ ಪ್ರತಾಪಗಡದಲ್ಲಿ ಹತನಾದ ಅಫಜಲ್‌ಖಾನ್‌ನಿಂದ ಈ ಊರಿನ ಹೆಸರು ಬಂದಿದೆ. ಅಣ್ಣಾರಾವ್ ಗಣಮುಖಿ, ನೀಲಕಂಠ ಪಾಟೀಲ, ಡಿ.ಬಿ. ಕಲ್ಮಣಕರ್, ಎಂ.ವೈ. ಪಾಟೀಲ, ಹನಮಂತರಾವ್ ದೇಸಾಯಿ, ಮಾಲಿಕಯ್ಯ ಗುತ್ತೇದಾರ ಮುಂತಾದವರು ಈ ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆಯಾಗಿದ್ದಾರೆ.

ಜೇವರಗಿ ಗುಲ್ಬರ್ಗಾ ಜಿಲ್ಲೆಯ ಇನ್ನೊಂದು ತಾಲ್ಲೂಕು. ಜೇವರಗಿ, ಇಜೇರಿ, ನೆಲೋಗಿ, ಯಡ್ರಾಮಿ ಮತ್ತು ಅಂದೋಲಾ ಹೋಬಳಿ ಕೇಂದ್ರ ಸ್ಥಾನಗಳು. ತಾಲ್ಲೂಕಿನಲ್ಲಿ 158 ಗ್ರಾಮಗಳಿವೆ. ತಾಲ್ಲೂಕಿನ ಅಂದೋಲಾ, ಮದ್ರಕ ಮೊದಲಾದ ಸ್ಥಳಗಳಲ್ಲಿ ಬೃಹತ್ ಶಿಲಾಸಮಾಧಿಗಳಿವೆ. ಅರಳಗುಂಡಿಗೆ ಶರಣಬಸವೇಶ್ವರರ ಜನ್ಮಸ್ಥಳ. ಕಡಕೋಳ ಕೈವಲ್ಯ ವಾಕ್ಯಾಮೃತದ ಕರ್ತೃ ಮಡಿವಾಳಪ್ಪ ಮಹಾಂತ ಶಿವಯೋಗಿ ಎಂಬ ವಚನಕಾರರಿದ್ದ ಸ್ಥಳ. ಸೊನ್ನದಲ್ಲಿ ಸಿದ್ದಲಿಂಗ ಯೋಗಿ (ಸು. 1600) ಎಂಬ ವಚನಕಾರರು ಇದ್ದರು. ಹೊನಗುಂಟೆಯಲ್ಲಿ ಉಂಡುಪವಾಸಿ

ಎಂಬ ವಚನಕಾರರು ಇದ್ದರೆಂದು ತಿಳಿದುಬರುತ್ತದೆ. ರಾಮಪುರ ನಿಜಶರಣನ ತ್ರಿವಿಧಿಯ ಕರ್ತೃ ಬೊಕ್ಕಪ್ಪ ಎಂಬ ವಚನಕಾರರ ಜನ್ಮಸ್ಥಳ. ಚಂದ್ರಹಾಸನ ರಾಜಧಾನಿ ಕುಂತಳ ಪ್ರದೇಶ ಇದರ ಸುತ್ತಲಲ್ಲೆ ಇತ್ತೆಂದು ಪ್ರತೀತಿ.

ಈ ಕ್ಷೇತ್ರದಿಂದ ವಿಧಾನಸಭೆಗೆ ಶರಣಗೌಡ ಸಿದ್ಧರಾಮಯ್ಯ, ನೀಲಕಂಠಪ್ಪ ಶರಣಪ್ಪ, ಸಿದ್ರಾಮಗೌಡ, ಧರ್ಮಸಿಂಗ್ ನಾರಾಯಣಸಿಂಗ್ ಮುಂತಾದವರು ಚುನಾಯಿತರಾಗಿದ್ದಾರೆ.

ಶಹಾಪುರ ಜಿಲ್ಲೆಯ ಇನ್ನೊಂದು ತಾಲ್ಲೂಕು. ಶಹಾಪುರ, ಗೋಗಿ, ದೋರನಹಳ್ಳಿ, ಹಿರಿಹಯ್ಯಾಳ ಮತ್ತು ವಡಗೆರೆ ಹೋಬಳಿಗಳಾಗಿದ್ದು, 159 ಗ್ರಾಮಗಳಿವೆ. ಇದು ಸಗರನಾಡು ಪ್ರದೇಶ. ಪೌರಾಣಿಕ ಸ್ಥಳ. ಶಿವಶರಣ ಸಗರದ ಬ್ರಹ್ಮಯ್ಯ (ಬೊಮ್ಮಯ್ಯ) ಸಗರದವರು. ಶೇಕ್ ಸೂಫಿ ಸರಮಸ್ತ ಸಾಹೇಬರ ಗೋರಿ ಇದೆ. ಆದಿಲ್‌ಷಾ ಸುಲ್ತಾನರ ಗೋರಿಗಳು ಗೋಗಿಯಲ್ಲಿವೆ.

ಈ ಕ್ಷೇತ್ರದಿಂದ ವಿಧಾನಸಭೆಗೆ ವಿರುಪಾಕ್ಷಪ್ಪ, ಮಹಾಂತಸ್ವಾಮಿ, ರಾಜಾ ವೆಂಕಟಪ್ಪನಾಯಕ, ಬಾಪುಗೌಡ ದರ್ಶನಾಪುರ, ಶಿವಣ್ಣಸವೂರು, ಶಿವಶೇಖರಪ್ಪಗೌಡ ಸಿರ್ವಾಳ, ಶರಣಬಸಪ್ಪ ದರ್ಶನಾಪುರ ಮುಂತಾದವರು ಚುನಾಯಿತರಾಗಿದ್ದಾರೆ.

ಸುರಪುರ ಗುಲ್ಬರ್ಗಾ ಜಿಲ್ಲೆಯ ಇನ್ನೊಂದು ತಾಲ್ಲೂಕು. ಸುರಪುರ, ಹುಣಸಗಿ, ಕೆಂಬಾವಿ, ಕೊಡೆಕಲ್ಲು, ಕಕ್ಕೇರಿ ಇವು ಹೋಬಳಿಗಳಾಗಿದ್ದು, ತಾಲ್ಲೂಕಿನಲ್ಲಿ 186 ಗ್ರಾಮಗಳಿವೆ. ಈ ತಾಲ್ಲೂಕಿನ ವಾಗಣಗೇರಿ ಚರಿತ್ರಾರ್ಹವಾದದ್ದು. ಸುರಪುರ ನಾಯ್ಕರ ರಾಜಧಾನಿಯಾಗಿತ್ತು. ಮೊಗಲ್ ಚಕ್ರವರ್ತಿ ಔರಂಗಜೇಬನಿಗೂ (17ನೇ ಶತಮಾನ) ಸುರಪುರದ ರಾಜರಿಗೂ ಇಲ್ಲಿ ಯುದ್ಧ ನಡೆದಿತ್ತು. ಕೃಷ್ಣಾನದಿಯ ಎಡದಂಡೆಯ ಮೇಲಿರುವ ತಿಂತಿಣಿ ಹಿಂದೂ ಮತ್ತು ಮುಸಲ್ಮಾನರ ಒಂದು ಪವಿತ್ರ ಕ್ಷೇತ್ರ. ನಾರಾಯಣಪುರದ ಬಳಿ ಛಾಯಾಭಗವತಿ ದೇವಾಲಯವಿದೆ. ಐತಿಹಾಸಿಕ ಕಾದಂಬರಿಗಳನ್ನು ಬರೆದಿರುವ ಕರ್ನಲ್ ಮೇಡೋಸ್ ಟೈಲರನು ಈ ಪಟ್ಟಣದಲ್ಲಿ ಕಟ್ಟಿದ ಮನೆ 'ಟೈಲರ್ ಮಂಝಿಲ್' ಎಂದು ಈಗಲೂ ಪ್ರಸಿದ್ಧವಾಗಿದೆ. ಸುರಪುರ ದೊರೆಗಳು ಶೌರ್ಯ, ಸಾಹಸಕ್ಕೆ ಹೆಸರಾದವರು.

ಈ ಕ್ಷೇತ್ರದಿಂದ ವಿಧಾನಸಭೆಗೆ ಕುಮಾರನಾಯ್ಕ, ರಾಜಾಪಿಡ್ ನಾಯಕ್, ಮದನಗೋಪಾಲ ನಾಯಕ್, ರಾಜಾ ವೆಂಕಟಪ್ಪನಾಯಕ್ ಮುಂತಾದವರು ಚುನಾಯಿತರಾಗಿದ್ದಾರೆ.

ಯಾದಗೀರ ಗುಲ್ಬರ್ಗಾ ಜಿಲ್ಲೆಯ ಇನ್ನೊಂದು ತಾಲ್ಲೂಕು. ಯಾದಗೀರ, ಬಳಚಕ್ಕರ್, ಹತ್ತಿಕುಣಿ, ಸಯ್ಯಾಪುರ, ಕೊಂಕಲ್ ಮತ್ತು ಗುರುಮಿಟಕಲ್ ಹೋಬಳಿಗಳಿದ್ದು, ಒಟ್ಟು 142 ಗ್ರಾಮಗಳಿವೆ. ಪ್ರಾಚೀನ ಶಾಸನಗಳಲ್ಲಿ 'ಏತಗಿರಿ' ಎಂದೇ ಉಲ್ಲೇಖಿತಗೊಂಡಿರುವ ಇದು ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ಸ್ವಲ್ಪ ಕಾಲ ರಾಜಧಾನಿಯಾಗಿತ್ತು. ಇಲ್ಲಿಂದ ಈವರೆಗೆ ಕನ್ನಡ ಹಾಗೂ ಪರ್ಷಿಯನ್ ಭಾಷೆಯಲ್ಲಿರುವ ಐದು ಶಾಸನಗಳು ವರದಿಯಾಗಿವೆ. ಊರ ಪೂರ್ವಕ್ಕೆ

ಗುಡ್ಡದ ಮೇಲೆ ಇರುವ ಮೂರು ಸುತ್ತಿನ ಕೋಟೆಯು ಕಲ್ಯಾಣ ಚಾಲುಕ್ಯರ ರಚನೆಯಾಗಿದ್ದು, ನಂತರದಲ್ಲಿ ಇದನ್ನು ಯಾದವರು ಬಲಪಡಿಸಿದ್ದು, ಬಹಮನಿ, ಆದಿಲ್‌ಷಾಹಿ ಹಾಗೂ ನಿಜಾಮರ ಕಾಲದಲ್ಲೂ ಇದು ಸಾಕಷ್ಟು ಸೇರ್ಪಡೆಗಳೊಂದಿಗೆ ವಿಸ್ತರಿಸಲ್ಪಟ್ಟಿದೆ. ಗುಡ್ಡದ ಮೇಲೆ ಈಶ್ವರ, ಕಾಳಿಕಾ ಹಾಗೂ ಹನುಮಂತನ ದೇವಾಲಯಗಳಿವೆ. ಜಿನ್ನಪ್ಪನ ಬೆಟ್ಟದ ಮೇಲಿರುವ ಗುಹಾಂತರ ಬಸದಿಯ ಹೆಬ್ಬಂಡಿಯ ಮೇಲೆ ಪಾರ್ಶ್ವನಾಥ ತೀರ್ಥಂಕರನ ಉಬ್ಬು ಶಿಲ್ಪವಿದೆ. ಗುಡ್ಡದ ಕೋಟೆಯೊಳಗೆ ದರ್ಗಾ, ಮಸೀದಿ, ಪುಷ್ಕರಣಿ ಮುಂತಾದವುಗಳು ಇವೆ.

ಈ ಕ್ಷೇತ್ರದಿಂದ ವಿಧಾನಸಭೆಗೆ ಬಸವಂತರಾಯ, ಭೋಜರಾಜ, ವಿಶ್ವನಾಥರೆಡ್ಡಿ, ಶರಣಪ್ಪ ಕಲಬುರಗಿ, ಡಾ. ಮಾಲಕರೆಡ್ಡಿ ಮುಂತಾದವರು ಚುನಾಯಿತರಾಗಿದ್ದಾರೆ. ಪಕ್ಕದ ಗುರುಮಿಟಕಲ್ ಕ್ಷೇತ್ರದಿಂದ ಆಯ್ಕೆಯಾಗಿದ್ದು ಇದೀಗ ಗೃಹಸಚಿವರಾದ ಮಲ್ಲಿಕಾರ್ಜುನಖರ್ಗೆ 1972ರಿಂದ ಚುನಾಯಿತರಾಗುತ್ತಿದ್ದಾರೆ.

ಚಿತ್ತಾಪುರ ಇನ್ನೊಂದು ತಾಲ್ಲೂಕು. ಶಹಾಬಾದ, ಗುಂಡಗುರ್ತಿ, ನಾಲವಾರ, ಕಾಳಗಿ ಮತ್ತು ಚಿತ್ತಾಪುರ ಹೋಬಳಿಗಳಾಗಿದ್ದು ತಾಲ್ಲೂಕಿನಲ್ಲಿ 122 ಹಳ್ಳಿಗಳಿವೆ. ಚಿತ್ತಾಪುರದ ಹತ್ತಿರದಲ್ಲಿರುವ ಯರಗೋಳದಲ್ಲಿ ಟೀಕಾಚಾರ್ಯರು ಇದ್ದು 'ನ್ಯಾಯಸುಧಾ' ರಚಿಸಿದರೆಂದು ಪ್ರತೀತಿ ಇದೆ. ಕಲ್ಯಾಣದ ಚಾಲುಕ್ಯರ ಕಾಲದ ಜೈನ ಮಂದಿರಗಳಿವೆ. ಬಹಮನಿ ಅರಸರ ಕಾಲದ ಕೋಟೆ ಇದೆ. ಚಾರಿತ್ರಿಕ ಮಹತ್ವದ ನಾಗಾವಿ ಹಾಗೂ ದಿಗ್ಗಾಂವಿಗಳು ಇಲ್ಲಿಗೆ ಸಮೀಪದಲ್ಲಿವೆ.

ಈ ಕ್ಷೇತ್ರದಿಂದ ವಿಧಾನಸಭೆಗೆ ವಿಜಯಾದೇಸಾಯಿ, ಆರ್. ನಾಗಪ್ಪ, ಪ್ರಭಾಕರ ತೇಲ್ಕರ್, ವಿಶ್ವನಾಥ ಪಾಟೀಲ, ಬಾಬುರಾವ್ ಚಿಂಚನೂರು ಮುಂತಾದವರು ಆಯ್ಕೆಯಾಗಿದ್ದಾರೆ.

ಗುಲ್ಬರ್ಗಾ ಜಿಲ್ಲೆಯ ಸೇಡಂ ಇನ್ನೊಂದು ತಾಲ್ಲೂಕು. ಕಮಲಾನದಿಯ ದಂಡೆಯ ಮೇಲಿರುವ ಚಾರಿತ್ರಿಕ ಮಹತ್ವದ ಊರು. ಪ್ರಾಚೀನ ಶಾಸನಗಳಲ್ಲಿ "ಅಗ್ರಹಾರ ಸೇಡಿಂಬಾಪುರ" ಎಂದು ಉಲ್ಲೇಖಗೊಂಡಿರುವ ಇದು ಹಿಂದೆ ಅರಲು 300 ಆಡಳಿತ ವಿಭಾಗಕ್ಕೆ ಸೇರಿತ್ತು. ಇಲ್ಲಿಂದ ಈವರೆಗೆ 11 ಶಾಸನಗಳು ವರದಿಯಾಗಿವೆ. ಕ್ರಿ.ಶ. 1079 ಶಾಸನದಿಂದ ಸೇಡಿಂಬಾ ಪಟ್ಟಣದ ಕೋಟೆ, ಪ್ರಾಕಾರ, ಗೋಪುರಗಳು ಸೇರಿದಂತೆ ಚಾಲುಕ್ಯ ವಂಶಾವಳಿ ಮುಂತಾದ ಐತಿಹಾಸಿಕ ಮಹತ್ವದ ವಿಷಯಗಳು ದೊರೆತಿವೆ. ಕ್ರಿ.ಶ. 1124ರ ಶಾಸನ ಇದೊಂದು ಅಗ್ರಹಾರವಾಗಿತ್ತೆಂದು ಹೇಳುತ್ತದೆ. ಇದೊಂದು ಇತಿಹಾಸ ಪ್ರಸಿದ್ಧ ಸ್ಥಳ. ಈ ತಾಲ್ಲೂಕಿನಲ್ಲಿರುವ ಮಳಖೇಡ (ಮಾನ್ಯಖೇಟ) ರಾಷ್ಟ್ರಕೂಟರ ರಾಜಧಾನಿಯಾಗಿತ್ತೆಂದು ಹೇಳಲಾಗಿದೆ.

ಈ ಕ್ಷೇತ್ರದಿಂದ ವಿಧಾನಸಭೆಗೆ ಕೊಲ್ಲೂರು ಮಲ್ಲಪ್ಪ, ಜಮದಂಡ ಸರ್ವೇಶ, ಷೇರಖಾನ್, ನಾಗರೆಡ್ಡಿ ಪಾಟೀಲ, ಚಂದ್ರಶೇಖರರೆಡ್ಡಿ ದೇಶಮುಖ, ಬಸವಂತರೆಡ್ಡಿ ಮೋತಕ

ಪಲ್ಲಿ ಮುಂತಾದವರು ಆಯ್ಕೆಯಾಗಿದ್ದಾರೆ. ಪಕ್ಕದ ಶಹಾಬಾದ ಕ್ಷೇತ್ರದಿಂದ ಕೆ.ಬಿ. ಶಾಣಪ್ಪ, ಬಾಬುರಾವ್ ಚವ್ಹಾಣ್, ಸಿ. ಗುರುನಾಥ ಮುಂತಾದವರು ಆಯ್ಕೆಯಾಗಿದ್ದಾರೆ.

ಚಿಂಚೋಳಿ ಗುಲ್ಬರ್ಗಾ ಜಿಲ್ಲೆಯ ಮತ್ತೊಂದು ತಾಲ್ಲೂಕು. ಐನಾಪುರ, ಕೊಡ್ಲಿ, ಚಿಂಚೋಳಿ ಮತ್ತು ಸೊಲ್ಲಾಪೇಟೆ ಹೋಬಳಿಗಳಾಗಿದ್ದು, ತಾಲ್ಲೂಕಿನಲ್ಲಿ 145 ಗ್ರಾಮಗಳಿವೆ. ಹಿಂದೆ ಈ ತಾಲ್ಲೂಕು ಪೂರ್ಣವಾಗಿ ಆಲಂ ಆಲಿ ಕೈರೋಜ ಎಂಬ ನವಾಬನ ಜಾಹಗೀರಾಗಿತ್ತು. ಇದು ಮುಲ್ಲಾಮಾರಿ ನದಿಯ ದಡದಲ್ಲಿದೆ. ರಾಜನ ಅರಮನೆ ಒಂದು ಪ್ರೇಕ್ಷಣೀಯ ಕಟ್ಟಡ. ಇಲ್ಲಿನ ರಾಯಿಮಾನ್‌ಗಡ ದೇವಸ್ಥಾನಕ್ಕೆ ಅನೇಕ ಭಕ್ತರು ಬರುತ್ತಾರೆ.

ಈ ಕ್ಷೇತ್ರದಿಂದ ವಿಧಾನಸಭೆಗೆ ವೀರೇಂದ್ರಪಾಟೀಲ, ದೇವೇಂದ್ರಪ್ಪ ಘಾಳಪ್ಪ, ವೈಜನಾಥ ಪಾಟೀಲ, ಕೈಲಾಸ ಪಾಟೀಲ ಮುಂತಾದವರು ಆಯ್ಕೆಯಾಗಿದ್ದಾರೆ. ವೀರೇಂದ್ರ ಪಾಟೀಲರು ಎರಡು ಸಲ ರಾಜ್ಯದ ಮುಖ್ಯಮಂತ್ರಿ ಆಗಿದ್ದರು.

## ಉಪ್ಪಾರ ಸಮಾಜ

ಹೈದರಾಬಾದ್ ಕರ್ನಾಟಕದ ಕೇಂದ್ರಸ್ಥಾನ ಗುಲಬರ್ಗಾ ಜಿಲ್ಲೆ. ಈ ಜಿಲ್ಲೆಯಲ್ಲಿ ಸುಮಾರು 11,895 ಉಪ್ಪಾರ ಕುಟುಂಬಗಳಿದ್ದು 65,430 ಉಪ್ಪಾರ ಜನಸಂಖ್ಯೆ ಇರುವುದೆಂದು ಸಮೀಕ್ಷೆವೊಂದರಿಂದ ತಿಳಿದುಬರುತ್ತದೆ.

ಸುರಪುರ ತಾಲ್ಲೂಕಿನಲ್ಲಿ 17,300 ಶಹಾಪುರ ತಾಲ್ಲೂಕಿನಲ್ಲಿ 45,430 ಯಾದಗೀರ ತಾಲ್ಲೂಕಿನಲ್ಲಿ 11,400 ಚಿತ್ತಾಪುರ ತಾಲ್ಲೂಕಿನಲ್ಲಿ 6300 ಗುಲಬರ್ಗಾ ತಾಲ್ಲೂಕಿನಲ್ಲಿ 4750 ಅಫಜಲ್‌ಪುರ ತಾಲ್ಲೂಕಿನಲ್ಲಿ 3525 ಆಳಂದ ತಾಲ್ಲೂಕಿನಲ್ಲಿ 3100 ಜೇವರಗಿ ತಾಲ್ಲೂಕಿನಲ್ಲಿ 2955 ಸೇಡಂ ತಾಲ್ಲೂಕಿನಲ್ಲಿ 3100 ಚಿಂಚೋಳಿ ತಾಲ್ಲೂಕಿನಲ್ಲಿ 3,500 ಉಪ್ಪಾರ ಜನಸಂಖ್ಯೆ ಇದೆಯೆಂದು ತಿಳಿದುಬಂದಿದೆ. ಚಿಂಚೋಳಿ ತಾಲ್ಲೂಕಿನಿಂದ ಪೂರ್ಣ ಮಾಹಿತಿ ಸಂಗ್ರಹಣೆ ಸಾಧ್ಯವಾಗಿಲ್ಲ.

ಗುಲ್ಬರ್ಗಾ ಜಿಲ್ಲೆಯ ದಕ್ಷಿಣ ತಾಲ್ಲೂಕುಗಳಾದ ಸುರಪುರ, ಷಹಪುರ, ಯಾದಗಿರಿ ಮತ್ತು ಚಿತ್ತಾಪುರ ತಾಲ್ಲೂಕುಗಳಲ್ಲಿ ಉಪ್ಪಾರರು ಗಣನೀಯ ಪ್ರಮಾಣದಲ್ಲಿದ್ದಾರೆ. ಸೇಡಂ-ಜೇವರ್ಗಿ ಹಾಗೂ ಗುಲಬುರ್ಗಾ ತಾಲ್ಲೂಕುಗಳಲ್ಲಿ ಅಲ್ಲಲ್ಲಿ ವಾಸವಾಗಿದ್ದಾರೆ. ಉತ್ತರ ತಾಲ್ಲೂಕುಗಳಾದ ಅಫಜಲಪುರ ಹಾಗೂ ಅಳಂದ ತಾಲ್ಲೂಕುಗಳಲ್ಲಿ ವಿರಳವಾಗಿ ಹರಡಿಕೊಂಡಿದ್ದಾರೆ.

ಗುಲ್ಬರ್ಗಾ ಜಿಲ್ಲೆಯ ದಕ್ಷಿಣ ತಾಲ್ಲೂಕು ಸುರಪುರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಉಪ್ಪಾರರು ನೆಲೆಸಿದ್ದಾರೆ. ಇದಕ್ಕೆ ಮೂಲ ಕಾರಣ ಸುರಪುರ ತಾಲ್ಲೂಕಿನ ವಾಯುವ್ಯ ತುದಿಯಲ್ಲಿ ಹುಟ್ಟಿ ಆಗ್ನೇಯಕ್ಕೆ ಹರಿಯುವ ಕೃಷ್ಣಾ ನದಿಗೆ ಸೇರುವ ದೇವಾಪುರಹಳ್ಳ. ಇದರ ಅಕ್ಕಪಕ್ಕದ ಎರಡು ಮೂರು ಗ್ರಾಮಗಳಲ್ಲಿ ಉಪ್ಪಾರರು ಅತಿ ಹೆಚ್ಚು ನೆಲೆಸಿದ್ದಾರೆ. ಈ ಹಳ್ಳದ ಅಕ್ಕ ಪಕ್ಕದ ಜಮೀನುಗಳಲ್ಲಿ ಉಪ್ಪಿನ ಅಂಶ ಹೆಚ್ಚಿದ್ದು ಉಪ್ಪಾರರು ತಮ್ಮ ಉಪ್ಪು ತೆಗೆಯುವ ಉದ್ಯೋಗಕ್ಕೆ

ಇದು ಅನುಕೂಲವಾಗುತ್ತದೆಂದು ಭಾವಿಸಿರಬಹುದು. ಷಹಪುರ ತಾಲ್ಲೂಕಿನಲ್ಲಿರುವ ಉಪ್ಪಾರರು ಎರಡನೆಯ ಸ್ಥಾನದಲ್ಲಿರುವರು.

ಸುರಪುರ ತಾಲ್ಲೂಕಿನ ಹಸನಾಪುರ, ರುಕ್ಮಾಪುರ, ದೇವರಗೋನಾಲ, ವಾಗಿನಗೇರಿ, ಕವಡಿಮಟ್ಟಿ, ಪೇಟ-ಅಮ್ಮಾಪುರ, ಕನ್ನಳ್ಳಿ-ಬೈಚಬಾಳ, ಇಸ್ಲಾಂಪುರ, ಹುಣಸಗಿ ಮತ್ತು ಹೆಬ್ಬಾಳ ಗ್ರಾಮಗಳಲ್ಲಿ ಉಪ್ಪಾರರು ಗಣನೀಯ ಪ್ರಮಾಣದಲ್ಲಿದ್ದಾರೆ.

ಷಹಪುರ ತಾಲ್ಲೂಕಿನ ಸಗರ, ಗೋಗಿ, ದೋರನಹಳ್ಳಿ, ಖಾನಾಪುರ, ಐಕೂರು ಹಾಗೂ ವಡಿಗೇರಿ, ಯಾದಗಿರಿ ತಾಲ್ಲೂಕಿನ ಯಾದಗಿರಿ, ಕೋಟಿಗೇರಿ, ಕಡೇಚೂರು, ನೀಲಹಳ್ಳಿ ಮತ್ತು ಯರಗೋಳ, ಚಿತ್ತಾಪುರ ತಾಲ್ಲೂಕಿನ ರಾಮಪೂರಹಳ್ಳಿ, ದರಂಸಪೇಟ, ನಾಲವಾರ, ರಾವೂರು, ಕಾಟಮದೇವಿಹಳ್ಳಿ ಹಾಗೂ ಕುಂಬಾರಹಳ್ಳಿ, ಸೇಡಂ ತಾಲ್ಲೂಕಿನ ಮುಲ್ಕಪಲ್ಲಿ, ಕಡೇಚರ್ಲಾ, ಮುಧೋಳು, ರಂಜೋಳ, ಗೋಪಾನಪಲ್ಲಿ ಮತ್ತು ನಾಡೇಪಲ್ಲಿಗಳಲ್ಲಿ ಉಪ್ಪಾರರು ಹೆಚ್ಚು ಸಂಖ್ಯೆಯಲ್ಲಿದ್ದಾರೆ.

ಗುಲ್ಬರ್ಗಾ ನಗರದಲ್ಲಿ ಸರ್ಕಾರಿ ಹಾಗೂ ಇತರೆ ಉದ್ಯೋಗಕ್ಕಾಗಿ ಬಂದು ನೆಲೆಸಿದವರ ಸಂಖ್ಯೆ ಕಡಿಮೆಯೇನಿಲ್ಲ. ಗುಲಬರ್ಗಾ ಜಿಲ್ಲೆಯ ಉಪ್ಪಾರ ಸಂಘ ಕಳೆದ ಎರಡು ದಶಕಗಳಿಂದ ಅಸ್ತಿತ್ವದಲ್ಲಿದೆ. ನಿವೃತ್ತ ತಹಶೀಲ್ದಾರ ಕೆ.ಬಿ. ಉಪ್ಪಾರ ಇದರ ಅಧ್ಯಕ್ಷರಾಗಿ ಗಮನಾರ್ಹ ಕೆಲಸ ಮಾಡಿದ್ದಾರೆ. ಪ್ರಸ್ತುತ ಶ್ರೀನಿವಾಸ ಸಗರ ಗುಲ್ಬರ್ಗಾ ಜಿಲ್ಲೆಯ ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದಾರೆ.

ಗುಲ್ಬರ್ಗಾ ಜಿಲ್ಲೆಯ ಬಹುತೇಕ ಉಪ್ಪಾರ ವೃತ್ತಿ ಕೃಷಿಯೇ ಆಗಿದೆ. ಸಣ್ಣಪುಟ್ಟ ರೈತರು ವ್ಯವಸಾಯದ ಜೊತೆ ಕೃಷಿ ಕಾರ್ಮಿಕರಾಗಿಯೂ ಕೆಲಸ ಮಾಡುತ್ತಿದ್ದಾರೆ.

ಮನೆ ನಿರ್ಮಾಣ ಅಂದರೆ 'ಗೌಂಡಿಕೆಲಸ' ಉಪ್ಪಾರರಿಗೆ ಜನ್ಮಜನ್ಮಾಂತರದಿಂದ ಬಂದಿರುವ ವೃತ್ತಿಯಾಗಿದೆ. ಚಿನ್ನಪ್ಪರೆಡ್ಡಿ ಆಯೋಗದ ಅನುಷ್ಠಾನದಿಂದಾಗಿ ಇವರಿಗೆ ಸರ್ಕಾರಿ ನೌಕರಿ ಅಲ್ಪಸ್ವಲ್ಪಮಟ್ಟಿಗೆ ದೊರೆಯುತ್ತಿದೆ. ಜೊತೆಗೆ ಅನೇಕ ಯುವಕ/ಯುವತಿಯರು ವೃತ್ತಿ ಶಿಕ್ಷಣದತ್ತ ವಾಲುತ್ತಿದ್ದಾರೆ.

ಗುಲ್ಬರ್ಗಾ ಜಿಲ್ಲೆಯ ಉಪ್ಪಾರರ ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲ. ಚಿಂತಾಜನಕ ಸ್ಥಿತಿಯಲ್ಲಿದೆ ಎನ್ನಬೇಕು. ಶೇಕಡ ಒಂದರಷ್ಟು ಜನರನ್ನು ಬಿಟ್ಟರೆ ಉಳಿದ ಉಪ್ಪಾರರ ಜೀವನ ನಿರ್ವಹಣೆ ಅಷ್ಟೊಂದು ಸುಲಭವಾಗಿಲ್ಲ. ತಮ್ಮ ಸಂಸಾರಗಳಿಗೆ ಆಗುವಷ್ಟು ದವಸ ಧಾನ್ಯಗಳನ್ನು ಬೆಳೆಯಲು ಇವರು ಸಮರ್ಥರಾಗಿಲ್ಲ. ವ್ಯಾಪಾರ ವಹಿವಾಟು ಹಾಗೂ ದೊಡ್ಡ ಪ್ರಮಾಣದಲ್ಲಿ ವಾಣಿಜ್ಯೋದ್ಯಮ ಕೈಗೊಂಡವರಲ್ಲ. ಒಟ್ಟಾರೆ ಉಪ್ಪಾರರ ಆರ್ಥಿಕಸ್ಥಿತಿ ಹೇಳಿಕೊಳ್ಳು ವಂತಹುದೇನೂ ಇಲ್ಲ.

ಬಹುತೇಕ ಉಪ್ಪಾರರ ಮಾತೃಭಾಷೆ ಕನ್ನಡ. ಯಾದಗಿರಿ ಮತ್ತು ಸೇಡಂ ತಾಲ್ಲೂಕಿನ

ಉಪ್ಪಾರರು ತೆಲುಗು ಭಾಷೆಯನ್ನು ಬಳಸುತ್ತಾರೆ. ಈ ಪ್ರದೇಶ ಹಿಂದೆ ನಿಜಾಮ ಆಳ್ವಿಕೆಗೆ ಒಳಪಟ್ಟಿತ್ತು. ಆದಕಾರಣ ಹಿರಿಯರಿಗೆಲ್ಲಾ ಉರ್ದು ಭಾಷೆಯ ಅನುಭವವಿದೆ.

ಜಿಲ್ಲೆಯ ಉಪ್ಪಾರರ ಸರಿಯಾದ ಸಾಕ್ಷರತೆಯ ಪ್ರಮಾಣ ಗೊತ್ತಾಗಿಲ್ಲ. ಇತ್ತೀಚಿನ ವರ್ಷಗಳಲ್ಲಿ ಉಪ್ಪಾರರು ಶಿಕ್ಷಣದ ಬಗ್ಗೆ ಒಲವು ತೋರಿಸುತ್ತಿದ್ದಾರೆಂದು ಹೇಳಲಾಗಿದೆ. ಅನೇಕ ಗ್ರಾಮಗಳಲ್ಲಿ ಶಿಕ್ಷಣದ ಬಗ್ಗೆ ಜನ ವಿಶೇಷ ಒಲವು ತೋರಿಸಿದ್ದಾರೆ. ಉದಾಹರಣೆಗೆ ಹೇಳುವುದಾದರೆ ಹಸನಾಪುರದ ಆಲದರ್ತಿ (ಕವಡಿಮಟ್ಟ), ಬೈಚಬಾಳದ ಗೋಗಿ, ಖಾನಾಪುರದ ಹೊರಮನಿ, ಯಾದಗಿರಿಯ ಗಡ್ಡಿಮನಿ ಕಟ್ಟಿಮನಿ, ನಾಲವಾರದ ದೇಸಾಯಿ ಮೊದಲಾದ ಕುಟುಂಬಗಳು ಶಿಕ್ಷಣದಲ್ಲಿ ಪ್ರಗತಿ ಸಾಧಿಸಿವೆ. ಹಾಗೂ ಸಂಪೂರ್ಣ ಸಾಕ್ಷರತಾ ಕುಟುಂಬಗಳಾಗಿವೆ. ಈ ಕುಟುಂಬದಲ್ಲಿನ ಸದಸ್ಯರು ವೈದ್ಯಕೀಯ, ಇಂಜಿನಿಯರ್ ಹಾಗೂ ಸ್ನಾತಕೋತ್ತರ ಪದವಿ ಗಳಿಸಿದವರಾಗಿದ್ದಾರೆ.

ಶ್ರೀ ಮೂಕಾಂಬಿಕಾ ಶಿಕ್ಷಣ ಸಂಸ್ಥೆ ಯಾದಗಿರಿಯಲ್ಲಿದ್ದು ಜಿಲ್ಲೆಯ ಉಪ್ಪಾರ ಸಮಾಜ ನಡೆಸುವ ಏಕೈಕ ಶಿಕ್ಷಣ ಸಂಸ್ಥೆಯಾಗಿದೆ. ಕನ್ನಡ ಮತ್ತು ಇಂಗ್ಲೀಷ್ ಮಾಧ್ಯಮದ ಶಾಲೆಗಳನ್ನು ಈ ಸಂಸ್ಥೆ ನಡೆಸುತ್ತದೆ. ಇದರ ನೇತೃತ್ವವನ್ನು ಡಾ. ವೆಂಕಟೇಶ ಗಡ್ಡಿಮನಿ ಹಾಗೂ ಅವರ ಧರ್ಮಪತ್ನಿ ಗೀತಾ ಗಡ್ಡಿಮನಿ ವಹಿಸಿಕೊಂಡಿದ್ದಾರೆ.

ಸುರಪುರದಲ್ಲಿ ಡಾ. ಸತ್ಯನಾರಾಯಣ ಆಲದರ್ತಿಯವರು 'ಪ್ರಜ್ವಲ ಕ್ಲಿನಿಕ್' ಮತ್ತು ಯಾದಗಿರಿಯಲ್ಲಿ ಡಾ. ವೆಂಕಟೇಶ್ ಗಡ್ಡಿಮನಿಯವರು 'ಶ್ರೀದೇವಿ ಕ್ಲಿನಿಕ್' ಎಂಬ ಆಸ್ಪತ್ರೆಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಚಿತ್ತಾಪುರ ತಾಲ್ಲೂಕಿನ ರಾವೂರು ಗ್ರಾಮದ ಶ್ರೀನಿವಾಸ ಸಗರ ಮತ್ತು ಅವರ ಸಹೋದರರು ಷಹಬಾದ ಕಲ್ಲಿನ ಗಣಿಗಾರಿಕೆ ಮತ್ತು ಪಾಲಿಶಿಂಗ್ ಉದ್ದಿಮೆಗಳನ್ನು ಕಳೆದ ಹಲವಾರು ವರ್ಷಗಳಿಂದ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಉಪ್ಪಾರ ಜನಾಂಗದವರ ಒಡೆತನದಲ್ಲಿರುವ ಏಕೈಕ ಉದ್ದಿಮೆಯಿದು.

ಗುಲ್ಬರ್ಗಾ ಜಿಲ್ಲೆ ಉಪ್ಪಾರ ಸಮುದಾಯದ ನಾಲ್ಕು ಜನ ಪ್ರತಿಭಾವಂತರು ಡಾಕ್ಟರೇಟ್ ಪದವಿ ಗಳಿಸಿದ್ದಾರೆ. ಡಾ. ಸರಸ್ವತಿ ಚಿಮ್ಮಲಗಿ (ಪೂಜೇರ) ಕನ್ನಡದ ಪ್ರಸಿದ್ಧ ಕವಯತ್ರಿ. ರೇಡಿಯೋ ನಾಟಕಕಾರರು. ಅವರ ಅನೇಕ ಕಾರ್ಯಕ್ರಮಗಳು ಗುಲ್ಬರ್ಗಾ ಆಕಾಶವಾಣಿಯಿಂದ ಪ್ರಸಾರವಾಗಿವೆ. ಡಾ. ಭೀಮಣ್ಣ ಆಲದರ್ತಿ, ಡಾ. ಸುರೇಖಾ ಕ್ಷೀರಸಾಗರ ಆಲದರ್ತಿ ಮತ್ತು ಡಾ|| ಬಾಲಪ್ಪ ಕನ್ನಳ್ಳಿ ಅವರುಗಳು ಡಾಕ್ಟರೇಟ್ ಪಡೆದ ಉಪ್ಪಾರ ಸಮಾಜದ ಪ್ರತಿಭಾವಂತರಾಗಿದ್ದಾರೆ. ಖ್ಯಾತ ಸಾಹಿತಿ, ಸಂಶೋಧಕಿ, ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ವಿಜೇತರಾದ ಶ್ರೀಮತಿ ಹನುಮಾಕ್ಷಿಗೋಗಿ ಅವರು ಸುರುಪುರ ತಾಲ್ಲೂಕಿನ ಬೈಚಬಾಳ ಗ್ರಾಮದವರು. ಉಪ್ಪಾರ ಸಮುದಾಯದಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದವರಲ್ಲಿ ಇವರೇ ಮೊದಲಿಗರು.

ಸುರಪುರ ತಾಲ್ಲೂಕಿನ ಹಾಲಿ ಶಾಸಕರಾದ ರಾಜಾವೆಂಕಟಪ್ಪನಾಯಕ ಮತ್ತು ಮಾಜಿ ಲೋಕಸಭಾ ಸದಸ್ಯರಾದ ರಾಜಾ ರಂಗಪ್ಪನಾಯಕ ಅವರು ಈ ಜಿಲ್ಲೆಯಲ್ಲಿ ಉಪ್ಪಾರರು ರಾಜಕೀಯವಾಗಿ ಪ್ರಬುದ್ಧಮಾನಕ್ಕೆ ಬರಲು ಕಾರಣೀಭೂತರಾಗಿದ್ದಾರೆ.

ಅವರ ನಿರಂತರ ಪ್ರೋತ್ಸಾಹದ ಫಲವಾಗಿ ದೇವಿಕೇರಿಯ ತಿಮ್ಮಣ್ಣ ಪೂಜಾರಿ ಜಿಲ್ಲೆಯ ಉಪ್ಪಾರ ಸಮುದಾಯದ ಪ್ರಪ್ರಥಮ ಜಿಲ್ಲಾ ಪಂಚಾಯತ್ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ವೆಂಕಣ್ಣಗೌಡ ಪಾಟೀಲ ಹೆಬ್ಬಾಳ ಅವರು ತಾಲ್ಲೂಕು ಪಂಚಾಯತ್ ಸದಸ್ಯರಾಗಿದ್ದಾರೆ. ಶ್ರೀನಾದಬ್ರಹ್ಮ ಹೆಬ್ಬಾಳಕರ್ ಅವರು ಬೈಚಬಾಳ ಗ್ರಾಮದ ಪಂಚಾಯತ್ ಅಧ್ಯಕ್ಷರಾಗಿರುತ್ತಾರೆ. ಸಂಗಣ್ಣ ಬೈಚಬಾಳ ಇವರು ತಾಲ್ಲೂಕು ಪಂಚಾಯತ್‌ನ ಮಾಜಿ ಉಪಾಧ್ಯಕ್ಷರು.

ರಾವೂರ ಗ್ರಾಮದ ಶ್ರೀನಿವಾಸ ಸಗರ ಇವರು ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷರೂ ಹೌದು. ಇವರು ಚಿತ್ತಾಪುರ ತಾಲ್ಲೂಕಿನ ತಾಲ್ಲೂಕು ಪಂಚಾಯತ್‌ನ ಸದಸ್ಯರಾಗಿ, ಒಂದು ವರ್ಷ ಅದರ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ಶ್ರೀನಿವಾಸ ಸಗರ ಅವರು ಅಭಿವೃದ್ಧಿ ಕೆಲಸಗಳನ್ನು ತುಂಬಾ ನಿಷ್ಠೆಯಿಂದ ಮಾಡಿ ತಾಲ್ಲೂಕಿನಾದ್ಯಂತ ಜನಪ್ರಿಯರಾಗಿದ್ದಾರೆ. ಶ್ರೀಮತಿ ಶಕುಂತಲಾ ರಾಮಣ್ಣ ಬಿಳಿಚಕ್ರ ಇವರು ಯಾದಗಿರಿ ತಾಲ್ಲೂಕು ಪಂಚಾಯತ್‌ನ ಸದಸ್ಯರಾಗಿದ್ದಾರೆ. ಇವರ ಪತಿ ರಾಮಣ್ಣ ಬಿಳಿಚಕ್ರ ಅವರು ಕೊಟಗೇರಿ ಗ್ರಾಮ ಪಂಚಾಯತ್‌ನ ಅಧ್ಯಕ್ಷರಾಗಿದ್ದಾರೆ. ಶ್ರೀಶೈಲ ತಿಮ್ಮಣ್ಣ ಪೂಜಾರಿ ಅವರು ಷಹಪುರ ತಾಲ್ಲೂಕಿನ ತಡಿಬಿಡಿ ಗ್ರಾಮ ಪಂಚಾಯತ್‌ನ ಅಧ್ಯಕ್ಷರಾಗಿದ್ದಾರೆ.

ಜಿಲ್ಲೆಯಲ್ಲಿ ಉಪ್ಪಾರ ಸಮುದಾಯದ ಅಭಿವೃದ್ಧಿಗೆ ಮಾಡಬೇಕಾದ ಕೆಲಸಗಳು ಹಲವಾರು. ಜಿಲ್ಲೆಯ ದಕ್ಷಿಣ ತಾಲ್ಲೂಕುಗಳಲ್ಲಿ ಒಂದೊಂದು ಉಚಿತ ವಿದ್ಯಾರ್ಥಿ ನಿಲಯ ಸ್ಥಾಪನೆಯ ಅಗತ್ಯವಿದೆ. ಶಿಕ್ಷಣದ ಅಭಿವೃದ್ಧಿಯಿಂದ ಮಾತ್ರ ಸಮುದಾಯದ ಏಳಿಗೆ ಸಾಧ್ಯ ಎಂಬುದನ್ನು ಉಪ್ಪಾರ ಸಮುದಾಯ ಅರಿತುಕೊಳ್ಳಬೇಕು. ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಡುವ ನಿರ್ಧಾರವನ್ನು ಉಪ್ಪಾರ ಸಮುದಾಯದ ಮುಖಂಡರು ಮಾಡಬೇಕಾಗಿದೆ. ಬೇರೆ ಜಿಲ್ಲೆಗಳಿಗೆ ಹೋಲಿಸಿದರೆ ಗುಲ್ಬರ್ಗಾ ಜಿಲ್ಲೆಯಲ್ಲಿನ ಉಪ್ಪಾರ ಸಮುದಾಯ ಸಾಕಷ್ಟು ಅರಿವು ಪಡೆದಿದ್ದಾರೆ. ಸಂಘಟನಾ ಕಾರ್ಯ ಸುಲಭವಾಗಿದೆ. ಈ ಜಿಲ್ಲೆಯ ಒಂದಾದರೂ ವಿಧಾನಸಭಾ ಕ್ಷೇತ್ರವನ್ನು ಉಪ್ಪಾರ ಸಮುದಾಯ ತನ್ನದಾಗಿಸಿಕೊಳ್ಳಬಹುದು.

ಜಿಲ್ಲೆಯ ಉಪ್ಪಾರರ ಸಂಘಟನೆಯೊಂದೇ ಇದಕ್ಕೆ ಬೇಕಾದ ಮೂಲದ್ರವ್ಯ. ಇಂತಹ ಸಂಘಟನೆಯ ನೇತೃತ್ವ ದಕ್ಷ ಮತ್ತು ಯೋಗ್ಯ ವ್ಯಕ್ತಿಗಳು ವಹಿಸಿಕೊಳ್ಳಬೇಕು. ರಾಜ್ಯಮಟ್ಟದಲ್ಲಿ ಉಪ್ಪಾರ ಸಂಘ ತನ್ನ ಇರುವಿಕೆಯನ್ನು ಸಮರ್ಥ ರೀತಿಯಲ್ಲಿ ಪ್ರತಿಪಾದಿಸಬೇಕು. ರಾಷ್ಟ್ರೀಯ ಪಕ್ಷಗಳಿಗೆ ಉಪ್ಪಾರರ ರಾಜಕೀಯ ಪ್ರಜ್ಞೆ ಮತ್ತು ಅಸ್ತಿತ್ವ ತೋರಿಸಿಕೊಟ್ಟಾಗ ಮಾತ್ರ ಇಂತಹ ಹಿಂದುಳಿದ ಸಮುದಾಯಕ್ಕೆ ಪ್ರಾತಿನಿಧ್ಯ ದೊರಕಬಹುದು.

**ಮಾಹಿತಿಸಂಗ್ರಹ : ಡಾ. ಸತ್ಯನಾರಾಯಣ ಅಲ್ದರ್ತಿ**

*




# ರಾಯಚೂರು ಜಿಲ್ಲೆ

## ಐತಿಹಾಸಿಕ ಹಿನ್ನೋಟ

ರಾಯಚೂರು ಜಿಲ್ಲೆ ಕರ್ನಾಟಕ ರಾಜ್ಯದ ಉತ್ತರದಲ್ಲಿ ಪೂರ್ವ ಭಾಗಕ್ಕಿದೆ. ಕೃಷ್ಣಾ ಮತ್ತು ತುಂಗಭದ್ರಾ 'ದುವಾಬ್' ಪ್ರದೇಶದಲ್ಲಿರುವ ರಾಯಚೂರು ಹಿಂದಿನಿಂದಲೂ ಪ್ರಸಿದ್ಧವಾದ ಸ್ಥಳ. 'ಎಡದೊರೆ ನಾಡು' ಎಂದು ಐತಿಹಾಸಿಕವಾಗಿ ಖ್ಯಾತವಾದ ಸ್ಥಳವಿದು. ಮೂರನೆಯ ಶತಮಾನದಿಂದಲೇ ಈ ಜಿಲ್ಲೆಗೆ ಕನ್ನಡ ನಾಡಿನಲ್ಲಿ 'ರಾಸನೂರು' ಅಥವಾ 'ರಾಚನೂರು' ಎಂಬ ಹೆಸರಿತ್ತು. ಕಾಕತೀಯರ ಶಾಸನದಲ್ಲಿ 'ರಾಚೂರು' ಎಂಬ ಉಲ್ಲೇಖವಿದೆ. 1997ರ ಜಿಲ್ಲಾ ಪುನರ್ ವಿಂಗಡಣೆಯಿಂದಾಗಿ ಈ ಜಿಲ್ಲೆ ಕೊಪ್ಪಳ, ಗಂಗಾವತಿ, ಕುಷ್ಟಗಿ ಹಾಗೂ ಯಲಬುರ್ಗಾ ತಾಲ್ಲೂಕುಗಳನ್ನು ಕಳೆದುಕೊಂಡು ಈಗ ರಾಯಚೂರು, ದೇವದುರ್ಗ, ಲಿಂಗಸೂಗೂರು, ಸಿಂಧನೂರು ಮತ್ತು ಮಾನ್ವಿ ತಾಲ್ಲೂಕುಗಳನ್ನು ಮಾತ್ರ ಒಳಗೊಂಡಿದೆ.

2001ರ ಜನಗಣತಿಯ ಪ್ರಕಾರ ಜಿಲ್ಲೆಯ ಜನಸಂಖ್ಯೆ 16,48,212. ಅದರಲ್ಲಿ ಪುರುಷರು 8,32,352. ಸ್ತ್ರೀಯರು 8,15,869, ಸಾಕ್ಷರತಾ ಪ್ರಮಾಣ ಶೇ. 49.54. ಅದರಲ್ಲಿ ಪುರುಷರು ಶೇ. 62.02. ಸ್ತ್ರೀಯರು 36.84.

ಕ್ರಿ.ಪೂ. 272 ರಿಂದ 232ರವರೆಗೆ ಆಳಿದ ಮೌರ್ಯ ವಂಶದ ಮಹಾನ್ ಸಾಮ್ರಾಟ್ ಅಶೋಕನ ಶಾಸನ ಲಿಂಗಸೂಗೂರು ತಾಲ್ಲೂಕಿನ ಮಸ್ಕಿಯಲ್ಲಿ ದೊರಕಿದೆ. ಇದೊಂದು ಶಾಂತಿಸಂದೇಶ ವಾಗಿದ್ದು, ಈ ಶಾಸನಕ್ಕೆ ಅಂತರರಾಷ್ಟ್ರೀಯ ಮಹತ್ವವಿದೆ. ಈ

ಶಾಸನದಲ್ಲಿ ಬಿರುದಿನೊಂದಿಗೆ ಅಶೋಕ ಸಾಮ್ರಾಟನ ಹೆಸರೂ ಉಲ್ಲೇಖಗೊಂಡ ಮೊದಲ ಮಹತ್ವದ ಶಾಸನವೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ರಾಯಚೂರಿನ ಭದ್ರಕೋಟೆಯನ್ನು ವಾರಂಗಲ್ಲಿನ ಕಾಕತೀಯರು ಕಟ್ಟಿಸಿದರು.

ಕ್ರಿ.ಶ. 150ರಲ್ಲಿ ಈಜಿಪ್ಟಿನ ಭೂಗೋಳಶಾಸ್ತ್ರಜ್ಞ ಟಾಲಮಿಯು ರಾಯಚೂರು ಪ್ರಾಂತ್ಯದ 'ಮುದಗಲ್'ನ್ನು ತನ್ನ ಗ್ರಂಥದಲ್ಲಿ ಉಲ್ಲೇಖಿಸುತ್ತಾನೆ. ರಾಯಚೂರು ಸಮೀಪದ ಕಲ್ಲೂರು, ಮಸ್ಕಿ ಮೊದಲಾದ ಕಡೆ ಇತಿಹಾಸಪೂರ್ವದ ಅವಶೇಷಗಳನ್ನು ವಿದ್ವಾಂಸರು ಗುರುತಿಸಿದ್ದಾರೆ.

ರಾಯಚೂರು ಜಿಲ್ಲೆಯ ಇತಿಹಾಸ ವೈಶಿಷ್ಟ್ಯ ಪೂರ್ಣವಾದದ್ದು. ಕೃಷ್ಣಾ ಮತ್ತು ತುಂಗಭದ್ರಾ ಎರಡು ಮಹಾನದಿಗಳ ಮಧ್ಯದ ಈ ಪ್ರದೇಶ ಇತಿಹಾಸಪೂರ್ವದ ಪ್ರಾಚೀನ ಮಾನವ ನೆಲೆಯಾಗಿತ್ತು. ಈ ಜಿಲ್ಲೆಯ ಬೆಣಕಲ್ಲು, ಮಸ್ಕಿ, ಕಲ್ಲೂರು, ಕವಿತಾಳ, ಸಿರವಾರ ಮೊದಲಾದ ಸ್ಥಳಗಳಲ್ಲಿ ಇತಿಹಾಸಪೂರ್ವದ ನಾಗರಿಕತೆಯ ಅವಶೇಷಗಳು ಕಂಡುಬಂದಿವೆ. ಇವುಗಳಲ್ಲಿ ಮಸ್ಕಿ ಮುಖ್ಯವಾದದ್ದು. ಇಲ್ಲಿ ಚಿನ್ನದ ಅದುರು ಕಂಡುಬರುವುದರಿಂದ, ಗಣಿ ಕೆಲಸ ನಡೆಯುತ್ತಿದ್ದಿರಬಹುದೆಂದು, ಇದೇ ಮಸ್ಕಿಯ ಪ್ರಾಮುಖ್ಯತೆಗೆ ಕಾರಣವಿರಬಹುದೆಂದು ಹೇಳಲಾಗುತ್ತಿದೆ. ಈ ಜಿಲ್ಲೆಯ ಇತಿಹಾಸಪೂರ್ವ ಪ್ರದೇಶಗಳಲ್ಲಿ ಶಿಲಾಯುಧಗಳು, ಹರಳಿನ ಮಣಿಗಳು, ಮಣ್ಣಿನ ಮಡಕೆಗಳು, ಟೆರ್ರಾಕೋಟ ಮೂರ್ತಿಗಳು, ಲೋಹವನ್ನು ಕರಗಿಸುವ ಕುಲುಮೆಗಳು, ದೊಡ್ಡ ಕಲ್ಲುಗಳ ಸಮಾಧಿಗಳು, ರೇಖಾ ಹಾಗೂ ವರ್ಣಚಿತ್ರಗಳು ಸಿಕ್ಕಿವೆ.

ಈ ಜಿಲ್ಲೆ ಮೌರ್ಯರ ಆಳ್ವಿಕೆಗೆ ಸೇರಿತ್ತು. ಅನಂತರ ಕದಂಬರು, ಬಾದಾಮಿಯ ಚಾಳುಕ್ಯರು, ರಾಷ್ಟ್ರಕೂಟರು, ಶಾತವಾಹನರು, ಕಲ್ಯಾಣಚಾಳುಕ್ಯರು, ಕಳಚೂರಿಗಳು, ದೇವಗಿರಿಯ ಸೇವುಣರು, ಅನಂತರ ಚೋಳ, ಹೊಯ್ಸಳ ಮುಂತಾದ ರಾಜಮನೆತನಗಳು ಈ ಜಿಲ್ಲೆಯನ್ನು ಆಳಿದವು. ಇವರಿಗೆ ಸಂಬಂಧಪಟ್ಟ ಅನೇಕ ಶಾಸನಗಳು ಈ ಜಿಲ್ಲೆಯಲ್ಲಿ ಸಿಕ್ಕಿವೆ. ವಿಜಯನಗರ ಹಾಗೂ ಬಹಮನಿ ರಾಜ್ಯಗಳ ನಡುವೆ ನಡೆದ ಯುದ್ಧಗಳಲ್ಲಿ ಈ ಜಿಲ್ಲೆ ರಣರಂಗವಾಗಿ ಕಷ್ಟನಷ್ಟ ಅನುಭವಿಸಿದ್ದಲ್ಲದೆ ಆಗಾಗ್ಗೆ ಒಬ್ಬರಿಂದ ಒಬ್ಬರ ಕೈಗೆ ಬದಲಾಗುತ್ತ ಹೋಯಿತು. ಕೃಷ್ಣದೇವರಾಯ ಕ್ರಿ.ಶ. 1520ರಲ್ಲಿ ರಾಯಚೂರು ಬಳಿಯ ಯುದ್ಧದಲ್ಲಿ ಇಸ್ಮಾಯಿಲ್ ಆದಿಲ್ ಷಾನನ್ನು ಸೋಲಿಸಿ ಈ ಜಿಲ್ಲೆಯನ್ನು ವಶಪಡಿಸಿಕೊಂಡ. ವಿಜಯನಗರದ ಪತನಾನಂತರ ಗೋಲ್ಕೊಂಡ, ಅಹಮದನಗರ ಮತ್ತು ಬಿಜಾಪುರದ ಸುಲ್ತಾನರು ರಾಯಚೂರನ್ನು ವಶಪಡಿಸಿಕೊಂಡರು. ಅಂದಿನಿಂದ ಈ ಜಿಲ್ಲೆ ಬಿಜಾಪುರದ ಆದಿಲ್‌ಷಾಹೀ ವಂಶದವರಿಗೆ ಸೇರಿತು. ಬಿಜಾಪುರ ಮೊಗಲರ ವಶವಾದಮೇಲೆ ಈ ಜಿಲ್ಲೆ ಹೈದರಾಬಾದ್ ನಿಜಾಮನ ಆಡಳಿತಕ್ಕೆ ಸೇರಿತು. ಸ್ವಲ್ಪಕಾಲ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟು ಮತ್ತೆ ಕ್ರಿ.ಶ. 1858ರಲ್ಲಿ ನಿಜಾಮನ ಆಡಳಿತಕ್ಕೆ ಒಳಪಟ್ಟಿತು. ದೇಶ ಸ್ವಾತಂತ್ರ್ಯ ಪಡೆದಾಗ ನಿಜಾಮ ಭಾರತ ಒಕ್ಕೂಟಕ್ಕೆ ಸೇರಲು ನಿರಾಕರಿಸಿ 27-8-1947ರಲ್ಲಿ ತಾನು ಸ್ವತಂತ್ರನೆಂದು ಸಾರಿಕೊಂಡ. ಹೋರಾಟದನಂತರ 1948ರ

ಸೆಪ್ಟೆಂಬರ್ 18ರಂದು ಈ ಪ್ರದೇಶ ನಿಜಾಮನ ಆಳ್ವಿಕೆಯಿಂದ ವಿಮೋಚನೆ ಹೊಂದಿತು. 1956ರ ಏಕೀಕರಣದಿಂದಾಗಿ ವಿಶಾಲ ಮೈಸೂರಿನ ಭಾಗವಾಯಿತು.

ರಾಯಚೂರು ಜಿಲ್ಲೆಯು ಅಪಾರ ಖನಿಜ ಸಂಪತ್ತಿನಿಂದ ಕೂಡಿದೆ. 1905ರಲ್ಲಿ ಪ್ರಾರಂಭವಾದ ಹಟ್ಟಿಯ ಚಿನ್ನದ ಗಣಿ ದೇಶದಲ್ಲಿಯೇ ಚಿನ್ನದ ಉತ್ಪಾದನೆಗೆ ಪ್ರಸಿದ್ಧಿ ಹೊಂದಿದೆ. ಹಟ್ಟಿ, ಮೊಂತ್ಹಳ್ಳಿ, ಮಸ್ಕಿ, ತೊಪ್ಪಲದೊಡ್ಡಿ, ಬೂರಗಿ ಮುಂತಾದ ಕಡೆಗಳಲ್ಲಿ ಪುರಾತನ ಚಿನ್ನದ ಗಣಿಗಳು ಕಂಡುಬರುತ್ತವೆ. ಇದರೊಂದಿಗೆ ಈ ಜಿಲ್ಲೆಯಲ್ಲಿ ಕಬ್ಬಿಣ, ತಾಮ್ರ, ಸೀಸದ ಅದುರು, ಫೆಲ್‌ಸ್ಪಾರ್, ಕಾವಿಮಣ್ಣು, ಅಭ್ರಕ, ಸ್ಫಟಿಕ ಶಿಲೆ, ಕಟ್ಟಡಗಳಿಗೆ ಉಪಯೋಗಿಸುವ ಶಿಲೆಗಳು ಮತ್ತು ಜಂಬುಮಣ್ಣು ಸಿಗುತ್ತವೆ. ಜಿಲ್ಲೆಯಲ್ಲಿ ಸಿಗುವ ಕಟ್ಟಡ ಮತ್ತು ಸ್ಫಟಿಕ ಶಿಲೆಗಳು ಶೃಂಗಾರಕ್ಕೆ ಉಪಯೋಗಿಸುವಂಥ ಬೆಲೆಬಾಳುವ ಶಿಲೆಗಳಾಗಿವೆ. ಇಲ್ಲಿನ ಬೆಣಚುಕಲ್ಲುಗಳು ಗಾಜು ತಯಾರಿಕೆಗೆ ಉತ್ತಮವಾದವು. ಇಷ್ಟೆಲ್ಲಾ ಖನಿಜ ಸಂಪತ್ತಿದ್ದರೂ ಈ ಜಿಲ್ಲೆ ಕೈಗಾರಿಕೆಯಲ್ಲಿ ಮುಂದುವರಿಯದಿರುವುದು ಈ ಪ್ರದೇಶದ ಜನರ ದೌರ್ಭಾಗ್ಯವೇ ಸರಿ.

ಆದಾಗ್ಯೂ ತುಂಗಭದ್ರಾ ಜಲಾಶಯದ ನಿರ್ಮಾಣ, ಜಲವಿದ್ಯುತ್ ಉತ್ಪಾದನೆ ಮತ್ತು ಥರ್ಮಲ್ ಪವರ್ ಪ್ರೊಜೆಕ್ಟ್ ಈ ಜಿಲ್ಲೆಯ ಹೊಸ ಕೈಗಾರಿಕೆಗಳ ನಿರ್ಮಾಣಕ್ಕೆ, ಬೆಳವಣಿಗೆಗೆ ಸ್ವಲ್ಪಮಟ್ಟಿಗೆ ತಿರುವನ್ನು ಕೊಟ್ಟಿವೆ. ವಿದ್ಯುತ್ತಿನ ಸರಬರಾಜಿನಿಂದ ಹಳೆಯ ಕೈಗಾರಿಕೆಗಳಲ್ಲಿ ಕೆಲವು ವಿಸ್ತರಿಸಿದರೆ, ಹತ್ತಿನೂಲು, ಎಣ್ಣೆ ಮತ್ತು ಸಕ್ಕರೆ ಕಾರ್ಖಾನೆಗಳು ಹೊಸದಾಗಿ ಪ್ರಾರಂಭವಾದವು. ಹಟ್ಟಿ ಚಿನ್ನದ ಗಣಿ ಅಭಿವೃದ್ಧಿಯಾಗುವುದರ ಜೊತೆಗೆ ಇನ್ನೂ ಕೆಲವು ಚಿನ್ನದ ನಿಕ್ಷೇಪಗಳ ಬಗ್ಗೆ ಸಂಶೋಧನೆ ಇತ್ಯಾದಿ ನಡೆಯುವಂತಾಗಿದೆ. ಜಿಲ್ಲೆಯಲ್ಲಿ ಸಹಕಾರಿ ನೂಲು ಕಾರ್ಖಾನೆ, ಹತ್ತಿ ಪರಿಷ್ಕೃತ ಕಾರ್ಖಾನೆ, ಆರ್.ಸಿ.ಸಿ. ಪೈಪುಗಳನ್ನು ತಯಾರಿಸುವ ಕಾರ್ಖಾನೆ ಹಾಗು ಅನೇಕ ಸಣ್ಣ ಪುಟ್ಟ ಎಣ್ಣೆ ಕಾರ್ಖಾನೆಗಳು ಬಂದಿವೆ. 1945ರಲ್ಲಿ ರಾಯಚೂರಿನಲ್ಲಿ ಎಣ್ಣೆ ಮತ್ತು ಹಿಂಡಿ ತಯಾರಿಸುವ ಘಟಕ ಪ್ರಾರಂಭವಾಗಿದೆ. ಹತ್ತಿಯಿಂದ ಬೀಜವನ್ನು ಬೇರ್ಪಡಿಸುವ ಕೈಗಾರಿಕಾ ಘಟಕ ಕೂಡ ಪ್ರಾರಂಭವಾಗಿದೆ. ಅನೇಕ ಅಕ್ಕಿ ಗಿರಿಣಿಗಳು ಈ ಜಿಲ್ಲೆಯಲ್ಲಿವೆ.

ಈ ಜಿಲ್ಲೆಯನ್ನು ಸ್ಥೂಲವಾಗಿ ಕಪ್ಪು ಜೇಡಿಮಣ್ಣಿನ ಮೈದಾನ ಪ್ರದೇಶವೆಂದು, ಅಲ್ಲಲ್ಲಿ ಹರಡಿದಂತಿರುವ ಗುಡ್ಡಗಳಿಂದಲೂ, ಕೆಂಪುಮಣ್ಣಿನ ಭೂಮಿಯಿಂದಲೂ ಪೊದೆಯಂಥ ಮರಗಿಡಗಳ ಕಾಡುಗಳಿಂದಲೂ ಕೂಡಿದ ಪ್ರದೇಶವೆಂದು ವಿಂಗಡಿಸಬಹುದು. ಸಿಂಧನೂರಿಗೆ ಆಗ್ನೇಯದಲ್ಲಿ 26ಕಿ.ಮೀ. ದೂರದಲ್ಲಿರುವ ಮೊರಿಗುಡ್ಡ, ದುರ್ಗದ ಗುಡ್ಡ, ರಾಯಚೂರಿನ ದಕ್ಷಿಣದಲ್ಲಿ ಸುಮಾರು ಆರು ಕಿ.ಮೀ. ದೂರದಲ್ಲಿರುವ ಮಲ್ಲಬಾದ ಶಿಖರ, ಮಾನ್ವಿ ಹಾಗು ಮೊಸರಕಲ್ಲು ಶಿಖರಗಳು ಈ ಜಿಲ್ಲೆಯ ಕೆಲವು ಮುಖ್ಯ ಬೆಟ್ಟಗಳು. ಇಲ್ಲಿನ ಬೆಟ್ಟಗಳೆಲ್ಲ ಪ್ರಾಕೃತಿಕವಾಗಿ ರೂಪಾಂತರ ಹೊಂದಿದ ಪ್ರಾಚೀನ ಶಿಲಾಯುಗಕ್ಕೆ ಸೇರಿದವು. ಬಯಲಿನಲ್ಲಿ ಕಾಣಸಿಗುವ ಸಸ್ಯರಾಶಿ ಬಿಟ್ಟರೆ ಬೇರಾವ ಅರಣ್ಯ ಪ್ರದೇಶವೂ ಕಾಣದೊರೆಯುವುದಿಲ್ಲ.

ಜಿಲ್ಲೆಯಲ್ಲಿ ಕನಿಷ್ಠ ಪ್ರಮಾಣದ ಅರಣ್ಯ ಪ್ರದೇಶವಿದೆ. ಜಿಲ್ಲೆಯಲ್ಲಿ ವಾರ್ಷಿಕ ಸರಾಸರಿ ಮಳೆ 600 ಮಿ.ಮೀ. ಜಿಲ್ಲೆಯಲ್ಲಿ ಯಾವಾಗಲೂ ಶುಷ್ಕ ವಾತಾರಣವಿರುತ್ತದೆ. ಫೆಬ್ರವರಿಯಿಂದ ಮೇ ತಿಂಗಳವರೆಗೆ ಅಸಾಧಾರಣ ಧಗೆ ಈ ಪ್ರದೇಶದಲ್ಲಿ ಇರುತ್ತದೆ.

ತುಂಗಭದ್ರಾ ಜಲಾಶಯದಿಂದ ಈ ಜಿಲ್ಲೆಯ ಸಿಂಧನೂರು, ಮಾನ್ವಿ ಹಾಗು ರಾಯಚೂರು ತಾಲ್ಲೂಕುಗಳ ಮುಕ್ಕಾಲು ಪಾಲು ಭೂಮಿಗೆ ನೀರು ದೊರೆಯುತ್ತದೆ. ರಾಯಚೂರು ಜಿಲ್ಲೆಯಲ್ಲಿ ಸುಮಾರು 900 ಕೆರೆಗಳಿವೆ. ಮಾನ್ವಿ ಮತ್ತು ದೇವದುರ್ಗ ತಾಲ್ಲೂಕುಗಳಲ್ಲಿ ಕೆರೆಗಳು ಹೆಚ್ಚಾಗಿವೆ. ಕೃಷ್ಣಾ ಮೇಲ್ದಂಡೆಯ ಬಲಗಾಲುವೆಯಿಂದ ಈ ಜಿಲ್ಲೆಯ ಇನ್ನೂ ಕೆಲವು ಪ್ರದೇಶಕ್ಕೆ ನೀರು ಒದಗಿಸುವ ಪ್ರಯತ್ನ ನಡೆಯುತ್ತಿದೆ. ಈ ಜಿಲ್ಲೆಯಲ್ಲಿ ಮುಖ್ಯವಾಗಿ ಭತ್ತ, ಜೋಳ, ಗೋಧಿ, ಸೂರ್ಯಕಾಂತಿ, ನೆಲಗಡಲೆ, ಹತ್ತಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಮೊದಲು ಈ ಪ್ರದೇಶ ಹತ್ತಿ ಬೆಳೆಗೆ ಪ್ರಸಿದ್ಧವಾಗಿತ್ತು. ತುಂಗಭದ್ರಾ ಜಲಾಶಯದ ನೀರು ಬಂದನಂತರ ಹತ್ತಿ ಹಾಗು ಬಿಳಿಜೋಳದ ಉತ್ಪಾದನೆ ಕಡಿಮೆ ಆಗಿದೆ. ಫಲವತ್ತಾದ ಕಪ್ಪುಮಣ್ಣಿನ ಭೂಮಿಯೇ ಜಿಲ್ಲೆಯಲ್ಲಿ ಹೆಚ್ಚಾಗಿರುವುದರಿಂದ ಕೃಷಿ ಉತ್ಪನ್ನ ಚೆನ್ನಾಗಿಯೇ ಬರುತ್ತದೆ.

ರಾಯಚೂರಿನ ಶಾಖೋತ್ಪನ್ನ ವಿದ್ಯುತ್ ಕೇಂದ್ರ ಇಡೀ ರಾಜ್ಯಕ್ಕೆ ಬೆಳಕು ಕೊಡುವ ಕೇಂದ್ರ. ಇಲ್ಲಿನ ಉಷ್ಣ ವಿದ್ಯುದ್ಗಾರವನ್ನು 1979-80ರಲ್ಲಿ ರಾಯಚೂರಿನ ಶಕ್ತಿನಗರ ಪ್ರದೇಶದಲ್ಲಿ ಸ್ಥಾಪಿಸಲಾಗಿದೆ. ಶಾಖೋತ್ಪನ್ನ ಸ್ಥಾವರಗಳಲ್ಲಿ ಕಲ್ಲಿದ್ದಲನ್ನು ಉರಿಸಿ ಬಾಯ್ಲರುಗಳಲ್ಲಿ ನೀರು ಕಾಯಿಸಿ ಉಗಿಯನ್ನು ಅಧಿಕ ಒತ್ತಡದಲ್ಲಿ ಟರ್ಬನ್‌ಗಳಿಗೆ ಕಳಿಸಲಾಗುತ್ತದೆ. ಈ ರೀತಿಯ ಅಧಿಕ ಒತ್ತಡದಿಂದ ಟರ್ಬನ್ ಚಕ್ರಗಳು ತಿರುಗಿ ವಿದ್ಯುತ್ ಉತ್ಪಾದನೆಯಾಗುತ್ತದೆ. ಈಗ ಇಲ್ಲಿ 1300 ಮೆ. ವ್ಯಾ. ವಿದ್ಯುತ್ ಉತ್ಪಾದನೆಯಾಗುತ್ತದೆ. ಆರು ಘಟಕಗಳು ವಿದ್ಯುತ್ ಉತ್ಪಾದನೆ ಮಾಡುತ್ತಿದ್ದು, ಏಳನೆಯ ಘಟಕ ಇಷ್ಟರಲ್ಲಿಯೇ ಕಾರ್ಯಾರಂಭ ಮಾಡಲಿದೆ. ಎಂಟನೆಯ ಘಟಕ ಸ್ಥಾಪಿಸಲು ಸರಕಾರ ಅನುಮತಿ ನೀಡಿದೆ. ಕರ್ನಾಟಕದಲ್ಲಿ ಇದು ಏಕೈಕ ಶಾಖೋತ್ಪನ್ನ ಸ್ಥಾವರವಾಗಿದೆ.

ಕನ್ನಡದ ಕಣ್ವರೆಂದೇ ಪ್ರಖ್ಯಾತರಾದ 'ಶ್ರೀ'ಯವರು ರಾಯಚೂರನ್ನು 'ಕನ್ನಡದ ಕಾಶಿ' ಎಂದು ಕರೆದಿದ್ದಾರೆ. ಇದಕ್ಕೆ ಕಾರಣ ಹನ್ನೆರಡನೆಯ ಶತಮಾನದ ಶಿವಶರಣರು ಹಾಗೂ ಹದಿನಾರನೆಯ ಶತಮಾನದ ಹರಿದಾಸರು ನಡೆದಾಡಿದ ಪವಿತ್ರ ಸ್ಥಳವಿದು. ವಚನ ಹಾಗೂ ದಾಸ ಸಾಹಿತ್ಯಗಳೆರಡರ ತವರೂರು ರಾಯಚೂರು ಜಿಲ್ಲೆ. ರಾಯಚೂರು ಜಿಲ್ಲೆಯ ಪ್ರಮುಖ ಸಾಹಿತ್ಯಪುರುಷರೆಂದರೆ ಶಂಕರ ದಾಸಿಮಯ್ಯ. ಈತ ಲಿಂಗಸೂಗೂರಿನ ನವಿಲೆ ಗ್ರಾಮದವನು. ಡಕ್ಕೆಯ ಮಾರಯ್ಯ, ಆಯ್ದಕ್ಕಿಯ ಮಾರಯ್ಯ ಮತ್ತು ಈತನ ಪತ್ನಿ ಆಯ್ದಕ್ಕಿಯ ಲಕ್ಕಮ್ಮ ಇದೇ ತಾಲೂಕಿನ ಅಮರೇಶ್ವರದವರು. ಬಿಬ್ಬ ಬಾಚಯ್ಯ ದೇವದುರ್ಗ ತಾಲ್ಲೂಕಿನ ಗಬ್ಬೂರಿನವನು. ಭಕ್ತಿ ಸುಧಾರಸ ಗ್ರಂಥ ಬರೆದ ಘನಮಠಚಾರ್ಯನು ಇದೇ ಜಿಲ್ಲೆಯವನು. ಹಮ್‌ದರ್ದ್ ಪ್ರೌಢಶಾಲೆಯನ್ನು ಸ್ಥಾಪಿಸಿದ, ಅನೇಕ ಗ್ರಂಥಗಳನ್ನು ಬರೆದ ಪಂ. ತಾರಾನಾಥರು ಈ

ಜಿಲ್ಲೆಯವರೇ. ಮುಕ್ತಾಯಕ್ಕ, ಎಳವೇಶ್ವರದ ಚಿಕ್ಕಯ್ಯ, ಕಲ್ಲೂರಿನ ಲಿಂಗಬಡೆಯ, ಕಡಲೂರು ಬಸವ, ಲಿಂಗಶರಣ, ದೇವದುರ್ಗ ತಾಲ್ಲೂಕಿನ ಹೂಗಲ್ಲು ಕರಮಪ್ಪಯ್ಯ, ಕುಮಾರವಿಜಯ ಗ್ರಂಥ ಕರ್ತೃ ಸಂಗಪ್ರಭು, ನೇರಲಕೇರಿ ಬಸವಲಿಂಗಶರಣ, ಘನಮಠದ ನಾಗಭೂಷಣ ಶಿವಯೋಗಿ, ದೇವದುರ್ಗದ ಚೆನ್ನಮಲ್ಲ (1890) ಹೆರೂರು ವಿರುಪಣ್ಣಾ (1855), ಗಗ್ಗೇಕಲ್ಲದ ಸಂಗಬಾವಿ ಹರಿದಾಸ ಪರಂಪರೆಯಲ್ಲಿ ವಿಜಯದಾಸರು (1687), ಗೋಪಾಲದಾಸರು, ಜಗನ್ನಾಥದಾಸರು, ಪ್ರಾಣೇಶದಾಸರು ಹಾಗು ಮೋಹನದಾಸರು ಈ ಜಿಲ್ಲೆಯವರು.

ಆಧುನಿಕ ಯುಗದಲ್ಲಿ ರಾಯಚೂರು ಜಿಲ್ಲೆಯಿಂದ ಗೋರೆಬಾಳ ಹನುಮಂತರಾಯರು, ಸುಪ್ರಸಿದ್ಧ ಪುರಾಣಕಾರರಾದ ಕಲ್ಲಿನಾಥಶಾಸ್ತ್ರಿ, ಡಿ.ಕೆ. ಭೀಮಸೇನರಾವ್, ಮಾನ್ವಿ ನರಸಿಂಗರಾವ್, ಪಂ. ನಾಗಭೂಷಣಶಾಸ್ತ್ರಿ, ಪಂ. ಸೋಗವೀರಶರ್ಮಾಜಿ, ಪಂ. ವೀರೇಶಶಾಸ್ತ್ರಿ, ಶಾಂತರಸ, ಡಾ|| ಸಿದ್ಧಯ್ಯ ಪುರಾಣಿಕ, ಇಟ್ಟಗಿ ರಾಘವೇಂದ್ರರಾವ್, ಬೆಟ್ಟದೂರ ಚನ್ನಬಸಪ್ಪ, ಎಂ.ಎಸ್. ಮಹಾಂತಯ್ಯ, ರಾಜಶೇಖರ ನೀರಮಾನ್ವಿ, ಹೆಚ್.ಎನ್. ಮುಕ್ತಾಯಕ್ಕ, ಶೈಲಜಾಚಡಚಣ ಮುಂತಾದ ಸಾಹಿತ್ಯ ಪುರುಷರನ್ನು ನೆನೆಯಬಹುದು.

ಸಂಗೀತ ಕ್ಷೇತ್ರದಲ್ಲಿ ಕೂಡ ರಾಯಚೂರು ಜಿಲ್ಲೆ ಸಾಕಷ್ಟು ಖ್ಯಾತಿ ಗಳಿಸಿದೆ. ಸಿದ್ದರಾಮ ಜಂಬಲದಿನ್ನಿ ಅಖಿಲ ಭಾರತ ಖ್ಯಾತಿಗಳಿಸಿದ್ದಾರೆ. ಶಹನಾಯ್ ವಾದಕರಾದ ವಡವಟ್ಟಿ ನರಸಿಂಹಲು ಅಂತರರಾಷ್ಟ್ರೀಯ ಖ್ಯಾತಿ ಗಳಿಸಿದ್ದಾರೆ. ಮಾಣಿಕರಾವ್ ರಾಯಚೂರಕರ್, ರಾಷ್ಟ್ರಮಟ್ಟದಲ್ಲಿ ಖ್ಯಾತಿ ಗಳಿಸಿದ ಇನ್ನೊಬ್ಬ ಸಂಗೀತಗಾರ. ರಾಜ್ಯದ ಹಿರಿಯ ಕೆ.ಎ.ಎಸ್. ಅಧಿಕಾರಿ ಮುದ್ದುಮೋಹನ ರಾಜ್ಯದ ಪ್ರಸಿದ್ಧ ಸಂಗೀತಗಾರರಲ್ಲಿ ಒಬ್ಬರು. ಇವರು ಬಸವರಾಜ ರಾಜಗುರುಗಳ ಶಿಷ್ಯರು. ಚಿತ್ರಕಲೆಯಲ್ಲಿ ಮಾನ್ವಿ ತಾಲ್ಲೂಕಿನ ಬೆಟ್ಟದೂರಿನ ಶಂಕರಗೌಡ ರಾಷ್ಟ್ರೀಯ ಖ್ಯಾತಿ ಪಡೆದಿದ್ದಾರೆ.

ಹೀಗೆ ರಾಯಚೂರು ಜಿಲ್ಲೆ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗೆ ಅಪಾರ ಕೊಡುಗೆ ಸಲ್ಲಿಸಿದೆ. ಹಿಂದೆ ಜಿಲ್ಲೆಯ ದೇವಾಲಯಗಳು, ವೀರಶೈವ ಮಠಗಳು ಸಾಹಿತ್ಯ ಸಂಸ್ಕೃತಿಯ ಕೇಂದ್ರಗಳಾಗಿದ್ದವು.

ಈ ಜಿಲ್ಲೆಯ ಧಾರ್ಮಿಕ, ಐತಿಹಾಸಿಕ ಮತ್ತು ಪ್ರಾಚೀನ ಸ್ಥಳಗಳಲ್ಲಿ ರಾಯಚೂರು, ಮುದಗಲ್, ಗಬ್ಬೂರು, ಯರಡೋಣ, ದೇವರಭೂಪೂರ, ಜಲದುರ್ಗ, ಮಸ್ಕಿ, ಮುದುವಾಳ, ಮಾನ್ವಿ ತಾಲ್ಲೂಕಿನ ಕೋಟಿಕಲ್ಲು, ಕೌತಾಳ, ಕಲ್ಲೂರು, ದೇವರಸುಗೂರು, ಕಡ್ಲೂರು, ರಾಮಗಡ್ಡೆ, ಗಾಣದಾಳ, ಸೋಮ್ಲಾಪುರ, ರೌದಿಕುಂದ, ನಾರದಗಡ್ಡೆ ಮುಂತಾದವುಗಳು ಪ್ರಮುಖವಾದವುಗಳು.

ರಾಯಚೂರು ಜಿಲ್ಲೆ ಅನೇಕ ಹಿರಿಯ ನಾಯಕರನ್ನು ರಾಜ್ಯಕ್ಕೆ ಕೊಟ್ಟಿದೆ. ಅವರಲ್ಲಿ ಪ್ರಮುಖರೆಂದರೆ ಜನಾರ್ದನರಾವ್ ದೇಸಾಯಿ, ಜಗನ್ನಾಥರಾವ್ ಚಂಡರಕಿ, ರಾಜಾ ವೆಂಕಟಪ್ಪ ನಾಯಕ್, ಪಂಪನಗೌಡ ಅತ್ನೂರು, ಬಿ.ವಿ. ದೇಸಾಯಿ, ಬಸವರಾಜೇಶ್ವರಿ, ವೆಂಕಟೇಶ

ನಾಯಕ್, ರಂಗಪ್ಪ ನಾಯಕ್, ಬಸವರಾಜ ಪಾಟೀಲ ಅನ್ವರಿ, ಮಹಮ್ಮದ್ ಸಿದ್ದಿಕಿ, ಅಂಬಣ್ಣ ನಾಯಕ್, ಸುಧೀಂದ್ರರಾವ್ ಕಸ್ಬೆ, ಬಸನಗೌಡ ಪಾಟೀಲ, ಎಂ. ನಾಗಪ್ಪ, ಬಿ. ಶಿವಣ್ಣ, ಕೆ. ಕೃಷ್ಣಮೂರ್ತಿ, ಅಮರೇಗೌಡ, ಹಂಪನಗೌಡ ಬಾದರ್ಲಿ, ಕೆ. ವಿರೂಪಾಕ್ಷಪ್ಪ, ನಾರಾಯಣಪ್ಪ, ಬಸನಗೌಡ ಪಾಟೀಲ, ಸಿ.ಎಸ್. ಪಾಟೀಲ, ಎಂ.ಎಸ್. ಪಾಟೀಲ, ಅಮರೇಗೌಡ ಬಯ್ಯಾಪುರ, ಅಮರೇಶ ನಾಯಕ್, ಎಸ್.ಎಸ್. ಬೋಸರಾಜ್, ಬಿ.ಟಿ. ಲಲಿತಾ ನಾಯಕ್ ಮುಂತಾದವರು.

ಕ್ರಿಶ್ಚಿಯನ್ ಮಿಷನರಿಗಳು ವಿದ್ಯಾಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿದ್ದಾರೆ. ಕ್ರಿ.ಶ. 1887ರಲ್ಲಿ ಪ್ರಾರಂಭವಾದ ಸೇಂಟ್ ಮೇರಿಸ್ ಕಾನ್ವೆಂಟ್ ಇಲ್ಲಿನ ಅತಿ ಪುರಾತನ ಶಾಲೆ. ಪಂ. ತಾರಾನಾಥರು ಪ್ರಾರಂಭಿಸಿದ ಹಮದರ್ದ್ ಪ್ರೌಢಶಾಲೆ ಈ ಭಾಗದ ಸಹಸ್ರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದೆ. ಲಕ್ಷ್ಮೀವೆಂಕಟೇಶ ದೇಸಾಯಿ ಕಾಲೇಜು, ಬಿ.ಆರ್.ಬಿ. ವಾಣಿಜ್ಯ ಕಾಲೇಜು, ಕಾನೂನು ಕಾಲೇಜು, ಸರಕಾರಿ ಪಾಲಿಟೆಕ್ನಿಕ್, ವಿ.ಆರ್. ಕಾಲೇಜ್ ಆಫ್ ಇಂಡಿಯನ್ ಮೆಡಿಸಿನ್, ಕೃಷಿ ವಿದ್ಯಾಲಯ ಹಾಗೂ ಸ್ನಾತಕೋತ್ತರ ಕೇಂದ್ರ ಈ ಭಾಗದ ವಿದ್ಯಾರ್ಥಿಗಳಿಗೆ ಉತ್ತಮ ಗುಣಮಟ್ಟದ ವಿದ್ಯಾದಾನ ಮಾಡುತ್ತಿವೆ.

## ಉಪ್ಪಾರ ಸಮಾಜ

ರಾಯಚೂರು ಜಿಲ್ಲೆಯಲ್ಲಿ ಉಪ್ಪಾರ ಜನಾಂಗದ ಸಂಖ್ಯೆ ಸಾಕಷ್ಟು ಪ್ರಮಾಣದಲ್ಲಿದೆ. ರಾಯಚೂರು ತಾಲ್ಲೂಕಿನ ಸಗಮಕುಂಟಾ, ಸರ್ಜಾಪುರ, ರಾಯಚೂರು, ಯರಮರಸ್, ಬುಳ್ಳಾಪುರ, ಗದಾರ, ದೇವನಪಲ್ಲಿ, ಕಡಂದೊಡ್ಡಿ, ವಡ್ಡೆಪಲ್ಲಿ, ಲಿಂಗಸಬಾನದೊಡ್ಡಿ, ದಿನ್ನಿ, ಕೊರತಕುಂಡಾ, ಐದಾಪುರ, ಬಾಪುರ, ರಾಕೋದಿ, ರಾಜಲಬಂಡಾ, ಚಂದ್ರಬಂಡಾ, ಉಡಕೂರ, ಅಸ್ಕಿಹಾಳ, ಪಲ್ಕಂದೊಡ್ಡಿ, ಕುಡ್ಲೂರು, ಪೋತಗಲ್, ಡೊಂಗರಾಮಪುರ, ಯಾಪಲದಿನ್ನಿ, ಬಾಯಿದೊಡ್ಡಿ, ಮಂಚಾಲಪುರ, ವಡಲಂದೊಡ್ಡಿ, ಜಂಬಲದಿನ್ನಿ, ಗ್ರಾಮಗಳನ್ನೊಳಗೊಡಂತೆ ತಾಲ್ಲೂಕಿನಲ್ಲಿ ಸುಮಾರು 2,800 ಕುಟುಂಬಗಳಿದ್ದು 15,500 ಉಪ್ಪಾರ ಜನಸಂಖ್ಯೆ ಇದೆಯೆಂದು ಅಂದಾಜು ಮಾಡಲಾಗಿದೆ.

ಮಾನ್ವಿ, ಸಿರವಾರ, ಕವಿತಾಳ, ಹೀರಾ, ಬದ್ದಿನ್ನಿ, ನೀರಮಾನ್ವಿ, ಹಿರೇಕೊಟ್ನಕಲ್, ಬಾಗಲವಾಡ, ಬಲ್ಲಟಗಿ, ನವಲ್‌ಕಲ್, ಮಾಡಗಿರಿ, ಜಾಲಾಪುರ, ಕಣದಿನ್ನಿ, ಅತ್ನೂರು, ಪಾಮಸಕಲ್ಲೂರು, ಚಿಂತರಕೆ, ಅರೋಲಿ, ನಿಲೋಗಲ್-ಗಣೇಕಲ್, ಕುರಡಿ, ಕಲ್ಲೂರು, ರಾಜೊಳ್ಳಿ, ಜೋಕುರು, ತಿಮ್ಮಾಪುರ, ಗೋರ್‌ಕಲ್, ಮಮದಾಪುರ, ರಾಜಲಬಂಡಾ, ವಡವಟ್ಟಿ, ಸರ್ಕಲ್‌ಗುಡ್ಡಾ ಮುಂತಾದ ಗ್ರಾಮಗಳನ್ನೊಳಗೊಂಡಂತೆ ಮಾನ್ವಿ ತಾಲ್ಲೂಕಿನಲ್ಲಿ ಸುಮಾರು 1,200 ಉಪ್ಪಾರ ಕುಟುಂಬಗಳಿದ್ದು, 6,750 ಜನಸಂಖ್ಯೆ ಇದೆಯೆಂದು ಸಮೀಕ್ಷೆ ಮಾಡಲಾಗಿದೆ.

ದೇವದುರ್ಗ ತಾಲ್ಲೂಕಿನಲ್ಲಿ ದೇವದುರ್ಗ, ಗಬ್ಬೂರು, ಜಾಲಹಳ್ಳಿ, ತೆಗ್ಗಿಹಾಳ,

ಶಾಮಾಂಗಲ್, ಜಾಗಟಕಲ್ ಬುದ್ದಿನ್ನಿ, ಅರಕೇರಾ, ಜಾಗಟಕಲ್, ಮಾನಸಕಲ್, ಜಂಬಲದಿನ್ನಿ, ಸಮುದ್ರ, ಗಲಗ, ಗಾಣದಾಳ, ಕಾನಾಪುರ, ಗುಂಡಗುರ್ತಿ, ಖೋತದೊಡ್ಡಿ, ಹೀರೇಬೋದೂರು, ಖಣಜಲಿ, ಸುಣಕೇಶ್ವರ, ಮಸರಕಲ್, ಹಲ್ಕ್ಯಾಪುರ, ಮುಂಡಕಲ್, ಬೊಮ್ಮನಾಳ, ಹೀರೇರಾಯಕುಂಟೆ, ಕೊಳೂರು, ಸುಣ್ಣದಕಲ್ಲು ಮುಂತಾದ ಗ್ರಾಮಗಳನ್ನೊಳಗೊಂಡಂತೆ ಈ ತಾಲ್ಲೂಕಿನಲ್ಲಿ ಸುಮಾರು 1,250 ಉಪ್ಪಾರ ಕುಟುಂಬಗಳಿದ್ದು 7,500 ಜನಸಂಖ್ಯೆ ಇದೆ ಎಂದು ಹೇಳಲಾಗಿದೆ.

ಲಿಂಗಸೂಗೂರು ತಾಲ್ಲೂಕಿನ ಲಿಂಗಸೂಗೂರು ಕಸಬಾ, ಭಾವಣಿ, ಸರ್ಜಾಪುರ, ಕುಪ್ಪಿಗುಡ್ಡ, ಗುಡದನಾಳ, ಹಟ್ಟಿ, ಮೇದನಾಪುರ, ನಿಲೋಗಲ್, ಆನ್ವರಿ, ಚಿಕ್ಕಉಪ್ಪೇರಿ, ನರಕಲದಿನ್ನಿ, ಗೋರೆಬಾಳು, ಸುಂಕಾಪುರ, ಮುದಗಲ್, ಮಸ್ಕಿ, ಆಮ್ದಿಹಾಳ, ಚಿಕ್ಕ ಆದಾಪುರ, ತನಮನಕಲ್, ಕೋಟಾ, ತೋರಲಬೆಂಚಿ, ಗೆಜ್ಜಲಗಟ್ಟ, ಚಿಕ್ಕ ಹೆಸರೂರು, ಒಂದಲಿ, ಉಪ್ಪಾರನಂದಿಹಾಳ, ಬೆಂಡೋಣಿ, ಭೂಪೂರ, ಜಂತಾಪುರ, ಉಳಿಮೇಶ್ವರ, ತಲೆಖಾನ್, ಕರಡಕಲ್, ಸಾನಬಾಳ, ಮಟ್ಟೂರು, ಬುದ್ದಿನ್ನಿ, ಬನ್ನಿಗೋಳ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 2,900 ಕುಟುಂಬಗಳಿದ್ದು, 15,768 ಉಪ್ಪಾರ ಜನಸಂಖ್ಯೆ ಇದೆ ಎಂದು ಹೇಳಲಾಗಿದೆ.

ಸಿಂಧನೂರು ತಾಲ್ಲೂಕಿನಲ್ಲಿ ಸಿಂಧನೂರು, ಸಾಲಗುಂದ, ತುರುವಿಹಾಳ, ರೌಡಗುಂದಾ, ಗೊಬ್ಬರಕಲ್ಲು, ಮುಳ್ಳೂರು, ಗೋನಾಳ, ಚಿಕ್ಕನಾಳ, ಸಂಕನೂರು, ಬಳಗಾನೂರು, ಜಾಲವಾಡಗಿ, ದಿಡ್ಡಗಿ, ಬೆಳಗೊರಕೆ, ಗಿನಿವಾರ, ಜವಳಗೇರಾ, ಬುದ್ದಿನ್ನಿ, ಕೋಳಬಾಳ, ಹಿರೇಕೂಡ್ಲಗಿ ಬೆಳ್ಳಗಿನೂರ ಮುಂತಾದ ಗ್ರಾಮಗಳನ್ನೊಳಗೊಂಡಂತೆ ಈ ತಾಲ್ಲೂಕಿನಲ್ಲಿ ಸುಮಾರು 3,500 ಉಪ್ಪಾರ ಕುಟುಂಬಗಳಿದ್ದು, 18,350 ಜನಸಂಖ್ಯೆ ಇದೆಯೆಂದು ಹೇಳಲಾಗಿದೆ.

ಹೀಗೆ ಜಿಲ್ಲೆಯಲ್ಲಿ ಸುಮಾರು 11,650ಕ್ಕೂ ಹೆಚ್ಚು ಉಪ್ಪಾರ ಕುಟುಂಬಗಳಿದ್ದು, 63,900ಕ್ಕೂ ಹೆಚ್ಚಿನ ಜನಸಂಖ್ಯೆ ಇದೆ ಎಂದು ಸಮೀಕ್ಷೆಯೊಂದು ಹೇಳುತ್ತದೆ.

ರಾಯಚೂರು ಜಿಲ್ಲೆಯಲ್ಲಿನ ಉಪ್ಪಾರರನ್ನು ಗದಾರ, ಜೋಕೂರ, ಸಾಗರ, ಮಾನವಟ್ಟಿ, ನೇಗಿ ಎಂದು ವಿವಿಧ ಉಪನಾಮಗಳಿಂದ ಕರೆಯಲಾಗುತ್ತಿದೆ. ಕನ್ನಡ, ತೆಲುಗು ಹಾಗೂ ಉರ್ದು ಭಾಷೆಗಳನ್ನು ಈ ಜಿಲ್ಲೆಯ ಉಪ್ಪಾರರು ಬಳಸುತ್ತಾರೆ. ಆದರೆ ಹೆಚ್ಚಾಗಿ ಮನೆಯ ಮಾತು ಕನ್ನಡವೇ ಆಗಿರುತ್ತದೆ.

ಉಪ್ಪಾರರ ಆರ್ಥಿಕ ಸ್ಥಿತಿ ಮಧ್ಯಮ ಸ್ಥಿತಿಯಲ್ಲಿದೆ. ರಾಯಚೂರು, ಸಿಂಧನೂರು, ಮಾನ್ವಿ ತಾಲ್ಲೂಕುಗಳಲ್ಲಿ ನೀರಾವರಿ ಸೌಲಭ್ಯವಿದೆ. ಈ ತಾಲ್ಲೂಕುಗಳಲ್ಲಿ ಹಲವು ಉಪ್ಪಾರ ಕುಟುಂಬಗಳು ಭೂಮಿಯನ್ನು ಹೊಂದಿದ್ದು, ಸಮಾಧಾನಕರ ರೀತಿಯಲ್ಲಿ ಬದುಕುತ್ತಿದ್ದಾರೆ. ಜೊತೆಗೆ ಅಷ್ಟೇ ಪ್ರಮಾಣದಲ್ಲಿ ಕೃಷಿ ಕಾರ್ಮಿಕರು ಇದ್ದಾರೆಂದು ಹೇಳಬಹುದು. ಜಿಲ್ಲೆಯಲ್ಲಿ ಉಪ್ಪಾರರು ಉಪ್ಪು ಮಾರುವ ಉದ್ಯೋಗ ಕೈಗೊಂಡಿದ್ದಾರೆ. ಇದು ವಂಶಪಾರಂಪರ್ಯವಾಗಿ

ಬಂದ ವೃತ್ತಿ. ಉಪ್ಪಾರರು ಅನೇಕ ಕಡೆಗಳಲ್ಲಿ ಹೂ ಮಾರುವ ವೃತ್ತಿಯನ್ನು ಕೈಗೊಂಡಿದ್ದಾರೆ. ಕಟ್ಟಡ ನಿರ್ಮಾಣವು ಅವರ ಉದ್ಯೋಗಗಳಲ್ಲಿ ಒಂದಾಗಿದೆ. ವಿಶೇಷವಾಗಿ ರಾಯಚೂರು ಜಿಲ್ಲೆಯಲ್ಲಿ ಎರಡು ಕುಟುಂಬಗಳು ಚಿನ್ನ, ಬೆಳ್ಳಿ ವ್ಯಾಪಾರ ವೃತ್ತಿಯನ್ನು ಕೈಗೊಂಡಿರುವುದನ್ನು ಗಮನಿಸಬಹುದು. ಜಿಲ್ಲೆಯಲ್ಲಿ ಶೇ. 35 ರಿಂದ 40ರಷ್ಟು ಉಪ್ಪಾರರು ಹೊಟ್ಟೆ ಬಟ್ಟೆಗೆ ಸಾಕಾಗುವಷ್ಟು ಸ್ಥಿತಿಯಲ್ಲಿದ್ದರೆ, ಉಳಿದ ಶೇಕಡ 60ಕ್ಕಿಂತ ಉಪ್ಪಾರರು ಬಡತನ ರೇಖೆಗಿಂತ ಕೆಳಗಿದ್ದಾರೆ.

ರಾಜ್ಯದ ಸಾಕ್ಷರತಾ ಪ್ರಮಾಣ ಶೇ. 67.04ನ್ನು ಉಪ್ಪಾರ ಜನಾಂಗದ ಸಾಕ್ಷರತಾ ಪ್ರಮಾಣ ಶೇ. 35ಕ್ಕೆ ಹೋಲಿಸಿದಾಗ, ಈ ಜನಾಂಗ ಸಾಕ್ಷರತೆಯಲ್ಲಿ ಎಷ್ಟು ಹಿಂದೆಬಿದ್ದಿದೆ ಎಂದು ಸ್ಪಷ್ಟವಾಗುತ್ತದೆ. ಅಲ್ಲದೆ ರಾಯಚೂರು ಜಿಲ್ಲೆಯಲ್ಲಿ ಮಹಿಳಾ ಸಾಕ್ಷರತೆ ಪ್ರಮಾಣ ಶೇಕಡ 20 ರಿಂದ 30 ರಷ್ಟಿದ್ದು, ಉಪ್ಪಾರ ಮಹಿಳೆಯರ ಸಾಕ್ಷರತಾ ಪ್ರಮಾಣ ಜಿಲ್ಲೆಯ ಸಾಕ್ಷರತಾ ಪ್ರಮಾಣದ ಅರ್ಧಕ್ಕಿಂತ ಕಡಿಮೆ ಇರುವುದು ಶೋಚನೀಯ ಸಂಗತಿ. ಸಂಪೂರ್ಣ ಸಾಕ್ಷರತೆ ಸಾಧಿಸಲು ಈ ಲೆಕ್ಕಾಚಾರದಲ್ಲಿ ಶತಮಾನಗಳೇ ಬೇಕಾಗಬಹುದು.

ಜಿಲ್ಲೆಯಲ್ಲಿರುವ ಉಪ್ಪಾರ ಜನಾಂಗದ ಮುಖಂಡರುಗಳನ್ನು ಕೆಳಗಿನಂತೆ ಗುರುತಿಸಬಹುದು. ವಕೀಲರು, ಇಂಜಿನಿಯರ್‌ಗಳು, ವೈದ್ಯರು, ವ್ಯಾಪಾರಸ್ಥರು, ಕೃಷಿಕರು, ರಾಜಕಾರಣಿಗಳು ಹಾಗೂ ಇತರೆ ಕ್ಷೇತ್ರದಲ್ಲಿರುವ ಪ್ರತಿಭಾವಂತರು. ರಾಯಚೂರಿನ ಶ್ರೀಕಾಂತ, ವೈ. ವರದರಾಜ, ಲಿಂಗಸೂಗೂರಿನ ನಾಗಪ್ಪ, ಲಿಂಗಪ್ಪ ಸುರಪುರ, ಸಿಂಧನೂರಿನ ಹನುಮಂತಪ್ಪ ಗುಡಿ, ಸಣ್ಣ ಹನಮಂತಪ್ಪ ಗುಡಿ, ಶಶಿಕಾಂತ, ತಿಮ್ಮಣ್ಣ ಗೋಪಾಲಪ್ಪ ಮುನಸಿ ಮುಂತಾದವರು ವಕೀಲರು. ಶ್ರೀಕಾಂತ ಹಾಗು ವರದರಾಜ ಅವರು ರಾಯಚೂರು ಜಿಲ್ಲಾ ವಕೀಲರ ಸಂಘದ ಅಧ್ಯಕ್ಷರಾಗಿದ್ದರು. ಹನಮಂತಪ್ಪ ಗುಡಿ ಸಿಂಧನೂರ ಪುರಸಭೆಯ ಸದಸ್ಯರು ಮತ್ತು ಸೇವಾ ಸಹಕಾರಿ ಸಂಘದ ಅಧ್ಯಕ್ಷರಾಗಿದ್ದರು. ಸಿಂಧನೂರು ತಾಲ್ಲೂಕಿನ ಹಿಂದುಳಿದ ವರ್ಗದ ಒಕ್ಕೂಟದ ಕಾರ್ಯದರ್ಶಿಯಾಗಿದ್ದಾರೆ. ಸಣ್ಣ ಹನುಮಂತಪ್ಪ ಗುಡಿ ಅವರು ಸಿ.ಪಿ.ಎಮ್.ನ ತಾಲ್ಲೂಕು ಕಾರ್ಯಕರ್ತರು.

ಲಿಂಗಸೂಗೂರಿನ ಚಂದ್ರಶೇಖರ ಪರಮಣ್ಣ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ಬೆಳಗಾಂನಲ್ಲಿ, ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ಆಗಿದ್ದಾರೆ. ಬಸವರಾಜ ಪರಮಣ್ಣ, ಸಿವಿಲ್ ಇಂಜಿನಿಯರ್ ಮತ್ತು ಕಂಟ್ರ್ಯಾಕ್ಟರ್, ಗಿರಿಮಲ್ಲಪ್ಪ ಕಟ್ಟಿಮನಿ, ರಾಯಚೂರು ಜಿಲ್ಲಾಪಂಚಾಯ್ತಿನಲ್ಲಿ ಸಹಾಯಕ ನಿರ್ವಾಹಕ ಇಂಜಿನಿಯರ್ ಆಗಿದ್ದಾರೆ. ಡಿ. ಮಹಾದೇವಪ್ಪ ರಾಯಚೂರಿನಲ್ಲಿ ದೂರವಾಣಿ ಇಲಾಖೆಯಲ್ಲಿ ಜೂನಿಯರ್ ಇಂಜಿನಿಯರ್ ಆಗಿದ್ದಾರೆ. ಸಿಂಧನೂರಿನ ಬುದ್ದಿನ್ನಿ ಅಯ್ಯನಗೌಡರ ಮಗ ವೀರಣಗೌಡ ಮಾಲೀಪಾಟೀಲ, ಸಾಫ್ಟ್‌ವೇರ್ ಇಂಜಿನಿಯರ್ ಆಗಿದ್ದು, ಅಮೆರಿಕೆಯ ಸಂಯುಕ್ತ ಸಂಸ್ಥಾನದಲ್ಲಿದ್ದಾರೆ. ಅವರ ಇನ್ನೊಬ್ಬ ಮಗ ಕೂಡ ಸಾಫ್ಟ್‌ವೇರ್ ಇಂಜಿನಿಯರ್ ಆಗಿ ಬೆಂಗಳೂರಿನ ಕಂಪನಿಯೊಂದರಲ್ಲಿ ಕೆಲಸದಲ್ಲಿದ್ದಾರೆ.

ಶ್ರೀನಿವಾಸ ಗೋವಿಂದಪ್ಪ ಬೆಂಗಳೂರಿನಲ್ಲಿ ಕಂಪನಿಯೊಂದರಲ್ಲಿ ಎಲೆಕ್ಟ್ರಾನಿಕ್ ಇಂಜಿನಿಯರಾಗಿ ಕಾರ್ಯನಿರ್ವಹಿಸುತ್ತಿದ್ದಾನೆ. ಇಂಜನಿಯರ್ ಗೋವಿಂದಪ್ಪ ಅವರ ಇನ್ನೊಬ್ಬ ಮಗ ಡಾ॥ ರಘು ರೇಡಿಯಾಲಜಿಯಲ್ಲಿ ಸ್ನಾತಕೋತ್ತರ ಪದವಿ ವ್ಯಾಸಂಗ ಮಾಡುತ್ತಿದ್ದಾರೆ. ಲಿಂಗಸೂಗೂರಿನ ವಿಶ್ವನಾಥ ಅವರು ಸುರಪುರದ ಜಿಲ್ಲಾಪಂಚಾಯ್ತಿ ಕಚೇರಿಯಲ್ಲಿ ಸಹಾಯಕ ಇಂಜಿನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಚಂದ್ರಪ್ಪ, ಕರ್ನಾಟಕ ವಿದ್ಯುತ್ ನಿಗಮದ ಶಕ್ತಿನಗರದಲ್ಲಿ ಅಸಿಸ್ಟೆಂಟ್ ಇಂಜಿನಿಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಜೋಕುರ ವೀರಣ್ಣ, ಗಧಾರ ಬೆಟ್ಟಪ್ಪ, ಗಧಾರ ಬಸವರಾಜ, ಬಿ. ಗಿರಿಯಣ್ಣ, ಗಧಾರ ಗೋಪಾಲ, ಲಿಂಗಸೂಗೂರಿನ ಎಂ. ಪರಮಣ್ಣ ಮುಂತಾದವರು ಪ್ರಮುಖ ವ್ಯಾಪಾರಸ್ಥರು.

ಸಿಂಧನೂರಿನ ಕೆ. ಮರಿಯಪ್ಪ, ಲಕ್ಷ್ಮಣ ಕಟ್ಟೀಮನಿ, ಶ್ರೀನಿವಾಸಗುಡಿ, ರೌಡಗುಂದಾ ಸೂರ್ಯಪ್ಪ, ಗೋನಾಳ ಗ್ರಾಮದ ಶ್ರೀನಿವಾಸ, ಚಿಕ್ಕನಾಳ ಗ್ರಾಮದ ಮಲ್ಲಿಕಾರ್ಜುನ ದಳಪತಿ, ದೇವರಗುಡಿಯ ನರಸಪ್ಪ, ಬಳಗಾನೂರು ಹುಲಿಗೆಪ್ಪ, ಯಂಕಪ್ಪ, ಬೆಳ್ಳಿಗನೂರ ಕರಿಯಪ್ಪ, ಅಮರಪ್ಪ, ಬುದ್ದಿನ್ನಿ ಅಯ್ಯನಗೌಡ ಪಾಟೀಲ, ಲೋಕೇಶ, ಜಾಲವಾಡಗಿ ರಾಮಣ್ಣ, ಜವಳಾಗೇರಾ ಮರಿಯಪ್ಪ, ಲಿಂಗಸೂಗೂರು ಎಂ. ಪರಮಣ್ಣ ಸಿಂಧನೂರಿನ ಸಾಗರ ಸಿದ್ದಪ್ಪ ಮುಂತಾದವರು ಪ್ರಮುಖ ಬೇಸಾಯಗಾರರು.

ಕೆಳಗೆ ನಮೂದಿಸಿದ ಮಹನೀಯರು ರಾಜಕೀಯದಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆಂದು ಹೇಳಬಹುದು. ಸಿಂಧನೂರಿನ ಸಿದ್ಧಪ್ಪಸಾಗರ, ಇವರು ತಾಲ್ಲೂಕಿನ ರೈತ ಸಂಘದ ಮುಖಂಡರು. 1985ರಲ್ಲಿ ಸಿಂಧನೂರು ವಿಧಾನಸಭಾ ಕ್ಷೇತ್ರದಿಂದ ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಅದೇ ಊರಿನ ಕೆ. ಮರಿಯಪ್ಪ ಅವರು ಸತತವಾಗಿ ಮೂರನೆಯ ಬಾರಿಗೆ ನಗರಸಭೆಗೆ ಆಯ್ಕೆಯಾಗಿದ್ದು, ಪ್ರಸ್ತುತ ಸಿಂಧನೂರ ನಗರಸಭೆಯ ಅಧ್ಯಕ್ಷರಾಗಿದ್ದಾರೆ. ರಾಯಚೂರಿನ ವೈ.ವಿ. ಶಶಿಕಲಾ ಅವರು ರಾಯಚೂರು ಜಿಲ್ಲಾಪಂಚಾಯ್ತಿ ಸದಸ್ಯೆಯಾಗಿದ್ದರು. ಬಿ. ವಿಜಯಲಕ್ಷ್ಮಿ ರಾಯಚೂರು ನಗರ ಬಿಜೆಪಿ ಮಹಿಳಾ ಮೋರ್ಚಾದ ಅಧ್ಯಕ್ಷಿಣಿ, ನರಸರೆಡ್ಡಿ ಗಧಾರ ಗ್ರಾಮಪಂಚಾಯ್ತಿಯ ಸದಸ್ಯರು ಹಾಗು ಜಾತ್ಯತೀತ ಜನತಾದಳದ ಕಲ್ಮಲ ಬ್ಲಾಕ್ ಅಧ್ಯಕ್ಷರು, ಪಾಗುಂಟೆಪ್ಪ ಗಣಮಾರು ಪಂಚಾಯ್ತಿ ಸದಸ್ಯರು, ಎಸ್. ನಾರಾಯಣಪ್ಪ, ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕ್ ಡೈರೆಕ್ಟರ್ ಆಗಿದ್ದರು. ಪದ್ದಮ್ಮ ಚಂದ್ರಬಂಡಾ ಗ್ರಾಮಪಂಚಾಯ್ತಿಗೆ ಸ್ಪರ್ಧಿಸಿದ್ದರು. ಹಾಲ್ವಿ ಶ್ರೀನಿವಾಸ ರಾಯಚೂರು ನಗರದ ಯುವಮೋರ್ಚಾದ ಕಾರ್ಯದರ್ಶಿಯಾಗಿದ್ದಾರೆ. ವೈ. ವರದರಾಜ, ಶ್ರೀಕಾಂತ ಹಾಗೂ ಲಿಂಗಪ್ಪ ಸುರಪುರ, ವಕೀಲರು ಸಕ್ರಿಯ ರಾಜಕಾರಣದಲ್ಲಿದ್ದಾರ. ಲಿಂಗಪ್ಪ ಸುರಪುರ ಕುಷ್ಟಗಿ ಕ್ಷೇತ್ರದಿಂದ ರಾಜ್ಯ ವಿಧಾನಸಭೆಗೆ ಸ್ಪರ್ಧಿಸಿದ್ದರು. ಸಿಂಧನೂರು ತಾಲ್ಲೂಕು ಬುದ್ದಿನ್ನಿಯ ಅಯ್ಯನಗೌಡ ಮಾಲಿಪಾಟೀಲ, ತಾಲ್ಲೂಕುಪಂಚಾಯ್ತಿ ಅಧ್ಯಕ್ಷರಾಗಿದ್ದರು. ಸಿಂಧನೂರಿನ ಅಯ್ಯಪ್ಪ ಹೂಗಿಬಂಡಿ

ಪುರಸಭೆಯ ನಾಮ ನಿರ್ದೇಶಕರು ರಂಗಪ್ಪ, ಅಂಬಾಮಠದ ಸದಸ್ಯರು ಹಾಗೂ ನಗರದ ಬಿಜೆಪಿ ಕಾರ್ಯದರ್ಶಿ, ಲಕ್ಷ್ಮಣ್ ಕಟ್ಟಿಮನಿ ಸಿಂಧನೂರು ತಾಲ್ಲೂಕು ಉಪ್ಪಾರ ಸಮಾಜದ ಅಧ್ಯಕ್ಷರು ಹಾಗೂ ಅಕ್ಕಿ ಗಿರಣಿ ಮಾಲೀಕರು. ಪ್ರಕಾಶಗುಡಿ ನಗರ ಜನತಾದಳದ ಅಧ್ಯಕ್ಷರು. ಸಾಲಗುಂದದ ಭೀಮಶೇನಪ್ಪ ಮುನಸಿ ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕಿನ ಡೈರೆಕ್ಟರ್ ಆಗಿದ್ದರು. ಅದೇ ಗ್ರಾಮದ ವೀರಮ್ಮ ಕಟ್ಟಿಮನಿ ಗ್ರಾಮಪಂಚಾಯ್ತಿ ಉಪಾಧ್ಯಕ್ಷಿಣಿಯಾಗಿದ್ದರು. ಅದೇ ಗ್ರಾಮದ ಲಕ್ಷ್ಮೀದೇವಿ ಗ್ರಾಮಪಂಚಾಯ್ತಿ ಸದಸ್ಯೆ. ರೌಡಗುಂದಾ ಗ್ರಾಮದ ಬಾಳಪ್ಪ ಚಿತ್ರಗಾರ ಗ್ರಾಮಪಂಚಾಯ್ತಿ ಸದಸ್ಯರಾಗಿದ್ದರು. ಗೋನಾಳ ಗ್ರಾಮದ ಹನುಮಂತಪ್ಪ ಲ್ಯಾಂಡ್ ಡೆವಲೆಪ್‌ಮೆಂಟ್ ಬ್ಯಾಂಕಿನ ಡೈರೆಕ್ಟರ್ ಆಗಿದ್ದರು. ಅದೇ ಗ್ರಾಮದ ಕೆ. ಶೇಷಪ್ಪ ಗ್ರಾಮ ಪಂಚಾಯ್ತಿ ಅಧ್ಯಕ್ಷರು, ಬುದ್ದಿನ್ನಿಯ ಯಮನಪ್ಪಗೌಡ ವ್ಯವಸಾಯ ಸೇವಾ ಸಹಕಾರಿ ಸಂಘದ ಅಧ್ಯಕ್ಷರಾಗಿದ್ದರು. ಗಿನಿವಾರ ಗ್ರಾಮದ ಲಿಂಗಮ್ಮ ಗ್ರಾಮಪಂಚಾಯ್ತಿ ಸದಸ್ಯರು.

ರಾಯಚೂರಿನ ವೆಂಕಟಗಿರಿಯಪ್ಪ, ಮುನ್ನೂರುವಾಡಿ ಸರಕಾರಿ ಶಾಲಾ ಅಭಿವೃದ್ಧಿ ಮಂಡಳಿಯ ಅಧ್ಯಕ್ಷರು ಹಾಗೂ ರಾಯಚೂರು ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷರು. ಕುಡ್ಲೂರು ಶ್ರೀಧರಪ್ಪ, ಮೆ॥ ರೇಣುಕಾ ಟ್ರೇಡಿಂಗ್ ಕಂಪನಿ ಮತ್ತು ಶಿಗ್ಮಾ ಎಕ್ಸ್‌ಪ್ರೆಸ್ ಕೋರಿಯರ್ ಸರ್ವೀಸ್ ಮಾಲೀಕರು. ಬಿ. ಗೋವಿಂದಪ್ಪ, ಮಾಲೀಕರು ಸಾಗರ್ ಕ್ಯಾನ್‌ವಸ್ಸಿಂಗ್, ಬಿ. ವೆಂಕೋಬಾ, ಮಾಲೀಕರು ಸುವರ್ಣಾ ಟ್ರೇಡರ್ಸ್ ಹಾಗೂ ಸಗಟು ಅಕ್ಕಿ ವ್ಯಾಪಾರಿಗಳು, ಆರ್. ಆಂಜನೇಯಪ್ಪ, ಮಾಲೀಕರು, ಚಂದ್ರಮೌಳೇಶ್ವರ ಟ್ರಾನ್ಸ್‌ಪೋರ್ಟ್ ಕಂ, ಜಿ. ಬಸವರಾಜ, ಮಾಲೀಕರು ಗುರು ಟ್ರಾನ್ಸ್‌ಪೋರ್ಟ್ ಕಂ., ಬಡೇಸಾಬ ಉಪ್ಪಾರ ನಗರಸಭೆಯ ಕಂಟ್ರಾಕ್ಟರ್, ಜೋಕುರ ವೆಂಕಟಗಿರಿ, ಜೋಕುರ ಶ್ರೀನಿವಾಸ, ಚಿನ್ನ, ಬೆಳ್ಳಿ ವರ್ತಕರು, ಗಧಾರ ಆಂಜನೇಯ ಮತ್ತು ಕೋ, ಜೋಕುರ ಶ್ರೀನಿವಾಸ ಮತ್ತು ಕೋ, ಗಧಾರ ಹನಮಂತರಾಯ, ಸತ್ಯನಾರಾಯಣ ಮತ್ತು ಕೋ, ಜೋಕುರ ವೀರಣ್ಣ ಮತ್ತು ಕೋ, ಮೆ॥ ರಾಘವೇಂದ್ರಸ್ವಾಮಿ ಟ್ರೇಡಿಂಗ್ ಕಂ. ರಾಯಚೂರಿನ ರಾಜೇಂದ್ರಗುಂಜನಲ್ಲಿ ಪ್ರಮುಖ ವರ್ತಕರು. ಎಸ್.ಎಲ್. ವೀರೇಶ ಪಿ.ಡಬ್ಲ್ಯು.ಡಿ. ಕಂಟ್ರಾಕ್ಟರ್.

ಡಿ. ಸಿದ್ದಪ್ಪ, ಎಂ. ವೀರಣ್ಣ, ಭಾರತ ಸಂಚಾರ ನಿಗಮ ನಿಯಮಿತದಲ್ಲಿ ಅಸಿಸ್ಟೆಂಟ್ ಡಿವಿಜನಲ್ ಇಂಜಿನಿಯರ್‌ಗಳು, ಡಿ. ಮಹಾದೇವಪ್ಪ ಜೆ.ಟಿ.ಓ. ಸೂಳೆಭಾವಿ ಹಿರಿಯ ಐಓಎ, ಭೀಮಪ್ಪ ಸಿಂಧನೂರಿನಲ್ಲಿ ಜೆ.ಟಿ.ಓ. ಶ್ರೀನಿವಾಸ ಆಹಾರ ಇಲಾಖೆಯಲ್ಲಿ ಇನ್ಸ್‌ಪೆಕ್ಟರ್, ಪಾಗುಂಟೆಪ್ಪ ಮತ್ತು ತಾಯಪ್ಪ ಆರ್.ಟಿ.ಓ. ಕಚೇರಿಯಲ್ಲಿ ಗುಮಾಸ್ತರು, ರಾಮಣ್ಣ ಕೆ.ಪಿ.ಟಿ.ಸಿ.ಎಲ್. ನಲ್ಲಿ ಎ.ಓ., ಹನುಮೇಶ ಸರಕಾರಿ ಪಾಲಿಟೆಕ್ನಿಕ್‌ನಲ್ಲಿ ಉಪನ್ಯಾಸಕ, ದೇವೇಂದ್ರಪ್ಪ ಗುಮಾಸ್ತ, ರೇಣುಕಾಗಿರಿ ನಗರ ಸೇವಕಿ. ಗದಾರ ಮುನಿಯಪ್ಪ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ನೌಕರರು.

ಸಿಂಧನೂರಿನ ನಾರಾಯಣಪ್ಪ ಹೊಸಮನಿ, ಜನಾರ್ದನ ನ್ಯಾಯಬೆಲೆ ಅಂಗಡಿ,

ಚಂದ್ರಪ್ಪ ಬೊಮ್ಮನಾಳ, ಹನಮಂತಪ್ಪ ತೆಲುಗರು, ತುರುವಿಹಾಳ ಕೆ. ಮರಿಯಪ್ಪ, ಶ್ರೀನಿವಾಸ, ಮುಳ್ಳೂರು ಗ್ರಾಮದ ಲಿಂಗಣ್ಣ ಬಡಿಗೇರ, ಭೀಮಣ್ಣ, ಯೋಗಪ್ಪ, ಹಿರೇಕೂಡ್ಲಗಿ ಗ್ರಾಮದ ಮಲ್ಲಪ್ಪ, ಕೋಳಬಾಳ ಗ್ರಾಮದ ಯಂಕೋಬಾ ಹನಮಂತಪ್ಪ, ತಿಮ್ಮಣ್ಣ, ದೇವರಗುಡಿಯ ಭೀಮಣ್ಣ, ಸಂಕನೂರು ಗ್ರಾಮದ ತಿರುಪತೆಪ್ಪ, ಬುದ್ದಿನ್ನಿ ಗ್ರಾಮದ ರಂಗನಾಥ, ಧರ್ಮಣ್ಣ, ವೆಂಕಟೇಶ, ಜಾಲವಾಡಗಿ ಗ್ರಾಮದ ಗಂಗಪ್ಪ, ತಿಪ್ಪಣ್ಣ, ದಿಡ್ಡಗಿ ಗ್ರಾಮದ ನಾರಾಯಣಪ್ಪ, ಬೆಳಗೊರಕಿ ಗ್ರಾಮದ ಯಂಕಪ್ಪ ನ್ಯಾಯಬೆಲೆ ಅಂಗಡಿ. ಗಿನಿವಾರ ಗ್ರಾಮದ ದುರ್ಗಪ್ಪ, ಹನುಮಂತಪ್ಪ, ಗುಡಗಲ್ಲದಿನ್ನಿ ಗ್ರಾಮದ ತಿಮ್ಮಣ್ಣ, ಸಾಗರ ಕ್ಯಾಂಪಿನ ಕಿನ್ನೂರೇಶ, ಯಂಕೋಬಾ, ತಿಮ್ಮಣ್ಣ ಮುಂತಾದವರು ಉಪ್ಪಾರ ಸಮಾಜದ ಸಕ್ರಿಯ ಕಾರ್ಯಕರ್ತರು ಹಾಗೂ ಹಿತಚಿಂತಕರು.

ಲಿಂಗಸೂಗೂರು ತಾಲ್ಲೂಕಿನ ಮಲ್ಲಪ್ಪ ಸುರಪುರ, ಹಟ್ಟಿಯ ಭೀಮೇಶಪ್ಪ, ದೇವಣ್ಣ ಕುಪ್ಪೆಗುಡ್ಡ, ಬಸವರಾಜ ಪರಮಣ್ಣ, ಕುಪ್ಪಣ್ಣ ಮಿಣಜಗಿ ಸೀನಿಯರ್ ಅಡಿಟರ್, ಮಾಧವ ನೆಲಗಿ, ಬಾಲಪ್ಪ ಮಾನಮಟ್ಟಿ, ಹುಲಿಗೆಮ್ಮ ಕೋನಾಳ ಅಧ್ಯಕ್ಷರು ಗ್ರಾಮಪಂಚಾಯ್ತಿ ಸರ್ಜಾಪುರ, ಸ್ವಾಮಿ ಹಟ್ಟಿ ಎ.ಪಿ.ಎಂ.ಸಿ. ಡೈರೆಕ್ಟರ್, ಹಟ್ಟಿ ತಿಮ್ಮಣ್ಣ, ಮಾನಪ್ಪ ಬೈಚಬಾಳ, ಕುಬೇರಪ್ಪ ಹಟ್ಟಿ, ಗುಂಡಪ್ಪ ಮೆಕಾನಿಕ್, ತಿಮ್ಮಯ್ಯ, ಕನಕಪ್ಪತಳ್ಳಿ, ಸಿದ್ರಾಮಪ್ಪ ಸಾಲೋಡಗಿ, ಅಮರಪ್ಪ ಸಾಲೋಡಗಿ, ತಿರುಪತಿ ಹೊಸಳ್ಳಿ, ಲಿಂಗಪ್ಪ ದೇವಕೇರಿ, ಚಿದಾನಂದಗೌಡ ಗುಡದನಾಳ, ಬಸಣ್ಣ ದ್ಯಾಪುರ ಗುಡದನಾಳ, ಹಟ್ಟಿ ಅಮರ ಗುಂಡಪ್ಪ, ಕನಕಪ್ಪ ಬೈಚಬಾಳ ಮುಂತಾದವರು ಉಪ್ಪಾರ ಸಮಾಜದ ಹಿತಚಿಂತಕರು. ದೇವದುರ್ಗದ ಪಿಡಬ್ಲ್ಯುಡಿಯಲ್ಲಿ ಕೆಲಸ ಮಾಡುತ್ತಿರುವ ಕಿರಿಯ ಅಭಿಯಂತರ ಗೋವಿಂದಪ್ಪ ಅವರು ಸಮಾಜದ ಅಭಿಮಾನಿಗಳು ಹಾಗೂ ಹಿತಚಿಂತಕರು.

ರಾಯಚೂರು ಜಿಲ್ಲೆಯಲ್ಲಿ ಉಪ್ಪಾರ ಸಂಘ ಮೊದಲಿನಿಂದಲೂ ಇದೆ. ವೈ. ವರದರಾಜ ಅವರು ಅಧ್ಯಕ್ಷರಾಗಿದ್ದರು. ಈಗ ವೆಂಕಟಗಿರಿಯಪ್ಪ ಅವರು ಅಧ್ಯಕ್ಷರಾಗಿದ್ದಾರೆ. ಉಪ್ಪಾರರ ಹಿತಚಿಂತನೆ ಕುರಿತು ಸಂಘ ಯೋಚಿಸುವುದುಂಟು. ಗ್ರಾಮಗಳಲ್ಲಿರುವ ಉಪ್ಪಾರರು ತಮ್ಮ ಸಮುದಾಯ ಸಂಘಟಿತವಾಗಬೇಕೆಂದು ಬಯಸುತ್ತಾರೆ. ಡಿ.ಎಸ್. ರಾಮಪ್ಪ ಅವರು ರಾಜ್ಯ ಸಂಘದ ಅಧ್ಯಕ್ಷರಾಗಿದ್ದಾಗ ಈ ಭಾಗಕ್ಕೆ ಮೇಲಿಂದಮೇಲೆ ಬಂದು ಸಮಾಜದಲ್ಲಿ ಜಾಗೃತಿ ಕಾರ್ಯ ಮಾಡಿದ್ದುಂಟು.

1999ರ ಮೇ 1ರಂದು ಕುಷ್ಟಗಿ ಪಟ್ಟಣದಲ್ಲಿ ರಾಜರ್ಷಿ ಭಗೀರಥ ಜಯಂತಿ ವಿಜೃಂಭಣೆಯಿಂದ ಜರುಗಿದಾಗ ಸುಮಾರು 50-60 ಸಹಸ್ರ ಜನರು ಭಾಗವಹಿಸಿದ್ದರು. ಆ ಸಂದರ್ಭದಲ್ಲಿ ಈ ಭಾಗದ ಜನರು ತನುಮನಧನ ಅರ್ಪಿಸಿ, ಭಗೀರಥ ಜಯಂತಿ ಯಶಸ್ವಿಯಾಗುವ ಹಾಗೆ ಮಾಡಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಪ್ರತಿ ವರ್ಷವೂ ಜಿಲ್ಲಾ ಮಟ್ಟದಲ್ಲಿ ಭಗೀರಥ ಜಯಂತಿ ಆಚರಿಸುವ ಮೂಲಕ ಸಮಾಜದ ಸಂಘಟನೆ ಸಾಧಿಸಲು

ಸಾಧ್ಯವಾಗುತ್ತದೆಂಬ ಭಾವನೆ ಇವರದು. ಇದಕ್ಕೆ ಸಮಾಜದ ಗುರುಗಳು ಹಾಗೂ ರಾಜ್ಯಮಟ್ಟದ ನಾಯಕರುಗಳ ಮಾರ್ಗದರ್ಶನ ಮತ್ತು ಬೆಂಬಲ ಅವಶ್ಯಕ.

ರಾಜ್ಯದಲ್ಲಿ ಹಿಂದುಳಿದ ವರ್ಗಗಳಲ್ಲಿನ ಹಿರಿಯಣ್ಣಗಳು ಜಿಲ್ಲೆಯಲ್ಲಿನ ಉಪ್ಪಾರ ಸಮಾಜವನ್ನು ವಿಶ್ವಾಸಕ್ಕೆ ತೆಗೆದುಕೊಂಡು ಬಹುಸಂಖ್ಯಾತರಾದ ಹಿಂದುಳಿದ ವರ್ಗದವರು ರಾಜಕೀಯ ಅಧಿಕಾರ ಪಡೆಯುವ ಪ್ರಯತ್ನ ಮಾಡುವುದು ತುಂಬ ಅವಶ್ಯಕ ಹಾಗೂ ಉಚಿತ. ಎಪ್ಪತ್ತರ ದಶಕದಲ್ಲಿ ದೇವರಾಜ ಅರಸು ಅವರು ಅನುಸರಿಸಿದ ಮುತ್ಸದ್ದಿತನ ಎಲ್ಲ ಹಿಂದುಳಿದ ವರ್ಗಗಳ ನಾಯಕರುಗಳ ಕಣ್ಣು ತೆರೆಸಬೇಕು. ಇತ್ತೀಚೆಗೆ ರಾಜಕೀಯ ಶಕ್ತಿಯಾಗಿ ಹೊರಹೊಮ್ಮಿರುವ ಹಿಂದುಳಿದ ಜನಾಂಗವಾದ 'ಕುರುಬರು', 'ಈಡಿಗರು' ಮುಂತಾದ ಸಮಾಜಗಳ ಮುಖಂಡರು, ಇತರೆ ಹಿಂದುಳಿದ ಸಮಾಜದ ಮುಖಂಡರುಗಳನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನ ಮಾಡಬೇಕು. ರಾಜಕೀಯ ಮೀಸಲಾತಿಯ ಪರಿಣಾಮಗಳು ಈಗಾಗಲೇ ಗೋಚರಿಸುತ್ತಿದ್ದು, ಅದು ಇನ್ನಷ್ಟು ಬಲಗೊಳ್ಳಬೇಕು. ಆಗ ಮಾತ್ರ ಪ್ರಜಾಪ್ರಭುತ್ವದ 'ತಲೆ ಎಣಿಕೆ' ಸಿದ್ಧಾಂತ ಅರ್ಥಪೂರ್ಣವಾಗುವುದು.

**ಮಾಹಿತಿಸಂಗ್ರಹ :** ***ಡಿ. ಸಿದ್ದಪ್ಪ, ಬಸವರಾಜ ಪರಮಣ್ಣ, ಅಯ್ಯನಗೌಡಪಾಟೀಲ ಬುದ್ದಿನ್ನಿ***

*




# * ಕೊಪ್ಪಳ ಜಿಲ್ಲೆ

## ಐತಿಹಾಸಿಕ ಹಿನ್ನೋಟ

1997ರ ಜಿಲ್ಲಾ ಪುನರ್ ವಿಂಗಡಣೆಯಿಂದಾಗಿ ಕೊಪ್ಪಳ ಜಿಲ್ಲೆ ಜನ್ಮತಾಳಿತು. ಇದು ಮೊದಲು ರಾಯಚೂರು ಜಿಲ್ಲೆಯ ಭಾಗ ವಾಗಿತ್ತು. ಕೊಪ್ಪಳ, ಗಂಗಾವತಿ, ಯಲಬುರ್ಗಾ ಮತ್ತು ಕುಷ್ಟಗಿ ತಾಲ್ಲೂಕುಗಳನ್ನೊಳಗೊಂಡಿದೆ. ರಾಜ್ಯದ ರಾಜಧಾನಿಯಿಂದ 368 ಕಿ.ಮೀ. ದೂರದಲ್ಲಿದೆ.

ಐತಿಹಾಸಿಕ ದಾಖಲೆಗಳಲ್ಲಿ ಕೊಪ್ಪಳ ನಾಡನ್ನು 'ಎಡ ದೊರೆನಾಡು' 'ದೋ ಆಬ್' ಪ್ರದೇಶವೆಂದು ಗುರುತಿಸಲಾಗಿದೆ. ಪೌರಾಣಿಕವಾಗಿ ಕೊಪ್ಪಳವನ್ನು 'ಇಂದ್ರಕೀಲ ಪರ್ವತ' ಎಂದು ಕರೆಯಲಾಗಿದೆ. ಅರ್ಜುನನು ಪಾಶುಪತಾಸ್ತ್ರಕ್ಕಾಗಿ ತಪಸ್ಸು ಮಾಡಿದ ಪುಣ್ಯಸ್ಥಳ ಕೊಪ್ಪಳ ಪ್ರದೇಶ ಎಂದು ವರ್ಣಿಸಲಾಗುತ್ತದೆ. ಜೈನರ 'ಧರ್ಮಶ್ರೀ' ಕ್ಷೇತ್ರ ಕೊಪ್ಪಳ. ಇದನ್ನು ಶಾಸನ ಸಾಹಿತ್ಯದಲ್ಲಿ ಕೊಪಣ, ಕುಪಣ, ಕುಪಿನ ಎಂದು ಕರೆದಿರುವದಲ್ಲದೆ, ಆದಿತೀರ್ಥ, ಮಹಾತೀರ್ಥ, ವಿದಿತಮಹಾಕೋಪಣನಗರ ಮುಂತಾಗಿ ಬಣ್ಣಿಸ ಲಾಗಿದೆ. ಪ್ರಸಿದ್ಧ ಜೈನ ಕ್ಷೇತ್ರವಾಗಿದ್ದು ಒಂದು ಕಾಲದಲ್ಲಿ 722 ಬಸದಿಗಳೂ 24 ಜೈನ ಸಂಘಗಳೂ ಇದ್ದುವೆಂದು ಹೇಳಲಾಗಿದೆ. ಇಲ್ಲಿ ಅನೇಕ ಜೈನ ಶಾಸನಗಳು ಸಿಕ್ಕಿವೆ. ಕ್ರಿ.ಶ. 850ರ ಶಾಸನವೊಂದು ದೊರಕ್ಕಿದ್ದು, ಇದೊಂದು ವೀರಗಲ್ಲಿನ ಮೇಲಿನ ಪ್ರಶಸ್ತಿ ಶಾಸನವೆಂದು ಡಾ॥ ಪಿ.ಬಿ. ದೇಸಾಯಿ ಹೇಳುತ್ತಾರೆ. ಕನ್ನಡದ ಮಹಾಕವಿ ರನ್ನ

ತನ್ನ ಅಜಿತನಾಥಪುರಾಣ ಕಾವ್ಯದಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆ ಹಾಗೂ ಕೊಪ್ಪಳದ ಪಾವಿತ್ರ್ಯ, ವೈಭವಗಳನ್ನು ಚಿರಸ್ಥಾಯಿಗೊಳಿಸಿದ್ದಾನೆ.

ಗವಿಮಠದ ಬೆಟ್ಟದಲ್ಲಿ ನಾಲ್ಕು ಗವಿಗಳಿವೆ. ಅಲ್ಲದೆ ಪುರಾತನವಾದ ವೀರಶೈವ ಮಠ ಮತ್ತು ಜೈನ ಸಮಾಧಿಗಳಿವೆ. ಪಾಲ್ಕಿಗುಂಡಿನ ಪಶ್ಚಿಮಕ್ಕಿರುವ ಮಾಲಿಮಲ್ಲಪ್ಪನ ಬೆಟ್ಟದಲ್ಲಿ 'ಮೋರಿಯರ ಅಂಗಡಿ' ಎಂದು ಕರೆಯುವ ಬೃಹತ್ ಶಿಲಾಯುಗೀನ ಕಲ್ಮನೆ ಸಮಾಧಿಗಳಿವೆ. ಅಶೋಕನ ಎರಡು ಲಘುಪ್ರಸ್ತರ ಧರ್ಮಶಾಸನಗಳು ಸಿಕ್ಕಿದ್ದು ಗವಿಮಠ ಮತ್ತು ಪಾಲ್ಕಿ ಗುಂಡುಬೆಟ್ಟಗಳಲ್ಲಿ. ಇವುಗಳಿಂದ ಕೊಪ್ಪಳ ಕ್ರಿ.ಪೂ. ಮೂರನೆಯ ಶತಮಾನದಷ್ಟು ಪ್ರಾಚೀನ ವಾದದ್ದೆಂದು ಊಹಿಸಬಹುದು. ಚೀನೀ ಯಾತ್ರಿಕ ಹ್ಯುಯೆನ್‌ತ್ಸಾಂಗ್ ಹೆಸರಿಸಿದ ಕೊಂಕಿನಪುಲೊ ಕೊಪ್ಪಳ ಇರಬಹುದೆಂದು ಊಹಿಸಲಾಗಿದೆ.

ಕೊಪ್ಪಳದ ಗವಿಮಠ ತನ್ನ ಪ್ರಾಚೀನ ಪರಂಪರೆಗೆ ಹೆಸರುವಾಸಿಯಾಗಿದೆ. ಈ ಮಠದ ಮೂಲ ಪ್ರವರ್ತಕರು ರುದ್ರಮುನಿ ಶಿವಾಚಾರ್ಯರು. ಜಗದ್ಗುರು ಗವಿಸಿದ್ದೇಶ್ವರ ಸ್ವಾಮಿಗಳು ಈ ಮಠದ ಖ್ಯಾತಿಗೆ ಕಾರಣರಾಗಿದ್ದಾರೆ. ಕೊಪ್ಪಳ ಜೈನ, ಬೌದ್ಧ, ವೀರಶೈವ ಹಾಗು ವೈದಿಕ ಮತಗಳ ಸಂಗಮಸ್ಥಾನ. ಪರಮತ ಸಹಿಷ್ಣುತೆಗೆ ಸದಾ ಉಲ್ಲೇಖಿಸುವ ಸ್ಥಳ.

ಇತಿಹಾಸ ಪ್ರಸಿದ್ಧವಾದ ಕೊಪ್ಪಳದ ಕೋಟೆಯನ್ನು ಕಟ್ಟಿದವನು ಯಾರೆಂದು ತಿಳಿದಿಲ್ಲ. ಟಿಪ್ಪು ಸುಲ್ತಾನ ಕ್ರಿ.ಶ. 1786ರಲ್ಲಿ ಇದನ್ನು ವಶಪಡಿಸಿಕೊಂಡು ಫ್ರೆಂಚ್ ಶಿಲ್ಪಿಗಳ ನೆರವಿನಿಂದ ಇನ್ನಷ್ಟು ಭದ್ರಪಡಿಸಿದನೆಂದು ತಿಳಿದುಬರುತ್ತದೆ. ಎರಡು ಸುತ್ತಿನ ಈ ದುರ್ಗ ಸುಮಾರು 400' ಎತ್ತರವಿದ್ದು, ಅಪಾಯಕರ ಹಾಗು ಕಡಿದಾದ ಮೆಟ್ಟಿಲುಗಳನ್ನೊಳಗೊಂಡಿದೆ. ದಕ್ಷಿಣ ಭಾರತದ ದುರ್ಗಮ ಕೋಟೆಗಳಲ್ಲಿ ಕೊಪ್ಪಳ ಕೋಟೆಯೂ ಒಂದು. ಕ್ರಿ.ಶ. 1525ರಲ್ಲಿ ಜೀವಿಸಿದ್ದ ನಂಜುಂಡಕವಿ ತನ್ನ ಕುಮಾರರಾಮ ಕಾವ್ಯದಲ್ಲಿ ಕೊಪ್ಪಳ ಕೋಟೆಯನ್ನು ವರ್ಣಿಸಿದ್ದಾನೆ.

ಕೊಪ್ಪಳ ಪ್ರಾಂತ್ಯವನ್ನು ಬಾದಾಮಿ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರು ಹಾಗು ವಿಜಯನಗರದ ಅರಸರು ಆಳಿದರೆಂಬುದರ ಬಗ್ಗೆ ಈ ಪ್ರಾಂತ್ಯದಲ್ಲಿ ದೊರಕಿದ ನೂರಾರು ಶಾಸನಗಳು ಪುರಾವೆ ಹೇಳುತ್ತವೆ. ಬಿಜಾಪುರ ಆದಿಲ್ ಷಾಹಿಗಳು ಕೊಪ್ಪಳ ಪ್ರಾಂತ್ಯವನ್ನು 'ಮುಜಗರ್ ನಗರ' ಎಂದು ಕರೆಯುತ್ತಿದ್ದರು. ಕೊಪ್ಪಳ ಸ್ವಲ್ಪ ಕಾಲ ಮರಾಠರ ಆಳ್ವಿಕೆಗೆ ಒಳಪಟ್ಟಿತ್ತು. ತುಕ್ಕೋಜಿ ಹೋಳ್ಕರ್, ರಘುನಾಥ ಪಟವರ್ಧನ್ ಮೊದಲಾದವರು ಈ ಪ್ರಾಂತ್ಯದ ಮೇಲೆ ತಮ್ಮ ಆಧಿಪತ್ಯವನ್ನು ಹೊಂದಿದ್ದರು. ಕ್ರಿ.ಶ. 1790ರಲ್ಲಿ ಬ್ರಿಟಿಷ್ ಹಾಗೂ ನಿಜಾಮ ಸೈನ್ಯಗಳು ಕೊಪ್ಪಳದ ಮೇಲೆ ತಮ್ಮ ಪ್ರಭುತ್ವ ಸ್ಥಾಪಿಸಲು ಆರು ತಿಂಗಳು ಹೋರಾಟ ಮಾಡಬೇಕಾಯಿತು. ಆಗ ಇದು ಮೈಸೂರು ಸಂಸ್ಥಾನದ ಟಿಪ್ಪು ಸುಲ್ತಾನನ ಆಳ್ವಿಕೆಯಲ್ಲಿತ್ತು. ಕೊಪ್ಪಳ ಕೋಟೆಯ ಮುತ್ತಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದ ಬ್ರಿಟಿಷ್ ಅಧಿಕಾರಿ ಸರ್

ಜಾನ್ ಮಾಲ್ಕಂ ಕೊಪ್ಪಳ ಕೋಟೆ ಅತ್ಯಂತ ಭವ್ಯವಾದದು ಎಂದು ವರ್ಣಿಸಿದ್ದಾನೆ. ಟಿಪ್ಪು ಸುಲ್ತಾನ ಬ್ರಿಟಿಷರಿಗೆ ಸೋತಾಗ ಕೊಪ್ಪಳ ಪ್ರಾಂತ್ಯ ಹೈದರಾಬಾದ್ ನಿಜಾಮರ ಆಳ್ವಿಕೆಗೆ ಒಳಗಾಯಿತು. ಹೈದರಾಬಾದ್ ನಿಜಾಮ ಇದನ್ನು ಸಾಲಾರಜಂಗನಿಗೆ ಜಾಹಗೀರರಾಗಿ ಕೊಟ್ಟಿದ್ದ.

ಕೊಪ್ಪಳ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಯಾವಾಗಲೂ ಪ್ರಮುಖ್ಯ ಪಾತ್ರವಹಿಸಿದ್ದ ಸ್ಥಳ. ಕ್ರಿ.ಶ. 1818ರ ಕೊಪ್ಪಳ ವಿಪ್ಲವ ಇತಿಹಾಸಪ್ರಸಿದ್ಧ. ಸ್ವಾತಂತ್ರ್ಯದ ಕಿಡಿಗಳು ಇಲ್ಲಿಂದಲೇ ಹೊರಟು ಹಾರಾಡಿದವು. ಅದರ ಫಲವಾಗಿ ಆಂಗ್ಲ ಪ್ರಭುತ್ವದ ವಿರುದ್ಧ ನಡೆದ ವಿಪ್ಲವಗಳಿಗೆ ಕೊಪ್ಪಳವು 'ಕೇಂದ್ರ ಸ್ಥಾನ'ವೆಂದು ಚರಿತ್ರೆಯಲ್ಲಿ ಪ್ರಸಿದ್ಧವಾಗಿದೆ. ಕ್ರಿ.ಶ. 1799ರಲ್ಲಿ ಟಿಪ್ಪು ಸುಲ್ತಾನನ ಮರಣಾನಂತರ ಬ್ರಿಟಿಷರ ಆಡಳಿತದ ವಿರುದ್ಧ ಎಲ್ಲ ಕಡೆಯಿಂದಲೂ ಅಸಂತುಷ್ಟಿ ತಲೆದೋರಿತು. ಬ್ರಿಟಿಷರನ್ನು ದೇಶದಿಂದ ಬಡಿದಟ್ಟುವ ಹೆಬ್ಬಯಕೆ ನಾಡಿನ ನಾಲ್ಕೂ ಕಡೆಗಳಲ್ಲಿ ಹೆಡೆ ಎತ್ತಿತು. ಕೊಪ್ಪಳದಲ್ಲಿ 1818ರಲ್ಲಿ ಪ್ರಜಾಕ್ಷೋಭೆಯ ರೂಪದಲ್ಲಿ ಪ್ರಕಟವಾಯಿತು. ಆಗಿನ ಸಹಾಯಕ ಸೈನ್ಯ ವ್ಯವಸ್ಥೆ ನಿಜಾಮನಿಗೆ ಪ್ರಬಲ ರಕ್ಷಣೆ ನೀಡಿದ್ದಿತು. ಈ ರಕ್ಷಣೆಯನ್ನು ನೆಚ್ಚಿದ ನಿಜಾಮನು ನಿರಂಕುಶನಂತೆ ವರ್ತಿಸತೊಡಗಿದನು. ನಿಜಾಮನ ದಬ್ಬಾಳಿಕೆ ಅಸಹನೀಯವಾಗಿತ್ತು. ಇದರಿಂದ ಜಮೀನ್ದಾರರು ಕ್ರುದ್ಧರಾದರು. ವೀರಪ್ಪನೆಂಬ ಜಮೀನ್ದಾರನು 1818ರಲ್ಲಿ ಬಂಡಾಯವೆದ್ದು ಕೊಪ್ಪಳದ ಮತ್ತು 'ಬಹದ್ದೂರು ಬಂಧ' ಎಂಬ ದುರ್ಗಗಳನ್ನು ವಶಪಡಿಸಿಕೊಂಡನು. ವೀರಪ್ಪನನ್ನು ಸೆರೆಹಿಡಿಯಲು ಆಂಗ್ಲ ಅಧಿಕಾರಿಗಳಾಗಿದ್ದ ಮೇಜರ್ ಡೌಟನ್ ಮತ್ತು ಬ್ರಿಗೇಡಿಯರ್ ಜನರಲ್ ಪ್ರಿಸ್ಲರ್ ಎಂಬವರು ತಮ್ಮ ತಮ್ಮ ಸೈನ್ಯಗಳೊಂದಿಗೆ ಬಂದು ಕೃಷ್ಣಾ ತೀರದಲ್ಲಿ ಕೂಡಿಕೊಂಡು ಕೊಪ್ಪಳ ದುರ್ಗದಲ್ಲಿ ಮೇ 8ರಂದು ತಳವೂರಿದರು. ನಿಜಾಮ ಸೈನ್ಯ ಕೂಡ ಇವರನ್ನು ಕೂಡಿಕೊಂಡಿತು. ಮರುದಿನ ಮುಂಜಾವದಲ್ಲಿ ದುರ್ಗ ಪರಿವೀಕ್ಷಣೆಗೆ ಹೊರಟರು. ದಾರಿಯಲ್ಲಿ ಅಪರಿಚಿತ ವ್ಯಕ್ತಿಯೊಬ್ಬನು ಬಂದು ತಾನು ವೀರಪ್ಪನ ಸಹೋದರನೆಂದೂ, ದುರ್ಗವನ್ನು ತಾನು ಒಪ್ಪಿಸುವುದಾಗಿಯೂ ಹೇಳಿದನು. ಆ ಮಾತನ್ನು ನಂಬಿ ಪ್ರಿಸ್ಲರ್ ಮುನ್ನಡೆದು, ದುರ್ಗವನ್ನು ವಶಪಡಿಸಿಕೊಳ್ಳಲು ಸೈನ್ಯಗಳಿಗೆ ಆಜ್ಞೆ ಮಾಡಿದನು. ಆದರೆ ದುರ್ಗದ ದ್ವಾರಕ್ಕೆ ಆಂಗ್ಲ ಸೇನೆಗಳು ಬರುತ್ತಲೂ ಅವುಗಳಿಗೆ ಪ್ರವೇಶ ಕೊಡಲು ದುರ್ಗದ ರಕ್ಷಕ ಸೈನಿಕರು ನಿರಾಕರಿಸಿದ್ದು ಪರಿಸ್ಥಿತಿಯ ಅರಿವಾಗಿ ಬ್ರಿಟಿಷ್ ಹಾಗು ನಿಜಾಮ ಸೈನ್ಯಗಳು ಯುದ್ಧ ಸಾರಿದವು. ಕೇವಲ 500 ಸೈನಿಕರೊಂದಿಗೆ ವೀರಪ್ಪ ಎರಡೂ ಕಡೆಯ ವೈರಿ ಸೈನ್ಯಗಳನ್ನು ಎದುರಿಸಿ ಹುತಾತ್ಮನಾದನು.

ಕ್ರಿ.ಶ. 1858ರಲ್ಲಿ ಮುಂಡರಗಿ ಭೀಮರಾಯ ಹಾಗು ಹಮ್ಮಿಗೆ ಕೆಂಚನಗೌಡ ಬ್ರಿಟಿಷ್‌ರೊಂದಿಗೆ ಇದೇ ಕೋಟೆಯಲ್ಲಿ ಹೋರಾಡಿ ಹುತಾತ್ಮರಾದದ್ದು ಈಗ ಇತಿಹಾಸ.

ಭಾರತ 15 ಆಗಸ್ಟ್ 1947ರಲ್ಲಿ ಸ್ವಾತಂತ್ರ್ಯ ಪಡೆದಾಗ ಹೈದರಾಬಾದ್ ನಿಜಾಮ ಭಾರತ ಒಕ್ಕೂಟಕ್ಕೆ ಸೇರಲು ನಿರಾಕರಿಸಿದ. ಸ್ವತಂತ್ರನೆಂದು ಘೋಷಿಸಿಕೊಂಡ. ಆಗ ಹೈದರಾಬಾದು

ಕರ್ನಾಟಕದಲ್ಲಿ ಕೊಪ್ಪಳ ಭಾಗದಲ್ಲಿಯೇ ಮೊದಲಿಗೆ ರಾಜಕೀಯ ಚಟುವಟಿಕೆಗಳು ಕಂಡುಬಂದವು. ಬಹಳ ಮೊದಲೇ ಕೀರ್ತನಕೇಸರಿ ಜಯರಾಮಾಚಾರ್ಯರು ಪುರಾಣದ ಕಥೆಗಳಿಗೆ ರಾಜಕೀಯ ರಂಗು ಕೊಟ್ಟು ಸ್ಫೂರ್ತಿ ಹುಟ್ಟುವಂತೆ ಕೀರ್ತನೆಗಳನ್ನು ಹೇಳತೊಡಗಿದರು. ಕರ್ನಾಟಕದಲ್ಲೆಲ್ಲ ಇವರು ಅಸಹಕಾರ ಕಾಯಿದೆ ಭಂಗ, ಖಾದಿ ಪ್ರಚಾರ ನಿಧಿ ಸಂಗ್ರಹಗಳಿಗಾಗಿ ನಮ್ಮ ಕೀರ್ತನಾ ಮಾನ್ವಯವನ್ನು ಬಳಸಿಕೊಂಡರು. ಇಲ್ಲಿಯವರಾದ ಬಸವಂತರಾವ್ ಕಾಟರಹಳ್ಳಿ ಮತ್ತು ಹಿರೇಮಠ ಅವರು ಹೈದರಾಬಾದಿನಲ್ಲಿ ಪೊಲೀಸರ ಕಣ್ಣುತಪ್ಪಿಸಿ ಮೊದಲಿಗರಾಗಿ ರಾಷ್ಟ್ರಧ್ವಜವನ್ನು ಹಾರಿಸಿದರು. 1928ರಷ್ಟು ಮುಂಚೆಯೇ ಕಾಂಗ್ರೆಸ್ಸನ್ನು ಸೇರಿದವರಲ್ಲಿ ಪ್ರಮುಖರೆಂದರೆ ಕೊಪ್ಪಳದವರಾದ ಎಚ್. ಕೊಟ್ರಪ್ಪ, ಹಂಪಿ ನರಸಿಂಗರಾವ್ ಮತ್ತು ಸಿರೂರ ವೀರಭದ್ರಪ್ಪ. 1934-35ರಲ್ಲಿ ಭಾನಾಪುರ ರೈಲ್ವೆ ನಿಲ್ದಾಣದಿಂದ ಹಾಯ್ದುಹೋಗುತ್ತಿದ್ದ ಗಾಂಧೀಜಿ ಹಾಗು ರಾಜೇಂದ್ರ ಪ್ರಸಾದರಿಗೆ ಮನವಿಗಳನ್ನು ಈ ಭಾಗದ ಜನ ಸಲ್ಲಿಸಿದರು. 1938ರಲ್ಲಿ ಹೈದರಾಬಾದಿನಲ್ಲಿ ನಡೆದ ವಂದೇಮಾತರಂ ವಿದ್ಯಾರ್ಥಿ ಆಂದೋಲನದಲ್ಲಿ ಮತ್ತು 1941ರಲ್ಲಿ ನಡೆದ ವೈಯಕ್ತಿಕ ಸತ್ಯಾಗ್ರಹದಲ್ಲಿ ಕೊಪ್ಪಳದ ವಿದ್ಯಾರ್ಥಿಮುಖಂಡ ಇಟಗಿ ವಿರೂಪಾಕ್ಷಯ್ಯನವರ ನೇತೃತ್ವದಲ್ಲಿ ಅನೇಕರು ಸೆರೆಮನೆ ಸೇರಿದರು. ಈ ಭಾಗದಲ್ಲಿದ್ದ ಕುಕನೂರಿನ ವಿದ್ಯಾಸಂಸ್ಥೆ ಗುರುಕುಲವು ಅದರ ಸಂಸ್ಥಾಪಕರಾದ ರಾಘವೇಂದ್ರರಾವ್ ದೇಸಾಯಿ ಅವರ ಮುಂಧೋರಣೆ ಯಿಂದ ರಾಜಕೀಯ ಜಾಗೃತಿಯಲ್ಲಿ ಬಹಳ ಮಹತ್ವದ ಪಾತ್ರವಹಿಸಿತು. ಈ ಹೊತ್ತಿಗೆ ನಗರದ ಪ್ರಮುಖ ವಕೀಲರನೇಕರು ರಾಜಕೀಯದಲ್ಲಿ ಧುಮುಕಿದರು. ಹೀಗೆ ನಿಜಾಮ ಸತ್ತೆಯನ್ನು ನಿಷ್ಕ್ರಿಯೆಗೊಳಿಸುವಲ್ಲಿ ತೀವ್ರವಾದ ಅಂದೋಲನ ಈ ಭಾಗದಲ್ಲಿ ನಡೆದದ್ದು ಚರಿತ್ರಾರ್ಹ.

ಈ ತಾಲ್ಲೂಕಿನ ಅಳವಂಡಿ ಗ್ರಾಮ ಕಲ್ಯಾಣ ಚಾಲುಕ್ಯರ ಕಾಲದ ಅಗ್ರಹಾರ. ಕಿನ್ನಾಳು ಇನ್ನೊಂದು ಪ್ರಮುಖ ಗ್ರಾಮ. ಇದು ಮರದ ಕುಶಲ ಕೈಗಾರಿಕೆಗಳಿಗೆ ಪ್ರಸಿದ್ಧವಾಗಿದೆ. ಇಲ್ಲಿನ ಕೆಲವು ಚಿತ್ರಗಾರ ಮನೆತನದವರು ಬಣ್ಣ ಹಾಕಿದ ದೇವಾನುದೇವತೆ ವಿಗ್ರಹಗಳು, ಪ್ರಾಣಿಗಳ ಬೊಂಬೆಗಳು, ಹಣ್ಣು ತರಕಾರಿಗಳ ತದ್ರೂಪ ಬೊಂಬೆಗಳು, ನಾಟಕಗಳಲ್ಲಿ ಬಳಸುವ ಕಿರೀಟ, ಮುಖವಾಡ, ತೊಟ್ಟಿಲು, ಪೀಠಗಳು ಇತ್ಯಾದಿಗಳನ್ನು ತಯಾರಿಸುತ್ತಾರೆ. ನೇಯ್ಗೆ, ಕೊಂಬಿನಿಂದ ಬಾಚಣಿಗೆಯ ತಯಾರಿಕೆ-ಈ ಉದ್ಯಮಗಳು ಇಲ್ಲಿವೆ. ರಾಜ್ಯದ ಹಿರಿಯ ಐಎಎಸ್ ಅಧಿಕಾರಿಯಾಗಿದ್ದ ಜಿ.ಜಿ. ಪುರೋಹಿತ ಹಾಗು ಖ್ಯಾತ ಇತಿಹಾಸತಜ್ಞ ಡಾ॥ ಪಿ.ಬಿ. ದೇಸಾಯಿ ಈ ಊರಿನವರು. ಮಾದಿಗೂರು ಕಳಚೂರ್ಯ ಸೋಮೇಶ್ವರನ ಉಪರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ. ಹಿಟ್ನಾಳು ರಾಜ್ಯದಲ್ಲೇ ಆದರ್ಶ ಗ್ರಾಮವೆಂದು ಖ್ಯಾತಿ ಪಡೆದಿದೆ. ಸಾಲರಜಂಗ ಸಕ್ಕರೆ ಕಾರ್ಖಾನೆ ಇಲ್ಲಿದೆ.

ಕೊಪ್ಪಳ, ಇರಕಲಗಡ, ಹಿಟ್ನಾಳ ಮತ್ತು ಅಳವಂಡಿ ಈ ನಾಲ್ಕು ಹೋಬಳಿಗಳಿವೆ. ತಾಲ್ಲೂಕಿನಲ್ಲಿ 156 ಹಳ್ಳಿಗಳಿವೆ. ತಾಲ್ಲೂಕಿನ ಒಟ್ಟು ವಿಸ್ತೀರ್ಣ 1,378.6 ಚ.ಕಿ.ಮೀ. ವಾರ್ಷಿಕ

ಸರಸಾರಿ ಮಳೆ 594.65 ಮಿ.ಮೀ. ಕೃಷಿ ತಾಲ್ಲೂಕಿನ ಮುಖ್ಯ ಜೀವನೋಪಾಯ. ಜೋಳ, ಶೇಂಗಾ, ಹತ್ತಿ, ಗೋಧಿ, ಸೂರ್ಯಕಾಂತಿ, ತೊಗರಿ, ಭತ್ತ ಮತ್ತು ಕಬ್ಬು ಮುಖ್ಯ ಬೆಳೆಗಳು.

ಕೊಪ್ಪಳ ಲೋಕಸಭಾ ಸಂಸದರ ಕೇಂದ್ರಸ್ಥಾನ. ಶಿವಮೂರ್ತಿಸ್ವಾಮಿ ಅಳವಂಡಿ, ಸಂಗಣ್ಣ ಅಗಡಿ, ಸಿದ್ರಾಮಯ್ಯಸ್ವಾಮಿ ಬಳಗಾನೂರು, ಬಸವರಾಜ ಪಾಟೀಲ ಅನ್ವರಿ, ಬಸವರಾಜ ರಾಯರೆಡ್ಡಿ, ಹೆಚ್.ಜಿ. ರಾಮುಲು ಮುಂತಾದವರು ಈ ಕ್ಷೇತ್ರದ ಲೋಕಸಭಾ ಸದಸ್ಯರಾಗಿ ಚುನಾಯಿತರಾಗಿದ್ದಾರೆ. ಮಲ್ಲಿಕಾರ್ಜುನ ಪಾಟೀಲ, ಮಲ್ಲಿಕಾರ್ಜುನ ಸಂಗನಗೌಡ, ವಿರೂಪಾಕ್ಷಗೌಡ, ಎಂ. ವಿರೂಪಾಕ್ಷಪ್ಪ, ವೀರಣ್ಣ ಮುದಗಲ್, ಮಲ್ಲಿಕಾರ್ಜುನ ದಿವಟರ್, ವಿರೂಪಾಕ್ಷಪ್ಪ ಅಗಡಿ, ಸಂಗಣ್ಣಕರಡಿ ಮುಂತಾದವರು ರಾಜ್ಯ ವಿಧಾನಸಭೆಗೆ ಕೊಪ್ಪಳ ಕ್ಷೇತ್ರದಿಂದ ಚುನಾಯಿತರಾಗಿದ್ದಾರೆ.

ಕೊಪ್ಪಳ ಜಿಲ್ಲೆಯ ಇನ್ನೊಂದು ತಾಲ್ಲೂಕು ಗಂಗಾವತಿ. ಕೊಪ್ಪಳದಿಂದ 48 ಕಿ.ಮೀ. ದೂರದಲ್ಲಿದೆ. ತಾಲ್ಲೂಕಿನಲ್ಲಿ ಒಟ್ಟು 157 ಗ್ರಾಮಗಳಿವೆ. ಗಂಗಾವತಿ, ಕನಕಗಿರಿ, ವೆಂಕಟಗಿರಿ, ನವಲಿ, ಕಾರಟಗಿ, ಹುಲಿ ಹೈದರ, ಸಿದ್ದಾಪುರ ಮತ್ತು ಮರಳಿ-ಇವು ಹೋಬಳಿಗಳು. ಇಲ್ಲಿ ನಗರಸಭೆ ಇದ್ದು, 1953ರಲ್ಲಿ ಸ್ಥಾಪನೆಯಾಗಿದೆ. ಇಲ್ಲಿ ಸಾಮಾನ್ಯ ರೀತಿಯ ನಗರೇಶ್ವರ, ವೆಂಕಟೇಶ್ವರ ದೇವಾಲಯಗಳಿವೆ. ವಿಜಯನಗರದ ರಾಜರಿಂದ ಕಟ್ಟಲಾದುದೆನ್ನಲಾದ ವಿರೂಪಾಕ್ಷ ದೇವಾಲಯವಿದೆ. ಮುದ್ದುಸಂಗಸ್ವಾಮಿಗಳ ಹಳೆಯ ಮಠವೂ ಇಲ್ಲಿದೆ. ಹಿಂದೆ ಇದಕ್ಕೆ 'ನೀಲಾವತಿ' ಎಂಬ ಹೆಸರಿತ್ತೆಂಬ ಐತಿಹ್ಯ. ಊರಿನ ದಕ್ಷಿಣಕ್ಕೆ 3 ಕಿ.ಮೀ. ಅಂತರದಲ್ಲಿ ತುಂಗಭದ್ರಾನದಿ ಹರಿಯುತ್ತದೆ. ತುಂಗಭದ್ರಾ ಜಲಾಶಯದಿಂದ ನೀರಾವರಿ ಪ್ರಾರಂಭವಾದ ಮೇಲೆ ಈ ಪ್ರದೇಶ ಶೀಘ್ರವಾಗಿ ಪ್ರಗತಿ ಹೊಂದಿದೆ.

ವಡ್ಡರ ಹಟ್ಟಿಯಲ್ಲಿ ಒಂದು ಗ್ರಾಮಸೇವಕ ತರಬೇತಿ ಕೇಂದ್ರವುಂಟು. ತಾಲ್ಲೂಕಿನಲ್ಲಿ ಸಕ್ಕರೆ ಕಾರ್ಖಾನೆ ಮತ್ತು ಅಕ್ಕಿಗಿರಣಿಗಳು ಇವೆ. ತಾಲ್ಲೂಕಿನ ಬಹುಭಾಗ ವಿಶೇಷವಾಗಿ ಕಪ್ಪು ಮಣ್ಣಿನ ಮಟ್ಟಸಭೂಮಿ. ಅಲ್ಲಲ್ಲಿ ಕಣಶಿಲೆಯ ಗುಡ್ಡಗಳೂ, ಟ್ರಾಪ್ ಶಿಲೆಯ ಉಬ್ಬುಗಳೂ ಇವೆ. ತಾಲ್ಲೂಕಿನ ಉತ್ತರದಲ್ಲಿರುವ ನಿಶಾನಿ ಗುಡ್ಡ, ಪಶ್ಚಿಮದಲ್ಲಿರುವ ಎಮ್ಮೆಗುಡ್ಡ, ಪೂರ್ವದಲ್ಲಿರುವ ಮಾರಿಗುಡ್ಡ ಎತ್ತರದ ಬೆಟ್ಟಗಳು. ಪಶ್ಚಿಮಕ್ಕಿರುವ ಬೆನಕಲ್ ಎಂಬಲ್ಲಿ ನವಶಿಲಾಯುಗದ ಒಂದು ಭಸ್ಮಗುಡ್ಡ, ಹಲವು ಬೃಹತ್ ಶಿಲಾಸಮಾಧಿ ಸಂಸ್ಕೃತಿ ಕಾಲದ ಕಲ್ಲುಗೋರಿಗಳು ಮತ್ತು ಬಂಡೆಗಳ ಮೇಲೆ ಚಿತ್ರಿಸಿರುವ ಪ್ರಾಗೈತಿಹಾಸಿಕ ಚಿತ್ರಗಳು ಇವೆ.

ಆನೆಗೊಂದಿ ಮತ್ತು ಕನಕಗಿರಿ ತಾಲ್ಲೂಕಿನ ಇತಿಹಾಸ ಪ್ರಸಿದ್ಧ ಸ್ಥಳಗಳು.

ಆನೆಗೊಂದಿ ಗಂಗಾವತಿಯಿಂದ 9ಕಿ.ಮೀ. ದೂರದಲ್ಲಿದೆ. ಹಿಂದೆ ಆನೆಗೊಂದಿಗೆ ಕಿಷ್ಕಿಂದೆ ಎಂಬ ಹೆಸರಿತ್ತು. ಹನುಮನುದಿಸಿದ ನಾಡಿದು. ಶ್ರೀರಾಮ ಲಕ್ಷ್ಮಣರು ಸೀತೆಯನ್ನು ಹುಡುಕುತ್ತ ಇಲ್ಲಿಗೆ ಬಂದು ತನ್ನ ತಮ್ಮನಿಗೆ ಅನ್ಯಾಯವಾಗಿ ತೊಂದರೆ ಕೊಡುತ್ತಿದ್ದ ವಾಲಿಯನ್ನು

ನಿಗ್ರಹಿಸಿ, ಸುಗ್ರೀವನಿಗೆ ಪಟ್ಟಕಟ್ಟಿ, ಅವನ ಸಹಾಯ ಪಡೆದು ಸೀತೆಯನ್ನು ಮರಳಿ ಪಡೆದರು. ಇಲ್ಲಿ ಪಂಪಾಸರೋವರವಿದ್ದು ವಾಲ್ಮೀಕಿ ರಾಮಾಯಣದಲ್ಲಿ ಅದರ ವರ್ಣನೆ ಅದ್ಭುತವಾಗಿದೆ. ಶ್ರೀರಾಮ ಶಬರಿಯ ಭಕ್ತಿಗೆ ಮೆಚ್ಚಿ ಆಕೆಗೆ ಮುಕ್ತಿ ದಯಪಾಲಿಸಿದ ಪುಣ್ಯ ಸ್ಥಳವಿದು. ಪಂಪಾ ಕ್ಷೇತ್ರದ ಕಥೆ ಹೀಗಿದೆ : ಪಂಪಾದೇವಿ ಬ್ರಹ್ಮನ ಮಗಳು. ಅವಳು ಹೇಮಕೂಟ ಪರ್ವತದಲ್ಲಿ ಪರಶಿವನನ್ನು ಕುರಿತು ತಪಸ್ಸು ಮಾಡಿದಳು. ಶಿವನನ್ನು 'ನೀನೇ ನನ್ನ ಪತಿಯಾಗು' ಎಂದು ಪ್ರಾರ್ಥಿಸಿದಳು. ಶಿವನು ಅವಳನ್ನು ಮದುವೆಯಾಗಿ ಪಂಪಾಪತಿ ಆದ. ಆ ಸ್ಥಳವೇ ಪಂಪಾಕ್ಷೇತ್ರ. ಪಂಪಾಕ್ಷೇತ್ರವೇ ಈಗಿನ ಹಂಪಿ. ಇದರ ಸುತ್ತ ಹೇಮಕೂಟ, ಮಾಲ್ಯವಂತ, ಮಾತಂಗ, ಋಷ್ಯಮೂಕ ಮತ್ತು ಕಿಷ್ಕಿಂಧ ಪರ್ವತಗಳಿವೆ.

ಆನೆಗೊಂದಿ ವಿಜಯನಗರ ಇತಿಹಾಸ ಮೂಲಕವೂ ಪ್ರಸಿದ್ಧಿ ಪಡೆದಿದೆ. ವಿಜಯನಗರದ ಅರಸರು ತಮ್ಮ ಸೈನ್ಯದ ಆನೆಗಳಿಗೆ ಇಲ್ಲಿ ಜಾಗ ಮಾಡಿದ್ದರು. ಪರ್ವತಾವಳಿಯ ಸ್ವಾಭಾವಿಕ ದುರ್ಗವಾಗಿದ್ದು ಸುರಕ್ಷಿತ ಸ್ಥಳವಾದುದರಿಂದ ಹಿಂದಿನ ಕೆಲವು ರಾಜರು ಇದನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಆನೆಗೊಂದಿಯನ್ನು ಆಳುತ್ತಿದ್ದ ಕಂಪಿಲರಾಯ ಮತ್ತು ಅವನ ಮಗ ಕುಮಾರರಾಮ ಅವರು ಅಲ್ಲಾಉದ್ದಿನ ಖಿಲ್ಜಿಯ ದಂಡನಾಯಕ ಮಲ್ಲಿಕಾಫರನನ್ನು ಎದುರಿಸಿ ಯುದ್ಧ ಮಾಡಿದರೆಂದು ತಿಳಿದುಬಂದಿದೆ. ಕಂಪಿಲರಾಯನ ಬಳಿ ಇದ್ದ ಹರಿಹರ ಮತ್ತು ಬುಕ್ಕ ಸಹೋದರರು ವಿಜಯನಗರದ ಸ್ಥಾಪನೆಗೆ ಕಾರಣೀಭೂತರಾದವರು. ಆದುದರಿಂದಲೇ ನ್ಯೂನಿಜ್ ಎಂಬ ವಿದೇಶಿ ಪ್ರವಾಸಿಗ ಆನೆಗೊಂದಿಯನ್ನು ವಿಜಯನಗರದ ಮಾತೃಸ್ಥಾನವೆಂದು ಕರೆದಿದ್ದಾನೆ. ವಿಜಯನಗರ ಪತನಾನಂತರ ಈ ಪ್ರದೇಶ ಕೆಲವು ಸಮಯ ಮುಸ್ಲಿಮರ ಆಳ್ವಿಕೆಗೂ ಇನ್ನು ಕೆಲವು ಸಮಯ ಮರಾಠರ ಆಳ್ವಿಕೆಗೂ ಒಳಪಟ್ಟಿತ್ತು. ಕ್ರಿ.ಶ. 1776ರಲ್ಲಿ ಟಿಪ್ಪು ಸುಲ್ತಾನ ಈ ಊರಿನ ಮೇಲೆ ದಂಡೆತ್ತಿ ಬಂದು ಇದನ್ನು ಹಾಳುಗೆಡವಿದ. ಅವನ ಪತನಾನಂತರ ಬ್ರಿಟಿಷರು ಆನೆಗೊಂದಿಯ ಕೆಲವು ಭಾಗವನ್ನು ತಮ್ಮ ವಶದಲ್ಲಿಟ್ಟುಕೊಂಡು ಉಳಿದ ಪ್ರದೇಶವನ್ನು ಹಿಂದಿನ ಅರಸರ ಸಂತತಿಗೆ ಒಪ್ಪಿಸಿಕೊಟ್ಟರು. ಆನೆಗೊಂದಿಯಲ್ಲಿನ ಪ್ರಾಚೀನ ಕೋಟೆ ಕೊತ್ತಲಗಳು, ಶೇಷಶಾಯಿ ದೇವಾಲಯ, ಪಂಪಾಸರೋವರ, ವಾಲಿಭಂಡಾರ ಇಲ್ಲಿನ ಹಳೆ ಅರಮನೆ ಇತ್ಯಾದಿ ಪ್ರೇಕ್ಷಣೀಯ ಸ್ಥಳಗಳು. ಇಲ್ಲಿ ಮಾಧ್ವ ಗುರುಗಳ ಒಂಬತ್ತು ವೃಂದಾವನಗಳು ಇವೆ.

ಕನಕಗಿರಿ ಗಂಗಾವತಿಯಿಂದ 21ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಮೂರು ದಿಕ್ಕುಗಳನ್ನು ಇಲ್ಲಿ ಹರಿಯುವ ಎರಡು ತೊರೆಗಳು ಸುತ್ತುವರಿದಿವೆ. ಕನಕನೆಂಬ ಮುನಿ ಇಲ್ಲಿ ತಪಸ್ಸು ಮಾಡಿದನೆಂದು ಹೇಳುವರು. ವಿಜಯದಾಸರು ಕ್ಷೇತ್ರ ಸುಳಾದಿಯಲ್ಲಿಯೂ ಈ ವಿಚಾರ ಹೇಳಿದ್ದಾರೆ. ಕನಕಗಿರಿಯ ಉತ್ತರ ದಕ್ಷಿಣ ಪ್ರದೇಶದಲ್ಲಿ (ಮಸ್ಕಿ, ಕೊಪ್ಪಳ) ಅಶೋಕನ ಶಾಸನಗಳು ಸಿಕ್ಕಿದ್ದು, ಈ ಊರೇ ಅಶೋಕನ ದಕ್ಷಿಣದ ಕಾರ್ಯಕೇಂದ್ರವಾಗಿದ್ದ 'ಸ್ವರ್ಣಗಿರಿ' ಎಂದು

ಊಹಿಸಲಾಗಿದೆ. ಕ್ರಿ.ಶ. ಎರಡನೆಯ ಶತಮಾನದ ಟಾಲೆಮಿಯ ಭೂಗೋಳದಲ್ಲಿ ಭೀಮಾನದಿ ಹಾಗೂ ಬನವಾಸಿ ನಡುವಣ ಮಾರ್ಗದಲ್ಲಿ ಬರುವ ಊರುಗಳನ್ನು ಹೆಸರಿಸುವಲ್ಲಿ ಹೇಳಿರುವ 'ಕಲ್ಲಿಗೇರಿಸ್' ಕನಕಗಿರಿ ಇರಬಹುದೆಂದು ಊಹಿಸಲಾಗಿದೆ.

15-17ನೆಯ ಶತಮಾನಗಳ ಅವಧಿಯಲ್ಲಿ ಈ ಊರು ಒಂದು ಪಾಳೆಯಪಟ್ಟಿನ ಕೇಂದ್ರವಾಗಿತ್ತು. ಗುಜ್ಜಲ ವಂಶದ ಪರಸಪ್ಪ ನಾಯಕ ಇಲ್ಲಿನ ಕನಕಾಚಲ ಲಕ್ಷ್ಮೀನರಸಿಂಹ ದೇವರ ಗರ್ಭಾಲಯವನ್ನು ಕಟ್ಟಿಸಿ ಹೊಸ ಊರಿನ ಸ್ಥಾಪನೆಗೆ ಕಾರಣನಾದ. ಇವನ ವಂಶದ ನಾಯಕರು ಮುಂದೆ ಪ್ರಬಲರಾಗಿ 40 ಲಕ್ಷ ವರಹಗಳ ಆದಾಯದ ಪ್ರಾಂತ್ಯ ಗಳಿಸಿಕೊಂಡರು. ನವಾಬ ಉಡಿಚಿ ನಾಯಕ ಪ್ರಭಾವಶಾಲಿ ದೊರೆಯಾಗಿದ್ದ. ಇವನು ಕನಕಗಿರಿಯಲ್ಲಿಯೇ 300ಕ್ಕಿಂತ ಹೆಚ್ಚು ದೇವಾಲಯಗಳನ್ನು ಕಟ್ಟಿಸಿದನಂತೆ. ಇಲ್ಲಿನ ಮುಖ್ಯ ದೇವಾಲಯದ ಪ್ರಾಕಾರ, ಗೋಪುರಗಳನ್ನೆಲ್ಲ ಇವನೇ ಕಟ್ಟಿಸಿದ. 'ಕಣ್ಣಿದ್ದವರು ಕನಕಗಿರಿ ನೋಡಬೇಕೆಂಬುದು' ಆ ಭಾಗದಲ್ಲಿನ ಜನವಾಣಿ. ನಿಜಾಮನ ಚಿತಾವಣೆಯಿಂದ ಸುರಪುರದ ಪಾಮನಾಯಕನು ಕನಕಗಿರಿಯ ಮೇಲೆ ದಾಳಿ ಮಾಡಿ ಅದನ್ನು ನಾಶ ಮಾಡಿದನಂತೆ. ಹಿರಿಯ ಐಎಎಸ್ ಅಧಿಕಾರಿ ಹಾಗೂ ಸಾಹಿತಿ ಜಯತೀರ್ಥ ರಾಜಪುರೋಹಿತ ಈ ಊರಿನವರು.

ನೀರಾವರಿ ಸೌಲಭ್ಯದಿಂದಾಗಿ ತಾಲ್ಲೂಕಿನ ಹೆಚ್ಚಿನ ಭಾಗದಲ್ಲಿ ಎರಡು ಬೆಳೆ ಬೆಳೆಯುತ್ತಾರೆ. ಭತ್ತ, ಕಬ್ಬು, ಜೋಳ, ಹತ್ತಿ, ಸೂರ್ಯಕಾಂತಿ ಮುಂತಾದವು ಮುಖ್ಯ ಬೆಳೆಗಳು.

ಭೀಮಸೇನರಾವ್ ದೇಸಾಯಿ, ತಿರುಮಲದೇವರಾಯಲು, ಹೆಚ್. ಆರ್. ಶ್ರೀರಾಮುಲು, ಹೆಚ್.ಜಿ. ರಾಮುಲು, ಸಿ. ಯಾದವರಾವ್, ಮಹಾದೇವಪ್ಪಗೌಳಿ, ಶ್ರೀರಂಗದೇವರಾಯಲು ಮುಂತಾದವರು ಈ ಕ್ಷೇತ್ರದಿಂದ ವಿಧಾನಸಭೆಗೆ ಚುನಾಯಿತರಾಗಿದ್ದಾರೆ. ಪಕ್ಕದ ಕನಕಗಿರಿ ಕ್ಷೇತ್ರದಿಂದ ಎಂ. ನಾಗಪ್ಪ, ನಾಗಪ್ಪ ಸಾಲೋಣಿ ಮತ್ತು ಮಲ್ಲಿಕಾರ್ಜುನ ನಾಗಪ್ಪ ಚುನಾಯಿತರಾಗಿದ್ದಾರೆ. ಕೆ. ವಿಶ್ವನಾಥಸ್ವಾಮಿ ಹಾಗು ಭತ್ತದ ಮರಿಯಪ್ಪ ಈ ಭಾಗದಿಂದ ವಿಧಾನಪರಿಷತ್ತನ್ನು ಪ್ರವೇಶಿಸಿದ್ದರು.

ಪೂಜ್ಯದಾಸೋಹ ಮೂರ್ತಿ ಶ್ರೀಗುರು ರುದ್ರೇಶ್ವರ ತಾತನವರು ಬೃಹಚ್ಛಿಲಾಮಠ ಮರಕುಂಬಿ ತಮ್ಮ ಧ್ಯಾನ, ಯೋಗ ಹಾಗು ತಪಸ್ಸಿನಿಂದ ವಾಕ್‌ಸಿದ್ಧಿಯನ್ನು ಪಡೆದಿದ್ದರು. ಅವರು ಅಖಂಡ 85 ವರ್ಷಗಳ ತಮ್ಮ ಪವಿತ್ರ ಜೀವನದುದ್ದಕ್ಕೂ ಹಲವಾರು ಭಕ್ತಾದಿಗಳಿಗೆ ಆಧ್ಯಾತ್ಮಿಕ ಮಾರ್ಗದರ್ಶನ ನೀಡಿದರು. ಧನ್ಯೋಃಗೃಹಸ್ಥಾಶ್ರಮಕ್ಕೆ ಅನುಗುಣವಾಗಿ ಅವರು ಪ್ರಪಂಚದಿಂದ ಪಾರಮಾರ್ಥವನ್ನು ಕಂಡ ಮಹಾಮಹಿಮರು. ಅವರ ಪುಣ್ಯ ಮಹಾತ್ಮೆಯನ್ನು ಅವರ ದಿವ್ಯಪುರಾಣದಲ್ಲಿ ಪಂ. ವಾಸುದೇವಾಚಾರ್ಯ ಹೂಲಿ ದಾಖಲಿಸಿದ್ದಾರೆ.

ಪೂಜ್ಯ ಮಲ್ಲಿಕಾರ್ಜುನ ಮಹಾಸ್ವಾಮಿಗಳವರು ಮರಕುಂಬಿಯ ಬೃಹಚ್ಛಿಲಾ ಮಠದ ಪ್ರಸ್ತುತ ಪೀಠಾಧ್ಯಕ್ಷರು. ಅವರು ತಮ್ಮ ಹಿರಿಯರ ವಿಶಿಷ್ಟ ಮಾರ್ಗದಲ್ಲಿ ಧ್ಯಾನ, ಶಿವಯೋಗ,

ತಪಸ್ಸುಗಳ ಮೂಲಕ ಜನಮನದಲ್ಲಿ ಸ್ಥಾಪಿತರಾಗಿದ್ದಾರೆ. ಮರಳಿ ಕ್ಷೇತ್ರದಲ್ಲಿ ಒಂದು ಆದರ್ಶ ಗ್ರಾಮೀಣ ಪ್ರೌಢಶಾಲೆಯನ್ನು ಹಾಗೂ ಎಲ್ಲ ವರ್ಗದ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ ನಿಲಯವನ್ನು ನಡೆಸುತ್ತಿದ್ದಾರೆ. ಘನಮಠ ನಾಗಭೂಷಣ ಶಿವಯೋಗಿಗಳ ವಿರಚಿತ ಕೃಷಿ ಜ್ಞಾನ ಪ್ರದೀಪಿಕೆಯನ್ನು ಪ್ರಸಿದ್ಧಿ ಮಾಡಿದ್ದದಲ್ಲದೆ ಅದನ್ನು ಆಂಗ್ಲ ಹಾಗು ಇತರ ಭಾರತೀಯ ಇತರ ಭಾಷೆಗಳಿಗೆ ಭಾಷಾಂತರ ಮಾಡಿಸಿ ಎಲ್ಲ ಸಮುದಾಯದ ರೈತರಿಗೆ ಅದರ ಪ್ರಯೋಜನ ಸಿಗುವ ಹಾಗೆ ಮಾಡಬೇಕೆಂಬುದು ಅವರ ಆಶಯ. ನಿರ್ಗತಿಕ ಮಕ್ಕಳ ಕುಟೀರ, ಬಾಲಕಾರ್ಮಿಕರ ವಸತಿಶಾಲೆ, ವೃದ್ಧಾಶ್ರಮ, ಕಿರಿಯ ಪ್ರಾಥಮಿಕ ಶಾಲೆ, ಗ್ರಂಥಾಲಯ, ಪದವಿಪೂರ್ವ ಹಾಗೂ ಪದವಿ ಕಾಲೇಜು ತೆರೆಯುವದು-ಹೀಗೆ ಗ್ರಾಮೀಣ ಮಕ್ಕಳ ಜನರ ಪ್ರಯುಕ್ತ ಹತ್ತು ಹಲವು ಯೋಜನೆಗಳನ್ನು ಹೊಂದಿದ್ದಾರೆ.

ಯಲಬುರ್ಗಾ ಕೊಪ್ಪಳ ಜಿಲ್ಲೆಯ ಇನ್ನೊಂದು ತಾಲ್ಲೂಕು. ಯಲಬುರ್ಗಾ, ಬಂಡಿ ಹಾಗು ಕುಕ್ಕನೂರು ಹೋಬಳಿಗಳು. ತಾಲ್ಲೂಕಿನಲ್ಲಿ 144 ಗ್ರಾಮಗಳಿವೆ. ಐತಿಹಾಸಿಕವಾಗಿ ಇದರ ಹಳೆಯ ಹೆಸರು ಎರಂಬರ್ಗ. 11-12ನೆಯ ಶತಮಾನದಲ್ಲಿ ಸಿಂದ ಮನೆತನದವರು ಇದರ ಸುತ್ತಮುತ್ತಲಿನ ಪ್ರದೇಶವನ್ನು ಕಲ್ಯಾಣ ಚಾಳುಕ್ಯರ ಮಹಾಮಾಂಡಲೇಶ್ವರರಾಗಿ ಆಳುತ್ತಿದ್ದರು. ಆ ವಂಶದ ಆಚರಸನ ವಿಷಯವನ್ನು ಉಲ್ಲೇಖಿಸಿರುವ ಕಲ್ಯಾಣ ಚಾಳುಕ್ಯರ ಆರನೆಯ ವಿಕ್ರಮಾದಿತ್ಯನ ಶಾಸನವೊಂದು ಇಲ್ಲಿದೆ. ಊರ ಹೊರಗಿರುವ ಪಾಳುಬಿದ್ದಿರುವ ಒಂದು ಕಲ್ಲಿನ ಮಂಟಪ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಈಶ್ವರ ದೇವಾಲಯವಾಗಿತ್ತೆಂದು ಪ್ರತೀತಿ. ಹೊಯ್ಸಳರ ವೀರಬಲ್ಲಾಳ (ಕ್ರಿ.ಶ. 1173-1220) ಸುಮಾರು 1195ರಲ್ಲಿ ಎರಂಬಾರಗೆಯನ್ನು ತನ್ನ ತಾತ್ಕಾಲಿಕ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನಂತೆ.

ಚೆನ್ನಕವಿ, ಸಿದ್ದಯ್ಯ ಪುರಾಣಿಕ, ದೇವೇಂದ್ರಕುಮಾರ ಹಕಾರಿ, ಬಿ.ವಿ. ಶಿರೂರು ಮುಂತಾದ ಪ್ರಸಿದ್ಧ ಕವಿ-ಸಾಹಿತಿಗಳು ಈ ತಾಲ್ಲೂಕಿನವರು.

ವ್ಯವಸಾಯ ಪ್ರಧಾನವಾದ ಈ ತಾಲ್ಲೂಕಿನಲ್ಲಿ ಕೈಗಾರಿಕೆಗಳು ಕಡಿಮೆ. ಕೆಲವು ಸಹಕಾರ ಸಂಘಗಳಲ್ಲಿ ಎಣ್ಣೆ ತೆಗೆಯುವದು, ಚರ್ಮ ಹದ ಮಾಡುವುದು, ಹಗ್ಗ ಮತ್ತು ಮರಗೆಲಸದ ಕೆಲಸ ನಡೆಯುತ್ತಿವೆ. ಹತ್ತಿ ಸಂಸ್ಕರಣ ಹಾಗು ಎಣ್ಣೆ ಮಿಲ್ಲುಗಳು ಇವೆ. ತಾಲ್ಲೂಕಿನ ಸರಾಸರಿ ಮಳೆ 620 ಮಿ.ಮೀ. ಈ ತಾಲ್ಲೂಕಿನ ಹೆಚ್ಚು ಪ್ರದೇಶವು ಕಪ್ಪುಮಣ್ಣಿನ ಎರೆಭೂಮಿಯಿಂದ ಕೂಡಿದೆ. ಜೋಳ, ಗೋಧಿ, ಶೇಂಗಾ, ಸಜ್ಜೆ, ಸೂರ್ಯಕಾಂತಿ, ತೊಗರಿ ಮುಂತಾದವು ಈ ತಾಲ್ಲೂಕಿನ ಮುಖ್ಯ ಬೆಳೆಗಳು. ಇಲ್ಲಿನ ಹೆಚ್ಚು ಜನ ಬಡತನ ರೇಖೆಗಿಂತ ಕೆಳಮಟ್ಟದಲ್ಲಿದ್ದಾರೆ.

ಕುಕನೂರು, ಇಟಗಿ, ಮಂಗಳೂರು ಈ ತಾಲ್ಲೂಕಿನ ಇತರ ಪ್ರಸಿದ್ಧ ಸ್ಥಳಗಳು. ಐತಿಹಾಸಿಕವಾಗಿ ಕುಕ್ಕುನೂರೆಂದೇ ಪ್ರಸಿದ್ಧವಾಗಿರುವ ಕುಕನೂರು ಬನ್ನಿಕೊಪ್ಪ ರೈಲು ನಿಲ್ದಾಣದಿಂದ 11ಕಿ.ಮೀ. ದೂರದಲ್ಲಿದೆ. ಈ ಊರು ಪ್ರಾಚೀನ ದೇವಾಲಯಗಳಿಗೆ ಪ್ರಸಿದ್ಧವಾಗಿದೆ. ಸ್ಥಳ

ಪುರಾಣದ ಪ್ರಕಾರ ಈ ಊರು ಕುಂತಳಪುರ. ಲಕ್ಷ್ಮೀಶನೂ ಈ ಊರಿಗೆ ಇದೇ ಹೆಸರನ್ನು ಬಳಸಿದ್ದಾನೆನ್ನಲಾಗಿದೆ. ಚಂದ್ರಹಾಸ ದುಷ್ಟಬುದ್ಧಿಯ ಮಗಳನ್ನು ಭೇಟಿ ಮಾಡಿದ ಸ್ಥಳವೆಂದು ಇಲ್ಲಿನ 'ಶ್ರಿಂಗೇರ ತೋಟ'ವನ್ನು ತೋರಿಸುವ ರೂಢಿ. ವಿಜಯನಗರದ ಕಾಲದಲ್ಲಿ ಕಟ್ಟಲಾಗಿದೆ ಎನ್ನಲಾದ ಮಹಾಮಾಯಾ ದೇವಾಲಯ ಪ್ರಮುಖವಾದುದು. ಅಲ್ಲದೆ ಇನ್ನೂ ಅನೇಕ ದೇವಾಲಯಗಳಿವೆ. ಇಲ್ಲಿರುವ 11-12ನೆಯ ಶತಮಾನದ ಶಾಸನಗಳಲ್ಲಿ ಗಂಗಾ, ಕಾಳಿಕಾ, ಮಹಾಮಾಯಿ, ಸರಸ್ವತಿ ಮೊದಲಾದ ದೇವತೆಗಳಿಗೆ ಕೊಟ್ಟ ದತ್ತಿಗಳ ಪ್ರಸ್ತಾಪವಿದೆ. ಇದು ಕುಕ್ಕನೂರು 30 ಎಂದು ಕರೆಯಲ್ಪಡುತ್ತಿತ್ತು.

ಗುರುಕುಲ ವಿದ್ಯಾಲಯ ಹಾಗೂ ನವೋದಯ ವಿದ್ಯಾಲಯಗಳು ಇಲ್ಲಿ ಅತ್ಯುತ್ತಮ ಶಿಕ್ಷಣ ನೀಡುತ್ತಿವೆ. ಗುರುಕುಲ ವಿದ್ಯಾಲಯದ ಸಂಸ್ಥಾಪಕರಾದ ರಾಘವೇಂದ್ರರಾವ್ ದೇಸಾಯಿ ಈ ಭಾಗದಲ್ಲಿ ರಾಜಕೀಯ ಜಾಗೃತಿ ಮೂಡಿಸಿದ ನಾಯಕರು. ರಾಜ್ಯದ ಹಿರಿಯ ಐ.ಎ.ಎಸ್. ಅಧಿಕಾರಿ ಅನಿರುದ್ಧ ದೇಸಾಯಿ ಇದೇ ಊರಿನವರು.

ಇಟಗಿ ಇನ್ನೊಂದು ಐತಿಹಾಸಿಕ ಪ್ರಸಿದ್ಧ ಸ್ಥಳ. ಇದು ಬನ್ನಿಕೊಪ್ಪ ರೈಲು ನಿಲ್ದಾಣದಿಂದ 5ಕಿ.ಮೀ. ದೂರದಲ್ಲಿದೆ. ಇಲ್ಲಿರುವ ಮಹಾದೇವ ದೇವಾಲಯ ಸುಪ್ರಸಿದ್ದ. ಕ್ರಿ.ಶ. 1112ರಲ್ಲಿ ಕಲ್ಯಾಣ ಚಾಳುಕ್ಯರ ಆರನೆಯ ವಿಕ್ರಮಾದಿತ್ಯನ ದಂಡನಾಯಕ ಮಹಾದೇವ ಕಲ್ಯಾಣ ಚಾಳುಕ್ಯ ಶೈಲಿಯಲ್ಲಿ ಸುಂದರವಾಗಿ ಹಾಗೂ ಬೃಹದಾಕಾರವಾಗಿ ಇದನ್ನು ಕಟ್ಟಿಸಿದ್ದಾನೆ. ಇಲ್ಲಿ ದೊರಕಿರುವ ಒಂದು ಶಾಸನ ಈ ಮಂದಿರವನ್ನು 'ದೇವಾಲಯ ಚಕ್ರವರ್ತಿ' ಎಂದು ಬಣ್ಣಿಸಿದೆ. ದಂಡನಾಯಕ ಮಹಾದೇವ ತನ್ನ ತಂದೆಯ ಹೆಸರಿನಲ್ಲಿ ನಾರಾಯಣಗುಡಿಯನ್ನು ಕಟ್ಟಿಸಿದ್ದಾನೆ. ಡಾ. ಸಿದ್ದಯ್ಯ ಪುರಾಣಿಕರು ಇಟಗಿಯ ಮಹಾದೇವ ದೇವಸ್ಥಾನದ ಶಿಲ್ಪಕಲೆಯ ಶಿಲೆಯಲ್ಲಿ ಇದು ಕಲೆ ಆಗರ ನೋಡಾ ಎಂದಿದ್ದರೆ, ಡಾ. ಶಿವರಾಮ ಕಾರಂತರು 'ಕಲ್ಯಾಣ ಚಾಲುಕ್ಯ ಶೈಲಿಯ ಸೂಕ್ಷ್ಮ ವೈಖರಿಗೆ ಇದು ತವರುಮನೆ' ಎಂದಿದ್ದಾರೆ. 2002ರ ಏಪ್ರಿಲ್ ತಿಂಗಳಲ್ಲಿ 'ಇಟಗಿ ಉತ್ಸವ' ವಿಜೃಂಭಣೆಯಿಂದ ಜರುಗಿತು.

ಮಂಗಳೂರಿನ ಮಂಗಳೇಶ್ವರ ಜಾತ್ರೆ ಪ್ರಸಿದ್ಧವಾದುದು. ಅಳವಂಡಿ ಶಂಕರಗೌಡ, ವೀರಭದ್ರಪ್ಪ ಈರಪ್ಪ, ಪ್ರಭುರಾಜ ಲಿಂಗನಗೌಡ, ಲಿಂಗರಾಜ ದೇಸಾಯಿ, ಸುಭಾಷ ಪಾಟೀಲ, ಬಸವರಾಜ ರಾಯರೆಡ್ಡಿ, ಶಿವಶರಣಪ್ಪಗೌಡ ಪಾಟೀಲ ಮುಂತಾದವರು ಯಲಬುರ್ಗಾ ವಿಧಾನಸಭಾ ಕ್ಷೇತ್ರದಿಂದ ಚುನಾಯಿತ ಪ್ರತಿನಿಧಿಗಳು.

ಕುಷ್ಟಗಿ ಕೊಪ್ಪಳ ಜಿಲ್ಲೆಯ ಇನ್ನೊಂದು ತಾಲ್ಲೂಕು. ಕೊಪ್ಪಳದಿಂದ ಸುಮಾರು 50 ಕಿ.ಮೀ. ದೂರದಲ್ಲಿದೆ. 'ಕುಷ್ಟಗಿ'ಯ ಪ್ರಾಚೀನ ಹೆಸರು 'ಕುಂತಗಿ' ಅಥವಾ 'ಕೃಷ್ಣಗಿರಿ'ಯಾಗಿದ್ದು ಅದೇ ಮುಂದೆ ಕುಷ್ಟಗಿಯಾಯಿತೆಂಬ ಸ್ಥಳೀಯ ಅಭಿಪ್ರಾಯವಿದೆಯಾದರೂ ಇದನ್ನು ಪುಷ್ಟೀಕರಿಸಲು ಸಾಕ್ಷ್ಯಾಧಾರಗಳಿಲ್ಲ. ಕುಷ್ಟಗಿ ಪದವು ಪ್ರಾಯಶಃ ಪ್ರಕೃತಿದಾಯಕವಾಗಿದ್ದು

'ಕೃಷ್ಣಗಯಿ' ಪದದ ಅಪಭ್ರಂಶವಾಗಿದ್ದು, 'ಕಪ್ಪು ಮಣ್ಣಿನ ಭೂಮಿ' ಎಂಬ ಅರ್ಥವನ್ನು ನೀಡುತ್ತದೆ. 'ಕುಷ್ಟಗಿ' ಹೆಚ್ಚಿನ ಭೂಮಿ ಕಪ್ಪು ಭೂಮಿಯಾಗಿದ್ದು ಇದು ಅನ್ವರ್ಥಕ ನಾಮವಾಗಿದ್ದು ಸ್ವೀಕಾರಾರ್ಹವಾಗಿದೆ. ಕುಷ್ಟಗಿ, ತಾವರಗೇರಾ, ಹನುಮಸಾಗರ ಮತ್ತು ಹನಮನಾಳ-ಇವು ಹೋಬಳಿಗಳು. ತಾಲ್ಲೂಕಿನಲ್ಲಿ 176 ಹಳ್ಳಿಗಳಿವೆ. ಕೃಷ್ಣ-ತುಂಗಭದ್ರಾ ತೊರೆಗಳ ನಡುವಣ ಎಡೆಯಲ್ಲಿರುವ ಈ ಪ್ರದೇಶ ಶ್ರೀಮಂತ ಸಾಂಸ್ಕೃತಿಕ ಇತಿಹಾಸವನ್ನು ಹೊಂದಿದೆ. ಚಾರಿತ್ರಿಕವಾಗಿ ಶಿಲಾಯುಗದ ಮಾನವನಷ್ಟು ಪ್ರಾಚೀನತೆಯನ್ನು ಹೊಂದಿದ್ದು, ಪೌರಾಣಿಕವಾಗಿ ರಾಮಾಯಣದಷ್ಟು ಓಂದಕ್ಕೆ ಗುರುತಿಸಬಹುದಾದ ಐತಿಹ್ಯಗಳಿರುವುದು ಗಮನಾರ್ಹ. ತಾಲ್ಲೂಕಿನ ಹನುಮಸಾಗರ, ತಾವರಗೇರಿ, ನಿಲೋಗಲ್, ಶಾಡ್ಲಗೇರಿಗಳಲ್ಲಿ ಇತಿಹಾಸಪೂರ್ವ ಕಾಲಕ್ಕೆ ಸೇರಿದ ಅವಶೇಷಗಳು ಲಭಿಸಿವೆ. ಹನುಮಸಾಗರವು ಬೃಹತ್ ಶಿಲಾಯುಗದ ಮಾನವರ ಕಲ್ಗೋರಿಗಳಿಗೆ ಹೆಸರಾಗಿದೆ. ತಾವರಗೇರಿಯಲ್ಲಿ ಬಹಳ ಹಿಂದೆಯೇ ಡಾ|| ಸುಂದರ ನೂತನ ಶಿಲಾಯುಗ ಸಂಸ್ಕೃತಿಗೆ ಸೇರಿದ ವರ್ಣಚಿತ್ರಗಳನ್ನು ಪತ್ತೆಹಚ್ಚಿದ್ದು, ಇತ್ತೀಚೆಗೆ ವಿಲಾಸ ಮ. ಜೋಗುಳ ಅವರು ತಾವರಗೇರಿ-ಗಂಗಾವತಿ ರಸ್ತೆಯಲ್ಲಿ ತಾವರಗೇರಿಯಿಂದ ಮೂರು ಕಿ.ಮೀ. ದೂರದಲ್ಲಿರುವ ಗಾಣಗಿತ್ತಿ, ಸಂತೆ ಬರಘಾರ್, ಡೋಣಿ, ಮಾನಪ್ಪಯ್ಯ, ಒಂಟೆ, ಆನೆಗುಡ್ಡಗಳೆಂಬ ಹೆಸರುಳ್ಳ ಎತ್ತರವಾದ ಕಡಿದಾದ ಬೆಟ್ಟದ ಏಳು ವಿವಿಧ ನೆಲೆಗಳಲ್ಲಿರುವ ಕಲ್ಲಾಸರೆಗಳಲ್ಲಿ ಕೆಂಪು ವರ್ಣಚಿತ್ರಗಳನ್ನು ಪತ್ತೆಹಚ್ಚಿ ಪ್ರಕಟಿಸಿದ್ದಾರೆ. ಈ ಕಲ್ಲಾಸರೆ ವರ್ಣಚಿತ್ರಗಳು ನೂತನ ಶಿಲಾಯುಗ ಸಂಸ್ಕೃತಿಗೆ ಸೇರಿದ ಜನರ ಕಲಾಕೃತಿಗಳಾಗಿದ್ದು, ಅವುಗಳನ್ನು ಕ್ರಿ.ಪೂ. 2300-1800ರಷ್ಟು ಪ್ರಾಚೀನವೆಂದು ನಿರ್ಧರಿಸಲಾಗಿದೆ. ನಿಲೋಗಲ್ ಬಳಿ ಇರುವ ಗುಡ್ಡದಲ್ಲೂ ಕೂಡ ಶಿಲಾಯುಗ ಮಾನವನ ಕಾಲದ ಬಂಡೆಚಿತ್ರ ಹಾಗೂ ವರ್ಣಚಿತ್ರಗಳು ಪತ್ತೆಯಾಗಿವೆ.

ನೆರೆಯ ಲಿಂಗಸೂಗೂರು ತಾಲ್ಲೂಕಿನ ಮಸ್ಕಿ ಹಾಗು ಕೊಪ್ಪಳದಲ್ಲಿ ದೊರೆತ ಅಶೋಕನ ಶಾಸನಗಳ ಆಧಾರದಿಂದ ಅದೇ ಪರಿಸರದಲ್ಲಿರುವ ಕುಷ್ಟಗಿ ಪ್ರದೇಶ ಕೂಡ ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತೆಂದು ಹೇಳಬಹುದು. ಮೌರ್ಯರ ನಂತರ ಕರ್ನಾಟಕವನ್ನು ಆಳಿದ ಶಾತವಾಹನರ ಕಾಲಕ್ಕೆ ಸೇರಿದ ಅವಶೇಷಗಳು ಕುಷ್ಟಗಿ ತಾಲ್ಲೂಕಿನಲ್ಲಿ ಲಭಿಸಿದ್ದು, ಶಾಡಲಗೇರಿಯ ಧ್ರುವರಾಜ ಕೃಷ್ಣರಾವ್ ಕುಲಕರ್ಣಿ ಅವರ ಹೊಲದಲ್ಲಿ ಶಾತವಾಹನರ ಕಾಲಕ್ಕೆ ಸೇರಿದ ನಾಲ್ಕಾರು ಸೀಸದ ನಾಣ್ಯಗಳು ಹಾಗೂ ಮಡಿಕೆ ಚೂರು ಲಭಿಸಿವೆ. ಅನಂತರ ಈ ಪ್ರದೇಶ ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರ ಆಧಿಪತ್ಯಕ್ಕೆ ಒಳಪಟ್ಟಿತ್ತು. ವಿಜಯನಗರ ಕಾಲದಲ್ಲಿ ಕುಷ್ಟಗಿ ಹಾಗು ತಾವರಗೆರೆಗಳು 'ಸೀಮೆ' ಎಂಬ ಆಡಳಿತ ಘಟಕದ ಕೇಂದ್ರಗಳಾಗಿದ್ದ ಅಂಶವನ್ನು ಶಾಸನಗಳು ತಿಳಿಸುತ್ತವೆ. ವಿಜಯನಗರದ ಅರಸರ ಕಾಲಕ್ಕೆ ಸೇರಿದ ಸುಮಾರು ಹನ್ನೆರಡು ಶಾಸನಗಳು ಈವರೆಗೆ ಕುಷ್ಟಗಿ ತಾಲ್ಲೂಕಿನಿಂದ ವರದಿಯಾಗಿವೆ.

ಕ್ರಿ.ಶ. 1565ರಲ್ಲಿ ವಿಜಯನಗರ ಪತನಾನಂತರ ಈ ಪ್ರದೇಶವು ವಿಜಾಪುರದ ಆದಿಲ್ ಷಾಹಿ ಅಧೀನವಾಯಿತು. ಕ್ರಿ.ಶ. 1686ರಲ್ಲಿ ಮೊಗಲರ ಕೈವಶವಾಯಿತು. ಅನಂತರ 1724ರಲ್ಲಿ ಆಸಫ್ ಜಾಹಿಗಳ ಆಳ್ವಿಕೆಗೆ ಒಳಪಟ್ಟಿತು. 1948 ಸೆಪ್ಟೆಂಬರ್ 18ರಂದು ಹೈದರಾಬಾದ ನಿಜಾಮನಿಂದ ವಿಮೋಚನೆ ಪಡೆದು ಹೈದರಾಬಾದ್ ರಾಜ್ಯದಲ್ಲಿತ್ತು. 1956ರ ರಾಜ್ಯಗಳ ಪುನರ್ ವಿಂಗಡಣೆಯಲ್ಲಿ ವಿಶಾಲ ಮೈಸೂರಿನ ಭಾಗವಾಯಿತು.

1948ರ ವಿಮೋಚನಾ ಹೋರಾಟ ದಾಖಲಾರ್ಹವಾದ ಐತಿಹಾಸಿಕ ಸಂಗತಿ. ಸ್ವಾಮಿ ರಮಾನಂದ ತೀರ್ಥ, ಪಂ. ತಾರಾನಾಥ, ಜನಾರ್ದನ ದೇಸಾಯಿ ಮುಂತಾದವರ ನಾಯಕತ್ವದಲ್ಲಿ ಸ್ಥಳೀಯರಾದ ಭೀಮಜ್ಜ ಮುರಡಿ ಅವರ ನೈತಿಕ ಮಾರ್ಗದರ್ಶನದಲ್ಲಿ ಪುಂಡಲೀಕಪ್ಪ ಜ್ಞಾನಮೋಟೆ, ಭೀಮಾಚಾರ ಚಳಗೇರಿ, ಸೌವದಿ ಗುರಾಚಾರ್ಯ, ಜಿ.ಕೆ. ಪ್ರಾಣೇಶಾಚಾರ್ಯ, ಜಗನ್ನಾಥರಾವ್ ಬುಡಕುಂಟಿ, ವಿಜಯರಾವ್ ದೇಸಾಯಿ, ಹನುಮಂತರಾವ್ ಕಾಟಾಪುರ, ಪೂಲಚಂದ ಶೇಡಜಿ ಮುಂತಾದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಅಸಂಖ್ಯಾತ ಹಿಂಬಾಲಕರ ನೆರವಿನಿಂದ ನಿಜಾಮ ಸತ್ತೆಯನ್ನು ಅಲ್ಲಾಡಿಸಿದರು. ನೆರೆಯ ಗಜೇಂದ್ರಗಡ, ಇಳಕಲ್ ಹಾಗೂ ಹನುಮನಾಳ ಶಿಬಿರಗಳನ್ನು ರಚಿಸಿ, ಸ್ಥಳೀಯ ಸ್ವಾತಂತ್ರ್ಯ ಹೋರಾಟಗಾರರಿಗೆ ತರಬೇತಿ ಕೊಟ್ಟು ಹಿಂಸಾಕೃತ್ಯದಲ್ಲಿ ತೊಡಗಿದ್ದ ರಜಾಕಾರರನ್ನು ಬಗ್ಗುಬಡಿಯುವಲ್ಲಿ ಯಶಸ್ವಿಯಾದರು. ಹೀಗೆ ಹೈದರಾಬಾದ್ ವಿಮೋಚನಾ ಚಳುವಳಿಯಲ್ಲಿ ಕುಷ್ಟಗಿ ತಾಲ್ಲೂಕು ಮಹತ್ವದ ಪಾತ್ರವಹಿಸಿದೆ.

ಈ ತಾಲ್ಲೂಕಿನಲ್ಲಿ ಕುಷ್ಟಗಿ, ಕೋಟೆ ಲಿಂಗಗಳಿಗೆ ಪ್ರಸಿದ್ಧವಾದ ಪುರ, ಹನುಮಸಾಗರ, ಚಾರಿತ್ರಿಕ ಕೇಂದ್ರವಾದ ವಕ್ಕಣದುರ್ಗ, ಅಚನೂರು, ಪುರತಗೇರಿ, ಅಂತರಠಾಣಾ, ಚಂದಾಲಿಂಗೇಶ್ವರ ಗುಡ್ಡದ ದೇವಲಾಪೂರ ಮುಂತಾದವುಗಳು ಪ್ರಮುಖ ಸ್ಥಳಗಳು. ಗುಡ್ಡದ ದೇವಲಾಪುರದಲ್ಲಿ ಶ್ರೀರಂಗನಾಥ ದೇವಾಲಯದ ರಾಜಗೋಪುರ ಈಗ ತಾನೇ ಮುಗಿಯುತ್ತಿದ್ದು, ಇದನ್ನು ರಾಜ್ಯದ ಪ್ರಸಿದ್ಧ ಶಿಲ್ಪಿ ಕೆ. ಕಾಶೀನಾಥ ಅವರು ನಿರ್ಮಿಸಿದ್ದು, ಇದು ಹೆಚ್.ಸಿ. ನೀರಾವರಿ ಅವರ ಭಗೀರಥ ಪ್ರಯತ್ನದ ಫಲವಾಗಿದೆ.

ಈ ತಾಲ್ಲೂಕಿಗೆ ನೀರಾವರಿ ಸೌಲಭ್ಯವಿಲ್ಲ. 1,35,779 ಹೆಕ್ಟೇರ್ ಕೃಷಿ ಭೂಮಿ ಇದೆ. ಮಳೆ ಆಶ್ರಿತ : ಈ ಪ್ರದೇಶ ಯಾವಾಗಲೂ ಬರಗಾಲಕ್ಕೆ ತುತ್ತಾಗುತ್ತಿರುತ್ತದೆ. ಅತಿ ಹಿಂದುಳಿದ ತಾಲ್ಲೂಕು. ಜೋಳ, ಶೇಂಗಾ, ಸೂರ್ಯಕಾಂತಿ, ಮುಖ್ಯ ಬೆಳೆಗಳು. ಎರೆಭೂಮಿಯಲ್ಲಿ ಗೋಧಿ, ಕಡಲೆ, ಅಗಸಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ರೈತರಿಗೆ ವರ್ಷವಿಡೀ ಕೃಷಿ ಕೆಲಸ ಇಲ್ಲದ ಕಾರಣ ಬೇರೆ ಕಡೆ 'ಗುಳೆ' ಹೋಗುವುದು ಸಾಮಾನ್ಯವಾದ ಚಿತ್ರಣ. ಇಲ್ಲಿ ಶೇ. 80ಕ್ಕಿಂತಲೂ ಹೆಚ್ಚು ಜನ ಬಡತನ ರೇಖೆಗಿಂತ ಕೆಳಮಟ್ಟದಲ್ಲಿದ್ದಾರೆ.

ಅಂದಾನೆಪ್ಪ, ಚಿನಿವಾಲರ ಪುಂಡಲೀಕಪ್ಪ ಜ್ಞಾನಮೋಟೆ, ಕಾಂತರಾವ್ ದೇಸಾಯಿ,

ಎಂ. ಗಂಗಣ್ಣ, ಹನುಮಗೌಡ ಪಾಟೀಲ, ಎಂ.ಎಸ್. ಪಾಟೀಲ, ಕೆ. ಶರಣಪ್ಪ, ಹಸನ್‌ಸಾಬ ಯಲಬುರ್ಗಿ ಮುಂತಾದವರು ವಿಧಾನಸಭೆಗೆ ಈ ಕ್ಷೇತ್ರದ ಪ್ರತಿನಿಧಿಗಳಾಗಿ ಆಯ್ಕೆಯಾಗಿದ್ದಾರೆ.

## ಉಪ್ಪಾರ ಸಮಾಜ

ಕೊಪ್ಪಳ ಜಿಲ್ಲೆಯಲ್ಲಿ ಉಪ್ಪಾರರ ಜನಸಂಖ್ಯೆ ಸಾಕಷ್ಟು ಪ್ರಮಾಣದಲ್ಲಿದೆ. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅವರು ಇತರರೊಂದಿಗೆ ಸಂಪೂರ್ಣವಾಗಿ ಬೆರೆತುಹೋಗಿದ್ದಾರೆ. ಪ್ರತಿ ತಾಲ್ಲೂಕಿನಲ್ಲಿನ ಉಪ್ಪಾರರ ಹೆಚ್ಚಿನ ವಿವರಗಳನ್ನು ಇಲ್ಲಿ ಪರಿಶೀಲಿಸಬಹುದು.

ಕೊಪ್ಪಳ ತಾಲ್ಲೂಕಿನ ಕೊಪ್ಪಳದಲ್ಲಿ 68 ಕುಟುಂಬಗಳು, ಕವಲೂರು 223, ಗಟ್ಟಿರಡ್ಡಿಹಾಳ 69, ರಘುನಾಥನಹಳ್ಳಿ 24, ಹಲವಾಗಲಿ 11, ಅಳವಂಡಿ 94, ಭೈರಾಪುರ 92, ಬುಚಿನಳ್ಳಿ 14, ಬೆಟಗೇರಿ 13, ನೀರಲಗಿ 52, ಹಿರೇ ಸಿಂದೋಗಿ 121, ಹಂದ್ರಾಳ 9, ವದಗನಹಾಳ 91, ಕೋಳೂರು 43, ಕಾಟ್ರಳ್ಳಿ 93, ಗುನ್ನಳ್ಳಿ 44, ಹೊರತಟ್ನಾಳ 183, ಮುದ್ಲಾಪೂರ 29, ನರೆಗಲ್ಲ 37, ಭಾಗ್ಯನಗರ 36, ಹೂವಿನಾಳ 4, ಗೊಂಡಬಾಳ 65, ಮುದ್ದಾಬಳ್ಳಿ 8, ಮೆಳಿಕೇರಿ 36, ಹೊಸಳ್ಳಿ 175, ಚಿಕ್ಕಬಗನಾಳ 66, ಹಿರೇಬಗನಾಳ 18, ಗಿಣಿಗೇರ 186, ಹಾಲಹಳ್ಳಿ 18, ಕನಕಾಪೂರ 25, ತಾಳಕನಕಾಪುರ 41, ಬೇವಿನಹಳ್ಳಿ 7, ಹಿಟ್ನಾಳ 92, ಶಾಪೂರ 49, ಹುಲಿಗಿ 44, ಟಿ.ಬಿ. ಡ್ಯಾಂ 62, ಅಗಳಕೇರಿ 63, ಶಿವಪುರ 87, ಹೊಸಶಿವಪುರ 51, ಕೆರೆಹಳ್ಳಿ 15, ಬಂಡಿಹರ್ಲಾಪುರ 59, ಸಾಣಾಪೂರ 22, ಕಿನ್ನಾಳ 113, ಬುಡಶೆಟ್ನಾಳ 73, ಹರ್ಲಾಪುರ 29, ಕಲಕೇರಿ 29, ಯಲಮಗೇರಿ 7, ಜಾಮಲಾಪುರ 163, ಜಿನ್ನಾಪುರ 37, ಕಂಪಸಾಗರ 36, ನಿಂಗಾಪುರ 48, ಹೊಳೆಮುನ್ನಾಪುರ 28 ಹೀಗೆ ಮೇಲೆ ನಮೂದಿಸಿದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 3,100 ಉಪ್ಪಾರ ಕುಟುಂಬಗಳಿದ್ದು, 19,158 ಉಪ್ಪಾರ ಜನಸಂಖ್ಯೆ ಇದೆ ಎಂದು ಇತ್ತೀಚೆಗೆ ಮಾಡಿದ ಸಮೀಕ್ಷೆಯೊಂದು ತಿಳಿಸುತ್ತದೆ.

ಗಂಗಾವತಿ ತಾಲ್ಲೂಕಿನ ಗಂಗಾವತಿ ಪಟ್ಟಣದಲ್ಲಿ 300, ವಿರಾಪುಪೂರ 50, ಜಂತಕಲ್ 50, ಚಿಕ್ಕಜಂತಕಲ್ 25, ಹೊಸಳ್ಳಿ 50, ಆಶಾಳ 50, ಕೆಸರಟ್ಟಿ 50, ಹಣವಾಳ 25, ಶ್ರೀರಾಮನಗರ 15, ಜಂ. ಕಲ್ಲುಡಿ 100, ಹೊಸಕೇರಾ 25, ಢಣಾಪುರ 25, ಜಿ। ಕಲ್ಲುಡಿ 50, ಹಿರೇಡಂಕನಕಲ್ 200, ಚಿಕ್ಕಡಂಕನಕಲ್ 200, ಸೋಮನಳ್ಳಿ 50, ಹುಳ್ಳಿಹಾಳ 50, ಹಗೇದಾಳ 100, ಆದಾಪೂರ 250, ಈಳಿಗನೂರು 100, ಮರ್ಲಾನಹಳ್ಳಿ 50, ಯರಡೋಣಿ 50, ಮರಳಿ 25, ಕಾರಟಗಿ 100, ಆಗೋಲಿ 100, ಕನಕಗಿರಿ 100, ತಿಪ್ಪನಾಳ 50, ಬಸಾಪಟ್ಟಣ 10, ಸಂಗಾಪುರ 50, ಮಲ್ಲಾಪುರ 20, ಕೋರಂ ಕ್ಯಾಂಪ್ 200, ಸಾಂಪೂರ 20, ಕಲಕೇರಿ 200, ಚೆನ್ನಳ್ಳಿ 100, ಉಳೆಗೂರು 25, ಬೆನ್ನೂರು 25, ಮುಷ್ಟೂರು 25, ಸಿದ್ದಾಪುರ 10, ಸಿದ್ರಾಂಪುರ 15, ಬೇವಿನಾಳ 25, ಮೈಲಾಪುರ 50, ನವಲಿ 10, ಉಳ್ಳೆದಗ್ಗಿ 10. ಹೀಗೆ ತಾಲ್ಲೂಕಿನಲ್ಲಿ ಸುಮಾರು 3150 ಉಪ್ಪಾರ ಕುಟುಂಬಗಳಿದ್ದು 20150 ಜನಸಂಖ್ಯೆ ಇದೆ ಎಂದು ಹೇಳಲಾಗಿದೆ.

ಯಲಬುರ್ಗಾ ತಾಲ್ಲೂಕಿನ ಯಲಬುರ್ಗಾ ಟೌನಿನಲ್ಲಿ 72, ಬಳ್ಳೂಟಗಿಯಲ್ಲಿ 215, ಮಕಸಮುದ್ರದಲ್ಲಿ 58, ಸಂಗನಾಳದಲ್ಲಿ 85, ರಾಜೂರಿನಲ್ಲಿ 25, ಕಲ್ಲೂರು 10, ಕೋನಾಪುರ 39, ಯಡಿಯಾಪೂರ 65, ಚಂಡೂರು 19, ಬೆಣಕಲ್ 171, ಹಂಚಿನಾಳ 74, ಇಟಗಿ 268, ಮಂಡಲಗಿರಿ 55, ಮಾಳೆಕೊಪ್ಪ 39, ಸೋಂಪುರ 19, ಬೆಳಗೇರಿ 38, ಚಿಕ್ಕಬಿಡನಾಳ 37, ಕರ್ಕಿಹಳ್ಳಿ 38, ಮಂಗಳೂರ 74, ಬೇವೂರ 47, ಹೊಸ್ನುಂಚಿ 18, ಬನ್ನಿಕೊಪ್ಪ 5. ಅರಕೇರಿ 29, ಕವಳಿಕೇರಿ 19, ಚನಪನಹಳ್ಳಿ 18, ನಿಟ್ಟಾಲಿ 19, ಚಿಕಮ್ಯಾಗೇರಿ 74, ಗದಗೇರಿ 13, ಕುಡಗುಂಟಿ 14, ಕಿಟಗೇರಿ 28. ಹೀಗೆ ಮೇಲೆ ನಮೂದಿಸಿದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 1,750 ಉಪ್ಪಾರ ಕುಟುಂಬಗಳಿದ್ದು, 11,375 ಉಪ್ಪಾರ ಜನಸಂಖ್ಯೆ ಇದೆ ಎಂದು ಹೇಳಬಹುದು.

ಕುಷ್ಟಗಿ ತಾಲ್ಲೂಕಿನಲ್ಲಿ ಬೊಮ್ಮನಾಳ 30, ವಕ್ಕಣದುರ್ಗ 98, ನಿಲೋಗಲ್ 265, ಮಿಟ್ಲಕೋಡ 95, ತುಗ್ಗಲಡೋಣಿ 98, ಶಾಡ್ಲಗೇರಿ 14, ಹನಮನಾಳ 34, ಕಡಿವಾಲ 44, ಪಡಚಿಂತಿ 124, ಮಾಲಗಿತ್ತಿ 392, ವಾರಿಕಲ್ 3, ಹಿರೇಗೊಣ್ಣಾಗರ 24, ಮಾಸ್ತಕಟ್ಟಿ 23, ಜಾಹಗೀರಗುಡದೂರ 187, ಗುಡ್ಡದ ದೇವಲಾಪುರ 73, ಮಾನುಟಗಿ 29, ಯರಗೇರಿ 19, ಕುಂಬಳಾವತಿ 34, ಮಡಿಕ್ಕೇರಿ 8, ಬೆನಕನಾಳ 14, ಜುಂಜಲಕೊಪ್ಪ 44, ಹನುಮಸಾಗರ 82, ಸೇಬಿನಕಟ್ಟೆ 34, ಹೊಸಳ್ಳಿ 195, ಮಲಕಾಪುರ 10, ಅಡವಿಬಾವಿ 9, ಕಬ್ಬರಗಿ 29, ಕಾಟಾಪುರ 6, ಬಂಡರಗಲ್ 47, ಚಳಗೇರಿ 123, ಹಿರೇನಂದ್ಯಾಳ 80, ಹಿರೇಬನ್ನಿಗೋಳ 43, ಕೊರಡಕೇರಾ 20, ಬ್ಯಾಲಾಳ 28, ಮದಲಗಟ್ಟಿ 9, ನಿಡಸೇಸಿ 121, ಕುಷ್ಟಗಿ 18, ವಣಗೇರಿ 131, ಕ್ಯಾದಿಗುಂಪಿ 32, ಕೆಸೂರು 15, ಬ್ಯಾಲಾಳ 10, ಬೆಂಚಮಟ್ಟಿ 24, ಕಲಿಕೇರಿ 9, ತಾವರಗೇರಿ 95, ಕಳಮಳ್ಳಿ 28, ನಂದಾಪುರ 15, ತಳಗೇರಿ ಗಡಪ 23, ಹುಳಿಮಸರು 85, ಮನ್ನಾಪೂರ 2, ಗುಮಗೇರಿ 2, ಚಿಕ್ಕತಮ್ಮಿನಾಳ 15. ಹೀಗೆ ಮೇಲೆ ನಮೂದಿಸಿದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 3,065 ಉಪ್ಪಾರ ಕುಟುಂಬಗಳಿದ್ದು, 23,150 ಉಪ್ಪಾರ ಜನಸಂಖ್ಯೆ ಇದೆ ಎಂದು ಇತ್ತೀಚಿನ ಸಮೀಕ್ಷೆಯಿಂದ ತಿಳಿದುಬರುತ್ತದೆ.

ಒಟ್ಟಾರೆ ಕೊಪ್ಪಳ ಜಿಲ್ಲೆಯಲ್ಲಿ ಸುಮಾರು 11065ಕ್ಕೂ ಅಧಿಕ ಉಪ್ಪಾರ ಕುಟುಂಬಗಳಿದ್ದು 73,850 ಕ್ಕೂ ಹೆಚ್ಚು ಉಪ್ಪಾರ ಜನಸಂಖ್ಯೆ ಇದೆ ಎಂದು ಹೇಳಬಹುದು.

ಕೊಪ್ಪಳ ಜಿಲ್ಲೆಯಲ್ಲಿ ಉಪ್ಪಾರರನ್ನು 'ಮೇಲು ಸಕ್ಕರೆ'ಯವರೆಂದು ಕರೆಯಲಾಗುತ್ತದೆ. ಕೊಪ್ಪಳ ಜಿಲ್ಲೆಯ ಉಪ್ಪಾರರು ಸಾಮಾನ್ಯವಾಗಿ ಕನ್ನಡವನ್ನೇ ಹೆಚ್ಚಾಗಿ ಬಳಸುತ್ತಾರೆ. ಅಗತ್ಯವಿದ್ದೆಡೆ ತೆಲುಗು ಮತ್ತು ಹಿಂದಿ ಭಾಷೆಗಳನ್ನು ಬಳಸುತ್ತಾರೆ.

ಜಿಲ್ಲೆಯ ಹೆಚ್ಚಿನ ಉಪ್ಪಾರರು ಕೃಷಿಕರು. ಸಣ್ಣ ಹಿಡುವಳಿದಾರರು. ಗಂಗಾವತಿ ತಾಲ್ಲೂಕಿನಲ್ಲಿ ಉಪ್ಪಾರ ಸಮುದಾಯದವರು ತಕ್ಕ ಪ್ರಮಾಣದಲ್ಲಿ ತರೀ ಜಮೀನು ಮತ್ತು

ವ್ಯಾಪಾರ ವೃತ್ತಿಯನ್ನು ಹೊಂದಿದ್ದಾರೆ. ಉಳಿದ ತಾಲ್ಲೂಕುಗಳ ಉಪ್ಪಾರರಲ್ಲಿ ಶೇ. 80ಕ್ಕಿಂತಲೂ ಹೆಚ್ಚಿನವರು ಕೃಷಿ ಕಾರ್ಮಿಕರು, ಕಾರ್ಮಿಕರು ಹಾಗು ಬಡತನದ ರೇಖೆಗಿಂತ ಕೆಳಮಟ್ಟದಲ್ಲಿದ್ದಾರೆ.

ರಾಜ್ಯದ ಸರಾಸರಿ ಸಾಕ್ಷರತೆ 67.04 ಇದ್ದರೆ ಉಪ್ಪಾರ ಜನಾಂಗದ ಸಾಕ್ಷರತೆ ಜಿಲ್ಲೆಯಲ್ಲಿ ಸರಾಸರಿ ಶೇ. 35 ಕ್ಕಿಂತಲೂ ಕಡಿಮೆ ಇದೆ ಎಂದು ಸಮೀಕ್ಷೆಯಿಂದ ತಿಳಿದುಬರುತ್ತದೆ. ಹೆಣ್ಣು ಮಕ್ಕಳ ಸಾಕ್ಷರತೆ ಶೇ. 20ಕ್ಕಿಂತ ಕಡಿಮೆ ಇದ್ದು ಇದು ಶೋಚನೀಯ.

ಕೊಪ್ಪಳ ಜಿಲ್ಲೆಯಲ್ಲಿ ಉಪ್ಪಾರ ಸಂಘವಿದ್ದು ಅದರ ಪ್ರಸ್ತುತ ಅಧ್ಯಕ್ಷರು ಶಿವಲಿಂಗಪ್ಪ ಶಿದ್ನೆಕೊಪ್ಪ. ಪ್ರತಿ ವರ್ಷ ಸಭೆ ಸೇರಿ ಚರ್ಚಿಸಿ, ಜನಾಂಗದ ಆಗುಹೋಗುಗಳನ್ನು ಪರಿಶೀಲಿಸಿ ನಿರ್ಣಯಗಳನ್ನು ತೆಗೆದುಕೊಳ್ಳುತ್ತಿದ್ದಾರೆ. ತಾಲ್ಲೂಕಿನಲ್ಲಿ ಈ ಹಿಂದೆ ರಾಜ್ಯಮಟ್ಟದ ಜಾಗೃತ ಸಮ್ಮೇಳನವನ್ನು ಬ್ರ. ಲೇಪಾಕ್ಷ ಸ್ವಾಮಿಗಳ ಸಾನ್ನಿಧ್ಯದಲ್ಲಿ ಯಶಸ್ವಿಯಾಗಿ ನಡೆಸಿದ್ದಾರೆ. ರಾಜ್ಯ ಸಂಘದ ಪದಾಧಿಕಾರಿಗಳು ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು.

ಕೊಪ್ಪಳ ತಾಲ್ಲೂಕು ಉಪ್ಪಾರ ಸಂಘದ ಅಧ್ಯಕ್ಷರು ವೆಂಕನಗೌಡ ಡಿ. ಪಾಟೀಲ, ಪ್ರಧಾನ ಕಾರ್ಯದರ್ಶಿ ಮರ್ದಾನಪ್ಪ ಬಿಸರಳ್ಳಿ, ಉಪಾಧ್ಯಕ್ಷರು ಹೆಚ್.ಆರ್. ಪಾಟೀಲ ಗಿಣಗೇರಿ. 21 ಜನ ಸಮಿತಿಯ ಸದಸ್ಯರಿರುತ್ತಾರೆ. ತಾಲ್ಲೂಕಿನ ಪ್ರಮುಖರಾದ ಕರಿಯಪ್ಪ ಹೊಟ್ಟಿ ನಿಂಗಾಪೂರ ಮಾಜಿ ಭೂನ್ಯಾಯ ಮಂಡಳಿಯ ಸದಸ್ಯರು, ಫಕೀರಪ್ಪ ನಿವೃತ್ತ ಶಿಕ್ಷಕರು ವದಗನಾಳ, ಯಂಕಪ್ಪ ಕ್ಯಾಸಪ್ಪನವರ ಮಾಜಿ ಪ್ರಧಾನರು ಹೊಸಳ್ಳಿ, ದತ್ತಪ್ಪ ಕವಲೂರ ಮಾಜಿ ಪ್ರಧಾನರು ಗಿಣಿಗೇರಿ, ಪಾಂಡಪ್ಪ ಹೊಸೂರು ಗಿಣಿಗೇರಿ, ಯಂಕಪ್ಪ ಹೊಟ್ಟಿ ಮಾಜಿ ಪ್ರಧಾನರು ನಿಂಗಾಪೂರ, ವೆಂಕೋಬ ದಳಪತಿ ಬಂಡಿಹರ್ಲಾಪುರ, ಶರಣಪ್ಪ ಶಿದ್ನೆಕೊಪ್ಪ ಮಾಜಿ ಜಿಲ್ಲಾಪಂಚಾಯ್ತಿ ಸದಸ್ಯರು, ಗೋಣೇಶ ಕಟ್ಟಿಮನಿ ಅಳವಂಡಿ ಮಾಜಿ ರೈಲ್ವೆ ಬೋರ್ಡ್ ಸದಸ್ಯರು, ಹನುಮಂತಪ್ಪ ಚೌಡಕಿ ಶಿಕ್ಷಕರು ಹಲವಾಗಲಿ, ಹೊನ್ನಪ್ಪ ಗದ್ದಿ ಸಿಂದೋಗಿ, ಚಂದ್ರಪ್ಪ ಸಿಂದೋಗಿ, ಮೈಲಾರಪ್ಪ ಕಿನ್ನಾಳ ಮುಂತಾದವರು ಸಮಾಜದ ಮುಖಂಡರು ಹಾಗು ಹಿತಚಿಂತಕರು.

ವೆಂಕನಗೌಡ ಡಿ. ಪಾಟೀಲ ತಾಲ್ಲೂಕಿನಲ್ಲಿ ನೂರಾರು ವಿವಾಹಗಳನ್ನು ಮಾಡಿಸಿದ್ದಾರೆ. ಗವಿಸಿದ್ದೇಶ್ವರರು ಹುಟ್ಟಿದಂತಹ ಮಂಗಳಾಪುರ ಗ್ರಾಮದಲ್ಲಿ ಪೂಜಾ ಮಂದಿರವನ್ನು ನಿರ್ಮಿಸಿ ಪೂಜೆಯ ವ್ಯವಸ್ಥೆಯನ್ನು ಮಾಡಿಸಿದ್ದಾರೆ. ಸುಮಾರು ಮೂರು ದಶಕಗಳಿಂದ ರಾಜಕೀಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು, ಕೊಪ್ಪಳ ವ್ಯವಸಾಯ ಸೇವಾ ಸಹಕಾರ ಸಂಘದ ಅಧ್ಯಕ್ಷರಾಗಿ, ತಾಲ್ಲೂಕು ಬ್ಲಾಕ್ ಕಾಂಗ್ರೆಸ್ ಉಪಾಧ್ಯಕ್ಷರಾಗಿ, ಅಧ್ಯಕ್ಷರಾಗಿ ರಾಜ್ಯ ಉಪ್ಪಾರ ಸಂಘದ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಮರ್ದಾನಪ್ಪ ಬಿಸರಳ್ಳಿ ಕೊಪ್ಪಳ ತಾಲ್ಲೂಕು ಯುವ ಕಾಂಗ್ರೆ ಅಧ್ಯಕ್ಷರಾಗಿ, ಸಹಕಾರಿ ಸಂಘದ ಸದಸ್ಯರಾಗಿ, ರಾಜ್ಯ ಉಪ್ಪಾರ ಸಂಘದ ಉಪಾಧ್ಯಕ್ಷರಾಗಿ, ಕೊಪ್ಪಳ ಜಿಲ್ಲಾ ಕೋ.

ಆಪರೇಟಿವ್ ಯೂನಿಯನ್ ಉಪಾಧ್ಯಕ್ಷರಾಗಿ, ಕೊಪ್ಪಳ ಜಿಲ್ಲಾ ಕಾಂಗ್ರೆ ಸಂಘಟನಾ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ.

ರಾಘವೇಂದ್ರ ಪಾಟೀಲ ಗಿಣಗೇರಿ, ರಾಮಣ್ಣ ವದಗನಹಾಳ ಈ ತಾಲ್ಲೂಕಿನ ಇಂಜಿನಿಯರುಗಳು. ಭಾಗ್ಯನಗರದ ರಾಮಚಂದ್ರ ಉಪ್ಪಾರ 'ಆಕಾಶವಾಣಿ' ಕಲಾವಿದರು. ಅನೇಕ ರಾಜ್ಯಮಟ್ಟದ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತ ಬಂದಿದ್ದಾರೆ. ತಾಲ್ಲೂಕಿನಲ್ಲಿ ಅನೇಕ ನಿರುದ್ಯೋಗಿ ವಿದ್ಯಾವಂತರು ಹಾಗೂ ಪದವೀಧರರು ಇದ್ದಾರೆ. ಶೇಕಡ ಎರಡರಷ್ಟು ವ್ಯಾಪಾರಸ್ಥರಿದ್ದಾರೆ.

ಉಪ್ಪಾರ ಸಮುದಾಯದವರು ನಡೆಸುವ ವಿದ್ಯಾಸಂಸ್ಥೆಗಳಾಗಲಿ, ಆಸ್ಪತ್ರೆಗಳಾಗಲಿ, ಕೈಗಾರಿಕಾ ಅಥವಾ ಮಹತ್ವದ ಇನ್ನಾವುದೇ ಸಂಸ್ಥೆಗಳಾಗಲಿ ಇರುವುದಿಲ್ಲ. ವಿದ್ಯಾರ್ಥಿನಿಲಯಗಳು ಕೂಡ ಇಲ್ಲ.

ಗಂಗಾವತಿ ತಾಲ್ಲೂಕಿನಲ್ಲಿ ತಾಲ್ಲೂಕು ಉಪ್ಪಾರ ಸಂಘ ಇದೆ. ಅದರ ಪ್ರಸ್ತುತ ಅಧ್ಯಕ್ಷರು ದುರ್ಗಪ್ಪ ಅಮರಜ್ಯೋತಿ, ಮಾಜಿ ಪುರಸಭಾ ಅಧ್ಯಕ್ಷರು. ಎ. ಜಂಬಣ್ಣ, ದಾನಪ್ಪ ಮಾಜಿ ಪುರಸಭೆ ಅಧ್ಯಕ್ಷರು, ರಾಮಣ್ಣ ಉಪ್ಪಾರ, ಶಿವಣ್ಣ ಚಳ್ಳಕೆರೆ ಇವರ ನೇತೃತ್ವದಲ್ಲಿ ಸಂಘದ ಚಟುವಟಿಕೆಗಳು ನಡೆಯುತ್ತವೆ. ಸಂಘಕ್ಕೆ ಸ್ವಂತ ಸ್ಥಳವಿದ್ದು ಕಟ್ಟಡವೂ ಇದೆ. ತಾಲ್ಲೂಕಿನಲ್ಲಿ ಉಪ್ಪಾರ ಸಮಾಜದವರು ಅನೇಕರು ವ್ಯಾಪಾರ ವೃತ್ತಿಯನ್ನು ಕೈಗೊಂಡಿದ್ದು, ಆರ್ಥಿಕವಾಗಿ ಮುಂದುವರಿದಿದ್ದಾರೆ. ಉಪ್ಪಾರ ಸಮುದಾಯದವರು ವಿದ್ಯಾಸಂಸ್ಥೆ, ರೈಸ್‌ಮಿಲ್, ಫೈನಾನ್ಸ್, ಕೈಗಾರಿಕೆ ಹಾಗು ಇತರ ಸಂಸ್ಥೆಗಳನ್ನು ಹೊಂದಿದ್ದಾರೆ.

ಜಂತಕಲ್ ಹನಮಂತಪ್ಪ, ವಿ. ದುರಗಪ್ಪ, ವಿ. ದಾನಪ್ಪ ಅವರುಗಳು ಗಂಗಾವತಿಯ ಪುರಸಭೆಯ ಮಾಜಿ ಅಧ್ಯಕ್ಷರು. ದಿ। ಕಟ್ಟಿಮನಿ ಈರಪ್ಪ, ಇಂಗಳಗಿ ರಂಗಪ್ಪ, ದಿ। ವೆಂಕಟಾಪುರ ಅಯ್ಯಣ್ಣ, ಗಂಗಾವತಿಯ ಪುರಸಭೆಯ ಮಾಜಿ ಸದಸ್ಯರು. ವಿ. ನರಸಪ್ಪ ಗಂಗಾವತಿ ಪುರಸಭೆಯ ಸ್ಥಾಯಿ ಸಮಿತಿಯ ಮಾಜಿ ಅಧ್ಯಕ್ಷರು. ನಾಗಮ್ಮ ಬುಡ್ಡಪ್ಪ ವಿರುಪಾಪುರ ಮಾಜಿ ಸದಸ್ಯರು.

ಎ. ಜಂಬಣ್ಣ ಅವರು ಅಕ್ಕಿ ಹಾಗು ಆಯಿಲ್‌ಮಿಲ್ ಮಾಲೀಕರು ಹಾಗು ತಾಲ್ಲೂಕು ಉಪ್ಪಾರ ಸಂಘದ ಕಟ್ಟಡ ದಾನಿಗಳು. ಇವರ ಹೆಸರಿನಲ್ಲಿ ಹಿರಿಯ ಪ್ರಾಥಮಿಕ ಶಾಲೆ ಗಂಗಾವತಿಯಲ್ಲಿದೆ. ವಿ. ದುರಗಪ್ಪ ಅಕ್ಕಿಗಿರಣಿ ಮಾಲೀಕರು, ದಾನಿಗಳು. ವಿ. ದಾನಪ್ಪ, ವಿ. ರಾಮಲಿಂಗಪ್ಪ, ವಿ. ಕೆಂಚಪ್ಪ, ಎಸ್. ಅಮರೇಶಪ್ಪ ದಲಾಲಿ ಅಂಗಡಿ ಮಾಲೀಕರು. ವಿ. ರಾಮಣ್ಣ ಫೈನಾನ್ಸಿಯರ್ ಹಾಗು ರಾಜಕೀಯ ಮುಖಂಡರು. ಎ. ಲಕ್ಷ್ಮಣ ಕೂಡ ಫೈನಾನ್ಸಿಯರ್. ಬಿ. ವೆಂಕೋಬಾ ಚಿಕ್ಕಜಂತಕಲ್ ಮತ್ತು ವಿ. ವೆಂಕೋಬಾ ವಿ.ಎಸ್.ಎಸ್.ಎನ್. ನ ಮಾಜಿ ಅಧ್ಯಕ್ಷರು. ಎಲ್.ಬಿ. ಪಾಟೀಲ, ಪ್ರಭು ಚಿಕ್ಕಜಂತಕಲ್, ವೆಂಕೋಬಾ ಕಲ್ಗುಡಿ, ಶರಣಪ್ಪ ಮಿಣಜಗಿ, ಬಸವರಾಜ ವೆಂಕಟಾಪುರ ಚಿಕ್ಕಜಂತಕಲ್ ವಕೀಲರು. ದೇವಪ್ಪ ತಿಮ್ಮಪ್ಪ

ಶಿಕ್ಷಕರು, ಅಂಜನಪ್ಪಕಾರಟಗಿ, ಆಂಜನೇಯ ಸರ್ವೆಯರ್, ಎ. ವೆಂಕಪ್ಪ, ಬಿ. ಹನಮಂತಪ್ಪ ಕಾರ್ಯದರ್ಶಿಗಳು. ಶಂಕ್ರಪ್ಪ ಗಡ್ಡಿ ಎಂ.ಡಿ., ಹನಮಂತಪ್ಪ ವಣಗೇರಿ, ಹನಮಂತಪ್ಪ ಸುರಪುರ, ಶಂಕ್ರಪ್ಪ ಉಪ್ಪಾರ, ರಾಮನಗೌಡ, ವೈ. ವೆಂಕಟೇಶ್, ಕಟ್ಟೀಮನಿ ಫಕೀರಪ್ಪ ಇಂಗಳಗಿ ಫಕೀರಪ್ಪ, ಶಿವಣ್ಣ ಚಳ್ಳಕೆರೆ ಗ್ಯಾರೇಜ್ ಮಾಲೀಕರು, ಯು. ಯಮನೂರಪ್ಪ ಹುಲಗಿ, ಯಮನೂರಪ್ಪ ಉಳ್ಳೂರು, ನವಲಿ ಭಾಗಪ್ಪ, ಕಟ್ಟೀಮನಿ ತಿಪ್ಪಣ್ಣ, ಇಂಗಳಗಿ ತಿಮ್ಮಪ್ಪ, ಹುಲಗಿ ಹನಮಂತಪ್ಪ, ಡಾ|| ಆನಂದ ಮಾವಳ್ಳಿ, ಮಾನಳ್ಳಿ ಹನಮಂತಪ್ಪ, ಎ. ವಾಸುದೇವ, ಮಹೇಶ ಸಾಗರ, ಕೆ.ಆರ್. ಸಾಗರ, ನಾಮದೇವಸಾಗರ ವಿ. ಕಂಪ್ಲೆಪ್ಪ, ಹೊಸಮನಿ ರಾಮಣ್ಣ, ಇಟಗಿ ಲಿಂಗಪ್ಪ, ಕೆ.ಎಸ್.ಬಿ. ಯಮನೂರಪ್ಪ, ವಿ. ನಾರಾಯಣಪ್ಪ, ವಿ. ತಿರುಪತೆಪ್ಪ ಮುಂತಾದವರು ತಾಲ್ಲೂಕಿನ ಉಪ್ಪಾರ ಸಮಾಜದ ಪ್ರಮುಖರು ಹಾಗೂ ಹಿತಚಿಂತಕರು.

ಗಂಗಾವತಿ ತಾಲ್ಲೂಕಿನಲ್ಲಿ ಮುಖ್ಯವಾಗಿ ಶಿಕ್ಷಣಕ್ಕೆ ಹೆಚ್ಚು ಗಮನ ನೀಡಬೇಕಾಗಿದೆ. ಹಾಸ್ಟೆಲ್ ಸೌಲಭ್ಯ, ಭಗೀರಥ ಕಲ್ಯಾಣಮಂಟಪ, ಪ್ರೌಢಶಾಲೆ ಇತ್ಯಾದಿಗಳ ಅವಶ್ಯಕತೆ ಇದೆ.

ಯಲಬುರ್ಗಾ ತಾಲ್ಲೂಕಿನಲ್ಲಿ ಉಪ್ಪಾರ ಸಂಘ ಇದೆ. ಹಿಂದೆ ರಾಜ್ಯಮಟ್ಟದ ಜಾಗೃತ ಸಮ್ಮೇಳನ ಇಲ್ಲಿ ಯಶಸ್ವಿಯಾಗಿ ಜರುಗಿತು. ಬ್ರ. ಲೇಪಾಕ್ಷ ಸ್ವಾಮಿಗಳು ಸಾನ್ನಿಧ್ಯ ವಹಿಸಿದ್ದ ಈ ಸಮ್ಮೇಳನದಲ್ಲಿ ರಾಜ್ಯ ಸಂಘದ ಅಧ್ಯಕ್ಷರಾಗಿದ್ದ ಡಿ.ಎಸ್. ರಾಮಪ್ಪ ಮತ್ತು ಇತರ ಪದಾಧಿಕಾರಿಗಳು ಭಾಗವಹಿಸಿದ್ದರು. ತಾಲ್ಲೂಕಿನಲ್ಲಿ ಶಿಕ್ಷಕರು, ಸೇನಾಯೋಧರು, ಪೊಲೀಸ್ ಇಲಾಖೆ, ಸಹಕಾರಿ ಸಂಘ ಇತ್ಯಾದಿಗಳಲ್ಲಿ ಉಪ್ಪಾರರು ಕಾರ್ಯನಿರ್ವಹಿಸುತ್ತಿದ್ದಾರೆ. ಉಪ್ಪಾರ ಸಮುದಾಯಕ್ಕೆ ಸೇರಿದ ವಿದ್ಯಾಸಂಸ್ಥೆ, ಆಸ್ಪತ್ರೆ, ಕೈಗಾರಿಕೆ, ವಿದ್ಯಾರ್ಥಿನಿಲಯ ಹಾಗೂ ಇತರ ಸಂಸ್ಥೆಗಳು ತಾಲ್ಲೂಕಿನಲ್ಲಿ ಇರುವುದಿಲ್ಲ.

ಯಲಬುರ್ಗಾ ತಾಲ್ಲೂಕು ಉಪ್ಪಾರ ಸಂಘದ ಪದಾಧಿಕಾರಿಗಳು, ಯಲ್ಲಪ್ಪ ಶಿಕ್ಷಕರು ಯಲಬುರ್ಗಾ, ನಿಂಗಪ್ಪ ಕುಕನೂರು ಸಾ| ಇಟಗಿ, ಹನುಮಂತಪ್ಪ ಯಡಿಯಾಪೂರ, ಹನಮಂತಪ್ಪ ಮಂಡಲಗೇರಿ ಐಟಿಐ ಕಾರ್ಯದರ್ಶಿ, ರಾಮಣ್ಣ ದೇವರಮನಿ ಅಂಚೆ ಇಲಾಖೆ, ಬಸಪ್ಪ ತುಮ್ಮರಗುದ್ದಿ ಪ್ರಗತಿಪರ ರೈತರು, ತಿಮ್ಮಪ್ಪರಾಟಿ, ಮುದಿಯಪ್ಪ ಚನ್ನಬಸಪ್ಪನವರ, ಲಕ್ಷ್ಮಣ ಗ್ರಾಮಪಂಚಾಯ್ತಿ ಮಾಜಿ ಸದಸ್ಯರು, ಶಿವಪುತ್ರಪ್ಪ ಗ್ರಾಮಪಂಚಾಯ್ತಿ ಮಾಜಿ ಸದಸ್ಯರು ಬೆಣಕಲ್ ಮುಂತಾದವರು.

ಕುಷ್ಟಗಿ ತಾಲ್ಲೂಕಿನಲ್ಲಿ ಉಪ್ಪಾರ ಜನಾಂಗದ ಡಾಕ್ಟರುಗಳಿಲ್ಲ, ವಕೀಲರುಗಳಿಲ್ಲ. ಒಬ್ಬ ನಿರುದ್ಯೋಗಿ ಇಂಜಿನಿಯರ್ ಪದವೀಧರನ ಹೊರತಾಗಿ ಇಂಜಿನಿಯರುಗಳು ಇಲ್ಲ, ಸಾಕಷ್ಟು ಸಂಖ್ಯೆಯಲ್ಲಿ ವಿದ್ಯಾವಂತರಿಲ್ಲ. ದೊಡ್ಡ ಜಮೀನ್ದಾರರಿಲ್ಲ, ದೊಡ್ಡ ವ್ಯಾಪಾರಸ್ಥರಿಲ್ಲ, ಸಾಕ್ಷರತಾ ಪ್ರಮಾಣ ಎರಡಂಕಿ ಮುಟ್ಟಿಲ್ಲ. ಇದು ತಾಲ್ಲೂಕಿನಲ್ಲಿ ಉಪ್ಪಾರ ಜನಾಂಗದ ಶೈಕ್ಷಣಿಕ ಹಾಗು ಆರ್ಥಿಕ ಸ್ಥಿತಿಗತಿ. ಇವರಿಂದ ವೋಟು ಪಡೆದು ಚುನಾಯಿತರಾದ ನಂತರ

ಇವರ ಪ್ರತಿನಿಧಿಗಳೆಂದು ಹೇಳಿಕೊಳ್ಳುವವರು ಇವರತ್ತ ತಿರುಗಿ ಕೂಡ ನೋಡುವುದಿಲ್ಲ. ಆದರೂ ಪ್ರಜಾಪ್ರಭುತ್ವದಲ್ಲಿ ಇವರೇ ಪ್ರಭುಗಳು !

ಕುಷ್ಟಗಿ ತಾಲ್ಲೂಕಿನಲ್ಲಿ ಉಪ್ಪಾರ ಸಂಘವಿದೆ. ಹಿರೇಬನ್ನಿಗೋಳದ ನಾಗಪ್ಪ ಉಪ್ಪಾರ ಸಂಘದ ಅಧ್ಯಕ್ಷರು, ಹನಮಂತಪ್ಪ ನೀರಾವರಿ ಹನಮನಹಾಳ ಕಾರ್ಯದರ್ಶಿ. ಶರಣಪ್ಪ ಭಂಡಾರಿ ನೀಲೋಗಲ್ ಖಜಾಂಚಿ. ಸಂಘವು ಚಟುವಟಿಕೆಯಿಂದ ಕಾರ್ಯನಿರ್ವಹಿಸುತ್ತಿದೆ. 1999 ಮೇ 1ರಂದು ಕುಷ್ಟಗಿ ಪಟ್ಟಣದಲ್ಲಿ ರಾಜ್ಯಮಟ್ಟದ ರಾಜರ್ಷಿ ಭಗೀರಥ ಜಯಂತಿಯನ್ನು 'ನ ಭೂತೋ ನ ಭವಿಷ್ಯತಿ' ಎನ್ನುವಂತೆ ಆಚರಿಸಲಾಯಿತು. ಸುಮಾರು 50-60 ಸಹಸ್ರ ಉಪ್ಪಾರ ಬಂಧುಗಳು ರಾಜ್ಯದ ಮೂಲೆಮೂಲೆಗಳಿಂದ ಈ ಉತ್ಸವದಲ್ಲಿ ಪಾಲ್ಗೊಂಡಿದ್ದರು. ಇದೊಂದು ಐತಿಹಾಸಿಕ ಭಗೀರಥ ಜಯಂತಿ. ಈ ಸಮ್ಮೇಳನ ಉಪ್ಪಾರ ಜನಾಂಗ ಸಂಘಟನೆ, ಶಿಸ್ತು ಬಯಸುತ್ತದೆ ಎಂದು ತೋರಿಸುತ್ತದೆ. ಏಪ್ರಿಲ್ 2000ದಲ್ಲಿ ಕುಷ್ಟಗಿ ತಾಲ್ಲೂಕಿನ ಹನಮನಹಾಳ ಗ್ರಾಮದಲ್ಲಿ ಭಗೀರಥ ಜಯಂತಿಯನ್ನು ವಿಜೃಂಭಣೆಯಿಂದ ಆಚರಿಸಲಾಯಿತು.

ಈ ಎರಡೂ ಭಗೀರಥ ಜಯಂತಿಗಳು ಈ ಸಮುದಾಯದ ನಾಯಕರಾದ ಹೆಚ್. ಸಿ. ನೀರಾವರಿ ಅವರ ಪರಿಶ್ರಮದ ಫಲವಾಗಿ ಅದ್ದೂರಿಯಿಂದ ಜರುಗಿದವು. ಕುಷ್ಟಗಿಯಲ್ಲಿ ಆಚರಿಸಿದ ಭಗೀರಥ ಜಯಂತಿಯ ಸವಿನೆನಪಿಗಾಗಿ 'ಭಗೀರಥ ಸಂಕಲ್ಪ' ಎಂಬ ಶೈಕ್ಷಣಿಕ ಮೌಲ್ಯವುಳ್ಳ ಸ್ಮರಣ ಸಂಚಿಕೆಯನ್ನು ಹೊರತರಲಾಯಿತು. ಸಮಾಜದ ಜಗದ್ಗುರುಗಳಾಗಿದ್ದ ಬ್ರ. ಲೇಪಾಕ್ಷ ಸ್ವಾಮಿಗಳು ವಿರಚಿತ 'ಶ್ರೀ ಉಪ್ಪಾರ ಚರಿತಾಮೃತ' ಎಂಬ ಪುರಾಣ ಗ್ರಂಥವನ್ನು ಇದೇ ಸಂದರ್ಭದಲ್ಲಿ ಬಿಡುಗಡೆ ಮಾಡಲಾಯಿತು. ರಾಜ್ಯದ ಮಾಜಿ ಮುಖ್ಯಮಂತ್ರಿ ಎಂ. ವೀರಪ್ಪಮೊಯಿಲಿ, ಮಲ್ಲಿಕಾರ್ಜುನ ಖರ್ಗೆ, ಹೆಚ್.ಕೆ. ಪಾಟೀಲ, ದಿನೇಶಗುಂಡೂ ರಾವ್, ಹೆಚ್.ಜಿ. ರಾಮುಲು ಮೊದಲಾದವರು ಇದರಲ್ಲಿ ಭಾಗವಹಿಸಿದ್ದರು. ಪೂಜ್ಯ ಪುರುಷೋತ್ತಮಾನಂದಪುರಿ ಸ್ವಾಮಿಗಳು ಹಾಗೂ ಪೂಜ್ಯ ಶಿವಪುರಿ ಮಹಾಸ್ವಾಮಿಗಳು ಓಂಕಾರ ಆಶ್ರಮ ಬೆಂಗಳೂರು ಸಾನ್ನಿಧ್ಯ ವಹಿಸಿದ್ದರು.

ಕುಷ್ಟಗಿ ತಾಲ್ಲೂಕಿನ ಗುಡ್ಡದ ದೇವಲಾಪುರದವರಾದ ಹೆಚ್.ಸಿ. ನೀರಾವರಿ ಅವರು ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಕಂದಾಯ ಇಲಾಖೆಯಲ್ಲಿ ಪ್ರೊಬೇಶನರ್‌ಆಗಿ ಸೇವೆಗೆ ಸೇರಿ ಸರಕಾರದ ವಿವಿಧ ಉನ್ನತ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿ, ರಾಜ್ಯದ ಮುಖ್ಯಮಂತ್ರಿಗಳ ಆಪ್ತ ಕಾರ್ಯದರ್ಶಿಯಾಗಿ, ಲೋಕಸೇವಾ ಆಯೋಗದ ಸದಸ್ಯರಾಗಿ, ಘನತೆ ಗೌರವದಿಂದ ಕಾರ್ಯನಿರ್ವಹಿಸಿ, ನಿವೃತ್ತಿಯನಂತರ ಸಾಹಿತ್ಯ, ಸಂಗೀತ, ಸಮಾಜಸೇವೆ, ಪತ್ರಿಕೋದ್ಯಮ ಮೊದಲಾದ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಹುಟ್ಟೂರು ಹಾಗು ಹುಟ್ಟಿದ ಸಮಾಜಕ್ಕೆ ತಮ್ಮ ಅಳಿಲುಸೇವೆ ಸಲ್ಲಿಸಿದ್ದಾರೆ. ಈಗ 'ಭಗೀರಥ ಸಂಕಲ್ಪ' ಎಂಬ ಮಾಸಪತ್ರಿಕೆಯ ಪ್ರಧಾನ ಸಂಪಾದಕರಾಗಿ ಪತ್ರಿಕೋದ್ಯಮದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಈ ಪತ್ರಿಕೆ

ಗಾತ್ರ ಮತ್ತು ಗುಣಮಟ್ಟದಲ್ಲಿ ಸಾಕಷ್ಟು ಬೆಳೆದು, ಪತ್ರಿಕೋದ್ಯಮದಲ್ಲಿ ಒಂದು ಮೈಲಿಗಲ್ಲಾಗ ಬೇಕೆಂಬುದು ಅವರ ಆಶಯ. ತಮ್ಮ ಅಧಿಕಾರಾವಧಿಯಲ್ಲಿ ಸಾಕಷ್ಟು ಜನಪರ ಕೆಲಸ ಮಾಡಿದ ಪರಂಪರೆ ಅವರದು. ಅವರ ಸಹೋದರ ಶಿವಣ್ಣ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಡೆಪ್ಯುಟಿ ಕಮೀಷನರ್ ಆಗಿದ್ದು, ಅವರೂ ಕೂಡ ಸಮಾಜಸೇವೆಯಲ್ಲಿ ಆಸಕ್ತಿ ಉಳ್ಳವರು.

ಕುಷ್ಟಗಿ ತಾಲ್ಲೂಕಿನಲ್ಲಿ ಉಪ್ಪಾರ ಜನಾಂಗದವರು ಇತ್ತಿತ್ತಲಾಗಿ ರಾಜಕೀಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿರುವದು, ಸಂತಸದ ಸಂಗತಿಯೇ ಸರಿ. ತಾಲ್ಲೂಕಿನಲ್ಲಿ ಪ್ರಸ್ತುತ 36 ಜನ ಪಂಚಾಯ್ತಿ ಸದಸ್ಯರಾಗಿದ್ದಾರೆ. ಮಾಲಗಿತ್ತಿ ಪಂಚಾಯ್ತಿ ಅಧ್ಯಕ್ಷೆ ಉಮಾದೇವಿ ಈ ಸಮುದಾಯಕ್ಕೆ ಸೇರಿದವರು. ನಿಲೋಗಲ್ ಪಂಚಾಯ್ತಿ ಅಧ್ಯಕ್ಷರು ಹಾಗೂ ಉಪಾಧ್ಯಕ್ಷರಾದ ಯಮನೂರಪ್ಪ ಬಳೂಟಗಿ ಕೂಡ ಈ ಸಮುದಾಯದವರು. ಹನಮನಾಳ ಕ್ಷೇತ್ರದ ಜಿಲ್ಲಾ ಪಂಚಾಯ್ತಿ ಸದಸ್ಯ ಸೋಮಪ್ಪ ಇಂಗಳದಾಳ ಈ ಸಮುದಾಯಕ್ಕೆ ಸೇರಿದವರು. ಇವರು ಹಿಂದೆ ಜಿಲ್ಲಾಪಂಚಾಯ್ತಿ ಉಪಾಧ್ಯಕ್ಷರಾಗಿದ್ದರು. ಮುದೆನೂರು ತಾಲ್ಲೂಕು ಪಂಚಾಯ್ತಿ ಕ್ಷೇತ್ರದಿಂದ ಆಯ್ಕೆಯಾಗಿರುವ ಡಾ|| ಎಂ.ಎಸ್. ಗದ್ದಿ ಇದೇ ಸಮುದಾಯದವರು. ಗ್ರಾಮೀಣ ಮತ್ತು ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿದ್ದ ನಾಗಪ್ಪ ಉಪ್ಪಾರ ಈ ಸಮಾಜದವರು. ಹನಮನಾಳ ಜಿಲ್ಲಾ ಪಂಚಾಯ್ತಿ ಕ್ಷೇತ್ರದಿಂದ ಅವಿಭಾಜ್ಯ ರಾಯಚೂರು ಜಿಲ್ಲಾ ಪಂಚಾಯ್ತಿಗೆ ಆಯ್ಕೆಯಾಗಿದ್ದ ಉಮಾದೇವಿ ಪತ್ತಿ, ಶರಣಪ್ಪ ಭಂಡಾರಿ ಈ ಸಮಾಜದವರು. ಕುಷ್ಟಗಿ ತಾಲ್ಲೂಕು ಜನತಾದಳದ ಅಧ್ಯಕ್ಷರಾಗಿದ್ದ ಶರಣಪ್ಪ ಭಂಡಾರಿ, ಕುಷ್ಟಗಿ ತಾಲ್ಲೂಕು ಪಂಚಾಯ್ತಿ ಉಪಾಧ್ಯಕ್ಷರಾಗಿದ್ದ ವೀರಪ್ಪ ಕುರಂಗದ ಈ ಸಮುದಾಯಕ್ಕೆ ಸೇರಿದವರು. ಜಾಹಗೀರಗುಡದೂರ ಗ್ರಾಮಪಂಚಾಯ್ತಿ ಅಧ್ಯಕ್ಷೆಯಾಗಿದ್ದ ಭೀಮವ್ವ ಮಂತ್ರಿ, ಮಾಲಗಿತ್ತಿ ಗ್ರಾಮಪಂಚಾಯ್ತಿ ಅಧ್ಯಕ್ಷೆಯಾಗಿದ್ದ ಚಂದವ್ವಶಾಸ್ತ್ರಿ, ನಿಲೋಗಲ್ ಗ್ರಾಮಪಂಚಾಯ್ತಿ ಅಧ್ಯಕ್ಷರಾಗಿದ್ದ ಶರಣಪ್ಪ ಭಂಡಾರಿ, ಯಂಕಪ್ಪ ಭಂಡಾರಿ ಈ ಸಮುದಾಯಕ್ಕೆ ಸೇರಿದವರು. ಹಿಂದೆ ತಾಲ್ಲೂಕು ಅಭಿವೃದ್ಧಿ ಮಂಡಳಿಯ ಸದಸ್ಯರಾಗಿದ್ದ ಮಾಗುಂಡಪ್ಪ ಹೊಟ್ಟಿ ಈ ಸಮುದಾಯಕ್ಕೆ ಸೇರಿದವರು.

ಹನಮಪ್ಪ ಭಂಡಾರಿ ನಿಲೋಗಲ್, ನಾಗಪ್ಪ ಉಪ್ಪಾರ, ಹನಮಂತಪ್ಪ ನೀರಾವರಿ, ಆನಂದಪ್ಪ ಸುರಪುರ, ಶರಣಪ್ಪ ಭಂಡಾರಿ, ಯಂಕಪ್ಪ ಭಂಡಾರಿ, ಯಮನೂರಪ್ಪ ಬಳೂಟಗಿ, ಮಾಗುಂಡಪ್ಪ ಹೊಟ್ಟಿ ನಿಲೋಗಲ್, ಸಿದ್ದಣ್ಣ ಹನಮಸಾಗರ, ಬಸವಂತಪ್ಪ ಹನಮಸಾಗರ, ಕಬ್ಬರಗಿ, ಯಲ್ಲಪ್ಪ ಗದ್ದಿ, ಚೋಳಪ್ಪ ಜಾಹಗೀರಗುಡದೂರ, ಬಸವರಾಜ ಹೊಸೂರ, ಶರಣಪ್ಪ ತೇವರಣ್ಣವರ, ಕಳಕಪ್ಪತೆವರಣ್ಣವರ ಮಾಲಗಿತ್ತಿ, ಹನುಮಂತಪ್ಪ ಬಾಳಪ್ಪ ದಂಡಿನ ಪಟ್ಲಚಿಂತಿ, ಪರಸಪ್ಪ ಹುನಗುಂದ ತುಗ್ಗಲಡೋಣಿ, ಬಸವರಾಜ ರಂಗಪ್ಪ, ದೊರಿಗೂಳ ಮಿಟ್ಲಕೋಡ, ಸತ್ಯಪ್ಪ ಕಟ್ಟಿಮನಿ, ಯಂಕಪ್ಪ, ಬೆಣ್ಣೆಸೆಟ್ಟಿ ವಕ್ಕಣದುರ್ಗ, ಹುಲ್ಲಪ್ಪ ಹನಮಸಾಗರ, ಹನಮಂತಪ್ಪ ಹನಮಸಾಗರ ಕಬ್ಬರಗಿ, ಲಕ್ಷ್ಮಪ್ಪ ಪರೂತಿ, ವಕ್ಕಣದುರ್ಗ, ಶರಣಪ್ಪ

ತಳ್ಳಿಗುಡದೂರ, ತಿಮ್ಮಣ್ಣನರಿ, ಚಂದನಗೌಡಪಾಟೀಲ, ಭರಮಪ್ಪ ಮಾಳಿ, ಹೊಸಳ್ಳಿ, ಕಳಕಪ್ಪ ಜಾಲಿ ಚಳಗೇರಿ, ಶರಣಪ್ಪ ಮೇಟಿ ಮಡಿಕ್ಕೇರಿ, ಹನಮಪ್ಪ ಬಂಗಾರಿ ಮಿಟ್ಲಕೋಡ, ಹನಮಂತಪ್ಪ ಮುಶಿಗೇರಿ, ಶರಣಪ್ಪ ತಳ್ಳಿಗುಡದೂರ, ಹನಮಂತಪ್ಪ ಜಿಗಳೂರು, ರಾಮಪ್ಪ ಭೀಮನಗಡೆದ, ಚಂದ್ರಕಾಂತ ನೀರಾವರಿ, ರಂಗಪ್ಪ ಉಪ್ಪಾರ ಬಂಡರಗಲ್, ಶರಣಪ್ಪ ತಳ್ಳಿ ವಣಗೇರಿ, ಶಾಮಣ್ಣ ಸೈಂದವ ತಾವರಗೇರಿ ಮುಂತಾದವರು ತಾಲ್ಲೂಕಿನಲ್ಲಿ ಉಪ್ಪಾರ ಸಮಾಜದ ಪ್ರಗತಿ-ಸಂಘಟನೆಗಳಿಗೆ ಸಾಕಷ್ಟು ಶ್ರಮವಹಿಸುತ್ತಿದ್ದಾರೆ. ಇದೇ ತಾಲ್ಲೂಕಿನ ಶರಣಪ್ಪ ನಿಡಸೇಸಿ ಸಾಹಿತಿ.

ಕೊಪ್ಪಳ ಜಿಲ್ಲೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಉಪ್ಪಾರ ಜನಾಂಗವಿದ್ದರೂ ಗಂಗಾವತಿ ಹೊರತುಪಡಿಸಿ ಜಿಲ್ಲಾ ಸ್ಥಳದಲ್ಲಿ ಆಗಲಿ, ಇತರ ತಾಲ್ಲೂಕು ಕೇಂದ್ರಗಳಲ್ಲಾಗಲಿ ಸಂಘದ ಕಟ್ಟಡಗಳಿಲ್ಲ. ಈ ಸಮುದಾಯದವರು ಒಂದೆಡೆ ಕುಳಿತು ತಮ್ಮ ಸಮಾಜದ ಸಮಸ್ಯೆಗಳನ್ನು ಕುರಿತು ವಿಚಾರ ವಿನಿಮಯ ಮಾಡಿಕೊಳ್ಳಲು ಅನುವು-ಅವಕಾಶಗಳಿಲ್ಲ. ವಿದ್ಯಾರ್ಥಿನಿಲಯಗಳಿಲ್ಲ. ಸಾಕ್ಷರತೆ ಶೇ. 30-35ರ ಮಟ್ಟದಲ್ಲಿದೆ. ಶೇ. 70ಕ್ಕೂ ಹೆಚ್ಚು ಜನ ಬಡತನ ರೇಖೆಗಿಂತ ಕೆಳಗಿದ್ದಾರೆ. ಇದಕ್ಕೆಲ್ಲ ಮುಖ್ಯ ಕಾರಣ ನಿರಕ್ಷರತೆ ಮತ್ತು ರಾಜಕೀಯ ಜಾಗೃತಿಯ ಕೊರತೆ. ಜಿಲ್ಲೆಯಲ್ಲಿ ಕೆಲವು ರಾಜಕಾರಣಿಗಳು ಪಾಳೇಗಾರಿಕೆ ಮನೋಭಾವದವರಿದ್ದು ಇಂತಹ ಹಿಂದುಳಿದ ಸಮಾಜದ ಬಗ್ಗೆ ಅವರಿಗೆ ಎಳ್ಳಷ್ಟೂ ಕಾಳಜಿ ಇಲ್ಲ. ಈಗಲಾದರೂ ಈ ಸಮಾಜದ ಮುಖಂಡರು ಎಚ್ಚೆತ್ತುಕೊಂಡು ಸಮಯಪ್ರಜ್ಞೆ ಮೆರೆಯುವುದು ಸಮಾಜದ ಹಿತದೃಷ್ಟಿಯಿಂದ ಅತಿ ಅವಶ್ಯಕವಿದೆ. ಡಾ|| ಬಾಬಾ ಸಾಹೇಬ ಅಂಬೇಡ್ಕರ್ ಅವರ ಹಿತೋಕ್ತಿ, 'ಶಿಕ್ಷಣ, ಸಂಘಟನೆ ಮತ್ತು ಹೋರಾಟ' ಎಲ್ಲಾ ಹಿಂದುಳಿದ ಸಮಾಜಗಳ ವೇದವಾಕ್ಯ, ಬೈಬಲ್, ಕುರಾನ್‌ಗಳಾದಾಗ ಮಾತ್ರ ಇಂತಹ ಸಮಾಜಗಳು ಜೀವನದಲ್ಲಿ ಬೆಳಕು ಕಾಣಬಹುದು.

**ಮಾಹಿತಿಸಂಗ್ರಹ :** *ಆನಂದಪ್ಪ ಸುರಪುರ, ಹನಮಂತಪ್ಪ ನೀರಾವರಿ, ವೆಂಕನಗೌಡ ಡಿ. ಪಾಟೀಲ, ಹೆಚ್.ಆರ್. ಪಾಟೀಲ, ಮರ್ದಾನಪ್ಪ ಬಿಸರಳ್ಳಿ*






# * ಬಳ್ಳಾರಿ ಜಿಲ್ಲೆ

## ಐತಿಹಾಸಿಕ ಹಿನ್ನೋಟ

**ಕ**ರ್ನಾಟಕದ ಇತಿಹಾಸದಲ್ಲಿ ಬಳ್ಳಾರಿ ಜಿಲ್ಲೆಗೆ ಹಿರಿದಾದ ಸ್ಥಾನವಿದೆ. 'ಮರೆಯಲಾಗದ ಸಾಮ್ರಾಜ್ಯ' ಎಂದೇ ಖ್ಯಾತವಾಗಿರುವ 'ವಿಜಯನಗರ ಸಾಮ್ರಾಜ್ಯ'ದ ಜನ್ಮಸ್ಥಳ ಬಳ್ಳಾರಿ ಜಿಲ್ಲೆ ಎಂಬುದನ್ನು ಮರೆಯುವಂತಿಲ್ಲ.

ವಿಜಯನಗರ ಉಕ್ಕಿನ ಕಾರ್ಖಾನೆ, ತುಂಗಭದ್ರಾ ಜಲಾಶಯ, ವಿಶ್ವಪರಂಪರೆಯಲ್ಲಿ 'ಹಂಪಿ'ಯ ಸೇರ್ಪಡೆಯಿಂದಾಗಿ ಬಳ್ಳಾರಿ ವಿಶ್ವಖ್ಯಾತಿ ಪಡೆದಿದೆ.

ಬಳ್ಳಾರಿ ಜಿಲ್ಲೆಯ ಉತ್ತರಕ್ಕೆ ರಾಯಚೂರು, ದಕ್ಷಿಣಕ್ಕೆ ಚಿತ್ರದುರ್ಗ, ಪಶ್ಚಿಮಕ್ಕೆ ಧಾರವಾಡ ಮತ್ತು ಪೂರ್ವಕ್ಕೆ ಆಂಧ್ರಪ್ರದೇಶವೂ ಇವೆ.

ಬಳ್ಳಾರಿ ಜಿಲ್ಲೆಯ ಉತ್ತರ ಅಕ್ಷಾಂಶ 14°- 30' ರಿಂದ 15°- 50' ಮತ್ತು ಪೂರ್ವ ರೇಖಾಂಶ 75° - 40' ರಿಂದ 77° - 11'ರ ಮಧ್ಯದಲ್ಲಿ ಹರಡಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಏಳು ತಾಲ್ಲೂಕುಗಳಿವೆ. ಅವುಗಳೆಂದರೆ ಬಳ್ಳಾರಿ, ಶಿರಗುಪ್ಪ, ಸಂಡೂರು, ಹೊಸಪೇಟೆ, ಹೂವಿನಹಡಗಲಿ, ಹಗರಿಬೊಮ್ಮನಹಳ್ಳಿ ಮತ್ತು ಕೂಡ್ಲಿಗಿ.

1901ರ ಜನಗಣತಿ ಪ್ರಕಾರ ಬಳ್ಳಾರಿ ಜಿಲ್ಲೆಯ ಜನಸಂಖ್ಯೆ 5,82,477. 2001ರ ಜನಗಣತಿ ಪ್ರಕಾರ ಬಳ್ಳಾರಿ ಜಿಲ್ಲೆಯ ಜನಸಂಖ್ಯೆ 20.25,242. ಅದರಲ್ಲಿ ಪುರುಷರು 10,28,481, ಸ್ತ್ರೀಯರು 9,96,761,

ಸಾಕ್ಷರತೆಯ ಸರಾಸರಿ ಪ್ರಮಾಣ ಶೇ. 58,04. ಅದರಲ್ಲಿ ಪುರುಷರು ಶೇ. 69.59. ಸ್ತ್ರೀಯರು ಶೇ. 46.16. ಬಳ್ಳಾರಿ ಬೆಂಗಳೂರಿನಿಂದ 306 ಕಿ.ಮೀ. ದೂರದಲ್ಲಿದೆ.

ಬಳ್ಳಾರಿ ಜಿಲ್ಲೆಯ ಪ್ರಮುಖ ನದಿ ತುಂಗಭದ್ರಾ. ಹಗರಿ ಮತ್ತು ಚಿಕ್ಕ ಹಗರಿ ಅಲ್ಲಿನ ಉಪನದಿಗಳು. ಜಿಲ್ಲೆಯ ವಾರ್ಷಿಕ ಮಳೆ ಸರಾಸರಿ 636.28 ಮಿ.ಮೀ. .110 ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣವಾಗಿರುವ ತುಂಗಭದ್ರಾ ಜಲಾಶಯ ಬಳ್ಳಾರಿ, ಶಿರಗುಪ್ಪ ಹಾಗು ಹೊಸಪೇಟೆ ತಾಲ್ಲೂಕಿನ ಒಂದು ಲಕ್ಷ ಎಕರೆ ಭೂಮಿಗೆ ನೀರುಣಿಸುತ್ತದೆ. ಇಲ್ಲಿ ವಿದ್ಯುತ್ ಉತ್ಪಾದನೆ ಸಹ ಇದೆ. ಕ್ರಿ.ಶ. 1889ರಲ್ಲಿ ಭಾರತದ ಖನಿಜ ಶೋಧನಾಧಿಕಾರಿಯಾಗಿದ್ದ ಬ್ರೂಸ್‌ಫೂಟ್ ಅವರು ಬಳ್ಳಾರಿಯ ಖನಿಜ ಸಂಪತ್ತನ್ನು ಪರಿಶೀಲಿಸಿ ಇಲ್ಲಿ ಕಲ್ಲಿದ್ದಲು ಗಣಿಯೊಂದಿದ್ದರೆ ಜಗತ್ತಿನ ಶ್ರೇಷ್ಠ ಕಬ್ಬಿಣ ಮತ್ತು ಉಕ್ಕು ತಯಾರಿಸುವ ಕೇಂದ್ರವಾಗುತ್ತಿತ್ತು-ಎಂದಿದ್ದಾರೆ. ಸಂಡೂರುನಲ್ಲಿ ಮ್ಯಾಂಗನೀಸ್, ಹಡಗಲಿ ತಾಲ್ಲೂಕಿನಲ್ಲಿ ಚಿನ್ನ ಹಾಗು ಕೂಡ್ಲಿಗಿ ತಾಲ್ಲೂಕಿನ ಬೈರದೇವರ ಗುಡ್ಡಗಳಲ್ಲಿ ಗಂಧಕವು ದೊರೆಯುತ್ತದೆಂದು ತಜ್ಞರು ಹೇಳುತ್ತಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಭತ್ತ, ಜೋಳ, ಸಜ್ಜೆ, ರಾಗಿ, ಗೋಧಿ, ಕಬ್ಬು, ಹತ್ತಿ, ನೆಲಗಡಲೆ, ಹರಳು, ಎಳ್ಳು, ತೊಗರಿ, ಅಲಸಂದೆ, ಹೆಸರು, ಹುರುಳಿ, ಹುಣಿಸೆ, ಮಾವು, ವೀಳ್ಯೆದೆಲೆ, ತರಕಾರಿಗಳು-ಪ್ರಮುಖ ಬೆಳೆಗಳು.

ಬಳ್ಳಾರಿ ಜಿಲ್ಲೆಯಲ್ಲಿ ಕೃಷಿ ಪ್ರಮುಖ ಉದ್ಯೋಗವಾದರೂ ಕಂಬಳಿ, ಜಮಖಾನ ನೇಯುವುದು, ಕೈಮಗ್ಗದ ಬಟ್ಟೆ, ಚಾಪೆ ಹೆಣೆಯುವುದು ಚರ್ಮ ಹದ ಮಾಡುವಿಕೆ, ಹಗ್ಗ ಹೊಸೆಯುವಿಕೆ ಮೊದಲಾದ ವೃತ್ತಿಗಳಲ್ಲಿ ಜನ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ವೀರಶೈವ, ಕುರುಬ, ಬ್ರಾಹ್ಮಣ, ಉಪ್ಪಾರ, ಗೊಲ್ಲ, ಈಡಿಗ, ಬೆಸ್ತ, ಲಂಬಾಣಿ, ನಾಯಕ, ಮುಸ್ಲಿಂ, ಕ್ರಿಶ್ಚಿಯನ್, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ ಮೊದಲಾದ ಸಮುದಾಯಗಳಿವೆ.

ಎಪ್ಪತ್ತರ ದಶಕದಲ್ಲಿ ಶಂಕುಸ್ಥಾಪನೆಗೊಂಡ ವಿಜಯನಗರ ಉಕ್ಕಿನ ಕಾರ್ಖಾನೆ ಖಾಸಗಿ ಅವರ ನೆರವಿನಲ್ಲಿ-ಅಂದರೆ ಇಪ್ಪತ್ತೆರಡು ವರ್ಷಗಳ ನಂತರ ಕಾರ್ಯಾಚರಣೆಗೊಂಡಿದೆ. ಬಳ್ಳಾರಿ ಜಿಲ್ಲೆಗೆ ಪೌರಾಣಿಕ ಹಾಗು ಐತಿಹಾಸಿಕ ಪರಂಪರೆಯಿದೆ.

ಶಿವ ತನ್ನ ಭಕ್ತರಿಗೆ 'ಬಳ್ಳ'ದಲ್ಲಿ ಕಾಣಿಸಿಕೊಂಡ ಕಾರಣ ಈ ಜಿಲ್ಲೆಗೆ 'ಬಳ್ಳಾರಿ' ಎಂಬ ಹೆಸರು ಬಂತೆಂದು ಸ್ಥಳಪುರಾಣ ಹೇಳುತ್ತದೆ. ಹೊಯ್ಸಳ ಶಾಸನದಲ್ಲಿ ಈ ಜಿಲ್ಲೆಯನ್ನು 'ಬಳ್ಳಾವೆ' ಎಂದು ಕರೆಯಲಾಗಿದೆ.

ರಾಮಾಯಣದ ಕಾಲದಲ್ಲಿ ವಾಲಿ, ಸುಗ್ರೀವ, ಹನುಮಂತ ಅವರುಗಳು ಋಷ್ಯಮೂಕ ಪರ್ವತದ ಬಳಿ ಅಂದರೆ ಕಿಷ್ಕಿಂದೆಯಲ್ಲಿ ಇದ್ದರೆಂದು ಹೇಳಲಾಗಿದೆ.

ಬ್ರಹ್ಮನ ಮಗಳು ಪಂಪಾಳ ಹೆಸರಿನಲ್ಲಿ ಪ್ರಖ್ಯಾತವಾದ ಕ್ಷೇತ್ರವೇ ಪಂಪಾಕ್ಷೇತ್ರ. ಅದೇ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪಿ.

ಬಳ್ಳಾರಿ ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ನೆಲೆಗಳನ್ನು ಗುರುತಿಸಲಾಗಿದೆ. ಶಿಲಾಯುಗದಿಂದ ಹಿಡಿದು ಕಬ್ಬಿಣ ಯುಗದ ಸಂಸ್ಕೃತಿಯವರೆಗೆ ಅನೇಕ ಕುರುಹುಗಳು ಇಲ್ಲಿ ದೊರಕಿವೆ. ನಿಟ್ಟೂರು, ಕುಪ್ಪಗಲ್, ಸಂಗನಕಲ್ಲು, ತೆಕ್ಕಲಕೋಟೆ ಈ ಜಿಲ್ಲೆಯ ಪ್ರಾಗೈತಿಹಾಸಿಕ ನೆಲೆಗಳು.

ತೆಕ್ಕಲಕೋಟೆಯ ಬಳಿಯ ನಿಟ್ಟೂರಿನಲ್ಲಿ ಮೌರ್ಯವಂಶದ ಅಶೋಕನ ಕಾಲಕ್ಕೆ ಸೇರಿದ ಎರಡು ಶಾಸನಗಳು ದೊರಕಿವೆ. ಅಂದರೆ ಮೌರ್ಯರ ಕಾಲದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಆಡಳಿತ ವ್ಯವಸ್ಥೆಯಿತ್ತೆಂದು ಹೇಳಲಾಗಿದೆ.

ಕರ್ನಾಟಕದ ಮೊದಲ ರಾಜವಂಶಜರಾದ ಶಾತವಾಹನರು ಬಳ್ಳಾರಿ ಜಿಲ್ಲೆಗೆ ಸೇರಿದವರೆಂದು ಇತಿಹಾಸಕಾರರಾದ ಡಾ. ಪಿ.ಬಿ. ದೇಸಾಯಿ ಹೇಳುತ್ತಾರೆ. ಕೋಲಾರ ಜಿಲ್ಲೆಯ ಬಿಸ್ಸನಹಳ್ಳಿಯ ಕ್ರಿ.ಶ. 725ರ ಶಾಸನವೊಂದರ ಪ್ರಕಾರ ಬಳ್ಳಾರಿ ಜಿಲ್ಲೆಯನ್ನು ತಲಕಾಡು ಗಂಗರು ಆಳುತ್ತಿದ್ದರೆಂದು ಹೇಳಲಾಗಿದೆ.

ಕ್ರಿ.ಶ. 1022ರ ಮೊಳಕಾಲ್ಮೂರು ಶಾಸನದ ಪ್ರಕಾರ ಬಳ್ಳಾರಿ ಜಿಲ್ಲೆ ನೊಳಂಬರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. 1064ರಲ್ಲಿ ಕಲ್ಯಾಣ ಚಾಲುಕ್ಯರ ಶಾಸನವೊಂದರ ಪ್ರಕಾರ ಈ ಪ್ರದೇಶ ಅವರ ಆಳ್ವಿಕೆಗೊಳಪಟ್ಟಿತ್ತು.

ಕ್ರಿ.ಶ. 1248ರಲ್ಲಿ ಹಾಸನ ಜಿಲ್ಲೆಯ ಹಿರೇಹಳ್ಳಿಯಲ್ಲಿ ದೊರೆತ ಶಾಸನದಿಂದ ಬಳ್ಳಾರಿ ಹೊಯ್ಸಳರ ಸಾಮ್ರಾಜ್ಯಕ್ಕೆ ಸೇರಿತ್ತು.

ಭಾರತದ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಒಂದು ಉಲ್ಲೇಖಾರ್ಹವಾದ ಸ್ಥಾನವಿದೆ. ಸಾಹಿತ್ಯ, ಸಂಗೀತ, ಚಿತ್ರಕಲೆ, ಶಿಲ್ಪಕಲೆ, ಆಧ್ಯಾತ್ಮ, ಸಂಘಟನೆ — ಹೀಗೆ ಹತ್ತು ಹಲವು ವಿಚಾರಗಳಲ್ಲಿ ಈ ಸಾಮ್ರಾಜ್ಯ ಸಾಧಿಸಿದ ಸಾಧನೆ ಭಾರತದ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಟ್ಟ ದಾಖಲೆಯಾಗಿದೆ. ಕ್ರಿ.ಶ. 1336ರಿಂದ 1565ರವರೆಗೆ ಬಾಳಿದ ವಿಜಯನಗರ ಸಾಮ್ರಾಜ್ಯದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ 'ಹಂಪಿ' ಎಂಬುದನ್ನು ಯಾರೂ ಮರೆಯುವಂತಿಲ್ಲ. ಇಂದಿಗೂ ಅದು ಪ್ರಪಂಚದ ಪ್ರವಾಸಿಗರ ಆಕರ್ಷಣೆಯಾಗಿದೆ.

ಕ್ರಿ.ಶ. 1671ರ ತುಮಕೂರು ಶಾಸನವೊಂದರಲ್ಲಿ ಈ ವಂಶದ ತಿರುಮಲಾರ್ಯನನ್ನು 'ಕರ್ನಾಟಕದ ಅರಸ' ಎಂದು ಕರೆಯಲಾಗಿದೆ.

ವಿಜಾಪುರದ ಆದಿಲ್‌ಷಾಹಿ ದೊರೆಗಳು, ಮರಾಠರು, ಮೊಗಲರು ಈ ಪ್ರಾಂತ್ಯವನ್ನಾಳಿದರು. ಮೈಸೂರಿನ ಅರಸನಾದ ಟಿಪ್ಪು ಸುಲ್ತಾನ ಕ್ರಿ.ಶ. 1792ರ ಒಪ್ಪಂದದ ಪ್ರಕಾರ ಮೈಸೂರು ಸಂಸ್ಥಾನದ ಕೆಲವು ಭಾಗಗಳನ್ನು ನಿಜಾಮನಿಗೆ ಬಿಟ್ಟುಕೊಡಬೇಕಾಯಿತು.

ಕ್ರಿ.ಶ. 1800ರ ವೇಳೆಗೆ ಬಳ್ಳಾರಿ ಮದರಾಸು ಪ್ರಾಂತ್ಯಕ್ಕೆ ಸೇರ್ಪಡೆಯಾಗಿ ಬ್ರಿಟಿಷರ ಕೈಸೇರಿತು. 1953ರಲ್ಲಿ ಬಳ್ಳಾರಿ ಜಿಲ್ಲೆ ವಿಶಾಲ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಯಿತು.

ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಬಳ್ಳಾರಿ ಜಿಲ್ಲೆ ಗಣನೀಯ ಕೊಡುಗೆ ಕೊಟ್ಟಿದೆ. ಸಶಸ್ತ್ರ ಬಂಡಾಯ ಸಹ ಇಲ್ಲಿ ನಡೆದಿದೆ. 1885ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಮೊದಲ ಅಧಿವೇಶನ ಮುಂಬೈಯಲ್ಲಿ ಜರುಗಿತು. ಅದರಲ್ಲಿ ಭಾಗವಹಿಸಿದ್ದ ಕೋರಲಾಚಲಂ ವೆಂಕಟರಾವ್ ಅವರು ಬಳ್ಳಾರಿಯವರೆಂಬುದು ಉಲ್ಲೇಖಾರ್ಹ ವಿಚಾರ.

1934 ಮಾರ್ಚ್ 2ರಂದು ಮಹಾತ್ಮಾ ಗಾಂಧೀಜಿ ಬಳ್ಳಾರಿ ಜಿಲ್ಲೆಯ ಕೊಟ್ಟೂರಿಗೆ ಭೇಟಿ ಕೊಟ್ಟಿದ್ದರು. ಈ ಜಿಲ್ಲೆಯ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರೆಂದರೆ ಟೇಕೂರು ಸುಬ್ರಹ್ಮಣ್ಯಂ, ಟಿ.ಬಿ. ಕೇಶವರಾವ್, ಬಿ.ಸಿ. ಶೇಷಗಿರಿರಾವ್, ಬಾಗನಹಟ್ಟಿ ವೆಂಕೋಬರಾವ್, ಡಾ|| ಆನಂದಪ್ಪ ವಿ. ಗದಗ, ಟಿ. ವಿಜಯಲಕ್ಷ್ಮೀಬಾಯಿ, ಜಿ. ವೆಂಕಟರಾಮಶೆಟ್ಟಿ, ಕೆ. ಚಿದಾನಂದಶಾಸ್ತ್ರೀ, ಹೆಚ್. ಕೇಶವರೆಡ್ಡಿ, ಹಾಲಹಂಪಿ ಸೀತಾರಾಮ, ಕೆ. ರಾಮಚಂದ್ರಗುಪ್ತ, ಬೆಲ್ಲದ ಚಿನ್ನಪ್ಪಕಟ್ಟಿ, ಶ್ರೀನಿವಾಸಾಚಾರ್, ಕೋರಿಶೆಟ್ಟಿ ಜಂಬಣ್ಣಾ, ಆರ್. ನಾಗನಗೌಡ, ಬಿ. ವರ್ಧಮಾನಪ್ಪ ಜೈನ್, ಡಾ|| ಸಿದ್ಧನಾಥ ಬಳ್ಳಾರಿ, ಎಂ. ಬೊಮ್ಮಲಿಂಗಯ್ಯ, ಪಿ.ಎಂ. ಭೋಜನಾಯಕ, ನೆಗಳೂರು ಧರ್ಮಣ್ಣಾ, ಬನ್ನಿಮಟ್ಟಲಕ್ಷ್ಮಪ್ಪ, ಅಸುಂಡಿ ತಿರುಮಲರಾಯ, ಬಿ. ಪಂಪಾಪತಿ, ಮರಿಸ್ವಾಮಿ ಹಿರೇಮಠ, ಕೊಟ್ಟೂರಿನ ಗೂವಿ ಶರಣಪ್ಪ, ಬಣಕಾರ ಸಿದ್ಧಲಿಂಗಪ್ಪ, ಉಜ್ಜನಿ ಸಿದ್ಧನಗೌಡ, ಡಾ|| ನಂಜಪ್ಪ, ಉಜ್ಜನಿ ಮರುಳನಗೌಡ, ಸೊಂಡೂರಿನ ಡಾ|| ಶರಾಸರು, ಎಂ. ಶರಣಪ್ಪ ಮುಂತಾದವರು.

ಬಳ್ಳಾರಿ ರಾಜ್ಯಕ್ಕೆ ಅನೇಕ ರಾಜಕಾರಣಿಗಳನ್ನು ಕೊಟ್ಟ ಕೀರ್ತಿ ಪಡೆದಿದೆ. ಏಕೀಕರಣದ ಶಿಲ್ಪಿ ನಿಜಲಿಂಗಪ್ಪ ಅವರ ಜನ್ಮಸ್ಥಳ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ. ಖ್ಯಾತ ಅರ್ಥಶಾಸ್ತ್ರಜ್ಞರಾದ ವಿ.ಕೆ.ಆರ್.ವಿ. ರಾವ್ ಈ ಜಿಲ್ಲೆಯನ್ನು ಲೋಕಸಭೆಯಲ್ಲಿ ಪ್ರತಿನಿಧಿಸಿದ್ದರು. ಕರ್ನಾಟಕದ ಮೊದಲ ಹಿಂದುಳಿದ ಆಯೋಗದ ಅಧ್ಯಕ್ಷರಾಗಿದ್ದ ಆರ್. ನಾಗನಗೌಡ ಇಲ್ಲಿನ ಪ್ರಮುಖ ರಾಜಕಾರಣಿಯಾಗಿದ್ದರು.

1999ರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ವತಿಯಿಂದ ಆ ಪಕ್ಷದ ಅಧ್ಯಕ್ಷರಾದ ಸೋನಿಯಾಗಾಂಧಿ ಬಳ್ಳಾರಿ ಜಿಲ್ಲೆಯಿಂದ ಲೋಕಸಭೆಗೆ ಸ್ಪರ್ಧಿಸಿದರು. ಅವರ ಎದುರಾಳಿಯಾಗಿ ಭಾರತೀಯ ಜನತಾಪಕ್ಷದಿಂದ ಶ್ರೀಮತಿ ಸುಷ್ಮಾ ಸ್ವರಾಜ್ ಕಣಕ್ಕೆ ಇಳಿದಿದ್ದರು. ಆಗ ಬಳ್ಳಾರಿಗೆ ರಾಷ್ಟ್ರೀಯ ಖ್ಯಾತಿ ದೊರೆತಿತ್ತು. ಅಂತಿಮವಾಗಿ ಸೋನಿಯಾಗಾಂಧಿ ವಿಜಯಿಯಾದರು. ಟೇಕೂರು ಸುಬ್ರಹ್ಮಣ್ಯ, ಎಂ.ವೈ. ಘೋರ್ಪಡೆ, ಎಂ.ಪಿ. ಪ್ರಕಾಶ, ಬಸವರಾಜೇಶ್ವರಿ, ವಿ.ಕೆ.ಆರ್.ವಿ. ರಾವ್, ಆರ್. ವೈ. ಘೋರ್ಪಡೆ, ವೀರಭದ್ರಪ್ಪ, ಬಸವರಾಜೇಶ್ವರಿ, ಕೆ.ಸಿ. ಕೊಂಡಯ್ಯ, ಕೆ. ಬಸವನಗೌಡ ಮೊದಲಾದವರು ಇಲ್ಲಿಂದ ಲೋಕಸಭೆಗೆ ಆಯ್ಕೆಯಾಗಿದ್ದಾರೆ.

ಬಳ್ಳಾರಿ ಜಿಲ್ಲೆಯ ಪ್ರಮುಖ ಜನಪ್ರತಿನಿಧಿಗಳೆಂದರೆ ಅಲ್ಲಂ ಕರಿಬಸಪ್ಪ, ಟೇಕೂರು ಸುಬ್ರಹ್ಮಣ್ಯ, ಎಂ.ವೈ. ಘೋರ್ಪಡೆ, ಎಂ.ಪಿ. ಪ್ರಕಾಶ್, ಬಸವರಾಜೇಶ್ವರಿ, ಎಸ್.ಎಂ.ಕೆ. ಸೋಗಿ, ಬಿ.ಇ. ರಾಮಯ್ಯ, ಹೆಚ್.ಸಿ. ಲಿಂಗಾರೆಡ್ಡಿ, ಅಂದಾನಪ್ಪ, ಬಿ. ನಾಗಪ್ಪ, ಡಿ. ನಾರಾಯಣದಾಸ, ಭಾಸ್ಕರನಾಯಿಡು, ಕೆ. ಗೂಡಸಾಬ, ಬಿ. ರುದ್ರಪ್ಪ, ಟಿ. ಸೋಮಪ್ಪ, ಎಂ.ಎಂ.ಜೆ. ಸದ್ಯೋಜಾತಪ್ಪ, ಎಂ. ಶಂಕರರೆಡ್ಡಿ, ಅಲ್ಲಂವೀರಭದ್ರಪ್ಪ, ಗುಜ್ಜಲ ಹನುಮಂತಪ್ಪ, ಎಸ್.ಟಿ. ಬೊಮ್ಮಣ್ಣ, ಹೊಸಪೇಟೆಯ ಶಂಕರಗೌಡ, ಕೆ.ವಿ. ರವೀಂದ್ರನಾಥಬಾಬು, ಈ.ಟಿ. ಶಂಭುನಾಥ, ಬಿ.ಹೆಚ್. ಯಂಕನಾಯಕ, ಎನ್.ಹೆಚ್. ನಬೀ, ಟಿ.ಎಂ. ಚಂದ್ರಶೇಖರಯ್ಯ, ಎಂ. ದಿವಾಕರಬಾಬು, ಟಿ. ಮರುಳಸಿದ್ಧನಗೌಡ, ವಿ.ಬಿ. ಹಾಲಪ್ಪ, ಸಿರಾಜ್‌ಷೇಕ್ ಹಾಗೂ ವಿಜಯಲಕ್ಷ್ಮಿ ಗುಜ್ಜಲ ಮುಂತಾದವರು.

ಅಂತರರಾಷ್ಟ್ರೀಯ ಮಟ್ಟದ ವನ್ಯಜೀವಿ ಛಾಯಾಚಿತ್ರಕಾರರಾದ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್‌ರಾಜ್ ಸಚಿವರಾದ ಎಂ.ವೈ. ಘೋರ್ಪಡೆ ಸೊಂಡೂರಿನ ಮಹಾರಾಜರ ವಂಶದವರು. ಡಿ. ದೇವರಾಜಅರಸು ಸಂಪುಟದಿಂದ ಸಚಿವರಾದ ಹೆಗ್ಗಳಿಕೆ ಇವರದು. ಅವರ '*Wild Animals*' ಎಂಬ ಗ್ರಂಥಕ್ಕೆ ಹಲವಾರು ಪ್ರಶಸ್ತಿಗಳು ದೊರಕಿವೆ.

1985ರ ವಿಧಾನಸಭೆಗೆ ಕಮ್ಯೂನಿಸ್ಟ್ ಪಕ್ಷದಿಂದ ಆಯ್ಕೆಯಾಗಿ ವಿಧಾನಸಭೆಯ ನಡವಳಿಕೆಯಲ್ಲಿ ಕ್ರಿಯಾಶೀಲವಾಗಿ ರಾಜ್ಯದ ಪ್ರಜ್ಞಾವಂತ ಜನತೆಯ ಗಮನಸೆಳೆದಿದ್ದ ಯು. ಭೂಪತಿ ಉಪ್ಪಾರ ಸಮುದಾಯದವರು. ಈ ಸಮುದಾಯದಿಂದ ವಿಧಾನಸಭೆಗೆ ಸ್ವಾತಂತ್ರ್ಯಾನಂತರ ಆಯ್ಕೆಯಾದ ಏಕೈಕ ಪ್ರತಿನಿಧಿಯಾಗಿದ್ದಾರೆ.

ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಕೊಡುಗೆಯಂತೂ ವಿಶೇಷ ಅಧ್ಯಯನಕ್ಕೆ ಅರ್ಹವಾಗಿದೆ. ಪಂಪಪೂರ್ವ ಯುಗದ ಗದ್ಯಕೃತಿ ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ' ಕನ್ನಡ ಸಾಹಿತ್ಯದಲ್ಲಿ ಮಹತ್ವದ ಕೃತಿ ಎನಿಸಿದೆ. ಶಿವಕೋಟ್ಯಾಚಾರ್ಯ ಬಳ್ಳಾರಿ ಜಿಲ್ಲೆಯವನೆಂದು ಡಾ॥ ಶಾಂತಿನಾಥ ದಿಬ್ಬದ ಹೇಳುತ್ತಾರೆ. ಹಂಪಿಯ ಮಹಾದೇವ ಹಾಗೂ ಶರ್ವಾಣಿಯರ ಮಗ ಹರಿಹರ 'ರಗಳೆಯ ಕವಿ' ಎಂದೇ ಖ್ಯಾತನಾಗಿದ್ದಾನೆ. ಹರಿಹರ ಶಿವಶರಣರ ಅಧಿಕೃತ ಚರಿತ್ರೆಯನ್ನು ಬರೆದ ಮಹಾಕವಿ. ಅವನ ಸೋದರಳಿಯ ರಾಘವಾಂಕ ಷಟ್ಪದಿಗಳ ಪ್ರವರ್ತಕ. ಆತ ಕನ್ನಡದಲ್ಲಿ ಹೊಸ ಪರಂಪರೆಯನ್ನು ಬೆಳೆಸಿದ ಮಹಾನುಭಾವ. ಚನ್ನಬಸವಪುರಾಣದ ಕರ್ತೃ ವಿರೂಪಾಕ್ಷ ಪಂಡಿತ ಹಂಪಿಯವ.

ವಿಜಯನಗರ ಸಾಮ್ರಾಜ್ಯ ಕಾಲವನ್ನು ತೆಲುಗು ಮತ್ತು ಕನ್ನಡ ಭಾಷೆಗಳ ಇತಿಹಾಸದ ದೃಷ್ಟಿಯಿಂದ 'ಸುವರ್ಣಯುಗ' ಎಂದೇ ಕರೆಯಲಾಗುತ್ತದೆ. ಕೃಷ್ಣದೇವರಾಯನ ಆಸ್ಥಾನಕವಿ ತಿಮ್ಮಣ್ಣ, ಕುಮಾರವ್ಯಾಸ ಉಳಿಸಿದ ಮಹಾಭಾರತದ ಎಂಟು ಪರ್ವಗಳನ್ನು ಪೂರ್ಣಗೊಳಿಸಿದನು. ದಾಸಸಾಹಿತ್ಯದ ವ್ಯಾಸರಾಯರು, ಅವರ ಶಿಷ್ಯರಾದ ಪುರಂದರದಾಸರು

ಹಾಗು ಕನಕದಾಸರು ಕೃಷ್ಣದೇವರಾಯನ ಸಮಕಾಲೀನರು. ಅದೇ ರೀತಿ ತೆಲುಗು ಸಾಹಿತ್ಯದ ಶ್ರೀನಾಥ, ತೆನಾಲಿ ರಾಮಕೃಷ್ಣ, ಅಲ್ಲಸಾನಿ ಪೆದ್ದನ, ನಂದಿ ತಿಮ್ಮಣ್ಣ ಹಾಗು ಕೃಷ್ಣದೇವರಾಯ ಅವರುಗಳು ವಿಜಯನಗರ ಸಾಮ್ರಾಜ್ಯದ ಕೀರ್ತಿ ಬೆಳಗಿದವರು.

ಆಧುನಿಕ ಕಾಲದಲ್ಲೂ ಬಳ್ಳಾರಿ ಜಿಲ್ಲೆ ನಾಡು-ನುಡಿಗೆ ಹಿರಿದಾದ ಕಾಣಿಕೆ ನೀಡುತ್ತಾ ಬಂದಿದೆ. ಕ್ರಿ.ಶ. 1810ರಲ್ಲಿ ಬಳ್ಳಾರಿಗೆ ಬಂದ ಲಂಡನ್ ಮಿಷನ್ನಿನ ಜಾನ್ ಹ್ಯಾಂಡ್ಸ್ 1820ರಲ್ಲಿ ಬೈಬಲ್ಲಿನ ಅನುವಾದವನ್ನು 'ಹೊಸ ಒಡಂಬಡಿಕೆ' ಎಂಬ ಹೆಸರಿನಲ್ಲಿ ಪ್ರಕಟಿಸಿದ. ಈ ಕೃತಿಯೇ ಹೊಸಗನ್ನಡದ ಗದ್ಯರೂಪದ ಮೊದಲ ಕೃತಿ. ಇವನ ಜೊತೆಗಾರ ವಿಲಿಯಂ ಲೀವ್ ಎಂಬಾತ 1817ರಲ್ಲಿ ಕನ್ನಡ-ಇಂಗ್ಲೀಷ್ ಭಾಷೆಗಳಲ್ಲಿ ಬೈಬಲನ್ನು ಬರೆದನು.

ಕ್ರಿ.ಶ. 1844ರಲ್ಲಿ ಬಳ್ಳಾರಿಯಿಂದ 'ಕನ್ನಡ ಸಮಾಚಾರ' ಎಂಬ ಪತ್ರಿಕೆ ಪ್ರಕಟವಾಗುತ್ತಿತ್ತು. ಗದ್ಯ, ನಿಘಂಟು, ಮುದ್ರಣ, ಅನುವಾದ, ಪತ್ರಿಕೆ, ಶಿಕ್ಷಣ — ಹೀಗೆ ಹೊಸಗನ್ನಡದ ಸಾಹಿತ್ಯದ ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಮೊದಲ ಸ್ಥಾನ ಗಳಿಸಿದ ಕೀರ್ತಿ ಬಳ್ಳಾರಿ ಜಿಲ್ಲೆಗೆ ಸೇರಿದೆ.

ಹರಪನಹಳ್ಳಿ ಭೀಮವ್ವ ಸೊಂಡೂರಿನ ದಿವಾನ ಅಚ್ಚಪ್ಪ ಅವರ ಮಗಳಾದ ಬರಬಾಯಿ ಲಕ್ಷ್ಮೀದೇವಮ್ಮ (ಕ್ರಿ.ಶ. 1890) ಅವರು ದಾಸಸಾಹಿತ್ಯ ಪರಂಪರೆಯನ್ನು ಮುಂದುವರಿಸಿಕೊಂಡುಹೋಗಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ 200 ಬರಹಗಾರರು ಬಳ್ಳಾರಿಯಿಂದ ಬಂದಿದ್ದಾರೆ.

ವೈ. ನಾಗೇಶಶಾಸ್ತ್ರಿ ಮತ್ತು ವ್ಯಾಕರಣತೀರ್ಥ ವೈ. ಚಂದ್ರಶೇಖರಶಾಸ್ತ್ರಿ ಇಬ್ಬರೂ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದವರು. ಬಸವರಾಜಶರ್ಮ, ಹಳಗನ್ನಡ ಸಾಹಿತ್ಯದಲ್ಲಿ ಪರಿಣಿತರು. ಜೋಳದರಾಶಿ ದೊಡ್ಡನಗೌಡ ಅವರು ಖ್ಯಾತ ಗಮಕಿ ಹಾಗು ಸಾಹಿತ್ಯ ಸಂಸ್ಕೃತಿಗಳ ಸಂಘಟಕರು. ಆಧುನಿಕಯುಗದಲ್ಲಿ ಮಹಾಕಾವ್ಯ ರಚಿಸಿದ ಹಿ.ಮ. ನಾಗಯ್ಯ, ರಾಷ್ಟ್ರಕವಿ ಕುವೆಂಪು ಅವರ ಶಿಷ್ಯರಾದ ಕೋ. ಚನ್ನಬಸಪ್ಪ, ಕೆ.ಬಿ. ಹನುಮಂತರಾಯ, ಬಿಂದೂ ಮಾಧವರಾವ್, ಬಳ್ಳಾರಿ ಅಂದರೆ ಬೀಚಿ ಎಂದು ಖ್ಯಾತರಾಗಿದ್ದ ಸಾಹಿತಿ, ರಾಜಶೇಖರ ನೀರಮಾನ್ವಿ, ಕುಂ. ವೀರಭದ್ರಪ್ಪ (ಕುಂವೀ), ಎಸ್. ಹಿರೇಮಠ, ಮಹಾಬಲೇಶ್ವರ ಕಾಟ್ರಹಳ್ಳಿ, ಪತ್ರಕರ್ತ ರವಿ ಬೆಳಗೆರೆ, ಹಿ.ಮ. ಗುರುಬಸವರಾಜ, ಹೊ.ಮ. ಪಂಡಿತಾರಾಧ್ಯ, ಸುಕನ್ಯಾದುವೆ, ಸುಶೀಲಾ ಶಿರೂರ, ಚಂದ್ರಕಾಂತ ವಡ್ಡ, ಕೇಶವಮಳಗಿ, ಶ್ರೀನಾಥ ರಾಯಸಂ, ವೇದವ್ಯಾಸ ಜೋಷಿ, ಇಟಗಿ ಈರಣ್ಣ, ಅರವಿಂದ ನಡಹಳ್ಳಿ, ಸುಶೀಲಾದೇವಿರಾವ್, ಹುರಕಡ್ಲಿ ಶಿವಕುಮಾರ, ನಾಟಕ ಕ್ಷೇತ್ರದಲ್ಲಿ ದೊಡ್ಡನಗೌಡ, ಎಂ.ಪಿ. ಪ್ರಕಾಶ್, ಚಂದ್ರಯ್ಯ, ಡಾ॥ ಮಲ್ಲಶೆಟ್ಟಿ, ಗುರುನಾಥ ಇನಾಮಾದಾರ, ವೃತ್ತಿರಂಗಭೂಮಿಯಲ್ಲಿ ಭರಮಲಿಂಗಪ್ಪ, ವಾದಿರಾಜ, ಜಾನಪದ ಕ್ಷೇತ್ರದಲ್ಲಿ ಮುದೇನೂರು ಸಂಗಣ್ಣ, ಕೆ. ವಿರೂಪಾಕ್ಷಗೌಡ, ಗಮಕಿ ಎನ್. ತಿಪ್ಪಯ್ಯ, ಸಂಶೋಧನಾ

ಕ್ಷೇತ್ರದಲ್ಲಿ ಡಾ॥ ಎಸ್.ಎಂ. ವೃಷಭೇಂದ್ರಸ್ವಾಮಿ, ಸಂಸ್ಕೃತ ವಿದ್ವಾಂಸರಾದ ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯ, ಡಾ॥ ಮರುಳಸಿದ್ಧಯ್ಯ, ವಿಶ್ವನಾಥಶೆಟ್ಟಿ, ಪ್ರವಾಸ, ಅನುವಾದ ಸಾಹಿತ್ಯದಲ್ಲಿ ಗುರುಮೂರ್ತಿ ಪೆಂಡಕೂರ ಮೊದಲಾದವರು ಬಳ್ಳಾರಿ ಜಿಲ್ಲೆಗೆ ಸೇರಿದ್ದು, ರಾಜ್ಯದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡಿದ್ದಾರೆ. ಕನ್ನಡಿಗರ ಬಹುದಿನದ ಕನಸಾದ ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ಜ್ಞಾನ ಬಿತ್ತುವ ಕೆಲಸ ಮಾಡುತ್ತಿದೆ. ಡಾ. ಚಂದ್ರಶೇಖರ ಕಂಬಾರ, ಡಾ॥ ಎಂ.ಎಂ. ಕಲಬುರ್ಗಿ, ಇಂದಿನ ಉಪಕುಲಪತಿಗಳಾದ ಡಾ॥ ಹೆಚ್.ಜೆ. ಲಕ್ಕಪ್ಪಗೌಡ ಅವರುಗಳು ವಿಶ್ವವಿದ್ಯಾನಿಲಯದ ಬೆಳವಣಿಗೆಗ ಕಾರಣಕರ್ತರಾಗಿದ್ದಾರೆ. ಈ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಡಾ॥ ರಮೇಶ್ ಅವರು ಉಪ್ಪಾರ ಸಮುದಾಯ ಕುರಿತಂತೆ ಪ್ರೌಢ ಪ್ರಬಂಧ ರಚಿಸಿ ಡಾಕ್ಟರೇಟ್ ಪದವಿ ಪಡೆದಿದ್ದಾರೆ.

1912ರಲ್ಲಿ ಪ್ರಾರಂಭವಾದ ಕೊಟ್ಟೂರಿನ ಸರಸ್ವತಿ ನಾಟಕ ಸಭಾ ರಾಜ್ಯದೆಲ್ಲೆಡೆ ಉತ್ತಮ ಹೆಸರು ಗಳಿಸಿತು. ನಾಟಕ ಕ್ಷೇತ್ರಗಳಲ್ಲಿ ಒಬ್ಬರಾದ ಮರಿಕೊಟ್ರಪ್ಪ ಅವರನ್ನು ಮರೆಯುವಂತಿಲ್ಲ.

ಬಳ್ಳಾರಿ ಜಿಲ್ಲೆಯಲ್ಲಿ 46 ಉತ್ಸವಗಳು ಜರುಗುತ್ತವೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹಂಪಿ ಉತ್ಸವ ನಡೆಸುತ್ತದೆ. ಹಂಪಿ ರಥೋತ್ಸವ, ಹಡಗಲಿ ತಾಲ್ಲೂಕಿನ ಮೈಲಾರದ ಕಾರ್ಣಿಕ ಮತ್ತು ಬಳ್ಳಾರಿಯ ಮಲ್ಲೇಶ್ವರ ರಥೋತ್ಸವ ಜಿಲ್ಲೆಯ ಪ್ರಮುಖ ಉತ್ಸವಗಳು.

ವೀರಶೈವ ಪಂಚಪೀಠಗಳಲ್ಲಿ ಒಂದಾದ ಉಜ್ಜಯನಿ ಕೂಡ್ಲಿಗಿ ತಾಲ್ಲೂಕಿನಲ್ಲಿದೆ. ಇಲ್ಲಿನ ಮರುಳಸಿದ್ದೇಶ್ವರ ದೇವಾಲಯ ಸುಂದರವಾದ ಕೆತ್ತನೆಯಿಂದ ಕೂಡಿದೆ.

ಕೂಡ್ಲಿಗಿ ತಾಲ್ಲೂಕಿನ ಅಮರದೇವರ ಗುಡ್ಡದಲ್ಲಿ 1.71 ಎಕರೆ ಪ್ರದೇಶ ಆವರಿಸಿರುವ ಬೃಹತ್ ಆಲದಮರವಿದೆ. ಗುಡಿಕೋಟೆ ಸಮೀಪ ಚಿಕ್ಕಜೋಗಿಯಲ್ಲಿ ಮಾದರಿ ಗ್ರಾಮ ಪಂಚಾಯತ್‌ಯಿದೆ. ಇದರ ಮೂಲಪ್ರೇರಕರು ಕೆ. ವೆಂಕಟಸ್ವಾಮಿ ಅವರು.

ಶಿರಗುಪ್ಪ ತಾಲ್ಲೂಕಿನ ಉಪ್ಪಾರ ಹೊಸಹಳ್ಳಿಯಲ್ಲಿ ವಿಶ್ವಕರ್ಮ ಸಮುದಾಯಕ್ಕೆ ಸೇರಿದ ಪವಾಡಪುರುಷನಾದ ನಾಗಲಿಂಗಪ್ಪಗೌಢನ ಗದ್ದುಗೆಯಿದೆ.

## ಉಪ್ಪಾರ ಸಮಾಜ

ಬಳ್ಳಾರಿ ತಾಲ್ಲೂಕಿನ ಬಳ್ಳಾರಿ, ಸಂಗನಕಲ್ಲು, ಶಿರವಾರ, ಕೊಳಗಲ್ಲು, ಹಂದಿಹಾಳ, ಶ್ರೀಧರಗಡ್ಡೆ, ಮೂಗೂರು, ಕುಡತಿನಿ, ಹಗರಿ, ಬೆಳಗಲ್ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1750 ಉಪ್ಪಾರ ಕುಟುಂಬಗಳಿದ್ದು, ಸುಮಾರು 9535 ಉಪ್ಪಾರ ಜನಸಂಖ್ಯೆ ಇದೆಯೆಂದು ಅಂದಾಜು ಮಾಡಲಾಗಿದೆ.

ಶಿರಗುಪ್ಪಾ ತಾಲ್ಲೂಕಿನಲ್ಲಿ ಶಿರಗುಪ್ಪ, ಸಿಂದಿಗೆರೆ, ಕೆಂಚನಗುಡ್ಡ, ಉಪ್ಪಾರ ಹೊಸಹಳ್ಳಿ, ತೆಕ್ಕಲಕೋಟೆ, ನಿಟ್ಟೂರು, ಹೆರಕಲ್ಲು, ಬಾಗೇವಾಡಿ, ಬೂದಿಗುಪ್ಪ, ತುರಿಗನೂರು, ಕುಳೂರು, ಗುಂಡಿಗನೂರು, ಹಾವಿನಹಾಳು, ಸಿರಿಗೇರಿ, ಉಳ್ಳೂರು, ಗಜಗನಾಳು, ಇಟ್ಟಿಗೆಹಾಳು,

ಕೊಂಡೇಹಾಳು, ವೆಂಕಟಾಪುರ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1250 ಉಪ್ಪಾರ ಕುಟುಂಬಗಳಿದ್ದು, ಸುಮಾರು 7500 ಉಪ್ಪಾರ ಜನಸಂಖ್ಯೆಯಿದೆ.

ಸಂಡೂರು ತಾಲ್ಲೂಕಿನ ಸಂಡೂರು, ತೋರಣಗಲ್ಲು, ಕುರಿಕೊಪ್ಪ, ಮಾದಾಪುರ, ಹೊಸದರೋಜಿ, ಹಳೇದರೋಜಿ, ಎಸ್. ಬಸಾಪುರ, ದೊಡ್ಡ ಉಪ್ಪಾರಹಳ್ಳಿ, ಕಾಳಿಂಗೆರೆ, ಸಣ್ಣ ಉಪ್ಪಾರಹಳ್ಳಿ, ಕಸಬನಹಳ್ಳಿ, ಚಪ್ಪರದಹಳ್ಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1045 ಉಪ್ಪಾರ ಕುಟುಂಬಗಳಿದ್ದು, ಸುಮಾರು 5750 ಉಪ್ಪಾರ ಜನಸಂಖ್ಯೆಯಿದೆ ಯೆಂದು ಹೇಳಬಹುದು.

ಹೊಸಪೇಟೆ ತಾಲ್ಲೂಕಿನಲ್ಲಿ ಹೊಸಪೇಟೆ, ಮಲಪನಗುಡಿ, ಅನಂತಸೇನಗುಡಿ, ಕಮಲಾಪುರ, ನಂ.10 ಮುದ್ದಾಪುರ, ದೇವಲಾಪುರ, ನಂದಿಬಂಡೆ, ಮರಿಯಮ್ಮನಹಳ್ಳಿ, ಕಂಪ್ಲಿ, ಉಪ್ಪಾರಹಳ್ಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1030 ಉಪ್ಪಾರ ಕುಟುಂಬಗಳಿದ್ದು, ಸುಮಾರು 5900 ಉಪ್ಪಾರ ಜನಸಂಖ್ಯೆ ಇದೆ ಎನ್ನಬಹುದು.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಹಗರಿಬೊಮ್ಮನಹಳ್ಳಿ, ವರ್ಲಹಳ್ಳಿ, ಮಾಲವಿ, ಪಿಂಜಾರ ಹೆಗಡೆಹಾಳು, ಬೆಣಕಲ್, ಅಂಬಳಿ, ಕಲ್ಲಳ್ಳಿ, ಕಣವಿನಾಯಕನಹಳ್ಳಿ, ಲೋಕಪ್ಪನಹೊಲ, ಉಪ್ಪಾರಘಟ್ಟ, ಮಾದೂರು, ಬಂಡಿಹಳ್ಳಿ, ಕೊಂಡೇನಹಳ್ಳಿ, ಕೋಡಿಹಳ್ಳಿ, ಸೀಗನಹಳ್ಳಿ, ಹಂಪಸಾಗರ, ಬಾಚಿಗೊಂಡನಹಳ್ಳಿ, ಅಡವಿಆನಂದದೇವನಹಳ್ಳಿ, ಅಂಕಸಮುದ್ರ, ಮರಬ್ಬಿಹಾಳ, ಹಂಪಾಪಟ್ಟಣ, ಏಣಗಿಬಸಾಪುರ, ದಿಬ್ಬದಹಳ್ಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1850 ಉಪ್ಪಾರ ಕುಟುಂಬಗಳಿದ್ದು, ಸುಮಾರು 9850 ಉಪ್ಪಾರ ಜನಸಂಖ್ಯೆ ಇದೆಯೆಂದು ಸಮೀಕ್ಷೆ ತಿಳಿಸುತ್ತದೆ.

ಕೂಡ್ಲಗಿ ತಾಲ್ಲೂಕಿನ ಕೂಡ್ಲಗಿ, ಕೈವಲ್ಯಪುರ, ಜಂಗಮ ಸೋಪಿನಹಳ್ಳಿ, ಲೊಟ್ಟನಕೆರೆ, ಶಿವಪುರ, ಸಾಸಲವಾಡ, ಹಿರೇಹೆಗಡೆಹಾಳ, ತಿಮ್ಮಲಾಪುರ, ಬೊಪ್ಪಲಾಪುರ, ಕಂದಗಲ್ಲು, ಹಾರಾಳು, ಹಾರಕನಾಳು, ನಡುಮಾವಿನಹಳ್ಳಿ, ಮರೂರು, 76 ನೇ ಟಿಕಲ್ಲಹಳ್ಳಿ, ಪೂಜಾರಹಳ್ಳಿ, ಕೊಟ್ಟೂರು ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1500 ಉಪ್ಪಾರ ಕುಟುಂಬಗಳಿದ್ದು, ಸುಮಾರು 8350 ಉಪ್ಪಾರ ಜನಸಂಖ್ಯೆ ಇದೆ ಎಂದು ಅಂದಾಜು ಮಾಡಲಾಗಿದೆ.

ಹೂವಿನಹಡಗಲಿ ತಾಲ್ಲೂಕಿನಲ್ಲಿ ಹಡಗಲಿ, ಹೊಳಗುಂದಿ, ತಮಲಾಪುರ, ಹಿರೇಕೊಳಚಿ, ಉಪ್ಪನಾಯಕನಹಳ್ಳಿ, ಬಾವಿಹಳ್ಳಿ, ಗಿರಿಯಾಪುರ, ಹಿರೇಹಡಗಲಿ, ಸೋಗಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1025 ಉಪ್ಪಾರ ಕುಟುಂಬಗಳಿದ್ದು ಸುಮಾರು 5600 ಉಪ್ಪಾರ ಜನಸಂಖ್ಯೆ ಇದೆಯೆಂದು ಹೇಳಲಾಗಿದೆ.

ಹೀಗೆ ಬಳ್ಳಾರಿ ಜಿಲ್ಲೆಯಲ್ಲಿ 9450 ಉಪ್ಪಾರ ಕುಟುಂಬಗಳಿದ್ದು, ಸುಮಾರು 52,485 ಕ್ಕೂ ಅಧಿಕ ಉಪ್ಪಾರ ಜನಸಂಖ್ಯೆ ಇದೆ ಎಂದು ಅಂದಾಜು ಮಾಡಲಾಗಿದೆ.

ಜಿಲ್ಲೆಯಲ್ಲಿ ಉಪ್ಪಾರ ಸಂಘವಿದ್ದು ಯು. ವೆಂಕೋಬಾ ಅದರ ಅಧ್ಯಕ್ಷರು.

ಈ ಜಿಲ್ಲೆಯಲ್ಲಿ ಬಹುಮಟ್ಟಿಗೆ ಕನ್ನಡ ಭಾಷೆಯನ್ನೇ ಬಳಸುತ್ತಾರೆ. ಅವರಲ್ಲಿ ಮೂರನೆಯ ಒಂದು ಭಾಗದಷ್ಟು ಉಪ್ಪಾರರು ತೆಲುಗು ಭಾಷೆಯನ್ನು ಬಳಸುತ್ತಾರೆ.

'ಉಪ್ಪಾರ', 'ಮೇಲುಸಕ್ಕರೆ' ಎಂಬ ಉಪನಾಮಗಳಿಂದ ಉಪ್ಪಾರರನ್ನು ಕರೆಯುತ್ತಾರೆ. ಮೂಲತಃ ಉಪ್ಪಾರರು ಇಲ್ಲಿ ಅತ್ಯಂತ ಕಡುಬಡವರು. ಗ್ರಾಮೀಣ ಪ್ರದೇಶದಲ್ಲಿ ಭೂರಹಿತ ಕುಟುಂಬಗಳ ಸಂಖ್ಯೆ ಯಥೇಚ್ಛವಾಗಿದೆ. ಭೂಮಿಯಿದ್ದರೂ ಎರಡು ಎಕರೆಗಿಂತ ಕಡಿಮೆಯಿರುವವರ ಸಂಖ್ಯೆ ಹೆಚ್ಚಾಗಿದೆ. ಭೂಕಾರ್ಮಿಕರೆ ಇಲ್ಲಿ ಹೆಚ್ಚಾಗಿದ್ದಾರೆ. ಸೌದೆ ಮಾರುವದು, ಡಾಂಬರೀಕರಣ ಹಾಗೂ ಕಟ್ಟಡ ನಿರ್ಮಾಣದಂತಹ ಕೆಲಸಗಳಲ್ಲಿ ಈ ಜನಾಂಗದ ಶೇ. 40 ರಷ್ಟು ಜನರಿದ್ದಾರೆ.

ಸಾಕ್ಷರತಾ ಪ್ರಮಾಣ ಅತ್ಯಂತ ಕಡಿಮೆಯಿದೆ. ಕೆಲಸಕ್ಕಾಗಿ ಬೇರೆ ಬೇರೆ ರಾಜ್ಯಗಳಿಗೆ ಹೋಗುವ ಉಪ್ಪಾರ ಕುಟುಂಬಗಳನ್ನು ಕಾಣಬಹುದು. ಹೀಗಾಗಿ ಶಾಲೆಯ ಮುಖ ನೋಡದ ಉಪ್ಪಾರರ ಮಕ್ಕಳು ಗ್ರಾಮೀಣ ಪ್ರದೇಶದ ಎಲ್ಲ ಮನೆಯಲ್ಲೂ ದೊರೆಯುತ್ತಾರೆ. ಶೇ. 40ರಷ್ಟು ಸಾಕ್ಷರತೆ ಈ ಜನಾಂಗದಲ್ಲಿ ಕಂಡುಬಂದರೆ ಅದೊಂದು ದೊಡ್ಡ ಸಾಧನೆ. ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ. 30ಕ್ಕಿಂತ ಕೆಳಮಟ್ಟದಲ್ಲಿದೆ.

ಈ ಸಮುದಾಯಕ್ಕೆ ಸೇರಿದ ಮೂವರು ವಕೀಲರನ್ನು ಗುರುತಿಸಲಾಗಿದೆ. ಬಳ್ಳಾರಿಯ ಯು. ವೆಂಕೋಬಾ, ಯು. ತಿಮ್ಮಪ್ಪ ಹಾಗು ಹೆಚ್.ಬಿ. ಹಳ್ಳಿಯ ಜಿ. ಗಂಗಾಧರ್ ವಕೀಲರು. ಸಣ್ಣಪುಟ್ಟ ವ್ಯಾಪಾರ ಮಾಡುವ ಆರು ಕುಟುಂಬಗಳಿವೆ. ಸಣ್ಣ ಪ್ರಮಾಣದ ಕೈಗಾರಿಕೆ ನಡೆಸುವ ಒಂದು ಕುಟುಂಬವಿದೆ. ಬಳ್ಳಾರಿ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯಕ್ಕೆ ಸೇರಿದ ಆರು ಜನ ಗುತ್ತಿಗೆದಾರರು, ಇಬ್ಬರು ವೈದ್ಯರು ಮತ್ತು ಒಬ್ಬ ಇಂಜಿನಿಯರ್ ಇದ್ದಾರೆಂದು ತಿಳಿದುಬಂದಿದೆ.

ಈ ಸಮುದಾಯದವರು ಆಸ್ಪತ್ರೆ ಅಥವಾ ಶಿಕ್ಷಣ ಸಂಸ್ಥೆ ನಡೆಸುತ್ತಿರುವವರ ಬಗ್ಗೆ ಸರಿಯಾದ ಮಾಹಿತಿ ಇಲ್ಲ. ಹೆಚ್.ಬಿ. ಹಳ್ಳಿಯ ಬಸಪ್ಪ ಉಪ್ಪಾರ ಸಾಹಿತಿಗಳು. ಸಂಡೂರು ತಾಲ್ಲೂಕು ಕುರಿಕೊಪ್ಪ ಗ್ರಾಮದ ಪಾಲಾಕ್ಷಪ್ಪ ನಾಟಕ ಕಲಿಸುವ ವೃತ್ತಿಯವರು.

ಹಗರಿಬೊಮ್ಮನಹಳ್ಳಿ ತಾಲ್ಲೂಕು ಉಪ್ಪಾರಗಟ್ಟದ ಜಿ. ಹುಲ್ಲಪ್ಪ ವಿ.ಎಸ್.ಎನ್.ಎನ್. ಮಾಜಿ ಅಧ್ಯಕ್ಷರು. ಅದೇ ತಾಲ್ಲೂಕಿನ ಹಂಪಸಾಗರದ ಯು. ಲಕ್ಷ್ಮಣ ಅವರು ಪಿ.ಎಲ್.ಡಿ.ಬಿ. ಉಪಾಧ್ಯಕ್ಷರು. ಕೂಡ್ಲಗಿ ತಾಲ್ಲೂಕು ಟಿ. ಕಲ್ಲೊಳ್ಳಿಯ ಕರಡಿ ಬಸಪ್ಪನ ಮಗ ಸಿದ್ದಪ್ಪ, ಹಾಲಿ ತಾಲ್ಲೂಕು ಪಂಚಾಯ್ತಿ ಸದಸ್ಯರು, ಅದೇ ತಾಲ್ಲೂಕಿನ ಜಂಗಮ ಸೋವೇನಹಳ್ಳಿಯ ಯು. ಹುಲ್ಯಪ್ಪ ಗ್ರಾಮ ಪಂಚಾಯ್ತಿ ಮಾಜಿ ಉಪಾಧ್ಯಕ್ಷರು.

ಯು. ಭೂಪತಿ, ಬಳ್ಳಾರಿಯ ಯು. ವೆಂಕೋಬಾ, ಪಿ. ಮಲ್ಲಪ್ಪ, ಯು. ವೆಂಕಟೇಶ, ಶಿರಗುಪ್ಪಿ ತಾಲ್ಲೂಕಿನ ಯು. ಗಂಗಪ್ಪ, ಕೆ. ಯು. ವೀರಣ್ಣ, ಸಂಡೂರು ತಾಲ್ಲೂಕಿನ ಶಂಕರಣ್ಣ ಉಪ್ಪಾರ, ಕೂಡ್ಲಗಿ ತಾಲ್ಲೂಕಿನ ಕೈವಲ್ಯಪುರದ ಯು.ಡಿ. ಕೃಷ್ಣಪ್ಪ, ಟಿ. ಕಲ್ಲಹಳ್ಳಿಯ ಸಿದ್ದಪ್ಪ,

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಜಿ. ಗಂಗಾಧರ, ಬಾಲಕೃಷ್ಣ, ಮಂಜುನಾಥ, ಈಶಪ್ಪ, ಉಪ್ಪಾರ ಘಟ್ಟದ ಜಿ. ಹುಲ್ಯಪ್ಪ, ಜಂಗಮಸೋವೇನಹಳ್ಳಿಯ ಯು. ಹುಲ್ಯಪ್ಪ, ಹಂಪಸಾಗರದ ಯು. ಲಕ್ಷ್ಮಮ್ಮ ಮುಂತಾದವರು ಜಿಲ್ಲೆಯ ಈ ಸಮುದಾಯದ ಪ್ರಮುಖರು ಹಾಗೂ ಸಮಾಜದ ಹಿತಚಿಂತಕರು.

ಸಂಡೂರು ವಿಧಾನಸಭಾ ಕ್ಷೇತ್ರವನ್ನು ಮೊದಲ ಬಾರಿಗೆ ಉಪ್ಪಾರರು ಪ್ರತಿನಿಧಿಸಿದ್ದೇ ಈ ಸಮಾಜದ ಇತಿಹಾಸದಲ್ಲಿ ದಾಖಲಾರ್ಹ ಸಂಗತಿಯಾಗಿದೆ. ಯು. ಭೂಪತಿ ಅವರ ಹೆಸರಲ್ಲೇ ಈ ದಾಖಲೆ. ಕಳೆದ ಹದಿನೈದು-ಇಪ್ಪತ್ತು ವರ್ಷಗಳಿಂದ ಈ ಸಮಾಜದಿಂದ ಮತ್ತೊಬ್ಬ ಶಾಸಕರು ಬಂದಿಲ್ಲ. ಎಂದರೆ ಸಂಘಟನೆ ಹಾಗು ಜಾಗೃತಿಯ ಕೊರತೆ ಕಾಣಬಹುದು.

ಬಳ್ಳಾರಿ ಜಿಲ್ಲೆಯ ಉಪ್ಪಾರ ಸಮಾಜ ಎಷ್ಟೊಂದು ದುಃಸ್ಥಿತಿಯಲ್ಲಿದೆ ಎಂದರೆ ಅಲ್ಲಿಂದ ಸಮರ್ಪಕ ಮಾಹಿತಿ ಸಂಗ್ರಹಣೆ ಸಾಧ್ಯವಾಗಿಲ್ಲ. ಕೇಂದ್ರ ಸಂಘ ಎಂದರೆ ಡಿ.ಎಸ್. ರಾಮಪ್ಪ ಅವರು ಅಧ್ಯಕ್ಷರಾಗಿದ್ದಾಗ ಈ ಸಂಘ ಕ್ರಿಯಾಶೀಲವಾಗಿತ್ತು. ಆಗ ಎಲ್ಲ ಜಿಲ್ಲೆಗಳೂ ಒಂದಿಷ್ಟು ಉತ್ಸಾಹ ತೋರುತ್ತಿದ್ದವು.

ಜಿಲ್ಲೆ, ತಾಲ್ಲೂಕು, ಹೋಬಳಿ ಹಾಗು ಗ್ರಾಮಮಟ್ಟದಲ್ಲಿ ಈ ಸಮುದಾಯವನ್ನು ಸಂಘಟಿಸಬೇಕು. ಹಿಂದುಳಿದ ವರ್ಗಗಳಲ್ಲಿ 'ಹಿರಿಯಣ್ಣ' ನಂತಿರುವ ಒಂದೆರಡು ಸಮುದಾಯಗಳು ಅಸಹಕಾರ ತೋರಿದರೆ ಆಶ್ಚರ್ಯಪಡಬೇಕಾಗಿಲ್ಲ. ಹಿಂದುಳಿದ ವರ್ಗಗಳಿಗೆ ಅಧಿಕಾರ ಕೊಡಿ ಎಂಬ ಹೋರಾಟದಲ್ಲಿ ಬಾವುಟ ಹಿಡಿಯಲು ಉಪ್ಪಾರರಂತಹ ಅಸಂಘಟಿತ ಸಮುದಾಯವನ್ನು ಅವರುಗಳು ಬಳಸಿಕೊಳ್ಳುತ್ತಾರೆ. ಅಧಿಕಾರ ಹಂಚಿಕೆಯ ಸಂದರ್ಭದಲ್ಲಿ ತಮ್ಮ ಜಾತಿಯವರನ್ನೇ ನೋಡುತ್ತಾರೆ. ಇಲ್ಲ ಹಿಂದುಳಿದ ಸಮಾಜದಲ್ಲಿನ ದುರ್ಬಲ ವ್ಯಕ್ತಿಯನ್ನು ನೋಡಿ ಅವರನ್ನು ಅಧಿಕಾರ ಸ್ಥಾನದಲ್ಲಿ ಕೂರಿಸುತ್ತಾರೆ. ಅದಕ್ಕೆ ಕಾರಣ ಆತ ಎಂದೂ ತನ್ನ ಸಮಾಜದ ಸಂಘಟನೆ ಮಾಡಕೂಡದು. ತನ್ನ ಸಾಮರ್ಥ್ಯದಿಂದ ಆತ ಎಂದೂ ಅಧಿಕಾರಕ್ಕೆ ಬರಬಾರದು ಎಂಬ ಸಣ್ಣತನ ಅವರಲ್ಲಿರುತ್ತದೆ.

ಉಪ್ಪಾರರು ವಸ್ತುತಃ ಮುಗ್ಧರು. ಯಾರಾದರೂ ಥಳುಕು-ಬಳುಕಿನ ಮಾತುಗಳನ್ನಾಡಿದರೆ ಮೈಮರೆಯುತ್ತಾರೆ. ಈ ದೌರ್ಬಲ್ಯ ಉಪಯೋಗಿಸಿಕೊಂಡ ಅನೇಕ ಸ್ವಯಂಘೋಷಿತ ನಾಯಕರು ಇವರನ್ನು ಬಲಿಪಶು ಮಾಡುತ್ತಿದ್ದಾರೆ.

ಈ ಜಿಲ್ಲೆಯಲ್ಲಿ 32,000ಕ್ಕಿಂತಲೂ ಹೆಚ್ಚು ಉಪ್ಪಾರ ಮತದಾರರಿದ್ದರೂ ಅವರಿಗೆ ಯಾವುದೇ ನ್ಯಾಯೋಚಿತ ಸ್ಥಾನಮಾನ ದೊರೆತಿಲ್ಲ ಎಂದರೆ ಈ ಸಮಾಜದ ಜಡನಿದ್ರೆ ಹಾಗು ಬೇರೆಯವರ ಸ್ವಾರ್ಥಲಾಲಸೆಯನ್ನು ಗಮನಿಸಬಹುದು. ಪ್ರಜಾಪ್ರಭುತ್ವದ ನಿಜವಾದ ಗುರಿಯೇ ಸಮಾನ ಅಧಿಕಾರ ಹಂಚಿಕೆ ಹಾಗೂ ಎಲ್ಲರಲ್ಲೂ ಆತ್ಮವಿಶ್ವಾಸ ಮೂಡಿಸುವುದೇ ಆಗಿರುತ್ತದೆ. ಆದರೆ ಬಳ್ಳಾರಿ ಜಿಲ್ಲೆಯ ಉಪ್ಪಾರರು ಈ ಎರಡರಿಂದಲೂ ವಂಚಿತರಾಗಿದ್ದಾರೆ. ಚುನಾವಣೆ

ಸಂದರ್ಭದಲ್ಲಿ ಮಾತ್ರ ಎಲ್ಲ ಪಕ್ಷದ ರಾಜಕಾರಣಿಗಳಿಗೆ ಇವರು ಜ್ಞಾಪಕಕ್ಕೆ ಬರುತ್ತಾರೆ. ಹೇಗೋ ಅವರನ್ನು ಬಳಸಿಕೊಂಡರೆ ಇನ್ನು ಐದು ವರ್ಷಗಳು ಚಿಂತೆಯಿಲ್ಲ ಎನ್ನುವ ಮನೋವೃತ್ತಿ ಅವರದು. ಈ ಪರಿಸ್ಥಿತಿ ನಿವಾರಣೆಯಾಗಬೇಕಾದರೆ ನಮ್ಮ ಪೂರ್ವಜನಾದ ಭಗೀರಥನಂತೆ ದೊಡ್ಡ ಪ್ರಯತ್ನ ಮಾಡಬೇಕು. ಅದಕ್ಕೆ ಪೂರ್ವದಲ್ಲೇ ನಾವು ಸಂಘಟಿತರಾಗಿಯೇತೀರುತ್ತೇವೆಂದು 'ಭಗೀರಥ ಸಂಕಲ್ಪ' ಮಾಡಬೇಕು.

**ಮಾಹಿತಿಸಂಗ್ರಹ : *ಯು. ವೆಂಕಟೇಶ್***




# * ಬಾಗಲಕೋಟೆ ಜಿಲ್ಲೆ

## ಐತಿಹಾಸಿಕ ಹಿನ್ನೋಟ

ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿರುವ ಬಾಗಲಕೋಟೆ ಜಿಲ್ಲೆ 1997ರ ಆಗಸ್ಟ್ ತಿಂಗಳಲ್ಲಿ ಜನ್ಮತಾಳಿತು. ಬಿಜಾಪುರ ಜಿಲ್ಲೆಯನ್ನು ವಿಂಗಡಿಸಿ ಬಿಜಾಪುರ ಹಾಗು ಬಾಗಲಕೋಟೆ ಎಂಬ ಎರಡು ಜಿಲ್ಲೆಗಳನ್ನು ರಚಿಸಲಾಗಿದೆ. ಬಾಗಲಕೋಟೆ ಜಿಲ್ಲೆ, ಜಮಖಂಡಿ, ಮುಧೋಳ, ಬಾಗಲಕೋಟೆ, ಬೀಳಗಿ, ಬಾದಾಮಿ ಮತ್ತು ಹುನಗುಂದ ತಾಲ್ಲೂಕುಗಳನ್ನು ಒಳಗೊಂಡಿದೆ.

ಈ ಜಿಲ್ಲೆಯ ಪ್ರದೇಶವು ಉತ್ತರ ಅಕ್ಷಾಂಶ $15^{0}$-48' ರಿಂದ $16^{0}$-06' ರ ಹಾಗೂ ಪೂರ್ವ ರೇಖಾಂಶ $75^{0}$ ರಿಂದ $75^{0}$34' ರ ಮಧ್ಯದಲ್ಲಿ ಹರಡಿಕೊಂಡಿದೆ. ಪುನರ್ ವಿಂಗಡಣೆ ನಂತರ ಬಾಗಲಕೋಟೆ ಜಿಲ್ಲೆ 6587.92 ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. ಘಟಪ್ರಭಾ, ಮಲಪ್ರಭಾ ಹಾಗು ಕೃಷ್ಣಾ ಈ ಜಿಲ್ಲೆಯ ಪ್ರಮುಖ ನದಿಗಳು.

2001 ರ ಜನಗಣತಿ ಪ್ರಕಾರ ಜಿಲ್ಲೆಯಲ್ಲಿ 16,52,232 ಜನಸಂಖ್ಯೆ ಇದ್ದು ಅದರಲ್ಲಿ ಪುರುಷರು 8,35,684 ಹಾಗು ಸ್ತ್ರೀಯರು 8.16.054. ಜಿಲ್ಲೆಯಲ್ಲಿ ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 57.81. ಅದರಲ್ಲಿ ಪುರುಷರು ಶೇ. 71.31. ಮಹಿಳೆಯರು ಶೇ. 44.10. ಭೌಗೋಳಿಕವಾಗಿ ಒಣಹವೆಯನ್ನು ಹೊಂದಿರುವ ಈ ಜಿಲ್ಲೆಯು ಬಯಲು ಸೀಮೆಯ ನಾಡಾಗಿದೆ. ಒಣಹವೆ ಮತ್ತು ಹಿತಕರ ಹವಾಗುಣದಿಂದಾಗಿ ಶ್ರೇಷ್ಠಮಟ್ಟದ ಬಿಳಿಜೋಳ ಹಾಗು

ಗೋಧಿಯನ್ನು ಬೆಳೆಯಲಾಗುತ್ತದೆ. ಜಿಲ್ಲೆಯಲ್ಲಿ ಸರಾಸರಿ 500 ಮಿ.ಮೀ. ಮಳೆಯಾಗುತ್ತಿದ್ದರೂ ಮಳೆಯ ಅನಿಶ್ಚಿತತೆಯಿಂದಾಗಿ ಸತತ ಬರಗಾಲದ ಬವಣೆಗೊಳಗಾಗುತ್ತಿರುತ್ತದೆ.

ಬಾಗಲಕೋಟೆ ಜಿಲ್ಲೆಯು ಶಿಲಾಯುಗದ ಕಾಲದಿಂದಲೂ ಜನವಸತಿಯುಳ್ಳ ಪ್ರದೇಶವಾಗಿತ್ತು. ಆದಿ ಹಳೆಯ ಶಿಲಾಯುಗದ ಕಾಲದಿಂದ ಐತಿಹಾಸಿಕ ಕಾಲದವರೆಗಿನ ಪ್ರಾಚೀನ ನೆಲೆಗಳು ಈ ಜಿಲ್ಲೆಯಲ್ಲಿ ಬೆಳಕಿಗೆ ಬಂದಿವೆ. ಜಿಲ್ಲೆಯ ಕೆಲವು ಪ್ರಮುಖ ಇತಿಹಾಸ ಪೂರ್ವದ ನೆಲೆಗಳಾದ ಅನಗವಾಡಿ, ಐಹೊಳೆ, ಮಸ್ಕಿನಾಳ, ಪಟ್ಟದಕಲ್ಲು ಮುಂತಾದವುಗಳನ್ನು ಸಂಶೋಧಕರು ಗುರುತಿಸಿದ್ದಾರೆ. ಐಹೊಳೆ, ಬಾದಾಮಿ, ಬಾಗಲಕೋಟೆ, ಗಲಗಲಿ, ಮಹಾಕೂಟ ಇವುಗಳು ರಾಮಾಯಣದ ವಿವಿಧ ಘಟನೆಗಳಿಗೆ ಸಂಬಂಧಿಸಿದ ಸ್ಥಳಗಳಾಗಿವೆ. ಈ ಪ್ರದೇಶವನ್ನು ದಂಡಕಾರಣ್ಯವೆಂದು ಗುರುತಿಸಲಾಗಿದೆ. ಎರಡನೆಯ ಶತಮಾನದ ಈಜಿಪ್ತಿನ ಖ್ಯಾತ ಭೂಗೋಳ ಶಾಸ್ತ್ರಜ್ಞ ಟಾಲೆಮಿಯು ಪುರಾತನ ಸ್ಥಳಗಳಾದ ಬಾದಾಯಮಿ (ಬಾದಾಮಿ), ಪೆಟ್ರಿಗಲ್ (ಪಟ್ಟದಕಲ್) ಮುಂತಾದವುಗಳನ್ನು ಪ್ರಥಮ ಬಾರಿಗೆ ಉಲ್ಲೇಖಿಸಿರುತ್ತಾನೆ. ಐದನೆಯ ಶತಮಾನದಿಂದ ಹದಿನಾಲ್ಕನೆಯ ಶತಮಾನದವರೆಗೆ ಜಿಲ್ಲೆಯ ಪ್ರದೇಶದಲ್ಲಿ ನಡೆದ ಐತಿಹಾಸಿಕ ಘಟನೆಗಳ ಬಗೆಗೆ ಶಾಸನಗಳು ದೊರೆತಿವೆ. ಚಾಲುಕ್ಯ ವಂಶದ ಮೊದಲನೆಯ ಪುಲಕೇಶಿಯು ಈ ಜಿಲ್ಲೆಯಲ್ಲಿರುವ ಬಾದಾಮಿ ಕೋಟೆಯನ್ನು ಕಟ್ಟಿಸಿದನೆಂದು ಬಂಡೆ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಎಂಟನೆಯ ಶತಮಾನದ ಮಧ್ಯದವರೆಗೆ ಸಾಗಿದ ಚಾಲುಕ್ಯರ ಆಳ್ವಿಕೆಯ ಅನಂತರ ಹತ್ತನೆಯ ಶತಮಾನದ ಅಂತ್ಯದವರೆಗೆ ರಾಷ್ಟ್ರಕೂಟರೂ ಮುಂದೆ ಹನ್ನೆರಡನೆಯ ಶತಮಾನದವರೆಗೆ ಕಲ್ಯಾಣ ಚಾಲುಕ್ಯರೂ ಮತ್ತು ಕೆಲವು ಕಾಲ ಕಳಚೂರಿಗಳು ಈ ಪ್ರದೇಶವನ್ನು ಆಳಿದರು. ಹದಿಮೂರನೆಯ ಶತಮಾನದಲ್ಲಿ ಇದು ದೇವಗಿರಿಯ ಯಾದವರ ಆಡಳಿತಕ್ಕೆ ಒಳಪಟ್ಟಿತ್ತು. ಹದಿನಾಲ್ಕನೆಯ ಶತಮಾನದ ಆದಿಭಾಗದಲ್ಲಿ ದೇವಗಿರಿಯ ಪತನದೊಡನೆ ತೊಘಲಕರ ಆಳ್ವಿಕೆಗೆ ಒಳಪಟ್ಟಿದ್ದು, ಬಹಮನೀ ರಾಜ್ಯವು ಕ್ರಿ.ಶ. 1347ರಲ್ಲಿ ಸ್ಥಾಪನೆಯಾದಾಗ ಈ ಪ್ರದೇಶವು ಗುಲ್ಬರ್ಗಾ ಪ್ರಾಂತ್ಯದ ಭಾಗವಾಯಿತು. ಸಾವಿರದ ನಾಲ್ಕುನೂರ ಎಂಬತ್ತೊಂಬತ್ತರಲ್ಲಿ ಯುಸುಫ್ ಆದಿಲ್‌ಖಾನ್ ಬಿಜಾಪುರ ಪ್ರಾಂತ್ಯವನ್ನು ಸ್ವತಂತ್ರ ರಾಜ್ಯವೆಂದು ಘೋಷಿಸಿದಾಗ ಇದು ಬಿಜಾಪುರ ರಾಜ್ಯದ ಭಾಗವಾಗಿ ಉಳಿಯಿತು. ಕ್ರಿ.ಶ. 1686ರಲ್ಲಿ ಔರಂಗಜೇಬ ಬಿಜಾಪುರವನ್ನು ಗೆದ್ದುಕೊಂಡಾಗ ಈ ಪ್ರದೇಶವು ಮೊಗಲ ಸಾಮ್ರಾಜ್ಯದ ಭಾಗವಾಯಿತು. ತದನಂತರ ನಿಜಾಮರು, ಮರಾಠರು ಸ್ವಲ್ಪ ಕಾಲ ಈ ಪ್ರದೇಶದ ಮೇಲೆ ಆಧಿಪತ್ಯ ನಡೆಸಿದರು. 1818ರಲ್ಲಿ ಈ ಪ್ರದೇಶವು ಬ್ರಿಟಿಷರ ವಶವಾಗಿ 1947ರವರೆಗೆ ಮುಂಬಯಿ ಪ್ರಾಂತ್ಯದ ಭಾಗವಾಗಿ ಉಳಿದಿತ್ತು. ಸ್ವಾತಂತ್ರ್ಯಾನಂತರ ಮುಂಬಯಿ ರಾಜ್ಯದ ಭಾಗವಾಗಿದ್ದು, 1956ರ ಏಕೀಕರಣದಲ್ಲಿ ಕರ್ನಾಟಕ ರಾಜ್ಯಕ್ಕೆ ಸೇರಿತು.

ಭಾರತೀಯ ವಾಸ್ತುಶಿಲ್ಪದ ತೊಟ್ಟಿಲು, ಪ್ರಯೋಗಶಾಲೆ ಎಂದು ಕರೆಸಿಕೊಂಡಿರುವ ಐಹೊಳೆ, ಪಟ್ಟದಕಲ್ಲು, ಬಾದಾಮಿ ಈ ಜಿಲ್ಲೆಯಲ್ಲಿದ್ದು, ಅಂತರರಾಷ್ಟ್ರೀಯ ಖ್ಯಾತಿ ಪಡೆದಿರುವ ವಿಶ್ವ ಪರಂಪರೆಗೆ ಸೇರಿದೆ.

ಬಾಗಲಕೋಟೆ ತಾಲ್ಲೂಕು ಹಾಗು ಜಿಲ್ಲಾ ಕೇಂದ್ರವೂ ಹೌದು. ಈ ತಾಲ್ಲೂಕಿನಲ್ಲಿ ಒಟ್ಟು 92 ಗ್ರಾಮಗಳಿವೆ. ತಾಲ್ಲೂಕಿನ ಒಟ್ಟು ವಿಸ್ತೀರ್ಣ 936 ಚ.ಕಿಮೀ. ಎರೆಮಣ್ಣು ಹಾಗು ಮರಳುಮಿಶ್ರಿತ ಮಣ್ಣು ಈ ತಾಲೂಕಿನಲ್ಲಿದೆ.

ಕಲಾದಗಿಯ ಆಗ್ನೇಯದಲ್ಲಿರುವ ತುಳಸಗೇರಿ ಬೆಟ್ಟ ಅತಿ ಎತ್ತರವಾದ ಬೆಟ್ಟ. ಇದರ ಎತ್ತರ 620 ಮೀ. ಶಿರೂರ ಬಳಿಯಿರುವ ಬೆಟ್ಟ 591 ಮೀ. ಎತ್ತರವಿದೆ. ತಾಲ್ಲೂಕಿನ ಪೂರ್ವದಲ್ಲಿರುವ ಬೆನಕನಕಟ್ಟೆ ಬೆಟ್ಟ 582 ಮೀ. ಎತ್ತರವಿದೆ.

ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಈ ಊರಿಗೆ 'ಬಾಗಡಗೆ' ಎಂಬ ಹೆಸರಿದ್ದು, ಆಗ ಬಾಗಡಗೆ 70 ಎಂಬುದು ಪ್ರಾಂತ್ಯದ ಮುಖ್ಯಸ್ಥಳವಾಗಿತ್ತು. ಆ ಕಾಲದಲ್ಲಿ ಸಿಂದವಂಶದ ಮಹಾಮಂಡಳೇಶ್ವರರು ಈ ಪ್ರಾಂತ್ಯವನ್ನು ಆಳುತ್ತಿದ್ದರು. ಬಿಜಾಪುರದ ಆದಲ್‌ಷಾಹೀ ಅರಸರ ಆಡಳಿತಕ್ಕೆ ಸೇರಿದಾಗ ಇದಕ್ಕೆ 'ಬಾಗನೂರು ಮತ್ತು ಬಾಂಗಡಿ ಕೋಟ' ಎಂಬ ಹೆಸರು ಬಂದು ಮುಂದೆ 'ಬಾಗಲಕೋಟೆ' ಎಂದು ರೂಪಾಂತರ ಹೊಂದಿತೆಂದು ಕಾಣುತ್ತದೆ.

ಬಾಗಲಕೋಟೆ ರಾಮಾಯಣದ ಕಾಲದಲ್ಲಿ ತಪೋಮಹಿಮನಾದ ರಾವಣನ ಸಾಮ್ರಾಜ್ಯಕ್ಕೆ ಸೇರಿದ್ದು ವಾದ್ಯದವರ (ಭಜಂತ್ರಿ) ಊರಾಗಿತ್ತೆಂದು ತಿಳಿದುಬರುತ್ತದೆ.

ಬಾಗಲಕೋಟೆ ಬಾದಾಮಿ ಚಾಳುಕ್ಯರ ಇತಿಹಾಸದೊಡನೆ ಮೇಳೈಸಿಕೊಂಡಿದೆ. ಬಾದಾಮಿ ಬಾಗಲಕೋಟೆಯಿಂದ ಕೇವಲ 30 ಕಿ.ಮೀ. ದೂರದಲ್ಲಿದೆ. ಬಾಗಲಕೋಟೆ ತಾಲೂಕಿನಲ್ಲಿ ಬಾದಾಮಿ ಚಾಲುಕ್ಯರಿಗೆ ಸಂಬಂಧಿಸಿದಂತೆ ಹತ್ತಾರು ಶಾಸನಗಳು ದೊರೆಯುತ್ತವೆ. ರಾಷ್ಟ್ರಕೂಟರ ಕಾಲದಲ್ಲಿ ಇದು ಸಾಕಷ್ಟು ಪ್ರಾಮುಖ್ಯತೆ ಪಡೆದ ಸ್ಥಳವಾಗಿತ್ತು. ಕಲ್ಯಾಣ ಚಾಳುಕ್ಯರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತ್ತೆಂದು ಶಾಸನಗಳು ಹೇಳುತ್ತವೆ. ವಿಜಯನಗರ ಸಾಮ್ರಾಜ್ಯದ ಆಳ್ವಿಕೆಗೂ ಈ ಪ್ರದೇಶ ಒಳಪಟ್ಟಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಬಾಗಲಕೋಟೆಯ ದೇಸಾಯಿ ಮತ್ತು ದೇಶಪಾಂಡೆ ವಿಜಯನಗರದ ಅರಸರಿಗೆ ಕಂದಾಯ ಸಲ್ಲಿಸುತ್ತಿದ್ದರೆಂದು ತಿಳಿದುಬರುತ್ತದೆ. ಪೇಶ್ವೆಗಳು ಬಾಗಲಕೋಟೆಯಲ್ಲಿ 'ಟಂಕಸಾಲೆ' ಸ್ಥಾಪಿಸಿದ್ದರು.

1908 ರಿಂದ 1921ರವರೆಗೆ ಬಾಗಲಕೋಟೆ ಪ್ರದೇಶದಲ್ಲಿ ನಡೆದ ಭಾರತದ ಸ್ವಾತಂತ್ರ್ಯ ಹೋರಾಟದ ಮೇಲೆ ಬಾಲಗಂಗಾಧರ ತಿಲಕರ ಪ್ರಭಾವವಿತ್ತು. ಈ ತಾಲ್ಲೂಕಿನ ಪ್ರಮುಖ ಹೋರಾಟಗಾರರು ಜಯರಾಮ್ ನರಗುಂದ, ಬಿಂದೂರಾವ್ ನರಗುಂದ, ಶಿರಗೂರು ವಕೀಲರು, ಧಾರವಾಡಕರ್ ವಕೀಲರು, ಜೋದಪುರದರಾವ್ ಮಂಗಳವೇಡೆ ಶ್ರೀನಿವಾಸರಾವ್, ಶ್ರೀನಿವಾಸರಾವ್ ನೇರಲಕೇರಿ, ಎಸ್.ಆರ್. ಮಳಗಿ, ಪರಪ್ಪ ಸಂಕಪ್ಪ

ಸಜ್ಜನ, ಪ್ರಾಣೇಶಕುಲ್ಕರ್ಣಿ, ತೆಂಗಿನ ನಿಂಗಯ್ಯ, ತೆಂಗಿನ ಮುರಗೆಯ್ಯ, ವೆಂಕೂಬಾಯಿ ಶಿರೂರ, ತುಳಸಾಬಾಯಿ ಬುರ್ಲಿ ಹಾಗು ಶ್ರೀಮತಿ ಕಂಠಿ ಮುಂತಾದವರು.

ಬಾಗಲಕೋಟೆ ವಿಧಾನಸಭೆ ಹಾಗು ಲೋಕಸಭೆಯ ಚುನಾವಣೆಗಳಲ್ಲಿ ಸ್ಪರ್ಧಿಸಿ ಅನೇಕ ಜನನಾಯಕರು ಇಲ್ಲಿಂದ ಬಂದಿದ್ದಾರೆ. ಎಸ್. ನಿಜಲಿಂಗಪ್ಪ, ವೀರೇಂದ್ರ ಪಾಟೀಲ, ಪಿ.ಎಂ. ನಾಡಗೌಡ, ಸಂಗನಗೌಡ ಬಸವನಗೌಡ ಪಾಟೀಲ, ಹನುಮಂತಗೌಡ ಭೀಮನಗೌಡ ಪಾಟೀಲ, ಬಿ.ಟಿ. ಮುರನಾಳ, ಜಿ.ಡಿ. ಕಾಂಬಳೆ, ಎಸ್.ಬಿ. ಪಾಟೀಲ, ಹೆಚ್.ವಿ. ಷಾ, ಪಂಪು ಕರಿಬಸಪ್ಪ ಕಳ್ಳಿಗುಡ್ಡ ಪರಪ್ಪ, ಜಿ.ವಿ. ಮಂಟೂರ, ಎ.ಎಸ್. ಸರ್‌ನಾಯಕ್, ಸಿದ್ದು ನ್ಯಾಮಗೌಡ, ಹೆಚ್. ವೈ. ಮೇಟಿ, ಪ್ರಹ್ಲಾದ ಹನಮಂತ ಪೂಜಾರಿ ಮುಂತಾದವರು ಬಾಗಲಕೋಟೆ ಕ್ಷೇತ್ರದ ಚುನಾಯಿತ ಪ್ರತಿನಿಧಿಗಳು.

ಬಾಗಲಕೋಟೆ ಅತ್ಯುತ್ತಮ ಬರಹಗಾರರನ್ನು ನಾಡಿಗೆ ಕೊಟ್ಟ ಕೀರ್ತಿ ಪಡೆದಿದೆ. ಹನ್ನೆರಡನೆಯ ಶತಮಾನದ ವಚನಕಾರ ಹಾಗು ಶರಣ ಇಲ್ಯಾಳ ಬೊಮ್ಮಯ್ಯ ಈಗಿನ ಬಾಗಲಕೋಟೆ ತಾಲ್ಲೂಕಿನ ಇಲಾಳ ಗ್ರಾಮದವನು. ಕನ್ನಡದಲ್ಲಿ ಮೊದಲ ಸಾಮಾಜಿಕ ಕಾದಂಬರಿ 'ಇಂದಿರಾ' ರಚಿಸಿದ ಕೆರೂರ ವಾಸುದೇವಾಚಾರ್ಯರು ಇಲ್ಲಿಯವರು. ಇವರಲ್ಲದೆ ಫ.ಗು. ಹಳಕಟ್ಟಿ, ಮಂಗಳವೇಡೆ ಶ್ರೀನಿವಾಸರಾವ್, ಪಿ.ಹೆಚ್. ಮಂಗಳವೇಡೆ, ಸೋಮಶೇಖರ ಸಾಲಿ, ಎಸ್.ಜೆ. ಹುಬ್ಬಳ್ಳಿ, ಸತ್ಯಾನಂದ ಪಾತ್ರೋಟಿ, ಎಲ್ಲಣ್ಣ ಇಲಾಳ, ಡಾ॥ ಸಿ.ಬಿ. ನಂದೀಮಠ, ಬಸವರಾಜ ಕೊಣ್ಣೂರು, ಹೇಮಾದೇಸಾಯಿ, ಹಾ.ರಾ. ಪುರೋಹಿತ, ಬುರ್ಲಿಬಿಂದುರಾವ್, ಶಂ.ಸು. ಲಿಂಗಶೀಲಾಚಾರ್ಯ, ಪಂಡರಿನಾಥಾಚಾರ್ಯ ಗಲಗಲಿ, ಪ್ರೊ. ಬಿ.ಕೆ. ಹಿರೇಮಠ ಮೊದಲಾದವರನ್ನು ಉಲ್ಲೇಖಿಸಬಹುದು. ಪಿ.ಎಂ. ನಾಡಗೌಡ ಅವರು ಬಿಜಾಪುರ ಸ್ಕೂಲ್ ಬೋರ್ಡ್ ಹಾಗೂ ಬಾಗಲಕೋಟೆಯ ಬಸವೇಶ್ವರ ವಿದ್ಯಾವರ್ಧಕ ಸಂಸ್ಥೆಯ ಅಧ್ಯಕ್ಷರಾಗಿದ್ದರು. ಅಲ್ಲದೆ ವಿಶಾಲ ಮೈಸೂರು ರಾಜ್ಯದ ಪಂಚಾಯ್ತಿ ಹಾಗು ಸಹಕಾರ ಸಚಿವರಾಗಿದ್ದರು. ಇಲ್ಲಿ ಅಂಜುಮನ್ ವಿದ್ಯಾಸಂಸ್ಥೆ ಕೂಡ ಅತ್ಯುತ್ತಮ ಶೈಕ್ಷಣಿಕ ಕಾರ್ಯ ಮಾಡುತ್ತಿರುವುದನ್ನು ಗಮನಿಸಬಹುದು.

ಈ ತಾಲ್ಲೂಕಿನ ಪ್ರಮುಖ ಶಿಲ್ಪಿಗಳೆಂದರ : ಗುಂಡಪ್ಪ ಮಾಯಾಚಾರ್, ಮಲ್ಲಣ್ಣ ಬಡಿಗೇರ, ಕಲಾದಗಿ ಮಹಾದೇವಪ್ಪ ಮತ್ತು ಕೃಷ್ಣಪ್ಪ ಸಹೋದರರು, ಸೋಮಶೇಖರ ಸಾಲಿ ನವ್ಯ ಶೈಲಿಯ ಚಿತ್ರಕಾರರು.

ಶಾಮಾಚಾರ್ ಜೋಶಿ, ಶ್ರೀಶೈಲ ಬೆಳ್ಳೂರು, ಎಸ್.ವಿ. ಮಠಪತಿ, ಚನ್ನಪ್ಪ ಬನ್ನುಗವಾಯಿ, ಸುಗುಣಾಬಾಯಿ ಚಂದಾವರ್ಕರ್, ಸುಶೀಲಾಬಾಯಿ ಅಮೀನಗಡ ಸಂಗೀತದ ದಿಗ್ಗಜಗಳು. ಆಕಾಶವಾಣಿ ಕಲಾವಿದೆ ಮಾಲಾ ಬೀಳಗಿ, ಆರ್.ಹೆಚ್. ಮೊಪರೆ ಅವರನ್ನು ಮರೆಯುವಂತಿಲ್ಲ.

ಬಾಗಲಕೋಟೆಯ ತಾಲ್ಲೂಕಿನ ಪ್ರಮುಖ ಬೆಳೆಗಳು ಜೋಳ, ಹತ್ತಿ, ಸಜ್ಜೆ, ಶೇಂಗಾ, ದ್ವಿದಳ ಧಾನ್ಯ, ಗೋಧಿ ಮುಂತಾದವುಗಳು. ವ್ಯವಸಾಯಯೋಗ್ಯ ಭೂಮಿ 1,80,440 ಎಕರೆಗಳು. ಅರಣ್ಯ ಪ್ರದೇಶ 28750 ಎಕರೆ. ತಾಲ್ಲೂಕಿನ ಅತಿ ದೊಡ್ಡಕೆರೆ ಮಂಚಕಂಡಿ.

ಬಾಗಲಕೋಟೆ ತಾಲ್ಲೂಕಿನಲ್ಲಿರುವ ಪ್ರಮುಖ ಜನಾಂಗಗಳೆಂದರೆ ವೀರಶೈವರು, ಬ್ರಾಹ್ಮಣರು, ವಡ್ಡರು, ಪಾಂಚಾಳರು, ಕುರುಬರು, ಗಾಣಿಗರು, ಉಪ್ಪಾರರು, ಕುಂಬಾರರು, ಲಂಬಾಣಿಗಳು, ಸಮಗಾರರು, ಮುಸ್ಲಿಂರು, ಕ್ರೈಸ್ತರು, ವಾಲ್ಮೀಕಿ, ಇತ್ಯಾದಿ ಸಮಾಜದವರು. ತಾಲ್ಲೂಕಿನ ಮುಖ್ಯ ಐತಿಹಾಸಿಕ ಸ್ಥಳಗಳೆಂದರೆ, ಹವೇಲಿ, ಮಂಚಕುಂಡಿ, ಗದ್ದನಕೇರಿ, ತುಳಸಗೇರಿ, ಶಿರೂರ, ಹಳ್ಳೂರ, ಬೇವೂರು, ಸೀತಿಮನಿ, ಅಚನೂರು, ಮಲ್ಲಾಪುರ, ಹೊನ್ನತುಟ್ಟಿ, ಇಲಾಳ ಮುಂತಾದವುಗಳು.

ಬಾಗಲಕೋಟೆ ನಗರ ಮುಳುಗಡೆಯಲ್ಲಿದ್ದು, 'ನವನಗರ' ಎಂಬ ಹೊಸ ಬಾಗಲಕೋಟೆ ಅಸ್ತಿತ್ವಕ್ಕೆ ಬರುತ್ತಿವೆ. ಹೊಸ ಬಾಗಲಕೋಟೆಯನ್ನು ಯೋಜನಾಬದ್ಧವಾಗಿ ನಿರ್ಮಿಸಲು ಪ್ರಯತ್ನಗಳು ನಡೆದಿವೆ. ಇದರ ಯೋಜನಾಧಿಕಾರಿ ಎಸ್.ಎಂ. ಜಾಮ್‌ದಾರ್ ಪ್ರಸಂಸಾರ್ಹವಾದ ಕೆಲಸ ಮಾಡಿದ್ದಾರೆ.

ಬಾಗಲಕೋಟೆ ಜಿಲ್ಲೆಯ ಇನ್ನೊಂದು ತಾಲ್ಲೂಕು ಹುನಗುಂದ. ಶಾಸನಗಳಲ್ಲಿ ಈ ತಾಲ್ಲೂಕನ್ನು 'ಪೊನ್ನಗುಂದ' 'ಹೊನ್ನಿನ ಗುಂದ' ಎಂದೆಲ್ಲಾ ವರ್ಣಿಸಲಾಗಿದೆ. 'ಪೊನ್ನಗುಂದ 30' ಎಂಬ ಉಪ ಆಡಳಿತ ವಿಭಾಗವನ್ನು ಉಲ್ಲೇಖಿಸಲಾಗುತ್ತಿದೆ. ಈ ತಾಲ್ಲೂಕಿನಲ್ಲಿ 168 ಗ್ರಾಮಗಳಿದ್ದು, ತಾಲ್ಲೂಕಿನ ವಿಸ್ತೀರ್ಣ 1,352.9 ಚ.ಕಿ.ಮೀ. ಕರಡಿ, ಹುನಗುಂದ, ಅಮೀನಗಡ ಹಾಗು ಇಳಕಲ್ ಈ ತಾಲ್ಲೂಕಿನ ಹೋಬಳಿಗಳು. ಕೃಷ್ಣ, ಮಲಪ್ರಭಾ ಈ ತಾಲ್ಲೂಕಿನ ಪ್ರಮುಖ ನದಿಗಳು. ಈ ತಾಲ್ಲೂಕಿನಲ್ಲಿ 9,792 ಚ.ಕಿ.ಮೀ. ಅರಣ್ಯ ಪ್ರದೇಶವಿದೆ. ವಾರ್ಷಿಕ ಮಳೆ 643.81 ಮಿ.ಮೀ. ಇಳಕಲ್, ಬೂದಿಹಾಳ, ಸಿಕ್ಕಾಮಗಿ ಮುಂತಾದ ಕಡೆ ಜಿನುಗು ಕೆರೆಗಳಿವೆ. ಚಿತ್ತವಾಡಗಿ ಕೆರೆ ಯೋಜನೆಯಿಂದ ಲಾಭ ಪಡೆಯುವ ತಾಲ್ಲೂಕುಗಳಲ್ಲಿ ಹುನಗುಂದ ಕೂಡ ಒಂದು. ಜೋಳ, ಸಜ್ಜೆ, ಶೇಂಗಾ, ಸೂರ್ಯಕಾಂತಿ, ದ್ವಿದಳ ಧಾನ್ಯ ಇಲ್ಲಿಯ ಪ್ರಮುಖ ಬೆಳೆಗಳು.

ಹುನಗುಂದದ ಈಶಾನ್ಯಕ್ಕೆ 24 ಕಿ.ಮೀ. ದೂರದಲ್ಲಿರುವ ಕರಡಿ ಗ್ರಾಮದಲ್ಲಿ ಕರಡಿ ಮುಖದ ನಂದಿ ದೇವಾಲಯವಿದೆ. ಕ್ರಿ.ಶ. 1565 ರಲ್ಲಿ ವಿಜಯನಗರ ಮತ್ತು ಬಹಮನಿ ಷಾಹಿಗಳ ನಡುವೆ ಮಹಾಯುದ್ಧ 'ರಕ್ಕಸಗಿ ತಂಗಡಗಿ' ಎಂಬಲ್ಲಿ ನಡೆಯಿತು. ಆ ರಕ್ಕಸಗಿ ತಂಗಡಗಿ ಈ ತಾಲ್ಲೂಕಿಗೆ ಹೊಂದಿಕೊಂಡಿದೆ. ತಾಲ್ಲೂಕಿನ ಆಗ್ನೇಯ ಭಾಗದಲ್ಲಿ 24 ಕಿ.ಮೀ. ದೂರದಲ್ಲಿರುವ ನಂದವಾಡಗಿ ಹಿಂದೆ ನವನಂದರ ರಾಜಧಾನಿಯಾಗಿತ್ತೆಂದು ಐತಿಹ್ಯವಿದೆ.

ಪಟ್ಟಣಕ್ಕೆ ಹೊಂದಿರುವ ಚಿಕ್ಕಗುಡ್ಡದ ನೆಲೆಯಲ್ಲಿ ಜೈನ ಬಸದಿಗಳ ಅವಶೇಷ ಇವೆ.

ಚಾಳುಕ್ಯ ಶೈಲಿಯ ರಾಮಲಿಂಗ ದೇವಾಲಯವಿದೆ. ಇಲ್ಲಿನ ಕೂಡಲಸಂಗಮೇಶ್ವರ ಜಾತ್ರೆ ತುಂಬ ಪ್ರಸಿದ್ಧವಾದುದು.

ಹುನಗುಂದ ತಾಲ್ಲೂಕಿನಲ್ಲಿ ಐಹೊಳೆ, ಇಳಕಲ್, ಕೂಡಲಸಂಗಮ ಮೊದಲಾದ ಖ್ಯಾತ ಐತಿಹಾಸಿಕ ಸ್ಥಳಗಳಿವೆ. ಬಾದಾಮಿ ಚಾಳುಕ್ಯರ ಕಾಲದ ಸುಂದರ ದೇವಾಲಯಗಳ ಸಮೂಹವೆಂದರೆ ಐಹೊಳೆ. ಇದೊಂದು ಪ್ರಮುಖ 'ವಾಸ್ತುಶಿಲ್ಪ ಕಲಾಕ್ಷೇತ್ರ'. ಐಹೊಳೆಯಲ್ಲಿ 125 ದೇವಾಲಯಗಳಿವೆ. ಅವುಗಳನ್ನು 22 ಗುಂಪುಗಳಾಗಿ ವಿಂಗಡಿಸಲಾಗಿದೆ. ಭಾರತದ ವಾಸ್ತುಶಿಲ್ಪವನ್ನು ಅಧ್ಯಯನ ಮಾಡುವವರಿಗೆ ಐಹೊಳೆ ಅಧ್ಯಯನ ಕೇಂದ್ರವಾಗಿದೆ. ಬಾದಾಮಿ ಚಾಳುಕ್ಯರ ಎರಡನೆಯ ಪುಲಿಕೇಶಿಯ ಕಾಲದ ರವಿಕೀರ್ತಿಯ 'ಐಹೊಳೆ ಶಾಸನ' ಕರ್ನಾಟಕದ ಇತಿಹಾಸಿದ ದೃಷ್ಟಿಯಿಂದ ಅತ್ಯಂತ ಪ್ರಮುಖವಾದ ದಾಖಲೆಯಾಗಿದೆ.

ಹುನಗುಂದದಿಂದ 13 ಕಿ.ಮೀ. ದೂರದಲ್ಲಿರುವ ಇಳಕಲ್ ನೇಕಾರಿಕೆ, ಬಣ್ಣ ಹಾಕುವಿಕೆ ಹಾಗು ಗ್ರ್ಯಾನೈಟ್ ಉದ್ಯಮಕ್ಕೆ ಪ್ರಸಿದ್ಧಿಯಾಗಿದೆ. ಇಳಕಲ್ ಸೀರೆ ರಾಜ್ಯದ ಎಲ್ಲೆಡೆ ಜನಪ್ರಿಯವಾಗಿದೆ. ಕೂಡಲಸಂಗಮ ಹುನಗುಂದದಿಂದ 20 ಕಿ.ಮೀ. ದೂರದಲ್ಲಿದೆ. ಕ್ರಿ.ಶ. 12ನೇ ಶತಮಾನದ ಮಹಾದಾರ್ಶನಿಕ ಬಸವಣ್ಣನವರ ವಿದ್ಯಾಭ್ಯಾಸ ಹಾಗೂ ಐಕ್ಯಸ್ಥಳ. ಇತ್ತೀಚೆಗೆ ಕೂಡಲಸಂಗಮವನ್ನು ಅಂತರರಾಷ್ಟ್ರೀಯ ಪ್ರವಾಸಿ ಕೇಂದ್ರವನ್ನಾಗಿ ಮಾಡುವ ಪ್ರಯತ್ನ ನಡೆದಿದೆ. ಹುನಗುಂದದಿಂದ 20 ಕಿ.ಮೀ. ದೂರದಲ್ಲಿರುವ ಕಾಜಗನೂರು ಕರಕುಶಲ ಕಲೆಗೆ ಪ್ರಸಿದ್ಧವಾಗಿದೆ.

ಹುನಗುಂದ ವಿಧಾನಸಭಾ ಕ್ಷೇತ್ರದಿಂದ ಎಸ್.ಆರ್. ಕಂಠಿಯವರು 1952, 1957, 1962 ಹಾಗು 1967ರಲ್ಲಿ ಆಯ್ಕೆಯಾಗಿದ್ದರು. ಜಿ.ಪಿ. ನಂಜಯ್ಯನಮಠ, ಎಸ್.ಬಿ. ನಾಗರಾಳ, ಎಸ್.ಎಸ್. ಕವಿಸೆಟ್ಟಿ ಹಾಗೂ ಎಸ್.ಆರ್. ಕಾಶಪ್ಪನವರ್ ಕೂಡ ಈ ಕ್ಷೇತ್ರ ಪ್ರತಿನಿಧಿಸಿದ್ದಾರೆ.

ಬಾದಾಮಿ ಬಾಗಲಕೋಟೆ ಜಿಲ್ಲೆಯ ಇನ್ನೊಂದು ತಾಲ್ಲೂಕು. ಈ ತಾಲ್ಲೂಕಿನಲ್ಲಿ ಮೂರು ಪಟ್ಟಣಗಳು, 156 ಗ್ರಾಮಗಳು ಇವೆ. ಬಾದಾಮಿ, ಗುಳೇದಗುಡ್ಡ ಹಾಗು ಕೆರೂರು ಈ ತಾಲ್ಲೂಕಿನ ಮುಖ್ಯ ಪಟ್ಟಣಗಳು. ಬಾದಾಮಿ, ಕುಳಗೇರಿ, ಕೆರೂರ ಹಾಗು ಗುಳೇದಗುಡ್ಡ ಹೋಬಳಿಗಳು. ಬಾದಾಮಿ ತಾಲ್ಲೂಕಿನ ವಿಸ್ತೀರ್ಣ 1,406 ಚ.ಕಿ.ಮೀ. ಬಾದಾಮಿ ತಾಲ್ಲೂಕಿನಲ್ಲಿ 31.264 ಹೆಕ್ಟೇರ್ ಅರಣ್ಯ ಪ್ರದೇಶವಿದೆ.

ಬೇಸಾಯಕ್ಕೆ ಮಳೆ ಮುಖ್ಯ ಆಧಾರ. ಇತ್ತೀಚೆಗೆ ಮಲಪ್ರಭಾ ಆಣೆಕಟ್ಟಿನಿಂದ ತಾಲ್ಲೂಕಿನ ಕೆಲವು ಪ್ರದೇಶಕ್ಕೆ ನೀರು ಒದಗುತ್ತದೆ. ಜೋಳ, ಸಜ್ಜೆ, ಹತ್ತಿ, ಗೋಧಿ, ನೆಲಗಡಲೆ, ದ್ವಿದಳ ಧಾನ್ಯ, ಸೂರ್ಯಕಾಂತಿ ಮುಖ್ಯ ಬೆಳೆಗಳು. ಕುರಿ ಸಾಕಣೆ ಹಾಗು ಸುಣ್ಣ ತಯಾರಿಕೆ ಈ ತಾಲ್ಲೂಕಿನಲ್ಲಿ ಕಂಡುಬರುತ್ತದೆ. ಬೇಸಿಗೆಯಲ್ಲಿ ಹೆಚ್ಚು ಉಷ್ಣತೆ ಇರುವ ತಾಲ್ಲೂಕು. 'ಅಗಸ್ತ್ಯ ಸರೋವರ' ಎಂಬ ದೊಡ್ಡ ಪುರಾತನ ಕೆರೆ ಇದೆ. ಬಾದಾಮಿ ಹಿಂದೆ 'ವಾತಾಪಿ' ಎಂದು

ಕರೆಯಲ್ಪಡುತ್ತಿತ್ತು. ಇದು ಹಿಂದೆ ಇಲ್ವಲ ಹಾಗು ವಾತಾಪಿ ಎಂಬ ರಾಕ್ಷಸರ ವಾಸಸ್ಥಳವಾಗಿತ್ತೆಂದು ಹೇಳಲಾಗುತ್ತದೆ. ಕ್ರಿ.ಶ. 150ರಲ್ಲಿ ಈಜಿಪ್ತಿನ ಭೂಗೋಳಶಾಸ್ತ್ರಜ್ಞ 'ಬಾದಾಮಿ'ಯನ್ನು ಉಲ್ಲೇಖಿಸುತ್ತಾನೆ. ಇತಿಹಾಸಪೂರ್ವದ ಮಣ್ಣಿನ ಮಡಿಕೆಯ ಚೂರುಗಳು ಇಲ್ಲಿ ದೊರೆತಿರುವದರಿಂದ ಇದನ್ನು ಪ್ರಾಚೀನ ಜನವಸತಿ ಸ್ಥಳವೆಂದು ಉಲ್ಲೇಖಿಸಲಾಗಿದೆ. ಬಾದಾಮಿಯಲ್ಲಿ ಚಾಳುಕ್ಯವಂಶದ ಪುಲಕೇಶಿ ಕಟ್ಟಿಸಿದ ಕೋಟೆ ಇದೆ. ಕ್ರಿ.ಶ. 1339ರ ಶಾಸನದಲ್ಲಿ ವಿಜಯನಗರದ ಮೊದಲ ದೊರೆ ಹರಿಹರನು ಎರಡು ಸಾವಿರ ಮಹಾಜನಗಳಿಗೆ ಬಾದಾಮಿಯ ದುರ್ಗ, ಕೋಟೆ, ಕೊತ್ತಲ, ಅಗಸೆಗಳಿಂದ ಅದನ್ನು ವಿಸ್ತೃತಗೊಳಿಸುವಂತೆ ಆದೇಶಿಸಿದ್ದನಂತೆ.

ಸವಣೂರ ನವಾಬ, ಮರಾಠ ಪೇಶ್ವೆ ಹಾಗು ಹೈದರ್‌ಅಲಿ ಕೂಡ ಈ ಪ್ರದೇಶದ ಮೇಲೆ ಪ್ರಭುತ್ವ ಸ್ಥಾಪಿಸಿದ್ದರು. ಕ್ರಿ.ಶ. 1818ರಲ್ಲಿ ಬ್ರಿಟಿಷರು ಈ ಪ್ರದೇಶದ ಮೇಲೆ ತಮ್ಮ ಪ್ರಭುತ್ವ ಸ್ಥಾಪಿಸಿದ್ದರು.

ಬಾದಾಮಿ ಪ್ರಸಿದ್ಧವಾಗಿರುವದು ಗುಹಾಂತರ ದೇವಾಲಯಗಳಿಂದ. ಅಖಂಡ ಬಂಡೆಯಲ್ಲಿ ನಿರ್ಮಿಸಲಾಗಿರುವ ನಾಲ್ಕು ಗುಹಾಲಯಗಳು ವಿಶ್ವಪ್ರಸಿದ್ಧವಾಗಿವೆ. ಇದರಲ್ಲಿ ಎರಡು ವೈಷ್ಣವ, ಒಂದು ಶೈವ, ಮತ್ತೊಂದು ಜೈನ ದೇವಾಲಯಗಳಿವೆ. ಬಾದಾಮಿಯಲ್ಲಿ 250 ಶಾಸನಗಳಿವೆ. ಅದರಲ್ಲಿ ಕಪ್ಪೆ ಅರಭಟ್ಟನ ಕನ್ನಡ ಶಾಸನ ಕನ್ನಡ ಸಾಹಿತ್ಯ ದೃಷ್ಟಿಯಿಂದ ಪ್ರಮುಖವಾದುದು. ಈ ತಾಲ್ಲೂಕಿನ ಇತರ ಪ್ರಮುಖ ಪ್ರವಾಸಿ ಸ್ಥಳಗಳೆಂದರೆ, ಮಹಾಕೂಟ, ಪಟ್ಟದಕಲ್ಲು, ಶಿವಯೋಗ ಮಂದಿರ ಮತ್ತು ಬನಶಂಕರಿ ದೇವಾಲಯ.

ಎಂ.ಆರ್. ಪಟ್ಟಣಸೆಟ್ಟಿ, ಕೆ.ಎಂ. ಪಟ್ಟಣಸೆಟ್ಟಿ, ದೇಸಾಯಿರಾವ್ ಸಾಹೇಬ, ಬಿ.ಎಂ. ಹೊರಕೇರಿ, ವಿ.ಹೆಚ್. ಪಾಟೀಲ, ಬಿ.ವಿ. ಜನಾಲಿ, ಬಿ.ಬಿ. ಚಿಮ್ಮನಕಟ್ಟಿ, ಎಂ.ವಿ. ಬನ್ನಿ, ರಾವ್ ಸಾಹೇಬ ತುಲಸಗೇರಿ ದೇಸಾಯಿ, ಎಸ್.ಬಿ. ನಂಜಯ್ಯನ ಮಠ, ಎಚ್.ವೈ. ಮೇಟಿ, ಆರ್.ವಿ. ಶೀಲವಂತ ಮುಂತಾದವರು ರಾಜ್ಯ ವಿಧಾನಸಭೆಗೆ ಚುನಾಯಿತರಾಗಿದ್ದಾರೆ.

ಕೆರೂರು ಹೋಬಳಿ ಕೇಂದ್ರವಾಗಿದ್ದು, ಈ ಊರಿನ ಕೆರೂರು ವಾಸದೇವಚಾರ್ಯರು (ಕ್ರಿ.ಶ. 1866-1921) ಕನ್ನಡದ ಪ್ರಸಿದ್ಧ ಸಾಹಿತಿಗಳು ಹಾಗೂ ಪತ್ರಿಕೋದ್ಯಮಿ. ಗುಳೇದಗುಡ್ಡ ಬಾದಾಮಿ ತಾಲ್ಲೂಕಿನ ಹೋಬಳಿ ಕೇಂದ್ರ. ಗುಳೇದಗುಡ್ಡದ 'ಕುಪ್ಪಸ ಖಣ' ಜನಪ್ರಿಯ. ಇದು ನೇಕಾರಿಕೆಯ ಕೇಂದ್ರ. ಇಳಕಲ್ ಸೀರೆ, ಗುಳೇದಗುಡ್ಡ ಕುಪ್ಪಸ ಹಾಗೂ ಅಮೀನಗಡದ ಕರದಂಟು ಉತ್ತರ ಕರ್ನಾಟಕದಲ್ಲಿ ತುಂಬ ಜನಪ್ರಿಯ.

ಪಟ್ಟದಕಲ್ಲು ಬಾದಾಮಿಯಿಂದ 22 ಕಿ.ಮೀ. ದೂರದಲ್ಲಿದೆ. ಶಾಸನಗಳಲ್ಲಿ ಇದನ್ನು 'ಕಿಸುವೊಳಲು' ಎಂದು ಉಲ್ಲೇಖಿಸಲಾಗಿದೆ. ಕವಿರಾಜಮಾರ್ಗಕಾರರೂ ಈ ಪ್ರದೇಶವನ್ನು 'ತಿರುಳ್ಗನ್ನಡದ ಪ್ರದೇಶ'ವೆಂದು ಕರೆದಿದ್ದಾರೆ. ಈಜಿಪ್ತ ಭೂಗೋಳಶಾಸ್ತ್ರಜ್ಞ ಟಾಲಮಿಯು ಈ ಪ್ರದೇಶವನ್ನು 'ಪೆಟ್ರಿಮಾ' ಎನ್ನುತ್ತಾನೆ. ಇಲ್ಲಿ ನಾಲ್ಕು ಬೃಹತ್ ಹಾಗೂ ಆರು ಕಿರು

ದೇವಾಲಯಗಳಿವೆ. ಅವು ಪಾಪನಾಥ, ಕಾಡಸಿದ್ದೇಶ್ವರ, ಗಳಗನಾಥ, ಕಾಶೀವಿಶ್ವೇಶ್ವರ, ಸಂಗಮೇಶ್ವರ ಹಾಗು ಜಂಬುಲಿಂಗೇಶ್ವರ.

ಬಾದಾಮಿಯಿಂದ ಮೂರು ಕಿ.ಮೀ. ದೂರದಲ್ಲಿ ಬನಶಂಕರಿ ದೇವಾಲಯವಿದೆ. ಕ್ರಿ.ಶ. 1019ರ ಶಾಸನಗಳಲ್ಲಿ ಬನಶಂಕರಿಯನ್ನು 'ಶ್ರೀ ಬನಶಂಕರಿ ದೇವಿ' ಎಂದು ಉಲ್ಲೇಖಿಸಿಲಾಗಿದೆ. ಬನದ ಹುಣ್ಣಿಮೆಯಂದು ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ.

ಬಾದಾಮಿಯಿಂದ ಐದು ಕಿ.ಮೀ. ದೂರದಲ್ಲಿ ಮಹಾಕೂಟವಿದೆ. ಇಲ್ಲಿ ಮಹಾಕೂಟೇಶ್ವರ ದೇವಾಲಯವಿದ್ದು, ಮಂಗಳೇಶನ ಮಹಾಕೂಟದ ಶಾಸನ ಅತ್ಯಂತ ಪ್ರಮುಖ ದಾಖಲೆಯಾಗಿದೆ. ಶಿವಯೊಗಮಂದಿರ ಮಲಪ್ರಭಾ ನದಿ ತೀರದಲ್ಲಿದೆ. ವೀರಶೈವ ಮಠಾಧಿಪತಿಗಳಿಗೆ ತತ್ವಜ್ಞಾನ ಹಾಗೂ ಯೋಗದ ಬಗ್ಗೆ ತರಬೇತಿ ನೀಡುವ ಕೇಂದ್ರ ಶಿವಯೋಗ ಮಂದಿರ.

ಜಮಖಂಡಿ ಬಾಗಲಕೋಟೆ ಜಿಲ್ಲೆಯ ಇನ್ನೊಂದು ಪ್ರಮುಖ ತಾಲ್ಲೂಕು ಕೇಂದ್ರ. ತಾಲ್ಲೂಕಿನ ಒಟ್ಟು ವಿಸ್ತೀರ್ಣ 1169 ಚ.ಕಿ.ಮೀ. ಜಮಖಂಡಿ, ಸಾವಳಗಿ ಹಾಗು ತೇರದಾಳ ಈ ತಾಲ್ಲೂಕಿನ ಹೋಬಳಿ ಕೇಂದ್ರಗಳು. ಈ ತಾಲ್ಲೂಕಿನಲ್ಲಿ ಒಟ್ಟು 65 ಹಳ್ಳಿಗಳಿವೆ. ತಾಲ್ಲೂಕಿನ ಸರಾಸರಿ ಮಳೆ 576.99 ಮಿ.ಮೀ. ಜೋಳ, ಗೋಧಿ, ಸಜ್ಜೆ, ಶೇಂಗಾ, ಭತ್ತ, ಕಬ್ಬು, ಹತ್ತಿ, ಸೂರ್ಯಕಾಂತಿ, ಮೆಕ್ಕೆಜೋಳ, ಮುಂತಾದವುಗಳು ಮುಖ್ಯ ಬೆಳೆಗಳಾಗಿವೆ. ತಾಲ್ಲೂಕಿನ ಮುಖ್ಯನದಿ ಕೃಷ್ಣಾ. ಎರೆಮಣ್ಣಿನ ಜಮಖಂಡಿ ತಾಲ್ಲೂಕು ಪ್ರದೇಶವನ್ನು 'ಕಲಾದಗಿ' ಶಿಲಾ ಪ್ರದೇಶವೆಂದು ವರ್ಣಿಸುತ್ತಾರೆ. ಸುಣ್ಣದ ತಯಾರಿಕೆ, ಕೈಮಗ್ಗ ಮತ್ತು ಮರಗೆಲಸ ಕೂಡ ಈ ಭಾಗದ ಜನರ ವೃತ್ತಿ.

1948ರ ಮೊದಲು ಜಮಖಂಡಿ ಚಿಕ್ಕ ಸಂಸ್ಥಾನವಾಗಿತ್ತು. ಇದನ್ನು 'ಪಟವರ್ಧಿನಿ' ಸಂಸ್ಥಾನವೆಂದು ಕರೆಯುತ್ತಿದ್ದರು. ಹರಿಭಟ್ಟನೆಂಬವನು ಇವರ ಮೂಲಪುರುಷ. ಬಾಲಾಜಿ ವಿಶ್ವನಾಥ ಪೇಶ್ವೆ ಜೊತೆ ಆತ ಇಲ್ಲಿಗೆ ಬಂದಿದ್ದ. ಕ್ರಿ.ಶ. 1821ರಲ್ಲಿ ಬ್ರಿಟಿಷ್‌ರೊಡನೆ ಆದ ಒಪ್ಪಂದದಂತೆ ವಾರ್ಷಿಕ 29,840ರೂ. ಕಪ್ಪ ಕೊಡಬೇಕಾಗಿತ್ತು. ಪರಶುರಾಮ ಭಾಪು ಈ ಸಂಸ್ಥಾನದ ಬಹುದೊಡ್ಡ ವಿದ್ವಾಂಸ.

ಸಾವಳಗಿ ಜಮಖಂಡಿ ತಾಲ್ಲೂಕಿನ ಹೋಬಳಿ ಕೇಂದ್ರ. ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಇದೊಂದು ಪ್ರಮುಖ ಅಗ್ರಹಾರ. ಇಲ್ಲಿನ ಸೋಮೇಶ್ವರ ದೇವಾಲಯ ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಮುಖವಾದುದು. ಗುಡ್ಡದ ಮೇಲಿನ ಶಿವಲಿಂಗೇಶ್ವರ ದೇವಾಲಯಕ್ಕೆ ಬೆಳಗಾವಿ, ಗೋಕಾಕ್ ಹಾಗೂ ಗುಲ್ಬರ್ಗಾ ಜಿಲ್ಲೆಗಳಿಂದ ಭಕ್ತರು ಬರುತ್ತಾರೆ. ಇನ್‌ಫೋಸಿಸ್ ಫೌಂಡೇಶನ್ ಅಧ್ಯಕ್ಷರಾದ ಡಾ. ಸುಧಾ ನಾರಾಯಣಮೂರ್ತಿ ಸಾವಳಗಿ ಕುಲಕರ್ಣಿ ಮನೆತನಕ್ಕೆ ಸೇರಿದವರು. ಭಾರತದ ಮಾಜಿ ಉಪರಾಷ್ಟ್ರಪತಿ ಡಾ|| ಬಿ.ಡಿ. ಜತ್ತಿಯವರು ಸಾವಳಗಿಯವರು.

ತೇರದಾಳ ಇನ್ನೊಂದು ಹೋಬಳಿ ಕೇಂದ್ರ. ಆರನೆಯ ವಿಕ್ರಮಾದಿತ್ಯನ ಮಾಂಡಲೀಕ ರಟ್ಟ ಕಾರ್ತವೀರ್ಯನ ರಾಜಧಾನಿ ತೇರದಾಳ ಆಗಿತ್ತೆಂದು ಶಾಸನಗಳು ಹೇಳುತ್ತವೆ. ತೇರದಾಳದಲ್ಲಿ ಪ್ರಾಗೈತಿಹಾಸಿಕ ನೆಲೆಯನ್ನು ಗುರುತಿಸಲಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇದು ಪ್ರಮುಖ ಜೈನ ಕೇಂದ್ರವಾಗಿತ್ತು. ಕ್ರಿ.ಶ. 1181ರ ಶಾಸನದಲ್ಲಿ ಇಲ್ಲಿನ ನೇಮಿನಾಥ ಬಸದಿಯನ್ನು ಉಲ್ಲೇಖಿಸಲಾಗಿದೆ. ಜಮಖಂಡಿಯ ಸಮೀಪದಲ್ಲಿರುವ ಶೂರ್ಪಾಲಿ ಪವಿತ್ರ ವೈಷ್ಣವ ಕೇಂದ್ರ.

ಮುಧೋಳ ಬಾಗಲಕೋಟೆ ಜಿಲ್ಲೆಯ ಇನ್ನೊಂದು ತಾಲ್ಲೂಕು. ಶಾಸನಗಳಲ್ಲಿ ಇದನ್ನು 'ಮರುಳಾರರ್' ಅಂದರೆ ಸುಂದರ ಪಟ್ಟಣ ಎಂದು ವ್ಯಾಖ್ಯಾನಿಸುತ್ತಾರೆ. ಈ ತಾಲ್ಲೂಕಿನಲ್ಲಿ 77 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 955.47 ಚ.ಕಿ.ಮೀ. ಮುಧೋಳದಿಂದ 13 ಕಿ.ಮೀ. ದೂರದಲ್ಲಿ ಘಟಪ್ರಭಾ ನದಿ ಹರಿಯುತ್ತದೆ. ತಾಲ್ಲೂಕಿನ ವಾರ್ಷಿಕ ಮಳೆ 462.39 ಮಿ.ಮೀ. ತಾಲ್ಲೂಕಿನ ಅರಣ್ಯ ಪ್ರದೇಶ 1,3070 ಎಕರೆ. ಜೋಳ, ಗೋಧಿ, ಶೇಂಗಾ, ಸೂರ್ಯಕಾಂತಿ, ದ್ವಿದಳ ಧಾನ್ಯ ಮುಂತಾದವುಗಳು ಮುಖ್ಯ ಬೆಳೆಗಳು. ಮುಧೋಳದ 'ಬೇಟೆ' ನಾಯಿಗಳು ರಾಷ್ಟ್ರಪ್ರಸಿದ್ಧವಾಗಿವೆ. ಸುಣ್ಣ ತಯಾರಿಕೆ ಹಾಗೂ ಉಣ್ಣೆ ಉತ್ಪಾದನೆ ಇಲ್ಲಿನ ಪ್ರಮುಖ ಕೈಗಾರಿಕೆಗಳು. ಹಿಂದಿನ ಸಂಸ್ಥಾನಿಕರ 'ವಾಡೆ' ಇಲ್ಲಿದೆ. ವೆಂಕಟರಾವ್ ಘೋರ್ಪಡೆ, ನಾರಾಯಣರಾವ್ ಘೋರ್ಪಡೆ, ಯಾದೋಜಿರಾವ್ ಘೋರ್ಪಡೆ ಪ್ರಮುಖರು ಸಂಸ್ಥಾನಿಕರು. ಭೂಮಿ ಮಟ್ಟದಿಂದ ಕೆಳಗಿರುವ ಶಿವದೇವಾಲಯ ಬಾದಾಮಿ ಚಾಳುಕ್ಯರ ಕಾಲದ ಸುಂದರ ರಚನೆಯಾಗಿದೆ. ಬ್ರಹ್ಮಗುಡ್ಡಮಠ ಒಂದು ಪ್ರಮುಖ ವೀರಶೈವ ಧಾರ್ಮಿಕ ಕೇಂದ್ರ.

ಲೋಕಾಪುರ ಮುಧೋಳ ತಾಲ್ಲೂಕಿನ ಹೋಬಳಿ ಕೇಂದ್ರ. ಊರಿನ ಚಾವಡಿಯ ಹತ್ತಿರದ ರಾಷ್ಟ್ರಕೂಟರ ಶಾಸನದಿಂದ ತೈಲಕಟ್ಟಿಯ ನಾಲ್ಕು ಮಕ್ಕಳಲ್ಲಿ ಒಬ್ಬನಾದ ಲೋಕಬೆಯಿಂದ ಲೋಕಮಾಹೇಶ್ವರಿ ಬಸದಿ, ಲೋಕಮುದ್ರ ಹಾಗೂ ಲೋಕ ನಿರ್ಮಾಣವಾಯಿತೆಂದು ಉಲ್ಲೇಖವಿದೆ. ಈ ಊರಿನ ಪ್ರಮುಖ ಶಿಲ್ಪಿಗಳಾದ ಬಿ.ಎಸ್. ಮಾಯಾಚಾರ್ ಕಾಷ್ಠಶಿಲ್ಪದಲ್ಲಿ ಪರಿಣತರು.

ಮುಧೋಳ ತಾಲ್ಲೂಕಿನ 'ಬೆಳಗಲಿ' ಹತ್ತನೆಯ ಶತಮಾನದ ಕನ್ನಡದ ಪ್ರಮುಖ ಕವಿ ರನ್ನನ ಜನ್ಮಸ್ಥಳ. ಕಲ್ಯಾಣ ಚಾಳುಕ್ಯರ ಕಾಲದ ಅಮೃತೇಶ್ವರ ಹಾಗು ಚನ್ನಗಿರೀಶ್ವರ ದೇವಾಲಯಗಳು ಉಲ್ಲೇಖಾರ್ಹವಾದವುಗಳು.

ಬೀಳಗಿ ಬಾಗಲಕೋಟೆ ಜಿಲ್ಲೆಯ ಮತ್ತೊಂದು ತಾಲ್ಲೂಕು. ಕ್ರಿ.ಶ. 1605ರಲ್ಲಿ ನಿರ್ಮಿತವಾದ ರಾಯರಬಾವಿ, ಆರೆತ್ತಿನಬಾವಿ ಅಥವಾ ಸುರಳಿಬಾವಿ ಎಂದು ಸ್ಥಳೀಯರು ಕರೆಯಲಾಗುವ ಸುಂದರ ಕಲ್ಲಿನ ಬಾವಿಗಳಿವೆ. ಈ ತಾಲೂಕಿನಲ್ಲಿ 66 ಗ್ರಾಮಗಳಿವೆ. ತಾಲ್ಲೂಕಿನ ಒಟ್ಟು ವಿಸ್ತೀರ್ಣ 782 ಚ.ಕಿ.ಮೀ. 1959ರಲ್ಲಿ ಈ ತಾಲ್ಲೂಕು ಜನ್ಮತಾಳಿದೆ. ತಾಲ್ಲೂಕಿನಲ್ಲಿ ಕರಿಎರೆ ಮಣ್ಣಿನ ಮಟ್ಟಸಭೂಮಿ ಇದೆ. ಈ ತಾಲ್ಲೂಕಿನಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಕೃಷ್ಣಾ ನದಿ ಹರಿಯುತ್ತದೆ. ತಾಲ್ಲೂಕಿನ ವಾರ್ಷಿಕ ಮಳೆ 784 ಮಿ.ಮೀ. ಜೋಳ, ಹತ್ತಿ, ಶೇಂಗಾ,

ಗೋಧಿ, ಸಜ್ಜೆ, ದ್ವಿದಳ ಧಾನ್ಯ ಇಲ್ಲಿನ ಪ್ರಮುಖ ಬೆಳೆಗಳು. ಇತ್ತೀಚಿನ ವರ್ಷಗಳಲ್ಲಿ ತೋಟಗಾರಿಕೆ ಬೆಳೆಗಳನ್ನು ಇಲ್ಲಿ ಬೆಳೆಯಲಾಗುತ್ತಿದೆ.

ಈ ತಾಲ್ಲೂಕಿನ ಪ್ರಮುಖ ಸ್ಥಳಗಳೆಂದರೆ ಗಲಗಲಿ, ಕುಂದರಗಿ, ವಜ್ರಮಟ್ಟಿ, ಮಂಟೂರು, ತೆಗ್ಗಿ, ರೊಳ್ಳಿ ಹಾಗು ಅನಗವಾಡಿ. ಗಾಲವ ಋಷಿಗಳು ವಾಸಿಸುತ್ತಿದ್ದ ಈ ಸ್ಥಳಕ್ಕೆ 'ಗಲಗಲಿ' ಎಂಬ ಹೆಸರು ಬಂದಿತೆಂದು ಹೇಳಲಾಗಿದೆ. ಪಂಡರೀನಾಥಾಚಾರ್ಯ ಗಲಗಲಿ ಹಾಗೂ ನರಸಿಂಹಾಚಾರ್ಯ ಗಲಗಲಿಯವರು ಇಲ್ಲಿಯವರು. ಇಲ್ಲಿನ ರಾಮೇಶ್ವರ ದೇವಾಲಯ ದೇಸಾಯಿಯವರ ರಚನೆಯೆಂದು ಹೇಳಲಾಗುತ್ತದೆ.

## ಉಪ್ಪಾರ ಸಮಾಜ

ಬಾಗಲಕೋಟೆ ಜಿಲ್ಲೆಯ ಭವ್ಯ ಸಾಮಾಜಿಕ ಹಾಗು ಐತಿಹಾಸಿಕ, ಸಾಂಸ್ಕೃತಿಕ ಇತಿಹಾಸದೊಡನೆ ಉಪ್ಪಾರರು ಬೆರೆತುಹೋಗಿದ್ದಾರೆ. ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಈ ಸಮುದಾಯಕ್ಕೆ ಸೇರಿದ ಮಹಾನ್ ವ್ಯಕ್ತಿಗಳು ಕಾಣಸಿಗುವುದರಿಂದ ಶ್ರೀಸಾಮಾನ್ಯರ ಮನಸ್ಸಿಗೆ ಬಹುಬೇಗನೆ ಈ ಸಮುದಾಯ ಹೊಳೆಯುವುದಿಲ್ಲ. ಬಾಗಲಕೋಟೆ ಜಿಲ್ಲೆಯಲ್ಲಿ ಸುಮಾರು 2450 ಕುಟುಂಬಗಳಲ್ಲಿ 16,200ಕ್ಕೂ ಅಧಿಕ ಜನ ಉಪ್ಪಾರ ಬಂಧುಗಳಿದ್ದಾರೆಂದು ಒಂದು ಸಮೀಕ್ಷೆಯಿಂದ ತಿಳಿದುಬರುತ್ತದೆ.

ಬೇಲಾಪುರ, ಹುನಗುಂದ, ಕ್ಯಾದಿಗ್ಗೇರಿ, ಆದಾಪುರ, ತುರಮರಿ, ಚೌಡಾಪುರ, ಚಿಕನಾಳ, ಗುಡೂರು, ವಡಗೇರಿ, ದಮ್ಮೂರು, ಕೆಲೂರು ಹಾಗು ಇಳಕಲ್- ಹೀಗೆ ಮೇಲೆ ನಮೂದಿಸಿದ ಹಳ್ಳಿಗಳನ್ನೊಳಗೊಂಡಂತೆ ಹುನಗುಂದ ತಾಲ್ಲೂಕಿನಲ್ಲಿ ಸುಮಾರು 450 ಕುಟುಂಬಗಳಿವೆ. ಅದರಲ್ಲಿ 3,000 ಉಪ್ಪಾರ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ.

ಭೀಮನಗಡೆ, ಅನವಾಲ, ಕಲಬಂತಕೇರಿ, ಕೆಂದೂರು, ಪರ್ವತಿ, ಬಾದಾಮಿ, ಗೋವಿನಕೊಪ್ಪ, ಪಾದನಕಟ್ಟಿ ಕೊಟ್ನಳ್ಳಿ, ಎಂಡಿಗೇರಿ, ತೋಗುಣಸಿ, ಹಾಲಿಗೇರಿ, ಕರಲಕೊಪ್ಪ, ಗುಳೇದಗುಡ್ಡ-ಹೀಗೆ ಮೇಲೆ ನಮೂದಿಸಿದ ಗ್ರಾಮಗಳನ್ನೊಳಗೊಂಡಂತೆ ಬಾದಾಮಿ ತಾಲ್ಲೂಕಿನಲ್ಲಿ ಸುಮಾರು 575 ಕುಟುಂಬಗಳಿವೆ. ಅವುಗಳಲ್ಲಿ 3.695 ಜನ ಉಪ್ಪಾರರಿದ್ದಾರೆಂದು ಹೇಳಲಾಗಿದೆ.

ಬಾಗಲಕೋಟೆ, ಹಳ್ಳೂರ, ತುಳಸಗೇರಿ, ಹೊಸೂರು- ಹೀಗೆ ಮೇಲೆ ನಮೂದಿಸಿದ ಗ್ರಾಮಗಳನ್ನೊಳಗೊಂಡಂತೆ ಬಾಗಲಕೋಟೆ ತಾಲ್ಲೂಕಿನಲ್ಲಿ ಸುಮಾರು 250 ಕುಟುಂಬಗಳಿವೆ 1,500 ಜನ ಉಪ್ಪಾರರಿದ್ದಾರೆಂದು ಹೇಳಲಾಗಿದೆ.

ಮುಧೋಳ, ಬೆಳಗಲಿ, ಕೇಸರಕೊಪ್ಪ, ಮಳಲಿ, ಮಹಾಲಿಂಗಪುರ, ಲೋಕಾಪುರ, ಸಂಗಾನಹಟ್ಟಿ, ಮಿರ್ಜಿ, ನಾಗರಾಳ, ಅಕ್ಕಿಮರಡಿ, ನಂದಗಾಂವ್, ಮದಭಾವಿ, ಶಿರೋಳ, ಜೀರಗಾಳ, ರಂಜನಗಿ ಹಾಗು ಸೈದಾಪುರ-ಹೀಗೆ ಮೇಲೆ ನಮೂದಿಸಿದ ಗ್ರಾಮಗಳನ್ನೊಳಗೊಂಡಂತೆ ಮುಧೋಳ ತಾಲ್ಲೂಕಿನಲ್ಲಿ ಸುಮಾರು 650 ಕುಟುಂಬಗಳಿವೆ. 4,520 ಜನ ಉಪ್ಪಾರರಿದ್ದಾರೆಂದು ಹೇಳಲಾಗಿದೆ.

ಜಮಖಂಡಿ, ತೇರದಾಳ, ರಬಕವಿ, ಬನಹಟ್ಟಿ, ಪಡಸಲಗಿ, ಯರಗಟ್ಟಾ, ಅಡಹುಡಿ, ಸಾವಳಿಗಿ, ತೊದಲಬಾಗಿ, ಸನಾಲಹಟ್ಟಿ, ಕಾಳತಿಪ್ಪಿ-ಹೀಗೆ ಮೇಲೆ ನಮೂದಿಸಿದ ಗ್ರಾಮಗಳನ್ನೊಳಗೊಂಡಂತೆ ಜಮಖಂಡಿ ತಾಲ್ಲೂಕಿನಲ್ಲಿ ಸುಮಾರು 450 ಕುಟುಂಬಗಳಿದ್ದು 3,000 ಜನಸಂಖ್ಯೆ ಇರಬಹುದೆಂದು ಹೇಳಲಾಗಿದೆ.

ಬೀಳಗಿ ಹಾಗು ತೆಗ್ಗಿಯಲ್ಲಿ ಸುಮಾರು 75 ಉಪ್ಪಾರ ಕುಟುಂಬಗಳಿದ್ದು ಸುಮಾರು 500 ಜನರಿದ್ದಾರೆಂದು ಹೇಳಬಹುದು.

ಬಾಗಲಕೋಟೆ ಜಿಲ್ಲೆಯಲ್ಲಿ ಉಪ್ಪಾರರನ್ನು ಉಪ್ಪಾರ, ಲೋಣಾರಿ, ಮೇಟಿ, ಮೇಲು ಸಕ್ಕರೆ, ಸುರಪುರು, ಲಾತೂರ, ಚೂರಿ, ಮಂತ್ರಿ, ಗಿಂಡೆ, ರಾಣಗಟ್ಟಿ, ಭೂಪಾಳಿ, ಜಾಡಗೆ ಮುಂತಾದ ಉಪನಾಮಗಳಿಂದ ಗುರುತಿಸುತ್ತಾರೆ.

ಜಿಲ್ಲೆಯಲ್ಲಿರುವ ಉಪ್ಪಾರರು ವ್ಯವಸಾಯ ವೃತ್ತಿಯನ್ನು ಅವಲಂಬಿಸಿದ್ದಾರೆ. ಕೃಷಿ ಕಾರ್ಮಿಕ ಕೆಲಸದೊಡನೆ ಕೆಲವರು ಗೌಂಡಿ ವೃತ್ತಿಯನ್ನು ಅಲ್ಲಲ್ಲಿ ಕೈಗೊಂಡಿದ್ದಾರೆ. ಬಾಗಲಕೋಟೆ, ಲೋಕಾಪುರ ಹಾಗು ಮುಧೋಳಗಳಲ್ಲಿ ಸುಣ್ಣ ತಯಾರಿಸುವ ಉದ್ಯೋಗವನ್ನು ಕೂಡ ಅವರು ಮಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಜಿಲ್ಲೆಯಲ್ಲಿ ತೋಟಗಾರಿಕೆ, ವ್ಯವಸಾಯ ಜನಪ್ರಿಯವಾಗಿದ್ದು, ಉಪ್ಪಾರರು ಅದರಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಉಪ್ಪಾರರು ಆಯಾಯ ಪರಿಸ್ಥಿತಿಗೆ ಹೊಂದಿಕೊಂಡಂತೆ ಜೀವನಾವಶ್ಯಕ ವೃತ್ತಿಗಳನ್ನು ಮಾಡುತ್ತಾರೆ. ಬೆಳಗಲಿ, ಮಹಾಲಿಂಗಪುರ ಹಾಗು ಬನಹಟ್ಟಿಯಲ್ಲಿ ಉಪ್ಪಾರರು ನೇಕಾರಿಕೆ ಮಾಡುತ್ತಾರೆ. ಮುಧೋಳ ಹಾಗು ಜಮಖಂಡಿ ತಾಲ್ಲೂಕಿನಲ್ಲಿ ಉಪ್ಪಾರರು ಹೆಚ್ಚಾಗಿ ಮಧ್ಯಮ ವರ್ಗಕ್ಕೆ ಸೇರಿದ್ದಾರೆ.

ಬಾಗಲಕೋಟೆ ಜಿಲ್ಲೆಯ ಉಪ್ಪಾರರು ಕನ್ನಡ ಭಾಷೆಯನ್ನೇ ಬಳಸುತ್ತಾರೆ. ಆದರೆ ಪ್ರಾದೇಶಿಕ ಪ್ರಭಾವದಿಂದ ಅಲ್ಲಲ್ಲಿ ಮರಾಠಿ ಭಾಷೆಯನ್ನು ಕೂಡ ಬಳಕೆ ಮಾಡುತ್ತಾರೆ. ಉಪ್ಪಾರರು ಸಾಕ್ಷರತೆಯ ಪ್ರಮಾಣದಲ್ಲಿ ಅತ್ಯಂತ ಕೆಳ ಹಂತದಲ್ಲಿದ್ದಾರೆ. ಈ ಸಮುದಾಯದಲ್ಲಿ ಶೇ. 40ರಷ್ಟು ಸಾಕ್ಷರತೆಯ ಪ್ರಮಾಣ ಕಾಣಸಿಗುವದು ಕಷ್ಟ. ಜಿಲ್ಲೆಯಲ್ಲಿ ಗಂಡಸರ ಸಾಕ್ಷರತೆಯ ಪ್ರಮಾಣ ಶೇಕಡ 30ರಷ್ಟಿದ್ದರೆ, ಹೆಂಗಸರ ಸಾಕ್ಷರತೆಯ ಪ್ರಮಾಣ ಶೇ. 20ಕ್ಕಿಂತಲೂ ಕಡಿಮೆ ಇದೆ. ಆದುದರಿಂದ ಉಪ್ಪಾರರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವೈದ್ಯರನ್ನು, ಇಂಜಿನಿಯರನ್ನು, ವಕೀಲರನ್ನು ಹಾಗು ಆಡಳಿತಗಾರರನ್ನು ಕಾಣುವದು ಕಷ್ಟ. ಆದರೂ ಶೋಧಿಸಿ ಹೇಳುವುದಾದರೆ ಈ ಸಮುದಾಯಕ್ಕೆ ಸೇರಿದ ವೈದ್ಯರು ಆರು, ಇಂಜಿನಿಯರ್ ನಾಲ್ಕು, ವಕೀಲರು ಮೂರು ಹಾಗು ವ್ಯಾಪಾರಸ್ಥರು ಒಬ್ಬರು-ಹೀಗೆ ಬೆರಳೆಣಿಕೆಯಲ್ಲಿ ಅವರನ್ನು ನೋಡಬಹುದು. ವೈದ್ಯರುಗಳೆಂದರೆ: ಡಾ॥ ಎಂ.ಬಿ. ಸಿದ್ದಾಪುರ ಬೆಳಗಲಿ, ಡಾ॥ ಶ್ರೀಮತಿ ಜೆ.ಬಿ. ಸಿದ್ದಾಪುರ ಬೆಳಗಲಿ, ಡಾ॥ ಲೋಣಾರಿ ರಬಕವಿ, ಡಾ॥ ಪ್ರಭಾಕರ ಮೋಪಗಾರ, ಡಾ॥ ಲಕ್ಷ್ಮೀಬಾಯಿ ಮೋಪಗಾರ ತೇರದಾಳ ಹಾಗು ಡಾ॥ ವಿದ್ಯಾಸಾಗರ ಮೋಪಗಾರ ಮುಂತಾದವರು.

ಇಂಜನಿಯರುಗಳೆಂದರೆ ರೋಣ ತಾಲ್ಲೂಕಿನವರಾದ ಬಾಗಲಕೋಟೆಯಲ್ಲಿ ಕಾರ್ಯನಿರ್ವಾಹಕ ಇಂಜನಿಯರಾದ ಪ್ರಭಾಕರ ಹೆಚ್. ಚಿಣಿ, ಸಹಾಯಕ ಇಂಜನಿಯರ್ ಸಿದ್ದಾಪುರ, ಕಿರಿಯ ಇಂಜನಿಯರ್ ಡಿ.ಎಂ. ಪೂಜಾರ.

ರಮಾಕಾಂತ ಸುರಪುರ, ರಮೇಶ ಉಪ್ಪಾರ ವಕೀಲರು ಹಾಗು ರಾಜ್ಯ ಸಂಘದ ಅಧ್ಯಕ್ಷರಾಗಿದ್ದ ಎಸ್.ಎಂ. ಲಾತೂರ ವಕೀಲರು ಈ ಜಿಲ್ಲೆಯವರೆ. ಕಲ್ಲಪ್ಪ ಭೂತಾಳಿಯವರು ಜಿಲ್ಲೆಯಲ್ಲಿ ಪ್ರಮುಖ ಬೆಲ್ಲದ ವ್ಯಾಪಾರಿಗಳು.

ಚಿನ್ನಪ್ಪರೆಡ್ಡಿ ಆಯೋಗದ ವರದಿಯ ಅನುಷ್ಠಾನದ ಫಲವಾಗಿ ಉಪ್ಪಾರ ಸಮಾಜದ ಕೆಲವರು ಸ್ಥಳೀಯ ಸಂಸ್ಥೆಯಲ್ಲಿ ಜನಪ್ರತಿನಿಧಿಗಳಾಗಿ ಆಯ್ಕೆಯಾಗಿದ್ದಾರೆ. ಬಾಗಲಕೋಟೆ ಜಿಲ್ಲಾಪಂಚಾಯ್ತಿ ಉಪಾಧ್ಯಕ್ಷರಾಗಿರುವ ವಿಠಲ ಚೌರಿ ಅವರು ಉಪ್ಪಾರ ಸಮುದಾಯಕ್ಕೆ ಸೇರಿದ್ದಾರೆ. ಬೆಳಗಲಿ ಕರಿಯಪ್ಪ ಸಿದ್ದಾಪೂರ ಅವರು ಮತ್ತೊಬ್ಬ ಚುನಾಯಿತ ಜಿಲ್ಲಾಪಂಚಾಯ್ತಿ ಸದಸ್ಯ. ಉಪ್ಪಾರ ಸಮುದಾಯಕ್ಕೆ ಸೇರಿದ ಗ್ರಾಮಪಂಚಾಯ್ತಿ ಸದಸ್ಯರೆಂದರೆ ಪರ್ವತಿ ಗ್ರಾಮದ ಭೀಮಪ್ಪ ಮುಶಿಗೇರಿ, ಗುಡೂರು ಗ್ರಾಮದ ಮಂತ್ರಿ, ಚಿಕನಾಳ ಗ್ರಾಮದ ಷಣ್ಮುಖಪ್ಪ ಕೊಗ್ಗಿ, ಅದೇ ಗ್ರಾಮದ ಶ್ರೀಮತಿ ತಿಪ್ಪಣ್ಣವರ, ಬೆಳಗಲಿ ಗ್ರಾಮದ ಶ್ರೀಮತಿ ನೀಲಣ್ಣನವರ ಹಾಗು ಅಡಹೂಡಿ ಗ್ರಾಮದ ಹಳ್ಳೂರು. ಸ್ಥಳೀಯ ಸಂಸ್ಥೆಗಳ ಮಾಜಿ ಸದಸ್ಯರುಗಳೆಂದರೆ : ಕೆಂದೂರು ಗ್ರಾಮದ ರಾಮಣ್ಣ ಭಜಣ್ಣನವರ, ತಾಲ್ಲೂಕು ಅಭಿವೃದ್ಧಿ ಮಂಡಳಿಯ ಸದಸ್ಯರು, ಬೆಳಗಲಿ ಗ್ರಾಮದ ಹನಮಂತಪ್ಪ ಸಿದ್ದಾಪುರ, ಹುನಗುಂದ ಮಾಜಿ ಪುರಸಭಾ ಅಧ್ಯಕ್ಷರಾದ ರಮಾಕಾಂತ ಸುರಪುರ, ತುಳಸಗೇರಿ ಗ್ರಾಮದ ಉದ್ದಂಡಪ್ಪ ಆಡಿನ, ಅದೇ ಗ್ರಾಮದ ಶಾಂತಕ್ಕ ಕರೀಭಿಮಣ್ಣನವರ್, ಚಿಕ್ಕನಾಳ ಗ್ರಾಮದ ಗ್ರಾಮ ಪಂಚಾಯತ್ ಅಧ್ಯಕ್ಷರಾದ ಬಂಗಾರೆಮ್ಮ ಲಾತೂರ, ಸಂಗಪ್ಪ ಕಾಮಣ್ಣನವರ್ ಮುಂತಾದವರುಗಳನ್ನು ಹೆಸರಿಸಬಹುದು.

ಉಪ್ಪಾರ ಸಮುದಾಯಕ್ಕೆ ಸೇರಿದ ಮೂವರು ಸ್ವಾತಂತ್ರ್ಯ ಹೋರಾಟಗಾರರನ್ನು ಗುರುತಿಸಲಾಗಿದೆ. ಸೆರೆಮನೆ ವಾಸ ಅನುಭವಿಸಿದ ಕೀರ್ತಿಗೆ ಪಾತ್ರರಾದವರು ಎಂದರೆ ದ್ಯಾಮನಗೌಡರ್, ರಂಗಪ್ಪ ತೋಗುಣಶಿ ಮತ್ತು ಭೀಮಪ್ಪ ಜೋಲಾಪುರ.

ನೆರೆಯ ಶಾಂತಗಿರಿ ಗ್ರಾಮದ ಎಂ.ಹೆಚ್. ತುಗ್ಗಿಣೆಯವರು ಖ್ಯಾತ ಸಾಹಿತಿಗಳು. ಹಿಂದಿ ಮತ್ತು ಕನ್ನಡ ಭಾಷೆಗಳಲ್ಲಿ ಅವರು ಕೃಷಿ ಮಾಡಿದ್ದಾರೆ. ಕವನಸಂಕಲನ ಹಾಗೂ ಇತರ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಶ್ರೇಷ್ಠ ಶಿಕ್ಷಕರೆಂದು ಪ್ರಶಸ್ತಿ ಪಡೆದಿದ್ದಾರೆ. ಅವರು ಗುಳೇದಗುಡ್ಡದಲ್ಲಿ ನೆಲೆಸಿದ್ದಾರೆ. ಬಾಗಲಕೋಟೆಯಲ್ಲಿ ಜಾಡಗೆ ಮತ್ತು ರಬಕವಿಯಲ್ಲಿ ಕಾಡಾಪುರ ಪತ್ರಕರ್ತರಾಗಿದ್ದಾರೆ.

ತಮ್ಮ ನಿಸ್ವಾರ್ಥದಿಂದ ಸಮಾಜಕ್ಕೆ ಸೇವೆ ಸಲ್ಲಿಸಿದ ಹಲವಾರು ಮಹನೀಯರು ಉಪ್ಪಾರ ಜನಾಂಗದಲ್ಲಿದ್ದಾರೆ. ಅಂತಹವರಲ್ಲಿ ಗುಡೂರಿನ ಭರಮಪ್ಪ ಮಂತ್ರಿ, ಚಿಕನಾಳದ ಶಿವಲಿಂಗಪ್ಪ ಕಾಮಣ್ಣನವರ್, ಬಾಗಲಕೋಟೆಯ ನಾರಾಯಣ್ ಪ್ರಧಾನಿ, ಪರ್ವತಿಪುರದ

ಆದಗಗೌಡ್ರ, ತುಳಸಗೇರಿ ಗ್ರಾಮದ ಉದ್ದಂಡಪ್ಪ ಅರ್ತಿ, ಯರಗಟ್ಟಿ ಗ್ರಾಮದ ಕಲ್ಲಪ್ಪ ಭೂಪಾಳಿ, ಮುಧೋಳ ಗ್ರಾಮದ ಸುರೇಶ ಲೋಣಾರಿ, ಜಮಖಂಡಿ ತಾಲ್ಲೂಕಿನ ಜಿ.ಹೆಚ್. ಚೌರಿ, ಬಿ.ಹೆಚ್. ರಾಣಗಟ್ಟ, ಧರೆಪ್ಪ ಯಲ್ಲಪ್ಪ ಗುಗ್ಗರಿ, ಅಶೋಕ ಪೂಜಾರ, ಜಿ.ಎಸ್. ಸೈದಾಪೂರ, ಹೆಚ್.ಎಸ್. ಪೂಜಾರ, ಎಂ.ಎನ್. ಯಡವೆ, ಮುಧೋಳ ತಾಲ್ಲೂಕಿನ ಕರಿಯಪ್ಪ ಶಿವಪ್ಪ ಸಿದ್ದಾಪುರ, ಹನಮಂತಪ್ಪ ಲಕ್ಕಪ್ಪ ನೀಲಣ್ಣವರ, ಮಹಾಲಿಂಗಪ್ಪ ಲಾತೂರ, ಮಲ್ಲಪ್ಪ ಮುದಕಪ್ಪಗೋಳ, ಎ.ಎಸ್. ಲೋಣಾರಿ, ಮಹಾಲಿಂಗಪ್ಪ ಬಿರಾಜನವರ ಅಡಿವೆಪ್ಪ ಬಿರಾಜನವರ, ಹನಮಂತಪ್ಪ ಸಿದ್ದಾಪುರ, ಅಡಿವೆಪ್ಪ ಸಿದ್ದಾಪುರ, ಬಾದಾಮಿ ತಾಲ್ಲೂಕಿನ ರಾಮಣ್ಣ ಹಳ್ಳೂರಪ್ಪ ಬಜೆಣ್ಣವರ, ಸುಭಾಸ ಆದನಗೌಡರ, ಸಿದ್ದಪ್ಪ, ನಾಗಪ್ಪ, ಘರೂತಿ, ಲಕ್ಷ್ಮಣ ಗುನ್ನಾಳಿ, ಎಂ.ಹೆಚ್. ತುಗ್ಗಣಿ, ಈರಪ್ಪ ಮಲ್ಲಪ್ಪ ಪೂಜಾರ, ಮಲ್ಲಪ್ಪ ನಾಗಪ್ಪ ನಿಲೂಗಲ್ ಕೆಂದೂರು, ಹುನಗುಂದ ತಾಲೂಕಿನ ಮಲ್ಲಿಕಾರ್ಜುನಪ್ಪ ಗಡಗಿ, ಎಂ.ಹೆಚ್. ಮಂತ್ರಿ, ಹನಮಂತಪ್ಪ, ಕಾಮಣ್ಣನವರ್, ರಮಾಕಾಂತ ಸುರಪುರ ಮುಂತಾದವರು ಸಮಾಜದ ಪ್ರಮುಖರು ಹಾಗೂ ಹಿತಚಿಂತಕರು.

ಬಾಗಲಕೋಟೆ ಜಿಲ್ಲೆಯಲ್ಲಿ ಉಪ್ಪಾರ ಸಂಘವೇ ಇಲ್ಲ. ಇನ್ನು ಸಮುದಾಯದ ಸಂಘಟನೆಯ ಮಾತು ದೂರ ಉಳಿಯಿತು. ವಿದ್ಯಾರ್ಥಿನಿಲಯಗಳು ಇಲ್ಲ. ಹಳ್ಳಿಯಿಂದ ಪಟ್ಟಣಕ್ಕೆ ಓದಲು ಬರುವ ವಿದ್ಯಾರ್ಥಿಗಳು ಪಡುವ ಕಷ್ಟ ನೋಡಿದವರಿಗೆ ಮಾತ್ರ ಗೊತ್ತು. ಸಾಮಾನ್ಯವಾಗಿ ಆಯಾ ಸಮುದಾಯದ ಜಿಲ್ಲಾ ಸಂಘಗಳಿವೆ. ಅವರು ಒಂದೆಡೆ ಸೇರಿ ಕಷ್ಟ ಸುಖ ಮಾತನಾಡಿಕೊಳ್ಳುತ್ತಾರೆ. ಸಮಾಜದ ಹಿತದೃಷ್ಟಿಯಿಂದ ಒಂದಾಗಿ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಜಿಲ್ಲೆಯಲ್ಲಿ ಉಪ್ಪಾರ ಸಂಘಟನೆ ಹಾಗು ಸಂಘದ ಸ್ಥಾಪನೆ ತುರ್ತಾಗಿ ಆಗಬೇಕಾಗಿದೆ.

ಜಿಲ್ಲೆಯನ್ನು ಒಂದು ಘಟಕವಾಗಿಟ್ಟುಕೊಂಡು ಉಪ್ಪಾರರ ಸ್ಥಿತಿಗತಿಗಳ ಬಗ್ಗೆ ವೈಜ್ಞಾನಿಕ ರೀತಿಯಲ್ಲಿ ಮಾಹಿತಿಯನ್ನು ಸಂಗ್ರಹಿಸಬೇಕು. ಇಂತಹ ಮಾಹಿತಿಯಿಂದ ಸರಕಾರ ಹಾಗೂ ಸೇವಾಸಂಸ್ಥೆಗಳು ಈ ಜನಾಂಗಕ್ಕೆ ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಬಹುದು.

ಬಾಗಲಕೋಟೆ ಜಿಲ್ಲೆಯಲ್ಲಿ ಕುಶಲ ಕಲೆಗೆ ಹೆಚ್ಚಿನ ಆದ್ಯತೆ ಇದೆ. ಉಪ್ಪಾರರಲ್ಲಿ ಅನೇಕರು 'ನೇಕಾರಿಕೆ'ಯನ್ನು ಅವಲಂಬಿಸಿರುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ವೃತ್ತಿ ಶಿಕ್ಷಣದ ಕೋರ್ಸುಗಳನ್ನು ಇಲ್ಲಿ ತೆರೆಯಬಹುದು. ಡ್ರಾಯಿಂಗ್, ಸ್ಕ್ರೀನ್ ಪ್ರಿಂಟ್, ಫ್ಯಾಶನ್ ಡಿಸೈನ್ ಇತ್ಯಾದಿ ಹೊಸ ವೃತ್ತಿಶಿಕ್ಷಣ ಇಲ್ಲಿ ಬರಬೇಕು. ಇದು ಉಪ್ಪಾರರಿಗಲ್ಲದೆ ಇಡೀ ಸಮುದಾಯಕ್ಕೇ ಅನುಕೂಲವಾಗುತ್ತದೆ.

ಇಂತಹ ಕಲ್ಯಾಣ ಕಾರ್ಯಕ್ರಮಗಳು ಉಪ್ಪಾರ ಜನಾಂಗದಲ್ಲಿ ಆಗಬೇಕಾದರೆ ರಾಜ್ಯ, ಜಿಲ್ಲಾ ಹಾಗು ತಾಲ್ಲೂಕುಮಟ್ಟದ ಉಪ್ಪಾರ ನಾಯಕರಲ್ಲಿ ತೀವ್ರ ಬದಲಾವಣೆ ಬರಬೇಕು. ತಮ್ಮ ಜನಾಂಗದ ದಯನೀಯ ಸ್ಥಿತಿ ಅವರ ಕಣ್ಣು ತೆರೆಯಿಸಬೇಕು. ಉಪ್ಪಾರ ಮಹಿಳೆ

ಅಥವಾ ಉಪ್ಪಾರ ಯುವಕ ಇಂತಹ ಆಧುನಿಕ ಕಾಲದಲ್ಲೂ ಯಾವುದೇ ನಾಗರಿಕ ಸೌಲಭ್ಯ ಸವಲತ್ತುಗಳಿಲ್ಲದೆ ಒಂದು ಶತಮಾನದ ಹಿಂದಿನಂತೆಯೇ ಬಾಳುತ್ತಿರುವದನ್ನು ಕಂಡು ಇಲ್ಲಿನ ಹಿರಿಯರು ಎಚ್ಚೆತ್ತುಕೊಳ್ಳದಿದ್ದರೆ ಅದು ಅವರ ಅಕ್ಷಮ್ಯ ಅಪರಾಧವಾಗಬಹುದು. ಜನಾಂಗದಲ್ಲಿ ಹುಟ್ಟಿದ ಕೆಲವರು ಸಾಮಾಜಿಕ ಸ್ಥಾನ ಸಂಪಾದನೆ ಮಾಡಿದವರು ಹಿಂದೆ ನೋಡಿ ತಮ್ಮ ಸಹೋದರ-ಸಹೋದರಿಯರತ್ತ ಸಹಾಯಹಸ್ತ ನೀಡಬೇಕು. ಹಾಗೆ ಮಾಡಿದಾಗ ಮಾತ್ರ ಸಮಾಜದ ಋಣ ತೀರಿಸಿದಂತಾಗುತ್ತದೆ. ಅದನ್ನು ತೀರಿಸುವ ನೈತಿಕ ಹೊಣೆಗಾರಿಕೆ ತಮ್ಮ ಮೇಲೆ ಇದೆ ಎಂದು ತಿಳಿಯಬೇಕು. ಅವರನ್ನು ಈ ಮಾರ್ಗದಲ್ಲಿ ಎಚ್ಚರಿಸುವ ಸಂಘ ಈ ಜಿಲ್ಲೆಗೆ ಅಗತ್ಯವಾಗಿ ಬೇಕಾಗಿದೆ.

**ಮಾಹಿತಿಸಂಗ್ರಹ : *ಎಂ.ಹೆಚ್. ತುಗ್ಗಣೆ***

*




# * ಬಿಜಾಪುರ ಜಿಲ್ಲೆ

## ಐತಿಹಾಸಿಕ ಹಿನ್ನೋಟ

ಬಿಜಾಪುರ ಜಿಲ್ಲೆ ಬೆಳಗಾವಿ ವಿಭಾಗಕ್ಕೆ ಸೇರಿದ್ದು, ಕರ್ನಾಟಕ ರಾಜ್ಯದ ಉತ್ತರ ಬಯಲು ಪ್ರದೇಶದಲ್ಲಿ ಉತ್ತರ ಅಕ್ಷಾಂಶ $75^0$ 23' ದಿಂದ $76^0$ 29' ಹಾಗು ಪೂರ್ವ ರೇಖಾಂಶ $16^0$ 09' ದಿಂದ $17^0$ 10' ಇವುಗಳ ನಡುವೆ ಹಬ್ಬಿದೆ. ಭೌಗೋಳಿಕವಾಗಿ ಒಣಹವೆಯನ್ನು ಹೊಂದಿರುವ ಈ ಜಿಲ್ಲೆಯು, ಬಯಲುಸೀಮೆಯ ನಾಡಾಗಿದೆ. ಇದು ದಖನ್ ಟ್ರ್ಯಾಪ್‌ಗಳ ಪ್ರದೇಶ. ಭೀಮಾ, ಕೃಷ್ಣಾ ಮತ್ತು ಡೋಣಿ ಈ ಜಿಲ್ಲೆಯ ಮುಖ್ಯನದಿಗಳು. ಬಸವನಬಾಗೇವಾಡಿ, ಸಿಂದಗಿ ತಾಲ್ಲೂಕುಗಳ ಗಡಿಯಾಗಿ ಹರಿಯುವ ಡೋಣಿ ನದಿ ಬಿಜಾಪುರ, ಮುದ್ದೇಬಿಹಾಳ ತಾಲ್ಲೂಕುಗಳಲ್ಲಿಯೂ ಹರಿಯುವುದು. ಇದರ ಜಲಾನಯನ ಪ್ರದೇಶವನ್ನು ಧಾನ್ಯದ ಕಣಜ ಎನ್ನುವರು. 'ಡೋಣಿ ಬೆಳೆದರೆ ಓಣೆಲ್ಲಾ ಜೋಳ' ಎಂಬ ನಾಣ್ಣುಡಿಯೇ ಇಲ್ಲಿಯ ಪ್ರಾದೇಶಿಕ ವೈಶಿಷ್ಟ್ಯಕ್ಕೆ ಸಾಕ್ಷಿಯಾಗಿದೆ. ಜಿಲ್ಲೆಯಲ್ಲಿ ಸರಾಸರಿ 552.8 ಮಿ.ಮೀ. ಮಳೆ ಆಗುತ್ತದೆ. ವರ್ಷದಲ್ಲಿ ಸಾಮಾನ್ಯವಾಗಿ 37 ದಿನಗಳ ಮಳೆ ಬೀಳುವ ಈ ಜಿಲ್ಲೆಯಲ್ಲಿ ಜೂನ್ ತಿಂಗಳಿಂದ ಸೆಪ್ಟೆಂಬರ್ ತಿಂಗಳವರಗೆ ನೈಋತ್ಯ ಮಾರುತಗಳಿಂದಲೂ, ಅಕ್ಟೋಬರ್, ನವೆಂಬರ್ ತಿಂಗಳುಗಳಲ್ಲಿ ಈಶಾನ್ಯಮಾರುತಗಳಿಂದಲೂ ಮಳೆ ಆಗುತ್ತದೆ. ಒಣಹವೆ ಮತ್ತು ಹಿತಕರ ಹವಾಗುಣದಿಂದಾಗಿ ಶ್ರೇಷ್ಠ ಮಟ್ಟದ ಬಿಳಿಜೋಳ ಹಾಗು ಗೋಧಿಯನ್ನು ಬೆಳೆಯಲಾಗುತ್ತದೆ.

ಜಿಲ್ಲೆಯ ಹವೆ ಆರೋಗ್ಯಕರ. ಡಿಸೆಂಬರಿನಲ್ಲಿ ಅತಿ ಹೆಚ್ಚು ಚಳಿ. ಏಪ್ರಿಲ್, ಮೇ ತಿಂಗಳುಗಳಲ್ಲಿ ಹೆಚ್ಚು ಸೆಖೆ.

ಜಿಲ್ಲೆಯ ಹನ್ನೊಂದು ತಾಲ್ಲೂಕುಗಳ ಪೈಕಿ ಬಾಗಲಕೋಟೆ, ಹುನಗುಂದ, ಬಾದಾಮಿ, ಜಮಖಂಡಿ, ಮುಧೋಳ ಮತ್ತು ಬೀಳಗಿ ತಾಲ್ಲೂಕುಗಳನ್ನು ಸೇರಿಸಿ ಹೊಸದಾಗಿ ಬಾಗಲಕೋಟೆ ಜಿಲ್ಲೆಯನ್ನು ಆಗಸ್ಟ್ 1997ರಲ್ಲಿ ರಚಿಸಲಾಗಿದೆ. ಈಗಿನ ಬಿಜಾಪುರ ಜಿಲ್ಲೆ ಇಂಡಿ, ಸಿಂದಗಿ, ಬಿಜಾಪುರ, ಬಸವನಬಾಗೇವಾಡಿ ಮತ್ತು ಮುದ್ದೇಬಿಹಾಳ ತಾಲ್ಲೂಕುಗಳನ್ನು ಒಳಗೊಂಡಿವೆ. ಪುನರ್ ವಿಂಗಡಣೆಯ ನಂತರ ಈ ಜಿಲ್ಲೆಯ ವಿಸ್ತೀರ್ಣ 10,536,73 ಚ.ಕಿ.ಮೀ.

2001ರ ಜನಗಣತಿ ಪ್ರಕಾರ ಜಿಲ್ಲೆಯ ಜನಸಂಖ್ಯೆ 18,08,863. ಅದರಲ್ಲಿ ಪುರುಷರು 9,28,550. ಸ್ತ್ರೀಯರು 8,80,313. ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 57.46. ಪುರುಷರು ಶೇ. 68.10, ಸ್ತ್ರೀಯರು ಶೇ. 46.19.

ಬಿಜಾಪುರ ಇತಿಹಾಸವು ಬಹು ಪ್ರಾಚೀನವಾದುದು. ಜಿಲ್ಲೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳು ರಾಮಾಯಣ ಕಾಲದ ದಂಡಕಾರಣ್ಯದ ಒಂದು ಭಾಗವಾಗಿತ್ತೆಂದೂ ಹೇಳುತ್ತಾರೆ. ಈ ಜಿಲ್ಲೆಯು ಶಿಲಾಯುಗದ ಕಾಲದಿಂದಲೂ ಜನವಸತಿಯುಳ್ಳ ಪ್ರದೇಶವಾಗಿತ್ತು. ಆದಿ ಹಳೆಯ ಶಿಲಾಯುಗದ ಕಾಲದಿಂದ ಆದಿ ಐತಿಹಾಸಿಕ ಕಾಲದವರೆಗಿನ ಪ್ರಾಚೀನ ನೆಲೆಗಳು ಈ ಜಿಲ್ಲೆಯಲ್ಲಿ ಬೆಳಕಿಗೆ ಬಂದಿವೆ. ಜಿಲ್ಲೆಯ ಕೆಲವು ಪ್ರಮುಖ ಇತಿಹಾಸಪೂರ್ವದ ನೆಲೆಗಳಾದ ಖ್ಯಾಡ, ಡಾಣಕಶಿರೂರ, ಇಂಗಳೇಶ್ವರ, ಕೊಲ್ಹಾರ, ನಿಂಬಾಳ, ಇಂಚಗೇರಿ ಮುಂತಾದವುಗಳನ್ನು ಸಂಶೋಧಕರು ಗುರುತಿಸಿರುತ್ತಾರೆ. ಧೂಳಖೇಡ, ಹಿಪ್ಪರಗಿ ಇವುಗಳು ರಾಮಾಯಣದ ವಿವಿಧ ಘಟನೆಗಳಿಗೆ ಸಂಬಂಧಿಸಿದ ಸ್ಥಳಗಳಾಗಿವೆ. ಎರಡನೆಯ ಶತಮಾನದಲ್ಲಿ ಈಜಿಪ್ಟಿನ ಖ್ಯಾತ ಭೂಗೋಳಶಾಸ್ತ್ರಜ್ಞ ಟಾಲೆಮಿಯು ಜಿಲ್ಲೆಯ ಪುರಾತನ ಸ್ಥಳಗಳಾದ ಇಂಡಿ, ಕಲ್ಲಿಗೇರಿಸ್ (ಸಿಂದಗಿಯ ಕಲ್ಕೇರಿ) ಮುಂತಾದವುಗಳನ್ನು ಪ್ರಥಮ ಬಾರಿಗೆ ಉಲ್ಲೇಖಿಸಿರುತ್ತಾನೆ. ಐದನೆಯ ಶತಮಾನದಿಂದ ಹದಿನಾಲ್ಕನೆಯ ಶತಮಾನದವರೆಗೆ ಜಿಲ್ಲೆಯ ಪ್ರದೇಶದಲ್ಲಿ ನಡೆದ ಐತಿಹಾಸಿಕ ಘಟನೆಗಳ ಬಗೆಗೆ ಶಾಸನಗಳು ದೊರೆತಿವೆ. ಎಂಟನೆಯ ಶತಮಾನದ ಮಧ್ಯದವರೆಗೆ ಸಾಗಿದ ಚಾಳುಕ್ಯರ ಆಳ್ವಿಕೆಯ ಅನಂತರ ಹತ್ತನೆಯ ಶತಮಾನದ ಅಂತ್ಯದವರೆಗೆ ರಾಷ್ಟ್ರಕೂಟರು, ಹನ್ನೆರಡನೆಯ ಶತಮಾನದವರೆಗೆ ಕಲ್ಯಾಣ ಚಾಲುಕ್ಯರೂ ಮತ್ತು ಕೆಲವು ಕಾಲ ಕಳಚೂರಿಗಳು, ಈ ಪ್ರದೇಶವನ್ನು ಆಳಿದರು. ಹದಿಮೂರನೆಯ ಶತಮಾನದಲ್ಲಿ ಇದು ದೇವಗಿರಿ ಯಾದವರ ಆಡಳಿತಕ್ಕೊಳಪಟ್ಟಿತ್ತು. ಹದಿನಾಲ್ಕನೆಯ ಶತಮಾನದ ಆದಿಭಾಗದಲ್ಲಿ ದೇವಗಿರಿ ಯಾದವರ ಪತನದೊಡನೆ ತೊಗಲಕರ ಆಳ್ವಿಕೆಗೆ ಒಳಪಟ್ಟಿತ್ತು. ಬಹಮನಿ ರಾಜ್ಯವು ಕ್ರಿ.ಶ. 1347ರಲ್ಲಿ ಸ್ಥಾಪನೆಯಾದಾಗ ಈಗಿನ ಬಿಜಾಪುರ ಜಿಲ್ಲಾ ಪ್ರದೇಶ ಗುಲ್ಬರ್ಗಾ ಪ್ರಾಂತ್ಯದ ಭಾಗವಾಯಿತು. ಬಿಜಾಪುರ ಪ್ರಾಂತ್ಯ ಹೊಸದಾಗಿ ಕ್ರಿ.ಶ. 1478ರಲ್ಲಿ ನಿರ್ಮಿತವಾಗಿ ಬಹಮನಿ ಅರಸನ

ಮಂತ್ರಿಯಾದ ಖ್ವಾಜಾ ಮಹಮ್ಮದ್ ಗವಾನನು ಆಡಳಿತವನ್ನು ನಿರ್ವಹಿಸಿದನು. ಆತನ ನಿಧನದನಂತರ ಕ್ರಿ.ಶ. 1489ರಲ್ಲಿ ಯುಸುಫ್ ಆದಿಲ್ ಖಾನ್ ಬಿಜಾಪುರ ಪ್ರಾಂತ್ಯವನ್ನು ಸ್ವತಂತ್ರ ರಾಜ್ಯವೆಂದು ಘೋಷಿಸಿದನು. ಕ್ರಿ.ಶ. 1686ರಲ್ಲಿ ಔರಂಗಜೇಬನು ಬಿಜಾಪುರವನ್ನು ಗೆದ್ದುಕೊಂಡನು. ಕ್ರಿ.ಶ. 1723ರವರೆಗೆ ಇದು ಮೊಗಲರ ಆಧಿಪತ್ಯಕ್ಕೆ ಒಳಪಟ್ಟಿತ್ತು. ಅನಂತರ ಹೈದರಾಬಾದ್ ನಿಜಾಮರ ವಶಕ್ಕೆ ಬಂದಿತು. ಮರಾಠರು ಇದನ್ನು ಕ್ರಿ.ಶ. 1760ರಲ್ಲಿ ತಮ್ಮ ವಶಕ್ಕೆ ತೆಗೆದುಕೊಂಡರು. ಕ್ರಿ.ಶ. 1818ರಲ್ಲಿ ಬಿಜಾಪುರ ಜಿಲ್ಲೆ ಬ್ರಿಟಿಷರ ವಶವಾಯಿತು. ಕಲಾದಗಿಯಿಂದ ಜಿಲ್ಲಾಕೇಂದ್ರವನ್ನು ಕ್ರಿ.ಶ. 1885ರಲ್ಲಿ ಬಿಜಾಪುರಕ್ಕೆ ಬದಲಾಯಿಸಲಾಯಿತು. ಅಂದಿನಿಂದ ಇದು ಮುಂಬಯಿ ಪ್ರಾಂತ್ಯದಲ್ಲಿತ್ತು. ಕ್ರಿ.ಶ. 1956ರ ಏಕೀಕರಣದಲ್ಲಿ ಬಿಜಾಪುರ ಮೈಸೂರು ರಾಜ್ಯದ ಭಾಗವಾಯಿತು.

ಬಿಜಾಪುರ ವ್ಯವಸಾಯ ಪ್ರಧಾನ ಜಿಲ್ಲೆ. ಮುಂಗಾರು ಮತ್ತು ಹಿಂಗಾರು ಬೆಳೆಗಳನ್ನು ಬೆಳೆಯುತ್ತಾರೆ. ಜಿಲ್ಲೆಯಲ್ಲಿ ಹೆಚ್ಚು ತೇವವನ್ನು ಹಿಡಿದಿಟ್ಟುಕೊಳ್ಳುವ ಕಪ್ಪುಮಣ್ಣಿನ ಪ್ರದೇಶವೇ ಹೆಚ್ಚು. ಕೃಷ್ಣಾ ಮೇಲ್ದಂಡೆಯ ಯೋಜನೆಯಿಂದಾಗಿ, ಜಿಲ್ಲೆಯ ಕೆಲವು ಭಾಗ ನೀರಾವರಿಗೆ ಒಳಗಾಗಿದೆ. ಬಿಳಿಜೋಳ, ಹತ್ತಿ, ಕಡಲೆ, ಮುಸುಕಿನಜೋಳ, ಗೋಧಿ, ಸಜ್ಜೆ, ಶೇಂಗಾ, ಕುಸುಬೆ, ಸೂರ್ಯಕಾಂತಿ, ಕಬ್ಬು ಮುಂತಾದವುಗಳು ಮುಖ್ಯ ಬೆಳೆಗಳು. ಇತ್ತೀಚಿನ ವರ್ಷಗಳಲ್ಲಿ ಈ ಜಿಲ್ಲೆ ತೋಟಗಾರಿಕೆ ಬೆಳೆಗಳಿಗೆ ಪ್ರಸಿದ್ಧವಾಗಿದೆ. ದ್ರಾಕ್ಷಿ, ದಾಳಿಂಬೆ, ಬೋರೆ, ಲಿಂಬೆ ಮುಂತಾದ ತೋಟಗಾರಿಕೆ ಬೆಳೆಗಳನ್ನು ಬೆಳೆಯಲಾಗುತ್ತದೆ. ಕೃಷಿ ಸಂಶೋಧನಾ ಕೇಂದ್ರವನ್ನು ಕ್ರಿ.ಶ. 1933ರಲ್ಲಿಯೇ ಸ್ಥಾಪಿಸಲಾಗಿದೆ. ವಿಶ್ವ ಬ್ಯಾಂಕ್ ನೆರವಿನ ಕೃಷಿ ವಿಸ್ತರಣಾ ಯೋಜನೆಯನ್ನು ಕ್ರಿ.ಶ. 1978ರಿಂದ ಜಾರಿಗೊಳಿಸಲಾಗಿದೆ. ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿಯನ್ನು ಕ್ರಿ.ಶ. 1995ರಲ್ಲಿ ರಚಿಸಲಾಗಿದ್ದು, ಜಿಲ್ಲೆಯ ರೈತರಿಗೆ ಉಪಯುಕ್ತವಾಗಿದೆ.

ಈ ಜಿಲ್ಲೆ ಕೈಗಾರಿಕೆಯಲ್ಲಿ ಅಷ್ಟು ಮುಂದುವರಿದಿಲ್ಲ. ಇಲ್ಲಿ ಸಣ್ಣ ಪ್ರಮಾಣದ ಮತ್ತು ಗೃಹ ಕೈಗಾರಿಕೆಗಳೇ ಹೆಚ್ಚು. ಹತ್ತಿ ಬೀಜ ಬೇರ್ಪಡಿಸಿ ಅರಳೆ ತೆಗೆಯುವದು, ಇಲ್ಲಿನ ಒಂದು ಪ್ರಮುಖ ಕೈಗಾರಿಕೆ. ನೆಲಗಡಲೆ, ಎಳ್ಳು, ಕುಸುಬೆ, ಹರಳು, ಬೇವಿನ ಬೀಜಗಳಿಂದ ಖಾದ್ಯ ಮತ್ತು ಅಖಾದ್ಯ ತೈಲಗಳ ತಯಾರಿಕೆಯುಂಟು. ಕುರಿತುಪ್ಪಳದ ಕಂಬಳಿ ಮತ್ತು ಇತರ ಉಣ್ಣೆ ಬಟ್ಟೆಗಳ ತಯಾರಿಕೆ ಉಂಟು. ಬಿಜಾಪುರದ ಪಾದರಕ್ಷೆಗಳು ಮತ್ತು ಇತರ ಚರ್ಮವಸ್ತುಗಳು ಪ್ರಸಿದ್ಧ.

ಜಿಲ್ಲೆಯಲ್ಲಿ ಸುಣ್ಣಶಿಲೆ ಸಾಕಷ್ಟು ಪ್ರಮಾಣದಲ್ಲಿ ಲಭ್ಯವಿರುವದರಿಂದ ಸಿಮೆಂಟ್ ಉದ್ಯಮಕ್ಕೆ ಅವಕಾಶವಾಗಿದೆ. ಕಬ್ಬು ಬೆಳೆಯುವ ಪ್ರದೇಶವು ಹೆಚ್ಚಾಗಿದ್ದ ಪರಿಣಾಮ ಸಕ್ಕರೆ ಕಾರ್ಖಾನೆಗಳ ಸ್ಥಾಪನೆ. ಜಿಲ್ಲೆಯ ಹಲಗಲಿ, ಇಂಡಿ, ಕೃಷ್ಣಾನಗರ ಮುಂತಾದ ಕಡೆಗಳಲ್ಲಿ ಸಕ್ಕರೆ ಕಾರ್ಖಾನೆಗಳು ತಲೆ ಎತ್ತಿವೆ.

ಬಿಜಾಪುರದಲ್ಲಿರುವ ಬಿಎಲ್‌ಡಿಇ ಶಿಕ್ಷಣ ಸಂಸ್ಥೆಯನ್ನು ರಾವ್ ಬಹದ್ದೂರ ಫ.ಗು. ಹಳಕಟ್ಟಿ ಮೊದಲಾದ ಗಣ್ಯ ನಾಗರಿಕರು 1910ರಲ್ಲಿ ಸ್ಥಾಪಿಸಿದ್ದು, ಅದು ಬೃಹದಾಕಾರವಾಗಿ ಬೆಳೆದಿದೆ. ಬಿಜಾಪುರ ಎರಡು ಮೆಡಿಕಲ್ ಕಾಲೇಜು, ಒಂದು ಆಯುರ್ವೇದ ಕಾಲೇಜು, ಸ್ನಾತಕೋತ್ತರ ಕೇಂದ್ರ, ಸೈನಿಕ ಶಾಲೆ ಮುಂತಾದವುಗಳನ್ನು ಹೊಂದಿದ್ದು, ರಾಜ್ಯದ ಪ್ರಮುಖ ಶಿಕ್ಷಣ ಕೇಂದ್ರಗಳಲ್ಲೊಂದಾಗಿದೆ.

ಬಿಜಾಪುರ ಜಿಲ್ಲೆಯ ಸಾಂಸ್ಕೃತಿಕ ಕೊಡುಗೆ ಗಮನಾರ್ಹವಾದುದು. ದಕ್ಷಿಣ ಭಾರತದ ಬಹು ಭಾಗದ ಮೇಲೆ ಪ್ರಥಮ ಬಾರಿಗೆ ಒಡೆತನ ನಡೆಸಿದ ಕನ್ನಡ ನಾಡಿನ ರಾಜವಂಶವಾದ ಚಾಳುಕ್ಯರು ಆಳಿದ್ದು ಈ ಜಿಲ್ಲೆಯಿಂದ. ಅವರು ಕನ್ನಡ ಭಾಷೆಯ ಅಭಿವೃದ್ಧಿಗೆ ಉತ್ತೇಜನ ಕೊಟ್ಟರಲ್ಲದೆ, ಕನ್ನಡ ನಾಡಿನ ಸಂಸ್ಕೃತಿ ಮತ್ತು ಕೀರ್ತಿ ದೇಶ ವಿದೇಶಗಳಿಗೆ ಹರಡಲು ಕಾರಣರಾದರು. ಬಿಜಾಪುರದ ಆದಿಲ್ ಷಾಹೀ ಅರಸರ ರಾಜ್ಯ ಸಮಕಾಲೀನ ಭಾರತದಲ್ಲಿ ಅತಿ ವೈಭವಯುತವಾಗಿದ್ದು, ಸಾಹಿತ್ಯ, ಸಂಗೀತ ಮತ್ತು ವಾಸ್ತು ಕಲೆಗಳಿಗೆ ಪೋಷಕವಾಗಿತ್ತು. ಹನ್ನೆರಡನೆಯ ಶತಮಾನದಲ್ಲಿ ನಡೆದ ಸಾಮಾಜಿಕ ಕ್ರಾಂತಿಯ ನೇತಾರ, ಬಸವಣ್ಣನವರು, ಈ ಜಿಲ್ಲೆಯ ಬಸವನಬಾಗೇವಾಡಿಯಲ್ಲಿ ಜನಿಸಿದರು. ಮಲ್ಲಿನಾಥಪುರಾಣ, ರಾಮಚಂದ್ರಚರಿತ ಪುರಾಣ ಗ್ರಂಥಗಳನ್ನು ಬರೆದ ಕವಿ ನಾಗಚಂದ್ರ, ತೊರವೆ ರಾಮಾಯಣವನ್ನು ಬರೆದ ಕುಮಾರ ವಾಲ್ಮೀಕಿ, ಮಡಿವಾಳ ಮಾಚಯ್ಯ ಮುಂತಾದ ಪ್ರಸಿದ್ಧ ವ್ಯಕ್ತಿಗಳು ಈ ಜಿಲ್ಲೆಯವರು. ಇತ್ತೀಚಿನ ಪ್ರಸಿದ್ಧ ವ್ಯಕ್ತಿಗಳಾದ ಕೆರೂರು ವಾಸುದೇವಾಚಾರ್ಯ, ಹರ್ಡೇಕರ ಮಂಜಪ್ಪ, ರಾಮಚಂದ್ರ ದತ್ತಾತ್ರೇಯ ರಾನಡೆ, ಫ.ಗು. ಹಳಕಟ್ಟಿ, ಬಿ.ಡಿ. ಜತ್ತಿ ಇವರು ಕೂಡ ಬಿಜಾಪುರ ಜಿಲ್ಲೆಯವರೇ.

ಈ ಜಿಲ್ಲೆಯಲ್ಲಿ ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ನಡೆದ ಹೋರಾಟ ಕೂಡ ಮೆಲಕುಹಾಕುವಂತಹದು. ಈ ಜಿಲ್ಲೆಯ ಪ್ರಥಮ ಸ್ವಾತಂತ್ರ್ಯ ಹೋರಾಟ ಸಿಂದಗಿಯ ಬಂಡಾಯವಾಗಿದೆ. ಕ್ರಿ.ಶ. 1820ರಲ್ಲಿ ಬ್ರಿಟಿಷರು ಅನುಸರಿಸಿದ ತೆರಿಗೆ ನೀತಿ ಅದಕ್ಕೆ ಕಾರಣವಾಗಿತ್ತು. ಕ್ರಿ.ಶ. 1824ರ ಡಿಸೆಂಬರಿನಲ್ಲಿ ಚಿದಂಬರ ದೀಕ್ಷಿತರ ಮುಂದಾಳತ್ವದಲ್ಲಿ ಸಿಂದಗಿಯಲ್ಲಿ ಬಂಡಾಯದ ಬಾವುಟ ಹಾರಿಸಲಾಯಿತು. ಆದರೆ ಬಂಡಾಯ ವಿದ್ರೋಹಿಗಳಿಂದಾಗಿ ಅದು ವಿಫಲವಾಯಿತು.

ಕ್ರಿ.ಶ. 1857ರಲ್ಲಿ ಚಾಂದಕವಟೆಯ ದೇಶಮುಖ ಕುಟುಂಬಕ್ಕೆ ಸೇರಿದ ಬಸವಲಿಂಗಪ್ಪ ಹಾಗು ಬಿಜಾಪುರದ ಸಿರಿಶೆಟ್ಟಿಯವರು, ಸುರಪುರದ ರಾಜಾ ವೆಂಕಟಪ್ಪನಾಯಕನೊಂದಿಗೆ ಸಮಾಲೋಚಿಸಿ ಬ್ರಿಟಿಷರ ವಿರುದ್ಧ ಬಂಡಾಯ ಘೋಷಿಸಿದರು. ಆದರೆ ಈ ಸಂಚು ಕಾರ್ಯಗತಗೊಳ್ಳುವ ಮೊದಲೇ ಬಯಲಾಗಿ ದೇಶಮುಖ ಬಸವಲಿಂಗಪ್ಪ ದಂಡನೆಗೆ ಒಳಗಾದ.

ಲೋಕಮಾನ್ಯ ಬಾಲಗಂಗಾಧರ ತಿಲಕರ ಪ್ರಭಾವವನ್ನು ಈ ಜಿಲ್ಲೆಯಾದ್ಯಂತ ಗುರುತಿಸಬಹುದು. ಅವರ 'ಕೇಸರಿ' ಪತ್ರಿಕೆ ಜಿಲ್ಲೆಯ ತುಂಬ ಅಭಿಮಾನಿಗಳನ್ನು ಹೊಂದಿತ್ತು. 1892ರಲ್ಲಿ ಅಣ್ಣಾಜಿ ಗೋಪಾಲರಾವ್ ಜೋರಪುರ್ ಹಾಗು ಗುಂಡೇರಾವ್ ಚಂಪ್ಪಿರಾವ್

ಮಣ್ಣೂರಕರ್ ಎಂಬವರು 'ಕರ್ನಾಟಕ ವೈಭವ' ಪತ್ರಿಕೆ ಆರಂಭಿಸಿದರು. ಇದು ರಾಷ್ಟ್ರೀಯ ಚಳುವಳಿಯಲ್ಲಿ ತುಂಬ ಪ್ರಮುಖ ಪಾತ್ರವಹಿಸಿತು.

ಕೌಜಲಗಿ ಶ್ರೀನಿವಾಸರಾಯರು ಬಿಜಾಪುರ ಜಿಲ್ಲೆಯ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು. ಮುಂಬಯಿ ಪ್ರಾಂತೀಯ ರಾಜಕೀಯ ಪರಿಷತ್ತಿನ 17ನೆಯ ಸಭೆ 1918ರ ಮೇ 5ರಂದು ಬಿಜಾಪುರದಲ್ಲಿ ಕೂಡಿತು. ಕೌಜಲಗಿ ಶ್ರೀನಿವಾಸರಾಯರು ಅದರ ಸ್ವಾಗತಾಧ್ಯಕ್ಷರಾಗಿದ್ದರು. ಅದರ ಅಧ್ಯಕ್ಷತೆಯನ್ನು ವಿಠಲಬಾಯಿ ಪಟೇಲರು ವಹಿಸಿದ್ದರು. ಈ ಸಭೆಗೆ ಗಾಂಧೀಜಿ, ಸರೋಜಿನಿ ನಾಯ್ಡು ಮುಂತಾದವರು ಬಂದಿದ್ದರು. ಜಿಲ್ಲೆಗೆ ಇದು ಗಾಂಧೀಜಿಯವರ ಮೊದಲ ಭೇಟಿಯಾಗಿತ್ತು. ಕೌಜಲಗಿ ಹನಮಂತರಾಯರ ಗಾಂಧಿ ಟೊಪ್ಪಿಗೆ ಪ್ರಕರಣ 1921ರಲ್ಲಿ ಬಿಜಾಪುರದಲ್ಲಿ ಮ್ಯಾಜಿಸ್ಟ್ರೇಟ್ ಹ್ಯಾಂಡರಸನ್‌ನ ಮುಂದೆ ನಡೆದು ಬಹು ಪ್ರಸಿದ್ಧಿ ಪಡೆಯಿತು. ಈ ಪ್ರಕರಣದಿಂದ ಸಹಸ್ರಾರು ಜನರು ಗಾಂಧಿ ಟೊಪ್ಪಿಗೆ ಹಾಕಲು ಪ್ರಾರಂಭಿಸಿದರು. ಅಲ್ಲಿಯವರೆಗೆ ರುಮಾಲು ಧರಿಸುತ್ತಿದ್ದ ಲಾಲಾಲಜಪತ್‌ರಾಯರು ರುಮಾಲು ತ್ಯಜಿಸಿ ಗಾಂಧಿ ಟೊಪ್ಪಿಗೆ ಧರಿಸಲಾರಂಭಿಸಿದರು. ಹೀಗೆ ಬಿಜಾಪುರದ ಗಾಂಧಿ ಟೊಪ್ಪಿಗೆ ಹಗರಣಕ್ಕೆ ಐತಿಹಾಸಿಕ ಮಹತ್ವವಿದೆ.

ಬೆಳಗಾವಿಯ ಗಂಗಾಧರ ದೇಶಪಾಂಡೆಯವರ ಪ್ರಭಾವ ಈ ಜಿಲ್ಲೆಯಲ್ಲಿ ವ್ಯಾಪಕವಾಗಿತ್ತು. ನೀಲಕಂಠಪ್ಪ ಸುಗಂಧಿ, ದಿವಾನ್ ಸಾಹೇಬ ಜನಾಬ್ ಜಾನವೇಕರ್ ಮೊದಲಾದವರು ಪಿ.ಸಿ.ಸಿ. ಸದಸ್ಯರುಗಳಾಗಿದ್ದರು. ಸಾಲಿರಾಮಚಂದ್ರರಾವ್, ಜಯರಾಮ್ ನರಗುಂದ, ರಂಗರಾವ್ ತಿಲಗೋಳ್, ಮೊಹರೆ ಹನುಮಂತರಾವ್, ಕಂದಗಲ್ ಹನಮಂತರಾವ್, ಮಂಗಳವೇಡೆ ಶ್ರೀನಿವಾಸರಾವ್, ಹರ್ಡೇಕರ್ ಮಂಜಪ್ಪ, ಅರಮಸಿಂಗಜಿ ಠಾಕೂರ, ಜೀವರಾಜಜೋಶಿ, ಸಿಂದಗಿಯ ಎಸ್.ವೈ. ಪಾಟೀಲ, ವೆಂಕೂಬಾಯಿ ಕೆರೂರು, ತುಳಸಿಬಾಯಿ ಬುರ್ಲಿ, ಎಸ್.ಆರ್. ಕಂಠಿ, ರಾಮವ್ವ ಅಂಬಲಿ, ಪಂಡಿತ ತಾರಾನಾಥಶಾಸ್ತ್ರಿ, ವೀರಪ್ಪಣ್ಣವಾಲಿ, ಗಣಪತಿ ಜಾರಫ್, ಎಸ್. ಹೆಚ್. ಮಿರ್ಜಿ, ಚನ್ನಬಸಪ್ಪ ಅಂಬಲಿ, ವಾಮನ್‌ರಾವ್ ಬಿದರಿ, ಶಂಕರ ಕುರ್ತುಕೋಟಿ ಮೊದಲಾದವರು ಬಿಜಾಪುರ ಜಿಲ್ಲೆಯ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು.

ಬಿಜಾಪುರ ಜಿಲ್ಲೆ ಅನೇಕ ಹಿರಿಯ ನಾಯಕರನ್ನು ಈ ರಾಷ್ಟ್ರಕ್ಕೆ ಕೊಟ್ಟಿದೆ. ಇಬ್ಬರು ಮುಖ್ಯಮಂತ್ರಿಗಳು ಈ ಜಿಲ್ಲೆಯಿಂದ ಬಂದವರು. ಉಪರಾಷ್ಟ್ರಪತಿ ಸ್ಥಾನಕ್ಕೂ ಈ ಜಿಲ್ಲೆಯ ನಾಯಕರು ಏರಿದ್ದಾರೆ. ಎಲ್ಲ ವರ್ಗದಿಂದಲೂ ಜನನಾಯಕರನ್ನು ಕೊಟ್ಟ ಕೀರ್ತಿ ಬಿಜಾಪುರ ಜಿಲ್ಲೆಗೆ ಸೇರುತ್ತದೆ. ದೇಸಾಯಿ ವಕೀಲರು, ಬಿ.ಡಿ. ಜತ್ತಿ, ಎಸ್.ಆರ್. ಕಂಠಿ, ಚನ್ನಬಸಪ್ಪ ಅಂಬಲಿ, ಬಾಬುರಾವ್ ಹುಜರೆ, ರಾಮಣ್ಣ ಬಿದರಿ, ಸುಗಂಧಿ ಮುರಿಗೆಪ್ಪ, ಎಂ.ಪಿ. ನಾಡಗೌಡ, ಆರ್.ಎಂ. ಪಾಟೀಲ, ವಿ.ಹೆಚ್. ಪಾಟೀಲ, ಆರ್.ಎಂ. ದೇಸಾಯಿ, ಎಸ್.ಎಂ. ಗುರೆಡ್ಡಿ, ಬಿ.ಕೆ. ನಾಗನೂರ, ರಾಜಾರಾಮ ದುಬೆ, ಎಸ್.ಬಿ. ಪಾಟೀಲ, ಬಿ.ಎಂ. ಪಾಟೀಲ,

ಬಿ.ಕೆ. ಗುಡದಿನ್ನಿ, ಬಿ.ಎಸ್. ಪಾಟೀಲ (ಸಾಸನೂರು), ಆರ್.ಆರ್. ಕಲ್ಲೂರ, ಎಸ್.ಎಸ್. ಅರಕೇರಿ, ಕೆ.ಟಿ. ರಾಥೋಡ್, ಜಿ.ಎಸ್. ದೇಶಮುಖ, ರಮೇಶ ಜಿಗಜಿಣಗಿ, ವಿಮಲಾಬಾಯಿ ದೇಶಮುಖ, ಎಂ.ಎಲ್. ಉಸ್ತಾದ, ಕುಮಾರಗೌಡ ಪಾಟೀಲ, ಎಸ್.ಎಸ್. ಖೇಡ, ಬಿ.ಇ. ಚೌಧರಿ, ಕೆ.ಬಿ. ಚೌಧರಿ, ಡಾ|| ಆರ್. ಬಿ. ಚೌಧರಿ, ಸಿದ್ದುಸ್ವಾಮಿಗೌಡ ಮೊದಲಾದ ನಾಯಕರನ್ನು ಬಿಜಾಪುರ ಜಿಲ್ಲೆ ನೀಡಿದೆ. ಬಸವನಗೌಡ ಪಾಟೀಲ್ ಯತ್ನಾಳ ಇದೀಗ ಕೇಂದ್ರದ ಜವಳಿ ಖಾತೆ ರಾಜ್ಯ ಸಚಿವರಾಗಿದ್ದಾರೆ.

ಸಾಹಿತ್ಯ, ಕಲೆ ಹಾಗು ಸಂಸ್ಕೃತಿಗಳ ತವರೂರು ಬಿಜಾಪುರ ಜಿಲ್ಲೆ. ಕನ್ನಡದ ಮಹಾಕವಿಗಳಲ್ಲಿ ಒಬ್ಬನಾದ ರನ್ನ ಅವಿಭಾಜ್ಯ ಬಿಜಾಪುರ ಜಿಲ್ಲೆಯವನು. ಸಿಂದಗಿಯ ಕೊಂಡಗುಳಿ ಕೇಶಿರಾಜ (ಕ್ರಿ.ಶ. 1160) ಕನ್ನಡದ ವಿದ್ವಾಂಸ ಹಾಗು ಪ್ರಮುಖ ಶಿವಾನುಭವಿ. ಕ್ರಿ.ಶ. 1430 ರಲ್ಲಿದ್ದ ಮಗ್ಗೆಯ ಮಾಯಿದೇವ, ತೊರವೆಯ ಕುಮಾರ ವಾಲ್ಮೀಕಿ (ನರಹರಿ), ಬಿಜಾಪುರದ ರುಕ್ಮಾಂಗದ ಪಂಡಿತರು, ಕಾಖಂಡಕಿಯ ಮಹೀಪತಿದಾಸರು, ಅವರ ಮಕ್ಕಳು, ಸಿಂದಗಿಯ ಭೀಮಾಶಂಕರರು, ಅಗರಖೇಡದ ಆರ್‍ಯರು, ಗಲಗಲಿಯ ಅವ್ವ, ಪ್ರಯಾಗಬಾಯಿ ಮೊದಲಾದವರು ಹಳೆಯ ತಲೆಮಾರಿನ ಸಾಹಿತ್ಯಪುರುಷರು ಬಿಜಾಪುರ ಜಿಲ್ಲೆಗೆ ಸೇರಿದವರು.

ಕನ್ನಡ ಭಾಷಾಭಿವೃದ್ಧಿಗೆ ಶ್ರಮಿಸಿದವರಲ್ಲಿ ಗುರುಬಸಪ್ಪ ಹಳಕಟ್ಟಿ, ಅವರ ಮಗ ಫ.ಗು. ಹಳಕಟ್ಟಿ, (ಕ್ರಿ.ಶ. 1880 ರಿಂದ 1964) ಅವರು ಬಿಜಾಪುರದಲ್ಲಿ ನೆಲೆಸಿ ಶರಣ ಸಾಹಿತ್ಯ ಕುರಿತಂತೆ 150ಕ್ಕೂ ಹೆಚ್ಚಿನ ಕೃತಿರತ್ನಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದ್ದಾರೆ.

ಸಿಂಪಿಲಿಂಗಣ್ಣ, ಮಧುರಚನ್ನ ಮತ್ತು ಪಿ. ಧೂಲಾ ಮೊದಲಾದವರು ಕನ್ನಡದ ಕೆಲಸ ಮಾಡಿದ ಬಿಜಾಪುರ ಜಿಲ್ಲೆಯ ಹಿರಿಯ ಚೇತನಗಳು.

ಮನಗೂಳಿಯ ರಾಮಚಂದ್ರ ಕೊಟ್ಟಲಗಿ, ಸತ್ಯಕಾಮ, ಬಿ.ಟಿ. ಸಾಸನೂರ, ಎಂ.ಎಂ. ಕಲಬುರ್ಗಿ, ಶ್ರೀರಂಗ, ಕೃಷ್ಣಮೂರ್ತಿ ಪುರಾಣಿಕ, ವಿಜಯ ಸಾಸನೂರ, ದು.ನಿಂ. ಬೆಳಗಲಿ, ವೀರೇಂದ್ರಸಿಂಪಿ, ಡಾ|| ಕೃಷ್ಣಕೊಲ್ಹಾರ ಕುಲಕರ್ಣಿ, ಎಂ.ಬಿ. ಕೊಟ್ಟಸೆಟ್ಟಿ, ಸಿಸು ಸಂಗಮೇಶ, ಶಂ.ಗು ಬಿರಾದಾರ, ಡಾ|| ಎಸ್.ಜಿ. ನಾಗಲೋಟಿಮಠ, ಟಿ.ಬಿ. ವಜ್ರಮಟ್ಟಿ, ಡಾ|| ಅರವಿಂದ ಮಾಲಗತ್ತಿ, ಕಂದಗಲ್ ಹನಮಂತರಾಯ, ಎಸ್.ಕೆ. ಕೊಪ್ಪ, ಈಶ್ವರಚಂದ್ರ ಚಿಂತಾಮಣಿ, ಎ.ಕೆ. ರಾಮೇಶ್ವರ ಮುಂತಾದವರು ಈ ಜಿಲ್ಲೆಯ ಪ್ರಮುಖ ಸಾಹಿತಿಗಳು. ಬಿ.ಎಸ್. ಗದ್ದಗೀಮಠ, ಪಿ.ಕೆ. ಖಂಡೋಬಾ ಹಾಗೂ ಪ್ರೊ. ಶ್ರೀರಾಮ ಇಟ್ಟಣ್ಣನವರ ಜಾನಪದ ವಿದ್ವಾಂಸರು. ಸಿಂದಗಿಯ ಶಶಿಕಲಾ ವೀರಯ್ಯಸ್ವಾಮಿ, ಶಾಂತಾ ಇಮ್ರಾಪುರ, ಸರಸ್ವತಿ ಚಿಮ್ಮಲಗಿ, ವಿದ್ಯುಲ್ಲತಾ ಸಾಸನೂರ ಮೊದಲಾದವರು ಜಿಲ್ಲೆಯ ಮಹಿಳಾ ಸಾಹಿತಿಗಳು. ಡಾ|| ಜಿ.ಎಸ್. ಗಾಯಿಯವರು ರಾಷ್ಟ್ರಮಟ್ಟದ ಖ್ಯಾತ ಶಾಸನತಜ್ಞರು. ನ್ಯಾಯಮೂರ್ತಿ ಟಿ.ಕೆ. ತುಕೋಳ ಅವರು ಈ ಜಿಲ್ಲೆಯವರು. ಅವರು ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳು ಆಗಿದ್ದರು.

ಈ ಜಿಲ್ಲೆ ಮಹಾರಾಷ್ಟ್ರದ ನೆರೆ ಪ್ರದೇಶವಾಗಿರುವದರಿಂದಲೂ ಪೇಶ್ವೆಯವರ ಆಳ್ವಿಕೆಯು 17ನೇ ಶತಮಾನದಲ್ಲಿ ಈ ಜಿಲ್ಲೆಯಲ್ಲಿ ಇದ್ದುದರಿಂದಲೂ, ಮರಾಠಿ ಮತ್ತು ಕನ್ನಡ ಭಾಷೆಗಳಲ್ಲಿ ಪರಸ್ಪರ ಕೊಳ್ಳು-ಕೊಡುಗೆ ಕಾಣ ಬಂದಿದ್ದು ಇದರ ಉಪಯೋಗ ಎರಡು ಭಾಷೆಗಳಿಗೂ ದೊರಕಿದೆ.

ಮಹಮದೀಯರು ಈ ಪ್ರದೇಶವನ್ನು ಬಹಳ ದಿನಗಳ ಕಾಲ ಆಳಿದ್ದರಿಂದ ದಖ್ಖನಿ ಅಥವಾ ಉರ್ದು ಭಾಷೆಯಲ್ಲಿ ಇತಿಹಾಸ, ಕಾವ್ಯ, ಜ್ಯೋತಿಷ ಮುಂತಾದ ವಿಷಯಗಳನ್ನು ಕುರಿತು ಹಲವಾರು ಗ್ರಂಥಗಳು ಬಿಜಾಪುರ ಪರಿಸರದಲ್ಲಿ ರಚನೆಯಾದವು. ಜಿಲ್ಲೆಯಲ್ಲಿ ಸುಮಾರು 20 ಪತ್ರಿಕೆಗಳು ಪ್ರಕಟವಾಗುತ್ತಿವೆ.

ಬಿಜಾಪುರದ ಪರಿಸರದಲ್ಲಿ ಸುಮಾರು 300ಕ್ಕೂ ಹೆಚ್ಚು ಪ್ರಾಚೀನ ಕಟ್ಟಡಗಳು, ಪ್ರೇಕ್ಷಣೀಯ ಸ್ಥಳಗಳೂ ಇವೆ. ಬಿಜಾಪುರ ಇಂದು ಭಾರತದ ಪ್ರಮುಖ ಪ್ರವಾಸಿ ಕೇಂದ್ರಗಳಲ್ಲೊಂದು. ಕೆಲವು ಮಹತ್ವದ ಕಟ್ಟಡಗಳನ್ನು ಇಲ್ಲಿ ಗುರುತಿಸಬಹುದು. ಬಿಜಾಪುರ ಕೋಟೆ, ಗೋಳಗುಮ್ಮಟ, ಅರಕಿಲ್ಲಾ, ಆನಂದಮಹಲ್, ಕರೀಮುದ್ದೀನನ ಮಸೀದಿ, ಗಗನ ಮಹಲ್, ಜಲಮಂಜಿಲ್, ಚಿಂಚನದಿಡ್ಡಿ ಮಸೀದಿ, ಆಸಾರ್ ಮಹಲ್, ಜಹಾಜ್ ಮಹಲ್, ಜಾಮೀ ಮಸೀದಿ, ಮೆಹತರ್ ಮಹಲ್, ಆದಾಲತ್ ಮಹಲ್, ಅರ್ಷ್ ಮಹಲ್, ಪಾನೀ ಮಹಲ್, ಚೀನೀ ಮಹಲ್, ಮಾಲಿಕ್-ಇ-ಮೈದಾನ್, ತಾಜ್ ಬಾವಡಿ, ಉಪರಿ ಬುರಜ್, ಚಾಂದ್ ಬಾವಡಿ, ಇಬ್ರಾಹಿಂ ರೋಜಾ, ಮೋತಿ ಗುಂಬಜ್, ಅಮೀನ್ ದರ್ಗಾ, ಸಂಗೀತ ಮಹಲ್, ರುಕ್ಮಾಂಗದ ಪಂಡಿತರ ಸಮಾಧಿ-ಮುಂತಾದ ಪ್ರಾಚೀನ ಸ್ಮಾರಕಗಳಿಂದಾಗಿ ಬಿಜಾಪುರ ಜಿಲ್ಲೆ ವಿಶ್ವದ ಪ್ರಾಚೀನ ಪರಂಪರೆಯ ಪಟ್ಟಿಯಲ್ಲಿ ಸೇರಿದೆ.

ಈ ಪ್ರಾಚೀನ ಕಟ್ಟಡಗಳಲ್ಲದೆ, ಬಿಜಾಪುರದಲ್ಲಿ ಇತ್ತೀಚಿಗೆ ರಚಿತವಾಗಿರುವ ಬಾಲಾಜಿ ಮಂದಿರ, ಮಹಾಲಕ್ಷ್ಮಿ ಮಂದಿರ, ನರಸಿಂಹ ದೇವಾಲಯ, ರಾಮಮಂದಿರ, ಸಿದ್ದೇಶ್ವರ ದೇವಾಲಯ, ಶಿವತತ್ವಜ್ಞಾನ ವಿಕಾಸ ಕೇಂದ್ರ, ಬಿಜಾಪುರ ಸಭೆ, ತಿಳಕ ಮಹಿಳಾ ಸಮಾಜ ಮೊದಲಾದವುಗಳು ಸ್ಥಳೀಯಯವಾಗಿ ಪ್ರಸಿದ್ಧವಾಗಿವೆ.

## ಉಪ್ಪಾರ ಸಮಾಜ

ಬಿಜಾಪುರ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯದವರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಬಿಜಾಪುರ ನಗರ, ರತ್ನಾಪುರಹಳ್ಳಿ, ಹರನಾಳ, ಹೊನವಾಡ, ದಮನಾಳ, ಕಲಕವಟಗಿ, ಕಂಬಗಿ, ದೇವರ ಜನ್ನೂರು, ಕಾಖಂಡಕಿ, ಮೇದಗುಣಕಿ, ಜಂಬಗಿ, ಕನ್ನಾಳ, ಹೊನಗನಹಳ್ಳಿ, ಬೋಳಚಿಕ್ಕಲಗಿ-ಎಂಬೀ ಗ್ರಾಮಗಳನ್ನೊಳಗೊಂಡಂತೆ ಬಿಜಾಪುರ ತಾಲ್ಲೂಕಿನಲ್ಲಿ ಸುಮಾರು 2100ಕ್ಕಿಂತಲೂ ಹೆಚ್ಚು ಉಪ್ಪಾರ ಕುಟುಂಬಗಳಿದ್ದು ಸುಮಾರು 15,000 ಜನಸಂಖ್ಯೆ ಇದೆಯೆಂದು ಹೇಳಲಾಗಿದೆ.

ಬಸವನಬಾಗೇವಾಡಿ ಟೌನ್, ಹತ್ತರಕಿಹಾಳ, ಯಳವಾರ, ಬುದ್ನಿ, ಜಿಮ್ಮಲಗಿ, ಕೋಲ್ಹಾರ, ತೆಲಗಿ, ಮನಗೂಳಿ, ಆಲಮಟ್ಟಿ, ನಿಡಗುಂದಿ, ಹೊಸೂರು, ಮಸೂರಿ, ಮಲಸಾಣ, ಬುರ್ನಿ, ಹಳ್ಳದ ಗೊಗ್ಗೇರ, ಎಂಬೀ ಹಳ್ಳಿಗಳನ್ನೊಳಗೊಂಡಂತೆ ಬಸವನಬಾಗೇವಾಡಿ ತಾಲ್ಲೂಕಿನಲ್ಲಿ ಸುಮಾರು 500ಕ್ಕಿಂತಲೂ ಹೆಚ್ಚು ಕುಟುಂಬಗಳಿದ್ದು ಸುಮಾರು 3000 ಜನರಿದ್ದಾರೆಂದು ತಿಳಿಯಲಾಗಿದೆ.

ಮುದ್ದೇಬಿಹಾಳ ಟೌನ್, ಬೊಮ್ಮನಹಳ್ಳಿ, ಮಿಣಜಗಿ, ತಾಳಿಕೋಟೆ, ಕೊಲ್ಲೂರು, ನಾಲತ್ವಾಡ, ಢವಳಗಿ, ಬಸವಕೋಡ, ಬೈಚಬಾಳ-ಮೊದಲಾದ ಗ್ರಾಮಗಳನ್ನೊಳಗೊಂಡಂತೆ ಮುದ್ದೇಬಿಹಾಳ ತಾಲ್ಲೂಕಿನಲ್ಲಿ ಸುಮಾರು 550ರಷ್ಟು ಉಪ್ಪಾರ ಕುಟುಂಬಗಳಿವೆ. 3,500ಕ್ಕೂ ಹೆಚ್ಚು ಜನರಿದ್ದಾರೆಂದು ಮಾಹಿತಿ ದೊರಕಿದೆ.

ಇಂಡಿ, ಸಾಲೋಟಗಿ, ಸಿರಸ್ಯಾಡ, ನಾದ, ರೂಗಿ, ಮಸಳಿ ಬಿ.ಕೆ, ತಾಂಬಾ, ಚಿಕ್ಕಬೇವನೂರು, ಹಿರೆಬೇವನೂರು, ಗುಂಡವಾಡಾ, ಉಪ್ಪಾರಹಟ್ಟಿ, ಚಡಚಣ, ಬರಡೋಲ ತಾಂಡಾ, ಶಿರಾಕ್ಯಾತ, ರೋಣ, ಹಿರೇಬಿದನೂರು ಮತ್ತು ಕಪ್ಪ ನಿವಾರಗಿ-ಮೊದಲಾದ ಗ್ರಾಮಗಳನ್ನೊಳಗೊಂಡಂತೆ ಸುಮಾರು 500 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ ಸುಮಾರು 3300 ಜನರಿದ್ದಾರೆಂದು ಹೇಳಲಾಗಿದೆ.

ಸಿಂದಗಿ ಟೌನ್, ಕಿನ್ನೂರು, ಮನ್ನಾಪುರ, ತಾರಾಪುರ, ಕಲಕೇರಿ, ಜಲವಾಡಿ, ಕೊಕಟನೂರು, ಬೊಮ್ಮನಹಳ್ಳಿ, ದೇವರಹಿಪ್ಪರಗಿ, ಯಂಕಂಚಿ, ಆಲುಮೇಲ, ಗುಬ್ಬೇವಾಡ, ಕೊಂಡಗೂಳಿ, ಚಿಕ್ಕೂರಗಿ, ಬಂಕಲಗಿ, ಬೈನೂರು, ಬಳಗಾನೂರು, ಚಟ್ನಳ್ಳಿ, ಆಸ್ಕಿ, ಸೋಮಜಾಳ, ಇಬ್ರಾಹಿಂಪುರ, ಖಾನಾಪುರ, ಕನ್ನಳ್ಳಿ-ಮುಂತಾದ ಗ್ರಾಮಗಳನ್ನೊಳಗೊಂಡಂತೆ ಸಿಂದಗಿ ತಾಲ್ಲೂಕಿನಲ್ಲಿ ಸುಮಾರು 540 ಕುಟುಂಬಗಳಿವೆ. 3000ಕ್ಕೂ ಹೆಚ್ಚು ಜನಸಂಖ್ಯೆ ಇದೆ. ಹೀಗೆ ಬಿಜಾಪುರ ಜಿಲ್ಲೆಯಲ್ಲಿ ಸುಮಾರು 4250 ಉಪ್ಪಾರ ಕುಟುಂಬಗಳಿದ್ದು 28,000 ಕ್ಕೂ ಅಧಿಕ ಉಪ್ಪಾರ ಜನಸಂಖ್ಯೆ ಇದೆಯೆಂದು ಸಮೀಕ್ಷೆಯಿಂದ ತಿಳಿದುಬರುತ್ತದೆ.

ಬಿಜಾಪುರ ಜಿಲ್ಲೆಯಲ್ಲಿ ಮೂಲತಃ ಉಪ್ಪಾರರು ವ್ಯವಸಾಯ ವೃತ್ತಿ ಕೈಗೊಂಡಿದ್ದಾರೆ. ಕೃಷಿಕಾರ್ಮಿಕರು ಜಿಲ್ಲೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಅಲ್ಲದೆ ಕೆಲವು ಕುಟುಂಬಗಳು ಸುಣ್ಣ ತಯಾರಿಕೆಯಲ್ಲಿ ತೊಡಗಿದ್ದರೆ, ಇನ್ನು ಕೆಲವು ಕುಟುಂಬಗಳು ಇದ್ದಲು ತಯಾರಿಕೆ ಹಾಗು ಗೋಡೆ ಕಟ್ಟುವ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇತ್ತೀಚಿತ್ತಲಾಗಿ ತೋಟಗಾರಿಕೆಯಲ್ಲಿ ಕೂಡ ಅನೇಕರು ಉದ್ಯೋಗ ಕಂಡುಕೊಂಡಿದ್ದಾರೆ.

ಉಪ್ಪಾರರು ಮರಾಠಿಯನ್ನು ಸಂದರ್ಭಕ್ಕೆ ತಕ್ಕಂತೆ ಬಳಸುತ್ತಾರೆ. ಆದರೆ ಬಹುಮಟ್ಟಿಗೆ ಕನ್ನಡವೇ ಅವರ ಮಾತೃಭಾಷೆಯಾಗಿದೆ. ಜಿಲ್ಲೆಯಲ್ಲಿ ಉಪ್ಪಾರರಿಗೆ ಅನೇಕ ಉಪನಾಮಗಳಿವೆ. ಉಪ್ಪಾರ, ಭಂಡಾರಕರ್, ಬಂಡಿ, ಮಸಾಳೆ, ನರಲಿ, ಗುಗ್ಗರಿ, ಖೋತ, ಕಿಲಾರಿ, ಲೋಣಾರಿ,

ಮೋಪಗಾರ, ಮರತ್ಯಾಳ, ಗೋಗಿ, ಯಾಡವಿ, ಚಿಮ್ಮಲಗಿ, ಕರಂಡಿ, ಮದಭಾವಿ, ದಳವಿ, ಕಟ್ಟೀಮನಿ, ಮಸರಕಲ್, ಇತ್ಯಾದಿ.

ಉಪ್ಪಾರ ಸಮಾಜದವರ ಆರ್ಥಿಕ ಸ್ಥಿತಿ ಹೇಳಿಕೊಳ್ಳುವಥದೇನೂ ಅಲ್ಲ. ಅವರು ಜಮೀನ್ದಾರರೂ ಅಲ್ಲ. ದೊಡ್ಡ ವ್ಯಾಪಾರಸ್ಥರೂ ಅಲ್ಲ. ಹೆಚ್ಚಿನ ಜನರು ಚಿಕ್ಕ ಹಿಡುವಳಿದಾರರು ಹಾಗು ಕೃಷಿಕಾರ್ಮಿಕವರ್ಗಕ್ಕೆ ಸೇರಿದವರು. ಕಾರಣ ಈ ಜನಾಂಗದ ಬಹುಮಟ್ಟಿನ ಜನ ಬಡತನ ರೇಖೆಗಿಂತ ಕೆಳಗಿದ್ದಾರೆ. ಒಂದೊಂದು ಗ್ರಾಮದಲ್ಲಿ ಒಂದೆರಡು ಕುಟುಂಬಗಳಾದರೂ ಸರಿಯಾದ ಆರ್ಥಿಕ ಚೈತನ್ಯ ಪಡೆದಿಲ್ಲವೆಂದರೆ ಎಂತಹ ಶೋಚನೀಯ ಸ್ಥಿತಿ!

ಜಿಲ್ಲೆಯಲ್ಲಿ ಉಪ್ಪಾರರ ಸಾಕ್ಷರತಾ ಪ್ರಮಾಣ ಎಲ್ಲ ಜನಾಂಗಗಳಿಗೂ ಕೊನೆಯ ಹಂತದಲ್ಲಿದೆ ಎಂದು ಸಮೀಕ್ಷೆಯಿಂದ ತಿಳಿದುಬರುತ್ತದೆ. ಜಿಲ್ಲೆಯ ಸಾಕ್ಷರತಾ ಪ್ರಮಾಣ 57.46 ಇದ್ದರೆ, ಉಪ್ಪಾರ ಜನಾಂಗದ ಸಾಕ್ಷರತಾ ಪ್ರಮಾಣ 35ಕ್ಕಿಂತಲೂ ಕಡಿಮೆ ಇದೆಯೆಂದು ತಿಳಿದುಬಂದಿದ್ದು, ಹೆಣ್ಣುಮಕ್ಕಳ ಸಾಕ್ಷರತಾ ಪ್ರಮಾಣ ಶೇ. 20ಕ್ಕಿಂತಲೂ ಕಡಿಮೆ ಎಂಬುದು ಶೋಚನೀಯ. ನಾಗರಿಕ ಸರಕಾರದ ಯಾವ ಯೋಜನೆಗಳೂ ಇವರಿಗೆ ತಲುಪಿಲ್ಲವೆಂಬುದು ಸ್ಪಷ್ಟ. ಈ ಸ್ಪರ್ಧಾತ್ಮಕ ಯುಗದಲ್ಲಿ ವಿದ್ಯೆ ಇಲ್ಲದಿರುವುದು ಈ ಜನಾಂಗಕ್ಕೆ ದೊಡ್ಡ ಕೊರತೆ. ವಿದ್ಯೆ ಇಲ್ಲದ ಕಾರಣ ದೈನ್ಯತೆ ಹೆಚ್ಚಾಗಿ ಕಂಡುಬರುತ್ತಿದ್ದು, ತಮ್ಮ ನ್ಯಾಯಬದ್ಧ ಹಕ್ಕುಗಳಿಗೆ ಹೋರಾಟ ಮನೋಭಾವ ಇಲ್ಲದಿರುವದು ಕಂಡುಬರುತ್ತದೆ.

ಇಡೀ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯದವರಿಂದ ಕೇವಲ ಒಂದೇ ಒಂದು ಪ್ರೌಢಶಾಲೆ ನಡೆಯುತ್ತಿದೆ. ಅದು ಬಿಜಾಪುರದ ಶಿಕಾರಿಖಾನೆಯಲ್ಲಿರುವ 'ಹನುಮಾನ್ ಹೈಸ್ಕೂಲ್'. ಇದರಿಂದ ಶಿಕ್ಷಣದ ಬಗ್ಗೆ ಈ ಸಮುದಾಯದಲ್ಲಿ ಎಷ್ಟರ ಮಟ್ಟಿಗೆ ಜಾಗೃತಿ ಇದೆ ಎಂಬುದು ಗೊತ್ತಾಗುತ್ತದೆ. ಅನುದಾನವನ್ನು ಶಾಶ್ವತವಾಗಿ ನಿಲ್ಲಿಸಿದಮೇಲೆ ಇಂತಹ ದುರ್ಬಲ ವರ್ಗದವರು ಶಿಕ್ಷಣ ಸಂಸ್ಥೆಗಳನ್ನು ನಡೆಸುವದಾದರೂ ಹೇಗೆ ಸಾಧ್ಯ?

ಈ ಸಮುದಾಯಕ್ಕೆ ಸೇರಿದ ನಾಲ್ಕು ಜನ ವೈದ್ಯರು ಈ ಜಿಲ್ಲೆಯಲ್ಲಿದ್ದಾರೆ. ಅವರುಗಳೆಂದರೆ: ಡಾ|| ಹೆಚ್.ವಿ. ಬಂಡಿ ಹಾಗೂ ಬಾಲಾ ಸಾಹೇಬ ಮೆಥಾನ. ಈ ಇಬ್ಬರೂ ವೈದ್ಯರು ಖಾಸಗಿ ಆಸ್ಪತ್ರೆಗಳನ್ನು ನಡೆಸುತ್ತಿದ್ದಾರೆ. ಡಾ|| ಕಾಗಲಕರ್ ಮತ್ತು ಡಾ|| ದೇಸಾಯಿ ಅವರು ಸಮಾಜದ ಇನ್ನಿಬ್ಬರು ವೈದ್ಯರು.

ಈ ಸಮುದಾಯದಲ್ಲಿ ಇಂಜನಿಯರುಗಳೆಂದರೆ : ಸೋಮಶೇಖರ ಬಂಡಿ, ಸಂಜೀವ ಭಂಡಾರಕರ್, ರವಿ ವಿಶ್ವನಾಥ ನರಲಿ, ಪರಶುರಾಮ ಮಸರಕಲ್ ಹಾಗು ಮದಭಾವಿ ಮುಂತಾದವರು. ಜಿಲ್ಲೆಯಲ್ಲಿ ಸಮುದಾಯಕ್ಕೆ ಸೇರಿದ ವಕೀಲರುಗಳೆಂದರೆ : ಬಿ.ಆರ್. ಬೆಳ್ಳುಬ್ಬಿ, ಕೆಂಟೂರ, ರವಿ ಮದಭಾವಿ, ನಡುವಿನಮನಿ, ಕಸ್ತೂರಿ, ನಿಲಿವಾಡ ಮುಂತಾದವರು.

ಡಿ.ವೈ. ಉಪ್ಪಾರ ರಾಜ್ಯದಲ್ಲಿ ಹೆಸರಾಂತ ಕಂಟ್ರಾಕ್ಟರ್. ಮಹಾರಾಷ್ಟ್ರದಲ್ಲಿ ಕೂಡ ಇವರು ಗಣನೀಯ ಪ್ರಮಾಣದಲ್ಲಿ ಕಂಟ್ರಾಕ್ಟ್ ಕೆಲಸ ಮಾಡಿಸುತ್ತಿದ್ದಾರೆ. ದಾನಿಗಳು. ಸಮಾಜದ

ಬಗ್ಗೆ ಅಭಿಮಾನವುಳ್ಳವರು. ಡಾ॥ ಹೆಚ್. ವಿ. ಬಂಡಿ ಕೂಡ ಪ್ರಥಮ ಶ್ರೇಣಿಯ ಕಂಟ್ರಾಕ್ಟರ್.

ಡಾ॥ ಸರಸ್ವತಿ ಚಿಮ್ಮಲಗಿಯವರು ಪ್ರಾಧ್ಯಾಪಕರು ಮತ್ತು ಸಾಹಿತಿಗಳು, ವಿಠಲ ಪೂಜಾರಿ ಕೃಷಿ ಮಾರುಕಟ್ಟೆ ಇಲಾಖೆಯಲ್ಲಿ ಉನ್ನತ ಅಧಿಕಾರಿ. ವಿಶ್ವನಾಥ ರಾ. ನಳಲಿ ಅವರು ವಿಶ್ರಾಂತ ತಹಸಿಲ್ದಾರ. ದಶರತ್ ಲಕ್ಷ್ಮಣ್ ನರಲಿ ಅವರು ಶಿರಸ್ಯಾಡಗ್ರಾಮ ಪಂಚಾಯ್ತಿಯ ಅಧ್ಯಕ್ಷರು, ಜಕ್ಕಪ್ಪ ಯಡವಿ ಜಿಲ್ಲಾಪಂಚಾಯ್ತಿ ಮಾಜಿ ಸದಸ್ಯರು, ಜೋತಿಬಾ ಮಸಾಳೆ ತಾಲ್ಲೂಕಾಪಂಚಾಯ್ತಿ ಮಾಜಿ ಸದಸ್ಯರು, ರುಕುಮಾಬಾಯಿ ಮಸಾಳೆ ಗ್ರಾಮ ಪಂಚಾಯ್ತಿ ಸದಸ್ಯರು, ದಿ. ಗುಂಡಪ್ಪ ಉಪ್ಪಾರ, ಸ್ವಾತಂತ್ರ್ಯ ಹೋರಾಟಗಾರರು, ಚಂದ್ರಶೇಖರ ಭಂಡಾರಕರ, ಎಸ್.ಬಿ. ಗುಗ್ಗರಿ, ಎಸ್.ಆರ್. ಚಿಮ್ಮಲಗಿ, ಸುಭಾಸ್ ಮರತ್ಯಾಳ ತಾಳೀಕೋಟೆ ರಾಮಪ್ಪ ಉಪ್ಪಾರ, ಚನ್ನಪ್ಪ ಹೊಸೂರು ಚಿಮ್ಮಲಗಿ, ಮಿಸಾಳೆ ಮಸಳಿ, ಪಂಚಪ್ಪ ಉಪ್ಪಾರ ಹಿರೇರೂಗಿ, ಬಿ.ಡಿ. ಸಕ್ಕರಿ ಶಿರಸ್ಯಾಡ, ಬಸವನಬಾಗೇವಾಡಿಯ ಕಲ್ಲಪ್ಪ, ಕಲ್ಲೋಳಪ್ಪ ಹೊಸೂರು, ಚನ್ನಬಸಪ್ಪ ಸಂಗಪ್ಪ, ಚಿಮ್ಮಲಗಿ, ಶಿವಪ್ಪ ಭೇರಪ್ಪ ಉಪ್ಪಾರ, ಶರಣಪ್ಪ ಯೋಗಪ್ಪ ಉಪ್ಪಾರ, ಸಿಂದಗಿ ತಾಲೂಕಿನ ಸಂಜೀವಪ್ಪ ಕೊಕಟನೂರ, ಲಕ್ಷ್ಮಣ್ ಫಕೀರಪ್ಪ ಮೋಪಗಾರ, ಮಲ್ಲಿಕಾರ್ಜುನ ರಾಮಣ್ಣ ಸಿಂಗ್ರಿ, ಶ್ರೀಶೈಲ ಬಸವರಾಜ ಕಟ್ಟಿಮನಿ, ಮುದ್ದೇಬಿಹಾಳ ತಾಲ್ಲೂಕಿನ ಶಿವಣ್ಣ ರಾಮಪ್ಪ ಮಸಕರಕಲ್, ಬಸವರಾಜ ವಿಠೋಬಾ, ದೋರನಹಳ್ಳಿ, ವೆಂಕಟೇಶ ಬಿ. ಮಸರಕಲ್, ಭೋಜಪ್ಪ ಬಂಡಿ ಜಿಲ್ಲಾ ಸಂಘದ ಅಧ್ಯಕ್ಷರು, ವಿಷ್ಣುಮದಭಾವಿ, ಎಸ್.ಎಸ್. ಭಂಡಾರಕರ್, ವಿ.ಎಸ್. ಕಳಬುಳಗಿ, ಪಿ.ಎಸ್. ಬಸೆಟ್ಟಿ, ಜಿ.ಎಲ್. ಕಸ್ತೂರಿ, ನಿವೃತ್ತ ಪ್ರಿನ್ಸಿಪಾಲ್ ಸಿ.ಎಂ. ಮೇಟಿ, ಪೊಲೀಸ್ ಇನ್ಸ್‌ಪೆಕ್ಟರ್ ರಮೇಶ ಮೇಟಿ ಮುಂತಾದವರು ಜಿಲ್ಲೆಯ ಸಮಾಜದ ಗಣ್ಯರು ಹಾಗು ಹಿತಚಿಂತಕರು.

ಉಪ್ಪಾರ ಯುವ ಪೀಳಿಗೆ ವಿದ್ಯಾವಂತರಾಗಬೇಕು. ಅವರು ಕೂಡ ಇತರೆ ಸಹೋದರ ಸಮಾಜದ ಮಕ್ಕಳ ಸರಿಸಾಟಿಯಾಗಿ ಬೆಳೆಯಬೇಕು. ಅವರಿಗೆ ವಿದ್ಯಾರ್ಥಿನಿಲಯ, ವಿದ್ಯಾರ್ಥಿ ವೇತನ ಮುಂತಾದ ಅನುಕೂಲತೆ ಹಾಗು ಉತ್ತಮ ಪರಿಸರ ಒದಗಿಸಿಕೊಡುವದು ಸಮಾಜದ ಹಿರಿಯರ ಕರ್ತವ್ಯವಾಗಿದೆ.

ಉಪ್ಪಾರರು ದುಶ್ಚಟಗಳಿಂದ ಮುಕ್ತರಾಗಬೇಕು. ಯುವಕರು ನಾಯಕತ್ವ ಗುಣ ಬೆಳೆಸಿಕೊಳ್ಳಬೇಕು. ರಾಜರ್ಷಿ ಭಗೀರಥ ಜಯಂತಿಯನ್ನು ಪ್ರತಿ ವರ್ಷ ಆಚರಿಸುವ ಮೂಲಕ ಶಿಸ್ತು ಒಗ್ಗಟ್ಟು ಹಾಗು ಸಂಯಮ ಬೆಳೆಸಿಕೊಳ್ಳಬೇಕು. ಭಗೀರಥಭವನ ಜಿಲ್ಲಾ ಕೇಂದ್ರದಲ್ಲಿ ಸಿದ್ಧವಾಗಬೇಕು. ಇದಕ್ಕೆಲ್ಲಾ ಜಿಲ್ಲಾ ಹಾಗು ರಾಜ್ಯ ಸಂಘಗಳು ಕ್ರಿಯಾಶೀಲ ಯೋಜನೆ ಹಾಕಿಕೊಂಡು, ಸೂಕ್ತ ಮಾರ್ಗದರ್ಶನ ನೀಡಿದಾಗ ಮಾತ್ರ ಅರುಣೋದಯದ ಆಶಾಕಿರಣವನ್ನು ಸಮಾಜದ ಬಂಧುಗಳು ಕಾಣಬಹುದಾಗಿದೆ.

*ಮಾಹಿತಿಸಂಗ್ರಹ : ವಿಶ್ವನಾಥ ರಾ. ನರಲಿ, ಎಂ.ಹೆಚ್. ತುಗ್ಗಣಿ*

*




# * ಬೆಳಗಾವಿ ಜಿಲ್ಲೆ

## ಐತಿಹಾಸಿಕ ಹಿನ್ನೋಟ

ಬೆಳಗಾವಿ ಜಿಲ್ಲೆ ಕರ್ನಾಟಕ-ಮಹಾರಾಷ್ಟ್ರ ಗಡಿ ವಿವಾದದಿಂದಾಗಿ ಸದಾಕಾಲ ಮಾಧ್ಯಮಗಳಲ್ಲಿ ಚಾಲ್ತಿಯಲ್ಲಿರುವ ಹೆಸರು. ಬೆಳಗಾವಿ ಕನ್ನಡ ಮರಾಠಿ ಸಂಸ್ಕೃತಿಗಳ ಸಂಗಮಕ್ಕೆ ನಿದರ್ಶನವಾದ ಸ್ಥಳವಾಗಿದೆ. ಈ ಜಿಲ್ಲೆ ರಾಜ್ಯದ ವಾಯುವ್ಯ ದಿಕ್ಕಿಗಿದೆ. ಈ ಜಿಲ್ಲೆ 1836ರಲ್ಲಿ ಜನ್ಮತಾಳಿತು. ಇದು ರಾಜ್ಯದ ರಾಜಧಾನಿಯಿಂದ 502ಕಿ.ಮೀ. ದೂರದಲ್ಲಿದೆ.

2001ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ 42,07,264 ಜನಸಂಖ್ಯೆ ಇದೆ. ಅದರಲ್ಲಿ ಪುರುಷರು 21,47,764 ಮತ್ತು ಸ್ತ್ರೀಯರು 20,59,518. ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 64.42, ಪುರುಷರು ಶೇ. 75.89, ಸ್ತ್ರೀಯರು 52.53.

ಈ ಜಿಲ್ಲೆಯಲ್ಲಿ ಹತ್ತು ತಾಲೂಕುಗಳಿವೆ. ಅವುಗಳೆಂದರೆ : ಖಾನಾಪುರ, ಬೆಳಗಾವಿ, ಬೈಲಹೊಂಗಲ, ಸವದತ್ತಿ, ರಾಮದುರ್ಗ, ಗೋಕಾಕ್, ಚಿಕ್ಕೋಡಿ, ಹುಕ್ಕೇರಿ, ರಾಯಬಾಗ್ ಹಾಗು ಅಥಣಿ.

ಈ ಜಿಲ್ಲೆ 15°23'ರಿಂದ 16°58' ಉತ್ತರ ಅಕ್ಷಾಂಶ ಮತ್ತು 74°5'ರಿಂದ 75°28' ಪೂರ್ವ ರೇಖಾಂಶಗಳ ಮಧ್ಯೆ ಹರಡಿದೆ. ಜಿಲ್ಲೆಯ ಒಟ್ಟು ವಿಸ್ತೀರ್ಣ 13,415 ಚ.ಕಿ.ಮೀ. ಕೃಷ್ಣಾ, ಘಟಪ್ರಭಾ, ಮಲಪ್ರಭಾ ಮತ್ತು ಡೋಣಿ ಈ ಜಿಲ್ಲೆಯ ಮುಖ್ಯ ನದಿಗಳು. ಅಗರಣೆ, ವೇದಗಂಗಾ, ದೂದಗಂಗಾ, ಹಿರಣ್ಯಕೇಶಿ,

ಮಾರ್ಕಂಡೇಯ ಮುಂತಾದವುಗಳು ಉಪನದಿಗಳು. ಜಿಲ್ಲೆಯ ವಾರ್ಷಿಕ ಸರಾಸರಿ ಮಳೆ 784.7 ಮೀ.ಮೀ.

ಬೆಳಗಾವಿ ಕೃಷಿ ಪ್ರಧಾನವಾದ ಜಿಲ್ಲೆ. ಓಂಗಾರು, ಮುಂಗಾರು ಮತ್ತು ಕೆಲವು ಕಡು ಬೇಸಿಗೆ ಬೆಳೆಗಳನ್ನು ಇಲ್ಲಿ ಬೆಳೆಯಲಾಗುತ್ತದೆ. ಜೋಳ, ಭತ್ತ, ಕಬ್ಬು, ಸೇಂಗಾ, ಗೋಧಿ, ಹತ್ತಿ ಹಾಗು ದ್ವಿದಳ ಧಾನ್ಯಗಳು ಈ ಜಿಲ್ಲೆಯ ಪ್ರಮುಖ ಬೆಳೆಗಳಾಗಿವೆ. ವಾಣಿಜ್ಯ ಬೆಳೆ ಕಬ್ಬಿಗೆ ಹೆಚ್ಚಿನ ಆದ್ಯತೆ ಕೊಟ್ಟಿರುವುದರಿಂದ, ಇಲ್ಲಿ ಸಕ್ಕರೆ ಕಾರ್ಖಾನೆಗಳು ಕೂಡ ಹೆಚ್ಚು ಸಂಖ್ಯೆಯಲ್ಲಿವೆ. ಅದೇ ರೀತಿ ಹತ್ತಿ ಕೂಡ ಇಲ್ಲಿನ ಮತ್ತೊಂದು ಪ್ರಮುಖ ವಾಣಿಜ್ಯ ಬೆಳೆ.

ಗೋಕಾಕ್ ಮಿಲ್ಸ್, ಅರುಣ್ ಇಂಜನಿಯರಿಂಗ್ ವರ್ಕ್ಸ್, ಗೋಗಟೆ ಟೆಕ್ಸ್‌ಟೈಲ್ಸ್, ಇಂಡಿಯನ್ ಅಲ್ಯೂಮಿನಿಯಂ ಕಂಪನಿ, ಬೆಮ್ಕೊ ಹೈಡ್ರಾಲಿಕ್ಸ್ ಮುಂತಾದವುಗಳು ಈ ಜಿಲ್ಲೆಯ ಪ್ರಮುಖ ಕೈಗಾರಿಕೆಗಳಾಗಿವೆ.

ಕದಂಬರು, ಚಾಳುಕ್ಯರು, ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಳುಕ್ಯರು ಈ ಭಾಗದ ಮೇಲೆ ಒಡೆತನ ನಡೆಸಿದರು. ದೇವಗಿರಿಯ ಯಾದವ ಮನೆತನ ಆಳಿದಮೇಲೆ ಕ್ರಿ.ಶ. 1327ರಲ್ಲಿ ಮಹಮ್ಮದ್ ಬಿನ್ ತುಗಲಕ್ ಈ ಭಾಗದಲ್ಲಿ ತನ್ನ ಆಡಳಿತವನ್ನು ಸ್ಥಾಪಿಸಿ ಹುಕ್ಕೇರಿ ಮತ್ತು ರಾಯಬಾಗ್‌ಗಳಲ್ಲಿ ತನ್ನ ಪ್ರತಿನಿಧಿಗಳಾಗಿ ಅಮೀರರನ್ನು ನೇಮಿಸಿದ. ಈ ಪ್ರದೇಶ ಮುಂದೆ ಬಹಮನಿ ಅರಸರ ಆಳ್ವಿಕೆಗೆ ಸೇರಿತು. ವಿಜಯನಗರ ಪತನದ ಅನಂತರ ಸಿರಸಂಗಿಯ ದೇಸಾಯರ ಪೂರ್ವಜ, ವಿಠ್ಠಲಗೌಡ ಈ ಭಾಗದಲ್ಲಿ ಸ್ವತಂತ್ರ ರಾಜ್ಯ ಕಟ್ಟುವ ಪ್ರಯತ್ನ ಮಾಡಿದ. ಆದರೆ ಬಿಜಾಪುರದ ಆದಿಲ್ ಷಾ ಈತನ ಪ್ರಯತ್ನವನ್ನು ಮುರಿದುಹಾಕಿದ. 17ನೇ ಶತಮಾನದ ಉತ್ತರಾರ್ಧದಲ್ಲಿ, ಶಿವಾಜಿಯ ಪ್ರಾಬಲ್ಯದೊಂದಿಗೆ ಮರಾಠಾ ಸರದಾರರು ಹಾಗು ತರುವಾಯದಲ್ಲಿ ಪೇಶ್ವೆಗಳು ಇಲ್ಲಿ ಆಡಳಿತ ನಡೆಸಿದರು. ಕ್ರಿ.ಶ. 1818ರಲ್ಲಿ ಜನರಲ್ ಮನ್ರೋ ಬೆಳಗಾವಿ ಕೋಟೆಯನ್ನು ವಶಪಡಿಸಿಕೊಂಡ. ಕ್ರಿ.ಶ. 1824ರಲ್ಲಿ ಕಿತ್ತೂರನ್ನು ವಶಪಡಿಸಿಕೊಂಡ. 1947 ಆಗಸ್ಟ್ 15ರವರೆವಿಗೂ ಈ ಪ್ರದೇಶ ಬ್ರಿಟಿಷರ ಆಳ್ವಿಕೆಯಲ್ಲಿತ್ತು. ಸ್ವಾತಂತ್ರ್ಯಾನಂತರ ಮುಂಬೈ ಪ್ರಾಂತ್ಯದಲ್ಲಿತ್ತು. 1956ರಲ್ಲಿ ಕರ್ನಾಟಕ ರಾಜ್ಯದ ಒಂದು ಪ್ರಮುಖ ಜಿಲ್ಲೆಯಾಗಿ ಅಭಿವೃದ್ಧಿಗೊಳ್ಳುತ್ತಿದೆ.

ಹನ್ನೆರಡನೆಯ ಶತಮಾನದ ಗೋವೆ ಕದಂಬರ ಶಾಸನದಲ್ಲಿ ಬೆಳಗಾವಿಯನ್ನು 'ವೇಳು ಗ್ರಾಮ' ಎಂದು ಕರೆಯಲಾಗಿದೆ. ಕ್ರಿ.ಶ. 1208ರಲ್ಲಿ ರಟ್ಟರು ಬೆಳಗಾವಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಕ್ರಿ.ಶ. 1583ರಲ್ಲಿ ಬೆಳಗಾವಿಯ ಬಜಾರಿನಲ್ಲಿ ವಜ್ರ, ಮಾಣಿಕ್ಯ, ನೀಲ ಮುಂತಾದ ಬೆಲೆಬಾಳುವ ಹರಳುಗಳ ವ್ಯಾಪಾರ ಜೋರಾಗಿತ್ತೆಂದು ಮೊಬ್ಬ ಎಂಬ ಇಂಗ್ಲೆಂಡ್ ಪ್ರವಾಸಿ ದಾಖಲು ಮಾಡಿದ್ದಾನೆ.

ಬೆಳಗಾವಿ ಜಿಲ್ಲೆಯ ಇತಿಹಾಸದಲ್ಲಿ, ಕಿತ್ತೂರ ರಾಣಿ ಚನ್ನಮ್ಮ ಮತ್ತು ಆಕೆಯ ಅಂಗರಕ್ಷಕ ಸಂಗೊಳ್ಳಿ ರಾಯಣ್ಣನಿಗೆ ಪ್ರಮುಖವಾದ ಸ್ಥಾನವಿದೆ. ಭಾರತದಲ್ಲಿ ಬ್ರಿಟಿಷರ ವಿರುದ್ಧ ಸಿಪಾಯಿ

ದಂಗೆಯ ಪೂರ್ವದಲ್ಲಿ ಸಶಸ್ತ್ರ ಹೋರಾಟ ಮಾಡಿದ ಈ ಇಬ್ಬರು ಅಪೂರ್ವ ಸ್ವಾತಂತ್ರ್ಯ ಹೋರಾಟಗಾರರಿಗೆ ಭಾರತದ ಇತಿಹಾಸದಲ್ಲಿ ಸೂಕ್ತ ಸ್ಥಾನ ದೊರಕದಿರುವುದು ದುರ್ದೈವದ ಸಂಗತಿ. ಕ್ರಿಶ. 1824ರಲ್ಲಿ ರಾಣಿ ಚನ್ನಮ್ಮನನ್ನು ಸೋಲಿಸಿ ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಂಡಾಗ ಅವರಿಗೆ ಹದಿನಾರು ಲಕ್ಷ ನಗದು, ನಾಲ್ಕು ಲಕ್ಷ ಬೆಲೆ ಬಾಳುವ ರತ್ನಾಭರಣಗಳು, ಸಾವಿರಾರು ಕುದುರೆಗಳು, ಒಂಟೆ, ಆನೆ ಹಾಗು ಅರವತ್ತು ತೋಪುಗಳು ದೊರೆತವೆಂದು ಬ್ರಿಟಿಷ್ ದಾಖಲೆಯೊಂದು ಹೇಳುತ್ತದೆ.

ಅಪ್ರತಿಮ ಸ್ವಾತಂತ್ರ್ಯ ಹೋರಾಟಗಾರನಾದ ಸಂಗೊಳ್ಳಿ ರಾಯಣ್ಣನನ್ನು ಕ್ರಿ.ಶ. 1830 ಡಿಸೆಂಬರ್ 28ರಂದು ನಂದಗಡದಲ್ಲಿ ಗಲ್ಲಿಗೇರಿಸಲಾಯಿತು. ಅವನ ಕೊನೆಯ ಆಸೆ ತಾನು ಇದೇ ನಾಡಿನಲ್ಲಿ ಮತ್ತೊಮ್ಮೆ ಹುಟ್ಟಿ ಬಂದು, ಬ್ರಿಟಿಷರ ವಿರುದ್ಧ ಹೋರಾಡಿ ಈ ಪವಿತ್ರ ನೆಲದಿಂದ ಅವರನ್ನು ಹೊರಗಟ್ಟುವದೇ ಆಗಿತ್ತು. ಹಿಂದುಳಿದ ಕುರುಬ ಜನಾಂಗದಿಂದ ಬಂದ ಸಂಗೊಳ್ಳಿ ರಾಯಣ್ಣ ಚಿರಕಾಲ ನೆನೆಯುವ ಅಪೂರ್ವ ರಾಷ್ಟ್ರಪ್ರೇಮಿಯಾಗಿದ್ದಾನೆ.

ಭಾರತದ ಇತಿಹಾಸದಲ್ಲಿ 1924 ಡಿಸೆಂಬರ್ 5 ಹಾಗು 6ರಂದು ನಡೆದ ಬೆಳಗಾವಿ ಕಾಂಗ್ರೆಸ್ ಅಧಿವೇಶನ ಅತ್ಯಂತ ಮಹತ್ವದ ಘಟನೆಯಾಗಿದೆ. ಮಹಾತ್ಮಗಾಂಧೀಜಿಯವರು ಈ ಅಧಿವೇಶನ ಒಂದರಲ್ಲಿ ಮಾತ್ರ ಅಧ್ಯಕ್ಷ ಸ್ಥಾನವನ್ನು ಒಪ್ಪಿಕೊಂಡಿದ್ದರು. ಈ ಅಧಿವೇಶನಕ್ಕೆ ರೂ.ಗಳು 2,20,829, ಆಣೆ 5, ಪೈ 6 ಖರ್ಚು ತಗಲಿತ್ತೆಂಬ ವಿವರ ಆ ಕಾಲದ ರಾಜಕೀಯ ವ್ಯವಸ್ಥೆಯನ್ನು ತಿಳಿಯಬಯಸುವವರಿಗೆ ಮಾರ್ಗದರ್ಶಿಯಾದ ಸಂಗತಿ.

ಶಿರಸಂಗಿಲಿಂಗರಾಜ ದೇಸಾಯರು ಶಿಕ್ಷಣಕ್ಕಾಗಿ ಉದಾರವಾಗಿ ದೇಣಿಗೆ ನೀಡಿ ಇಲ್ಲಿ ಅನೇಕ ಶಾಲೆ, ಕಾಲೇಜುಗಳು ತಲೆಯೆತ್ತಲು ಕಾರಣರಾಗಿದ್ದಾರೆ. ಕೆ.ಎಲ್.ಇ. ಅಂತಹ ರಾಷ್ಟ್ರಮಟ್ಟದ ವಿದ್ಯಾಸಂಸ್ಥೆಯು ಇಲ್ಲಿ ಕಾರ್ಯನಿರ್ವಹಿಸುತ್ತಿದೆ. ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯ ಈ ಜಿಲ್ಲೆಯಲ್ಲಿರುವದು ಒಂದು ಪ್ರಮುಖ ವಿಚಾರ. ಸವದತ್ತಿ ಯಲ್ಲಮ್ಮನ ದೇವಸ್ಥಾನದಿಂದಾಗಿ ಈ ಜಿಲ್ಲೆಯು ಪ್ರಮುಖ ಯಾತ್ರಾಸ್ಥಳವಾಗಿದೆ.

ವಿಷ್ಣುಪಂತ ನಾತೂ, ಛತ್ರೆ ವಕೀಲ, ಭಾವೂ ಸಾಹೇಬ ದೇಶಪಾಂಡೆ, ದತ್ತೋಪಂತ ಬೆಳವಿ, ಗಂಗಾಧರರಾವ್ ದೇಶಪಾಂಡೆ, ಗೋವಿಂದರಾವ್ ಯಾಳಗಿ, ಬಾಬಾಸಾಹೇಬ ಸೋಮಣ್ಣ, ಹನುಮಂತರಾವ್ ದೇಶಪಾಂಡೆ, ರಾಮಚಂದ್ರ ಜೋಷಿ, ಅಣ್ಣುಕಾಕಾ ಕೊಕಟನೂರ, ನೂರುಂದಪ್ಪಶೆಟ್ಟಿ, ನಾರಾಯಣರಾವ್ ಜೋಶಿ ವಕೀಲರು, ಸಖಾರಾಮ ಪಂತ ಕುಲ್ಕರ್ಣಿ, ಕಿತ್ತೂರಿನ ವಿರೂಪಾಕ್ಷಪ್ಪ ಮುತ್ತೂರು, ನರಸಿಂಹಾಚಾರ ಪುಣೇಕರ, ಗಣಪತರಾವ್ ಕಿರ್ಲೋಸ್ಕರ, ಕೇಶವರಾವ್ ಗೋಖಲೆ, ಬಾಬುರಾವ್ ಠಾಕೂರ, ದಾದಾ (ಭಾಸ್ಕರ) ಕಾಳೆ, ವಾಮನರಾವ್ ಬಿದರಿ, ಬಾಳಕೃಷ್ಣ ಪಟವರ್ಧನ, ವೆಂಕಟರಾವ್ ಜಾಲೀಹಾಳ, ದಯಾನಂದ ಅರಳಿಕಟ್ಟಿ, ಕೃಷ್ಣರಾವ್ ಕರಗುಪ್ಪಿ ಮುಂತಾದವರು ಹಿರಿಯ ಸ್ವಾತಂತ್ರ್ಯ ಹೋರಾಟಗಾರರು.

ಜಯದೇವ ಕುಲ್ಕರ್ಣಿ, ದೋಂಡೋ ಕುಲ್ಕರ್ಣಿ, ಅಣ್ಣುಗುರೂಜಿ, ಪುಂಡಲೀಕಜಿ, ಡಾ|| ಕೋವಾಡಕರ, ಬಾಬುರಾವ್ ಠಾಕೂರ, ಶಿವರಾವ್ ಕೊಪ್ಪಳ, ದಾಮು ಲೇಂಗಡೆ, ಅಪ್ಪಣ್ಣಾ ಪಾಟೀಲ, ಎಂ.ಪಿ. ಪಾಟೀಲ, ಅಣ್ಣಾಸಾಹೇಬ ಸಿದ್ಧಾಂತಿ, ಗುರುನಾಥ ಜೇರೆ ಮುಂತಾದವರು 1930ರಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ ಸ್ವಾತಂತ್ರ್ಯ ಹೋರಾಟಗಾರರು. ಇವರಲ್ಲದೆ ಈ ಭಾಗದಲ್ಲಿ ಸಹಸ್ರಾರು ಜನರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದಾರೆ.

ಬಿ.ಎನ್. ದಾತಾರ, ಚನ್ನಪ್ಪ ವಾಲಿ, ಹೆಚ್.ವಿ. ಕೌಜಲಗಿ, ಎಂ.ಪಿ. ಪಾಟೀಲ, ವಿ.ಎಲ್. ಪಾಟೀಲ, ಬಿ. ಶಂಕರಾನಂದ, ಎಸ್.ಬಿ. ಶಿದ್ನಾಳ, ಬಿ.ಬಿ. ಪಾಟೀಲ, ಶಿವಾನಂದ ಕೌಜಲಗಿ, ರಮೇಶ ಜಿಗಜಿಣಗಿ, ಉಮೇಶಕತ್ತಿ, ಎ.ಬಿ. ಪಾಟೀಲ, ಬಾಳಿಕುಂದ್ರಿ, ಅಮರಸಿಂಹ ಪಾಟೀಲ, ಡಿ.ಬಿ. ಇನಾಂದಾರ ಮುಂತಾದವರು ಜಿಲ್ಲೆಯ ಹಿರಿಯ ರಾಜಕಾರಣಿಗಳು.

## ಉಪ್ಪಾರ ಸಮಾಜ

ಬೆಳಗಾವಿ ಜಿಲ್ಲೆಯ ಸಾಮಾಜಿಕ ಹಾಗು ಸಾಂಸ್ಕೃತಿಕ ಇತಿಹಾಸದಲ್ಲಿ ಉಪ್ಪಾರ ಜನಾಂಗ ಮೊದಲಿನಿಂದಲೂ ಪ್ರಮುಖ ಪಾತ್ರವಹಿಸುತ್ತ ಬಂದಿದೆ. ಆರ್ಥಿಕವಾಗಿ ಅಷ್ಟೇನೂ ಬಲಾಢ್ಯವಲ್ಲದ ಈ ಸಮುದಾಯ ತನ್ನ ಕಷ್ಟಸಹಿಷ್ಣುತೆಯಿಂದಾಗಿ ಜಿಲ್ಲೆಯ ಪ್ರಮುಖ ಜನಾಂಗಗಳಲ್ಲಿ ಒಂದಾಗಿದೆ. ಗೋಕಾಕ್ ವಿಧಾನಸಭೆ ಕ್ಷೇತ್ರ ಪರಿಶಿಷ್ಠ ವರ್ಗಕ್ಕೆ ಮೀಸಲಾದ ಕ್ಷೇತ್ರ. ಆದರೆ ಇಲ್ಲಿನ ಬಹುಸಂಖ್ಯಾತ ಮತದಾರರು ಉಪ್ಪಾರ ಸಮುದಾಯವರಾಗಿದ್ದಾರೆ. ಅರಭಾವಿ ವಿಧಾನಸಭಾ ಕ್ಷೇತ್ರದಲ್ಲಿ ಉಪ್ಪಾರ ಜನಾಂಗವೇ ನಿರ್ಣಾಯಕ ಪಾತ್ರವಹಿಸುತ್ತಿರುವದು ಎಲ್ಲ ರಾಜಕೀಯ ಪಕ್ಷದವರಿಗೂ ಮನವರಿಕೆಯಾಗಿರುವ ವಿಚಾರ. ಉಪ್ಪಾರ ಸಮುದಾಯದಲ್ಲಿ ಜಾಗೃತಿ ಹಾಗು ಸಂಘಟನೆಯ ಕೊರತೆಯಿಂದಾಗಿ ಅವರು ಯಾವುದೇ ರಾಜಕೀಯ ಸ್ಥಾನಮಾನ ಪಡೆಯಲು ಸಾಧ್ಯವಾಗುತ್ತಿಲ್ಲ.

ಗೋಕಾಕ್ ವಿಧಾನಸಭಾ ಕ್ಷೇತ್ರದಲ್ಲಿ ಉಪ್ಪಾರ ಸಮುದಾಯ ಇರುವ ಸ್ಥಳಗಳು ಹೀಗಿವೆ : ಗೋಕಾಕ್ ಟೌನ್, ಮಾಲದಿನ್ನಿ, ಉಪ್ಪಾರಟ್ಟಿ, ಚಿಕ್ಕನಂದಿ, ಹುಲಿಕಟ್ಟಿ, ಮಕ್ಕಳಗೇರಿ, ಕೊಳವಿ, ಮೇಲಮಟ್ಟಿ, ಗೋಕಾಕ್ ಫಾಲ್ಸ್ ಮುಂತಾದ ಗ್ರಾಮಗಳನ್ನೊಳಗೊಂಡಂತೆ, ಕ್ಷೇತ್ರದಲ್ಲಿ ಸುಮಾರು 4,500 ಉಪ್ಪಾರ ಕುಟುಂಬಗಳಿದ್ದು, ಅವರಲ್ಲಿ 38,000 ಜನರಿದ್ದಾರೆಂದು ತಿಳಿದುಬರುತ್ತಿದೆ.

ಅರಭಾವಿ ವಿಧಾನಸಭಾ ಕ್ಷೇತ್ರದಲ್ಲಿ ಕಾಣಬರುವ ಉಪ್ಪಾರ ಸಮುದಾಯದ ವಿವರಗಳು: ಅರಭಾವಿ, ದುರದುಂಡಿ, ಶಿಂದಿಕುರಬೆಟ್ಟ, ಮಲ್ಲಾಪುರ ಪಿ.ಜಿ., ಬಡಿಗವಾಡ, ತುಕಾನಟ್ಟಿ, ಕಲ್ಲೊಳ್ಳಿ, ಸಂಗನಕೇರಿ, ಸಲ್ಲಾನಟ್ಟಿ, ನಾಗನೂರು, ಮೂಡಲಗಿ, ಹಳ್ಳೂರು, ಕಾನಟ್ಟಿ, ಪಟಗುಂದಿ, ಧರ್ಮಟ್ಟಿ, ಗುಜನಟ್ಟಿ, ಜೋಕಾನಟ್ಟಿ, ಮನಗುಪ್ಪಿ, ತಿಗಡಿ, ಕೌಜಲಗಿ, ಮನ್ನಿಕೇರಿ, ಗೋಸಬಾಳ,

ತಾಪ್ಸಿ, ಕಮ್ಮನಕೋಳ, ತಲಕನಾಟ, ಕಲಾರಕೊಪ್ಪ, ಮೆಳವಂಕಿ, ಚಿಗೊಡಳ್ಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ಈ ಕ್ಷೇತ್ರದಲ್ಲಿ ಸುಮಾರು 14,635 ಉಪ್ಪಾರ ಕುಟುಂಬಗಳಿದ್ದು, 87,820 ರಷ್ಟು ಉಪ್ಪಾರರಿದ್ದಾರೆ.

ರಾಯಬಾಗ ತಾಲ್ಲೂಕಿನಲ್ಲಿ ರಾಯಬಾಗ್ ಟೌನ್, ಚಿಂಚಲಿ, ಕಂಕನವಾಡಿ, ಹಿಡಕಲ್, ಕಡಕಬಾವಿ, ಸನ್ನಸುದ್ದಿ, ನಿಪ್ಪಾಳ, ಮುಗಳಖೋಡ, ಕಪ್ಪಲಗುದ್ದಿ, ಸುಲ್ತಾನಪುರ, ಹಂದಿಗುಂದ, ಹಾರುಗೇರಿ, ಮಂಟೂರು ಮುಂತಾದ ಸ್ಥಳಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 3076 ಕುಟುಂಬಗಳು ವಾಸವಾಗಿದ್ದು, 20,000ದಷ್ಟು ಉಪ್ಪಾರ ಜನಸಂಖ್ಯೆ ಇದೆಯೆಂದು ಹೇಳಲಾಗಿದೆ.

ಸವದತ್ತಿ ತಾಲ್ಲೂಕಿನಲ್ಲಿ ಸವದತ್ತಿ, ಬೆಟ್ಸೂರು, ಕರಿಕಟ್ಟೆ, ಉಗರಗೋಳ, ಚುಳಕಿ, ಚಿಕ್ಕುಂಬಿ, ತೆಗ್ಗಿಹಾಳ, ಜಕಬಾಳ, ಕಿಟದಾಳ, ಅರಟಗಾಳ, ಬಸರಗಿ, ಭಂಡಾರಹಳ್ಳಿ, ತಲ್ಲೂರ ಮುಂತಾದ ಗ್ರಾಮಗಳನ್ನೊಳಗೊಂಡಂತೆ, ಈ ತಾಲ್ಲೂಕಿನಲ್ಲಿ ಸುಮಾರು 1525 ಕುಟುಂಬಗಳಲ್ಲಿ ಸುಮಾರು 9210 ಉಪ್ಪಾರ ಜನಸಂಖ್ಯೆ ಇದೆಯೆಂದು ತಿಳಿದುಬಂದಿದೆ.

ರಾಮದುರ್ಗ ತಾಲ್ಲೂಕಿನ ರಾಮದುರ್ಗ, ಕಟಕೋಳ, ಹನಮಸಾಗರ, ಸುನ್ನಾಳ, ಬೋಚನಾಳ, ಹುಲಕುಂದ, ಹೀರೇಕೊಪ್ಪ, ಮರಕಟನಾಳ ಮುಂತಾದ ಗ್ರಾಮಗಳನ್ನೊಳ ಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 1165 ಕುಟುಂಬಗಳಿವೆ. ಅದರಲ್ಲಿ 7,000 ಉಪ್ಪಾರರಿದ್ದಾರೆ ರೆಂದು ಹೇಳಬಹುದು.

ಚಿಕ್ಕೋಡಿ ತಾಲ್ಲೂಕಿನ ಚಿಕ್ಕೋಡಿ, ಜಾಗನೂರ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 500 ಕುಟುಂಬಗಳಿವೆ. ಅದರಲ್ಲಿ 3000 ಉಪ್ಪಾರ ಬಂಧುಗಳಿದ್ದಾರೆಂದು ಹೇಳಬಹುದು.

ಬೆಳಗಾವಿ ನಗರ, ಬಾಗೇವಾಡಿ, ಅರಳಕಟ್ಟಿ ಮುಂತಾದ ಸ್ಥಳಗಳನ್ನೊಳಗೊಂಡಂತೆ ಬೆಳಗಾವಿ ತಾಲ್ಲೂಕಿನಲ್ಲಿ 800 ಕುಟುಂಬಗಳಿವೆ. ಅದರಲ್ಲಿ ಸುಮಾರು 4800 ಉಪ್ಪಾರರಿದ್ದಾರೆಂದು ಹೇಳಬಹುದು.

ಹುಕ್ಕೇರಿ ತಾಲ್ಲೂಕಿನಲ್ಲಿ, ಹುಕ್ಕೇರಿಯನ್ನೊಳಗೊಂಡಂತೆ ಸುಮಾರು 250 ಕುಟುಂಬಗಳಿದ್ದವು. ಅದರಲ್ಲಿ ಸುಮಾರು 1500 ಉಪ್ಪಾರ ಜನಸಂಖ್ಯೆ ಇದೆಯೆಂದು ಹೇಳಬಹುದು.

ಬೈಲಹೊಂಗಲ ತಾಲ್ಲೂಕಿನಲ್ಲಿ ಬೈಲಹೊಂಗಲ, ಸಂಪಗಾಂವ್, ಚಿಕ್ಕಬಾಗೇವಾಡಿ ಮುಂತಾದ ಸ್ಥಳಗಳನ್ನೊಳಗೊಂಡಂತೆ ಸುಮಾರು 400 ಕುಟುಂಬಗಳಿವೆ. ಅದರಲ್ಲಿ 2500 ಉಪ್ಪಾರ ಜನಸಂಖ್ಯೆ ಎಂದು ಅಂದಾಜು ಮಾಡಲಾಗಿದೆ.

ಅಥಣಿ, ಮೋಳೆ, ನವಲಿಹಾಳ, ಜಕಾರಟ್ಟಿ, ಬನ್ನೂರ, ಶಿದ್ದೇವಾಡಿ ಮುಂತಾದ ಸ್ಥಳಗಳನ್ನೊಳಗೊಂಡಂತೆ, ಅಥಣಿ ತಾಲ್ಲೂಕಿನಲ್ಲಿ ಸುಮಾರು 950 ಕುಟುಂಬಗಳಲ್ಲಿ 6200

ಉಪ್ಪಾರ ಜನರಿದ್ದಾರೆಂದು ತಿಳಿದುಬಂದಿದೆ. 1995ರಲ್ಲಿ ಅಥಣಿ ತಾಲ್ಲೂಕಿನ ಉಪ್ಪಾರ ಸಂಘವು ತಾಲ್ಲೂಕಿನಲ್ಲಿ ಜನಗಣತಿ ಜನಗಣತಿ ಕಾರ್ಯ ಮಾಡಿತ್ತು.

ಹೀಗೆ ಬೆಳಗಾವಿ ಜಿಲ್ಲೆಯಲ್ಲಿ ಒಟ್ಟು ಸುಮಾರು 27,800 ಉಪ್ಪಾರ ಕುಟುಂಬಗಳಿದ್ದು, ಜಿಲ್ಲೆಯ ಉಪ್ಪಾರ ಜನಸಂಖ್ಯೆ 1,80,000 ಎಂದು ಸಮೀಕ್ಷೆ ಹೇಳುತ್ತದೆ.

ಧಾರ್ಮಿಕ ಮಠಗಳು ಆಯಾ ಜನಸಮುದಾಯವನ್ನು ಒಂದುಗೂಡಿಸಿ ಅವರಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಬದಲಾವಣೆಯನ್ನು ತರುವ ಕಾರ್ಯದಲ್ಲಿ ಸಾಮಾನ್ಯವಾಗಿ ನಿರತವಾಗಿರುತ್ತವೆ. ಅಂತೆಯೇ ಈ ಭಾಗದ ನಾಗನೂರ ಗ್ರಾಮದಲ್ಲಿ 1972ರಲ್ಲಿ ಬ್ರ. ಲೇಪಾಕ್ಷ ಸ್ವಾಮಿಗಳವರ ಮಾರ್ಗದರ್ಶನದಲ್ಲಿ ಒಂದು ಶಾಖಾಮಠವನ್ನು ಸ್ಥಾಪಿಸಲಾಗಿದೆ. ಆದರೆ ಈ ಶಾಖಾಮಠ ಇನ್ನೂ ಸಂಪೂರ್ಣ ರೀತಿಯಲ್ಲಿ ಆ ಭಾಗದ ಜನರ ಆಶೋತ್ತರಗಳಿಗೆ ಸ್ಪಂದಿಸುವ ಸ್ಥಿತಿಗೆ ಬಂದಿಲ್ಲ. ಜನರಿಗೆ ಪ್ರಯೋಜನಕಾರಿಯಾದ ಮಾರ್ಗದರ್ಶನ ಇನ್ನು ಮುಂದೆ ಸಿಗಬೇಕಾಗಿದೆ. ಜಗದ್ಗುರುಗಳು ಹಾಗೂ ಆ ಭಾಗದ ಸಮಾಜದ ಹಿತಚಿಂತಕರು ಈ ಬಗ್ಗೆ ಗಮನಹರಿಸುವದು ಅವಶ್ಯವೆಂದು ತೋರುತ್ತದೆ. ಈ ಶಾಖಾಮಠದ ಸ್ಥಾಪನೆಗೆ ಸಮಾಜದ ಹಿರಿಯರಾದ ಯಲ್ಲಪ್ಪ ಮತ್ತು ನೀಲಪ್ಪ ತೋರಗಲ್ ಮುಂತಾದವರ ಶ್ರಮ ಸ್ಮರಣೀಯ.

ವಂಶಪಾರಂಪರ್ಯ ವೃತ್ತಿಯಾಗಿದ್ದ ಚೌಳುಮಣ್ಣಿನಿಂದ ಉಪ್ಪು ತಯಾರಿಸುವ ವೃತ್ತಿಯನ್ನು ಉಪ್ಪಾರರಿಂದ ಬ್ರಿಟಿಷ್ ಸರಕಾರ ಕ್ರಿ.ಶ. 1874ರಲ್ಲಿ ಕಸಿದುಕೊಂಡನಂತರ ಉಪ್ಪಾರರು ಸುಣ್ಣ, ಇಟ್ಟಿಗೆ ತಯಾರಿಸುವುದು, ಗೋಡೆ ಕಟ್ಟುವುದು, ಕೆರೆ ಅಗೆಯುವುದು ಮತ್ತು ಅಲ್ಪಸ್ವಲ್ಪ ಇದ್ದ ತುಂಡುಭೂಮಿಯ ವ್ಯವಸಾಯ ಮಾಡುವ ಇತರೆ ವೃತ್ತಿಗಳನ್ನು ಅವಲಂಬಿಸಬೇಕಾಯಿತು. ಈ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯದವರನ್ನು ಉಪ್ಪಾರ, ಲೋಣಾರಿ, ಗೌಂಡಿ ಎಂಬ ಹೆಸರುಗಳಿಂದ ಗುರುತಿಸಲಾಗುತ್ತಿದೆ. ಬಹುತೇಕವಾಗಿ ಉಪ್ಪಾರ ಸಮುದಾಯದವರು ಕನ್ನಡವನ್ನೇ ತಮ್ಮ ಭಾಷೆಯನ್ನಾಗಿಸಿಕೊಂಡಿದ್ದಾರೆ. ಚಿಕ್ಕೋಡಿ, ರಾಯಬಾಗ್ ಹಾಗು ಅಥಣಿ ತಾಲ್ಲೂಕುಗಳಲ್ಲಿ ವ್ಯವಹಾರ ರೂಪವಾಗಿ ಮರಾಠಿಯನ್ನು ಕೂಡ ಬಳಸುತ್ತಾರೆ. ಈ ಜಿಲ್ಲೆಯ ಉಪ್ಪಾರರು ಅಂತಹ ಪ್ರಮುಖವಾದ ಆರ್ಥಿಕ ಶಕ್ತಿಯನ್ನು ಪಡೆದಿಲ್ಲ. ವ್ಯವಸಾಯ ವೃತ್ತಿ ಲಾಭದಾಯಕವಲ್ಲ. ಅದೂ ಅಲ್ಲದೆ ಹೆಚ್ಚಿನ ಉಪ್ಪಾರ ಕುಟುಂಬದವರು ತುಂಡು ಬೇಸಾಯಗಾರರಾಗಿದ್ದಾರೆ. ಮುಂಗಾರು ವಿಫಲವಾದಾಗ ನೆರೆ ರಾಜ್ಯ ಗೋವಾಕ್ಕೆ ಗುಳೇ ಹೋಗುವದು ಇಲ್ಲಿ ಸಾಮಾನ್ಯ ಸಂಗತಿ. ಉಪ್ಪಾರರು ಸಾಮಾನ್ಯವಾಗಿ ವ್ಯಾಪಾರ ವೃತ್ತಿಯನ್ನು ಕೈಗೊಂಡವರಲ್ಲ. ಎಂಟ್ಹತ್ತು ಗ್ರಾಮಗಳಲ್ಲಿ ಅನಿವಾರ್ಯವಾಗಿ ಕೆಲವು ಕುಟುಂಬಗಳು ವ್ಯಾಪಾರ ವೃತ್ತಿಯನ್ನು ಅವಲಂಬಿಸಿರುವುದನ್ನು ಗಮನಿಸಬಹುದು.

ಸರಕಾರಿ, ಅರೇ ಸರಕಾರಿ ಹಾಗು ಖಾಸಗಿ ವಲಯಗಳಲ್ಲಿ ದುಡಿಯುವ ಉಪ್ಪಾರರು ಹೇಳಿಕೊಳ್ಳುವಂತಹ ಸಂಖ್ಯೆಯಲ್ಲಿ ಇಲ್ಲ. ವಾಚ್‌ಮನ್ ಕೆಲಸದಲ್ಲಿ ಇವರನ್ನು ಅಲ್ಲಲ್ಲಿ

ಗುರುತಿಸಬಹುದು. ಚಿನ್ನಪ್ಪರೆಡ್ಡಿ ಆಯೋಗದ ವರದಿಯ ಅನುಷ್ಠಾನದ ಫಲವಾಗಿ ಉಪ್ಪಾರ ಯುವಕರು ಇತ್ತಿತ್ತಲಾಗಿ ಪೋಲಿಸ್ ಇಲಾಖೆ, ಶಿಕ್ಷಣ ಇಲಾಖೆ, ಸಾರಿಗೆ ಸಂಪರ್ಕ ಇಲಾಖೆ ಮುಂತಾದವುಗಳಲ್ಲಿ ಸಾಮಾನ್ಯದರ್ಜೆಯ ಹುದ್ದೆಗಳಿಗೆ ಸೇರುತ್ತಿರುವುದು ಕಂಡುಬರುತ್ತಿದೆ. ಗೆಜೆಟೆಡ್ ಆಫೀಸರುಗಳನ್ನು ಕಾಣುವದು ಅತ್ಯಂತ ವಿರಳ.

ಬೆಳಗಾವಿ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯದವರು ನಡೆಸುತ್ತಿರುವ ಕೆಲವು ಶಿಕ್ಷಣ ಸಂಸ್ಥೆಗಳೆಂದರೆ : ಗೋಕಾಕ್ ತಾಲ್ಲೂಕಿನ ನಾಗನೂರಿನಲ್ಲಿರುವ ಭಗೀರಥ ವಿದ್ಯಾಸಂಸ್ಥೆ, ಅರಭಾವಿಯಲ್ಲಿರುವ ಬಲಭೀಮ ಶಿಕ್ಷಣ ಸಂಸ್ಥೆ, ಮಾಲದಿನ್ನಿಯಲ್ಲಿರುವ ಮಹಾಲಕ್ಷ್ಮಿ ಶಿಕ್ಷಣ ಸಂಸ್ಥೆ ಹಾಗೂ ಗೋಕಾಕ್ ತಾಲ್ಲೂಕಿನಲ್ಲಿ ಬಡಗಾವಿಯ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ ಇತ್ಯಾದಿಗಳು. ಉಪ್ಪಾರ ಸಮುದಾಯದಲ್ಲಿ ಸಾಕ್ಷರತೆ ಪ್ರಮಾಣ ಕೂಡ ಜಿಲ್ಲೆಯ ಸಾಕ್ಷರತಾ ಪ್ರಮಾಣದ ಸರಾಸರಿಗಿಂತ ತುಂಬ ಕಡಿಮೆ ಮಟ್ಟದಲ್ಲಿರುವದನ್ನು ಗುರುತಿಸಬಹುದು. ಜಿಲ್ಲೆಯ ಸಾಕ್ಷರತೆ ಶೇ. 64.2ರಷ್ಟಿದ್ದರೆ, ಈ ಸಮುದಾಯದ ಸಾಕ್ಷರತೆಯ ಪ್ರಮಾಣ ಶೇ. 30ರಷ್ಟಿದೆ.

ಬೆಳಗಾವಿ ಜಿಲ್ಲೆಯ ಉಪ್ಪಾರ ಸಮುದಾಯದ ಪ್ರಮುಖ ರಾಜಕಾರಣಿಗಳೆಂದರೆ ಬಿ.ಆರ್. ಕೊಪ್ಪ ವಕೀಲರು, ಮಾಜಿ ರಾಜ್ಯ ಸಂಘದ ಅಧ್ಯಕ್ಷರು, ರೇವಪ್ಪ ಕೌಜಲಗಿ ಮಾಜಿ ಅಧ್ಯಕ್ಷರು ಘಟಪ್ರಭಾ ಸಕ್ಕರೆ ಕಾರ್ಖಾನೆ, ಎಸ್.ಎಂ. ಹತ್ತಿಕಟಗಿ ವಕೀಲರು ಮತ್ತು ಮಾಜಿ ಅಧ್ಯಕ್ಷರು ಗೋಕಾಕ್ ನಗರಾಭಿವೃದ್ಧಿ ಪ್ರಾಧಿಕಾರ, ಭೀಮಣ್ಣ ಹಂದಿಗುಂದ, ಶಿವಪುತ್ರಪ್ಪ ಜಕಬಾಳ ವಕೀಲರು, ದುಂಡಪ್ಪ ಚೌಕಶಿ ಮಾಜಿ ಜಿಲ್ಲಾಪಂಚಾಯ್ತಿ ಸದಸ್ಯರು, ಆರ್.ವೈ. ಟೋಳಿ, ಜಿಲ್ಲಾಪಂಚಾಯ್ತಿ ಅಧ್ಯಕ್ಷರಾಗಿರುವ ಪರಸಪ್ಪ ಚುನ್ನಣ್ಣವರ ಮುಂತಾದವರನ್ನು ಉಲ್ಲೇಖಿಸಬಹುದು. ಅಥಣಿ ತಾಲ್ಲೂಕಿನಲ್ಲಿ ಉಪ್ಪಾರ ಸಮಾಜದ ಇಬ್ಬರು ಸದಸ್ಯರು ಪುರಸಭೆಗೆ ಆಯ್ಕೆ ಆಗಿದ್ದರೆ, ಇನ್ನಿಬ್ಬರು ತಾಲ್ಲೂಕಾಪಂಚಾಯ್ತಿಗೆ ಆಯ್ಕೆ ಆಗಿದ್ದಾರೆ. ಹಿಡಕಲ್ಲಿನ ಚನ್ನಬಸಪ್ಪ ಮಣ್ಣೇಕೇರಿ ಹಾಗು ಚಿಂಚಲಿಯ ನಾಮದೇವ ಕಿಲಾರಿ ಅವರು ರಾಜ್ಯ ಸಂಘದ ಉಪಾಧ್ಯಕ್ಷರಾಗಿದ್ದರು. ಬಿರಾಜ ಮತ್ತು ಶಿವಪುತ್ರಪ್ಪ ಜಕಬಾಳ ಅರಭಾವಿ ಕ್ಷೇತ್ರದಿಂದ ರಾಜ್ಯದ ವಿಧಾನಸಭೆಗೆ ಸ್ಪರ್ಧಿಸಿದ್ದರು. 1999ರ ಸಾರ್ವತ್ರಿಕ ಚುನಾವಣೆಯಲ್ಲಿ ಅರಭಾವಿ ಕ್ಷೇತ್ರದಿಂದ ಭೀಮಣ್ಣ ಹಂದಿಗುಂದ ಜಾತ್ಯತೀತ ಜನತಾದಳದಿಂದಲೂ ಹಾಗೂ ಎಸ್.ಎಂ. ಲಾತೂರ ಪಕ್ಷೇತರ ಅಭ್ಯರ್ಥಿಯಾಗಿಯೂ ಸ್ಪರ್ಧಿಸಿದ್ದರು.

ಅಲ್ಲದೆ ಬೆಳಗಾವಿ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯಕ್ಕೆ ಸೇರಿದ ಅನೇಕ ಧುರೀಣರನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಅವರುಗಳಲ್ಲಿ ದಿ|| ಎಸ್.ಎನ್. ಉಪ್ಪಾರ ಜಿಲ್ಲಾ ಸಂಘದ ಅಧ್ಯಕ್ಷರಾಗಿದ್ದರು. ವೃತ್ತಿಯಲ್ಲಿ ಕಂಟ್ರಾಕ್ಟರ್ ಆಗಿದ್ದ, ಅವರು ಈ ಸಮಾಜದ ಪ್ರಗತಿಗಾಗಿ ಸಾಕಷ್ಟು ಶ್ರಮಿಸಿದ್ದಾರೆ. ಎಸ್.ವೈ. ಬಬಲಿ ನಿವೃತ್ತ ಆಡಿಟರ್, ಸಹಕಾರಿ ಇಲಾಖೆ, ಎಸ್.ಎಂ. ಗುಮಾನಿ, ನಿವೃತ್ತ ಡಿ.ಎಸ್.ಪಿ., ಹಾಲಪ್ಪ ಕೆಂಚಪ್ಪಗೋಳ, ನಿವೃತ್ತ ಉಪಕಾರ್ಯದರ್ಶಿ,

ಜಿಲ್ಲಾಪಂಚಾಯ್ತಿ, ನಾರಾಯಣ್ ಬಾಗೋಜಿ, ನಿವೃತ್ತ ತಹಸೀಲ್ದಾರ್, ಅಶೋಕ ಬಿ.ನಾಯ್ಕ್ ಗ್ರಂಥಾಲಯದ ಮುಖ್ಯಾಧಿಕಾರಿ, ಕೆ.ಬಿ. ದೇಂಬ್ರೆ ಅಧ್ಯಕ್ಷರು ಅಥಣಿ ತಾಲ್ಲೂಕಾ ಉಪ್ಪಾರ ಸಂಘ ಹಾಗು ನಿವೃತ್ತ ಕೃಷಿ ಅಧಿಕಾರಿಗಳು, ವಿ.ವಿ. ಹೆಜಗಾರ್ ಕಾಟನ್ ಮರ್ಚೆಂಟ್ಸ್, ಬಿ.ಡಿ. ಸಿಂಗ್ಲಾಪುರ, ಕಾಟನ್ ಮರ್ಚೆಂಟ್ಸ್ ಹಾಗು ಜಿನ್ನಿಂಗ್ ಫ್ಯಾಕ್ಟರಿ ಮಾಲೀಕರು, ಕುಪ್ಪಲಗುದ್ದಿ, ಕಾಟನ್ ಮರ್ಚೆಂಟ್ಸ್, ಪರಶುರಾಮ, ಕಾಟನ್ ಮರ್ಚೆಂಟ್ಸ್, ವಿಠಲ ಜಡೆಣ್ಣವರ ಬಾಂಡೆ ವ್ಯಾಪಾರಿಗಳು, ತುಕಾರಾಂ ಯಲ್ಲಪ್ಪ ಇಂಗಳೆ, ವಿಷ್ಣು ನೆರಳೆ, ಲಕ್ಷ್ಮಣ್ ಧರೆಪ್ಪ ಗುಗ್ಗರಿ, ನಾಮದೇವ ಕಿಲಾರಿ, ಮಾರುತಿ ಮಾಯಪ್ಪ ಖೋತ್, ಮಾರುತಿ ಕೆಂಚಪ್ಪ ಹನುಮಣ್ಣವರ, ಫಕೀರಪ್ಪ ಗೋವಿಂದಪ್ಪ ಕಳಸಣ್ಣವರ್, ಬಿ.ಜಿ. ಕಡಬಿ, ಜಿ.ಬಿ. ತೋರಗಲ್, ಎಂ.ಹೆಚ್. ಇಡಗಲ್, ಶಿವಲಿಂಗಪ್ಪ ಬಜೇರಿ, ಕಾಶೀನಾಥ ಕಟ್ಟಿ, ಜೆ.ಬಿ. ತೋರಗಲ್, ಬಾಬಣ್ಣ ಗಂಗಪ್ಪ ಖಾನಣ್ಣವರ, ಡಾ॥ ರಾಜು ಬಿ. ನಾಯ್ಕ್, ನಾಗರತ್ನಮ್ಮ ದಂಡಿನ್ ಮಾರುತಿ ಸಾತಪ್ಪಗೋಳ್, ಎಲ್.ಎನ್. ಬೂದಿಗುಪ್ಪ, ವಕೀಲರು ಮುಂತಾದವರು ಸಮಾಜದ ಪ್ರಮುಖರು ಹಾಗು ಉಪ್ಪಾರ ಸಮಾಜದ ಅಭಿವೃದ್ಧಿಯ ಬಗ್ಗೆ ಚಿಂತನೆವುಳ್ಳವರು.

ಎಸ್.ಎಸ್. ಬಾಗೋಜಿ ಅವರು ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ವೈ.ಎಸ್. ತೆಕ್ಕೇವಾರಿ ಅವರು ಬೆಳಗಾಂವ ತಾಲ್ಲೂಕಾ ಉಪ್ಪಾರ ಸಂಘದ ಅಧ್ಯಕ್ಷರು, ಎಸ್.ಎಂ. ಟೊಣ್ಣೆಯವರು ಚಿಕ್ಕೋಡಿಯಲ್ಲಿ ಸಬ್‌ರಿಜಿಸ್ಟ್ರಾರ್ ಆಗಿದ್ದಾರೆ. ಶಿವಪ್ಪ ಉಪ್ಪಾರ ಗೋಕಾಕ್‌ನಲ್ಲಿ ಕಾಲೇಜು ಪ್ರಾಂಶುಪಾಲರಾಗಿದ್ದಾರೆ.

ಡಾ॥ ಬಾಬು ಬಿ. ನಾಯಕ್, ಡಾ॥ ಎಂ.ಎನ್. ದಂಡಿನ್, ಡಾ॥ ಪ್ರಕಾಶ ಗೋಡಕಿಂಡಿ, ಡಾ॥ ರಾಜಕುಮಾರ ಕೊಪ್ಪ, ಡಾ॥ ಯಲ್ಲಪ್ಪ ಗುಡಗುಡಿ, ಡಾ॥ ವೈಜಯಂತಿ ಗುಡಗುಡಿ ಮುಂತಾದವರು ಹೆಸರಾಂತ ವೈದ್ಯರು.

ಶ್ರೀಮತಿ ಪ್ರೇಮಾ ಉಪ್ಪಾರ ಹೆಸರಾಂತ ಸಾಹಿತಿ. ರಾಮಚಂದ್ರಪ್ಪ ಮುಕ್ಕಣ್ಣವರು ಸಂಗೀತಗಾರ. ಗೋವಿಂದಪ್ಪ ಕಿಚಡಿ ಆಕಾಶವಾಣಿ ಕಲಾವಿದರು. ಎ.ಬಿ. ಉಪ್ಪಾರ, ಚಿತ್ರಕಲಾ ಪ್ರವೀಣರು.

ಬೆಳಗಾವಿ ಜಿಲ್ಲೆಯ ಉಪ್ಪಾರ ಸಮುದಾಯವನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ವಿಶ್ಲೇಷಿಸಲು ಹೊರಟಾಗ ಜನಾಂಗಕ್ಕೆ ಸಾಮಾಜಿಕ ನ್ಯಾಯ ದೊರಕದಿರುವದನ್ನು ಗಮನಿಸಬಹುದು. ಅರಭಾವಿ ಹಾಗು ಗೋಕಾಕ್ ವಿಧಾನಸಭಾ ಕ್ಷೇತ್ರಗಳಲ್ಲಿ ಅತಿ ಹೆಚ್ಚಿನ ಜನಸಾಂದ್ರತೆ ಹೊಂದಿದ್ದರೂ ಸಮರ್ಥ ನಾಯಕತ್ವದ ಹಾಗೂ ಒಗ್ಗಟ್ಟಿನ ಕೊರತೆಯಿಂದಾಗಿ ನ್ಯಾಯವಾದ ರಾಜಕೀಯ ಸ್ಥಾನಮಾನಗಳು ಈ ಸಮುದಾಯಕ್ಕೆ ದೊರಕಿಲ್ಲ. ಅರಭಾವಿ ಕ್ಷೇತ್ರದಿಂದ 1999ರ ಸಾರ್ವತ್ರಿಕ ಚುನಾವಣೆಯಲ್ಲಿ , ರಾಜ್ಯ ವಿಧಾನಸಭೆಗೆ ಜಾತ್ಯತೀತ ಜನತಾದಳದಿಂದ ಭೀಮಣ್ಣ ಹಂದಿಗುಂಡ ಹಾಗೂ ಪಕ್ಷೇತರ ಅಭ್ಯರ್ಥಿಯಾಗಿ ಎಸ್.ಎಂ.

ಲಾತೂರ ಸ್ಪರ್ಧಿಸಿದ್ದನ್ನು ವಿಶ್ಲೇಷಿಸಿದರೆ, ಈ ಸಮುದಾಯದ ಮುಂದಾಳುಗಳಲ್ಲಿ ಹೊಂದಾಣಿಕೆಯ ಮೂಲಕ ರಾಜ್ಯ ವಿಧಾನಸಭೆಗಳಂತಹ ಮಹತ್ವದ ಸ್ಥಳಗಳಲ್ಲಿ ಪ್ರಾತಿನಿಧ್ಯ ದೊರಕಿಸಿಕೊಳ್ಳುವಲ್ಲಿ ವಿಶಾಲ ಮನೋಭಾವದ ಕೊರತೆ ಕಂಡುಬರುತ್ತದೆ. ಜೊತೆಗೆ ಇತರೆ ಹಿಂದುಳಿದವರು, ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗು ಅಲ್ಪಸಂಖ್ಯಾತರು ಹೆಚ್ಚಾಗಿರುವ ಕ್ಷೇತ್ರಗಳಲ್ಲಿ ಕೊಡ-ಕೊಳ್ಳುವ ನೀತಿ ಅನುಸರಿಸದೇ ಕೈಗೆಟುಕುವ ಪ್ರಾತಿನಿಧ್ಯವನ್ನೂ ಈ ವರ್ಗದವರು ಕಳೆದುಕೊಳ್ಳುತ್ತಿದ್ದಾರೆ. ಎಲ್ಲಿಯವರೆಗೆ ಸಮಗ್ರ ಹಿಂದುಳಿದವರು, ಪರಿಶಿಷ್ಟ ಜಾತಿ-ವರ್ಗದವರು ಹಾಗು ಅಲ್ಪಸಂಖ್ಯಾತರು ರಾಜಕೀಯ ಚಾಣಾಕ್ಷನೀತಿಯಿಂದ ಒಗ್ಗಟ್ಟಾಗಿ ಹೋರಾಟ ಮಾಡುವುದಿಲ್ಲವೋ ಅಲ್ಲಿಯವರೆಗೆ ಇಂತಹ ಸಮಾಜಗಳು ಸರಿಯಾದ ಪ್ರಾತಿನಿಧ್ಯಗಳಿಂದ ವಂಚಿತರಾಗುವುದು ತಪ್ಪಿದ್ದಲ್ಲ.

ಇಂದಿನ ಸ್ಪರ್ಧಾಯುಗದಲ್ಲಿ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ಕೊಡಬೇಕೆಂಬ, ಪ್ರಾಥಮಿಕ ತಿಳಿವಳಿಕೆ ಕೂಡ, ಈ ಸಮುದಾಯದ ಹೆಚ್ಚಿನ ಜನರಿಗೆ ಬಂದಿಲ್ಲ. ವಿದ್ಯಾರ್ಥಿನಿಲಯ, ವಿದ್ಯಾರ್ಥಿವೇತನಗಳಂತಹ ಅನುಕೂಲತೆಗಳು ಈ ಸಮುದಾಯದ ವಿದ್ಯಾರ್ಥಿಗಳಿಗೆ ದೊರೆಯುತ್ತಿಲ್ಲ. ಉಪ್ಪಾರ ಸಮಾಜವನ್ನು ಕೆಳಹಂತದಿಂದ ಸಂಘಟಿಸುವುದು ಅಗತ್ಯವಿದೆ. ಕಾರ್ಯಕರ್ತರು, ಸಮಾಜದ ಮುಖಂಡರು ಹಾಗು ಗುರುಪೀಠ ಈ ಕಾರ್ಯ ಮಾಡಬೇಕಿದೆ. ಸಮಾಜ ಬಾಂಧವರಲ್ಲಿ ಆತ್ಮವಿಶ್ವಾಸ ಹುಟ್ಟಿಸುವದು ಇಂದಿನ ಅಗತ್ಯವಾಗಿದೆ. ಜಿಲ್ಲೆಯಲ್ಲಿ ಉಪ್ಪಾರ ಸಮುದಾಯ ಹೆಚ್ಚು ಸಂಖ್ಯೆಯಲ್ಲಿರುವ ಕಡೆಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ತೆರೆದು, ತಾಂತ್ರಿಕ ಹಾಗು ಇತರೆ ಶಿಕ್ಷಣ ಪಡೆಯುವ ಮಕ್ಕಳಿಗೆ ಸಹಾಯ ಹಸ್ತ ಚಾಚಬೇಕಾಗಿದೆ. ಅಲ್ಲದೆ ವಿವಿಧ ಸ್ಪರ್ಧಾ ಪರೀಕ್ಷೆಗಳಿಗೆ ಹಾಜರಾಗುವ ಸಮಾಜದ ಮಕ್ಕಳಿಗೆ ಸೂಕ್ತ ರೀತಿಯ ನೆರವು ನೀಡಬೇಕಿದೆ. ಈ ಬಗ್ಗೆ ಆಳವಾದ ಹಾಗು ತೀವ್ರವಾದ ಚಿಂತನೆ, ಕಾರ್ಯಕ್ರಮ ಈಗಿನ ಅವಶ್ಯಕತೆಯಾಗಿದೆ.

ಉಪ್ಪಾರ ಸಮಾಜದ ಹಿರಿಯ ಧುರೀಣರಾದ ಶ್ರೀ ಹೆಚ್.ಸಿ. ನೀರಾವರಿಯವರ ನೇತೃತ್ವದಲ್ಲಿ ಪ್ರಕಟವಾಗುತ್ತಿರುವ 'ಭಗೀರಥ ಸಂಕಲ್ಪ' ಮಾಸಪತ್ರಿಕೆ ನಮ್ಮ ಸಮಾಜವನ್ನು ಭಾವನಾತ್ಮಕವಾಗಿ ಒಂದುಗೂಡಿಸುವುದರ ಜೊತೆಗೆ, ಸಮಾಜದ ಸಮಸ್ಯೆಗಳನ್ನು ಸಮರ್ಥವಾಗಿ ಪ್ರತಿಬಿಂಬಿಸುವ ಕೆಲಸ ಮಾಡುತ್ತದೆಂಬ ಆಶಯ ಈ ಭಾಗದ ಜನರದು. ದನಿ ಇಲ್ಲದ ಜನರಿಗೆ ಮಾತು ಕೊಡುವ ಮಹತ್ವದ ಕೆಲಸವನ್ನು ನಮ್ಮ ಸಮಾಜದ ಮುಖಂಡರುಗಳು ಇನ್ನೂ ಮಾಡಬೇಕಾಗಿದೆ.

**ಮಾಹಿತಿಸಂಗ್ರಹ : *ಚಂದ್ರಶೇಖರ ಪರಮಣ್ಣ ಹಾಗೂ ಅಶೋಕ್ ಬಿ. ನಾಯಕ್***

*




# * ಗದಗ ಜಿಲ್ಲೆ

## ಐತಿಹಾಸಿಕ ಹಿನ್ನೋಟ

**ಕ**ರ್ನಾಟಕದ ಸಾಹಿತ್ಯ ಸಂಸ್ಕೃತಿಯ ಬಗ್ಗೆ ಪ್ರಾಥಮಿಕ ಜ್ಞಾನ ಇರುವ ಎಲ್ಲರೂ ಗದಗ ಶಬ್ದ ಕೇಳಿದ ತಕ್ಷಣ ಕನ್ನಡದ ಮಹಾಕವಿ ಗದುಗಿನ ನಾರಣಪ್ಪ ಅಥವಾ ಕುಮಾರವ್ಯಾಸನನ್ನು ನೆನೆಯುತ್ತಾರೆ. ತನ್ನ ಹೆಸರಿನ ಮುಂದೆ ಗದುಗಿನ ಹೆಸರನ್ನು ಸೇರಿಸಿಕೊಂಡ ನಾರಣಪ್ಪ ಅರ್ಥಾತ್ ಕುಮಾರವ್ಯಾಸ ನೂರಾರು ವರ್ಷಗಳಿಂದ ಈ ಹೆಸರು ಕನ್ನಡ ನಾಡಿನಲ್ಲಿ ಮನೆ ಮಾತಾಗುವಂತೆ ಮಾಡಿದ್ದಾನೆ. ಆದರೆ ಗದಗ ಜಿಲ್ಲೆಯಾದುದು 1997ರಲ್ಲಿ. ಇದಕ್ಕೆ ಪೂರ್ವದಲ್ಲಿ ಗದಗ ಧಾರವಾಡ ಜಿಲ್ಲೆಯ ಭಾಗವಾಗಿತ್ತು. ಬೆಂಗಳೂರಿನಿಂದ ಗದಗ 479 ಕಿ.ಮೀ. ದೂರದಲ್ಲಿದೆ. ಗದಗ-ಬೆಟಗೇರಿ ಅವಳಿ ನಗರಗಳು. ಈ ಎರಡಕ್ಕೂ ಒಂದೇ ಪುರಸಭೆ.

ಐತಿಹ್ಯವೊಂದರ ಪ್ರಕಾರ ಮಹಾಭಾರತದ ಜನಮೇಜಯನಿಂದ ಸ್ಥಾಪಿತವಾದ ಅಗ್ರಹಾರ ಗದಗ. ಈ ಅಗ್ರಹಾರವನ್ನು ಎಪ್ಪತ್ತೆರಡು ಮಹಾಜನರು ಆಳುತ್ತಿದ್ದರೆಂದು ಶಾಸನಗಳು ಹೇಳುತ್ತವೆ.

1997ರಲ್ಲಿ ಉದಯವಾದ ಗದಗ್ ಜಿಲ್ಲೆ ಐದು ತಾಲ್ಲೂಕುಗಳನ್ನೊಳಗೊಂಡಿದೆ. ಅವುಗಳೆಂದರೆ : ಗದಗ, ಶಿರಹಟ್ಟಿ, ರೋಣ, ಮುಂಡರಗಿ ಹಾಗೂ ನರಗುಂದ.

ಗದಗ ಜಿಲ್ಲೆಯಲ್ಲಿ 2001 ರ ಜನಸಂಖ್ಯೆಯ ಪ್ರಕಾರ 9.71,955 ಜನರಿದ್ದಾರೆ. ಅದರಲ್ಲಿ ಪುರುಷರು 4,93,795, ಮಹಿಳೆಯರು

4,78,160. ಜಿಲ್ಲೆಯ ಸಾಕ್ಷರತಾ ಪ್ರಮಾಣ ಸರಾಸರಿ ಶೇ. 66.27. ಅದರಲ್ಲಿ ಪುರುಷರ ಸಾಕ್ಷರತೆ ಶೇ. 79.55 ಸ್ತ್ರೀಯರದು ಶೇ. 52.58. ಜಿಲ್ಲೆಯ ವಾರ್ಷಿಕ ಸರಾಸರಿ ಮಳೆಯ ಪ್ರಮಾಣ 560 ಮಿ.ಮೀ.

ಗದಗ ಕೃಷಿ ಪ್ರಧಾನವಾದ ಜಿಲ್ಲೆ. ಇಲ್ಲಿ ಬಿಳಿಜೋಳ, ಗೋಧಿ, ಹತ್ತಿ, ಕಡಲೆ, ಕುಸಬಿ, ಸೂರ್ಯಕಾಂತಿ ಬೆಳೆಗಳನ್ನು ಬೆಳೆಯುತ್ತಾರೆ. ಫಲವತ್ತಾದ ಎರೆಭೂಮಿ ಈ ಜಿಲ್ಲೆಯಲ್ಲಿದ್ದು ಈ ಜಿಲ್ಲೆಯನ್ನು 'ಎರೆದೂರೆ' ಎಂದು ಕರೆಯಲಾಗುತ್ತದೆ.

ಪ್ರಾಚೀನ ಕಾಲದಿಂದಲೂ ಗದಗ ನಗರಕ್ಕೆ ಪ್ರಾಮುಖ್ಯತೆಯಿದ್ದು 'ಕೃತುಕ', 'ಕೃತುಪುರ', 'ಕದ್ದುಗು', 'ಕಳ್ದುಗು' ಎಂಬ ಹೆಸರುಗಳಿರುವುದನ್ನು ಶಾಸನಗಳಿಂದ ಗಮನಿಸಬಹುದು.

ಕೃತು ಮಹರ್ಷಿ ತಪಸ್ಸು ಮಾಡಿದ್ದರಿಂದ 'ಕೃತುಪುರ' ಎಂಬ ಹೆಸರು ಇದಕ್ಕೆ ಬಂತಂತೆ! ಇತಿಹಾಸಕಾರರಾದ ಡಾ. ಪಿ.ಬಿ. ದೇಸಾಯಿ ಹೇಳಿಕೆಯಂತೆ 'ಕೃತು' ಎಂಬ 'ವನಸ್ಪತಿ' ಇಲ್ಲಿ ಬೆಳೆಯಲಾಗುತ್ತಿತ್ತು. ಆದ್ದರಿಂದ 'ಕೃತುಪುರ', 'ಕರ್ಮಗ', 'ಗಳದುಗು', 'ಗದಗು', ಕೊನೆಗೆ 'ಗದಗ' ಎಂದಾಯಿತು ಎಂದು ವಿದ್ವಾಂಸರು ಹೇಳುತ್ತಾರೆ.

ಗದಗಿನ ತ್ರಿಲೋಕೇಶ್ವರ ಹಾಗೂ ವೀರನಾರಾಯಣ ದೇವಾಲಯಗಳಲ್ಲಿ ದೊರೆತ ಒಟ್ಟು 34 ಶಾಸನಗಳು ಈ ಊರಿನ ಇತಿಹಾಸ ತಿಳಿಯಲು ತುಂಬಾ ಉಪಯುಕ್ತವಾಗಿವೆ. ಕ್ರಿ.ಶ. 1379ರ ತಾಮ್ರಶಾಸನವೊಂದರಲ್ಲಿ ವಿಜಯನಗರದ ಅರಸನಾದ ಇಮ್ಮಡಿ ಹರಿಹರನು ತ್ರಿಲೋಕೇಶ್ವರ ಮತ್ತು ವೀರನಾರಾಯಣ ದೇವಾಲಯಗಳಿಗೆ ಇಪ್ಪತ್ತೆರಡು ಹಳ್ಳಿಗಳನ್ನು ದಾನ ನೀಡಿದ ಪ್ರಸ್ತಾಪ ಬರುತ್ತದೆ. ಗದಗಿನ ಬಳಿಯಿರುವ ಲಕ್ಕುಂಡಿ ಹಾಗೂ ಬೆಟಗೇರಿಗಳಲ್ಲಿ ರಾಷ್ಟ್ರಕೂಟರ, ಕಲ್ಯಾಣಿ ಚಾಲುಕ್ಯರ, ಹೊಯ್ಸಳರ ಹಾಗೂ ಸೇವುಣರ ಶಾಸನಗಳು ದೊರೆತಿದ್ದು ಈ ಪ್ರದೇಶದಲ್ಲಿ ಅವರ ಆಳ್ವಿಕೆಯನ್ನು ಆ ಶಾಸನಗಳು ಸ್ಪಷ್ಟಪಡಿಸುತ್ತದೆ. ಗದಗಿನ ವೀರನಾರಾಯಣ ದೇವಾಲಯದಲ್ಲಿ ಕ್ರಿ.ಶ. 1519 ರ ಕೃಷ್ಣದೇವರಾಯನ ಹಾಗೂ 1539ರ ಅಚ್ಯುತರಾಯನ ಶಾಸನಗಳು ದೊರಕಿವೆ. ಈ ಶಾಸನದ ಪ್ರಕಾರ ಕುಮಾರವ್ಯಾಸನ ಆರಾಧ್ಯದೈವ ಗದುಗಿನ ವೀರನಾರಾಯಣಸ್ವಾಮಿಗೆ ಇವರಿಬ್ಬರೂ ದತ್ತಿ ಕೊಟ್ಟ ವಿಚಾರ ಪ್ರಸ್ತಾಪವಾಗಿದೆ. ಗದಗನ್ನು ಬೆಳವಲದ ನಾಡೆಂದು ಗುರುತಿಸಲಾಗಿದೆ. ಈ ಪ್ರದೇಶದಲ್ಲಿ ಸವಡಿ, ಗದುಗು, ಸೂಡಿ, ಅಣ್ಣಿಗೇರಿ, ಡಂಬಳ, ಹೊಂಬಳ, ಲಕ್ಕುಂಡಿ, ಲಕ್ಷ್ಮೇಶ್ವರ ಮೊದಲಾದ ಕಡೆ ಕಲ್ಯಾಣಿ ಚಾಲುಕ್ಯರ ದೇವಾಲಯಗಳಿವೆ.

12ನೆಯ ಶತಮಾನದ ಕಲ್ಯಾಣ ಕ್ರಾಂತಿಯನಂತರ ವೀರಶೈವ ಮಠಗಳು ಮಾಡಿದ ಸಾಮಾಜಿಕ ಮತ್ತು ಸಾಂಸ್ಕೃತಿಕ ಸೇವೆ ಗಣನೀಯವಾದುದು. ಅದರ ಪ್ರಯೋಜನ ಗದಗಿಗೂ ದೊರಕಿದೆ.

15ನೆಯ ಶತಮಾನದಲ್ಲಿದ್ದ ಮಹಾವಿಭೂತಿ ಪುರುಷರಾದ ಶ್ರೀ ತೋಂಟದ ಸಿದ್ದಲಿಂಗೇಶ್ವರ ಸ್ವಾಮಿಗಳವರು ಇಲ್ಲಿಯೂ ಜಾಗೃತಿಯನ್ನುಂಟು ಮಾಡಿದ್ದಾರೆ.

ಕ್ರಿ.ಶ. 1573ರಲ್ಲಿ ಗದಗ್ ಜಿಲ್ಲೆ ಬಿಜಾಪುರದ ಆದಿಲ್‌ಷಾಹಿ ವಶವಾಯಿತು. ಆದಿಲ್‌ಷಾಹಿಯ ಶಾಸನಗಳು ಲಕ್ಷ್ಮೇಶ್ವರದಲ್ಲಿ ದೊರಕುತ್ತವೆ. ಈ ಪ್ರದೇಶದಲ್ಲಿದ್ದ ಜೈನ ಮತ್ತು ಲಿಂಗಾಯಿತ ದೇಸಾಯಿಗಳು ಬಿಜಾಪುರ ಆದಿಲ್‌ಷಾಹಿಗಳ ಮಾಂಡಲೀಕರಾಗಿದ್ದರು. ಕ್ರಿ.ಶ. 1686ರಲ್ಲಿ ಆದಿಲ್‌ಷಾಹಿಗಳು ಪತನಗೊಂಡನಂತರ ಈ ಪ್ರದೇಶ ಮೊಘಲರ ಆಳ್ವಿಕೆಗೊಳಪಟ್ಟಿತು. ತದನಂತರ ಮರಾಠರ ಆಳ್ವಿಕೆಗೊಳಪಟ್ಟಿತು. ಕ್ರಿ.ಶ. 1818ರಲ್ಲಿ ಈ ಪ್ರದೇಶವನ್ನು ಬ್ರಿಟಿಷ್ ಅಧಿಕಾರಿ ಸರ್ ಥಾಮಸ್ ಮನ್ರೋ ತನ್ನ ವಶಕ್ಕೆ ತೆಗೆದುಕೊಂಡನು. 1947ರವರೆಗೆ ಬ್ರಿಟಿಷರ ಆಡಳಿತದಲ್ಲಿದ್ದ ಇದು ಮುಂಬೈ ಕರ್ನಾಟಕಕ್ಕೆ ಸೇರ್ಪಡೆಯಾಯಿತು. 1956ರಲ್ಲಿ ಏಕೀಕರಣದ ನಂತರ ಇದು ಕರ್ನಾಟಕದ ಭಾಗವಾಯಿತು.

ಗದಗಿನ 'ವೀರೇಶ್ವರ ಪುಣ್ಯಾಶ್ರಮ' ರಾಷ್ಟ್ರಮಟ್ಟದ ಸಂಗೀತಗಾರರನ್ನು ಸಿದ್ಧಮಾಡುವ ವಿಶ್ವವಿದ್ಯಾನಿಲಯವಾಗಿದೆ. ಇದರ ಸ್ಥಾಪಕರು ಶ್ರೀ ಪಂಚಾಕ್ಷರಿಗವಾಯಿಗಳು. ಅವರ ಶಿಷ್ಯರು ಶ್ರೀ ಪುಟ್ಟರಾಜಗವಾಯಿಗಳು. ಸಾವಿರಾರು ಅಂಧ ಮಕ್ಕಳಿಗೆ ಉಚಿತ ಊಟ ವಸತಿಯನ್ನು ನೀಡುತ್ತಿರುವ ಅವರು, ಸಂಗೀತ ಪ್ರಪಂಚದಲ್ಲಿ ಮಹಾಸಾಧಕರು. ಅವರಿಗೆ ಪರಿಚಯವಿಲ್ಲದ ವಾದ್ಯವೇ ಇಲ್ಲ. ಇಲ್ಲಿ ಸಂಗೀತ ಕಲಿತು ಖ್ಯಾತರಾದವರೆಂದರೆ ಬಸವರಾಜ ರಾಜಗುರು, ಜಂಬಲದಿನ್ನಿ ಸಿದ್ಧರಾಮ, ಅರ್ಜುನಸಾ ನಾಕೋಡ, ಪಂಚಾಕ್ಷರಯ್ಯ ಮತ್ತೀಕಟ್ಟಿ ಹಾಗೂ ಅರ್ಜುನ್ ಮುಗದಂ. ರಾಷ್ಟ್ರದ ಶ್ರೇಷ್ಠ ಸಂಗೀತಗಾರರೆಂದು ಖ್ಯಾತರಾದ ಪದ್ಮಭೂಷಣ ಭೀಮಸೇನಜೋಷಿ ಸಹ ಗದಗಿನಲ್ಲಿದ್ದವರು.

ಡಾ. ಅನಕೃ ಅವರಿಂದಲೇ 'ಕರ್ನಾಟಕದ ರವಿವರ್ಮ' ಎಂಬ ಪೊಗಳಿಕೆಗೆ ಪಾತ್ರರಾಗಿದ್ದ ಖ್ಯಾತ ಚಿತ್ರಕಲಾವಿದರಾದ ಮುರಗೆಪ್ಪ ಅಡವೆಪ್ಪ ಚೆಟ್ಟಿಯವರು ಗದಗನಲ್ಲಿ ಬಾಳಿ ಬದುಕಿದವರು. 1947 ರಲ್ಲಿ ಖ್ಯಾತ ಚಿತ್ರ ಕಲಾವಿದರಾದ ಟಿ.ಪಿ. ಅಕ್ಕಿ ಅವರು ಸಾರ್ವಜನಿಕರ ಸಹಕಾರದಿಂದ ಇಲ್ಲೊಂದು ಕಲಾಮಂದಿರ ನಿರ್ಮಿಸಿದ್ದಾರೆ. 'ಸಂಗ್ಯಾ ಬಾಳ್ಯಾ' ಲಾವಣಿ ಬರೆದ ಕವಿ ದೊಟ್ಯಾಳ ಬಸಪ್ಪ ಇಲ್ಲಿನವರು. ರಾಷ್ಟ್ರಮಟ್ಟದ ಹಾಕಿ ಆಟಗಾರರಾದ ಹೆಚ್.ವೈ. ಶಿಲ್ಲಿಂಗ್ ಮತ್ತು ಟೇನುಬಾಬ ಗದಗನಲ್ಲಿದ್ದಾರೆ. ಗದಗಿನ ಮತ್ತೊಬ್ಬ ಖ್ಯಾತ ಪುರುಷರೆಂದರೆ ಹುಲಿಕೋಟೆ ಹುಲಿಯೆಂದು ರಾಜಕೀಯದಲ್ಲಿ ಖ್ಯಾತರಾಗಿದ್ದ ಕೆ.ಹೆಚ್. ಪಾಟೀಲ್.

ನರಗುಂದ ಗದಗ ಜಿಲ್ಲೆಯ ತಾಲ್ಲೂಕು ಕೇಂದ್ರ. ಇದರ ವಿಸ್ತೀರ್ಣ 436 ಚ.ಕಿ.ಮೀ. ಇದರಲ್ಲಿ ಒಟ್ಟು 35 ಗ್ರಾಮಗಳಿವೆ. ಕೊಣ್ಣೂರು ಹಾಗೂ ನರಗುಂದ ಈ ತಾಲ್ಲೂಕಿನ ಹೋಬಳಿ ಕೇಂದ್ರಗಳು. ತಾಲ್ಲೂಕಿನ ಈಶಾನ್ಯಭಾಗದಲ್ಲಿ ಮಲಪ್ರಭಾ ನದಿ ಹರಿಯುತ್ತದೆ. ವಾರ್ಷಿಕ ಸರಾಸರಿ ಮಳೆ 560 ಮಿ.ಮೀ.

ನರಗುಂದದ ಕೋಟೆ ತುಂಬಾ ಪ್ರಸಿದ್ಧವಾದುದು. ಕಲ್ಯಾಣಿ ಚಾಲುಕ್ಯರ ಮೂರನೆಯ ಸೋಮೇಶ್ವರ, ಏಳನೆಯ ಜಗದೇಕಮಲ್ಲ ಹಾಗೂ ಮೂರನೆಯ ತೈಲಪನಿಗೆ ಸೇರಿದ ಹಲವಾರು

ಶಾಸನಗಳು ಇಲ್ಲಿ ದೊರಕಿವೆ. ನರಗುಂದ ಅಗ್ರಹಾರವಾಗಿದ್ದು 220 ಮಹಾಜನರು ಇದರ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು.

ಕ್ರಿ.ಶ. 1674ರಲ್ಲಿ ಶಿವಾಜಿ ಇಲ್ಲಿ ಕೋಟೆ ಕಟ್ಟಿಸಿದ. ಕ್ರಿ.ಶ. 1785ರಲ್ಲಿ ಮೈಸೂರು ಸಂಸ್ಥಾನದ ಟಿಪ್ಪುಸುಲ್ತಾನ್ ನರಗುಂದದ ಕೋಟೆಯನ್ನು ವಶಪಡಿಸಿಕೊಂಡನು. ಕ್ರಿ.ಶ. 1818ರಲ್ಲಿ ಮರಾಠ ಪೇಶ್ವೆಗಳು ದಾದಾಜೀರಾವ್ ಅಪ್ಪಾ ಎಂಬುವವನಿಗೆ ನರಗುಂದದ ಆಡಳಿತವನ್ನು ವಹಿಸಿಕೊಟ್ಟರು. ಈ ವಂಶದ ಭಾಸ್ಕರರಾವ್ ಅಪ್ಪಾಸಾಹೇಬ್ ಅಥವಾ ಬಾಬಾಸಾಹೇಬ್ (1842-1858) ನರಗುಂದ ಇತಿಹಾಸದಲ್ಲಿ ಅತ್ಯಂತ ಜನಪ್ರಿಯನಾದ ವ್ಯಕ್ತಿ. ಕ್ರಿ.ಶ. 1857ರಲ್ಲಿ ಆತನಿಗೆ ಬ್ರಿಟಿಷ್ ಸರ್ಕಾರ ದತ್ತು ಸ್ವೀಕಾರಕ್ಕೆ ಅನುಮತಿ ನೀಡಲಿಲ್ಲ. ಅದನ್ನು ಪ್ರತಿಭಟಿಸಿ ಆತ ಬಂಡಾಯ ಎದ್ದ. ಅದೇ 'ನರಗುಂದ ಬಂಡಾಯ'. ಕ್ರಿ.ಶ. 1858 ಜೂನ್‌ನಲ್ಲಿ ಬಾಬಾ ಸಾಹೇಬನನ್ನು ಸೋಲಿಸಿ ಬ್ರಿಟಿಷರು ನರಗುಂದ ಕೋಟೆಯನ್ನು ವಶಪಡಿಸಿಕೊಂಡರು.

1980-81ರಲ್ಲಿ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯಾಗಿದ್ದ ಆರ್. ಗುಂಡೂರಾವ್ ಅವರ ಅಧಿಕಾರಾವಧಿಯಲ್ಲಿ ಸತ್ಯಾಗ್ರಹ ನಿರತರಾದ ರೈತರ ಮೇಲೆ ಗೋಲಿಬಾರ್ ಮಾಡಲಾಯಿತು. ಇದರಿಂದ ಅಮಾಯಕ ರೈತನೊಬ್ಬ ಪ್ರಾಣತ್ಯಾಗ ಮಾಡಿದನು. ಇದು ಕರ್ನಾಟಕದಲ್ಲಿ ಕಾಂಗ್ರೆಸ್ಸೇತರ ಸರ್ಕಾರ ರಚನೆಗೆ ಅನುವು ಮಾಡಿಕೊಟ್ಟಿತು.

ಗದಗ್ ಜಿಲ್ಲೆಯ ಮತ್ತೊಂದು ತಾಲ್ಲೂಕು ಕೇಂದ್ರ ಮುಂಡರಗಿ. ಇದರ ವಿಸ್ತೀರ್ಣ 877.4 ಚ.ಕಿ.ಮೀ. ಇಲ್ಲಿನ ವಾರ್ಷಿಕ ಮಳೆ 470 ಮಿ.ಮೀ. ಈ ತಾಲ್ಲೂಕಿನ ಒಟ್ಟು ಗ್ರಾಮಗಳ ಸಂಖ್ಯೆ 52.

ತಾಲ್ಲೂಕಿನಾದ್ಯಂತ ಮರಳು ಮಿಶ್ರಿತ ಕಪ್ಪುಮಣ್ಣಿನ ಭೂಮಿಯಿದ್ದು ಕೃಷಿಗೆ ವಿಶೇಷ ಅನುಕೂಲ ಒದಗಿಸಿದೆ. ತಾಲ್ಲೂಕಿನ ಮಧ್ಯಭಾಗದಲ್ಲಿ ಹಿರೇಹಳ್ಳ ಎಂಬ ತೊರೆ ಹರಿಯುತ್ತದೆ.

ಕೋರಲಹಳ್ಳಿ, ಡಂಬಳ ಮೊದಲಾದ ಪ್ರಸಿದ್ಧ ಗ್ರಾಮಗಳು ಇಲ್ಲಿವೆ. ಕಲ್ಯಾಣ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ರಾಣಿ ಲಕ್ಷ್ಮೀದೇವಿಯ ಆಡಳಿತ ಕೇಂದ್ರ ಡಂಬಳ. ಬೌದ್ಧ ಹಾಗೂ ಜೈನ ಧರ್ಮದ ಅನೇಕ ಕುರುಹುಗಳು ಇಲ್ಲಿವೆ. ಕ್ರಿ.ಶ. 1124ರಲ್ಲಿ ಅಜ್ಜಯ್ಯನಾಯಕ ಕಟ್ಟಿಸಿದ ಅಜ್ಜಮೇಶ್ವರ ಶಿವಭವನ ಇಲ್ಲಿದೆ. ವಿಶಿಷ್ಟ ಶೈಲಿಯ ದೊಡ್ಡ ಬಸವಣ್ಣನ ಗುಡಿ ಸಹ ಇಲ್ಲುಂಟು. ಮುಂಡರಗಿಗೆ 25 ಕಿ.ಮೀ. ದೂರದಲ್ಲಿರುವ ಗುಮ್ಮಗೋಳದಲ್ಲಿ ಬಸವಣ್ಣನ ದೇವಾಲಯವಿದೆ.

1857ರ ಪ್ರಪ್ರಥಮ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಮುಂಡರಗಿಯ ಭೀಮರಾಯನಿಗೆ ವಿಶೇಷವಾದ ಸ್ಥಾನವಿದೆ. ಆತ ಕೊಪ್ಪಳದಲ್ಲಿ ತಹಶೀಲ್ದಾರನಾಗಿದ್ದು ಆ ಹುದ್ದೆ ತ್ಯಾಗ ಮಾಡಿ ಬ್ರಿಟಿಷರ ವಿರುದ್ಧ ಸಶಸ್ತ್ರ ಹೋರಾಟ ಮಾಡಿ 1-6-1858ರಲ್ಲಿ ಅಸುನೀಗಿದನು.

ರೋಣ ಗದಗ ಜಿಲ್ಲೆಯ ಮತ್ತೊಂದು ತಾಲ್ಲೂಕು ಕೇಂದ್ರ. ಇದರ ವಿಸ್ತೀರ್ಣ 1285.93 ಚ.ಕಿ.ಮೀ. ಈ ತಾಲ್ಲೂಕಿನ ಗ್ರಾಮಗಳ ಸಂಖ್ಯೆ 91. ಪಟ್ಟಣಗಳ ಸಂಖ್ಯೆ 3. ತಾಲ್ಲೂಕಿನ ವಾರ್ಷಿಕ ಮಳೆ 457.7 ಮಿ.ಮೀ. ತಾಲ್ಲೂಕಿನ ಉತ್ತರ ಭಾಗದಲ್ಲಿ ಮಲಪ್ರಭಾ ನದಿ ಹರಿಯುತ್ತದೆ.

ಮಹಾಭಾರತದ 'ದ್ರೋಣಾಚಾರ್ಯರು' ರೋಣದಲ್ಲಿ ಹುಟ್ಟಿದುದರಿಂದ 'ದ್ರೋಣಪುರ' ಎಂದು ಹೆಸರು ಬಂದಿತೆಂದು ಅನಂತರ 'ರೋಣ' ಎಂದಾಯಿತೆಂದು ಸ್ಥಳಪುರಾಣ ಪೊಂದು ಹೇಳುತ್ತದೆ.

ಕಲ್ಯಾಣಿ ಚಾಲುಕ್ಯರ ಐದನೆಯ ವಿಕ್ರಮಾದಿತ್ಯನ ತಂಗಿ ಇಮ್ಮಡಿ ಜಯಸಿಂಹನ ಅಕ್ಕ ರಣಭೈರವಿ ಎಂಬ ಬಿರುದು ಹೊಂದಿದ್ದ ಅಕ್ಕಾದೇವಿ ಕ್ರಿ.ಶ. 1050ರಲ್ಲಿ ಕಿಸುನಾಡು 70, ತೋರಗೆರೆ 6, ಅಮಾಸವಾಡಿ 740 ಪ್ರಾಂತ್ಯಗಳನ್ನು ಆಳುತ್ತಿದ್ದಳು. ಅವಳ ಆಳ್ವಿಕೆಗೆ ರೋಣ ಕೂಡಾ ಒಳಪಟ್ಟಿತ್ತು.

ಕ್ರಿ.ಶ. 1931ರಲ್ಲಿ ಜವಾಹರಲಾಲ ನೆಹರು ಅವರು ರೋಣ ತಾಲ್ಲೂಕು ಜಕ್ಕಲಿಗೆ ಭೇಟಿ ಕೊಟ್ಟಾಗ, ದೊಡ್ಡಮೇಟಿ ಅಂದಾನಪ್ಪ ಅವರು ನೆಹರೂ ಅವರಿಗೆ ಒಂದು ಬಂಗಾರದ ತಕಲಿಯನ್ನು ಕಾಣಿಕೆಯಾಗಿ ಕೊಟ್ಟಿದ್ದರು. 1934ರಲ್ಲಿ ಮಹಾತ್ಮಗಾಂಧೀಜಿಯವರು ಕೂಡ ರೋಣ ತಾಲ್ಲೂಕಿನ ಜಕ್ಕಲಿಗೆ ಭೇಟಿ ಕೊಟ್ಟಿದ್ದರು. ಅಂದಾನಪ್ಪ ದೊಡ್ಡಮೇಟಿ, ಶಿವಬಸಪ್ಪ ನೆಲ್ಲೂರ, ವಿರೂಪಾಕ್ಷಪ್ಪ ಅಬ್ಬಿಗೆರೆ, ಜಕ್ಕಲಿ ಶೇಖರಯ್ಯ, ಜೋಳದ ಕಾಶಿನಾಥಶಾಸ್ತ್ರಿ, ಮಹಾದೇವಪ್ಪ ಗಾಣಗೇರ ಈ ತಾಲ್ಲೂಕಿನ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು.

ರೋಣ ತಾಲ್ಲೂಕಿನ ಹೊಳೆಆಲೂರು ವಿಶ್ವಕರ್ಮ ಜನಾಂಗದ ಪುಣ್ಯಸ್ಥಳವಾಗಿದೆ. ಇವರ ಆರಾಧ್ಯದೈವ 'ಎಚ್ಚಮೇಶ್ವರ'. ಕನ್ನಡದ ಕುಲಪುರೋಹಿತರೆಂದೇ ಖ್ಯಾತರಾಗಿರುವ ಆಲೂರು ವೆಂಕಟರಾಯರು ಈ ಸ್ಥಳದವರು.

ರೋಣ ತಾಲ್ಲೂಕಿನ ಇಟ್ಟಗಿಯು ಪ್ರಾಚೀನ ಶಾಸನಗಳಲ್ಲಿ 'ಯಿಟ್ಟಿಗೆ', 'ಇಟ್ಟಿಗೆ' ಎಂದೇ ಉಲ್ಲೇಖಗೊಂಡಿದ್ದು, ಹಿಂದೆ ಕಿಸುಕಾಡು-70ಕ್ಕೆ ಸೇರಿದ ಮಹಾ ಅಗ್ರಹಾರವಾಗಿತ್ತು. ಎರಡು ಶಾಸನಗಳು ಈ ಊರಿನಿಂದ ವರದಿಯಾಗಿವೆ. ಕ್ರಿ.ಶ. 1054ರ ಶಾಸನವು ಮಹಾ ಅಗ್ರಹಾರ ಇಟ್ಟಿಗೆಯಲ್ಲಿ ಸ್ಥಳೀಕನಾದ ಶ್ರೀಪತಿ ಚಮೂಪನು ಶ್ರೀ ಸ್ವಯಂಭೂ ದೇವಾಲಯವನ್ನು ನಿರ್ಮಿಸಿ, ಅದಕ್ಕೆ ಭೂದಾನ ಮಾಡಿದ ವಿವರಗಳನ್ನು ತಿಳಿಸುತ್ತದೆ.

ಸುಮಾರು 11ನೇ ಶತಮಾನದ ನಿಷಿಧಿ ಶಾಸನದಿಂದ ಇದೊಂದು ಜೈನ ಕೇಂದ್ರವೂ ಆಗಿತ್ತೆಂಬ ಅಂಶ ಮೊದಲ ಬಾರಿಗೆ ಬೆಳಕಿಗೆ ಬಂದಿದೆ.

ಭೀಮಮ್ಮ ಎಂಬ ಶರಣೆ 19ನೆಯ ಶತಮಾನದ ಕೊನೆಯಲ್ಲಿ ಪವಾಡ ಮೆರೆದು ಮಡಿದಿದ್ದು ಅವಳ ಹೆಸರಿನಲ್ಲಿ ಭೀಮಾಂಬಿಕೆ ಗುಡಿ, ಧರ್ಮದ ಮಠಗಳಿದ್ದು ಪ್ರತಿ ಅಮವಾಸ್ಯೆಯಂದು ಸಹಸ್ರಾರು ಜನ ದರ್ಶನ ಪಡೆಯುತ್ತಾರ.

ಭೀಮಾಂಬಿಕೆ ಸರ್ವಧರ್ಮ ಸಮನ್ವಾಚಾರಣೆಯಾಗಿ ಬಾಳಿದ ಸ್ಥಳವಿದು. ಅವಳ ಆಶೀರ್ವಾದಿಂದ ದೇಹದಲ್ಲಿ ಬೆಳೆದ ಗಂಟುಗಳು ನಿವಾರಣೆಯಾಗುತ್ತದೆಂಬ ನಂಬಿಕೆ ಇಲ್ಲಿದೆ.

ರೋಣ ತಾಲ್ಲೂಕು ಹಾಲಕೆರೆ ಪೂಜ್ಯ ಅನ್ನದಾನಿ ಮಹಾಸ್ವಾಮಿಗಳ ನೆಲವೀಡು. ಇದೇ ತಾಲ್ಲೂಕಿನ ಸೂಡಿ ಜೈನ, ಶೈವ ಹಾಗೂ ವೈಷ್ಣವ ಧರ್ಮದ ಕೇಂದ್ರ ಸ್ಥಳವೂ ಆಗಿವೆ.

ಪ್ರಾಚೀನ ಶಾಸನಗಳಲ್ಲಿ ನರೆಯಂಗಲ್ ಎಂದೇ ಪ್ರಸಿದ್ಧವಾಗಿರುವ ನರಗಲ್ ಬೆಳವಲ-300ಕ್ಕೆ ಸೇರಿದ ನರೆಯಂಗಲ-12 ಆಡಳಿತ ಕೇಂದ್ರವೆಂದು ಹೇಳಬಹುದು.

ಗದಗ ಜಿಲ್ಲೆಯ ಮತ್ತೊಂದು ತಾಲ್ಲೂಕು ಕೇಂದ್ರ ಶಿರಹಟ್ಟಿ. ಇದರ ಒಟ್ಟು ವಿಸ್ತೀರ್ಣ 948.18 ಚ.ಕಿ.ಮೀ. ಇದರಲ್ಲಿ ಒಟ್ಟು 83 ಹಳ್ಳಿಗಳಿವೆ. ಶಿರಹಟ್ಟಿ ಹಾಗೂ ಲಕ್ಷ್ಮೇಶ್ವರ ಇದರ ಹೋಬಳಿಗಳು. ಈ ತಾಲ್ಲೂಕಿನಲ್ಲಿ ತುಂಗಭದ್ರಾ ನದಿ ಹರಿಯುತ್ತದೆ. ಇಲ್ಲಿಯ ವಾರ್ಷಿಕ ಮಳೆ 608.4 ಮಿ.ಮೀ.

ಚ್ಯವನಭಾರ್ಗವ ಋಷಿಗಳು ತುಂಗಭದ್ರಾ ನದಿಯ ಅಂಚಿನ ಶಂಕರಗಡ್ಡಿಯಲ್ಲಿ ತಪಸ್ಸು ಮಾಡಿದರೆಂಬ ಐತಿಹ್ಯವಿದೆ. ಅಗಸ್ತ್ಯ ಮಹರ್ಷಿಗಳು ಉತ್ತರದಿಂದ ದಕ್ಷಿಣಕ್ಕೆ ಬಂದಾಗ ಲಕ್ಷ್ಮೇಶ್ವರದ ಬಳಿ ತಂಗಿ ಅಲ್ಲಿನ ಕೊಳದಲ್ಲಿ ಮಿಂದು ಶಿವಪೂಜೆ ಮಾಡಿದ್ದರಿಂದ ಆ ಕೊಳಕ್ಕೆ 'ಅಗಸ್ತ್ಯ ತೀರ್ಥ' ಎಂಬ ಹೆಸರು ಬಂತೆಂದು ಸ್ಥಳಪುರಾಣ ಹೇಳುತ್ತದೆ.

ಕ್ರಿ.ಶ. 638ರ ಬಾದಾಮಿ ಚಾಲುಕ್ಯರ ವಿನಯಾದಿತ್ಯನ ಶಾಸನವೊಂದು ಇಂದಿನ ಲಕ್ಷ್ಮೇಶ್ವರವನ್ನೇ ಪುಲಿಗೆರೆಯ ಮುನ್ನೂರು ರಾಜಧಾನಿ ಎಂದು ಹೇಳುತ್ತದೆ.

ಕ್ರಿ.ಶ. 16ನೆಯ ಶತಮಾನದ ತನಕ ಅಂದರೆ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ತನಕ ಈ ಪ್ರಾಂತ್ಯವನ್ನು ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಳಚೂರಿಯರು, ಹೊಯ್ಸಳರು ಮೊದಲಾದ ರಾಜಮನೆತನದ ಅರಸರು ಆಳಿದ್ದಾರೆ.

ಬಿಜಾಪುರದ ಸುಲ್ತಾನರು ಕೂಡಾ ಈ ಪ್ರದೇಶದ ಮೇಲೆ ಹಿಡಿತ ಹೊಂದಿದ್ದರು. ಕ್ರಿ.ಶ. 1660ರ ಹೊತ್ತಿಗೆ ಶಿರಹಟ್ಟಿ ದೇಸಾಯಿ ಮನೆತನದ ಆಳ್ವಿಕೆಗೆ ಒಳಪಟ್ಟಿತು. 20ನೆಯ ಶತಮಾನದ ಆದಿಯಲ್ಲಿ ಸಾಂಗ್ಲಿ ಸಂಸ್ಥಾನದ ಭಾಗವಾಗಿದ್ದ ಶಿರಹಟ್ಟಿಯನ್ನು ಕ್ಯಾಪ್ಟನ್ ಆರ್.ಸಿ. ಬರ್ಕ್ ವ್ಯವಸ್ಥಿತವಾಗಿ ಅಭಿವೃದ್ಧಿಯಾಗುವಂತೆ ಮಾಡಿದರು. 1948ರ ಹೊತ್ತಿಗೆ ಶಿರಹಟ್ಟಿ ತಾಲ್ಲೂಕು ಧಾರವಾಡ ಜಿಲ್ಲೆಯಲ್ಲಿ ವಿಲೀನಗೊಂಡಿತ್ತು. ಅದೇ ಸಮಯದಲ್ಲಿ ಪ್ರತ್ಯೇಕ ತಾಲ್ಲೂಕಾಗಿದ್ದ ಲಕ್ಷ್ಮೇಶ್ವರವು ಶಿರಹಟ್ಟಿಯಲ್ಲಿ ಸೇರ್ಪಡೆಯಾಯಿತು.

ಸ್ವಾತಂತ್ರ ಹೋರಾಟದಲ್ಲಿ ಹುತಾತ್ಮನಾದ ಮೈಲಾರ ಮಹದೇವಪ್ಪನ ಜೊತೆಗಾರರಾಗಿದ್ದು ಹುತಾತ್ಮರಾದ ವೀರಯ್ಯ ಹಿರೇಮಠ ಮತ್ತು ತಿರಕಪ್ಪ ಮಡಿವಾಳ ಈ ತಾಲ್ಲೂಕಿನವರು. 1914ರಲ್ಲಿ ಶಿರಹಟ್ಟಿಯಲ್ಲಿ 'ಶ್ರೀ ಮಹಾಲಕ್ಷ್ಮಿ ಪ್ರಾಸಾದಿತ ಶಿರಹಟ್ಟಿ ಕರ್ನಾಟಕ ಸಂಗೀತ ನಾಟಕ ಮಂಡಳಿ'ಯೊಂದು ಪ್ರಾರಂಭವಾಯಿತು.

ಗದಗ ಜಿಲ್ಲೆ ಸಾಹಿತ್ಯ, ಸಂಸ್ಕೃತಿಗಳ ತವರೂರು. ಪ್ರಾಚೀನ ಕಾಲದಲ್ಲಿ ದೇವಾಲಯಗಳು, ಅಗ್ರಹಾರಗಳು, ಮಠಮಾನ್ಯಗಳು ಈ ಜಿಲ್ಲೆಯ ಶೈಕ್ಷಣಿಕ ಕಾರ್ಯವನ್ನು ಕೈಗೆತ್ತಿಕೊಂಡಿದ್ದವು. ಜಾನಪದ ಸಾಹಿತ್ಯದ ತವರೂರು ಈ ಜಿಲ್ಲೆ.

ಕವಿರಾಜಮಾರ್ಗಕಾರ ಹೇಳುವ ತಿರುಳ್ಗನ್ನಡ ಈ ಪರಿಸರದ್ದು. ಆದಿಕವಿ ಪಂಪನ ಜನ್ಮಸ್ಥಳ ಅಣ್ಣಿಗೇರಿ, ಕುಮಾರವ್ಯಾಸನ ಜನ್ಮಸ್ಥಳ ಕೋಳಿವಾಡ, ಆಲೂರು ವೆಂಕಟರಾಯರ

ಪುಟ್ಟೂರು ಹೊಳೆಆಲೂರು ಈ ಜಿಲ್ಲೆಯಲ್ಲಿ ಬರುತ್ತವೆ. ಪುಲಿಗೆರೆಯ ಸೋಮೇಶ್ವರನು ಶಿವಶರಣರ ಆರಾಧ್ಯದೈವ. ಜೈನ ಕವಿಗಳಿಗೆ ಮುಳುಗುಂದ, ಲಕ್ಷ್ಮೇಶ್ವರ, ಹಾಗೂ ಲಕ್ಕುಂಡಿ ಪ್ರಮುಖ ಸ್ಥಳಗಳಾಗಿದ್ದವು.

ಲಕ್ಕುಂಡಿಯಲ್ಲಿದ್ದ ಅತ್ತಿಮಬ್ಬೆಯ ಆಶ್ರಯದಲ್ಲೇ ಮಹಾಕವಿ ರನ್ನ ತನ್ನ ಕಾವ್ಯ ರಚಿಸಿದ್ದು. ನರಗುಂದದಲ್ಲಿದ್ದ ಜೈನಕವಿ ಶ್ರೀಧರಾಚಾರ್ಯ (ಕ್ರಿ.ಶ. 1049) 'ಜಾತಕತಿಲಕಂ' ಎಂಬ ಜ್ಯೋತಿಷ್ಯಶಾಸ್ತ್ರ ಗ್ರಂಥ ರಚಿಸಿದ. ರೋಣ ತಾಲ್ಲೂಕಿನ ಸಯ್ಯಡಿ ಗ್ರಾಮದ ದುರ್ಗಸಿಂಹ (1015 ರಿಂದ 1042) ಕಲ್ಯಾಣಿ ಚಾಲುಕ್ಯ ಜಯಸಿಂಹನ ಬಳಿ ಸಂಧಿವಿಗ್ರಹಿಯಾಗಿದ್ದ. ಸಂಸ್ಕೃತದಲ್ಲಿ ವಸುಭಾಗಭಟ್ಟ ಬರೆದಿದ್ದ 'ಪಂಚತಂತ್ರ'ವನ್ನು ಇವನು ಕನ್ನಡದಲ್ಲಿ ಬರೆದಿದ್ದಾನೆ.

ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೇಶ್ವರವೇ ನಾಡೋಜ ಪಂಪ ಹೇಳಿದ ತಿರುಳ್ಗನ್ನಡದ ಬೀಡು. ಇದು ಆದಿಕವಿ ಪಂಪನಿದ್ದ ಸ್ಥಳವೂ ಹೌದು. 11ನೆಯ ಶತಮಾನದ ನಾಗದೇವ, 12ನೆಯ ಶತಮಾನದ ಆಚಣ್ಣ, ಶಿವಶರಣ ಆದಯ್ಯ, 13ನೆಯ ಶತಮಾನದ ಸೋಮ, 14ನೆಯ ಶತಮಾನದ ಸುರಂಗ ಮೊದಲಾದ ಕವಿಗಳು ಇಲ್ಲಿನವರೇ ಆಗಿದ್ದಾರೆ. ಮತ್ತೊಬ್ಬ ಜೈನಕವಿ ನಯಸೇನ ಮುಳಗುಂದದವನು. ವಚನಕಾರ್ತಿ ಮುಕ್ತಾಯಕ್ಕ ಲಕ್ಕುಂಡಿಯವಳು. ಕ್ರಿ.ಶ. 1425ರಲ್ಲಿದ್ದ ಮಹಲಿಂಗ ಪುಲಿಗೆರೆಯವ. 1500ರಲ್ಲಿದ್ದ ಸಿದ್ಧಮಲ್ಲಾರ್ಯ 'ದೇವಾಂಗ ಪುರಾಣ' ರಚಿಸಿದ್ದು ಬೆಟಗೇರಿಯುವನು. 'ಪ್ರಭುಲಿಂಗಲೀಲೆ' ಕರ್ತೃ ಚಾಮರಸ ನಾರಾಯಣಪುರದವನು. ಬೆಟಗೇರಿಯಲ್ಲಿ 1550ರಲ್ಲಿ ದಾನಪಾರ್ಯನು 'ಶಿವಸಂವಾದಿನಿ' ಎಂಬ ದ್ವಿಪದಿ ಕಾವ್ಯ ರಚಿಸಿದ್ದಾನೆ. ರುದ್ರಮುನಿಯು ಅನೇಕ ಹಾಡುಗಳನ್ನು ರಚಿಸಿದ್ದಾನೆ. ಲಕ್ಷ್ಮೇಶ್ವರದ ಮದನಕವಿ (1700) 'ಘೋರಾಸುರ ಯುದ್ಧ' ಎಂಬ ಕಾವ್ಯ ರಚಿಸಿದ್ದಾನೆ. ನರೇಗಲ್ಲಿನ ಶಿವಬಸಪ್ಪಶಾಸ್ತ್ರಿ, ಕೋಳಿವಾಡದ ಹುಲಿಗಪ್ಪ, ಗಜೇಂದ್ರಗಡದ ಗೂಳಪ್ಪ ಕೊಟ್ರಪ್ಪ ಅರಳಿ ಮೊದಲಾದವರು ವಿವಿಧ ಕೃತಿಗಳನ್ನು ರಚಿಸಿದ್ದಾರೆ. ನರಗುಂದದ ಶಿವಾಜಿ ವಿಷ್ಣುಗೋರೆ (1874) ಜಾನ್ಸನ್‌ನ 'ರಾಸ್ ಲಾಸ್' ಎಂಬ ಕಾದಂಬರಿಯನ್ನು ಅನುವಾದಿಸಿದ್ದಾನೆ. ಗದಗಿನ ಹುಯಿಲಗೋಳ ನಾರಾಯಣರಾವ್ ಕವಿಗಳಾಗಿ, ನಾಟಕಕಾರರಾಗಿ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಇವರ ಶ್ರೇಷ್ಠ ಕವನ. ಪ್ರಸಿದ್ಧ ನಾಟಕಕಾರರಾದ ಗರೂಡ ಸದಾಶಿವರಾಯರು (1884-1956) ಗದುಗಿನಲ್ಲಿದ್ದು ನಾಟಕ ಕ್ಷೇತ್ರಕ್ಕೆ ಐವತ್ತೆರಡು ಕೃತಿಗಳನ್ನು ಕೊಟ್ಟಿದ್ದಾರೆ. ಗದುಗಿನ ಅಚ್ಯುತರಾವ್ ಕೃಷ್ಣರಾವ್‌ರವರು ಹದಿನಾಲ್ಕು ಕೃತಿಗಳನ್ನು ರಚಿಸಿ ಸ್ವಾತಂತ್ರ ಚಳವಳಿಗೆ ಪ್ರೇರಣೆ ಕೊಟ್ಟಿದ್ದಾರೆ. ರೋಣ ತಾಲ್ಲೂಕಿನ ಕೋಡಿಕೊಪ್ಪ ಮಠದ ಬಸವರಾಜಶಾಸ್ತ್ರಿಗಳು (1870) ಸಂಸ್ಕೃತ ಹಾಗೂ ಕನ್ನಡದಲ್ಲಿ ಹನ್ನೆರಡು ಕೃತಿಗಳನ್ನು ರಚಿಸಿದ್ದಾರೆ. ಖ್ಯಾತ ಕತೆಗಾರರಾದ ಗೋವಿಂದಮೂರ್ತಿ ದೇಸಾಯಿಯವರು ಶಿರಹಟ್ಟಿ ತಾಲ್ಲೂಕಿನವರು. ಹೊಂಬಳದ ಗೋವಿಂದಾಚಾರ್ಯ ಭೀಮಾಚಾರ್ಯ ಜೋಷಿ (1905-1994) 'ಜಡಭರತ' ಕಾವ್ಯನಾಮದಿಂದ ಪ್ರಸಿದ್ಧರಾಗಿದ್ದು ಅನೇಕ ನಾಟಕಗಳನ್ನು ರಚಿಸಿದ್ದಾರೆ.

ಇವರಿಗೆ ಪದ್ಮಶ್ರೀ ಪ್ರಶಸ್ತಿ ದೊರಕಿದೆ. ಧಾರವಾಡದ 'ಮನೋಹರ ಗ್ರಂಥಮಾಲೆ' ಜೆ. ಬಿ. ಜೋಷಿ ಅವರ ಕೂಸು. ನಾಲ್ಕು ನೂರು ಗ್ರಂಥಗಳನ್ನು ಪ್ರಕಟಿಸಿರುವ ಈ ಪ್ರಕಾಶನ ಕನ್ನಡ ನಾಡಿಗೆ ಅತ್ಯುತ್ತಮ ಪುಸ್ತಕಗಳನ್ನು ಕೊಟ್ಟ ಹೆಗ್ಗಳಿಕೆ ಪಡೆದಿದೆ.

ಶಿರಹಟ್ಟಿಯ ಸಿ.ಎನ್. ಪಾಟೀಲ್, ಎಸ್.ಜಿ. ಗೂಳಣ್ಣನವರ್ ಹಾಗೂ ಅಣ್ಣಪ್ಪ ಮಾಸ್ತರ ಪ್ರಮುಖ ಚಿತ್ರಕಲಾವಿದರು.

ವಚನ ಸಾಹಿತ್ಯದ ಸಂರಕ್ಷಕರಾದ ಡೆಪ್ಯುಟಿ ಚನ್ನಬಸಪ್ಪ, ಬಾಂಬೆ ಕರ್ನಾಟಕ ಗೆಜೆಟಿಯರ್ ರಚಿಸಿದ ವೆಂಕಟರಂಗೋಕಟ್ಟಿ ಹಾಗೂ ಶೇಷಗಿರಿರಾವ್ ಚುರಮುರಿ ಅವರು ಈ ಭಾಗದವರು.

20ನೆಯ ಶತಮಾನದಲ್ಲಿ ಗದಗಜಿಲ್ಲೆ ಅನೇಕ ಪ್ರತಿಭಾವಂತ ಸಾಹಿತಿಗಳನ್ನು ಈ ನಾಡಿಗೆ ಕೊಟ್ಟಿದೆ. ಡಾ. ರಂ.ಶ್ರೀ. ಮುಗಳಿ, ಡಾ. ಆರ್.ಸಿ. ಹಿರೇಮಠ, ಪ್ರಹ್ಲಾದ ನರೇಗಲ್ಲ, ಎಸ್.ಎಸ್. ಭೂಸನೂರಮಠ, ವರದರಾಜ ಹುಯಿಲಗೋಳ, ಗದುಗಿನ ನಾರಾಯಣ ಕೃಷ್ಣ ಕುಲಕರ್ಣಿ, ಪಂಡರಿನಾಥಾಚಾರ್ಯ ಗಲಗಲಿ, ಖ್ಯಾತಕವಿ ಚನ್ನವೀರಕಣವಿ, ಕುವೆಂಪು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದ ಎಂ.ಆರ್. ಗಜೇಂದ್ರಗಡ, ಖ್ಯಾತ ವಿಮರ್ಶಕರಾದ ಗದುಗಿನವರಾದ ಡಾ. ಕೀರ್ತಿನಾಥ ಕುರ್ತಕೋಟಿ, ರೋಣ ತಾಲ್ಲೂಕಿನ ಇಟಗಿಯವರಾದ ಪ್ರೊ. ಬಿ.ವಿ. ಮಲ್ಲಾಪುರ, ಕುರುಡಗಿಯ ಷಡಕ್ಷರಯ್ಯ ಚಂದ್ರಯ್ಯ ಹಿರೇಮಠ, ಅದೇ ತಾಲ್ಲೂಕಿನ ವೈಜ್ಞಾನಿಕ ಕತೆಗಾರ ರಾಜಶೇಖರಯ್ಯ ಸಂಗಯ್ಯ ಭೂಸನೂರಮಠ, ರೋಣ ತಾಲ್ಲೂಕಿನ ಹತ್ತಿಮತ್ತೂರಿನ ಪ್ರೊ. ಚಂದ್ರಶೇಖರ ಪಾಟೀಲ, ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಅಬ್ಬಿಗೇರಿಯ ಪ್ರೊ. ಗಿರಡ್ಡಿ ಗೋವಿಂದರಾಜು, ಪ್ರೊ. ಸೋಮಶೇಖರ ಇಮ್ರಾಪುರ, ಮಹಮ್ಮದ್ ಆಲಿ ರಸಗೀರ, ಶಿರಹಟ್ಟಿ ತಾಲ್ಲೂಕಿನ ಬಟ್ಟೂರ ಗ್ರಾಮದ ವೀರಭದ್ರಪ್ಪ, ಲೋಕಗೌಡಪಾಟೀಲ, ಅಳಗುಂಡಿಯ ಅನ್ನದಾನಯ್ಯ ಮೊದಲಾದ ಅನೇಕ ಸಾಹಿತ್ಯ ಪುರುಷರನ್ನು ನೆನೆಯಬಹುದು.

ಗದಗ ಸ್ವಾಭಿಮಾನದ ಜಿಲ್ಲೆ. ನರಗುಂದ ಬಂಡಾಯ ಹಾಗೂ ಮುಂಡರಗಿ ಭೀಮರಾಯನ ಸಶಸ್ತ್ರ ಹೋರಾಟದಿಂದ ಪ್ರಾರಂಭವಾದ ಭಾರತದ ಸ್ವಾತಂತ್ರ ಹೋರಾಟದಲ್ಲಿ ಈ ಜಿಲ್ಲೆ ಪರಾಕಾಷ್ಠೆಯನ್ನು ಮುಟ್ಟಿತ್ತು. ಮೈಲಾರ ಮಹದೇವಪ್ಪನವರಂತಹ ಪುಣ್ಯಪುರುಷರು ಓಡಾಡಿದ ಸ್ಥಳವಿದು.

ಬಾಲಗಂಗಾಧರ ತಿಲಕರ 'ಕೇಸರಿ' ಪತ್ರಿಕೆಯ ಪ್ರಭಾವದಿಂದ ಕಳೆದ ಶತಮಾನದಲ್ಲೇ ಸ್ವಾತಂತ್ರ ಹೋರಾಟ ಪ್ರಾರಂಭವಾಯಿತು. 1907ರಲ್ಲಿ ಸುರತ್ಕಲ್‌ನಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನಕ್ಕೆ ಈ ಜಿಲ್ಲೆಯಿಂದ ಆಲೂರು ವೆಂಕಟರಾಯರು ಹೋಗಿದ್ದರು. ಲೋಕಮಾನ್ಯ ತಿಲಕರ ವಿಚಾರಗಳಿಗ ಬೆಂಬಲ ನೀಡಿದರು. 1916ರಲ್ಲಿ ತಿಲಕರ ಸ್ವದೇಶಿ ಚಳವಳಿಗೆ ಈ ಜಿಲ್ಲೆಯಿಂದ ಅನೇಕ ಯುವಕರು ಭಾಗವಹಿಸಿದ್ದರು. 1934ರಲ್ಲಿ ಮಹಾತ್ಮಗಾಂಧೀಜಿ ಈ ಜಿಲ್ಲೆಯ ರೋಣ ತಾಲ್ಲೂಕಿಗೆ ಭೇಟಿ ಕೊಟ್ಟಿದ್ದರು. ಸ್ವಾತಂತ್ರ ಪೂರ್ವದ ಜನನಾಯಕರೆಂದರೆ

ಆಲೂರು ವೆಂಕಟರಾಯರು, ಗದಗಿನ ಅನಂತರಾವ್ ಜಾಲಿಹಾಳ, ಡಾ. ವೆಂಕಟರಾವ್ ಹುಯಿಲಗೋಳ, ಡಾ. ವಾಸುದೇವರಾವ್ ಡಂಬಳ ವಕೀಲರು, ಜಕ್ಕಲಿಯ ಅಂದಾನಪ್ಪ ದೊಡ್ಡಮೇಟಿ, ಬಾಸ್ಲಾಪುರದ ಆರ್.ಎಸ್. ಕುಲಕರ್ಣಿ, ಗದುಗಿನ ಮಳಗಿ ಬಂಧುಗಳು, ಮಾಧವನಾರಾಯಣ ಶಿರಹಟ್ಟಿ, ಡಾ. ಜಿ.ವಿ. ಹುಲಗಿ, ಶಿವಬಸಪ್ಪ ನೆಲ್ಲೂರ, ವೆಂಕಣ್ಣಾಚಾರ್ಯ ಜೋಷಿ, ಎಂ.ಎಸ್. ಶಿರಹಟ್ಟಿ ನರಗುಂದ, ಶಿವಪ್ಪ ನೆಲ್ಲೂರ ಮುಂತಾದವರು ತಟಕ್ಕನೆ ಜ್ಞಾಪಕಕ್ಕೆ ಬರುತ್ತಾರೆ.

ಸ್ವಾತಂತ್ರ್ಯನಂತರ ಈ ಜಿಲ್ಲೆಯ ವ್ಯಾಪ್ತಿಗೆ ಐದು ವಿಧಾನಸಭಾ ಕ್ಷೇತ್ರಗಳು ಬರುತ್ತವೆ. ಅವುಗಳಲ್ಲಿ ಜನಮನ್ನಣೆ ಗಳಿಸಿದ ನಾಯಕರೆಂದರೆ ರೋಣ ಕ್ಷೇತ್ರದ ಎ.ಜಿ. ದೊಡ್ಡಮೇಟಿ ಅಂದಾನಗೌಡ, ವೀರನಗೌಡ ಪಾಟೀಲ, ಮತ್ತಿಕಟ್ಟೆ ವೀರಭದ್ರಪ್ಪ ಅಡಿವೆಪ್ಪ, ಜೆ.ಎಸ್. ದೊಡ್ಡಮೇಟಿ, ಜಿ.ಎಸ್. ಪಾಟೀಲ ಹಾಗೂ ಶ್ರೀಶೈಲಪ್ಪ ಬಿದನೂರು, ನರಗುಂದ ವಿಧಾನಸಭಾ ಕ್ಷೇತ್ರದ ಎ.ಎಸ್. ಪಾಟೀಲ, ಆರ್.ವಿ. ದೊಡ್ಡಮನಿ, ವೈ.ವಿ. ಜೋಗಣ್ಣನವರ್, ಬಿ.ಆರ್. ಪಾಟೀಲ, ಹಾಗೂ ಬಿ.ಆರ್. ಯಾವಗಲ್, ಗದಗ ವಿಧಾನಸಭಾ ಕ್ಷೇತ್ರದಿಂದ ಡಾ. ಕೆ.ಪಿ. ಗದಗ, ಕೆ.ಹೆಚ್. ಪಾಟೀಲ, ಸಿ.ಎಸ್. ಮುತ್ತಿನಪೆಂಡಿಮಠ ಹಾಗೂ ಡಿ.ಆರ್. ಪಾಟೀಲ, ಮುಂಡರಗಿ ಕ್ಷೇತ್ರದಿಂದ ಸಿ.ಎಸ್. ಹುಲಿಕೋಟೆ, ಸಿ.ಎಂ. ಚುರ್ಚಿ ಹಾಳುಮಠ, ಕೆ.ಹೆಚ್. ಕುರುಡಗಿ, ವಿ.ಬಿ. ಭಾವಿ, ಡಾ. ಎನ್.ಎಸ್. ಹುಂಬರವಾಡಿ ಹಾಗೂ ಎಸ್.ಎಸ್. ಪಾಟೀಲ, ಶಿರಹಟ್ಟಿ ವಿಧಾನಸಭಾ ಕ್ಷೇತ್ರದಿಂದ ಶ್ರೀಮತಿ ಲೀಲಾವತಿ ಮಾಗಡಿ, ಕೆ.ಎಸ್. ವೀರಯ್ಯ, ಎಸ್.ವಿ. ಕಾಶೀಮಠ, ವಿ.ಪಿ. ವಾಯಿ, ಜಿ.ಎಸ್. ಉಪನಾಳ, ಟಿ.ಬಿ. ಬಾಳಿಕಾಯಿ ಹಾಗೂ ಜಿ.ಎಸ್. ಗುಡ್ಡದೇವರಮಠ ಅವರುಗಳು ಆಯ್ಕೆಯಾಗಿದ್ದಾರೆ.

ಗದಗ ಜಿಲ್ಲೆಯ ಪ್ರಭಾವೀ ನಾಯಕರಲ್ಲಿ ಪ್ರಸ್ತುತ ಬೃಹತ್ ನೀರಾವರಿ ಸಚಿವರಾದ ಹೆಚ್.ಕೆ. ಪಾಟೀಲರನ್ನು ಮರೆಯುವಂತಿಲ್ಲ. ನಾಲ್ಕು ಸಲ ಪದವೀಧರರ ಕ್ಷೇತ್ರದಿಂದ ಆಯ್ಕೆಯಾದ ಅವರು ವಿರೋಧ ಪಕ್ಷದ ನಾಯಕರಾಗಿ ಹಾಗೂ ಸಚಿವರಾಗಿ ರಾಜ್ಯದ ರಾಜಕೀಯ ಕ್ಷೇತ್ರದಲ್ಲಿ ಸಾಕಷ್ಟು ಪ್ರಭಾವಶಾಲಿಗಳಾಗಿದ್ದಾರೆ.

## ಉಪ್ಪಾರ ಸಮಾಜ

ನೂತನ ಜಿಲ್ಲೆ ಗದಗನಲ್ಲಿ ಉಪ್ಪಾರರ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುತ್ತಿಲ್ಲ. ಆ ಜಿಲ್ಲೆಯ ಸರ್ವೆಕಾರ್ಯ ಸಮರ್ಪಕವಾಗಿ ನಡೆದಿಲ್ಲ. ಆದರೆ ಮೇಲ್ನೋಟಕ್ಕೆ ಐದು ತಾಲ್ಲೂಕುಗಳಲ್ಲಿ 1.850 ಉಪ್ಪಾರ ಕುಟುಂಬಗಳಿವೆಯೆಂದೂ, 10,678 ಜನರಿದ್ದಾರೆಂದೂ ಹೇಳಲಾಗಿದೆ. ಅದರಲ್ಲಿ ಪುರುಷರು 5,472 ಹಾಗೂ ಮಹಿಳೆಯರು 5,206.

ರೋಣ ತಾಲ್ಲೂಕಿನಲ್ಲಿ ಶಾಂತಗಿರಿ, ರುದ್ರಾಪೂರ, ಗುಳಗುಳಿ, ಮುಗಳಿ, ಕಳ್ಳಿಹಾಲ, ಸೂಡಿ, ನರೇಗಲ್, ಮುಶಿಗೇರಿ, ವೀರಾಪೂರ, ಉಣಚಗೇರಿ, ಹೊಸಹಳ್ಳಿ, ರೋಣ,

ಮಲ್ಲಾಪೂರ, ಜಿಗಳೂರ, ಅಬ್ಬಿಗೇರಿ, ಹೊಳೆಆಲೂರ, ಬೆಳವಣಕಿ ಹಾಗೂ ಚಿಲ್‌ಝರಿ ಮೊದಲಾದೆಡೆ 648 ಉಪ್ಪಾರ ಕುಟುಂಬಗಳಿದ್ದು 3892 ಜನರಿದ್ದಾರೆ.

ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೇಶ್ವರ, ಬಟ್ಟೂರ, ಕುಂದ್ರಳ್ಳಿ, ಒಕ್ಕರಗುಂದಿ, ಗೋಜನೂರ, ಮಾಗಡಿ ಹಾಗೂ ಮಲ್ಲಾಪೂರ ಮೊದಲಾದ ಗ್ರಾಮಗಳಲ್ಲಿ 140 ಉಪ್ಪಾರ ಕುಟುಂಬಗಳನ್ನು ಗುರುತಿಸಲಾಗಿದ್ದು ಅದರಲ್ಲಿ 922 ಜನರಿದ್ದಾರೆಂದು ಹೇಳಲಾಗಿದೆ.

ಮುಂಡರಗಿ ತಾಲ್ಲೂಕಿನ ಡಂಬಳ, ಹಿರೇವಡ್ರಟ್ಟಿ, ತಾಮ್ರಗುಂಡಿ, ಜಾಲವಾಡಗಿ, ಮುಂಡರಗಿ, ರಾಮೇನಹಳ್ಳಿ, ಶಿರೋಳ, ಬೆನ್ನಿಹಳ್ಳಿಮುಕ್ತುಂಪೂರ, ಬರದೂರ, ಮೇವುಂಡಿ ಹಾಗೂ ಪೇಠಾಆಲೂರ ಮೊದಲಾದ ಗ್ರಾಮಗಳಲ್ಲಿ 4,214 ಉಪ್ಪಾರರಿದ್ದು 460 ಕುಟುಂಬಗಳಿವೆಯೆಂದು ಹೇಳಲಾಗಿದೆ.

ನರಗುಂದ ತಾಲ್ಲೂಕಿನ ನರಗುಂದ, ಕೊಣ್ಣೂರ ಮೊದಲಾದ ಕಡೆ 44 ಉಪ್ಪಾರ ಕುಟುಂಬಗಳಿವೆ. ಅವುಗಳಲ್ಲಿ 264 ಜನರಿದ್ದಾರೆಂದು ತಿಳಿದುಬಂದಿದೆ.

ಗದಗ ತಾಲ್ಲೂಕಿನ ಗದಗ, ಹುಲಿಕೋಟೆ, ಹಿರೇಕೊಪ್ಪ, ಹೊಂಬಳ, ಕಿರಟಗೇರಿ, ಬೆಳವಡಿ, ಹುಯಿಲಗೋಳ ಮೊದಲಾದೆಡೆ 108 ಉಪ್ಪಾರ ಮನೆಗಳನ್ನು ಗುರುತಿಸಲಾಗಿದೆ. ಅದರಲ್ಲಿ 602 ಜನರು ವಾಸವಾಗಿದ್ದಾರೆ.

ಗದಗ ಜಿಲ್ಲೆ ಈಗ ತಾನೇ ರೂಪುಗೊಂಡಿದ್ದು ಮತ್ತಷ್ಟು ಕ್ಷೇತ್ರ ಕಾರ್ಯ ಈ ಜಿಲ್ಲೆಯಲ್ಲಿ ನಡೆಯಬೇಕಾಗಿದೆ.

ಗದಗ ಜಿಲ್ಲೆಯಲ್ಲಿನ ಉಪ್ಪಾರರನ್ನು 'ಉಪ್ಪಾರರು', 'ಮೇಲು ಸಕ್ಕರೆಯವರು', 'ಸಗರ ವಂಶಸ್ಥರು' ಮೊದಲಾದ ಉಪನಾಮಗಳಿಂದ ಕರೆಯಲಾಗುತ್ತಿದೆ. ಈ ಜಿಲ್ಲೆಯ ಉಪ್ಪಾರರು ಮೂಲತಃ ಶ್ರಮಜೀವಿಗಳು. ವ್ಯವಸಾಯ ಇವರ ಪ್ರಮುಖ ಜೀವನಾಧಾರ ವೃತ್ತಿ. ಸಣ್ಣ ಕೃಷಿಗಾರರ ಸಂಖ್ಯೆ ಯಥೇಚ್ಛವಾಗಿದೆ. ಎರಡು ಎಕರೆ ಜಮೀನು ಹೊಂದಿರುವವರ ಸಂಖ್ಯೆ ಹೆಚ್ಚಾಗಿದೆ. ಕೃಷಿ ಕಾರ್ಮಿಕರು ಶೇ. 40 ರಷ್ಟು ಉಪ್ಪಾರ ಸಮುದಾಯದಲ್ಲಿದ್ದಾರೆಂದು ಹೇಳಲಾಗಿದೆ. ಪ್ರಸ್ತುತ ಗದಗ ಜಿಲ್ಲೆಯಲ್ಲಿರುವ ಉಪ್ಪಾರರಲ್ಲಿ ನೂರರಲ್ಲಿ ಒಬ್ಬ ದೊಡ್ಡ ಜಮೀನುದಾರರನ್ನು ಕಾಣಲು ಸಾಧ್ಯವಿಲ್ಲ.

ಉಪ್ಪಾರರು ಕೈಗೊಂಡ ಮತ್ತೊಂದು ಪ್ರಮುಖ ವೃತ್ತಿ ಗೌಂಡಿ ಕೆಲಸ. ಅಂದರೆ ಕಟ್ಟಡ ನಿರ್ಮಾಣ. ಮೇಸ್ತ್ರೀ ಹಾಗೂ ಕೂಲಿ ಕಾರ್ಮಿಕ ವೃತ್ತಿಯನ್ನು ನಗರ ಪ್ರದೇಶದಲ್ಲಿರುವ ಉಪ್ಪಾರರು ಆಶ್ರಯಿಸಿದ್ದಾರೆ.

ತಾಲ್ಲೂಕು ಹಾಗೂ ಹೋಬಳಿ ಮಟ್ಟದಲ್ಲಿ ಉಪ್ಪಾರರು ತರಕಾರಿ, ಸುಣ್ಣ, ವೀಳೇದೆಲೆ ಮೊದಲಾದ ಸಣ್ಣ ಪುಟ್ಟ ವ್ಯಾಪಾರ ಮಾಡಿಕೊಂಡು ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಉಪ್ಪಾರರ ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 30 ಎಂದು ನಿರ್ಣಯಿಸಲಾಗಿದೆ. ಅದರಲ್ಲಿ ಮಹಿಳೆಯ ಸಾಕ್ಷರತೆಯ ಪ್ರಮಾಣ ಶೇ. 25 ಎಂದು ದಾಖಲಿಸಲಾಗಿದೆ.

ಸರ್ಕಾರಿ ವೃತ್ತಿಯಲ್ಲಿ ಉಪ್ಪಾರರ ಸಂಖ್ಯೆ ಗಣನೀಯ ಪ್ರಮಾಣದಲ್ಲಿಲ್ಲ. ಹಿರಿಯ ಅಧಿಕಾರಿಗಳನ್ನು ಈ ಸಮಾಜದಲ್ಲಿ ಕಾಣಲು ಸಾಧ್ಯವೇ ಇಲ್ಲ. ಅಲ್ಲಲ್ಲಿ ಒಂದಿಬ್ಬರು ಅಧಿಕಾರಿಗಳನ್ನು ಗುರುತಿಸಬಹುದು.

ರೋಣ ತಾಲ್ಲೂಕಿನವರಾದ ಪ್ರಭಾಕರ ಹೆಚ್. ಚಿಣಿ ಯುವಕರಾಗಿದ್ದು ಲೋಕೋಪಯೋಗಿ ಇಲಾಖೆಯಲ್ಲಿ ಕಾರ್ಯನಿರ್ವಾಹಕ ಇಂಜಿನಿಯರ್ ಆಗಿದ್ದಾರೆ. ಸಮಾಜಸೇವೆ ಹಾಗೂ ಆದರ್ಶಗಳನ್ನು ಹವ್ಯಾಸವಾಗಿ ಹೊಂದಿರುವ ಇವರಿಂದ ಸಮಾಜ ಹೆಚ್ಚಿನದನ್ನು ನಿರೀಕ್ಷೆ ಮಾಡಬಹುದು. ತಮ್ಮ ಹುಟ್ಟೂರಾದ ಮುಶಿಗೇರಿಯಲ್ಲಿ ಸಮುದಾಯ ಭವನವನ್ನು ನಿರ್ಮಿಸಿದ್ದು, ಸಾಮೂಹಿಕ ಮದುವೆ ಇತ್ಯಾದಿ ಕಲ್ಯಾಣ ಕಾರ್ಯಗಳನ್ನು ಮಾಡುತ್ತಿದ್ದಾರೆ. ಪ್ರತಿ ವರ್ಷ ಮುಶಿಗೇರಿಯಲ್ಲಿ ಭಗೀರಥ ಜಯಂತಿಯನ್ನು ಆಚರಿಸುತ್ತಿದ್ದಾರೆ.

ಇದೇ ತಾಲೂಕಿನ ಗುಳಗುಳಿಯ ದೇವೇಂದ್ರ ದೇಸಾಯಿ ಸಹಕಾರಿ ಇಲಾಖೆಯಲ್ಲಿ ಜಂಟಿ ರಿಜಿಸ್ಟ್ರಾರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ.

ಗದಗ ಜಿಲ್ಲೆಯ ಉಪ್ಪಾರರ ವಿವರ ಈ ರೀತಿಯಿದೆ : ಗದಗಿನ ಹನುಮಂತಪ್ಪ, ಗದಗ ನಗರಸಭಾ ಸದಸ್ಯರು ಹಾಗೂ ವ್ಯಾಪಾರಸ್ಥರು. ರಾಜು ಗಮಾನಿ ಮತ್ತೊಬ್ಬ ವ್ಯಾಪಾರಸ್ಥರು. ಗದಗಿನ ಪ್ರೊ. ಅಂತರಗಟ್ಟಿ ದಾಖಲಿಸಬೇಕಾದವರಾಗಿದ್ದಾರೆ.

ಮುಂಡರಗಿಯ ಎಪಿಎಂಸಿಯ ಅಧ್ಯಕ್ಷರು ಎಲ್.ಬಿ. ಉಪ್ಪಾರ, ಬಸವರಾಜ ಹ. ರಾಟಿ ವಕೀಲರು, ರಾಜ್ಯಮಟ್ಟದ ಆದರ್ಶ ಶಿಕ್ಷಕರಾದ ದೇವರಾಜ ಸಿರಾಟಿ, ಬೆನ್ನಹಳ್ಳಿ ಗ್ರಾಮ ಪಂಚಾಯತ್ ಸದಸ್ಯರಾದ ದೇವಪ್ಪ ಸಣ್ಣಹನುಮಪ್ಪತಳ್ಳಿ, ಮುಕುಲಪುರ ಗ್ರಾಮ ಪಂಚಾಯತ್‌ನ ಸದಸ್ಯರಾದ ಶಿವನಗೌಡ ಹ. ಪಾಟೀಲ, ಇದೇ ಗ್ರಾಮ ಪಂಚಾಯತ್‌ನ ಸದಸ್ಯರಾದ ರಾಮಪ್ಪ ತಿ. ಉಪ್ಪಾರ ಹಾಗೂ ಲಕ್ಷ್ಮಪ್ಪ ಮು. ಲಕ್ಕುಂಡಿ ಹಾಗೂ ಮುಂಡರಗಿಯಲ್ಲಿ ವಕೀಲರಾದ ಹನಮಪ್ಪ ಸಣ್ಣನಿಂಗಪ್ಪ ಇಟಗಿ ಇವರುಗಳು ಉಪ್ಪಾರ ಜನಾಂಗದ ಪ್ರಮುಖ ವ್ಯಕ್ತಿಗಳಾಗಿದ್ದಾರೆ.

ನರಗುಂದದ ಮಾಜಿ ಪ್ರಾಂಶುಪಾಲರಾದ ಸಂಗಪ್ಪ ಬಾ. ಕುಷ್ಟಗಿ ಅವರನ್ನು ನೆನೆಯಬೇಕು.

ಶಿರಹಟ್ಟಿ ಜಮೀನ್ದಾರರಾದ ಫಕೀರಪ್ಪ ವೆಂ ಕೋನಿಸಾಗರ ಹಾಗೂ ಕೆಎಸ್‌ಆರ್‌ಟಿಸಿಯಲ್ಲಿ ಸಹಾಯಕ ಡಿಪೋ ಮ್ಯಾನೇಜರ್ ಶಿವಾನಂದ ಫ ಕೋನಿಸಾಗರ ಉಪ್ಪಾರ ಸಮಾಜದಲ್ಲಿ ಗಣ್ಯರೆನಿಸಿಕೊಂಡಿದ್ದಾರೆ.

ರೋಣ ತಾಲ್ಲೂಕಿನ ಮುಶಿಗೇರಿ ಗ್ರಾಮ ಪಂಚಾಯತ್‌ನ ಮಾಜಿ ಸದಸ್ಯರಾದ ಶ್ರೀಕಾಂತ ಕ. ಚಿಣಿ, ಗ್ರಾಮ ಪಂಚಾಯತ್‌ನ ಸದಸ್ಯರಾದ ಶ್ರೀಮತಿ ಶರಣವ್ವ ಪ. ಗುಡ್ಡಗದ್ದಿ ಮಂಡಲ ಪಂಚಾಯ್ತಿ ಮಾಜಿ ಸದಸ್ಯರಾದ ಶ್ರೀಮತಿ ಗೌರವ್ವ ಭಿ. ಚಿಣಿ, ಮುಶಿಗೇರಿ ಭಗೀರಥ ಉಪ್ಪಾರ ಸಂಘದ ಅಧ್ಯಕ್ಷರಾದ ಮಲ್ಲಪ್ಪ ಬ. ಚಿಣಿ, ಆಯುರ್ವೇದ ವೈದ್ಯರಾದ ಡಾ. ಸುಭಾಷ್ ಮಾಲಗಿತ್ತಿ, ಜಮೀನ್ದಾರ ಮಲ್ಲಪ್ಪ ಚಿಣಿ, ಭಗೀರಥ ಉಪ್ಪಾರ ಸಂಘದ

ಹಿರಿಯ ಸಲಹೆಗಾರ ಹನಮಂತಪ್ಪ ಬ. ಚಿಣಿ, ಅತ್ಯುತ್ತಮ ಕಂಡಕ್ಟರ್ ಪ್ರಶಸ್ತಿ ಗಳಿಸಿರುವ ಶಶಿಧರ. ಹ. ಕೊಡಕೇರಿ, ನಿವೃತ್ತ ಶಿಕ್ಷಕರೂ ಹಾಗೂ ಸಮಾಜ ಸೇವಕರಾದ ಶ್ಯಾ.ಸಿ. ಕಾಮಣ್ಣನವರ, ಎಂಜಿನಿಯರ್ ಪದವೀಧರರಾದ ನರಸಪ್ಪ ಬಾ. ಸೂಳೆಬಾವಿ ಹಾಗೂ ಕೆಎಸ್‌ಎಫ್‌ಸಿಯ ನೌಕರರಾದ ಮಲ್ಲಪ್ಪ ಹ. ಚಿಣಿ. ಎಕ್ಸಿಕ್ಯೂಟಿವ್ ಇಂಜನಿಯರ್ ಪ್ರಭಾಕರ್ ಹ. ಚಿಣಿ ಮುಂತಾದವರು ಉಪ್ಪಾರ ಸಮುದಾಯದ ಪ್ರಮುಖ ವ್ಯಕ್ತಿಗಳಾಗಿದ್ದಾರೆ.

ರೋಣ ತಾಲ್ಲೂಕಿನ ರುದ್ರಾಪುರದ ಗ್ರಾಮ ಪಂಚಾಯಿತಿ ಸದಸ್ಯರಾದ ಚಂದ್ರಶೇಖರ ಮ. ಚಿಣಿ ಮಾಜಿ ಪ್ರಿನ್ಸಿಪಾಲರು ಹಾಗೂ ರೋಣ ತಾಲ್ಲೂಕಿನ ಉಪ್ಪಾರ ಸಂಘದ ಅಧ್ಯಕ್ಷರಾದ ಶಿವನಪ್ಪ ಚಂ. ಚಿಣಿ ಹಾಗೂ ಆಯುರ್ವೇದ ವೈದ್ಯರಾದ ಡಾ. ಚಂದ್ರಶೇಖರ ದೇಸಾಯಿ ಈ ಸಮಾಜದ ಪ್ರಮುಖ ವ್ಯಕ್ತಿಗಳಾಗಿದ್ದಾರೆ.

ಶಾಂತಗೇರಿಯ ಆದರ್ಶ ಶಿಕ್ಷಕರಾದ ಮಲ್ಲಪ್ಪ ತುಗ್ಗಣಿ, ಅದೇ ಗ್ರಾಮದ ಹಲಗಿ ಮಜಲು ತಂಡದ ಹನುಮಂತಪ್ಪ ಬ. ತುಗ್ಗಣಿ ಅವರುಗಳು ಉಪ್ಪಾರ ಜನಾಂಗದ ಪ್ರಮುಖ ವ್ಯಕ್ತಿಗಳಾಗಿದ್ದಾರೆ.

ಇವರುಗಳ ಜೊತೆ ಕೆಲವು ಸಣ್ಣಪುಟ್ಟ ಸರ್ಕಾರಿ ನೌಕರಿಯನ್ನು ಆಶ್ರಯಿಸಿರುವ ಹತ್ತಾರು ಉಪ್ಪಾರ ವ್ಯಕ್ತಿಗಳನ್ನು ಈ ಜಿಲ್ಲೆಯಲ್ಲಿ ಕಾಣಬಹುದು.

ಗದಗ ಜಿಲ್ಲೆಯಲ್ಲಿ ಉಪ್ಪಾರ ಸಮಾಜಕ್ಕೆ ಸಂಬಂಧಪಟ್ಟ ಯಾವುದೇ ವಿದ್ಯಾರ್ಥಿನಿಲಯಗಳಿಲ್ಲ. ಆ ಸಮುದಾಯ ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳಿಲ್ಲ.

ಧಾರವಾಡ ಜಿಲ್ಲೆಯಿಂದ ಬೇರೆಯಾಗಿರುವ ಗದಗ ಜಿಲ್ಲೆಯಲ್ಲಿ ಉಪ್ಪಾರರ ಸಂಘಟನೆ ಕೆಳಹಂತದಿಂದ ಪ್ರಾರಂಭವಾಗಬೇಕಾಗಿದೆ. ಜಿಲ್ಲೆಯ ಎಲ್ಲ ತಾಲ್ಲೂಕಿನ ಹಳ್ಳಿಗಳಲ್ಲೂ ಮನೆ ಮನೆ ಸರ್ವೆಮಾಡಿ ಜನಾಂಗದ ನಿರ್ದಿಷ್ಟ ಸಂಖ್ಯೆಯನ್ನು ಅರಿತುಕೊಳ್ಳಬೇಕಾಗಿದೆ.

ಗ್ರಾಮದ ಉಪ್ಪಾರ ಸಮುದಾಯದ ನೈಜ ಆರ್ಥಿಕ ಪರಿಸ್ಥಿತಿಯನ್ನು ಅಧ್ಯಯನ ಮಾಡಬೇಕಾಗಿದೆ. ಅವರ ಮಕ್ಕಳ ವ್ಯಾಸಂಗಕ್ಕೆ ಇರುವ ಅಡೆತಡೆಗಳಾವುವು ಎಂಬುದು ಅಧ್ಯಯನ ವಸ್ತುವಾಗಬೇಕಾಗಿದೆ. ವಿಶೇಷವಾಗಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಆದ್ಯತೆ ಕೊಡುವ ಅವಶ್ಯಕತೆಯಿದೆ.

ಉಪ್ಪಾರ ಜನಾಂಗದ ಮಕ್ಕಳು ವಿದ್ಯಾಭ್ಯಾಸವನ್ನು ಅರ್ಧದಲ್ಲೇ ತೊರೆದು ಹೋಗುತ್ತಿರುವ ಸಂಗತಿ ಆತಂಕಕಾರಿ ವಿಚಾರ. ಈ ಬಗ್ಗೆ ಶಿಕ್ಷಣ ತಜ್ಞರೂ ಹಾಗೂ ಸಮಾಜದ ಮುಖಂಡರು ಚಿಂತಿಸಬೇಕಾಗಿದೆ.

ಕೇಂದ್ರ ಉಪ್ಪಾರ ಸಂಘ ಹೊಸದಾಗಿ ರೂಪಿತವಾದ ಜಿಲ್ಲೆಗಳಲ್ಲಿ ಸರ್ಕಾರದ ಮೂಲಕ ನಿವೇಶನ ಪಡೆದು ವಿದ್ಯಾರ್ಥಿ ವಸತಿ ನಿಲಯ ನಿರ್ಮಿಸಬೇಕು. ಸರ್ಕಾರದ ಅನೇಕ ಯೋಜನೆಗಳಲ್ಲಿ ಅಂದರೆ ಉಚಿತ ನಿವೇಶನ ಹಂಚಿಕೆ, ಡಾ॥ ಅಂಬೇಡ್ಕರ್ ವಸತಿ ಯೋಜನೆ, ಆಶ್ರಯ ಹಾಗೂ ಇಂದಿರಾ ಆವಾಸ್ ಯೋಜನೆಗಳ ಪ್ರತಿಫಲ ಇವರಿಗೆ ಎಷ್ಟರಮಟ್ಟಿಗೆ

ದೊರಕಿರಬಹುದೆಂಬುದು ಪರಿಶೀಲನೆಗೆ ಅರ್ಹವಾದ ವಿಚಾರ. ಚಿನ್ನಪ್ಪರೆಡ್ಡಿ ಆಯೋಗ ಉಪ್ಪಾರರನ್ನು ಪ್ರವರ್ಗ I ರಲ್ಲಿ ಸೇರಿಸಿ ಪರಿಶಿಷ್ಟ ಜಾತಿಗೆ ದೊರೆಯುವ ಎಲ್ಲಾ ಶೈಕ್ಷಣಿಕ ಸೌಲಭ್ಯವನ್ನೂ ಈ ಸಮುದಾಯಕ್ಕೆ ವಿಸ್ತರಿಸಿದೆ. ಅದು ಎಷ್ಟರಮಟ್ಟಿಗೆ ತಲುಪಿದೆ ಎಂಬುದು ಪರಿಶೀಲನಾರ್ಹವಾದ ವಿಚಾರ. ಅಂದರೆ ಉಪ್ಪಾರ ಸಮುದಾಯದ ಕಷ್ಟಸುಖಗಳನ್ನು ಅರಿತುಕೊಳ್ಳಲು ರಾಜ್ಯ ಉಪ್ಪಾರ ಸಂಘದ ನಾಯಕರು ಹಾಗೂ ಜಿಲ್ಲಾ ನಾಯಕರೂ ದೃಢಸಂಕಲ್ಪ ಮಾಡಬೇಕು. ವರ್ಷಕ್ಕೊಮ್ಮೆ 'ಭಗೀರಥ ಜಯಂತಿ' ಆಚರಣೆಯ ಸಂದರ್ಭದಲ್ಲಿ ಈ ಸಮುದಾಯದ ಜನ ಒಂದೆಡೆ ಕಲೆತು ತಮ್ಮ ಕಷ್ಟಸುಖಗಳನ್ನು ಪರಸ್ಪರ ಹಂಚಿಕೊಳ್ಳಬೇಕು. ಹೀಗೆ ಸಮಾವೇಶಗೊಳ್ಳುವುದರಿಂದ ಸಮಾಜದ ಬೇರೆ ಬೇರೆ ಜನಾಂಗಕ್ಕೂ ಉಪ್ಪಾರರ ಸ್ಥಿತಿಗತಿ ತಿಳಿಯುತ್ತದೆ. ಅವರೂ ಸಹ ಈ ಸಮುದಾಯದ ಏಳಿಗೆಯ ಬಗ್ಗೆ ಸಕಾರಾತ್ಮಕ ನಿಲುವು ತಳೆಯುತ್ತಾರೆ. ರೋಣ ತಾಲ್ಲೂಕಿನಲ್ಲಿ ಪ್ರಭಾಕರ ಚಿಣಿ ಈ ಬಗ್ಗೆ ಕಾರ್ಯೋನ್ಮುಖರಾಗಿದ್ದಾರೆ. ಅವರ ಕಾರ್ಯಕ್ಷೇತ್ರ ಗದಗ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಗೂ ವಿಸ್ತಾರಗೊಳ್ಳಬೇಕೆಂಬುದು ಈ ಸಮುದಾಯದ ಹಿರಿಯರ ಅಪೇಕ್ಷೆ.

**ಮಾಹಿತಿಸಂಗ್ರಹ : *ಪ್ರಭಾಕರ ಹೆಚ್. ಚಿಣಿ***

*




# * ಧಾರವಾಡ ಜಿಲ್ಲೆ

## ಐತಿಹಾಸಿಕ ಹಿನ್ನೋಟ

1997ರ ಜಿಲ್ಲಾ ಪುನರ್‌ವಿಂಗಡಣೆಯಿಂದಾಗಿ ಧಾರವಾಡ ಜಿಲ್ಲೆ ತನ್ನ ಬಹುಭಾಗವನ್ನು ಕಳೆದುಕೊಂಡಿದೆ. ಪುನರ್ ವಿಂಗಡಣೆಯ ಪರಿಣಾಮವಾಗಿ ಗದಗ, ನರಗುಂದ, ರೋಣ, ಮುಂಡರಗಿ ಮತ್ತು ಶಿರಹಟ್ಟಿ ತಾಲ್ಲೂಕುಗಳನ್ನೊಳಗೊಂಡು ಗದಗ ಜಿಲ್ಲೆ, ಹಾವೇರಿ, ಹಾನಗಲ್ಲು, ಶಿಗ್ಗಾಂವ್, ಸವಣೂರು, ಬ್ಯಾಡಗಿ, ರಾಣೆಬೆನ್ನೂರು ಮತ್ತು ಹಿರೇಕೆರೂರುಗಳನ್ನೊಳಗೊಂಡು ಹಾವೇರಿ ಜಿಲ್ಲೆಗಳು ಜನ್ಮ ತಾಳಿವೆ. ಪ್ರಸ್ತುತ ಧಾರವಾಡ ಜಿಲ್ಲೆಯಲ್ಲಿ ಧಾರವಾಡ, ಕಲಘಟಗಿ, ಹುಬ್ಬಳ್ಳಿ, ನವಲಗುಂದ ಮತ್ತು ಕುಂದಗೋಳ ತಾಲ್ಲೂಕುಗಳು ಮಾತ್ರ ಉಳಿದಿವೆ. ಜಿಲ್ಲೆಯ ಮುಖ್ಯ ನದಿಗಳಾದ ತುಂಗಭದ್ರಾ, ವರದಾ, ಮಲಪ್ರಭಾ ಇತ್ಯಾದಿಗಳು ಈಗ ಧಾರವಾಡ ಜಿಲ್ಲೆಯಲ್ಲಿ ಇಲ್ಲ. ಧಾರವಾಡ ಜಿಲ್ಲೆಯಲ್ಲಿ ಈಗ ಬೆಣ್ಣೆಹಳ್ಳ ಮತ್ತು ಬೇಡತಿಹಳ್ಳಗಳು ಮಾತ್ರ ಇವೆ. ಧಾರವಾಡವು ರಾಜ್ಯದ ರಾಜಧಾನಿಯಿಂದ 428 ಕಿ.ಮೀ. ದೂರದಲ್ಲಿದೆ.

2001ರ ಜನಗಣತಿ ಪ್ರಕಾರ ಧಾರವಾಡ ಜಿಲ್ಲೆಯ ಜನಸಂಖ್ಯೆ 16,03,794, ಅದರಲ್ಲಿ ಪುರುಷರು 8,23.415, ಸ್ತ್ರೀಯರು 7,80,379. ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಸರಾಸರಿ ಶೇಕಡ 71.87. ಪುರುಷರು 81.04, ಸ್ತ್ರೀಯರು 62.20.

ಧಾರವಾಡ ಜಿಲ್ಲೆಯು ಬಹು ಪ್ರಾಚೀನ ಕಾಲದಿಂದಲೂ ಜನವಸತಿಯನ್ನು ಹೊಂದಿದ್ದ ಪ್ರದೇಶವಾಗಿದೆ. ಕರ್ನಾಟಕದ

ಇತಿಹಾಸದಲ್ಲಿ ಈ ಜಿಲ್ಲೆಯ ಪಾತ್ರ ವಿಶಿಷ್ಟವಾದುದಾದರೂ ಕರ್ನಾಟಕವನ್ನಾಳಿದ ಗಣ್ಯ ಅರಸುಮನೆತನಗಳಲ್ಲಿ ಯಾವ ರಾಜಮನೆತನಕ್ಕೂ ಈ ಜಿಲ್ಲೆ ರಾಜಧಾನಿ ಆಗಿರಲಿಲ್ಲ. ಆದರೆ ಐತಿಹಾಸಿಕ ಕಾಲದ ಸಮೃದ್ಧ ಪ್ರಾಂತಗಳಾದ ಬೆಳ್ವೊಲ 300 ಮತ್ತು ಪುಲಿಗೆರೆ 300 ಪ್ರಾಂತಗಳು ಅವಿಭಾಜ್ಯ ಧಾರವಾಡ ಜಿಲ್ಲೆಯಲ್ಲಿದ್ದುವು. ಕರ್ನಾಟಕವನ್ನಾಳಿದ ಅನೇಕ ಸಾಮ್ರಾಜ್ಯಗಳು ಈ ಪ್ರಾಂತ್ಯವನ್ನು ತಿರುಳ್ಗನ್ನಡ ಪ್ರದೇಶವೆಂದು ಕರೆದಿರುವುದುಂಟು. ಈ ಪರಂಪರೆ ಹೀಗೆ ಮುಂದುವರೆದಿದೆ. ಹೀಗಾಗಿ ಅನೇಕ ರಾಜಕೀಯ, ಧಾರ್ಮಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳ ಕೇಂದ್ರಗಳು ಈ ಜಿಲ್ಲೆಯಲ್ಲಿ ಅಭಿವೃದ್ಧಿ ಹೊಂದಿದ್ದವು. ಪ್ರಾಚೀನ ರೋಂ ನಗರದಂತೆ ಏಳು ಗುಡ್ಡಗಳ ನಗರ-ಧಾರವಾಡ.

ಜಿಲ್ಲೆಯ ಮಣ್ಣು ಎಲ್ಲ ಪ್ರಕಾರದ ವಿಭಜಿತ ಶಿಲೆಗಳ ಮಿಶ್ರಣದಿಂದ ರೂಪುಗೊಂಡಿದೆ. ಮಲೆನಾಡಿನ ಉದುರೆಲೆಯ ತೇವ ತುಂಬಿದ ಕಾಡು, ಮುಳ್ಳು ಮತ್ತು ಕುರುಚಲು ಕಾಡುಗಳು ಇಲ್ಲಿ ಮುಖ್ಯವಾಗಿವೆ. ಇಲ್ಲಿಯ ವಾಯುಗುಣ ಸಾಮಾನ್ಯವಾಗಿ ಹಿತಕರವಾಗಿದೆ. ಧಾರವಾಡ ಜಿಲ್ಲೆಯ ವಾರ್ಷಿಕ ಸರಾಸರಿ ಮಳೆ 772 ಮಿ.ಮೀ.

ಈ ಜಿಲ್ಲೆಯ ಮುಖ್ಯ ಕಸಬು ವ್ಯವಸಾಯ. ಪ್ರಾಚೀನ ಕಾಲದ ಅನೇಕ ಕೆರೆಗಳು ಮತ್ತು ಜಲಾಶಯಗಳು ಇಂದೂ ಸಹ ಉಪಯುಕ್ತವಾಗಿವೆ. ಜೋಳ, ಭತ್ತ ಮತ್ತು ಗೋಧಿ ಮುಖ್ಯ ಆಹಾರ ಬೆಳೆಗಳು. ಹತ್ತಿ, ಶೇಂಗಾ, ಮೆಣಸಿನಕಾಯಿ, ಕುಸುಬೆ, ಸೂರ್ಯಕಾಂತಿ, ಇತ್ಯಾದಿ ವಾಣಿಜ್ಯ ಬೆಳೆಗಳು. ಈ ಜಿಲ್ಲೆಯು ರಾಜ್ಯದಲ್ಲಿ ಹತ್ತಿ ಬೆಳೆಗೆ ಮೊದಲಿನಿಂದಲೂ ಪ್ರಸಿದ್ಧವಾಗಿದೆ. ಧಾರವಾಡ ದ್ರಾಕ್ಷಿ, ನವಿಲೂರಿನ ಪೇರಲ, ವಾಸನದ ಬೋರೆಹಣ್ಣು, ಮಲೆನಾಡಿನ ಗೋಡಂಬಿ ಮತ್ತು ಮಾವಿನಹಣ್ಣುಗಳು ಪ್ರಸಿದ್ಧವಾಗಿವೆ.

ಜಿಲ್ಲೆಯಲ್ಲಿ ಬೇಸಾಯದ ಅನಂತರ ಜನರ ಮುಖ್ಯ ಜೀವನೋಪಾಯ ವ್ಯಾಪಾರ. ಹುಬ್ಬಳ್ಳಿ ರಾಜ್ಯದ ಪ್ರಮುಖ ವ್ಯಾಪಾರ ಕೇಂದ್ರ.

'ಧಾರವಾಡ' ಎಂಬ ಹೆಸರು ಕನಿಷ್ಠ ಒಂದು ಸಾವಿರ ವರ್ಷಗಳಷ್ಟು ಪ್ರಾಚೀನ. ಈ ನಗರದಲ್ಲಿಯ ದುರ್ಗಾದೇವಾಲಯದಲ್ಲಿರುವ ಕ್ರಿ.ಶ. 1117ರ ಕನ್ನಡ ಶಾಸನದಲ್ಲಿ 'ದಾರವಾಡ' ಎಂಬ ಹೆಸರಿದೆ. ಇದು ಅಂದಿನ ಕುಂದೂರು 500 ಎಂಬ ಆಡಳಿತ ಘಟಕದಲ್ಲಿತ್ತು. ಇದರಲ್ಲಿ ಧಾರವಾಡವು ಸೇರಿದಂತೆ ಇತರ ಕೆಲವು ಗ್ರಾಮಗಳು ಇದ್ದುವೆಂಬುದು ಶಾಸನಗಳಿಂದ ತಿಳಿಯುತ್ತದೆ.

ಧಾರವಾಡ ಎಂಬ ಈ ಹೆಸರು ಹೇಗೆ ಬಂದಿತು ಎಂಬುದನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಒಂದು ಊಹೆಯ ಪ್ರಕಾರ ಪ್ರಾಚೀನ ಕಾಲದಿಂದಲೂ ಈಗಿನ ಧಾರವಾಡ, ಮಲೆನಾಡು ಮತ್ತು ಬಯಲುಸೀಮೆಯ ನಡುವೆ ಸಾಗುತ್ತಿದ್ದ ವ್ಯಾಪಾರಿ ಸರಕುಗಳ ಸುಂಕ ಸಂಗ್ರಹಕ್ಕೆ ದ್ವಾರದಂತಿದ್ದ ಮುಖ್ಯ ಪಟ್ಟಣವಾಗಿತ್ತು. ಧಾರವಾಡವು ಪ್ರವೇಶ ದಾರಿಯ ಅಥವಾ ದ್ವಾರದ ವಸಾಹತು (ದಾರ-ದ್ವಾರ, ವಾಡ-ಬಾಡ, ಗ್ರಾಮ) ಎಂಬುದರಿಂದ ಬಂದಿರಬಹುದೆಂದು ಊಹಿಸಲಾಗಿದೆ.

ಕ್ರಿ.ಶ. 1216ರ ಶಾಸನದಲ್ಲಿ ಧಾರವಾಡವನ್ನು ಪಟ್ಟಣವೆಂದು ವರ್ಣಿಸಿರುವುದು ಧಾರವಾಡದ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ. ಇದೇ ಕಾಲದ ಕಲತೂರಿನ (ಹುಬ್ಬಳ್ಳಿ ತಾ।।) ಶಾಸನದಲ್ಲಿ ಈ ಊರನ್ನು ಧಾರವಾಡಕಂಪಣವೆಂದು ವರ್ಣಿಸಲಾಗಿದೆ. ವಿಜಯನಗರಕಾಲದ ಸ್ತಂಭಶಾಸನವೊಂದರ ಪ್ರಕಾರ ಧಾರವಾಡವು ಆಡಳಿತ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಧಾರವಾಡವು ದಾರಿಯ ಪಕ್ಕದ ಊರು ಆದುದರಿಂದ ಅದು ದಕ್ಷಿಣ ಮತ್ತು ಉತ್ತರ ಕರ್ನಾಟಕದ ಭಾಗಗಳನ್ನು ಜೋಡಿಸುವ ಕೊಂಡಿ (ಮಾರ್ಗ) ಆಗಿದೆ.

ಧಾರವಾಡವು ನೂಲಿನ ವಸಾಹತು ಎಂಬ ಅರ್ಥವನ್ನು ಹೊಂದಿದ್ದು, ಅದಕ್ಕೆ ತಂತುಪುರ (ದಾರ-ತಂತು, ನೂಲು) ಎಂಬ ಹೆಸರು ಇದ್ದಿಂತೆಂದೂ ಒಂದು ಹೇಳಿಕೆ ಇದೆ. ಧಾರವಾಡವು ಬೆಳವಲ (ಬಯಲುಸೀಮೆ) ಮತ್ತು ಮಲೆನಾಡುಗಳ ಮಧ್ಯ ಇದ್ದು ಬೆಳವಲದಿಂದ ಮಲೆನಾಡಿಗೆ ಹೋಗಬೇಕಾದರೆ ಧಾರವಾಡವೇ ಮಾರ್ಗವಾದುದರಿಂದ 'ದ್ವಾರವಾಟ' ಎಂಬ ಹೆಸರು ಬಂದಿದ್ದು, ಇದೇ 'ದಾರವಾಡ' ಆಗಿ ಮುಂದೆ 'ಧಾರವಾಡ' ಆಯಿತೆಂದು ಹೇಳಲಾಗಿದೆ. ಬ್ರಿಟಿಷರ ಕಾಲದಲ್ಲಿ ಧಾರವಾಡವು 'ಧಾರವಾರ್'ಆಗಿ ನಂತರ 'ಧಾರವಾಡ'ವೆಂದೇ ಪ್ರಸಿದ್ಧಿಯಾಗಿದೆ.

ಜಿಲ್ಲೆಯ ಇನ್ನೊಂದು ತಾಲ್ಲೂಕು ಹುಬ್ಬಳ್ಳಿ. ಈ ತಾಲ್ಲೂಕು ಮಲೆನಾಡು ಮತ್ತು ಪೂರ್ವದ ಬೆಳವಲನಾಡುಗಳ ಮಧ್ಯ ಇರುವ ಗಡಿನಾಡ ಪ್ರದೇಶದಿಂದ ಕೂಡಿದೆ. ಈ ತಾಲ್ಲೂಕು ಪೂರ್ವಭಾಗದಲ್ಲಿ ಎರೆಮಣ್ಣಿನ ಭೂಪ್ರದೇಶದಿಂದ ಪಶ್ಚಿಮಭಾಗದಲ್ಲಿ ಹುಳಕೆರೆ ಮಣ್ಣಿನ ಪ್ರದೇಶದಿಂದಲೂ ಕೂಡಿದೆ. ಈ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಸಾಮಾನ್ಯ ಕುರುಚಲು ಕಾಡುಗಳಿವೆ. ತಾಲ್ಲೂಕಿನ ಹವೆ ಹಿತಕರವಾಗಿದೆ. ತಾಲ್ಲೂಕಿನ ಸರಾಸರಿ ಮಳೆ 719.62 ಮಿ.ಮೀ. ತಾಲ್ಲೂಕಿನಲ್ಲಿ ಬಟ್ಟೆ ಕಾರ್ಖಾನೆಯಿದೆ. ಆದರೆ ಈಗ ಅದೆಲ್ಲಾ ಸ್ಥಗಿತ. ಇಲ್ಲಿ ತಯಾರಾಗುವ ಹಿತ್ತಾಳೆ ಪಾತ್ರೆಗಳು ಎಲ್ಲೆಲ್ಲೂ ಪ್ರಸಿದ್ಧ. ಮರಕೊಯ್ಯುವ ಕಾರ್ಖಾನೆ, ಕಿರ್ಲೋಸ್ಕರ್ ವಿದ್ಯುತ್ ಕಾರ್ಖಾನೆ, ಸಿಮೆಂಟ್ ವಸ್ತು ತಯಾರಿಕಾ ಕಾರ್ಖಾನೆ, ತಿಜೋರಿ, ಕಪಾಟು, ಕುರ್ಚಿ, ಇತ್ಯಾದಿಗಳ ತಯಾರಿಕೆಯ ಘಟಕಗಳು ಇಲ್ಲಿವೆ. ಹುಬ್ಬಳ್ಳಿಯು ಕೈಗಾರಿಕೆ, ವ್ಯಾಪಾರ, ವಾಣಿಜ್ಯಗಳಿಗೆ ಪ್ರಸಿದ್ಧಿಯಾದ ಸ್ಥಳ.

ಧಾರವಾಡ ಜಿಲ್ಲೆಯ ಇನ್ನೊಂದು ತಾಲ್ಲೂಕು ಕಲಘಟಗಿ. ಈ ತಾಲ್ಲೂಕಿನ ವಿಸ್ತೀರ್ಣ 670 ಚ.ಕಿ.ಮೀ. ಒಟ್ಟು 127 ಗ್ರಾಮಗಳಿವೆ. ಇದು ಮಲೆನಾಡ ಪ್ರದೇಶ. ಇದೊಂದು ಐತಿಹಾಸಿಕ ಪ್ರಸಿದ್ಧ ಸ್ಥಳ. ಇಲ್ಲಿ ಐದು ಶಿಲಾಶಾಸನಗಳು ದೊರೆತಿದ್ದು, ಅವುಗಳಲ್ಲಿ ಅತ್ಯಂತ ಪ್ರಾಚೀನವಾದ ಶಿಲಾಶಾಸನ ಕಲ್ಯಾಣ ಚಾಳುಕ್ಯರ ಆರನೆಯ ವಿಕ್ರಮಾದಿತ್ಯನಿಗೆ ಸೇರಿದ್ದು. ಮರಾಠರ ಕಾಲದಲ್ಲಿ ಇದು ಸಾಮಂತರ ಕೇಂದ್ರವಾಗಿತ್ತು. ಕಲಘಟಗಿಯಲ್ಲಿ 18ನೇ ಶತಮಾನದ ಮುಸ್ಲಿಂ ಸಂತ ರುಸ್ತುಂ ಶಹೀದನ ಗೋರಿ ಇದೆ. ಇಲ್ಲಿಂದ ಹತ್ತು ಕಿ.ಮೀ. ದೂರದಲ್ಲಿರುವ 'ಕಾಮಧೇನು'

ಎಂಬ ಗ್ರಾಮದಲ್ಲಿ ಹಲವು ಪೌರಾಣಿಕ ಶಿಲ್ಪಗಳಿರುವ ಕರಿ ಕಣಶಿಲೆಯಲ್ಲಿ ಕಟ್ಟಿದ ಕಲಮೇಶ್ವರ ದೇವಾಲಯವಿದೆ. ಈ ದೇವಾಲಯದಲ್ಲಿ ಕ್ರಿ.ಶ. 1130 ಮತ್ತು 1172ರ ಶಾಸನಗಳು ದೊರಕಿವೆ.

ಕುಂದಗೋಳ ಜಿಲ್ಲೆಯ ಮತ್ತೊಂದು ತಾಲ್ಲೂಕು. ತಾಲ್ಲೂಕು ವಿಸ್ತೀರ್ಣ 648.6 ಚ.ಕಿಮೀ. 56 ಗ್ರಾಮಗಳಿವೆ. ಇದು ಇತಿಹಾಸ ಪ್ರಸಿದ್ಧವಾದ್ದು. ಇದು ಮೊದಲು 'ಬ್ರಹ್ಮಪುರಿ' ಯಾಗಿದ್ದಿರಬೇಕೆಂದು ಸ್ಥಳಪುರಾಣದಿಂದ ವ್ಯಕ್ತವಾಗುತ್ತದೆ. ಇಲ್ಲಿಯ ದೇವಾಲಯವೊಂದರಲ್ಲಿ ಹನ್ನೊಂದು ಶಿಲಾಶಾಸನಗಳಿವೆ.

ಕುಂದಗೋಳ ಭಾರತದ ಸಂಗೀತ ನಕ್ಷೆಯಲ್ಲಿ ತನ್ನದೇ ಆದ ಹೆಸರನ್ನು ಪಡೆದುಕೊಂಡಿದೆ. ಸವಾಯಿ ಗಂಧರ್ವರ ಶಿಷ್ಯರಾದ ಭೀಮಸೇನ ಜೋಷಿ ಮತ್ತು ಗಂಗೂಬಾಯಿ ಹಾನಗಲ್‌ರವರು ಕರ್ನಾಟಕದ ಕೀರ್ತಿಯನ್ನು ಅಂತರರಾಷ್ಟ್ರೀಯ ಮಟ್ಟಕ್ಕೆ ಏರಿಸಿದ್ದಾರೆ. ಸವಾಯಿ ಗಂಧರ್ವರ ಸಂಗೀತದಿಂದಾಗಿ ಕುಂದಗೋಳ ಪಟ್ಟಣ ಸಂಗೀತದ ನೆಲೆವೀಡಾಗಿ ಪರಿಣಮಿಸಿದೆ.

ನವಲಗುಂದ ಜಿಲ್ಲೆಯ ಮತ್ತೊಂದು ತಾಲ್ಲೂಕು. ವಿಸ್ತೀರ್ಣ 1082 ಚ.ಕಿ.ಮೀ. 58 ಗ್ರಾಮಗಳಿವೆ. ವಾರ್ಷಿಕ ಸರಾಸರಿ ಮಳೆ 660 ಮಿ.ಮೀ. ಈ ತಾಲ್ಲೂಕು ಬಹಮನಿ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತ್ತು. ಕೆಲವು ಕಾಲ ಅಲ್ಲಾವುದ್ದೀನನ ಸೋದರಳಿಯ ಜಲಾಲ್‌ಖಾನ್ ಈ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ. ಕ್ರಿ.ಶ. 1690ರ ಹೊತ್ತಿಗೆ ಔರಂಗಜೇಬನ ಆಡಳಿತಕ್ಕೆ ಸೇರಿದ ಈ ಪ್ರದೇಶದ ಕಂದಾಯ ವಸೂಲಿಯ ಹೊಣೆ ನವಲಗುಂದದ ದೇಸಾಯರ ಮನೆತನಕ್ಕೆ ಸೇರಿತ್ತು. ಕ್ರಿ.ಶ. 1747ರಲ್ಲಿ ಮರಾಠಾ ಪೇಶ್ವೆಗಳು ಅನಂತರ ಕ್ರಿ.ಶ. 1778ರಲ್ಲಿ ಹೈದರ್ ಆಲಿ ಒಡೆತನಕ್ಕೆ ಸೇರಿತ್ತು. ಕ್ರಿ.ಶ. 1817ರಿಂದ ಬ್ರಿಟಿಷರ ಆಡಳಿತಕ್ಕೆ ಸೇರಿ ಮುಂಬಯಿ ಪ್ರಾಂತದ ಭಾಗವಾಗಿತ್ತು.

ಕರ್ನಾಟಕವು ಮೌರ್ಯ ಸಾಮ್ರಾಜ್ಯದ ಒಂದು ಭಾಗವಾಗಿದ್ದಾಗ, ಈ ಜಿಲ್ಲೆ ಸಹ ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದಿರಬೇಕು. ಶಾತವಾಹನರು, ಕದಂಬರು, ಬಾದಾಮಿ ಚಾಳುಕ್ಯರು, ಈ ಭಾಗವನ್ನು ಆಳಿದರು. ಬಾದಾಮಿ ಚಾಳುಕ್ಯರ ಆಡಳಿತಕಾಲದಲ್ಲಿ ಸೇಂದ್ರಕ ಕುಲದ ಹಲವರು ಅವರ ಸಾಮಂತರಾಗಿ ಈ ಜಿಲ್ಲೆಯಲ್ಲಿ ಆಳಿದರೆಂದು ಶಾಸನಗಳಲ್ಲಿ ಹೇಳಲಾಗಿದೆ. ರಾಷ್ಟ್ರಕೂಟರ ಅನಂತರ ಕಲ್ಯಾಣದ ಚಾಳುಕ್ಯರ ಆಡಳಿತಕ್ಕೆ ಈ ಪ್ರದೇಶ ಒಳಪಟ್ಟಿತ್ತು. ಹಾನಗಲ್ಲಿನ ಕದಂಬರು, ಗುತ್ತಲದ ಗುತ್ತರು, ರಟ್ಟಿಹಳ್ಳಿಯ ಸಿಂದರು, ಗೋವೆಯ ಕದಂಬರು, ನೂರಂಬಾಡದ ಕದಂಬರು-ಕಲ್ಯಾಣ ಚಾಳುಕ್ಯರ ಮಾಂಡಲೀಕರಾಗಿ ಈ ಜಿಲ್ಲೆಯವೆ ವಿವಿಧ ಭಾಗಗಳಲ್ಲಿ ಆಳಿದರು. ಹೊಯ್ಸಳ ಮತ್ತು ಸೇವುಣರ ಆಡಳಿತಕ್ಕೂ ಈ ಜಿಲ್ಲೆ ಒಳಪಟ್ಟಿತ್ತು. ವಿಜಯನಗರ ಸ್ಥಾಪನೆಯಾದಾಗ ಈ ಜಿಲ್ಲಾ ಪ್ರದೇಶದ ಆಳ್ವಿಕೆಗಾಗಿ ಸ್ಪರ್ಧೆಗಳೇರ್ಪಟ್ಟವು. ಈ ಜಿಲ್ಲೆಯ ಕೆಲವು ಪ್ರದೇಶಗಳು ಆಗಾಗ್ಗೆ ಕೈಬದಲಾಯಿಸುತ್ತಿದ್ದವು. ಕ್ರಿ.ಶ. 1573ರಿಂದ ಒಂದು ಶತಮಾನಕಾಲ ಈ ಜಿಲ್ಲೆ ಬಿಜಾಪುರ ಸುಲ್ತಾನನ ಅಧೀನದಲ್ಲಿತ್ತು. ಜಿಲ್ಲೆಯ ಕೆಲವು ಭಾಗ

ಶಿವಾಜಿ ಮತ್ತು ಅವನ ಮಗ ಸಂಬಾಜಿಯ ಆಳ್ವಿಕೆಗೆ ಕೆಲಕಾಲ ಒಳಪಟ್ಟಿತ್ತು. ಕ್ರಿ.ಶ. 1686ರಿಂದ ಮೊಗಲ ಆಡಳಿತಕ್ಕೆ ಒಳಪಟ್ಟಿತ್ತು. ಆಗವರು ಸವಣೂರನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡಿದ್ದರು. ಕ್ರಿ.ಶ. 1720ರಿಂದ 1818ರ ಅವಧಿಯಲ್ಲಿ ಅನೇಕ ಮರಾಠ ಸರದಾರರು ಪೇಶ್ವೆಗಳ ಅಧೀನದಲ್ಲಿ ಈ ಜಿಲ್ಲೆಯ ಆಡಳಿತವನ್ನು ನಿರ್ವಹಿಸಿದರು. ಕ್ರಿ.ಶ. 1818ರಿಂದ ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟಿತು. ಕ್ರಿ.ಶ. 1830ರಲ್ಲಿ ಧಾರವಾಡ ಜಿಲ್ಲಾ ಕೇಂದ್ರವಾಗಿ ಮುಂಬಯಿ ರಾಜ್ಯದ ಪ್ರಮುಖ ಜಿಲ್ಲೆಯಾಯಿತು. 1956ರಲ್ಲಿ ವಿಶಾಲ ಮೈಸೂರು ರಾಜ್ಯದ ಭಾಗವಾಯಿತು.

ಒಂದೆರಡು ಮಹತ್ವದ ಐತಿಹಾಸಿಕ ಘಟನೆಗಳನ್ನು ಇಲ್ಲಿ ಉಲ್ಲೇಖಿಸುವುದು ಉಚಿತವೆನಿಸುತ್ತದೆ. ಧಾರವಾಡದ ಕೋಟೆ ಕ್ರಿ.ಶ. 1403ರಲ್ಲಿ ವಿಜಯನಗರದ ಸಾಮ್ರಾಜ್ಯದ ಕಾಲದಲ್ಲಿ ನಿರ್ಮಾಣವಾಯಿತು. ಔರಂಗಜೇಬನ ಮಗ ಮಹಾರಿಯಝ್ ಧಾರವಾಡವನ್ನು ಆಕ್ರಮಿಸಿದ್ದ. ಕ್ರಿ.ಶ. 1920 ಹಾಗೂ 1934ರಲ್ಲಿ ಮಹಾತ್ಮಗಾಂಧೀಜಿ ಧಾರವಾಡಕ್ಕೆ ಭೇಟಿ ಕೊಟ್ಟಿದ್ದರು.

ಹುಬ್ಬಳ್ಳಿ-ಧಾರವಾಡ ಎರಡೂ ಪಟ್ಟಣಗಳನ್ನು ಸೇರಿಸಿ 1962ರಲ್ಲಿ ಏಕನಗರವೆಂದು ಪರಿಗಣಿತವಾಗಿ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ರಚಿತವಾಯಿತು. ಕರ್ನಾಟಕ ರಾಜ್ಯದಲ್ಲಿ ಈ ಬಗೆಯ ನಗರ ಇದೊಂದೆ.

ಧಾರವಾಡದಲ್ಲಿರುವ ಮುರುಘಾಮಠ, ಹುಬ್ಬಳ್ಳಿಯಲ್ಲಿರುವ ಸಿದ್ಧಾರೂಢ ಮಠ ಹಾಗೂ ಮೂರುಸಾವಿರಮಠ ಈ ಪ್ರದೇಶದ ಧಾರ್ಮಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಿಗೆ ಮಹತ್ವದ ಕೊಡುಗೆ ಕೊಟ್ಟಿವೆ.

ಸ್ವಾತಂತ್ರ್ಯ ಹೋರಾಟದಲ್ಲಿ ಧಾರವಾಡ ಜಿಲ್ಲೆ ಮುಂಚೂಣಿಯಲ್ಲಿತ್ತು. ಕ್ರಿ.ಶ. 1874ರ ಉಪ್ಪಿನ ಕಾನೂನಿನಿಂದ ಕಲ್ಲುಪ್ಪು ತಯಾರಿಸುತ್ತಿದ್ದ ಸಹಸ್ರಾರು ಉಪ್ಪಾರರು ಉದ್ಯೋಗ ಕಳೆದುಕೊಡರಲ್ಲದೆ ಉಪ್ಪು ತುಟ್ಟಿಯಾಯಿತು. ಉಗ್ರ ಕ್ಷಾಮ ಬಂದಾಗ ಭೂಕಂದಾಯ ಸಂಗ್ರಹವನ್ನು ಮುಂದೂಡಿದರೆ ವಿನಾ ಮನ್ನಾ ಮಾಡಲಿಲ್ಲ. 1810-15ರಲ್ಲಿ ಯಂತ್ರೋತ್ಪಾದಿತ ನೂಲು ಬಂದು ಲಕ್ಷಾಂತರ ನೇಕಾರರು ತಮ್ಮ ಕಾಯಕ ಕಳೆದುಕೊಂಡರು. ಪ್ಲೇಗು ರೋಗದಿಂದ ತತ್ತರಿಸಿದ ಜನರನ್ನು ಜಿಲ್ಲಾಡಳಿತ ಅಮಾನುಷವಾಗಿ ನಡೆಸಿಕೊಂಡಿತು. ಹೀಗೆ ಹತ್ತುಹಲವು ಕಾರಣಗಳಿಂದ ಬ್ರಿಟಿಷ್ ವಿರೋಧಿ ಭಾವನೆ ರೈತರಲ್ಲೂ, ಕಸುಬುದಾರರಲ್ಲೂ, ಭೂಮಾಲೀಕರಲ್ಲೂ ಬೆಳೆಯುತ್ತ ಬಂತು. ಇದೇ ಕಾಲಕ್ಕೆ ಶಿಕ್ಷಣ ಕಲಿಯುವವರ ಪ್ರಮಾಣದಲ್ಲೂ, ಪತ್ರಿಕೆಗಳನ್ನು ಓದುವವರ ಸಂಖ್ಯೆಯಲ್ಲಿಯೂ ಹೆಚ್ಚಳ ಆಗಿ ಕ್ರಿ.ಶ. 1885ರಲ್ಲಿ ಆರಂಭವಾದ ಕಾಂಗ್ರೆಸ್ ಮತ್ತು ಲೋಕಮಾನ್ಯ ತಿಲಕರ ಪ್ರಭಾವದಿಂದ ಈ ಭಾಗದಲ್ಲಿ ರಾಷ್ಟ್ರೀಯ ಚಟುವಟಿಕೆಗಳು ಆರಂಭವಾದವು. ಆಲೂರ ವೆಂಕಟರಾವ್, ಆರ್.ಆರ್. ದಿವಾಕರ, ವಿನಾಯಕರಾವ್ ಜೋಶಿ, ಮುದುವೀಡು ಕೃಷ್ಣರಾವ್, ದ.ಪ. ಕರಮರಕರ, ಹನಮಂತರಾವ್

ದೇಸಾಯಿ, ಗೋಪಾಲರಾವ್ ದೇಶಪಾಂಡೆ, ಮದಾರಸಾಬ ಕಟಗಾರ್, ದಾಮೋದರ ಪರ್ಲೇಕರ್, ಅಬ್ದುಲ್ಲಾ ಖಲಾಸಿ, ಅಬ್ದುಲ್ ರಹಿಮಾನ್, ನರಸಿಂಗ ಭೀಸೆ, ಗದಿಗೆಯ್ಯ ಹೊನ್ನಾಪುರಮಠ, ಸಂಗನಗೌಡ ಪಾಟೀಲ, ಕರವೀರಪ್ಪ ಕುಲ್ಕರ್ಣಿ ಮುಂತಾದ ಹಿರಿಯ ಹೋರಾಟಗಾರರು ಸ್ವಾತಂತ್ರ್ಯ ಹೋರಾಟವನ್ನು ಯಶಸ್ವಿಗೊಳಿಸಿದರು.

ರಾಷ್ಟ್ರೀಯ ಜಾಗೃತಿಯೊಂದಿಗೆ ಶಿಕ್ಷಣದ ಕ್ರಾಂತಿ ಕೂಡ ಈ ಪ್ರದೇಶದಲ್ಲಿ ನಡೆಯಿತು. 1910ರಲ್ಲಿ ಮುಂಬೈ ಸರಕಾರ ತಂದ ಅನರ್ಥಕಾರಿ ಶಿಕ್ಷಣ (ಪರ್ನಿಶಿಯಸ್ ಎಜುಕೇಶನ್) ಆಜ್ಞೆಯಿಂದಾಗಿ ಜಿಲ್ಲೆಯ ಎಲ್ಲ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳೂ ಮುಚ್ಚಿದವು. ಆದರೆ ವಿಕ್ಟೋರಿಯಾ ಹೈಸ್ಕೂಲಿಗೆ ಗಣ್ಯ ದೇಶಭಕ್ತ ಹುಕ್ಕೇರಿ ರಾಮರಾಯರು ಪ್ರಿನ್ಸಿಪಾಲರಾಗಿ ಬಂದುದರಿಂದ ಧಾರವಾಡದ ಮಟ್ಟಿಗೆ ದೇಶಭಕ್ತಿ ಪ್ರಸಾರದ ಕಾರ್ಯ ನಿಲ್ಲಲಿಲ್ಲ. ಅರಟಾಳ ರುದ್ರಗೌಡ, ರೊದ್ದ ಶ್ರೀನಿವಾಸರಾವ್ ಮುಂತಾದವರ ಪರಿಶ್ರಮದ ಫಲವಾಗಿ 1917ರಲ್ಲಿ ಕರ್ನಾಟಕ ಕಾಲೇಜು ಪ್ರಾರಂಭವಾಯಿತು. ಏಡೆಡ್ ಕಾಲೇಜು ಒಂದನ್ನು ಧಾರವಾಡದಲ್ಲಿ 1920ರಲ್ಲಿ ಕರ್ನಾಟಕ ಎಜುಕೇಶನ್ ಸೊಸೈಟಿಯು ಆರಂಭಿಸಿತು. 1922ರಲ್ಲಿ ಹುಬ್ಬಳ್ಳಿಯಲ್ಲಿ ಬಾಲಕರ ರಾಷ್ಟ್ರೀಯ ಶಾಲೆ ಮತ್ತು ತಿಳಕರ ಬಾಲಕಿಯರ ಶಾಲೆ ಆರಂಭವಾದವು.

ವೀರಶೈವ ವಿದ್ಯಾಭಿವೃದ್ಧಿ ಸಂಘವು 1922ರಲ್ಲಿ ಧಾರವಾಡದಲ್ಲಿ ಕೆ.ಎಲ್.ಇ. ಸೊಸೈಟಿ ಆರಂಭ ಮಾಡಿ ಆರ್.ಎಲ್.ಎಸ್. ಹೈಸ್ಕೂಲಿಗೆ ನೆರವು ನೀಡಿತಲ್ಲದೆ ಲಿಂಗಾಯತ ವಿದ್ಯಾರ್ಥಿಗಳಿಗಾಗಿ ಹಾಸ್ಟೆಲ್ ತೆರೆಯಿತು. ಧಾರವಾಡದಲ್ಲಿ ವಿದ್ಯಾರಣ್ಯ, ಕರ್ನಾಟಕ ಹಾಗು ಕೆ.ಇ. ಬೋರ್ಡ್ ಹೈಸ್ಕೂಲು ಪ್ರಾರಂಭವಾದವು. 1947ರಲ್ಲಿ ಧಾರವಾಡದಲ್ಲಿ ಜನತಾ ಶಿಕ್ಷಣ ಸಮಿತಿ ಸ್ಥಾಪಿಸಲ್ಪಟ್ಟಿತು. ಅದೇ ಸಮಯಕ್ಕೆ ಕೆ.ಎಲ್.ಇ. ಸೊಸೈಟಿಯು ಬಿ.ವಿ.ಬಿ. ಇಂಜನಿಯರಿಂಗ್ ಕಾಲೇಜನ್ನು ಹುಬ್ಬಳ್ಳಿಯಲ್ಲಿ ಪ್ರಾರಂಭಿಸಿತು.

ಕೃಷಿ ಮಹಾವಿದ್ಯಾಲಯ ಧಾರವಾಡದಲ್ಲಿ ಪ್ರಾರಂಭವಾಗಿ 1986ರಲ್ಲಿ ಅದು ವಿಶ್ವವಿದ್ಯಾಲಯವಾಗಿ ಪರಿವರ್ತನೆಗೊಂಡಿತು. ಇದರ ವತಿಯಿಂದ ಒಂದು ಪದವಿ ಕಾಲೇಜು, ಒಂದು ತಾಂತ್ರಿಕ ಸಂಸ್ಥೆ (ಕಬ್ನೂರ ಇನ್‌ಸ್ಟಿಸ್ಯೂಟ್), ಒಂದು ಆರ್ಥಿಕ ಸಂಶೋಧನಾ ಕೇಂದ್ರ ಇತ್ಯಾದಿಗಳನ್ನು ನಡೆಯುತ್ತಿದೆ. ಹೀಗೆ ಧಾರವಾಡ ಮತ್ತು ಹುಬ್ಬಳ್ಳಿ ಅವಳಿ ನಗರಗಳಲ್ಲಿ ಹಲವಾರು ವಿದ್ಯಾಸಂಸ್ಥೆಗಳು ಜನ್ಮತಾಳಿದವು. ಇವೆಲ್ಲದರ ಅಂತಿಮ ಫಲಶ್ರುತಿಯೆಂದರೆ 1949ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ಪ್ರಾರಂಭ. ಹುಬ್ಬಳ್ಳಿಯಲ್ಲಿ ವೈದ್ಯಕೀಯ ಮಹಾವಿದ್ಯಾಲಯದ ಕೂಡ ಪ್ರಾರಂಭವಾಯಿತು. ಹೀಗೆ ಧಾರವಾಡ ಪ್ರದೇಶ ಉತ್ತರ ಕರ್ನಾಟಕದ ಪ್ರಮುಖ ಶೈಕ್ಷಣಿಕ ಕೇಂದ್ರವಾಗಿ ರೂಪಗೊಂಡಿತು.

ಆರ್.ಆರ್. ದಿವಾಕರ, ದ.ಪ. ಕರಮರಕರ, ಸರೋಜಿನಿ ಮಹಿಷಿ, ಡಿ.ಕೆ. ನಾಯ್ಕರ್, ವಿಜಯಸಂಕೇಶ್ವರ ಮುಂತಾದವರು ಈ ಭಾಗದ ಸಂಸತ್ ಸದಸ್ಯರಾಗಿ ಆಯ್ಕೆಯಾಗಿದ್ದಾರೆ.

ಮಾಜಿ ಮುಖ್ಯಮಂತ್ರಿ ಎಸ್.ಆರ್. ಬೊಮ್ಮಾಯಿ, ಟಿ.ಕೆ. ಕಂಬಳಿ, ಎಫ್.ಹೆಚ್. ಮೊಹಿಸಿನ್, ಬಿ.ಆರ್. ತಂಬಾಕದ, ಎಂ.ಬಿ. ಇನಾಂತಿ, ಆರ್.ಎಂ. ಪಾಟೀಲ, ಎಫ್.ಎಂ. ಹಸಬಿ, ಹೆಚ್.ಎಂ. ದಾಸನಕೊಪ್ಪ, ಎಸ್.ವಿ. ಅಗ್ನಿಹೋತ್ರಿ, ಕೆ.ಎಂ. ದಾಸನಕೊಪ್ಪ, ಎಸ್.ಎಸ್. ಶೆಟ್ಟರ್, ಸುಮತಿ ಮಡಿಮನ್, ಜಿ. ಆರ್. ಸಾಂಡ್ರಾ, ಆರ್.ವಿ. ರಂಗನಗೌಡ, ಐ.ಜಿ. ಸನದಿ, ಎಂ.ಜಿ. ಜರತಾರಘರ, ಭಾವುರಾವ್ ದೇಶಪಾಂಡೆ, ಚಂದ್ರಕಾಂತ ಜಿ. ಬೆಲ್ಲದ, ಎ.ಬಿ. ದೇಸಾಯಿ, ಎ.ಎಂ. ಹಿಂಡಸಗೇರಿ, ಪಿ.ಸಿ. ಸಿದ್ದನಗೌಡರ್, ಗೋವಿಂದಪ್ಪ ಜುಟ್ಟಲ್, ಜಗದೀಶ ಶೆಟ್ಟರ್ ಮುಂತಾದವರು ಈ ಜಿಲ್ಲೆಯಿಂದ ರಾಜ್ಯ ವಿಧಾನಸಭೆಗೆ ಆಯ್ಕೆಯಾಗಿದ್ದಾರೆ.

ಧಾರವಾಡ ಜಿಲ್ಲೆ ಸಾಹಿತ್ಯ ಮತ್ತು ಸಂಸ್ಕೃತಿಗಳ ತವರೂರು. ಜ್ಞಾನಪೀಠ ಪ್ರಶಸ್ತಿ ವಿಜೇತರಾದ ವರಕವಿ ದ.ರಾ. ಬೇಂದ್ರೆ ಧಾರವಾಡದ ಚೈತನ್ಯ ಶಕ್ತಿಯಾಗಿದ್ದರು. ಆಲೂರು ವೆಂಕಟರಾಯರು, ಡಾ|| ರಂ.ಶ್ರೀ ಮುಗಳಿ, ಡಾ|| ವಿ.ಕೆ. ಗೋಕಾಕ್, ಬೆಟಗೇರಿ ಕೃಷ್ಣಶರ್ಮ, ಡಾ|| ಎನ್ಕೆ, ಡಾ|| ಶಂ.ಬಾ. ಜೋಶಿ, ಪ್ರೊ. ಸ.ಸ. ಮಾಳವಾಡ, , ಬಸವರಾಜ ಕಟ್ಟೀಮನಿ ಡಾ|| ಆರ್.ಸಿ. ಹಿರೇಮಠ, ಡಾ|| ಭೂಸನೂರಮಠ, ಡಾ|| ಚನ್ನವೀರ ಕಣವಿ, ಶಾಂತಾದೇವಿ ಮಾಳವಾಡ, ಗೀತಾ ಕುಲ್ಕರ್ಣಿ, ಡಾ|| ಪಾಟೀಲ ಪುಟ್ಟಪ್ಪ, ಡಾ|| ಎಂ.ಎಂ. ಕಲಬುರ್ಗಿ ಮೊದಲಾದವರು ಧಾರವಾಡದ ಕೀರ್ತಿಯನ್ನು ಬೆಳೆಗಿದ್ದಾರೆ.

ಹಿಂದುಸ್ತಾನಿ ಸಂಗೀತದ ದಿಗ್ಗಜರಾದ ಸಿತಾರರತ್ನ ರಹಿಮತ್‌ಖಾನ್ (1912) ಧಾರವಾಡದ ಕೀರ್ತಿ ಬೆಳಗಿಸಿದ್ದಾರೆ. ಧಾರವಾಡದ ಆರ್ಟ್ ಸರ್ಕಲ್ ಸಂಸ್ಥಾಪಕರಾದ ಹನಮಂತರಾವ್ ದಾಳ್ವೇಕರ್, ಅನಂತರಾವ್ ನಾಡಕರ್ಣಿ, ಶ್ರೀಪಾದ ಜೋಶಿ, ಧಾರವಾಡದಲ್ಲಿ ಸಂಗೀತ ಪುರೋಭಿವೃದ್ಧಿಗೆ ಕಾರಣರಾಗಿದ್ದಾರೆ. ಸವಾಯಿ ಗಂಧರ್ವರು, ಮಲ್ಲಿಕಾರ್ಜುನ ಮನ್ಸೂರ್, ಬಸವರಾಜ ರಾಜಗುರು ಹಾಗು ಗಂಗೂಬಾಯಿ ಹಾನಗಲ್ ಅವರುಗಳು ಧಾರವಾಡದ ಸಾಂಸ್ಕೃತಿಕ ಕ್ಷೇತ್ರದ ಧ್ರುವತಾರೆಗಳು. ಅವರುಗಳ ಗಾಯನದಿಂದಾಗಿ ಇಡೀ ರಾಷ್ಟ್ರದಲ್ಲಿ ಧಾರವಾಡ ಖ್ಯಾತಿಯನ್ನು ಪಡೆಯುವಂತಾಗಿದೆ.

## ಉಪ್ಪಾರ ಸಮಾಜ

ಧಾರವಾಡ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯ ಜಿಲ್ಲೆಯಾದ್ಯಾಂತ ಹರಡಿಕೊಂಡಿದೆ. ಜಿಲ್ಲೆಯ ಐದು ತಾಲ್ಲೂಕುಗಳಲ್ಲಿ ಈ ಸಮುದಾಯ ಒಟ್ಟಾರೆ ಜನಜೀವನದೊಂದಿಗೆ ಒಂದಾಗಿ ಮಿಳಿತವಾಗಿರುವ ಕಾರಣ ಅದನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವುದು ಅಷ್ಟು ಸುಲಭದ ಮಾತಲ್ಲ. ಯಾವುದೇ ಅಧಿಕಾರ ಹಾಗು ಸಂಪನ್ಮೂಲವಿಲ್ಲದ ಈ ಜನ ಹೆಚ್ಚಾಗಿ ಮಧ್ಯಮ ಮತ್ತು ಕೆಳವರ್ಗಕ್ಕೆ ಸೇರಿದ್ದಾರೆ.

ಧಾರವಾಡ ತಾಲ್ಲೂಕಿನಲ್ಲಿ ಧಾರವಾಡ ನಗರ, ಮದಿಹಾಳ, ಮುಗದ,

ಗೋವನಕೊಪ್ಪ, ಕ್ಯಾರಕೊಪ್ಪ ಮುಂತಾದ ಗ್ರಾಮಗಳನ್ನೊಳಗೊಂಡಂತೆ ಸುಮಾರು 1500 ಉಪ್ಪಾರ ಕುಟುಂಬಗಳಿದ್ದು, 8500 ಜನಸಂಖ್ಯೆ ಇದೆಯೆಂದು ಒಂದು ಸಮೀಕ್ಷೆಯಿಂದ ತಿಳಿದುಬರುತ್ತದೆ.

ಹುಬ್ಬಳ್ಳಿ ತಾಲ್ಲೂಕಿನ ಹುಬ್ಬಳ್ಳಿ ನಗರ, ಕುಸುಗಲ್, ಹೆಬಸೂರು ಮುಂತಾದ ಗ್ರಾಮಗಳನ್ನೊಳಗೊಂಡಂತೆ 1750 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 7000 ಜನಸಂಖ್ಯೆ ಇದೆ.

ನವಲಗುಂದ ತಾಲ್ಲೂಕಿನ ನವಲಗುಂದ, ಹೆಬ್ಬಾಳ, ಹಾಳಕುಸುಗಲ್, ದಾಟನಾಳ, ಬೆಳ್ಹಾರ, ಹನಸಿ, ಜಾವೂರು ಮುಂತಾದ ಗ್ರಾಮಗಳಲ್ಲಿ ಸುಮಾರು 815 ಉಪ್ಪಾರ ಕುಟುಂಬಗಳಿವೆ. ಅದರಲ್ಲಿ 4450 ಜನರಿದ್ದಾರೆ.

ಕಲಘಟಗಿ ತಾಲ್ಲೂಕಿನಲ್ಲಿ ಸುಮಾರು 550 ಕುಟುಂಬಗಳು ಹಾಗು ಕುಂದಗೋಳ ತಾಲ್ಲೂಕಿನಲ್ಲಿ ಸುಮಾರು 500 ಕುಟುಂಬಗಳಿದ್ದು, ಈ ಎರಡೂ ತಾಲ್ಲೂಕುಗಳಲ್ಲೂ ಒಟ್ಟು ಉಪ್ಪಾರ ಜನಸಂಖ್ಯೆ 5050.

ಹೀಗೆ ಧಾರವಾಡ ಜಿಲ್ಲೆಯಲ್ಲಿ ಸುಮಾರು 5115 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 25,000 ಜನಸಂಖ್ಯೆ ಇದೆಯೆಂದು ಹೇಳಬಹುದು.

ಧಾರವಾಡ ಜಿಲ್ಲೆಯ ಉಪ್ಪಾರ ಕುಟುಂಬಗಳಲ್ಲಿ 'ಉಪ್ಪಾರ' ಎಂಬ ಉಪನಾಮ ಎಲ್ಲೆಲ್ಲೂ ಕಾಣಬರುತ್ತದೆ. ಜೊತೆಗೆ 'ಸಾಂಗ್ಲೀಕರ್' 'ಮದಿಹಳ್ಳಿ' 'ಶಿರಕೋಳ್' 'ಬಡಕಲಿ' 'ತೋರಗಲ್' 'ಮುಂಡರಗಿ' 'ರಾಣೆಬೆನ್ನೂರು' ಮುಂತಾದ ಹಲವು ಉಪನಾಮಗಳು ಈ ಸಮುದಾಯದಲ್ಲಿ ಕಾಣಬರುತ್ತವೆ.

ಹುಬ್ಬಳ್ಳಿ-ಧಾರವಾಡ ನಗರಗಳಲ್ಲಿ ವಾಸ ಮಾಡುವ ಉಪ್ಪಾರರಲ್ಲಿ ಕೆಲವರು ನೌಕರಿ ಮಾಡುತ್ತಿದ್ದರೆ ಇನ್ನೂ ಕೆಲವರು ವ್ಯಾಪಾರ, ಉದ್ದಿಮೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಖಾಸಗಿ, ಅರೆಸರಕಾರಿ ಹಾಗೂ ಸರಕಾರಿ ನೌಕರಿಗಳಲ್ಲಿ ಅವರನ್ನು ಕಾಣಬಹುದು. ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದಿರುವ ಕೆಲವೇ ಕೆಲವು ಕುಟುಂಬಗಳು ಈ ಸಮಾಜದಲ್ಲಿ ಕಾಣಬರುತ್ತವೆ. ಸಾಂಗ್ಲೀಕರ್ ಬಂಧುಗಳು, ಶಿರಕೋಳ ಬಂಧುಗಳು, ರಾಣೆಬೆನ್ನೂರು, ಗೋದಾವರಿ, ಗಡಗಕರ ಮುಂತಾದ ಕೆಲವರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು.

ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಹೆಚ್ಚಿನ ಉಪ್ಪಾರ ಕುಟುಂಬಗಳು ಬೇರೆ ಕಡೆಯಿಂದ ವಲಸೆ ಬಂದವರಾಗಿರುತ್ತಾರೆ. ಅವರಲ್ಲಿ ಹೆಚ್ಚಿನವರು ಮಧ್ಯಮ ವರ್ಗಕ್ಕೆ ಸೇರಿರುತ್ತಾರೆ. ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುವ ಉಪ್ಪಾರರು ಹೆಚ್ಚಾಗಿ ಕೃಷಿಕರು ಮತ್ತು ಕೃಷಿ ಕಾರ್ಮಿಕರು. ಬೆರಳೆಣಿಕೆಯಷ್ಟು ಉಪ್ಪಾರ ರೈತರು ಸ್ವಲ್ಪಮಟ್ಟಿಗೆ ಭೂಹಿಡುವಳಿದಾರರಾಗಿದ್ದಾರೆ. ಈ ಸಂದರ್ಭದಲ್ಲಿ ನವಲಗುಂದದ ಬಡಕಲಿ ಕುಟುಂಬ, ಬೆಳ್ಹಾರದ ಗೋಕಾವಿ ಕುಟುಂಬ, ಹೆಬ್ಬಾಳ

ಗ್ರಾಮದ ಭೀಮಣ್ಣನವರ ಕುಟುಂಬದವರನ್ನು ಉಲ್ಲೇಖಿಸಬಹುದು. ಆದರೆ ದೊಡ್ಡ ಕೈಗಾರಿಕೆಗಳಾಗಲಿ, ಉದ್ದಿಮೆಗಳಾಗಲಿ ಈ ಜನಾಂಗಕ್ಕೆ ಸೇರಿಲ್ಲ. ಆರ್ಥಿಕ ಸದೃಢತೆ ಇವರಿಗಿಲ್ಲ. ಒಟ್ಟು ಜನಸಂಖ್ಯೆಯಲ್ಲಿ ಶೇಕಡ 50ರಷ್ಟು ಮಧ್ಯಮ ವರ್ಗಕ್ಕೆ ಸೇರಿರುತ್ತಾರೆ. ಉಳಿದ ಶೇ. 50 ತೀರ ಕೆಳವರ್ಗಕ್ಕೆ ಸೇರಿದ್ದಾರೆ. ಅವರು ಬಡತನ ರೇಖೆಗಿಂತ ಕೆಳಗಿದ್ದಾರೆ.

ಧಾರವಾಡ ಜಿಲ್ಲೆ ಸಾಕ್ಷರತೆಯಲ್ಲಿ ಹಿರಿದಾದ ಸ್ಥಾನ ಪಡೆದಿದೆ. ಜಿಲ್ಲೆಯ ಸಾಕ್ಷರತಾ ಪ್ರಮಾಣ ಸರಾಸರಿ ಶೇ. 71.87. ಅದರಲ್ಲಿ ಪುರುಷರು 81.04 ಮತ್ತು ಸ್ತ್ರೀಯರು 62.20 : ಜಿಲ್ಲೆಯ ಸಾಕ್ಷರತಾ ಪ್ರಮಾಣವನ್ನು ಉಪ್ಪಾರ ಜನಾಂಗದ ಸಾಕ್ಷರತೆಯ ಪ್ರಮಾಣಕ್ಕೆ ಹೋಲಿಸಿದರೆ, ಆ ಜನಾಂಗದ ಸಾಕ್ಷರತೆಯ ಪ್ರಮಾಣ ಅತ್ಯಂತ ಕೆಳಮಟ್ಟದಲ್ಲಿದೆ. ಜಿಲ್ಲೆಯಲ್ಲಿ ಉಪ್ಪಾರಸಂಘ ನಡೆಸಿದ ಒಂದು ಸಮೀಕ್ಷೆಯ ಪ್ರಕಾರ ಈ ಜನಾಂಗದ ಸಾಕ್ಷರತಾ ಪ್ರಮಾಣ ಶೇಕಡ 49. ಅದರಲ್ಲಿ ಪುರುಷರು ಶೇ. 61, ಸ್ತ್ರೀಯರು ಶೇ. 37, ದೇಶಕ್ಕೆ ಸ್ವಾತಂತ್ರ್ಯ ಸಿಕ್ಕು ಸುಮಾರು ಐವತ್ತೈದು ವರ್ಷಗಳೇ ಕಳೆದರೂ ವಿದ್ಯೆ, ಪಾಂಡಿತ್ಯ ಇತ್ಯಾದಿಗಳ ಬಗ್ಗೆ ಮಾತನಾಡದೇ ಕೇವಲ ಸಾಕ್ಷರತೆಯ ಬಗ್ಗೆ ಮಾತನಾಡುತ್ತಿರುವುದು ಅತ್ಯಂತ ಶೋಚನೀಯ ವಿಚಾರ.

ಧಾರವಾಡದಲ್ಲಿ ಉಪ್ಪಾರ ಸಂಘವಿದೆ. ಶಿವಪ್ಪ ನೀರಾವರಿ ಅದರ ಅಧ್ಯಕ್ಷರು . ಪ್ರೊ. ಜಿ.ಬಿ. ಮದಿಹಳ್ಳಿ ಪ್ರಧಾನ ಕಾರ್ಯದರ್ಶಿ. ಸಂಘದ ಚಟುವಟಿಕೆಗಳು ಚುರುಕುಗೊಂಡು ಅದರಿಂದ ಸಾಕಷ್ಟು ಕೆಲಸಕಾರ್ಯಗಳು ಆಗಬೇಕಾಗಿದೆ. ಧಾರವಾಡದಲ್ಲಿ ದಿ॥ ಲಕ್ಷ್ಮಣ ಸಾಂಗ್ಲೀಕರ್ ಕುಟುಂಬದವರು ದಾನವಾಗಿ ಕೊಟ್ಟ ನಿವೇಶನದಲ್ಲಿ ಸಂಘದ ಅಧ್ಯಕ್ಷರಾದ ಶಿವಪ್ಪ ನೀರಾವರಿ, ಹಿಂದಿನ ಅಧ್ಯಕ್ಷ ದಿ॥ ಬಿ.ಹೆಚ್. ಉಪ್ಪಾರ, ಪ್ರಸ್ತುತದ ಪ್ರಧಾನ ಕಾರ್ಯದರ್ಶಿ, ಜಿ.ಬಿ. ಮದಿಹಳ್ಳಿ ಅವರುಗಳ ಭಗೀರಥ ಪ್ರಯತ್ನದಿಂದ ವಿದ್ಯಾರ್ಥಿನಿಲಯವನ್ನು ಕಟ್ಟಲಾಗಿದೆ. ಅದರ ಉದ್ಘಾಟನೆ ಕೂಡ ಆಗಿದೆ. ಅದು ಈಗ ನಿರೀಕ್ಷಿಸಿದ ಮಟ್ಟದಲ್ಲಿ ಕಾರ್ಯ ಪ್ರಾರಂಭ ಮಾಡಬೇಕಾಗಿದೆ. ಈ ವಿದ್ಯಾರ್ಥಿನಿಲಯದ ಕಟ್ಟಡಕ್ಕೆ ಮುಖ್ಯವಾಗಿ ದಿ। ಚಂದಪ್ಪ ನೀರಾವರಿ ಗುಡ್ಡದ ದೇವಲಾಪುರ, ದಿ। ಲಕ್ಷ್ಮಣರಾವ್ ಸಾಂಗ್ಲೀಕರ್ ಧಾರವಾಡ ಹಾಗು ದಿ। ಬಿ. ಹೆಚ್. ಉಪ್ಪಾರ ಧಾರವಾಡ ಗಣನೀಯ ಪ್ರಮಾಣದಲ್ಲಿ ದಾನ ಮಾಡಿದ್ದು, ಅವರುಗಳು ಸದಾ ಸ್ಮರಣೀಯರು.

ರಾಜಕೀಯ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿರುವ ಉಪ್ಪಾರ ಸಮಾಜದ ನಾಯಕರುಗಳು ಈ ಜಿಲ್ಲೆಯಲ್ಲಿ ಕಾಣಬರುವುದಿಲ್ಲ. ಲಕ್ಷ್ಮಣ ಉಪ್ಪಾರರು ಸತತವಾಗಿ ಎರಡನೆಯ ಬಾರಿಗೆ ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯ ಸದಸ್ಯರಾಗಿ ಆಯ್ಕೆಯಾಗಿದ್ದು, ಪ್ರಸ್ತುತ ಹಣಕಾಸು ಸಮಿತಿಯ ಅಧ್ಯಕ್ಷರಾಗಿದ್ದಾರೆ. ಜಾತ್ಯತೀತ ಜನತಾ ದಳದ ಅರುಣ್ ಜನಪ್ರಿಯ ಉತ್ಸಾಹಿ ಯುವನಾಯಕ. ರೇಣುಕಾ ಎಸ್. ನೀರಾವರಿ ಅವರು ಮಹಾನಗರಪಾಲಿಕೆಯ ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ರತ್ನಾ ತೋರಗಲ್ ನವಲಗುಂದ ತಾಲ್ಲೂಕು ಪಂಚಾಯ್ತಿ ಚುನಾಯಿತ ಸದಸ್ಯೆ.

ನವಲಗುಂದ ತಾಲ್ಲೂಕಿನ ಜಾವೂರು ಗ್ರಾಮಪಂಚಾಯ್ತಿಗೆ ಐದು ಜನ ಉಪ್ಪಾರ ಸಮುದಾಯದವರು ಆಯ್ಕೆಯಾಗಿದ್ದಾರೆ. ಶರಣಪ್ಪ ಕಂಬ್ಲೆಣ್ಣವರ ಹೆಬ್ಬಾಳ ಗ್ರಾಮದ ವ್ಯವಸಾಯ ಸೇವಾ ಸಹಕಾರಿ ಸಂಘದ ಅಧ್ಯಕ್ಷರು.

ಧಾರವಾಡ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯಕ್ಕೆ ಸೇರಿದ ಹಿರಿಯ ಶಿಕ್ಷಣತಜ್ಞ ಪ್ರೊ. ಜಿ.ಬಿ. ಮದಿಹಳ್ಳಿ ಅವರು ನಿವೃತ್ತಿ ನಂತರ ಹುಬ್ಬಳ್ಳಿಯಲ್ಲಿ ನೆಲೆಸಿದ್ದು, ಅವರು ಸಂಘದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದು, ಪ್ರಸ್ತುತ ಜಿಲ್ಲಾ ಸಂಘದ ಪ್ರಧಾನ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಡೆಪ್ಯುಟಿ ಕಮೀಷನರಾಗಿರುವ ಶಿವಪ್ಪ ನೀರಾವರಿ ಹುಬ್ಬಳ್ಳಿಯಲ್ಲಿ ನೆಲೆಸಿದ್ದು, ಸಂಘದ ಚಟುವಟಿಕೆಗಳಲ್ಲಿ ಸಕ್ರಿಯ ಭಾಗವಹಿಸುತ್ತಿದ್ದಾರೆ. ಪ್ರಸ್ತುತ ಅವರು ಜಿಲ್ಲಾ ಸಂಘದ ಅಧ್ಯಕ್ಷರಾಗಿದ್ದಾರೆ. ಜಿಲ್ಲೆಯ ಹಿರಿಯ ನ್ಯಾಯವಾದಿ ಹಾಗು ಸರ್ವೋದಯ ನಾಯಕರಾದ ಎಂ.ಎಸ್. ಬಡಕಲಿ ಅವರು ನವಲಗುಂದದಲ್ಲಿ ನೆಲೆಸಿದ್ದಾರೆ. ಧಾರವಾಡ ಜಿಲ್ಲೆ ಸಾಹಿತ್ಯ ಮತ್ತು ಸಂಸ್ಕೃತಿಗಳ ತವರೂರಾಗಿದ್ದು, ಇಲ್ಲಿ ಉಪ್ಪಾರ ಸಮುದಾಯಕ್ಕೆ ಸೇರಿದ ಶಿವಣ್ಣ ನೀರಾವರಿ ಅವರ ಧರ್ಮಪತ್ನಿ ಶ್ರೀಮತಿ ಹನುಮಾಕ್ಷಿ ಅವರನ್ನು ಸಾಹಿತ್ಯ ಹಾಗೂ ಸಂಶೋಧನಾ ಕ್ಷೇತ್ರಕ್ಕೆ ಹೆಸರಿಸಬಹುದು. ಸಹಕಾರಿ ಇಲಾಖೆಯಲ್ಲಿ ಉನ್ನತ ಹುದ್ದೆಯಲ್ಲಿದ್ದುಕೊಂಡು ಸಾಹಿತ್ಯ ಹಾಗು ಸಂಶೋಧನ ಚಟುವಟಿಕೆಗಳನ್ನು ಮುಂದುವರಿಸಿಕೊಂಡು ಹೋಗುತ್ತಿರುವುದಲ್ಲದೆ ಮಹಿಳಾ ಸಾಹಿತ್ಯಿಕಾ ಪ್ರಕಾಶನವನ್ನು ಯಶಸ್ವಿಯಾಗಿ ನಡೆಸುತ್ತಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಎಫ್.ಎಂ. ಸಣ್ಣನಿಂಗಣ್ಣನವರ್, ಎಂ.ಹೆಚ್. ಮುಂಡರಗಿ, ಡಿ.ಎಸ್. ಉಪ್ಪಾರ, ಐ.ಎಂ. ಮನ್ನಿಕೇರಿ ಮುಂತಾದವರು ತಮ್ಮ ಕಾರ್ಯದಕ್ಷತೆಯಿಂದ ಸಮಾಜಕ್ಕೆ ಹೆಸರುತಂದಿದ್ದಾರೆ.

ಮೂಲತಃ ಬೆಳಗಾಂ ಜಿಲ್ಲೆಯವರಾದ ಅಶೋಕ್ ಬಿ. ನಾಯಕ್ ಧಾರವಾಡದಲ್ಲಿ ಹಲವಾರು ವರ್ಷಗಳಿಂದ ಜಿಲ್ಲಾ ಕೇಂದ್ರ ಮುಖ್ಯ ಗ್ರಂಥಾಧಿಕಾರಿಗಳಾಗಿದ್ದು, ಇಲಾಖೆಗೂ ಸಮಾಜಕ್ಕೂ ಒಂದು ಆಸ್ತಿಯಾಗಿ ಪರಿಣಮಿಸಿದ್ದಾರೆ. ಕೆ.ಎ.ಎಸ್. ಅಧಿಕಾರಿ ಡಾ|| ವಿಜಯಕುಮಾರ್ ತೋರಗಲ್ ಧಾರವಾಡದವರು. ಅವರು ಬೃಹತ್ ಹಾಗೂ ಮಧ್ಯಮ ನೀರಾವರಿ ಸಚಿವರ ಆಪ್ತಕಾರ್ಯದರ್ಶಿ.

ಎಸ್.ಎಂ. ದಾಟನಾಳ ಪ್ರಸಿದ್ಧ ಚಿತ್ರಕಲಾವಿದರು. ಆರ್.ವೈ. ಬಬಲಿ, ಸಂಜಯ್ ಮದಿಹಳ್ಳಿ, ವಿನಯ್ ಸಾಂಗ್ಲೀಕರ್ ಕಂಟ್ರಾಕ್ಟರ್‌ಗಳು. ಡಾ|| ಪ್ರಶಾಂತ, ಡಾ|| ಶ್ರೀಧರ ಸಾಂಗ್ಲೀಕರ್, ಡಾ|| ವೀಣಾಈಶ್ವರಪ್ಪ ಮುಂತಾದವರು ವೈದ್ಯರು. ನಿವೃತ್ತ ಇಂಜಿನಿಯರ್ ಆರ್. ಈಶ್ವರಪ್ಪ, ವಾಣಿಜ್ಯ ತೆರಿಗೆ ನಿವೃತ್ತ ಉಪಕಮೀಷನರ್ ಎಸ್. ಹೆಚ್. ಉಪ್ಪಾರ, ಮಹಾನಗರಪಾಲಿಕೆಯ ನಿವೃತ್ತ ನೌಕರರು ಎಂ.ಹೆಚ್. ಉಪ್ಪಾರ, ಎ.ಪಿ.ಎಂ.ಸಿ. ಕಾರ್ಯದರ್ಶಿ, ಶಂಕರ ಹಾವಣ್ಣನವರ, ಸಿ.ಎಸ್. ನಾಯ್ಕರ್, ಬಿ.ಸಿ. ಬಸಾಪುರ, ಕೃಷಿ ಇಲಾಖೆಯಲ್ಲಿ

ವ್ಯವಸ್ಥಾಪಕರಾಗಿರುವ ವಸಂತ ಚಿಣಿ, ಆರ್.ಜಿ. ನರಗುಂದಕರ, ಪೊಲೀಸ್ ಇಲಾಖೆಯ ಹನಮಂತಪ್ಪ ಸಾಂಗ್ಲೀಕರ್, ಬ್ಯಾಂಕ್ ನೌಕರ ಶಂಕರಪ್ಪ ನೀರಾವರಿ, ವರ್ತಕ ಬಂಧುಗಳಾದ ಆರ್.ಕೆ. ಸಾಂಗ್ಲೀಕರ್ ಮತ್ತು ಮಕ್ಕಳು, ಕೃಷ್ಣಾ ಸಾಂಗ್ಲೀಕರ್, ಸಹದೇವಪ್ಪ ಸಾಂಗ್ಲೀಕರ್, ಶಿರಕೋಳ ಬಂಧುಗಳು, ಅರ್ಜುನ ಗೋದಾವರಿ, ಗದಗಕರ ಬಂಧುಗಳು, ಪೊಲೀಸ್ ಇನ್ಸ್‌ಪೆಕ್ಟರ್ ಕಾಖಂಡಕಿ, ಎ.ಪಿ.ಎಂ.ಸಿ. ನಿವೃತ್ತ ಕಾರ್ಯದರ್ಶಿ ಹಾಲಪ್ಪನವರ, ಅಕೌಂಟ್ಸ್ ಆಫೀಸರ್ ಶಿವಾಜಿ, ಯಲ್ಲ್‌ಸಾಯ್ಕರ್, ಶಿವಮೂರ್ತಿ, ಹೆಚ್.ಎಲ್. ಸಾಂಗ್ಲೀಕರ್, ಶ್ರೀರಾಮಯ್ಯ, ಶಾಂತಪ್ಪ ಗೊಟಗುಣಕಿ, ಹೆಬ್ಬಾಳದ ಹೈ.ವೈ. ಬಡಕಲಿ, ಅಜ್ಜಪ್ಪ ಬೆಳ್ಳಾರ, ಡಾ॥ ವಿ.ಎಫ್. ಭೀಮಣ್ಣನವರ, ಡಾ॥ ಆರ್. ಜಿ. ತೋರಗಲ್, ಹನಮಂತಪ್ಪ ಬಡಕಲಿ ವಕೀಲರು, ನಿಂಗಪ್ಪ ಭೀಮಣ್ಣನವರ, ಹನಮಂತಪ್ಪ ಭೀಮಣ್ಣನವರ್, ಸೋಮಲಿಂಗ ಬಡಕಲಿ, ಹುಬ್ಬಳ್ಳಿಯ ಕೇಶವಾಪುರದ ಯಂಕಪ್ಪ ಬಿ. ಎಡೆಹಳ್ಳಿ, ಯಂಕಪ್ಪ ತರಳಬಿಂಚಿ, ಮಾನಪ್ಪ ಬೈಚಬಾಳ, ಜಡೆಪ್ಪ ಕಟ್ಟಿಮನಿ, ವಿರುಪಾಕ್ಷ ಕಟ್ಟಿಮನಿ, ನಂದೆಪ್ಪ ಕಟ್ಟಿಮನಿ, ಆರ್.ಎ. ಉಪ್ಪಾರ, ಯು.ಎಸ್. ಬಂಡಿ, ಪ್ರದೀಪ ಸಾಂಗ್ಲೀಕರ್, ಬಿ.ಎಂ. ಜಾವೂರು, ಪ್ರಕಾಶ ಮುರಗೋಡ, ಬಸಪ್ಪ ಗಂಗಪ್ಪ ಮಾಕಣ್ಣವರ, ಗದಿಗೆಪ್ಪ ಭೀಮರಾಯ ಜಾವೂರು ಶಿರಕೋಳ ಮುಂತಾದವರು ಧಾರವಾಡ ಜಿಲ್ಲಾ ಉಪ್ಪಾರ ಸಮಾಜದ ಸಂಘಟಿಕರು ಹಾಗು ಹಿತೈಷಿಗಳು.

ರಾಜ್ಯದಲ್ಲಿ ಉಪ್ಪಾರ ಸಮಾಜ ಎದುರಿಸುತ್ತಿರುವ ಅನೇಕ ಸಮಸ್ಯೆಗಳು ಇಲ್ಲಿಯೂ ಕೂಡ ತಾಂಡವವಾಡುತ್ತಿವೆ. ಧಾರವಾಡದ ಸಾಂಸ್ಕೃತಿಕ ಹಾಗು ಶೈಕ್ಷಣಿಕ ಪರಂಪರೆ ಈ ಸಮಾಜದ ಮೇಲೆ ಇನ್ನೂ ಹೆಚ್ಚಿನ ಪ್ರಭಾವ ಬೀರಬೇಕಾಗಿದೆ. ಶಿಕ್ಷಣದ ಕೊರತೆ ಹಾಗು ಸಂಘಟನೆಯ ಅಭಾವದಿಂದ ಇಡೀ ಸಮುದಾಯವನ್ನು ಒಂದೆಂಬಂತೆ ಕೊಂಡೊಯ್ಯಲು ಸಾಧ್ಯವಾಗಿಲ್ಲ. ಈ ಸಮುದಾಯದವರು ವೈಚಾರಿಕತೆ ಹಾಗು ಆಧುನಿಕ ಮನೋಭಾವ ಬೆಳೆಸಿಕೊಳ್ಳಬೇಕು. ಒಳ ಪಂಗಡಗಳ ಭಿನ್ನಾಭಿಪ್ರಾಯ ಮರೆತು ಸಮೂಹ ಶಕ್ತಿಯನ್ನು ಪ್ರದರ್ಶಿಸುವುದು ಇಂದಿನ ಜರೂರ ಅವಶ್ಯಕತೆ. ಇಂದಿನ ಸ್ಪರ್ಧಾಯುಗದಲ್ಲಿ ಮಕ್ಕಳಿಗೆ ಉತ್ತಮ ಶಿಕ್ಷಣ ಕೊಡಿಸಲು ಎಲ್ಲ ಕುಟುಂಬಗಳು ಬಹು ದೊಡ್ಡ ತ್ಯಾಗ ಮಾಡಬೇಕಿದೆ. ವರ್ಷಕ್ಕೊಮ್ಮೆ ರಾಜರ್ಷಿ ಭಗೀರಥ ಜಯಂತಿಯನ್ನು ಜಿಲ್ಲಾ ಕೇಂದ್ರದಲ್ಲಿ ಆಚರಿಸುವ ಮೂಲಕ ಸಮಾಜದ ಸಂಘಟನೆಯನ್ನು ಅವಿಚ್ಛಿನ್ನವಾಗಿ ಕಾಯ್ದುಕೊಳ್ಳಬೇಕಾಗಿದೆ.

**ಮಾಹಿತಿಸಂಗ್ರಹ** : *ಅಶೋಕ ಬಿ. ನಾಯಕ*

*




# * ಹಾವೇರಿ ಜಿಲ್ಲೆ

## ಐತಿಹಾಸಿಕ ಹಿನ್ನೋಟ

ದಿವಂಗತ ಜೆ.ಹೆಚ್. ಪಟೇಲ್ ಅವರು 1997ರಲ್ಲಿ ರಾಜ್ಯದಲ್ಲಿ ಜಿಲ್ಲಾ ಪುನರ್ ವಿಂಗಡಣೆಯನ್ನು ಕೈಗೊಂಡರು. ಅದರ ಫಲವೇ ಹಾವೇರಿ ಜಿಲ್ಲೆಯ ರಚನೆ. ಇದು ಮೊದಲು ಧಾರವಾಡ ಜಿಲ್ಲೆಯ ಭಾಗವಾಗಿತ್ತು.

ಹಾವೇರಿ ಜಿಲ್ಲೆ ಹಾವೇರಿ, ಸವಣೂರು, ಶಿಗ್ಗಾಂವ್, ಹಾನಗಲ್, ಬ್ಯಾಡಗಿ, ರಾಣೆಬೆನ್ನೂರು ಮತ್ತು ಹಿರೇಕೆರೂರು ತಾಲ್ಲೂಕುಗಳನ್ನೊಳಗೊಂಡಿದೆ.

ಹಾವೇರಿ ಬೆಂಗಳೂರಿನಿಂದ ವಾಯುವ್ಯಕ್ಕೆ 339 ಕಿ.ಮೀ. ದೂರದಲ್ಲಿದೆ. ಜಿಲ್ಲೆಯ ವಾರ್ಷಿಕ ಮಳೆ ಸರಾಸರಿ 752 ಮಿ.ಮೀ. 2001ರ ಜನಗಣತಿ ಪ್ರಕಾರ ಈ ಜಿಲ್ಲೆಯ ಜನಸಂಖ್ಯೆ 14,37,860. ಪುರುಷರು 7,40,307, ಮಹಿಳೆಯರು 6,97,553. ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 68.09. ಅದರಲ್ಲಿ ಪುರುಷರ ಸಾಕ್ಷರತೆ ಶೇ. 77.94, ಮಹಿಳೆಯರದು ಶೇ. 57.60.

ಹಾವೇರಿಯು ಜಿಲ್ಲೆಯ ಎಲ್ಲ ತಾಲ್ಲೂಕುಗಳಿಗೂ ವ್ಯಾಪಾರ, ಉದ್ಯೋಗ, ವಿದ್ಯಾಭ್ಯಾಸ, ಔಷಧ ಮುಂತಾದ ವಿಷಯಗಳಿಗೆ ವ್ಯಾವಹಾರಿಕ ಕೇಂದ್ರವಾಗಿದೆ. ಹಾವೇರಿಯ ಉತ್ತರಕ್ಕೆ ಸವಣೂರು, ಶಿರಹಟ್ಟಿ ತಾಲ್ಲೂಕುಗಳು ಮೈಚಾಚಿಕೊಂಡಿವೆ. ಬ್ಯಾಡಗಿ-ರಾಣೆಬೆನ್ನೂರು ತಾಲ್ಲೂಕುಗಳು ಆಗ್ನೇಯ ದಿಕ್ಕಿಗೂ, ಹಿರೇಕೆರೂರ

ದಕ್ಷಿಣ ದಿಕ್ಕಿಗೂ, ಹಾನಗಲ್ ಪಶ್ಚಿಮ ದಿಕ್ಕಿಗೂ ಮೈಚಾಚಿಕೊಂಡಿವೆ. ಹಾವೇರಿ ಸಮುದ್ರ ಮಟ್ಟಕ್ಕಿಂತ 552.59 ಮೀ. ಎತ್ತರದಲ್ಲಿದೆ.

ಹಾವೇರಿ ತಾಲ್ಲೂಕಿನ ಒಟ್ಟು ಗ್ರಾಮಗಳ ಸಂಖ್ಯೆ 88. ವರದಾ ಹಾಗು ತುಂಗಭದ್ರಾ ನದಿಗಳು ಹಾವೇರಿಯಲ್ಲಿ ಹರಿಯುತ್ತವೆ. ಹೆಗ್ಗೇರಿ, ಹೊಮ್ಮರಡಿ, ಸರಗೂರು, ಕರ್ಜಗಿ, ಹೊಸರಿತ್ತಿ ಜಲಾಶಯಗಳನ್ನು ಈ ತಾಲ್ಲೂಕಿನಲ್ಲಿ ಕಾಣಬಹುದು. ಹಾವೇರಿ ತಾಲ್ಲೂಕಿನಲ್ಲಿ 3422 ಹೆಕ್ಟೇರು ಅರಣ್ಯ ಪ್ರದೇಶವಿದೆ. ತಾಲ್ಲೂಕಿನಲ್ಲಿ 11 ದೊಡ್ಡಕೆರೆ ಹಾಗು 55 ಸಣ್ಣಕೆರೆಗಳಿವೆ. 'ಹಾವೇರಿ' ಎಂಬ ಹೆಸರು ಹಾಹರಿ, ಹವೇರಿ ಎಂಬ ಶಬ್ದದಿಂದ ಬಂದಿದೆ. ಒಂದು ತರ್ಕದಂತೆ ಹಾವು ಮತ್ತು ಏರಿ ಎಂಬ ಶಬ್ದಗಳಿಂದ ಹಾವೇರಿ ಎಂಬ ಶಬ್ದ ಬಂತೆಂದು ಹೇಳಲಾಗಿದೆ.

ಕೃತಯುಗದಿಂದ ಈ ನಗರ ಅಸ್ತಿತ್ವದಲ್ಲಿತ್ತೆಂದು ಹೇಳಲಾಗಿದೆ. ರಾಷ್ಟ್ರಕೂಟರ ಮೂರನೆಯ ಕೃಷ್ಣನ ಕಾಲದ ಶಾಸನವೊಂದರಲ್ಲಿ ಈ ನಗರದ ಉಲ್ಲೇಖ ಸಿಗುವದರಿಂದ 10ನೆಯ ಶತಮಾನಕ್ಕಿಂತ ಪೂರ್ವದಲ್ಲಿಯೇ ಹಾವೇರಿ ಅಸ್ತಿತ್ವದಲ್ಲಿತ್ತೆಂದು ಅಭಿಪ್ರಾಯ ಪಡಬಹುದು. ಕಲ್ಯಾಣಿ ಚಾಳುಕ್ಯ ವಂಶದ ಒಂದನೆಯ ಸೋಮೇಶ್ವರನ ಕಾಲದಲ್ಲಿ ಇದು 'ಅಗ್ರಹಾರ'ವಾಗಿತ್ತೆಂದು ಹೇಳಲಾಗಿದೆ. 400 ಮಹಾಜನರು ಈ ಅಗ್ರಹಾರವನ್ನು ಆಳುತ್ತಿದ್ದರು. ಈ ನಾಲ್ಕು ನೂರು ಜನ ಒಂದು ಮಂಡಲವನ್ನು ಆಡಳಿತದ ಅನುಕೂಲಕ್ಕಾಗಿ ಸ್ಥಾಪಿಸಿಕೊಂಡಿದ್ದರು. ಇಂದಿನ ಹಾವೇರಿ ಅಂದಿನ ಪುಲಿಗೆರೆ (ಇಂದಿನ ಲಕ್ಷ್ಮೇಶ್ವರ)ಯಾಗಿತ್ತೆಂದು ಹಾಗೂ ಸಿದ್ದೇಶ್ವರ ದೇವಸ್ಥಾನವು ಯಾತ್ರಾಸ್ಥಳವಾಗಿತ್ತೆಂದು ಹೇಳಲಾಗಿದೆ.

ಕ್ರಿ.ಶ. 11ರಿಂದ 14ನೆಯ ಶತಮಾನದವರೆಗೆ ಆಳಿದ ಕಲ್ಯಾಣಿ ಚಾಳುಕ್ಯ, ಹೊಯ್ಸಳ ಹಾಗು ದೇವಗಿರಿ ಯಾದವರ ಕಾಲದಲ್ಲಿ ಈ ಹಾವೇರಿ ನಗರ ತುಂಬ ಪ್ರಾಮುಖ್ಯತೆ ಪಡೆದಿತ್ತು. ಡಾ. ಶ್ರೀನಿವಾಸರಿತ್ತಿ ಹೇಳುವಂತೆ "ಯಾದವ ಮತ್ತು ಹೊಯ್ಸಳ ಸಾಮ್ರಾಜ್ಯಗಳ ದಡದಲ್ಲಿದ್ದ ಹಾವೇರಿಯ ನೆತ್ತಿಯ ಮೇಲೆ ಸದಾ ಕರಿನೆರಳು ಇರುತ್ತಿತ್ತು."

ಕ್ರಿ.ಶ. 1133ರ ಶಾಸನಕವಿ ಮೂಕಣ್ಣ ಹಾವೇರಿನಾಡು ಎಂದು ವರ್ಣಿಸುತ್ತಾನೆ. ಕ್ರಿ.ಶ. 1115 ರಿಂದ 1265 ರವರೆಗೆ ಕಲ್ಯಾಣಿ ಚಾಲುಕ್ಯರ ಮಾಂಡಲೀಕರಾಗಿ ಗುತ್ತಲದ ಗುತ್ತರು ಹಾವೇರಿ ಪ್ರಾಂತ್ಯವನ್ನು ಆಳುತ್ತಿದ್ದರು. ಹಾವೇರಿಯಲ್ಲಿ ಅರವತ್ತುಮೂರು ವೀರಶೈವ ಮಠಗಳಿದ್ದವೆಂದು ದಾಖಲೆಗಳು ಹೇಳುತ್ತವೆ. ಭಾರತ ಸ್ವಾತಂತ್ರ್ಯ ಹೋರಾಟದಲ್ಲೂ ಹಾವೇರಿಯ ಪಾತ್ರ ಗಣನೀಯವಾಗಿದೆ. ಹುತಾತ್ಮರಾದ ಮೈಲಾರ ಮಹದೇವನ ಕಾರ್ಯಕ್ಷೇತ್ರ ಹಾವೇರಿಯ ಸುತ್ತಮುತ್ತಲಿನ ಹಳ್ಳಿಗಳಾಗಿದ್ದವು.

ಹೊಸಮನಿ ಸಿದ್ಧಪ್ಪ ಅಖಿಲ ಕರ್ನಾಟಕ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. ಸಿದ್ಧಪ್ಪ ಅವರು ಹಾವೇರಿಯನ್ನು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಕಾರ್ಯಸ್ಥಾನ ವೆನ್ನುವಂತೆ ಅದನ್ನು ಕ್ರಿಯಾಶೀಲವನ್ನಾಗಿಸಿದ್ದರು. 1930-31ರಲ್ಲಿ ಹೊಸಮನಿ ಸಿದ್ಧಪ್ಪ ಅವರು

ಹಾವೇರಿಯ ನಗರಸಭೆಯ ಅಧ್ಯಕ್ಷರಾಗಿ ಕಾಂಗ್ರೆಸ್ ಧ್ವಜವನ್ನು ನಗರಸಭೆಯ ಮೇಲೆ ಹಾರಿಸಿ ಬ್ರಿಟಿಷ್ ಸಾಮ್ರಾಜ್ಯಕ್ಕೆ 'ಶಾಕ್' ಕೊಟ್ಟಿದ್ದರು. ಇದೇ ಕಾಲದಲ್ಲಿ ವಿರೂಪಾಕ್ಷ ಅಂಗಡಿ, ಗುರುಲಿಂಗಪ್ಪ ಅಂಕಲಕೋಟಿ ಎಂಬ ಉಗ್ರಗಾಮಿಗಳು ಬ್ರಿಟಿಷರಿಗೆ ದುಃಸ್ವಪ್ನರಾಗಿದ್ದರು. ಇತರೆ ಸ್ವಾತಂತ್ರ್ಯ ಹೋರಾಟಗಾರರೆಂದರೆ ವೀರಯ್ಯ ಹೀರೇಮಠ, ತಿರಕಪ್ಪ ಮಡಿವಾಳ, ಗೋಣಪ್ಪಕಮತ, ಗೋವಿಂದಾಚಾರ್ಯ ಅಗ್ನಿಹೋತ್ರಿ, ಗಣಪುರದ ಸೋದರರು, ಎಸ್.ಬಿ. ಹಿರೇಮಠ, ಎಂ.ಎಸ್. ಬ್ಯಾಡಗಿ, ಸಿ.ಕೆ. ಕುಲಕರ್ಣಿ, ಎಸ್.ಸಿ. ಕುಲಕರ್ಣಿ, ಬಸವಣ್ಣೆಪ್ಪ ಗಿರ್ಜಿ, ಪುಟ್ಟಪ್ಪ ತುರುಮರಿ, ಚೆನ್ನಬಸಪ್ಪ ತುರುಮರಿ, ಮಡಿವಾಳಪ್ಪ ಮಾಸೂರ, ಪಂಚಾಕ್ಷರಪ್ಪ ಏಳಗನೂರ ಮುಂತಾದವರು.

ಹಾವೇರಿಯಲ್ಲಿ ವೀರಶೈವ, ಬ್ರಾಹ್ಮಣ, ಮರಾಠಿ, ಜೈನ, ವಿಶ್ವಕರ್ಮ, ಕುರುಬ, ಮುಸ್ಲಿಂ, ಉಪ್ಪಾರ, ಭಾವಸಾರಕ್ಷತ್ರಿಯ, ನೇಕಾರ, ಲಂಬಾಣಿ, ಗೌಳಿ, ಪರಿಶಿಷ್ಟ ಜಾತಿ ಹಾಗು ಪರಿಶಿಷ್ಟ ವರ್ಗ ಮೊದಲಾದ ಸಮುದಾಯಗಳಿವೆ.

ಹಾವೇರಿಯನ್ನು ಮಲೆನಾಡ ಸೆರಗಿನ ಪ್ರದೇಶವೆಂದು ಗುರುತಿಸಲಾಗಿದೆ. ಹೈಬ್ರಿಡ್ ಜೋಳ, ಶೇಂಗಾ, ಗೋವಿನಜೋಳ, ಮೆಣಸಿನಕಾಯಿ, ಹತ್ತಿ, ಗೋಧಿ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ.

ಹಾವೇರಿ ಏಲಕ್ಕಿ ವ್ಯಾಪಾರಕ್ಕೆ ಪ್ರಸಿದ್ಧವಾದ ಸ್ಥಳ. ವರ್ಷಕ್ಕೆ ಹದಿನೈದು ಕೋಟಿ ರೂಪಾಯಿಗಳಷ್ಟು ಏಲಕ್ಕಿ ವ್ಯಾಪಾರ ಇಲ್ಲಿ ನಡೆಯುತ್ತದೆ. ಏಲಕ್ಕಿಯನ್ನು ಸ್ವಚ್ಛಗೊಳಿಸುವ ಬಾವಿಗೆ 'ಏಲಕ್ಕಿ ಬಾವಿ' ಎಂಬ ಹೆಸರು ಬಂದಿದೆ. ಗುಜರಾತ್, ಮಹಾರಾಷ್ಟ್ರ, ಪಂಜಾಬ್, ದೆಹಲಿ, ಕಾನ್ಪುರ, ಲಖನೌಗಳಿಗೆ ಇಲ್ಲಿಂದ ಏಲಕ್ಕಿ ರವಾನೆಯಾಗುತ್ತದೆ. 1944ರಲ್ಲಿ ಏಲಕ್ಕಿ ವರ್ತಕರ ಸಂಘ ಅಸ್ತಿತ್ವಕ್ಕೆ ಬಂತು. ಏಲಕ್ಕಿ ಮಾಲೆಗಳಿಗೆ ಹಾವೇರಿ ತುಂಬ ಪ್ರಸಿದ್ಧವಾಗಿದೆ. ಒಂಬತ್ತು, ಏಳು ಹಾಗು ಐದು ಎಳೆಯ ಏಲಕ್ಕಿ ಮಾಲೆಗಳು ಇಲ್ಲಿ ತಯಾರಾಗುತ್ತದೆ.

ಹಾವೇರಿಯಲ್ಲಿ ಅನೇಕ ಪ್ರಾಚೀನ ಸ್ಮಾರಕಗಳಿವೆ. ಇಲ್ಲಿನ ಕಲ್ಲುಮಂಟಪಕ್ಕೆ ಐತಿಹಾಸಿಕ ಪ್ರಾಮುಖ್ಯತೆಯಿದೆ.. ವೀರಭದ್ರ ದೇವಾಲಯ, ಕೋಟಿಬಾವಿ, ರಾಮಲಿಂಗ ಹಾಗು ಶಂಕರಲಿಂಗ ದೇವಾಲಯಗಳು ಪ್ರಮುಖವಾದವು.

ಗುತ್ತಲ ಈ ತಾಲ್ಲೂಕಿನ ಪ್ರಮುಖ ಕೇಂದ್ರ. ಹೇಮಗಿರಿ ಇಲ್ಲಿನ ಪ್ರಸಿದ್ಧ ಮಠ. ಉತ್ತರ ಭಾರತದ ಗುಪ್ತವಂಶದ ಗುತ್ತರು ಈ ಪ್ರದೇಶವನ್ನು ಆಳುತ್ತಿದ್ದು 'ಗುತ್ತ ಪೊಳಲ್' ಎಂಬ ಹೆಸರಿನಿಂದ ಕರೆಯುತ್ತಿದ್ದರು.

ಅಗಡಿಯ ಆನಂದವನ ಅಧ್ಯಾತ್ಮ ಪ್ರೇಮಿಗಳಿಗೆ ತುಂಬ ಪ್ರಿಯವಾದ ಸ್ಥಳ. ಚಿದಂಬರ ಸ್ವಾಮಿಗಳ ದ್ವಿತೀಯ ಅವತಾರವೆಂದು ಖ್ಯಾತರಾದ ಶ್ರೀ ಶೇಷಾಚಲ ಸದ್ಗುರುಗಳು ನೆಲೆಸಿದ

ತಾಣವಿದು. ಖ್ಯಾತ ಕಾದಂಬರಿಕಾರರಾದ ಗಳಗನಾಥರು ಇಲ್ಲಿಂದಲೇ 'ಸದ್ಬೋಧ ಚಂದ್ರಿಕೆ'ಯನ್ನು ಪ್ರಕಟಿಸುತ್ತಿದ್ದರು.

ಈ ತಾಲ್ಲೂಕಿನಿಂದ ಅನೇಕ ಪ್ರತಿಭಾವಂತರು ಮೂಡಿಬಂದಿದ್ದಾರೆ. ಅವರಲ್ಲಿ ಪ್ರೊ. ಸಿ.ಸಿ. ಬಸವನಾಳ, ಡಾ॥ ಶ್ರೀನಿವಾಸ ಹಾವನೂರ, ಆರ್.ವಿ. ಕುಲಕರ್ಣಿ, ಕತೆಗಾರರಾದ ಮುರುಘರಾಜೇಂದ್ರ ಮಾಗಾವಿ, ಮಕ್ಕಳ ಕವಿ ಗಂಗಾಧರ ನಂದಿ, ಡಾ॥ ಶ್ರೀನಿವಾಸ ರಿತ್ತಿ, ಆರ್.ವಿ. ಹೊರಡಿ ಬಸವಲಿಂಗಶಾಸ್ತ್ರಿ ಬಾಳೀಮಠ, ಬಸವರಾಜ ಕುಂಬಾರ, ಸಿ.ಪಿ. ಹೇಮಗಿರಿ ಮಠ, ಬಿ.ಟಿ. ದೇಸಾಯಿ, ಭೋಜರಾಜ ಪಾಟೀಲ, ರೇವಣಸಿದ್ದಪ್ಪ ಪ್ಯಾಟಿಮಠ ಹಾಗೂ ವಿ.ಎಸ್. ಕಾಶೆಟ್ಟಿ ಮೊದಲಾದವರಿದ್ದಾರೆ. ಖ್ಯಾತ ಬಂಡಾಯ ಕವಿ ಚಂದ್ರಶೇಖರ ಪಾಟೀಲ ತಮ್ಮ ಪ್ರಾರಂಭದ ರಚನೆಗಳನ್ನು ಹಾವೇರಿಯಲ್ಲಿ ಮಾಡಿದರು.

ಕನ್ನಡದ ಮೊದಲ ಸ್ವತಂತ್ರ ಕಾದಂಬರಿಕಾರರಾದ ಗಳಗನಾಥರು ಅಗಡಿಯ ಗಳಗನಾಥದವರು. ಅವರ ಪೂರ್ಣ ಹೆಸರು ವೆಂಕಟೋತಿರಕೋ ಕುಲಕರ್ಣಿ.

ತಮ್ಮ ಸುಮಧುರ ಕಂಠಕ್ಕೆ ಹೆಸರಾದ ಜುಬೇದಾಬಾಯಿ ಸವಣೂರು ಇಲ್ಲಿಯವರು. ಸಣ್ಣಪ್ಪ ಹಾವೇರಿ, ಬಾಬಣ್ಣ ಹಾವೇರಿ ಹಾಗು ದುಂಡ ಹಾವೇರಿ ಪ್ರಮುಖ ರಂಗ ಕಲಾವಿದರು.

ಹಾವೇರಿ ಜಿಲ್ಲೆಯ ಸವಣೂರು ಒಂದು ತಾಲ್ಲೂಕು ಕೇಂದ್ರ. ತಾಲ್ಲೂಕಿನ ವಿಸ್ತೀರ್ಣ 539 ಕಿ.ಮೀ. ಈ ತಾಲ್ಲೂಕಿನಲ್ಲಿ 62 ಗ್ರಾಮಗಳಿವೆ. ತಾಲ್ಲೂಕಿನ ಸರಾಸರಿ ಮಳೆ 754 ಮಿ.ಮೀ. 801 ಹೆ. ಅರಣ್ಯ ಪ್ರದೇಶವಿದೆ. ಹತ್ತಿಮತ್ತೂರು ಹಾಗು ಸವಣೂರು ಇದರ ಹೋಬಳಿಗಳು.

ವೀರಶೈವ ಸಮುದಾಯ ಹೆಚ್ಚಿದ್ದರೂ ಇತರ ಎಲ್ಲ ಸಮುದಾಯವೂ ಈ ತಾಲ್ಲೂಕಿನಲ್ಲಿದೆ.

ಬಾದಾಮಿ ಚಾಳುಕ್ಯರು, ರಾಷ್ಟ್ರಕೂಟರು ಹಾಗು ಕಲ್ಯಾಣಿ ಚಾಳುಕ್ಯರು ಈ ಪ್ರದೇಶವನ್ನು ಆಳಿದ್ದಾರೆ. "ಸವಣೂರು ಸಂಸ್ಥಾನದ ನವಾಬರು" ಇಲ್ಲಿನ ಆಳರಸರು. ಅವರು ಮೂಲತಃ ಅಫಘಾನಿಸ್ಥಾನದ ಕೊಹಲಾದಿಂದ ಬಂದ ಝೋರಾನಾ ಮತ್ತು ಭೋರಾಸಾ ಮನೆತನಕ್ಕೆ ಸೇರಿದ ಪಠಾಣರು.

ಮೊಘಲ್ ದೊರೆ ಔರಂಗಜೇಬ ಸವಣೂರನ್ನು ಸಂಸ್ಥಾನವನ್ನಾಗಿ ರೂಪಿಸಿ, ಅದಕ್ಕೆ ರಾವುಫಖಾನ್‌ನನ್ನು ಮಾಂಡಲೀಕನನ್ನಾಗಿ ನೇಮಿಸಿದನು. ಇದರ ಮೊದಲ ಹೆಸರು ಜನಮಾರನಹಳ್ಳಿ. ಈ ಊರನ್ನು ಸೋಮಶೇಖರರೆಡ್ಡಿ ಎಂಬ ಪಾಳೇಗಾರ ಆಳುತ್ತಿದ್ದ. ಆತನನ್ನು ರಾವೂಫ್ ಖಾನ್‌ನನ್ನು ಸೋಲಿಸಿ ಈ ಪ್ರದೇಶ ವಶಪಡಿಸಿಕೊಂಡನು. ಆಗಿನ ಇದರ ಹೆಸರು ಶ್ರಾವಣೂರು. ಅದೇ ಮುಂದೆ ಸವಣೂರಾಯಿತು. ಮರಾಠ, ಪೇಶ್ವೆ, ಹೈದರಾಲಿ ಈ ಪ್ರದೇಶದ ಮೇಲೆ ಕಣ್ಣು ಹಾಕಿದರು. ದಿವಾನ್ ಖಂಡೇರಾವ್ ಅವರ ಕಾಲದಲ್ಲಿ ಸವಣೂರು 25 ಹಳ್ಳಿಗಳ ಸಣ್ಣ ಸಂಸ್ಥಾನವಾಗಿತ್ತು.

ಸವಣೂರ ನವಾಬ ಅಬ್ದುಲ್ ರಾವುಫ್‌ಖಾನ್‌ನ ಮಗ ಅಬ್ದುಲ್ ಹಕೀಂಖಾನ್

ಸಂಸ್ಥಾನದ ಸೂತ್ರ ವಹಿಸಿಕೊಂಡಾಗ ಉತ್ತರಾದಿ ಮಠದ ಶ್ರೀ ಸತ್ಯಬೋಧ ಸ್ವಾಮಿಗಳವರ ಆಗಮನವಾಯಿತು. ಹೈದರ್ ಹಾಗು ಸವಣೂರು ನವಾಬ್ ಜೊತೆ ರಕ್ತಸಂಬಂಧ ಬೆಳೆಯಲು ಶ್ರೀ ಸತ್ಯಬೋಧರು ಕಾರಣರಾಗಿದ್ದಾರೆ. ಆ ಕಾಲದ ನಾಣ್ಯದ ಮೇಲೆ ಶ್ರೀ ಸತ್ಯಬೋಧರ ಚಿಹ್ನೆಗಳನ್ನು ಕಂಡಾಗ ಈ ಸಂಸ್ಥಾನದಲ್ಲಿರುವ ಅವರ ಪ್ರಭಾವವನ್ನು ಗಮನಿಸಬಹುದು.

ನವಾಬ್ ಹಕೀಂಖಾನ್‌ನ ಪುತ್ರ ಖೈರ್‌ಖಾನ್‌ನ ಆಳ್ವಿಕೆಯ ಕಾಲದಲ್ಲಿ ಸವಣೂರು ಶಿಸ್ತಿನ ಸಂಸ್ಥಾನವಾಗಿ ಅಭಿವೃದ್ಧಿಯಾಯಿತು. ವಜೀರ್‌ಖಾನ್ ಹಾಗು ಹೈದ್ರಾಬಾದ್ ದಂಡಾಧಿಕಾರಿ ಅನಿಪೂಲ್ ಮುಲ್ಕಾನ ಮಗಳೊಂದಿಗೆ ಈತನ ವಿವಾಹವಾಯಿತು. ಸವಣೂರಿನಲ್ಲಿ ವಜೀರ್‌ಖಾನ್‌ನ ಹೆಸರಿನಲ್ಲಿ ಪ್ರೌಢಶಾಲೆ ಪ್ರಾರಂಭವಾಗಿ ಅದು ಈಗಲೂ ನಡೆಯುತ್ತಿದೆ. 1948ರಲ್ಲಿ ಸಂಸ್ಥಾನಗಳು ವಿಲೀನವಾದಾಗ ವಜೀರ್‌ಖಾನ್ ಇದಕ್ಕೊಪ್ಪಿ ಸರ್ಕಾರಕ್ಕೆ ಖಜಾನೆ ಒಪ್ಪಿಸಿದನು.

ಪ್ರಹ್ಲಾದರಾವ್‌ರಿತ್ತಿ, ಬಡ್ಡಿ ರಾಮಣ್ಣ, ಡಾ. ಶ್ರೀಕಾಂತ ಕಡಸಲಗಿ, ನೀಲಕಂಠಗೌಡ ಪಾಟೀಲ್, ರೇವಣಪ್ಪ ಹಾರಣಗಿ ಮುಂತಾದವರು ಸವಣೂರು ತಾಲ್ಲೂಕಿನಿಂದ ಬಂದ ಸ್ವಾತಂತ್ರ್ಯ ಹೋರಾಟಗಾರರು.

ಸವಣೂರು ತಾಲ್ಲೂಕು ವೀಳ್ಯೆದೆಲೆ ಹಾಗು ನೆಲಗಡಲೆಗೆ ಪ್ರಸಿದ್ಧಿ. ಇಲ್ಲಿಂದ ದೂರದ ದೇಶಗಳಿಗೆ ಇವು ರಫ್ತಾಗುತ್ತವೆ.

ನವಾಬರ ಕಾಲದ ಎರಡು ಅರಮನೆಗಳಿದ್ದು ದರ್ಬಾರ್‌ಹಾಲ್ ಪಟ್ಟಣದ ಮಧ್ಯದಲ್ಲಿದೆ. ಶ್ರೀ ಸತ್ಯಬೋಧರ ಮೂಲವೃಂದಾವನ, ಕಲ್ಮಠ, ಅಡವೀಶ ಸ್ವಾಮಿಗಳವರ ಮಠ, ಚರಂತಿಮಠ ಹಾಗು ವಿಷ್ಣುತೀರ್ಥರ ಮಠ ಇಲ್ಲಿವೆ. ಖಾರಾಂಖಾನ್ ಹಾಗು ಕಮಾಲ್ ಬಗಾಡಿ ಎಂಬ ಎರಡು ಮಸೀದಿಗಳಿವೆ. ಆಸಾರ ಎಂಬ ದರ್ಗವಿದೆ.

ಸವಣೂರು ತಾಲ್ಲೂಕಿನ ಕಳಸೂರು ಗ್ರಾಮದಲ್ಲಿ ಅಂಬಿಗರ ಸಂಖ್ಯೆ ಯಥೇಚ್ಛವಾಗಿದೆ. ವರದಾನದಿ ದಂಡೆ ಮೇಲಿರುವ ಮಾಯಮ್ಮನ ಗುಡಿ ಪ್ರಸಿದ್ಧವಾದುದು. ಇದೇ ತಾಲ್ಲೂಕಿನ ಮುತವಾಡಿಯಲ್ಲಿ ಶ್ರೀ ರೇವಣಸಿದ್ದೇಶ್ವರ ಸ್ವಾಮಿಯ ಗದ್ದುಗೆಯಿದೆ. ಕಾರಡಗಿಯಲ್ಲಿ ವೀರಭದ್ರ ದೇವಸ್ಥಾನವಿದೆ. ತೆವರಮಳ್ಳಿ ಹಳ್ಳಿಯಲ್ಲಿ ನಂದಿಕೇಶ್ವರ ದೇವಸ್ಥಾನವಿದೆ.

ಸವಣೂರು ಸಾಹಿತ್ಯ ಸಂಸ್ಕೃತಿಗಳಿಗೆ ಉತ್ತೇಜನ ಕೊಟ್ಟ ಸ್ಥಳವಾಗಿದೆ. ಉತ್ತರಾದಿ ಮಠದ ಶ್ರೀ ಸತ್ಯಬೋಧತೀರ್ಥರಿಂದಾಗಿ ಶ್ರೀ ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಮೋಹನದಾಸರು ಮೊದಲಾದ ಹರಿದಾಸರಿಗೆ ಈ ಪ್ರಾಂತ್ಯದ ಸಂಪರ್ಕ ದೊರೆಯಿತು.

ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಡಾ. ವಿ. ಕೃ. ಗೋಕಾಕ್ ಅವರು ಈ ಪ್ರಾಂತ್ಯದವರು.

ಇಲ್ಲಿಂದ ಮೂಡಿದ ಮತ್ತೊಬ್ಬ ಪ್ರತಿಭಾವಂತ ಸಾಹಿತ್ಯಪುರುಷರೆಂದರೆ ಡಾ॥ ಆರ್. ಆರ್. ಕುಲಕರ್ಣಿ ಅವರು.

ಅಂಬಿಗೇರ ಜನರ ಡೊಳ್ಳುಪದ, ಕುರುಬರ ಆರಾಧ್ಯದೈವ ಬೀರಲಿಂಗೇಶ್ವರ ಡೊಳ್ಳಿನ ಪದ, ಮನ್ನಂಗಿ ಗ್ರಾಮದ ತೊಗಲಿನ ಬೊಂಬೆಗಳು ಹಾಗು ಯಲವಿಗಿ ತಾಂಡದ ಲಂಬಾಣಿ ನೃತ್ಯ, ಕೋಲಾಟ ಈ ತಾಲ್ಲೂಕಿನ ಪ್ರಮುಖ ಜನಪದ ಕಲೆಗಳು.

ಶಿಗ್ಗಾಂವಿ ಹಾವೇರಿ ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರ. ತಾಲ್ಲೂಕಿನ ಉತ್ತರದಲ್ಲಿ ಕುಂದಗೋಳ, ದಕ್ಷಿಣದಲ್ಲಿ ಹಾನಗಲ್ಲು, ಪೂರ್ವದಲ್ಲಿ ಸವಣೂರು ಹಾಗು ಪಶ್ಚಿಮಕ್ಕೆ ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡು ಸುತ್ತುವರಿದಿವೆ.

ಶಿಗ್ಗಾಂವಿ ತಾಲ್ಲೂಕಿನ ವಿಸ್ತೀರ್ಣ 585 ಚ.ಕಿ.ಮೀ. ಈ ತಾಲ್ಲೂಕಿನ ಗ್ರಾಮಗಳ ಸಂಖ್ಯೆ 92. ತಾಲ್ಲೂಕಿನ ಪೂರ್ವದ ಕಡೆ ಇಳಿಜಾರಿದ್ದು ಅಲ್ಲಲ್ಲಿ ಸಣ್ಣ ಗುಡ್ಡ ಹಾಗು ಕಿರಿದಾದ ಕಣಿವೆಗಳಿವೆ.

ಈ ತಾಲ್ಲೂಕಿನ ಧುಂಡಸಿ ಗ್ರಾಮದ ಬಳಿ ಜಿಲ್ಲೆಯ ಉಪನದಿಯಾದ ಬೆಣ್ಣೆಹಳ್ಳ ಉತ್ತರಾಭಿಮುಖವಾಗಿ ಹರಿದು ಮೆಣಸಗಿ ಬಳಿ ಮಲಪ್ರಭಾ ನದಿಯನ್ನು ಸೇರುತ್ತದೆ. ಶಿಗ್ಗಾಂವಿ ತಾಲ್ಲೂಕಿನ ಬಹುಭಾಗ ಜಲಾನಯನ ಪ್ರದೇಶವಾಗಿದೆ. ತಾಲ್ಲೂಕಿನ ವಾರ್ಷಿಕ ಮಳೆ 811.2 ಮಿ.ಮೀ. ಶಿಗ್ಗಾಂವಿ ಮಲೆನಾಡು ಪ್ರದೇಶವಾದ್ದರಿಂದ ಸುಮಾರಾಗಿ ಕಾಡುಗಳಿವೆ. ತೇಗ, ಗಂಧ, ಅಳಲೆ, ಹಲಸು, ಮಾವು, ಆಲ, ಅತ್ತಿ, ಬಿಳಿನಂದಿ, ಬೀಟಿ ಮೊದಲಾದ ಮರಗಳಿವೆ. ತೊರೆಗಳಲ್ಲಿ ಬಿದಿರು ಮೆಳೆಗಳಿವೆ. ಭತ್ತ, ರಾಗಿ, ಜೋಳ ಇಲ್ಲಿನ ಪ್ರಮುಖ ಆಹಾರ ಬೆಳೆಗಳು.

ಈ ತಾಲ್ಲೂಕಿನಲ್ಲಿ ಕ್ರಿ.ಶ. 970ರ ಕಾಲಕ್ಕೆ ಸೇರಿದ ರಾಷ್ಟ್ರಕೂಟರ ಕೊನೆಯ ದೊರೆ ಖೊಟ್ಟಿಗನ ಶಾಸನ ದೊರಕಿದೆ. ಅಲ್ಲದೆ ಇತರೆ ಹದಿನೈದು ಶಾಸನಗಳು ದೊರೆತಿವೆ. ಮಾನ್ಯಖೇಟದ ರಾಷ್ಟ್ರಕೂಟರ ಕಾಲದಿಂದ ಹಿಡಿದು ಸವಣೂರು ನವಾಬರ ತನಕ ಅಪೂರ್ವ ಮಾಹಿತಿ ಈ ಶಾಸನಗಳಿಂದ ದೊರೆಯುತ್ತದೆ. ಈ ತಾಲ್ಲೂಕಿನ ಪ್ರಾಚೀನ ಶಾಸನವೆಂದರೆ ಒಂದನೆಯ ಅಮೋಘವರ್ಷನ ಕಾಲಕ್ಕೆ ಸೇರಿದ್ದು. ಅದರಲ್ಲಿ ಸೂರ್ಯದೇವಾಲಯಕ್ಕೆ ದತ್ತಿ ಕೊಟ್ಟ ಉಲ್ಲೇಖವಿದೆ.

ಶಿಗ್ಗಾಂವಿಗೆ ಎರಡು ಕಿ.ಮೀ. ದೂರದಲ್ಲಿರುವ ಗಂಜಿಗಟ್ಟಿಯಲ್ಲಿ ಸುಮಾರು ಎಂಟು ಪದರ ಅಡಿ ಮೇಲ್ಛಾವಣಿಯಲ್ಲಿ ಅಷ್ಟ ದಿಕ್ಪಾಲಕರನ್ನು ಕೆತ್ತಲಾಗಿದೆ. ಇದೊಂದು ಅಮೂಲ್ಯ ಕಲಾಕೃತಿಯೆಂದು ಖ್ಯಾತವಾಗಿದೆ.

ಶಿಗ್ಗಾಂವಿಯಿಂದ ಹದಿನಾರು ಕಿ.ಮೀ. ದೂರದ ಹಿರೇಬೆಂಡಿಗೇರಿಯಲ್ಲಿ ಕಾಳಪ್ಪನ ದೇವಾಲಯ ಹಾಗು ಎರಡು ಮಠಗಳಿವೆ. ಇಲ್ಲಿಯೇ ಕಲ್ಯಾಣಿ ಚಾಳುಕ್ಯರ ಆರನೆಯ ವಿಕ್ರಮಾದಿತ್ಯ, ಎರಡನೆಯ ಜಗದೇಕ ಮತ್ತು ಕಳಚೂರಿಯ ಎರಡನೆಯ ಬಿಜ್ಜಳನಿಗೆ ಸಂಬಂಧಪಟ್ಟ ಶಾಸನಗಳಿವೆ.

ಶಿಗ್ಗಾಂವಿಯ ಈಶಾನ್ಯಕ್ಕೆ 12 ಕಿ.ಮೀ. ದೂರದ ಹುಲಗೂರಿನಲ್ಲಿ ಸಂತ ಹಜರತ್ ಷಾ

ಅವರ ಸಮಾಧಿಯಿದೆ. ಇದೊಂದು ಪವಿತ್ರ ಸ್ಥಳಪಾಗಿದ್ದು ಮುಸ್ಲಿಂರ ಯಾತ್ರಾಸ್ಥಳವಾಗಿದೆ.

ಹಾವೇರಿ ಜಿಲ್ಲೆಯ ಮತ್ತೊಂದು ತಾಲ್ಲೂಕು ಕೇಂದ್ರ ಹಾನಗಲ್ಲು. ಸಮುದ್ರ ಮಟ್ಟದಿಂದ ಹಾನಗಲ್ಲು 600 ಮೀ. ಎತ್ತರದಲ್ಲಿದೆ. ತಾಲ್ಲೂಕಿನ ವಿಸ್ತೀರ್ಣ 774.22. ಈ ತಾಲ್ಲೂಕಿನ ನದಿಗಳು ವರದಾ ಹಾಗು ಧರ್ಮಾ. 8,376 ಎಕರ ಅರಣ್ಯಭೂಮಿಯಿದೆ. ತಾಲ್ಲೂಕಿನಲ್ಲಿ ಒಟ್ಟು 145 ಗ್ರಾಮಗಳಿವೆ. ಹಾನಗಲ್ಲು ತಾಲ್ಲೂಕಿನ ಆರೂರ ಗ್ರಾಮದ ದಿಬ್ಬದಲ್ಲಿ 'ಚೀನೀ ಮಣ್ಣು' ದೊರಕುತ್ತಿದ್ದು ಪ್ರತಿವರ್ಷ ಸಾವಿರಾರು ಟನ್‌ಗಳಷ್ಟು ಸೋಸಿದ ಮಣ್ಣನ್ನು ಮುಂಬಯಿಗೆ ರವಾನಿಸಲಾಗುತ್ತಿದೆ.

ಮಹಾಭಾರತದ ಕಾಲದಲ್ಲಿ 'ಹಾನಗಲ್ಲು' ವಿರಾಟನಗರವಾಗಿತ್ತೆಂದು ಸ್ಥಳಪುರಾಣ ಹೇಳುತ್ತದೆ. ಹಾನಗಲ್ಲಿಗೆ ಸಂಧಿಪುರ, ವಿರಾಟಪುರ, ವಿರಾಟನ ಕೋಟೆ, ವಿರಾಟನಗರ ಎಂಬ ಹೆಸರುಗಳು ಇತ್ತೆಂದು ಹೇಳಲಾಗಿದೆ. ಶಾಸನಗಳಲ್ಲಿ ಇದನ್ನು 'ಪಾನುಂಗಲ್' ಎಂದು ಕರೆಯಲಾಗಿದೆ.

ಪ್ರಾಚೀನ ಕುಪ್ಪಟೂರು ಈ ಪ್ರಾಂತ್ಯದ ಪ್ರಸಿದ್ಧವಾದ ನಗರ. ಇದನ್ನು 'ಪಾಂಕ್ತಿಪುರ'ವೆಂದು ಕರೆಯುತ್ತಿದ್ದರು. ಶಾತವಾಹನ ಹಾಗು ಬನವಾಸಿ ಕದಂಬರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತ್ತು. ಹಾನಗಲ್ ಕದಂಬ ರಾಜನಾದ ಎರಡನೇ ಕೃಷ್ಣವರ್ಮನು ಕೌಂಡಿನ್ಯ ಗೋತ್ರದ ಸ್ವಾಮಿಶರ್ಮನೆಂಬ ಬ್ರಾಹ್ಮಣನಿಗೆ ದಾನ ಕೊಟ್ಟನೆಂದು ಇಲ್ಲಿಯ ಶಿಲಾಶಾಸನವೊಂದರಿಂದ ತಿಳಿದುಬರುತ್ತದೆ.

ರಾಷ್ಟ್ರಕೂಟರು ಹಾಗು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಹಾನಗಲ್ಲು ಕದಂಬರು ಆಳ್ವಿಕೆ ನಡೆಸಿದ್ದರು. ಹೊಯ್ಸಳರಿಂದ ಸೋಲಿಸಲ್ಪಟ್ಟ ಈ ವಂಶದ ಕೊನೆಯ ರಾಜ ಪುರಂದರ ಕ್ರಿ.ಶ. 14ನೆಯ ಶತಮಾನದತನಕ ಬದುಕಿದ್ದ. ಅವನ ಆಳ್ವಿಕೆಯ ತನಕ ಹಾನಗಲ್ ಕೋಟೆ ಉಳಿದಿತ್ತು. ಹಾನಗಲ್ಲಿನ ತಾರಕೇಶ್ವರ ದೇವಾಲಯ ಹಿಂದಿನ ಧಾರವಾಡ ಜಿಲ್ಲೆಯ ಅತಿ ದೊಡ್ಡ ದೇವಾಲಯವಾಗಿದೆ. ಸೂಕ್ಷ್ಮ ಕೆತ್ತನೆಯನ್ನು ಈ ದೇವಾಲಯದಲ್ಲಿ ಕಾಣಬಹುದು.

ಆಡೂರಿನ ಶ್ರೀ ಮೈಲಾರಲಿಂಗ ರಥೋತ್ಸವ, ಬಸಾಪುರದ ಬಸವೇಶ್ವರ ರಥೋತ್ಸವ, ಅಕ್ಕಿಆಲೂರಿನ ವೀರಭದ್ರೇಶ್ವರ ರಥೋತ್ಸವ, ಹಾನಗಲ್ಲಿನ ಕುಮಾರಸ್ವಾಮಿ ರಥೋತ್ಸವ, ಬೆಳಗಾಲ ಪೇಟೆಯ ನಿಸ್ಸಿಮೇಶ್ವರ, ಹೂಲಿಕಣದ ಶ್ರೀ ನಂಜುಂಡೇಶ್ವರ ಹಾಗು ತಿಳವಳಿಯ ಶಾಂತೇಶ್ವರ ರಥೋತ್ಸವಗಳು ಈ ಜಿಲ್ಲೆಯಲ್ಲಿ ಪ್ರಸಿದ್ಧಿಯಾಗಿವೆ.

ಹಾನಗಲ್ಲು ಕುಮಾರಸ್ವಾಮಿ ಧಾರ್ಮಿಕ ವಿರಕ್ತಮಠ ರಾಜ್ಯಾದ್ಯಂತ ಪ್ರಸಿದ್ಧವಾಗಿದೆ. ಶ್ರೀಮದಲ್ಲಮ ಪ್ರಭುದೇವರ ನಿರಂಜನಗುರು ಪಂಪಾಪತಿಯ ಪೀಠ ಪ್ರಮುಖವಾಗಿದೆ. 18ನೆಯ ಶತಮಾನದ ಶ್ರೀ ಕುಮಾರಪ್ರಭು ಎಂಬುವವರು 'ಭಿಕ್ಷುಕ ಮಹೇಶ ವಿಲಾಸ' ಹಾಗು 'ಕುಮಾರೇಶ್ವರ ಪುರಾಣ' ಎಂಬ ಪ್ರೌಢ ಮಹಾಕಾವ್ಯ ರಚಿಸಿದರು. ಅವರೇ 1904ರಲ್ಲಿ ಅಖಿಲ ಕರ್ನಾಟಕ

ವೀರಶೈವ ಮಹಾಸಭಾವನ್ನೂ, 1909ರಲ್ಲಿ 'ಶಿವಯೋಗ' ಮಂದಿರವನ್ನೂ ಸ್ಥಾಪಿಸಿದರು. ವಚನ ಪಿತಾಮಹ ಡಾ॥ ಫ.ಗು. ಹಳಕಟ್ಟಿ ಹಾಗು ಚೆನ್ನಮಲ್ಲಿಕಾರ್ಜುನ ಅವರಿಗೆ ಪ್ರೋತ್ಸಾಹ ಮತ್ತು ಪ್ರೇರಣೆ ನೀಡಿ ವಚನ ಸಾಹಿತ್ಯದ ಸಂಶೋಧನೆಗೆ ಕಾರಣಕರ್ತರಾದರು. ಪೂಜ್ಯ ಸದಾಶಿವ ಕುಮಾರ ಸ್ವಾಮಿಗಳು ಈ ಪರಂಪರೆ ಮುಂದುವರಿಸಿದರು.

ಪದ್ಮವಿಭೂಷಣ ಪ್ರಶಸ್ತಿ ಪುರಸ್ಕೃತರಾದ ಡಾ॥ ಗಂಗೂಬಾಯಿ ಹಾನಗಲ್ಲ ಅವರು ಈ ಊರಿನವರು. ಸಂಗೀತಬ್ರಹ್ಮ ದಿವಂಗತ ಪಂಚಾಕ್ಷರಿ ಗವಾಯಿ ಹಾಗು ಗಾನಯೋಗಿ ಪುಟ್ಟರಾಜಗವಾಯಿ ಈ ತಾಲ್ಲೂಕಿನವರೆ.

ಹಾವೇರಿ ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲಿ ಬ್ಯಾಡಗಿಯೂ ಒಂದು. ಹುಬ್ಬಳ್ಳಿಯಿಂದ 88 ಕಿ.ಮೀ. ಆಗ್ನೇಯಕ್ಕೆ ಬ್ಯಾಡಗಿಯಿದೆ. ಬ್ಯಾಡಗಿಯನ್ನು ಪೂರ್ವದಲ್ಲಿ ರಾಣೆಬೆನ್ನೂರು, ಉತ್ತರದಲ್ಲಿ ಹಾವೇರಿ, ಪಶ್ಚಿಮದಲ್ಲಿ ಹಾನಗಲ್ಲು ಮತ್ತು ದಕ್ಷಿಣದಲ್ಲಿ ಹಿರೇಕೆರೂರು ತಾಲ್ಲೂಕುಗಳು ಸುತ್ತುವರಿದಿವೆ. ತಾಲ್ಲೂಕಿನ ವಿಸ್ತೀರ್ಣ 436 ಚ.ಕಿ.ಮೀ. ಕಾಗಿನೆಲೆ ಹಾಗು ಬ್ಯಾಡಗಿ ಇದರ ಹೋಬಳಿ ಕೇಂದ್ರಗಳು. ಈ ತಾಲ್ಲೂಕಿನಲ್ಲಿ 63 ಗ್ರಾಮಗಳಿವೆ. ಕದರಮಂಡಲಗಿ, ಕಾಗಿನೆಲೆ ಹಾಗು ಮೋಟೆಬೆನ್ನೂರು ಈ ತಾಲ್ಲೂಕಿನ ಪ್ರಮುಖ ಗ್ರಾಮಗಳು. ವಾರ್ಷಿಕ ಮಳೆ ಪ್ರಮಾಣ ಸರಾಸರಿ 654 ಮಿ.ಮೀ. ತಾಲ್ಲೂಕಿನಲ್ಲಿ 10,249 ಎಕರೆ ಅರಣ್ಯ ಪ್ರದೇಶವಿದೆ.

ಕೆಲವು ಸಣ್ಣ ಗುಡ್ಡಗಳನ್ನು ಬಿಟ್ಟರೆ ತಾಲ್ಲೂಕಿನ ಬಹುಭಾಗ ಸಮತಟ್ಟಾದ ಪ್ರದೇಶ. ಈ ತಾಲ್ಲೂಕಿನಲ್ಲಿ ಮಸ್ಸಾರಿ ಹಾಗು ಎರಮಣ್ಣು ಭೂಮಿಯಿದೆ. ಸದಾ ಬರಗಾಲಕ್ಕೆ ತುತ್ತಾಗುವ ಪ್ರದೇಶವಿದು. ದೊಡ್ಡ ಜಲಾಶಯಗಳಿಲ್ಲ. ತಾಲ್ಲೂಕಿನ ಪ್ರಮುಖ ಕೆರೆಗಳೆಂದರೆ ಕಾಗಿನೆಲೆ, ಚಿಕ್ಕಬಾಸೂರ ಹಾಗು ತುಂದೂರು ಕೆರೆಗಳು. ಬ್ಯಾಡಗಿ ತಾಲ್ಲೂಕಿಗೆ ಅವು ನೀರು ಒದಗಿಸುವ ಹೊಣೆ ಹೊತ್ತಿವೆ. ಬ್ಯಾಡಗಿ ಮೆಣಸಿನಕಾಯಿ ರಾಜ್ಯಾದ್ಯಂತ ಪ್ರಸಿದ್ಧವಾಗಿದೆ.

ಬ್ಯಾಡಗಿ ಪುರಾತನ ಕಾಲದಿಂದಲೂ ಪ್ರಸಿದ್ಧವಾದ ಸ್ಥಳ. ಕದರಮಂಡಲಗಿಯಲ್ಲಿ ಮಹಾಭಾರತ ಕಾಲದ ಜನಮೇಜಯ ಕಟ್ಟಿಸಿದನೆಂದು ಹೇಳಲಾದ ಮಾರುತಿ ದೇವಾಲಯವಿದೆ.

ಕ್ರಿ.ಶ. 1057ರ ಶಾಸನವೊಂದು ಮೋಟೆಬೆನ್ನೂರು ಗ್ರಾಮದ ಮಲ್ಲಿಕಾರ್ಜುನ ದೇವಾಲಯದ ಬಳಿಯಿದೆ. ಅದರ ಪ್ರಕಾರ ಈ ಸ್ಥಳ ಜೈನಮುನಿಯ ವಾಸಸ್ಥಾನವಾಗಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. 14ನೆಯ ಶತಮಾನದಲ್ಲಿನ ವಿಜಯನಗರ ಸಾಮ್ರಾಜ್ಯದ ಬುಕ್ಕರಾಯ, ಬಹುಮನಿ ಸುಲ್ತಾನರು ಆಗಿಂದಾಗ್ಗೆ ಈ ಪ್ರದೇಶದಲ್ಲಿ ತಮ್ಮ ಪ್ರಭುತ್ವ ಸ್ಥಾಪಿಸಿಕೊಳ್ಳಲು ಹೆಣಗುತ್ತಿದ್ದರು. ಬಿಜಾಪುರದ ಸುಲ್ತಾನರು ಇದನ್ನು ವಶಪಡಿಸಿಕೊಂಡು ತಮ್ಮ ಪ್ರದೇಶಕ್ಕೆ ಸೇರಿಸಿಕೊಂಡರು.

ಕಾಗಿನೆಲೆ ಬ್ಯಾಡಗಿ ತಾಲ್ಲೂಕಿನ ಪ್ರಮುಖ ಹೋಬಳಿ ಕೇಂದ್ರ. 16ನೆಯ ಶತಮಾನದಲ್ಲಿ ಕನಕದಾಸರು ಆದಿಕೇಶವಮೂರ್ತಿಯನ್ನು ಬಾಡ ಗ್ರಾಮದಿಂದ ತಂದು ಕಾಗಿನೆಲೆಯಲ್ಲಿ ಪ್ರತಿಷ್ಠಾಪನೆ

ಮಾಡಿದರೆಂದು ಹೇಳಲಾಗಿದೆ. ಒಂದೂವರೆ ಅಡಿ ಎತ್ತರದ ಈ ಆದಿಕೇಶವಮೂರ್ತಿ ತುಂಬ ಮುದ್ದಾಗಿದೆ. ಕೆರೆಯ ದಂಡೆಯ ಮೇಲೆ ಭಕ್ತ ಕವಿ ಕನಕದಾಸರ ಸಮಾಧಿಯಿದೆ. ಇಲ್ಲಿನ ದೇವಸ್ಥಾನಗಳಲ್ಲಿ ಕಲ್ಯಾಣ ಚಾಳುಕ್ಯರ ಹಾಗು ಸೇವುಣರ ಕಾಲದ ಶಾಸನಗಳಿವೆ. ಕಾಗಿನೆಲೆಯಲ್ಲಿ ಕುರುಬ ಜನಾಂಗದ ಜಗದ್ಗುರುಗಳ ಧಾರ್ಮಿಕ ಪೀಠವಿದೆ.

ಕಾಗಿನೆಲೆಯಲ್ಲಿ ಆದಿಕೇಶವ, ಲಕ್ಷ್ಮೀನರಸಿಂಹ, ಕಾಳಹಸ್ತೀಶ್ವರ, ವೀರಭದ್ರ, ಸೋಮೇಶ್ವರ, ಬ್ರಹ್ಮೇಶ್ವರ, ಸಂಗಮೇಶ್ವರ, ಬಸವಣ್ಣ ಹಾಗು ಆದಿಶಕ್ತಿ ದೇವಾಲಯಗಳಿವೆ.

ರಾಣಿಬೆನ್ನೂರು ಹಾವೇರಿ ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲಿ ರಾಣಿಬೆನ್ನೂರು ಸೇರುತ್ತದೆ. ಉತ್ತರದಲ್ಲಿ ಹಾವೇರಿ ಪಶ್ಚಿಮ-ದಕ್ಷಿಣಕ್ಕೆ ಬ್ಯಾಡಗಿ ಹಾಗು ಹಿರೆಕೆರೂರು ಪೂರ್ವದಲ್ಲಿ ಬಳ್ಳಾರಿ ತಾಲ್ಲೂಕುಗಳಿವೆ. ಬಿದನೂರಿನ ರಾಣಿಯೊಬ್ಬಳು ಈ ಪ್ರದೇಶವನ್ನು ಆಳುತ್ತಿದ್ದಳೆಂದು ಅವಳಿಂದ 'ರಾಣಿಬಿದನೂರು' ಎಂದೂ ಅನಂತರ 'ರಾಣಿಬೆನ್ನೂರು' ಎಂಬ ಹೆಸರು ಬಂತೆಂದು ಹೇಳಲಾಗಿದ. ರಾಣಿ ಎಂಬ ಮರಾಠ ಸೈನಿಕನೊಬ್ಬನ ಹೆಸರಿನಿಂದ 'ರಾಣಿಬೆನ್ನೂರು' ಎಂಬ ಹೆಸರು ಬಂತೆಂದು ಕೂಡ ಹೇಳಲಾಗುತ್ತದೆ.

ತಾಲ್ಲೂಕಿನ ವಿಸ್ತೀರ್ಣ 907 ಚ.ಕಮೀ. ಈ ತಾಲ್ಲೂಕಿನಲ್ಲಿ 106 ಗ್ರಾಮಗಳಿವೆ. ರಾಣಿಬೆನ್ನೂರು ಕುಪ್ಪೇಲೂರು ಮತ್ತು ಮೆಡ್ಲೇರಿ ಈ ತಾಲ್ಲೂಕಿನ ಹೋಬಳಿಗಳು.

ತುಂಗಭದ್ರ ಮತ್ತು ಕುಮುದ್ವತಿ ಈ ತಾಲ್ಲೂಕಿನ ಪ್ರಮುಖ ನದಿಗಳು. ಅಸುಂಡಿ ಹಾಗು ಮೆಡ್ಲೇರಿ ಈ ತಾಲ್ಲೂಕಿನ ಪ್ರಮುಖ ಕೆರೆಗಳು. ತಾಲ್ಲೂಕಿನ ಸರಾಸರಿ ಮಳೆ ಪ್ರಮಾಣ 488.3 ಮೀ. ಮೀಟರ್. ತಾಲ್ಲೂಕಿನಲ್ಲಿ 9968 ಹೆಕ್ಟೇರು ಅರಣ್ಯ ಪ್ರದೇಶವಿದೆ. ಅಲ್ಲಿ ಗೊಬ್ಬಳಿ, ದಿಂಡಿಗ, ಕಕ್ಕೆಹುದುಗಲು, ನೇರಳೆ, ತಡಸಲು, ಕಲ್‌ಮುತ್ತಗ, ನಾಗಸಂಪಿಗೆ, ಹೊನ್ನೆ ಜಂಬೆ, ಕರಿಜಾಲಿ, ಬಿಳಿಜಾಲಿ, ಬಳೇಬೋಗಿ, ನಾಗಕೇಸರಿ, ಕಿರಲ್‌ಬೋಗಿ, ಕಲ್‌ಬಾಗೆ, ಸಾಗವಾನಿ, ತಡಸಲ್, ಮತ್ತಿ, ಕಾರೆ, ಹೂವರಳಿ ಬಗಸಿ, ಪಳ್ಳೆ, ನಂದಿ, ಚನ್ನಂಗಿ, ಬೀಟೆ, ಹೊಳೆಹೊನ್ನೆ, ಕಾರಾಚಿ, ದೇವದಾರು, ಗೊರವಿ, ಸರ್ವೆ, ನೀಲಗಿರಿ, ಹೊನ್ನಾಲ, ಗಂಧ, ಪೊವ್ವಲಿ, ಕಗ್ಗಲ, ಹೊಂಗೆ, ಇತ್ಯಾದಿ ಮರಗಳು ಬೆಳೆಯುತ್ತವೆ.

ರಾಣಿಬೆನ್ನೂರು ತಾಲ್ಲೂಕಿನ ಅರಣ್ಯ ಪ್ರದೇಶದಲ್ಲಿ 99.5 ಹೆ. ಅರಣ್ಯ ಪ್ರದೇಶವನ್ನು 'ಕೃಷ್ಣಮೃಗ ಅಭಯಾರಣ್ಯ' ಪ್ರದೇಶವೆಂದು ಘೋಷಿಸಲಾಗಿದೆ. ಇಲ್ಲಿ 3,000 ಕೃಷ್ಣಮೃಗ ಗಳಿವೆಯೆಂದು ಹೇಳಲಾಗಿದೆ.

ಕಲ್ಯಾಣ ಚಾಳುಕ್ಯರ ಪ್ರಮುಖ ಸಾಮಂತರಾದ 'ಗುತ್ತಲದ ಗುತ್ತರು' ಈ ಪ್ರದೇಶವನ್ನು ಆಳುತ್ತಿದ್ದರು. ಇವರ ಮೊದಲ ಐತಿಹಾಸಿಕ ವ್ಯಕ್ತಿ ಮಲ್ಲದೇವ. ಆತ ಕಲ್ಯಾಣ ಚಾಳುಕ್ಯರ ಮಹಾನ್ ಸಾಮ್ರಾಟ ಆರನೆಯ ವಿಕ್ರಮಾದಿತ್ಯನ ಕೃಪೆಯಿಂದಾಗಿ ಬನವಾಸಿ 12,000 ಪ್ರಾಂತ್ಯಕ್ಕೆ ರಾಜಪ್ರತಿನಿಧಿಯಾಗಿ ನೇಮಕಗೊಂಡನು. ಅನಂತರ ಕಳಚೂರಿಯರ ಕಾಲದಲ್ಲೂ ಅವರ

ಅಧೀನದಲ್ಲಿದ್ದನು. ಸೇವುಣ ದೊರೆ ಮಹಾದೇವನ ಕಾಲದಲ್ಲಿದ್ದ ಮೂರನೆಯ ಗುಪ್ತ ಎಂಬುವನು ಗುತ್ತರಲ್ಲಿ ಕೊನೆಯವ. 15ನೆಯ ಶತಮಾನದಲ್ಲಿ ಈ ತಾಲ್ಲೂಕಿನ ತಿರಣಿ ಗ್ರಾಮದಲ್ಲಿ ಹಾವನೂರು ಹನುಮಂತಗೌಡ ಅವರು ಕೋಟೆ ಕಟ್ಟಿಸಿದರು.

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ರಾಣಿಬೆನ್ನೂರು ತುಂಬ ಮಹತ್ವ ಪಡೆದ ಸ್ಥಳ. 1942ರ ಸ್ವಾತಂತ್ರ್ಯ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಹುತಾತ್ಮ ಮೈಲಾರ ಮಹದೇವ ಮೋಟೆಬೆನ್ನೂರಿನವರು. ಈ ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರೆಂದರೆ : ಕೆ.ಎಫ್. ಪಾಟೀಲ, ಮಹಾರುದ್ರಪ್ಪ ಉಡಗಟ್ಟಿ, ಸಿದ್ಧಲಿಂಗಯ್ಯ ಹಿರೇಮಠ, ಡಾ॥ ಹೆಚ್.ವಿ. ಅಂಗಡಿ, ಲಕ್ಷ್ಮಣ ಹನುಮಂತಪ್ಪ ವಡೆಯರಹಳ್ಳಿ, ಸಿದ್ಧಪ್ಪ ಫಕೀರಪ್ಪ ಹಣಗಿ, ಹನುಮಂತಪ್ಪ ಹಾಲಮ್ಮನವರ, ದಿ. ರಾಮಚಂದ್ರಪ್ಪ ಸಂಜೀವಪ್ಪಶೆಟ್ಟರ್, ಎಸ್.ಎನ್. ಪಾಟೀಲ, ಗೋಣೆಪ್ಪ ಸಾವಕಾರ, ಶ್ರೀಪತಿ ಅರ್ಕಸಾಲಿ, ಬಸಯ್ಯ ಲೋಕನಗೌಡರ, ಸಂಗನ ಬಸಪ್ಪ ಕುಬರಿಹಾಳ, ಸದಾಶಿವಪ್ಪ ಗುರಪ್ಪನವರ, ದಿ. ಗುರುನಾಥಭೂತೆ, ಜಿ.ಪಿ. ಮಹಾನುಭಾವಿಮಠ, ಬಸಮ್ಮ ಕುಸಗೂರು, ಗದಿಗೆಮ್ಮ ಬಸಪ್ಪ ಹಂಪಾಳಿ ಮೊದಲಾದವರು.

ಸಿದ್ದೇಶ್ವರ ದೇವಾಲಯವು ಊರಿಗೆ ಪ್ರಾಚೀನ. ಹಜರತ್ ಜಮಾಲ್ ಷಾವಲಿ ಮಸೀದಿಯಲ್ಲಿ ಅಜ್ಮೀರದ ಫಕೀರರ ಗೋರಿಯಿದೆ. 'ತಿರಣಿ'ಯಲ್ಲಿ ಸಿದ್ಧಾರೂಢ ಮಠದ ಸ್ವಾಮಿಗಳ ಶಿಷ್ಯರು. ಅಂತರವಳ್ಳಿಯಲ್ಲಿ ಪಂಚಪೀಠಗಳ ಶಾಖಾಮಠ ಶ್ರೀರೂಢಾಚಾರ್ಯ ಜಗದ್ಗುರು ಪೀಠವಿದೆ. ಹೊನ್ನುತ್ತಿಯಲ್ಲಿ ಹೊನ್ನಮ್ಮದೇವಿ ದೇವಾಲಯವಿದೆ.

ರಾಣಿಬೆನ್ನೂರು ಕಂಬಳಿನೇಯ್ಗೆಗೆ ಹೆಸರಾಗಿದೆ. 3105 ಕೈಮಗ್ಗ ಹಾಗು 234 ವಿದ್ಯುಚಾಲಿತ ಕೈಮಗ್ಗಗಳು ಈ ತಾಲ್ಲೂಕಿನಲ್ಲಿವೆ. ಮಣ್ಣಿನಲ್ಲಿ ವಿಗ್ರಹ ತಯಾರಿಸುವುದಕ್ಕೆ ಈ ತಾಲ್ಲೂಕು ಪ್ರಸಿದ್ಧವಾಗಿದೆ. ಕುಶಲಕಲೆ ಇಲ್ಲಿನ 'ಗುಡಿಕೈಗಾರಿಕೆ'ಯಾಗಿದೆ. ಶಿವಶರಣನೂ ಹಿರಿಯ ವಚನಕಾರನೂ ಆದ ಅಂಬಿಗರ ಚೌಡಯ್ಯ ಈ ತಾಲ್ಲೂಕಿನ ಚೌಡಬಾನಪುರದವನು. ಪ್ರಪಂಚ ಪತ್ರಿಕೆಯ ಸಂಪಾದಕರೂ, ಹಿರಿಯ ಪತ್ರಿಕೋದ್ಯಮಿಗಳೂ ಆದ ಡಾ॥ ಪಾಟೀಲ ಪುಟ್ಟಪ್ಪ ಅರ್ಥಾತ್ 'ಪಾಪು' ಈ ತಾಲ್ಲೂಕಿನವರು.

ಮುಂಬಯಿ ಕನ್ನಡ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಮುಖ್ಯಸ್ಥರಾದ ಚಿದಂಬರ ದೀಕ್ಷಿತರು, ತುಮ್ಮಿನಕಟ್ಟಿಯವರು. ಆರ್.ಜಿ. ಮಹಾನುಭಾವಿಮಠ ಹಾಗೂ ಆರ್.ಜಿ. ಹಳ್ಳಿ ನಾಗರಾಜ್‌ರವರು ಈ ತಾಲ್ಲೂಕಿನ ಪತ್ರಿಕೋದ್ಯಮಿಗಳು.

ಶ್ರೀ ಹಾಲಸಿದ್ದೇಶ್ವರ ಪ್ರಸಾದಿತ ಲೋಕಸೇವಕ ನಾಟಕ ಮಂಡಳಿ 1911ರಲ್ಲಿ ಪ್ರಾರಂಭವಾಗಿ ಈ ತನಕ ಕಲಾ ಸೇವೆಯನ್ನು ಮುಂದುವರಿಸಿದೆ. ಅಂತರವಳ್ಳಿಯ ಹನುಮಗೌಡ, ರಾಮನಗೌಡ ಹಾಗು ಜೀವನಗೌಡ ಸೂತ್ರದ ಬೊಂಬೆಯಾಟಕ್ಕೆ ಪ್ರಸಿದ್ಧರಾಗಿದ್ದವರು.

ಕಲಾಕಾರರಾದ ಮೌನೇಶಾಚಾರ್ ಶಾಮಪ್ಪ ಕುಮಾರ ಅವರು ಮರದಲ್ಲಿ ಸುಂದರ ದೇವತಾ ವಿಗ್ರಹಗಳನ್ನು ಮಾಡುವಲ್ಲಿ ಪ್ರಸಿದ್ಧರಾಗಿದ್ದಾರೆ.

ಹಾವೇರಿ ಜಿಲ್ಲೆಯ ಮತ್ತೊಂದು ತಾಲ್ಲೂಕು ಕೇಂದ್ರ ಹಿರೇಕೆರೂರು. ಹನ್ನೊಂದನೆಯ ಶತಮಾನದ ಅಂತ್ಯದಲ್ಲಿ ಏಕಾಂತದ ರಾಮಯ್ಯನಂತಹ ಶರಣನಿಗೆ ಕಾರ್ಯಕ್ಷೇತ್ರವಾಗಿ, 16ನೆಯ ಶತಮಾನದಲ್ಲಿ ಸರ್ವಜ್ಞನಂತಹ ಜನಪದಕವಿಗೆ ಜನ್ಮಭೂಮಿಯಾಗಿ, ವಣ್ಣಿಲೆಯ ಸೆಟ್ಟಿಕವ್ವೆಯಂತಹ ವೀರವನಿತೆಯರ ಆಡುಂಬೊಲವಾಗಿ, ತಪಸ್ವಿಗಳ ತಪೋಭೂಮಿಯಾಗಿ, ಕಲಾವಿದರ ಆಶ್ರಯಸ್ಥಾನವಾಗಿ, ವಿವಿಧ ಮತಧರ್ಮಗಳ ನೆಲೆವೀಡಾಗಿ, ಪ್ರಸಿದ್ಧಿ ಪಡೆದ ತಾಲ್ಲೂಕು ಹಿರೇಕೆರೂರು. ಇದು ಸಮುದ್ರ ಮಟ್ಟದಿಂದ 590 ಮೀ. ಎತ್ತರದಲ್ಲಿದೆ. ತಾಲ್ಲೂಕಿನ ವಾರ್ಷಿಕ ಮಳೆ ಸರಾಸರಿ 798.2 ಮಿ.ಮೀ. ಈ ತಾಲ್ಲೂಕಿನಲ್ಲಿ 121 ಗ್ರಾಮಗಳಿವೆ.

ಹಿರೇಕೆರೂರು ಕಸಬಾ, ಹಂಸಭಾವಿ ಮತ್ತು ರಟ್ಟೀಹಳ್ಳಿ ಈ ತಾಲ್ಲೂಕಿನ ಹೋಬಳಿ ಕೇಂದ್ರಗಳು. 'ಕುಮುದ್ವತಿ' ತಾಲ್ಲೂಕಿನ ಮುಖ್ಯ ನದಿ. ಮಾಸೂರಿನ ಮದಗದಕೆರೆ ಅತ್ಯಂತ ಪ್ರಮುಖವಾದ ಕೆರೆ. ಐದು ದೊಡ್ಡಕೆರೆ ಹಾಗು ಆರುನೂರು ಸಣ್ಣಕೆರೆಗಳು ಈ ತಾಲ್ಲೂಕಿನಲ್ಲಿವೆ. ಇಲ್ಲಿ 61,903 ಹೆಕ್ಟೇರು ವ್ಯವಸಾಯಯೋಗ್ಯವಾದ ಭೂಮಿಯಿದೆ.

ಚಿನ್ನಮುಳಗುಂದ ಗ್ರಾಮದ ಗುಡ್ಡದಲ್ಲಿ ಭೂಗರ್ಭಶಾಸ್ತ್ರಜ್ಞರು ಚಿನ್ನದ ನಿಕ್ಷೇಪವಿದೆ ಎಂದು ಗುರುತಿಸಿದ್ದರೂ ಅದರ ಉತ್ಪಾದನಾ ವೆಚ್ಚ ಅಧಿಕವಾದ ಕಾರಣ ಅದನ್ನು ಸಂಸ್ಕರಿಸುವ ಕಾರ್ಯವನ್ನು ಕೈಗೊಂಡಿಲ್ಲ.

ಹಿರೇಕೆರೂರು ತಾಲ್ಲೂಕಿನಲ್ಲಿ 293 ಶಾಸನಗಳು ದೊರೆತಿದ್ದು, ಅವು ಕರ್ನಾಟಕದ ಇತಿಹಾಸ ತಿಳಿಯಲು ಸಹಾಯಕವಾಗಿವೆ. ಹಿರೇಕೆರೂರಿನ ಪ್ರಾಚೀನ ಹೆಸರು 'ಪಿರಿಯಕೆರೆ'. ಈ ಕೆರೆಯ ಏರಿಯ ಮೇಲೆ ದುರ್ಗಾದೇವಿ ದೇವಾಲಯವಿದ್ದು ಪ್ರತಿ ಮೂರು ವರುಷಕ್ಕೊಮ್ಮೆ ಬಹುದೊಡ್ಡ ಪ್ರಮಾಣದಲ್ಲಿ ಜಾತ್ರೆ ನಡೆಯುತ್ತದೆ. ಕ್ರಿ.ಶ. 1505ರಲ್ಲಿ ಈ ಪ್ರದೇಶದ ರಾಜನಾಗಿದ್ದ ರಾಮರಾಜೇಂದ್ರ ಮಹಾರಸನ 'ಗಡ್ಡದ ಕೆಲಸಿ'ಗಳಾದ (ಕ್ಷೌರಿಕರು) ತಿಮ್ಮೋಜಿ, ಕೊಂಡೋಜಿ, ಭದ್ರೋಜಿ ಎಂಬ ಮೂವರ ಕೆಲಸಕ್ಕೆ ಮೆಚ್ಚಿ ತೆರಿಗೆಯನ್ನು ಮನ್ನಾ ಮಾಡಿದನೆಂದು ಹೇಳುವ ಶಾಸನವೊಂದು ಇಲ್ಲಿದೆ. ಈ ತಾಲ್ಲೂಕಿನ ಭೂಪ್ರದೇಶ ಹಿಂದೆ ಆರು ಕಂಪಣಗಳಲ್ಲಿ ಹಂಚಿಹೋಗಿತ್ತು. ಈ ಕಂಪಣಗಳೆಲ್ಲವೂ ಬನವಾಸಿ 12,000 ಮಂಡಲದ ಉಪವಿಭಾಗಗಳಾಗಿದ್ದವು. ಬನವಾಸಿ 12,000 ಮಂಡಲವು ಕುಂತಳ ದೇಶದ ಭಾಗವಾಗಿತ್ತು.

ಶಾತವಾಹನರು, ಚಾಲುಕ್ಯರು, ರಾಷ್ಟ್ರಕೂಟರು, ಕಳಚೂರ್ಯರು, ದೇವಗಿರಿಯ ಯಾದವರು ಹಾಗು ವಿಜಯನಗರ ಸಾಮ್ರಾಜ್ಯದ ಅರಸರುಗಳು ಈ ಪ್ರದೇಶವನ್ನಾಳಿದ್ದಾರೆ.

ದ್ವಿತೀಯ ಹಂತದಲ್ಲಿ ಹಾನಗಲ್ಲಿನ ಕದಂಬರು, ಆರನೆಯ ವಿಕ್ರಮಾದಿತ್ಯನ ತಮ್ಮ

ಜಯಸಿಂಹ, ಕಳಚೂರ್ಯರಲ್ಲಿ ಬಿಜ್ಜಳನ ಮಗ ರಾಯಮುರಾರಿಸೋವಿದೇವ, ಉದಯಾದಿತ್ಯ ಮೊದಲಾದವರು ಈ ಭಾಗದಲ್ಲಿ ಆಳ್ವಿಕೆ ನಡೆಸಿದ್ದಾರೆ.

ಹಿರೇಕೆರೂರು ತಾಲ್ಲೂಕು ಸ್ವಾತಂತ್ರ್ಯ ಸಂಗ್ರಾಮಕ್ಕೂ ಗಣನೀಯ ಕೊಡುಗೆ ನೀಡಿದೆ. ಸುಮಾರು 200 ಸ್ವಾತಂತ್ರ್ಯ ಹೋರಾಟಗಾರರು ಈ ತಾಲ್ಲೂಕಿನವರೆಂದು ಗುರುತಿಸಲಾಗಿದೆ. ಕಚವಿಯ ಸರದಾರ ವೀರನಗೌಡ ಪಾಟೀಲ, ದೀವಿಗೆಹಳ್ಳಿಯ ತಿಮ್ಮಪ್ಪರುದ್ರಪ್ಪ ನೆಸ್ವಿ ಹಾಗು ಹನುಮನಟ್ಟಿ ಕಲ್ಲನಗೌಡ ಫಕೀರಗೌಡ ಪಾಟೀಲ ಈ ತ್ರಿಮೂರ್ತಿಗಳು ಈ ತಾಲ್ಲೂಕಿನ ಹಿರಿಯ ಸ್ವಾತಂತ್ರ ಹೋರಾಟಗಾರರು.

ಕ್ರಿ.ಶ. 11ನೆಯ ಶತಮಾನದ ವಚನಕಾರ ಏಕಾಂತದ ರಾಮಯ್ಯ ಈ ತಾಲ್ಲೂಕಿನವನು. ಅವನ ಅಂಕಿತ 'ಚನ್ನರಾಮೇಶ್ವರಲಿಂಗ'. ಅಬ್ಬಲೂರು ಶಾಸನದಿಂದ ಆ ಕಾಲದಲ್ಲಿ ಅಚರಾಜ, ಮಲ್ಲಿದೇವ ಹಾಗು ಕೇಶವರಾಜಚಮೂಪರೆಂಬ ಕವಿಗಳಿದ್ದರೆಂದು ತಿಳಿದುಬರುತ್ತದೆ. ಕ್ರಿ.ಶ. 16ನೆಯ ಶತಮಾನದ ಸರ್ವಜ್ಞ ಕವಿ ತ್ರಿಪದಿ ಮೂಲಕ ವಚನ ರಚಿಸಿ ಕನ್ನಡ ಸಾಹಿತ್ಯದಲ್ಲೇ ವಿಶಿಷ್ಟ ಸ್ಥಾನ ಪಡೆದಿದ್ದಾನೆ.

ಶಾಂತಕವಿಗಳೆಂದು ಪ್ರಸಿದ್ಧರಾದ ಸಕ್ರೆಬಾಳಾಚಾರ್ಯರು ಈ ತಾಲ್ಲೂಕಿನ ಸಾತೇನಹಳ್ಳಿಯವರು. ಕ್ರಿ.ಶ. 1865ರಲ್ಲಿ ಇವರ ಪೂರ್ವಜರಾದ ಶ್ರೀನಿವಾಸತೀರ್ಥರು ಕನ್ನಡದಲ್ಲಿ ಪರಾಕುಗಳನ್ನು ರಚಿಸಿದ್ದಾರೆ. 'ಕೆರೆಗೆ ಹಾರ' ಎಂಬ ಜನಪದಗೀತೆ ಕರ್ನಾಟಕದಲ್ಲೇ ಪ್ರಸಿದ್ಧವಾಗಿದೆ. ಇದು ಈ ತಾಲ್ಲೂಕಿಗೆ ಸಂಬಂಧಪಟ್ಟದ್ದಾಗಿದೆ.

ನೆಸ್ವಿ ಗ್ರಾಮದ ಪಾಲಾಕ್ಷಪ್ಪ ಕಮ್ಮಾರ, ನೂಲಗೇರಿ ಗ್ರಾಮದ ಬಡಿಗೇರ ಮನೆತನದ ನಾಗಲಿಂಗಪ್ಪ ಮತ್ತು ಮಹಾದೇವಪ್ಪ ಸೋದರರು ಮೂರ್ತಿಶಿಲ್ಪದಲ್ಲಿ ಪಳಗಿದ ರೂವಾರಿಗಳು.

ಹಂಸಭಾವಿಯ ಶ್ರೀನಿವಾಸ ಕುಲಕರ್ಣಿ ಹೆಸರಾಂತ ನೃತ್ಯಗಾರರಾಗಿದ್ದಾರೆ. ಬೆಟ್ಟಕೆರೂರುನಲ್ಲಿದ್ದ ಗುರುಪಾದಯ್ಯ ಶ್ರೇಷ್ಠ ಪಿಟೀಲು ವಾದಕರು. ಎಲೇದಹಳ್ಳಿಯ ಕೊರಗರ ಹುಲುಗಪ್ಪ ಷಹನಾಯಿ ನುಡಿಸುವುದರಲ್ಲಿ ಪ್ರಸಿದ್ಧರು. ರೇಷ್ಮೆ ವ್ಯವಹಾರಕ್ಕೆ ಹಿರೇಕೆರೂರು ಸಾಕಷ್ಟು ಪ್ರಸಿದ್ಧವಾದ ಸ್ಥಳ.

1957 ರಿಂದ 1999ರವರೆಗಿನ ವಿಧಾನಸಭಾ ಚುನಾವಣೆಗಳನ್ನು ಪರಿಶೀಲಿಸಿದರೆ ಇಲ್ಲಿನ ಜನನಾಯಕರನ್ನು ತಿಳಿಯಬಹುದು. ಏಕೀಕರಣದ ಮುಂಚೆ ಈ ಪ್ರದೇಶ ಮುಂಬೈ ಪ್ರಾಂತ್ಯಕ್ಕೆ ಸೇರಿತ್ತು. 1957ರಲ್ಲಿ ವಿಧಾನಸಭೆಗೆ ಹಿರೇಕೆರೂರುನಿಂದ ಗುಬ್ಬಿ ಶಂಕರರಾವ್, ರಾಣೆಬೆನ್ನೂರಿನಿಂದ ಕೆ.ಎಫ್. ಪಾಟೀಲ್, ಸಾಂಬ್ರಾಣೆಯಲ್ಲವ್ವ, ಹಾನಗಲ್ ಕ್ಷೇತ್ರದಿಂದ ಬಿ.ಆರ್. ಪಾಟೀಲ್, ಶಿಗ್ಗಾಂವಿಯಿಂದ ಆರ್.ಸಿ. ಪಾಟೀಲ್ ಮತ್ತು ಹಾವೇರಿಯಿಂದ ಸಿದ್ದವ್ವ ಮೈಲಾರಪ್ಪ ಅವರುಗಳು ಆಯ್ಕೆಯಾಗಿದ್ದರು.

1962ರಲ್ಲಿ ವಿಧಾನಸಭೆಗೆ ಹಿರೇಕೆರೂರಿನಿಂದ ಎಸ್.ಬಿ. ಗುಬ್ಬಿ, ರಾಣೆಬೆನ್ನೂರಿನಿಂದ

ಯಲ್ಲಪ್ಪ ಸಾಂಬ್ರಾಣಿ, ಬ್ಯಾಡಗಿಯಿಂದ ಶಿದ್ದಮ್ಮ ಮೈಲಾರ, ಹಾನಗಲ್ಲಿನಿಂದ ಜಿ.ಎಸ್. ದೇಸಾಯಿ, ಶಿಗ್ಗಾಂವಿನಿಂದ ಎಫ್.ಎಸ್. ತಾವರೆ, ಹಾವೇರಿಯಿಂದ ಬಿ.ವಿ. ಮಾಗಾವಿ ಅವರುಗಳು ಆಯ್ಕೆಯಾಗಿದ್ದರು.

1967ರಲ್ಲಿ ಶಿಗ್ಗಾಂವಿಯಿಂದ ಎಸ್. ನಿಜಲಿಂಗಪ್ಪ, ಹಾನಗಲ್‌ನಿಂದ ಬಿ.ಆರ್. ಪಾಟೀಲ್, ಹಿರೇಕೆರೂರಿನಿಂದ ಎಸ್.ಬಿ. ಗುಬ್ಬಿ, ರಾಣೆಬೆನ್ನೂರಿನಿಂದ ಎನ್.ಎಲ್. ಜೆಲ್ಲದ, ಬ್ಯಾಡಗಿಯಿಂದ ಎಂ.ಜಿ. ಬಣಕಾರ, ಹಾನಗಲ್‌ನಿಂದ ಸಿ.ಎಸ್. ದೇಸಾಯಿ ಮತ್ತು ಹಾವೇರಿಯಿಂದ ಬಸವರಾಜ ಮಾಗಾವಿ ಅವರುಗಳು ಆಯ್ಕೆಯಾಗಿದ್ದರು.

1972ರಲ್ಲಿ ಶಿಗ್ಗಾಂವಿಯಿಂದ ನದಾಫ ಮಹಮ್ಮದ್ ಕಾಸಿಂಸಾಬ್ ಮರ್ದಾನ್‌ಸಾಬ್, ಹಾನಗಲ್‌ನಿಂದ ಪಿ.ಸಿ. ಶೆಟ್ಟರ್, ಹಿರೇಕೆರೂರಿನಿಂದ ಬಿ.ಜಿ. ಬಣಕಾರ್, ರಾಣೆಬೆನ್ನೂರಿನಿಂದ ಕೆ.ಬಿ. ಕೋಳಿವಾಡ, ಬ್ಯಾಡಗಿಯಿಂದ ಕೆ.ಎಫ್. ಪಾಟೀಲ್ ಹಾಗೂ ಹಾವೇರಿಯಿಂದ ಎಫ್.ಎಸ್. ತಾವರೆ ಮುಂತಾದವರು ಆಯ್ಕೆಯಾಗಿದ್ದರು.

1978ರಲ್ಲಿ ಶಿಗ್ಗಾಂವಿಯಿಂದ ಎಂ.ಕೆ.ಎಂ. ನದಾಫ್, ಹಾನಗಲ್ಲಿನಿಂದ ಮನೋಹರ ತಹಶೀಲ್ದಾರ್, ಹಿರೇಕೆರೂರಿನಿಂದ ಎಸ್.ಬಿ. ಗುಬ್ಬಿ, ರಾಣೆಬೆನ್ನೂರಿನಿಂದ ಎಸ್. ಹೆಚ್. ಸಲವಾಗಲ, ಬ್ಯಾಡಗಿಯಿಂದ ಎಂ.ಎ. ಮಳಗಿ ಹಾಗು ಹಾವೇರಿಯಿಂದ ಎಫ್.ಎಸ್. ತಾವರೆ, ಅವರುಗಳು ವಿಧಾನಸಭೆಯನ್ನು ಪ್ರವೇಶಿಸಿದ್ದರು.

1983ರ ವಿಧಾನಸಭಾ ಚುನಾವಣೆಯಲ್ಲಿ ಶಿಗ್ಗಾಂವಿಯಿಂದ ನದಾಫ್ ಕಾಸಿಂಸಾಬ್ ಮರ್ದಾನ್‌ಸಾಬ್, ಹಾನಗಲ್‌ನಿಂದ ಸಿ.ಎಂ. ಉದಾಸಿ, ಹಿರೇಕೆರೂರಿನಿಂದ ಬಿ.ಜಿ. ಬಣಕಾರ, ರಾಣೆಬೆನ್ನೂರಿನಿಂದ ಬಿ.ಜಿ. ಪಾಟೀಲ್, ಬ್ಯಾಡಗಿಯಿಂದ ಹೆಚ್. ಡಿ. ಲಮಾಣಿ ಹಾಗು ಹಾವೇರಿಯಿಂದ ಸಿ.ಸಿ. ಕಲಕೋಟಿ ಆಯ್ಕೆಯಾಗಿದ್ದರು.

1985ರ ವಿಧಾನಸಭಾ ಚುನಾವಣೆಯಲ್ಲಿ ಹಾನಗಲ್‌ನಿಂದ ಸಿ.ಎಂ. ಉದಾಸಿ, ಹಿರೇಕೆರೂರಿನಿಂದ ಬಿ.ಜಿ. ಬಣಕಾರ್, ರಾಣೆಬೆನ್ನೂರಿನಿಂದ ಕೆ.ಬಿ. ಕೋಳಿವಾಡ, ಬ್ಯಾಡಗಿಯಿಂದ ಕೆ.ಎಸ್. ಬೀಳಗಿ, ಹಾವೇರಿಯಿಂದ ಸಿ.ಸಿ. ಕಲಕೋಟಿ ಅವರು ಆಯ್ಕೆಯಾಗಿದ್ದರು.

1989ರ ವಿಧಾನಸಭಾ ಚುನಾವಣೆಯಲ್ಲಿ ಶಿಗ್ಗಾಂವಿಯಿಂದ ಎಂ.ಸಿ. ಕುನ್ನೂರು, ಹಾನಗಲ್‌ನಿಂದ ಮನೋಹರ ಎಚ್. ತಹಶೀಲ್ದಾರ್, ಹಿರೇಕೆರೂರಿನಿಂದ ಬಿ.ಹೆಚ್. ಬನ್ನಿಕೋಡ, ರಾಣೆಬೆನ್ನೂರಿನಿಂದ ಕೆ.ಬಿ. ಕೋಳಿವಾಡ ಮತ್ತು ಬ್ಯಾಡಗಿಯಿಂದ ಹೆಚ್.ಡಿ. ಲಮಾಣಿ ಅವರು ಆಯ್ಕೆಯಾಗಿದ್ದರು.

1994ರ ವಿಧಾನಸಭಾ ಚುನಾವಣೆಯಲ್ಲಿ ಶಿಗ್ಗಾಂವಿಯಿಂದ ಎಂ.ಸಿ. ಕುನ್ನೂರು, ಹಾನಗಲ್‌ನಿಂದ ಸಿ.ಎಂ. ಉದಾಸಿ, ಹಿರೇಕೆರೂರಿನಿಂದ ಯು.ಬಿ. ಬಣಕಾರ,

ರಾಣೆಬೆನ್ನೂರಿನಿಂದ ಕರಜಗಿ ವೀರಪ್ಪ ಸಣ್ಣ ತಮ್ಮಪ್ಪ, ಬ್ಯಾಡಗಿಯಿಂದ ಕೆ.ಎಸ್. ಬೀಳಗಿ ಮತ್ತು ಹಾವೇರಿಯಿಂದ ಶಿವಣ್ಣನವರ ಬಸವರಾಜ ನೀಲಪ್ಪ ಆಯ್ಕೆಯಾಗಿದ್ದರು.

1999ರ ವಿಧಾನಸಭಾ ಚುನಾವಣೆಯಲ್ಲಿ ಶಿಗ್ಗಾಂವಿಯಿಂದ ಖಾದ್ರಿ ಸೈಯದ್ ಅಜ್‌ಪೀರ್ ಸಯದ್ ಖಾದರ್ ಪಾಷಾ, ಹಾನಗಲ್‌ನಿಂದ ಮನೋಹರ ಹೆಚ್. ತಹಶೀಲ್ದಾರ್, ಹಿರೇಕೆರೂರಿನಿಂದ ಬಿ.ಹೆಚ್. ಬನ್ನಿಕೋಡ್, ರಾಣೆಬೆನ್ನೂರಿನಿಂದ ಕೆ.ಬಿ. ಕೋಳಿವಾಡ್, ಬ್ಯಾಡಗಿಯಿಂದ ರುದ್ರಪ್ಪ ಲಮಾಣಿ, ಹಾವೇರಿಯಿಂದ ಶಿವಣ್ಣನವರ್ ಬಸವರಾಜ ನೀಲಪ್ಪ ಅವರುಗಳು ಆಯ್ಕೆಯಾಗಿದ್ದಾರೆ.

## ಉಪ್ಪಾರ ಸಮಾಜ

ಹಾವೇರಿ ಜಿಲ್ಲೆಯ ಏಳೂ ತಾಲ್ಲೂಕುಗಳಲ್ಲಿ ಉಪ್ಪಾರರು ಗಣನೀಯ ಸಂಖ್ಯೆಯಲ್ಲಿದ್ದಾರೆ. ಹಿರೇಕೆರೂರ ತಾಲ್ಲೂಕಿನ ಹಿರೇಕೆರೂರು, ಕೋಡ, ಲಿಂಗಾಪುರ, ಮುದ್ದಿನಕೊಪ್ಪ, ಸಾತೇನಹಳ್ಳಿ, ಹಂಸಭಾವಿ, ಚಿನ್ನಮುಳಗುಂದ, ಚಿಕ್ಕಬೂದಿಹಾಳ, ಶಂಕರನಹಳ್ಳಿ, ಹುಲ್ಲತ್ತಿ, ಚಿಕ್ಕಯಡಚಿ, ಹೊಸಳ್ಳಿ, ಶಿರಗುಂಬಿ, ರಟ್ಟೆಹಳ್ಳಿ, ಯಡಗೋಡ, ಮಾಸೂರು, ಹಾದ್ರಿಹಳ್ಳಿ ಮುಂತಾದ ಸುಗ್ರಾಮಗಳಲ್ಲಿ 2,100 ಉಪ್ಪಾರ ಕುಟುಂಬಗಳಿದ್ದು ಅವುಗಳಲ್ಲಿ 11.525 ಜನಸಂಖ್ಯೆಯಿದೆ.

ಬ್ಯಾಡಗಿ ತಾಲ್ಲೂಕಿನ ಬ್ಯಾಡಗಿ, ಹೊಸಗುಂಗರಕೊಪ್ಪ, ಹಳೆಗುಂಗರಕೊಪ್ಪ, ಕಾಸಂಬಿ, ಕಮ್ಮಾರು, ಬಡಮಲ್ಲಿ, ಮೋಟೆಬೆನ್ನೂರು ಮುಂತಾದ ಗ್ರಾಮಗಳ ಸುಮಾರು 300 ಕುಟುಂಬಗಳಿದ್ದು ಅದರಲ್ಲಿ 1650 ಜನ ಉಪ್ಪಾರರಿದ್ದಾರೆ.

ರಾಣೆಬೆನ್ನೂರು, ಬೆನಕಿನಕೊಂಡ, ತುಮ್ಮಿನಕಟ್ಟಿ, ಶಿಡಗನಾಳ, ಆನ್ವೇರಿ, ಮೆಡ್ಲೇರಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ಈ ತಾಲ್ಲೂಕಿನಲ್ಲಿ ಸುಮಾರು 300 ಉಪ್ಪಾರ ಕುಟುಂಬಗಳಿದ್ದು, ಅದರಲ್ಲಿ 2000 ಜನರಿದ್ದಾರೆ.

ಹಾವೇರಿಪಟ್ಟಣ, ಕರಜಗಿ ಕನಕಾಪುರ, ಕೊರೆಕೊಪ್ಪ, ಬೂದಗಟ್ಟಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ಈ ತಾಲ್ಲೂಕಿನಲ್ಲಿ ಸುಮಾರು 200 ಕುಟುಂಬಗಳಿದ್ದು 1,250 ಜನ ಉಪ್ಪಾರರಿದ್ದಾರೆ.

ಹಾನಗಲ್ ಟೌನ್, ತಿಳವಳ್ಳಿ, ಬ್ಯಾತನಾಳ, ಗೆರಸಿನಕೊಪ್ಪ, ಗೆಜೆಹಳ್ಳಿ, ಹುಣಸೆಕಟ್ಟೆ, ಸುಳ್ಳೇಶ್ವರ, ನೇರಲಗಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ಈ ತಾಲ್ಲೂಕಿನಲ್ಲಿ 120 ಉಪ್ಪಾರ ಕುಟುಂಬಗಳಿದ್ದು ಅವರಲ್ಲಿ 750 ಉಪ್ಪಾರರಿದ್ದಾರೆ.

ಸವಣೂರು, ಯಲವಗಿ, ಸಿದ್ದಾಪುರ, ಕಬ್ಬೂರು ಗ್ರಾಮಗಳನ್ನೊಳಗೊಂಡಂತೆ ಸವಣೂರು ತಾಲ್ಲೂಕಿನಲ್ಲಿ ಸುಮಾರು 75 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 450 ಉಪ್ಪಾರರಿದ್ದಾರೆಂದು ಹೇಳಲಾಗಿದೆ.

ಶಿಗ್ಗಾವಿ, ಬಂಕಾಪುರ, ಕಾಮನಹಳ್ಳಿ, ಅಡವಿಸೋಮಪುರ, ಶ್ಯಾಬಳ, ಅಂದಲಗಿ, ಮುಳಕೇರಿ, ತಿಮ್ಮಾಪುರ, ಕಬ್ಬನೂರು, ಹುಲಗೂರು, ಕಲಕಟ್ಟೆ, ನೇರಲಗಿ, ಮುಗಳಿ, ಹಿರೇಮಣಕಟ್ಟೆ, ಗೋಟಗಡಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ಈ ತಾಲ್ಲೂಕಿನಲ್ಲಿ 450 ಉಪ್ಪಾರ ಕುಟುಂಬಗಳಿವೆ. ಅದರಲ್ಲಿ ಸುಮಾರು 3000 ಉಪ್ಪಾರರಿದ್ದಾರೆ.

ಹೀಗೆ ಹಾವೇರಿ ಜಿಲ್ಲೆಯ ಏಳು ತಾಲ್ಲೂಕುಗಳೂ ಸೇರಿದಂತೆ 3545 ಉಪ್ಪಾರ ಕುಟುಂಬಗಳಿದ್ದು, ಅವುಗಳಲ್ಲಿ 20,625 ಜನರಿರಿದ್ದಾರೆ.

ಹಿರೇಕೆರೂರು ತಾಲ್ಲೂಕು ಕೋಡ ಗ್ರಾಮದಲ್ಲಿ ಹೆಚ್ಚಿನ ಸಂಖ್ಯೆಯ ಉಪ್ಪಾರರು ಇದ್ದಾರೆ. ಸಾತೇನಹಳ್ಳಿ, ಹುಲ್ಲತ್ತಿ, ಹೊಸಳ್ಳಿ ಮತ್ತು ಶಿರಗುಂಬಿಗಳಲ್ಲಿಯೂ ಉಪ್ಪಾರರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

ಬಣಕಾರ, ಮೇಲುಸಕ್ಕರೆ, ಉಪ್ಪಾರ ಮೊದಲಾದ ಉಪನಾಮಗಳಿಂದ ಇವರನ್ನು ಕರೆಯುತ್ತಾರೆ.

ಹಾವೇರಿಯಲ್ಲಿನ ಉಪ್ಪಾರರ ಸಾಕ್ಷರತೆಯ ಪ್ರಮಾಣ ಶೇಕಡ 25ಕ್ಕಿಂತ ಕಡಿಮೆಯಿದೆ. ಸ್ತ್ರೀಯರ ಸಾಕ್ಷರತೆಯ ಪ್ರಮಾಣವಂತೂ ಶೇ. 20 ಎಂದು ಹೇಳಲಾಗಿದೆ. ಈ ಸಮುದಾಯಕ್ಕೆ ಸೇರಿದ ವೈದ್ಯರು, ಇಂಜಿನಿಯರ್‌ಗಳು ಹಾಗು ವಕೀಲರು ಯಾರೂ ಕಂಡುಬರುತ್ತಿಲ್ಲ.

ಹಿರೇಕೆರೂರು ಹೋಬಳಿಯಲ್ಲಿ ಉಪ್ಪಾರ ಸಮುದಾಯಕ್ಕೆ ಸೇರಿದ ಎಸ್‌ಎಸ್‌ಎಲ್‌ಸಿ ಹಾಗು ಪಿಯುಸಿ ಪಾಸಾದವರ ಸಂಖ್ಯೆ 177. ಅದೇ ರೀತಿ 41 ಜನ ಪದವಿಯ ತನಕ ವಿದ್ಯಾಭ್ಯಾಸ ಮಾಡಿರಬಹುದು. ಅವರಲ್ಲಿ ಒಂದಿಬ್ಬರು ಪದವಿ ಶಿಕ್ಷಣ ಮುಗಿಸಿದ್ದಾರೆ. ಮೂರು ಜನ ಸ್ನಾತಕೋತ್ತರ ಪದವಿ ಗಳಿಸಿದ್ದಾರೆ.

ಅದೇ ರೀತಿ ಬ್ಯಾಡಗಿ ತಾಲ್ಲೂಕಿನಲ್ಲಿ 37 ಯುವಕ ಯುವತಿಯರು ಎಸ್.ಎಸ್.ಎಲ್.ಸಿ. ಹಾಗು ಪಿಯುಸಿ ಮುಗಿಸಿದ್ದಾರೆ. ಏಳು ಜನ ಪದವಿ ಶಿಕ್ಷಣ ಮಾಡಿಕೊಂಡಿದ್ದಾರೆ.

ರಾಣಿಬೆನ್ನೂರು ತಾಲ್ಲೂಕಿನಲ್ಲಿ ಸುಮಾರು 36 ಜನ ಪಿಯುಸಿ ವ್ಯಾಸಂಗ ಮಾಡಿರುವ ವರಿದ್ದಾರೆ. ಆರು ಜನ ಪದವಿ ಶಿಕ್ಷಣ ಮುಗಿಸಿದ್ದಾರೆ. ಹಾನಗಲ್ಲು ತಾಲ್ಲೂಕಿನಲ್ಲಿ 40 ಜನ ಎಸ್‌ಎಸ್‌ಎಲ್‌ಸಿ ವಿದ್ಯಾಭ್ಯಾಸ ಮುಗಿಸಿದ್ದಾರೆ. ಎಂಟು ಜನ ಪದವಿ ಶಿಕ್ಷಣ ಮುಗಿಸಿದ್ದಾರೆ.

ಹಾವೇರಿ ತಾಲ್ಲೂಕಿನಲ್ಲಿ 23 ಜನ ಪಿಯುಸಿ ಮುಗಿಸಿದ್ದಾರೆ. ಎಂಟು ಜನ ಪದವಿ ಶಿಕ್ಷಣ ಪಡೆದಿದ್ದಾರೆ. ಈ ಅಂಕಿಸಂಖ್ಯೆಗಳೇ ಉಪ್ಪಾರರ ಶಿಕ್ಷಣದ ಮಟ್ಟವನ್ನು ತೋರಿಸುತ್ತವೆ.

ಶಿಗ್ಗಾಂವ ಮತ್ತು ಸವಣೂರು ತಾಲ್ಲೂಕುಗಳಿಂದ 77 ಜನ ಎಸ್.ಎಸ್.ಎಲ್.ಸಿ. ಮತ್ತು ಪಿಯುಸಿ ಶಿಕ್ಷಣ ಮುಗಿಸಿ 20 ಜನ ಪದವಿ ಶಿಕ್ಷಣದತನಕ ವ್ಯಾಸಂಗ ಮಾಡಿದ್ದಾರೆ.

ಹಾವೇರಿ ಜಿಲ್ಲೆಯಲ್ಲಿ ಇಪ್ಪತ್ತು ಸಾವಿರಕ್ಕಿಂತಲೂ ಹೆಚ್ಚು ಜನಸಂಖ್ಯೆಯನ್ನು ಗುರುತಿಸುವುದಾದರೆ ಅವರಲ್ಲಿ ಶಾಲೆಯ ಮೂಲಕ ಶಿಕ್ಷಣ ಪಡೆದವರ ಸಂಖ್ಯೆ ಮೂರು

ಅಂಕಿಯನ್ನು ದಾಟಿಹೋಗುವುದಿಲ್ಲ. ತುಂಬ ಕಷ್ಟಪಟ್ಟು ಲೆಕ್ಕ ಹಾಕಿದರೆ ಓದುಬರಹ ತಿಳಿದವರ ಸಂಖ್ಯೆ ಒಂದು ಸಾವಿರಕ್ಕೆ ಏರಬಹುದು. ಆದರೆ ಹೆಂಗಸರ ಸಾಕ್ಷರತೆಯ ಪ್ರಮಾಣ ಮತ್ತಷ್ಟು ಕಡಿಮೆ ಇದೆ. ಜಿಲ್ಲೆಯ ಬಹುಮಟ್ಟಿನ ಉಪ್ಪಾರರು ಕನ್ನಡವನ್ನೇ ಬಳಸುತ್ತಾರೆ. ಅವರ ಆಡುಮಾತಿನಲ್ಲಿ ಸಾಹಿತ್ಯದ ಬನಿಯಿರುವುದನ್ನು ಗಮನಿಸಬಹುದು.

ಬಹುಮಟ್ಟಿನ ಉಪ್ಪಾರರು ಒಕ್ಕಲುತನ ಮಾಡುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಎರಡು ಎಕರೆಗಿಂತ ಕಡಿಮೆಯಿರುವ ಉಪ್ಪಾರ ಕುಟುಂಬಗಳು ಎರಡು ಸಾವಿರಕ್ಕಿಂತಲೂ ಹೆಚ್ಚಾಗಿವೆ.

ಹೆಚ್ಚಿನ ಅಂದರೆ ಸಾವಿರಕ್ಕೂ ಅಧಿಕ ಉಪ್ಪಾರ ಕುಟುಂಬಗಳು ಜಮೀನು ರಹಿತವಾಗಿವೆ. ಗೌಡರು, ದೇಸಾಯಿ, ಹಿರೇಮಠ ಮುಂತಾದ ಮುಖಂಡರ ಹೊಲಗಳಲ್ಲಿ ಕೂಲಿಗಳಾಗಿ ದುಡಿಯುವ ಉಪ್ಪಾರರೇ ಹೆಚ್ಚಾಗಿದ್ದಾರೆ. ಸಮೀಕ್ಷೆ ನಡೆಸಿದಾಗ ಸರ್ಕಾರದ ಜನ ಕಲ್ಯಾಣ ಯೋಜನೆಗಳು ಇವರಿಗೆ ತಲುಪದಿರುವುದನ್ನು ಗಮನಿಸಬಹುದು. ಇದಕ್ಕೆ ಕಾರಣ ಉಪ್ಪಾರರಲ್ಲಿ ನಾಯಕತ್ವದ ಕೊರತೆ.

ಉಪ್ಪಾರರು ಗೌಂಡಿ ಕೆಲಸ ಅಂದರೆ ಗಾರೆ ಕೆಲಸಕ್ಕೆ ಪ್ರಸಿದ್ಧರಾಗಿದ್ದಾರೆ. ಮನೆ ನಿರ್ಮಾಣದಲ್ಲಿ ಮೇಸ್ತ್ರಿ ಅಥವಾ ಗಾರೆಕೆಲಸ ಇವರದೇ ಆಗಿರುತ್ತದೆ. ಜಿಲ್ಲೆಯಲ್ಲಿ ಇಬ್ಬರು ಕಂಟ್ರಾಕ್ಟರ್‌ಗಳನ್ನು ಗಮನಿಸಬಹುದು.

ತಾಲ್ಲೂಕು ಕೇಂದ್ರದಲ್ಲಿ ಸಣ್ಣ ಪುಟ್ಟ ವ್ಯಾಪಾರವನ್ನು ಈ ಸಮುದಾಯದವರು ಕೈಗೊಂಡಿದ್ದಾರೆ. ಅದರಲ್ಲೂ ವಿಶೇಷವಾಗಿ ವೀಳ್ಯದೆಲೆ, ತರಕಾರಿ ಹಾಗು ಇತರೆ ಕಡಿಮೆ ಬಂಡವಾಳದ ವ್ಯಾಪಾರವನ್ನು ಈ ಸಮುದಾಯದವರು ಆಶ್ರಯಿಸಿದ್ದಾರೆ.

ಸಾಹಿತ್ಯ ಹಾಗೂ ಇತರ ಸಾಂಸ್ಕೃತಿಕ ಲೋಕದಲ್ಲಿ ಮಹತ್ವದ ಹೆಸರುಗಳನ್ನು ಕಾಣಲು ಸಾಧ್ಯವಿಲ್ಲ. ಧಾರವಾಡದ ವಿಜ್ಞಾನ ಕಾಲೇಜಿನ ಪ್ರಾಧ್ಯಾಪಕರಾದ ಪ್ರೊ. ಎಫ್.ಎಂ. ಸಣ್ಣ ನಿಂಗಣ್ಣನವರ್ ಅವರು ಈ ಸಮುದಾಯದಲ್ಲಿ ಖ್ಯಾತವಾದ ಹೆಸರು. ಎಂಎಸ್‌ಸಿ ಹಾಗು ಪಿಹೆಚ್‌ಡಿಗಳನ್ನು ಮಾಡಿರುವ ಡಾ. ಸಣ್ಣನಿಂಗಣ್ಣನವರ್ ವಿಜ್ಞಾನಿಯಾಗಿದ್ದಾರೆ. ರಮೇಶ ಉಪ್ಪಾರ ಸ್ನಾತಕೋತ್ತರ ಪದವಿ ಪಡೆದಿದ್ದಾರೆ, ಹಂಸಬಾವಿ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದಾರೆ.

ಹಿರೇಕೆರೂರು ತಾಲ್ಲೂಕಿನ ಕೋಡದ ಪದವಿಪೂರ್ವ ಕಾಲೇಜಿನಲ್ಲಿ ಉಪನ್ಯಾಸಕರಾಗಿರುವ ಶ್ರೀ ಬಸವರಾಜ ಸಣ್ಣಗೋಣಿ ಈ ಸಮುದಾಯದವರು.

ಜಿಲ್ಲೆಯ ಜಿಲ್ಲಾ ಪಂಚಾಯತ್ ಸದಸ್ಯರು ಯಾರೂ ಇಲ್ಲ. ಮರಗೋಣಪ್ಪ ಲಂಕಪ್ಪ ಹಿರೇಕೆರೂರು ಅವರು ಕೋಡದ ಮಂಡಲ್ ಪಂಚಾಯತ್‌ನ ಮಾಜಿ ಅಧ್ಯಕ್ಷರು, ಹಿರೇಕೆರೂರು ತಾಲ್ಲೂಕಿನ ಎಪಿಎಂಸಿಯ ಮಾಜಿ ಸದಸ್ಯರು ಗೋಣೆಬಸಪ್ಪ, ಹನುಮಂತಪ್ಪ ನರಸಾಪುರ ಇಂದಿನ ಕೋಡ ಗ್ರಾಮದ ಪಂಚಾಯ್ತಿ ಸದಸ್ಯರು. ಫಕೀರವ್ವ ಉಪ್ಪಾರ ಶಿಗ್ಗಾಂವ ತಾಲ್ಲೂಕು ಪಂಚಾಯ್ತಿ ಸದಸ್ಯರು. ತಿಮ್ಮಾಪುರದ ಗಣೇಶ ಹನಮಂತಪ್ಪ ಗುಣೋಜಿ ಗ್ರಾಮಪಂಚಾಯತ್‌ನ ಸದಸ್ಯರು.

ಮರಿಗೋಣೆಪ್ಪ ಘೂಳನ್ನವರ, ಮಹಾದೇವಪ್ಪ ಚವಟಿ, ಹನುಮಂತಪ್ಪ ಕೋಡ ಮಾಸೂರ, ಸಿವಿಲ್ ಕಂಟ್ರಾಕ್ಟರ್, ಹನುಮಂತಪ್ಪ ಉಪ್ಪಾರ, ಮರಿಗೋಣಪ್ಪ ಸಣ್ಣ ನಿಂಗಣ್ಣನವರ್, ಮಲಕಪ್ಪ ಮಲ್ಲೇಶಪ್ಪ ಹಂಚಿನ ಮನೆ, ನೀಲಪ್ಪ ಕೆಂಚಪ್ಪ ಉಪ್ಪಾರ ಹೊಸಹಳ್ಳಿ, ಮಹಾದೇವಪ್ಪ ಯಲ್ಲಪ್ಪ ಮುದ್ದಣ್ಣನವರ ಸಿರುಂಗಬಿ, ಹಾವೇರಿಯ ನಾಗಪ್ಪ ಭರಮಪ್ಪ ಕೊರಗೇರಿ, ರಾಮಣ್ಣ ದುರಗಪ್ಪ ಕುನ್ನೂರು, ಬ್ಯಾಡಗಿ ಲಕ್ಷ್ಮಣಪ್ಪ ತಿಪ್ಪಣ್ಣ ಉಪ್ಪಾರ, ಯಲ್ಲಪ್ಪ ಡಿ. ಉಪ್ಪಾರ, ಸುರೇಶಪ್ಪ ನಿಂಗಪ್ಪ ಹರಳಾಪುರ, ಕುಮ್ಮೂರಿನ ಭೀಮಪ್ಪ ಹನಮಂತಪ್ಪ ಉಪ್ಪಾರ, ಹಳೆಗೊಂಗರಗೊಪ್ಪದ ಫಕೀರಪ್ಪ ಕನಕಪ್ಪ ಉಪ್ಪಾರ, ಕಾಸಂಬಿಯ ಸುಭಾಷ ಮಣ್ಣಪ್ಪ ತುಮರಿಕೊಪ್ಪ, ರಾಣೆಬೆನ್ನೂರಿನ ನಾರಾಯಣಪ್ಪ ಭೀಮಪ್ಪ ಉಪ್ಪಾರ, ಧರ್ಮಪ್ಪ ಭೀಮಪ್ಪ ಉಪ್ಪಾರ, ಮಾಸೂರಿನ ಕೆ.ಎಲ್. ಉಪ್ಪಾರ, ಪಿ.ಜಿ. ಉಪ್ಪಾರ, ಯಲವಿಗಿಯ ಪಿ.ಆರ್. ಉಪ್ಪಾರ, ಹುಲಗೂರಿನ ಗದಿಗೆಪ್ಪ ಹನಮಂತಪ್ಪ ಉಪ್ಪಾರ ಜಿಲ್ಲೆಯ ಉಪ್ಪಾರ ಸಮಾಜದ ಪ್ರಮುಖರು ಹಾಗು ಹಿತಚಿಂತಕರು.

ಇಂದಿನ ಧಾರವಾಡ ಜಿಲ್ಲೆಯನ್ನು ಇಡಿಯಾಗಿ ಪರಿಶೀಲಿಸಿದಾಗ ಉಪ್ಪಾರರ ಮಹತ್ವ ಎದ್ದುಕಾಣುತ್ತಿದೆ. ಅಲ್ಲಿ ಜಿಲ್ಲಾ ಸಂಘ ಅಸ್ತಿತ್ವದಲ್ಲಿದ್ದು ಎ.ಬಿ. ನಾಯಕ, ಶಿವಪ್ಪ ನೀರಾವರಿ ಮೊದಲಾದವರು ತುಂಬ ಕ್ರಿಯಾಶೀಲರಾಗಿ ಕೆಲಸ ಮಾಡುತ್ತಿದ್ದ ಕಾರಣ ಉಪ್ಪಾರ ಸಮುದಾಯದ ಗಮನ ಸೆಳೆದಿತ್ತು.

ಕಳೆದ ಮೂರೂವರೆ ವರ್ಷಗಳಿಂದ ಹಾವೇರಿಯಲ್ಲಿ ಜಿಲ್ಲಾ ಉಪ್ಪಾರ ಸಂಘವೇ ಅಸ್ತಿತ್ವದಲ್ಲಿಲ್ಲ. ತಾಲ್ಲೂಕುವಾರು ಮಾಹಿತಿ ಸಂಗ್ರಹಕ್ಕೆ ಸಹ ಉತ್ಸಾಹ ತೋರಿಸುವ ವಾತಾವರಣ ಈ ಜಿಲ್ಲೆಯಲ್ಲಿ ಕಾಣಬರುವುದಿಲ್ಲ. ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿ ದೊರಕಿದ ಕಾರಣ ಉಪ್ಪಾರ ಯುವಕರು ಗ್ರಾಮ ಪಂಚಾಯತ್, ಜಿಲ್ಲಾ ಪಂಚಾಯತ್ ಮತ್ತು ತಾಲ್ಲೂಕು ಪಂಚಾಯತ್ ಸದಸ್ಯರಾಗಲು ಅವಕಾಶವಿದೆ. ಆಯಾಯ ಸಮಾಜದ ಬಗ್ಗೆ ಸಮರ್ಪಕ ಅಂಕಿ ಅಂಶಗಳು ದೊರೆತಾಗ ಸರ್ಕಾರದ ಅಭಿವೃದ್ಧಿ ಕಾರ್ಯಗಳು ಜನಾಂಗಕ್ಕೆ ಸಮರ್ಪಕ ರೀತಿಯಲ್ಲಿ ದೊರೆಯುತ್ತವೆ.

ಜಿಲ್ಲೆಯ ಸಂಘ ಪ್ರಾರಂಭವಾಗಿ ಎಲ್ಲ ತಾಲ್ಲೂಕಿನ ಪ್ರತಿನಿಧಿಗಳು ನೇಮಕವಾಗಬೇಕು. ಜನಾಂಗದ ಆರ್ಥಿಕ ಸ್ಥಿತಿ ಕುರಿತಂತೆ ಸಮೀಕ್ಷಾ ಕಾರ್ಯ ಕೈಗೊಂಡು ಎಷ್ಟು ಉಪ್ಪಾರರು ಬಡತನದ ರೇಖೆಗಿಂತ ಕೆಳಗಿಳಿದಿದ್ದಾರೆಂಬುದರ ಪಟ್ಟಿ ಸಿದ್ಧವಾಗಬೇಕು. ಆಗ ಸರ್ಕಾರದ ಡಾ॥ ಅಂಬೇಡ್ಕರ್ ವಸತಿ ಯೋಜನೆ, ಇಂದಿರಾ ಅವಾಸ್ ಯೋಜನೆ, ಗಂಗಾ ಕಲ್ಯಾಣ ಯೋಜನೆ, ನಿವೇಶನ ಹಂಚಿಕೆ ಮೊದಲಾದವುಗಳಲ್ಲಿ ಉಪ್ಪಾರರಿಗೆ ನ್ಯಾಯ ದೊರೆಯುವ ಸಾಧ್ಯತೆಯಿದೆ.

ಜಿಲ್ಲಾ ಕೇಂದ್ರದಲ್ಲಿ ಉಪ್ಪಾರರ ವಸತಿನಿಲಯ ಪ್ರಾರಂಭವಾಗಬೇಕು. ಹೊಸದಾಗಿ ಜಿಲ್ಲಾ ಕೇಂದ್ರ ರೂಪುಗೊಂಡ ಕಾರಣ ಎಲ್ಲ ಸಮುದಾಯದವರಿಗೂ 'ವಸತಿನಿಲಯ' ಕಟ್ಟಲು ಸರ್ಕಾರ ನಿವೇಶನ ಕೊಡುವ ಸಾಧ್ಯತೆಯಿದೆ. ಎಲ್ಲ ಹಿಂದುಳಿದ ವರ್ಗಗಳಿಗೂ ಸರ್ಕಾರ ನಿವೇಶನ ಕೊಡುವ ನಿರ್ಧಾರ ಕೈಗೊಂಡಾಗ ಉಪ್ಪಾರ ಸಂಘ ಕ್ರಿಯಾಶೀಲವಾಗಿದ್ದರೆ ಅದಕ್ಕೆ ಮಾನ್ಯತೆ ದೊರಕುವ ಸಾಧ್ಯತೆಯಿದೆ.

ಉಪ್ಪಾರ ವಿದ್ಯಾರ್ಥಿಗಳಿಗೆ 'ವಿದ್ಯಾರ್ಥಿವೇತನ' ಕೊಡುವ ಕಾರ್ಯಕ್ರಮವನ್ನು ಈ ಸಮಾಜದ ಮುಖಂಡರು ರೂಪಿಸಿಕೊಳ್ಳಬೇಕು.

ಉಪ್ಪಾರ ಸಮಾಜದ ಯುವಕ ಯುವತಿಯರು ಗಣನೀಯ ಸಂಖ್ಯೆಯಲ್ಲಿದ್ದಾರೆ. ಯುವಕ ಸಂಘ ಮತ್ತು ಯುವತಿ ಮಂಡಳಿಗಳು ಸ್ಥಾಪನೆಯಾಗಬೇಕು. ಈ ಸಮಾಜದ ಮಹಿಳೆಯರು ಸಣ್ಣ ಗುಂಪನ್ನು ರಚಿಸಿಕೊಂಡು ಸ್ವಸಹಾಯ ಯೋಜನೆಯ ನೆರವು ಪಡೆದುಕೊಳ್ಳಬೇಕು.

ಅವಿಭಾಜ್ಯ ಧಾರವಾಡ ಜಿಲ್ಲೆ ತುಂಬ ವಿಸ್ತಾರವಾದ ಕಾರಣ ಸಣ್ಣ ಪುಟ್ಟ ಸಮುದಾಯಗಳ ಸಂಘಟನೆ ಹಾಗು ಅಭಿವೃದ್ಧಿ ಕಷ್ಟದ ವಿಚಾರವಾಗಿತ್ತು. ಆದರೆ ಇಂದು ಹಾವೇರಿ ಜಿಲ್ಲೆಯ ಏಳು ತಾಲ್ಲೂಕುಗಳು ಅಚ್ಚುಕಟ್ಟಾಗಿದ್ದು ಸಂಘಟನೆಗೆ ತುಂಬ ಯೋಗ್ಯವಾಗಿದೆ. ಕೊನೆಯ ಪಕ್ಷ ಐದು ವರ್ಷ ಈ ಜಿಲ್ಲೆಯ ಎಲ್ಲ ಗ್ರಾಮವನ್ನು ಭೇಟಿ ಮಾಡಿ ಸಂಘಟನೆ ಮಾಡಿದರೆ ಉತ್ತಮ ಪ್ರತಿಫಲ ದೊರೆಯಬಹುದು.

**ಮಾಹಿತಿಸಂಗ್ರಹ : *ಡಾ// ಎಫ್.ಎಂ. ಸಣ್ಣನಿಂಗಣ್ಣನವರ್***






# * ಉತ್ತರ ಕನ್ನಡ ಜಿಲ್ಲೆ

## ಐತಿಹಾಸಿಕ ಹಿನ್ನೋಟ

ಉತ್ತರ ಕನ್ನಡವು ಕರಾವಳಿ ಜಿಲ್ಲೆ. ಪಶ್ಚಿಮಘಟ್ಟ ಈ ಜಿಲ್ಲೆಯನ್ನು ಎರಡು ಭಾಗಗಳಾಗಿ ವಿಂಗಡಿಸಿದೆ. ಜಿಲ್ಲೆಯ ಐದು ತಾಲ್ಲೂಕುಗಳು ಕರಾವಳಿಯ ಬದುವಿನಲ್ಲಿದ್ದು ಉಳಿದ ಆರು ತಾಲ್ಲೂಕುಗಳು ಘಟ್ಟದ ಮೇಲಿವೆ. ಪೋರ್ಚುಗೀಸರು ಇದನ್ನು 'ಕೆನರಾ' ಎಂದು ಕರೆದಿದ್ದರು. ಅರಬ್ಬಿ ಸಮುದ್ರದಲ್ಲೇ ಕರಾವಳಿ ಪ್ರಾಂತ್ಯವನ್ನು ದಕ್ಷಿಣ ಹಾಗು ಉತ್ತರ ಎಂದು ವಿಭಾಗಿಸಿದೆ. ಉತ್ತರ ಕನ್ನಡ ಜಿಲ್ಲೆ ರಾಜ್ಯದ ಮಧ್ಯ ಪಶ್ಚಿಮ ಭಾಗಕ್ಕಿದೆ.

ಉತ್ತರ ಕನ್ನಡ ಜಿಲ್ಲೆ ಪೂರ್ವ ರೇಖಾಂಶ $74^0$-9' ರಿಂದ $75^0$-10' ಮತ್ತು ಉತ್ತರ ಅಕ್ಷಾಂಶ $13^0$-55' ರಿಂದ $15^0$-31' ಯ ಪರಿಧಿಯಲ್ಲಿ ಬರುತ್ತದೆ. ಈ ಜಿಲ್ಲೆ ಭೌಗೋಳಿಕವಾಗಿ 10,327 ಚ.ಕಿ.ಮೀ. ಇದೆ.

2001ರ ಜನಗಣತಿ ಪ್ರಕಾರ ಜಿಲ್ಲೆಯಲ್ಲಿ 13,53,299 ಜನಸಂಖ್ಯೆಯಿದೆ. ಅದರಲ್ಲಿ ಪುರುಷರು 6,87,026, ಮಹಿಳೆಯರು 6,66,273. ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 76.59. ಅದರಲ್ಲಿ ಪುರುಷರು ಶೇ. 84..48, ಸ್ತ್ರೀಯರು ಶೇ. 68.48 ರಷ್ಟಿದ್ದಾರೆ.

ಕಾರವಾರ, ಜೋಯಿಡಾ, ಹಳಿಯಾಳ, ಮುಂಡಗೋಡು, ಯಲ್ಲಾಪುರ, ಭಟ್ಕಳ, ಅಂಕೋಲಾ, ಕುಮುಟಾ, ಹೊನ್ನಾವರ, ಸಿರಸಿ ಮತ್ತು ಸಿದ್ದಾಪುರ ಎಂಬ ಹನ್ನೊಂದು ತಾಲ್ಲೂಕುಗಳನ್ನು ಉತ್ತರ ಕನ್ನಡ ಜಿಲ್ಲೆ ಹೊಂದಿದೆ. ಕಾರವಾರ ಈ ಜಿಲ್ಲೆಗೆ ಕೇಂದ್ರ.

ಉತ್ತರ ಕನ್ನಡ ಜಿಲ್ಲೆಯ ಉತ್ತರಕ್ಕೆ ಗೋವಾ ಪ್ರಾಂತ್ಯ ಮತ್ತು ಬೆಳಗಾವಿ ಜಿಲ್ಲೆ, ಪೂರ್ವಕ್ಕೆ ಧಾರವಾಡ ಮತ್ತು ಶಿವಮೊಗ್ಗ ಜಿಲ್ಲೆ, ದಕ್ಷಿಣಕ್ಕೆ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಪಶ್ಚಿಮಕ್ಕೆ ಅರಬ್ಬಿ ಸಮುದ್ರ ಇವೆ.

ಚುಟುಕುಬ್ರಹ್ಮ ಡಾ|| ದಿನಕರ ದೇಸಾಯಿ ಅವರ ಮಾತುಗಳಲ್ಲಿ ಉತ್ತರ ಕನ್ನಡ ಜಿಲ್ಲೆಯ ಮಹತ್ವ ತಿಳಿಯಿರಿ :

‘ಒಂದು ಬದಿ ಸಹ್ಯಾದ್ರಿ-ಒಂದು ಬದಿ ಕಡಲು
ನಡು ಮಧ್ಯದಲ್ಲಿ ಅಡಿಕೆ-ತೆಂಗುಗಳ ಮಡಿಲು
ಸಿರಿಗನ್ನಡದ ಚಪ್ಪರದಲೆ ನನ್ನ ಜಿಲ್ಲೆ
ಇಲ್ಲಿಯೇ ಮತ್ತೊಮ್ಮೆ ಹುಟ್ಟುವೆನು ನಲ್ಲೆ !’

ಕನ್ನಡದ ಆದಿಕವಿ ಪಂಪ ಮೆಚ್ಚಿ ಹೇಳುವ ಮಾತು ಹೀಗಿದೆ :

“ಆರಂಕುಶವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ”. ಸಿರಸಿ ತಾಲ್ಲೂಕಿನ ಒಂದೂರು ಬನವಾಸಿ.

ವಿಶ್ವಕವಿ ರವೀಂದ್ರನಾಥ ಠಾಕೂರ್ ಅವರು ಒಮ್ಮೆ ಕಾರವಾರಕ್ಕೆ ಬಂದಿದ್ದಾಗ ಅಲ್ಲಿನ ಪ್ರಕೃತಿ ಸೌಂದರ್ಯ ಕಂಡು ಹೀಗೆ ಉದ್ಗರಿಸಿದ್ದಾರೆ: ‘ಕಾರವಾರ ಚೆಲವು ಸೃಷ್ಟಿಯ ನೈಜ ಸೌಂದರ್ಯದ ಕುರುಹು’. ಕರಾವಳಿ ಪ್ರದೇಶವನ್ನು ಪರಶುರಾಮನ ಸೃಷ್ಟಿಯೆಂದು ಹೇಳಲಾಗಿದೆ. ಉತ್ತರ ಕನ್ನಡ ಜಿಲ್ಲೆ ಶೇ. 70 ರಷ್ಟು ಅರಣ್ಯ ಪ್ರದೇಶದಿಂದ ಆವೃತವಾಗಿದೆ.

ಉತ್ತರ ಕನ್ನಡ ಜಿಲ್ಲೆ ರಾಮಾಯಣದ ಕಾಲದಿಂದಲೂ ಪ್ರಸಿದ್ಧವಾದ ಸ್ಥಳವಾಗಿದೆ. ಶ್ರೀರಾಮಚಂದ್ರ ಸೀತಾಲಕ್ಷ್ಮಣರೊಡಗೂಡಿ ಈ ಪ್ರದೇಶದಲ್ಲಿ ನೆಲೆಸಿದ್ದನೆಂಬ ಐತಿಹ್ಯವಿದೆ. ಮಹಾಭಾರತಕಾಲದಲ್ಲಿ ಪಂಚಪಾಂಡವರು ದ್ರೌಪದಿಯೊಡಗೂಡಿ ಈ ಜಿಲ್ಲೆಯಲ್ಲಿ ವಾಸಿಸುತ್ತಿದ್ದರಂತೆ !

ಹೊನ್ನಾವರದಿಂದ ಆರು ಮೈಲು ದೂರದಲ್ಲಿರುವ ‘ಇಡಗುಂಜಿ’ಯ ಓಂಕಾರರೂಪದ ಮಹಾಗಣಪತಿಮೂರ್ತಿಯನ್ನು ನಾರದಮುನಿ ಪ್ರತಿಷ್ಠಾಪಿಸಿದನೆಂಬ ಐತಿಹ್ಯವಿದೆ. ‘ಗೋಕರ್ಣ’ ‘ದಕ್ಷಿಣಕಾಶಿ’ ಎಂದು ಪ್ರಸಿದ್ಧವಾಗಿದೆ. ‘ಇಲ್ಲಿರುವ ಶಿಲೆಯೆಲ್ಲವೂ ಲಿಂಗ, ಜಲವೆಲ್ಲವೂ ತೀರ್ಥ’ ಎಂಬ ಭಾವನೆ.

ರಾವಣಾಸುರ ಶಿವನಿಂದ ಆತ್ಮಲಿಂಗ ತೆಗೆದುಕೊಂಡು ಬರುತ್ತಿರುವಾಗ ಗಣಪತಿ ಅವನಿಂದ ಆತ್ಮಲಿಂಗ ಪಡೆದು ಪ್ರತಿಷ್ಠಾಪನೆ ಮಾಡಿದ ಸ್ಥಳವೇ ‘ಗೋಕರ್ಣ’ ಕ್ಷೇತ್ರ. ಈ ಕತೆ ಎಲ್ಲಾ ಪುರಾಣಗಳಲ್ಲಿ ಉಕ್ತವಾಗಿದೆ. ಅನಂತರ ರಾವಣೇಶ್ವರ ಆತ್ಮಲಿಂಗವನ್ನು ಕೀಳಲು ಪ್ರಯತ್ನಿಸಿ ವಿಫಲವಾಗಿ ಅದನ್ನು ನಾಲ್ಕು ಚೂರು ಮಾಡಿ ಎಸೆದನಂತೆ ! ರಾವಣ ಎಸೆದ ಚೂರುಗಳಲ್ಲಿ ಸಿದ್ಧಿ ಕಾಣುವ ಲಿಂಗದ ತುಣುಕು ‘ಸಿದ್ಧೇಶ್ವರ’ವೆಂದೂ ದಾರದಂತೆ ಕಾಣುವ

ತುಣುಕು ಬಿದ್ದ ಸ್ಥಳಕ್ಕೆ 'ಧಾರೇಶ್ವರ'ವೆಂದೂ, ಮುರುಡಿನಾಕಾರದಲ್ಲಿ ಬಿದ್ದ ಸ್ಥಳಕ್ಕೆ 'ಮುರುಡೇಶ್ವರ'ವೆಂದೂ, ಸೆಜ್ಜೆಯಂತೆ ಕಾಣುವ ಚೂರು ಬಿದ್ದ ಸ್ಥಳ 'ಸಜೇಶ್ವರ'ವೆಂದು ಹೆಸರು ಬಂತೆಂದೂ, ಅವು ಪವಿತ್ರ ಸ್ಥಳಗಳೆಂದೂ ಹೇಳಲಾಗಿದೆ.

ಮುಂಡುಗೋಡು ತಾಲ್ಲೂಕಿನ ಬಗ್ಗೆ ಈ ತರದ ಐತಿಹ್ಯವಿದೆ : ಚಂಡಮುಂಡರೆಂಬ ಇಬ್ಬರು ರಾಕ್ಷಸರನ್ನು ಸಂಹರಿಸಿದ ಕತೆ ದೇವೀ ಭಾಗವತದಲ್ಲಿದೆ. ಅವರಲ್ಲಿ ಒಬ್ಬನಾದ 'ಮುಂಡ' ಎಂಬ ರಾಕ್ಷಸನ ಪ್ರಾಂತ್ಯ ಇದಾಗಿತ್ತೆಂದು ಅದಕ್ಕೆ 'ಮುಂಡಗೋಡು' ಎಂಬ ಹೆಸರು ಬಂದಿತೆಂದು ಐತಿಹ್ಯ ಹೇಳುತ್ತದೆ.

ಉತ್ತರ ಕನ್ನಡ ಜಿಲ್ಲೆಯನ್ನು ಶಾತವಾಹನರಿಂದ ಹಿಡಿದು ಮೈಸೂರು ಸಂಸ್ಥಾನದ ಹೈದರ್‌ಆಲಿ ತನಕ ಅನೇಕ ಅರಸರು ಆಳಿದ್ದಾರೆ. ಮೌರ್ಯವಂಶದ ಉತ್ತರಾಧಿಕಾರಿಗಳಾಗಿ ಶಾತವಾಹನರು ಇಡೀ ದಕ್ಷಿಣ ಭಾರತವನ್ನೇ ಆಳಿದ್ದಾರೆ. ಆ ವಂಶದ ಅರಸನಾದ ಸಾತಕರ್ಣಿಯ ಆಳ್ವಿಕೆಗೆ 'ಬನವಾಸಿ' ಸೇರ್ಪಡೆಯಾಗಿದ್ದು, ಆ ಕಾಲದಲ್ಲಿ ಅದೊಂದು ಪ್ರಮುಖ ಕೇಂದ್ರವಾಗಿತ್ತು. ಇದಕ್ಕೆ ಪೂರ್ವದಲ್ಲಿ ಬನವಾಸಿ ಪ್ರಾಂತ್ಯಕ್ಕೆ ಬೌದ್ಧ ಧರ್ಮದ ಪ್ರಸಾರಕ್ಕೆ ಮೌರ್ಯ ಸಾಮ್ರಾಟ ಅಶೋಕ 'ರಖ್ಖಿತ' ಎಂಬ ಸಂನ್ಯಾಸಿಯನ್ನು ಕಳುಹಿಸಿದನೆಂದು ಉಲ್ಲೇಖವಿದೆ.

ಕ್ರಿ.ಶ. 325ರಲ್ಲಿ ಕಂಚಿಯ ಪಲ್ಲವರನ್ನು ಸೋಲಿಸಿ ಅಧಿಕಾರಕ್ಕೆ ಬಂದ ಕದಂಬ ವಂಶದ ಮಯೂರವರ್ಮ ಬನವಾಸಿಯನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಅವನ ಆಳ್ವಿಕೆಯ ಕಾಲದಲ್ಲಿ ಇದೊಂದು ವೈಭವದ ನಾಡಾಗಿತ್ತು. ಕ್ರಿ.ಶ. 540ರಲ್ಲಿ ಈ ಪ್ರಾಂತ್ಯ ಬಾದಾಮಿ ಚಾಲುಕ್ಯರ ಆಳ್ವಿಕೆಗೊಳಪಟ್ಟಿತ್ತು. ಕದಂಬರು ಬಾದಾಮಿ ಚಾಲುಕ್ಯರ ಸಾಮಂತರಾಗಿದ್ದರು.

ರಾಷ್ಟ್ರಕೂಟರು, ಹೊಯ್ಸಳರು, ಕಲ್ಯಾಣ ಚಾಲುಕ್ಯರು, ವಿಜಯನಗರದ ಅರಸರು, ಕೆಳದಿ ನಾಯಕರು ಹಾಗು ಮೈಸೂರು ಸಂಸ್ಥಾನದ ಅರಸರು ಈ ಪ್ರಾಂತ್ಯವನ್ನು ಆಳಿದ್ದಾರೆ. ವಿಜಯನಗರ ಸಾಮ್ರಾಜ್ಯದನಂತರ ಉತ್ತರ ಕನ್ನಡ ಜಿಲ್ಲೆಯ ಬೀಳಗಿ-ಸ್ವಾದಿ ಮನೆತನಗಳು ಬಲಿಷ್ಠವಾಗತೊಡಗಿದವು.

ಸ್ವಾದಿ ಅರಸು ಮನೆತನದ ಅರಸಪ್ಪನಾಯಕ ವಿಜಯನಗರದ ಸಾಮ್ರಾಜ್ಯದ ಸಾಮ್ರಾಟ ಕೃಷ್ಣದೇವರಾಯನ ಸಂಬಂಧಿಕ. ಸಿದ್ದಾಪುರ ತಾಲ್ಲೂಕಿನ ಬೀಳಗಿ ಸಂಸ್ಥಾನದ ಕಾಲದಲ್ಲಿ ಜೈನಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿತ್ತು.

ಇಕ್ಕೇರಿಯ ಒಂದನೆಯ ವೆಂಕಟಪ್ಪನಾಯಕನು ರಾಣಿ ಭೈರಾದೇವಿಯನ್ನು ಸೋಲಿಸಿ ಬರಗೂರಿನಿಂದ ಕಾರವಾರದವರೆಗೆ ರಾಜ್ಯ ವಿಸ್ತರಿಸಿದ. ಕ್ರಿ.ಶ. 1674 ರಿಂದ 1691ರವರೆಗೆ ಆಳಿದ ಬಿದನೂರು ಅರಸನಾದ ಸದಾಶಿವನಾಯಕ ಸ್ವಾದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ.

ಗೋವಾವನ್ನು ಪೋರ್ಚುಗೀಸರು ವಶಪಡಿಸಿಕೊಂಡಾಗ ಅನೇಕ ಕ್ರೈಸ್ತರು ಈ ಜಿಲ್ಲೆಗೆ ಬಂದು ನೆಲೆಸಿದರು. ಉತ್ತರ ಕನ್ನಡ ಜಿಲ್ಲೆಯನ್ನು ಬಿಜಾಪುರದ ಆದಿಲ್‌ಷಾಹಿಗಳು ಸ್ವಲ್ಪ ಕಾಲ

ಆಳಿದ್ದಾರೆ. ಕ್ರಿ.ಶ. 1799ರಲ್ಲಿ ಉತ್ತರ ಕನ್ನಡ ಬ್ರಿಟಿಷರ ವಶವಾಯಿತು. ಆಗಲೂ ಕೂಡ ಹೊನ್ನಾವರ, ಭಟ್ಕಳ ಮುಖ್ಯ ವ್ಯಾಪಾರ ಕೇಂದ್ರಗಳಾಗಿದ್ದವು.

ಬ್ರಿಟಿಷರ ದಾಸ್ಯ ಸಂಕೋಲೆಯಿಂದ ಭಾರತವನ್ನು ಬಿಡಿಸಲು ಉತ್ತರ ಕನ್ನಡ ಜಿಲ್ಲೆ ಬಹುದೊಡ್ಡ ಹೋರಾಟ ನಡೆಸಿದ ಕೀರ್ತಿ ಪಡೆದಿದೆ. ಈ ಜಿಲ್ಲೆಯಲ್ಲಿ ಸಿದ್ದಾಪುರ ಮತ್ತು ಅಂಕೋಲ ತಾಲ್ಲೂಕಿನ ಜನ ಸ್ವಾತಂತ್ರ್ಯ ಚಳವಳಿಗಾಗಿ ತಮ್ಮ ತನು-ಮನ-ಧನ ಅರ್ಪಿಸಿದ್ದಾರೆ. ಉಪ್ಪಿನ ಸತ್ಯಾಗ್ರಹ ಹಾಗು ಕರನಿರಾಕರಣೆ ಚಳವಳಿಯಲ್ಲಿ ಈ ಜಿಲ್ಲೆ ವಹಿಸಿದ ಪಾತ್ರ ಶ್ಲಾಘನೀಯ. ಕರ್ನಾಟಕದಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಯಲ್ಲಿ ಇದನ್ನು 'ಕರ್ನಾಟಕ ಬಾರ್ಡೋಲಿ' ಎಂದೇ ವರ್ಣಿಸಲಾಗಿದೆ.

ಕಾರವಾರ ಉತ್ತರ ಕನ್ನಡ ಜಿಲ್ಲೆಯ ಕೇಂದ್ರ ಸ್ಥಾನ. ಇದರ ಮೊದಲ ಹೆಸರು 'ಕಡವಾಡ'. ಬ್ರಿಟಿಷರು 'ಕಾರವಾರ' ಎಂದು ನಾಮಕರಣ ಮಾಡಿದರು. ಕಾಳಿ ಇಲ್ಲಿನ ಮುಖ್ಯ ನದಿ. ಕ್ರಿ.ಶ. 1639ರಲ್ಲಿ 'ರಾಬರ್ಟ್ ಮಾಸ್ಟರ್' ಎಂಬುವವನು ಇಲ್ಲೊಂದು ಮಳಿಗೆ ಕಟ್ಟಿಸಿದನು. ಇಲ್ಲಿನ 'ಬೈತಕೂಲ್' ಎಂಬಲ್ಲಿಂದ ಅರಬ್ಬರು ಸಾಂಬಾರ ಪದಾರ್ಥಗಳನ್ನು ಸಾಗಿಸುತ್ತಿದ್ದರು.

ಭಾರತದ ನೌಕಾದಳದ ಮಾಜಿ ಮುಖ್ಯಸ್ಥರಾದ ಓ.ಎಸ್. ಡಾಸನ್ 'ಸುರಕ್ಷತೆಗೆ ಮತ್ತೊಂದು ಹೆಸರು ಕಾರವಾರ' ಎನ್ನುತ್ತಾರೆ. ಸುಮಾರು 80,000 ಎಕರೆ ಪ್ರದೇಶದಲ್ಲಿ ಸೀಬರ್ಡ್ ಎಂಬ ನೌಕಾ ನೆಲೆಯನ್ನು ನಿರ್ಮಿಸಲಾಗುತ್ತಿದೆ. 'ಕೈಗಾ' ಅಣು ವಿದ್ಯುತ್ ಉತ್ಪಾದನಾ ಕೇಂದ್ರ ಇಲ್ಲಿದೆ.

ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ಪ್ರಮುಖ ತಾಲ್ಲೂಕು. ಅಂಕಲೇಶ್ವರ ಎಂಬ ದೇವಾಲಯದಿಂದ 'ಅಂಕೋಲಾ' ಎಂಬ ಹೆಸರು ಬಂದಿದೆ ಎನ್ನುತ್ತಾರೆ. ಅಂಕೋಲಾ ಕುರಿತಂತೆ ಚುಟುಕುಬ್ರಹ್ಮ ದಿನಕರ ದೇಸಾಯಿ ಹೇಳುವ ಮಾತಿದು-

'ನಾನು ಹುಟ್ಟಿದ್ದು ಸಖಿ, ಅಂಕೋಲೆಯಲ್ಲಿ
ಚಿಂತೆಯಿಲ್ಲದೆ ಸಾಯಬೇಕೆಂಬೆ ಅಲ್ಲಿ
ಅಂಕೋಲೆ ಎನ್ನುವುದು ಕನ್ನಡದ ಕಡಲು
ಈ ಕಡಲಿನೊಳಗಿರಲಿ ದಿನಕರನ ಒಡಲು'

ಹಾಲಕ್ಕಿ ಒಕ್ಕಲಿಗರು ಇಲ್ಲಿನ ಮೂಲನಿವಾಸಿಗಳು. ಇವರದು ಮಾತೃಪ್ರಧಾನ ಕುಟುಂಬ. ಕುಟುಂಬದ ಮುಖ್ಯಸ್ಥನನ್ನು 'ಗುರು' ಎಂದು ಕರೆಯುತ್ತಾರೆ. ಇವರ ಸುಗ್ಗಿ ಆಚರಣೆ ವಿಶೇಷ ಜಾನಪದ ಕಲಾ ಪ್ರಸಂಗ. ಗುಮಟೆ ಪಾಂಗುಗಳು ಹಾಲಕ್ಕಿಗಳ ವಿಶೇಷ ವಾದ್ಯ. ಈ ಸಮುದಾಯದ ಶ್ರೀಮತಿ ತುಳಸಿ ತಮ್ಮ ಅರಣ್ಯಜ್ಞಾನಕ್ಕಾಗಿ ಇಂದು ರಾಷ್ಟ್ರೀಯ ಖ್ಯಾತಿ ಗಳಿಸಿದ್ದಾರೆ. ಹಾಲಕ್ಕಿ ಸಮಾಜದ ಬದುಕನ್ನು ಬಹು ಹಿಂದೆ ಕವಿ ದಿನಕರ ದೇಸಾಯಿಯವರು ಹೀಗೆ ವಿವರಿಸುತ್ತಾರೆ-

'ಇವನ ಮನೆಯೊಳಗಿಲ್ಲ ಸಾಕಷ್ಟು ಅಕ್ಕಿ
ಆದರೂ ಆತನಿಗೆ ಹೆಸರು ಹಾಲಕ್ಕಿ
ಹಾಲು-ಹಕ್ಕಿಗಳೆರಡೂ ಹೆಸರೊಳಗೆ ಮಾತ್ರ
ಹಸಿವೆಯೆಂಬುದು ಇವನ ಕುಲಗೋತ್ರ'

ಈ ಭಾಗದ ಪರಿಶಿಷ್ಟ ಜಾತಿಗಳಲ್ಲಿ ಅಗೇರರು ಮುಖ್ಯರು. ಇವರು ಮೊದಲು ಉಪ್ಪಿನ ಆಗರದಲ್ಲಿ ಉಪ್ಪು ತೆಗೆಯುವ ವೃತ್ತಿ ಕೈಗೊಂಡಿದ್ದರು. ಇತ್ತೀಚೆಗೆ ಅಗೇರರು ಕಮ್ಮಾರಿಕೆ, ಬಡಗಿಕೆ, ಮೀನುಗಾರಿಕೆ, ಉಪ್ಪಾರಿಕೆ, ಕೂಲಿಕೆಲಸಗಳನ್ನು ಮಾಡುತ್ತಿದ್ದಾರೆ. ಬುಧವಂತ ಇವರ ಜಾತಿಯ ಮುಖಂಡ. ತನ್ನ ಪಂಗಡದ ನೈತಿಕ ಮಟ್ಟವನ್ನು ಕಾಪಾಡಿಕೊಳ್ಳುವ 'ಹೊಣೆ' ಬುಧವಂತನಿಗಿರುತ್ತದೆ. ಇವರು ತಮ್ಮ ಜಾತಿಯ ಗುರುಗಳನ್ನು 'ಐಗಳ' ಎಂದು ಕರೆಯುತ್ತಾರೆ. ವೆಂಕಟರಮಣ ಇವರ ಕುಲದೈವ.

1932ರಲ್ಲಿ ಅಂಕೋಲಾದಲ್ಲಿ ಕರನಿರಾಕರಣೆ ಚಳವಳಿ ನಡೆಯಿತು. ಅಂಕೋಲಾ ಉಪ್ಪಿನ ಸತ್ಯಾಗ್ರಹ ಸಾಕಷ್ಟು ಪ್ರಸಿದ್ಧವಾದುದು. 1952ರಲ್ಲಿ ಅಂಕೋಲೆಯಲ್ಲಿ ಕರ್ನಾಟಕ ಸಂಘ ಪ್ರಾರಂಭವಾಗಿದ್ದು ಅದು ಮೊದಲು ಕನ್ನಡ ಸಾಹಿತ್ಯ ಪರಿಷತ್ತಿನ ಅಂಗ ಸಂಸ್ಥೆಯಾಗಿತ್ತು. ಕವಿ ಸ.ಸ. ಗಾಂವಕರ್ ಇದರ ಅಧ್ಯಕ್ಷರಾಗಿದ್ದರು.

ಗೋಡಂಬಿ, ಮಾವಿನಹಣ್ಣುಗಳಿಗೆ ಅಂಕೋಲಾ ಪ್ರಸಿದ್ಧವಾಗಿದೆ. ಅಂಕೋಲಾದ 'ಕೆನರಾ ವೆಲ್‌ಫೇರ್ ಟ್ರಸ್ಟ್' ಉತ್ತರ ಕನ್ನಡ ಜಿಲ್ಲೆಯ ಹಿರಿಯ ಶೈಕ್ಷಣಿಕ ಸಂಸ್ಥೆ. ಪ್ರಸಿದ್ಧ ಕವಿಗಳು, ಲೋಕಸಭಾ ಸದಸ್ಯರೂ ಆಗಿದ್ದ ಶ್ರೀ ದಿನಕರ ದೇಸಾಯಿ ಈ ಸಂಸ್ಥೆ ಕಟ್ಟಿ ಬೆಳೆಸಿದ್ದಾರೆ. ಸ್ವಾದಿಯ ಅರಸನೊಬ್ಬ ತನ್ನ ಉಪಪತ್ನಿಗಾಗಿ ಇಲ್ಲಿ ಕೋಟೆ ಕಟ್ಟಿಸಿದನೆಂದು ಹೇಳಲಾಗಿದೆ. ಈ ತಾಲ್ಲೂಕಿನ ಬಾವಿಕೇರಿ, ಬೇಲಿಕೇರಿ, ಹೊನ್ನಬೈಲುಗಳು ಪ್ರಾಚೀನ ಜೈನಮತ ಕೇಂದ್ರಗಳು. ಅಂಕೋಲಾದಲ್ಲಿ ಇಸ್ಲಾಂಧರ್ಮದ ಉಪದೇಶ ಮಾಡಿ ಅಲ್ಲೇ ಕೊನೆಯುಸಿರೆಳೆದ ಸೈಯದ್ ಫತುಲ್ಲಾಬಗ್ದಾದಿಯವರ ಸ್ಮಾರಕವಿದ್ದು ಇದು ಭಾರತದಲ್ಲೇ ಖ್ಯಾತಿ ಗಳಿಸಿದೆ.

ಕುಮುಟಾ ಇದರ ಮೊದಲ ಹೆಸರು ಕುಂಭಟ್ಟ. ಇಲ್ಲಿರುವ ಕುಂಭೇಶ್ವರ ದೇವರಿಂದ ಈ ಹೆಸರು ಬಂದಿರಬಹುದು. ಕುಮುಟಾ ಮೊದಲು ಜೈನ ಯಾತ್ರಾಸ್ಥಳವಾಗಿತ್ತು. ಹಾಲಕ್ಕಿ ಜನಾಂಗದ ಜೊತೆ ನಾಡವರು ಈ ತಾಲ್ಲೂಕಿನ ಮುಖ್ಯಸಮುದಾಯ. ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈ ಸಮುದಾಯದವರು ಅತ್ಯಂತ ಶೌರ್ಯದಿಂದ ಭಾಗವಹಿಸಿದ್ದಾರೆ. ಡಾ. ವಿ.ಆರ್. ಉದುರ್ಜಿ ಅವರು ನಾಡವರನ್ನು 'ಜಾಜಸ್ವಿ ಹಾಗು ತೇಜಸ್ವಿ' ಪಂಗಡದವರೆಂದು ಕರೆಯುತ್ತಾರೆ. ನಾಡವರು ಗ್ರಾಮಾಧಿಕಾರಿಗಳಾಗಿ ಗಾಂವಕರ್ ಎಂದು ಖ್ಯಾತರಾಗಿದ್ದಾರೆ.

1925ರ ವೇಳೆಗೆ ದಿ|| ವೆಂಕಣ್ಣನಾಯಕ ಬಿಜಾಪುರ ಜಿಲ್ಲೆಯ ಕಲೆಕ್ಟರ್ ಆಗಿದ್ದರು. ಇವರು ವಿದೇಶಕ್ಕೆ ಹೋಗಿಬಂದ ಮೊದಲ ನಾಡವರು. ಇವರ ಮಗ ತೋರ್ಕೆಯ ಎಂ.ಹೆಚ್.

ನಾಯಕ ಅವರು ಪಠ್ಯಪುಸ್ತಕ ನಿರ್ದೇಶಕರಾಗಿದ್ದರು. ಎಸ್.ಡಿ. ಗಾಂವಕರ್ ವಿಧಾನಪರಿಷತ್ ಸಭಾಪತಿಗಳಾಗಿದ್ದರು. ವಿ.ಬಿ. ಗಾಂವಕರ ಎಸ್.ಎಸ್.ಎಲ್.ಸಿ. ಮಂಡಲಿಯ ನಿರ್ದೇಶಕರಾಗಿದ್ದರು. ಆರ್. ಬಿ. ನಾಯಕ ಹಿರೇಗುತ್ತಿಯವರು, ಕರ್ನಾಟಕ ವಿಧಾನಸಭೆಯ ಉಪಾಧ್ಯಕ್ಷರಾಗಿದ್ದರು.

1959ರಲ್ಲಿ ಭಾರತದ ರಾಷ್ಟ್ರಪತಿಯಾಗಿದ್ದ ಡಾ. ಬಾಬು ರಾಜೇಂದ್ರ ಪ್ರಸಾದ್ ಕುಮುಟಾಕ್ಕೆ ಭೇಟಿ ಕೊಟ್ಟಿದ್ದರು.

1916ರಲ್ಲಿ ಕುಮುಟಾದಿಂದ 'ಕಾನಡಾ ವೃತ್ತ' ಎಂಬ ಪತ್ರಿಕೆ ಪ್ರಕಟವಾಗುತ್ತಿತ್ತು. ಇದು ಈ ಜಿಲ್ಲೆಯ ಮೊದಲ ಪತ್ರಿಕೆಯೂ ಹೌದು. ಪಾಂಡುರಂಗಕೃಷ್ಣ ಶಾನುಭಾಗ ಇದರ ಸಂಪಾದಕರು.

ಕುಮುಟಾದ ಗುಡಿಕಾರರು ತಮ್ಮ ಕಲಾಪ್ರತಿಭೆಯಿಂದ ಅಂತರರಾಷ್ಟ್ರೀಯ ಖ್ಯಾತಿ ಗಳಿಸಿದ್ದಾರೆ. ಗಂಧದ ಕಲಾವಸ್ತುಗಳನ್ನು ತಯಾರಿಸುವುದರಲ್ಲಿ ಅವರು ಪರಿಣಿತರು. ಕ್ರಿ.ಶ. 1886ರಲ್ಲಿ ಲಂಡನ್ನಿನಲ್ಲಿ ಜರುಗಿದ ಕಲಾಪ್ರದರ್ಶನಕ್ಕೆ ತಮ್ಮ ಕಲಾಕೃತಿ ಕಳುಹಿಸಿ ಬಹುಮಾನ ಗಳಿಸಿದ್ದಾರೆ. ಇಂದು ರಾಷ್ಟ್ರಪತಿ ಭವನದಲ್ಲಿರುವ ಮೇಜು, ಕುರ್ಚಿ, ಟೀಪಾಯ್ ಹಾಗು ಚೌಕಟ್ಟುಗಳನ್ನು ಸಿದ್ಧಪಡಿಸಿದವರು ಕುಮುಟಾದ ಗುಡಿಕಾರರು. ಈ ಗುಡಿಕಾರ ಸಮುದಾಯದಲ್ಲಿ ಪ್ರಮುಖರೆಂದರೆ ದತ್ತ ಈರಯ್ಯಶೇಟ, ಭಾಸ್ಕರಪ್ಪ ಶಂಬಾ, ಅನಂತಶೇಟ್, ರಘುವೀರ ಶೇಟ್ ಮೊದಲಾದವರು. ರಾಜ್ಯದ ಶ್ರೇಷ್ಠ ದಂತ ಶಿಲ್ಪಿಗಳೆಂದರೆ ರಘುವೀರಶೇಟ್, ಸುಬ್ರಾಯ ಆರ್. ಶೇಟ್ ಹಾಗು ಮಾಧವಗಣಪತಿ ಶೇಟ್.

ಕ್ರಿ.ಶ. 800ರಲ್ಲಿ ಹೊನ್ನಾವರವನ್ನು ಆಳುತ್ತಿದ್ದ ಹೊನ್ನಮ್ಮ ದೇವಿಯಿಂದ ಇದಕ್ಕೆ 'ಹೊನ್ನಾವರ' ಎಂಬ ಹೆಸರು ಬಂತೆಂದು ತಿಳಿದುಬರುತ್ತದೆ. ಇಲ್ಲಿರುವ ರಾಮತೀರ್ಥ ಪುರಾಣಪ್ರಸಿದ್ಧವಾದ ಸ್ಥಳ.

ಕ್ರಿ.ಶ. 8-9ನೆಯ ಶತಮಾನದಲ್ಲಿದ್ದ ಮಹಾಸಾಧು ಭಟ್ಟಾಕಳಂಕನಿಂದಾಗಿ ಭಟ್ಕಳಕ್ಕೆ ಆ ಹೆಸರು ಬಂದಿದೆ. ಕ್ರಿ.ಶ. 1321ರಲ್ಲಿ ಅರಬ್ ದೊರೆಯೊಬ್ಬ ಇದನ್ನು ಆಳುತ್ತಿದನಂತೆ ! ಕಾರ್ಕಳದ ಭೈರಾದೇವಿ ಈ ಪ್ರದೇಶ ಆಳುತ್ತಿದಳು. ಇಲ್ಲಿ ಹನ್ನೆರಡು ಜೈನ ಬಸದಿಗಳಲ್ಲಿ ಇಪ್ಪತ್ನಾಲ್ಕು ತೀರ್ಥಂಕರರು ಇದ್ದಾರೆ. ನವಾಯಿತರೆಂಬ ಮುಸಲ್ಮಾನರ ಪಂಗಡವಿದೆ. ಅವರುಗಳು ಜೈನಧರ್ಮದಿಂದ ಮತಾಂತರಗೊಂಡವರೆಂಬ ಅಭಿಪ್ರಾಯವಿದೆ. ಹಾಗೆಯೇ ಸೌದಿ ಅರೇಬಿಯಾದಿಂದ ಬಂದವರೆಂಬ ವಾದ ಸಹ ಇದೆ. ಸಾರಸ್ವತ ಸಮಾಜದ ಚಿತ್ರಾಪುರ ಮಠವಿದೆ. ಅದೂ ಕೂಡ ರಾಜ್ಯದಲ್ಲಿ ಪ್ರಸಿದ್ಧಿ ಪಡೆದಿದೆ. ಭಟ್ಕಳದಲ್ಲಿ ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದ ಸುಸಜ್ಜಿತವಾದ ಇಂಜಿನಿಯರಿಂಗ್ ಕಾಲೇಜು ಇದೆ.

ಸ್ವಾತಂತ್ರ್ಯಹೋರಾಟದಲ್ಲಿ ಭಾಗವಹಿಸಿ ಸೆರಮನೆ ವಾಸ ಮತ್ತು ವಿವಿಧ ಕಷ್ಟನಷ್ಟಗಳಿಗೆ ಗುರಿಯಾದವರ ಸಂಖ್ಯೆ ಸಿದ್ದಾಪುರ ತಾಲ್ಲೂಕಿನಲ್ಲಿ ಅಪಾರ. ದೊಡ್ಮನೆ ನಾರಾಯಣ ಹೆಗಡೆ

ಅವರ ನೇತೃತ್ವದಲ್ಲಿ 1917ರಲ್ಲಿ ಸ್ವಾತಂತ್ರ್ಯಹೋರಾಟ ಪ್ರಾರಂಭವಾಯಿತು. ಜಲಿಯನ್ ವಾಲಾಬಾಗ್ ಹತ್ಯಾಕಾಂಡದಲ್ಲಿ ಗಾಯಗೊಂಡಿದ್ದ ಗಾಂಧೀಜಿ ಅವರಿಗೆ ಆತ್ಮೀಯರಾಗಿದ್ದ ಹಬೀಬುಲ್ಲಾಖಾನ್ 1921ರಲ್ಲಿ ಇಲ್ಲಿಗೆ ಆಗಮಿಸಿ ಸ್ವಾತಂತ್ರ ಚಳವಳಿಯ ಕಿಚ್ಚು ಹತ್ತಿಸಿದರು. ಉತ್ತರ ಕನ್ನಡ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಮೊದಲ ಶಿಕ್ಷೆ ಅನುಭವಿಸಿದವರು ಈ ತಾಲ್ಲೂಕಿನ ಚೇತ್ಕಣಿಯ ಚೌಡ ನಾಯಕರು. 1947ರಿಂದ 1968ರವರೆಗೆ ಈ ತಾಲ್ಲೂಕಿನಲ್ಲಿ ಗೇಣಿದಾರರ ಸರಣಿ ಹೋರಾಟಗಳು ನಡೆದವು. 1968ರಲ್ಲಿ ಸಿರಸಿಯಲ್ಲಿ ನಡೆದ ಗೇಣಿದಾರರ ಪರವಾದ ಹೋರಾಟ, ರೈತ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿದೆ. 1929ರಲ್ಲಿ ಸಿದ್ಧಾಪುರದ ಅರ್ಬನ್ ಸಹಕಾರಿ ಬ್ಯಾಂಕ್ ನೋಂದಣಿಯಾದ ಮೊಟ್ಟಮೊದಲ ಸಹಕಾರಿ ಸಂಸ್ಥೆಯಿದು. ಶಿಲ್ಪಕಲೆಯಲ್ಲಿ ಕರ್ನಾಟಕದಲ್ಲಿ ಹೆಸರು ಪಡೆದ ನರಸಿಂಹ ಶೇಟ್ ಸಿದ್ದಾಪುರದವರು.

'ಸಿರಸಿ' ಉತ್ತರ ಕನ್ನಡ ಜಿಲ್ಲೆಯ ಮತ್ತೊಂದು ತಾಲ್ಲೂಕು ಕೇಂದ್ರ. ಹೇರಳವಾಗಿದ್ದ ಶಿರೀಷ ವೃಕ್ಷಗಳಿಂದಾಗಿ ಈ ಪ್ರದೇಶಕ್ಕೆ 'ಶಿರಸಿ' ಎಂಬ ಹೆಸರು ಬಂದಿದೆ. 'ಶಿರೀಷಪುರ' ಈ ತಾಲ್ಲೂಕಿನಲ್ಲಿದೆ. ಶಿರೀಷ ವೃಕ್ಷದ ಹೂವಿಗೆ ಬೊಳಕೆ, ಬಕ್ಕಳ, ಲಿರಿಜಲು, ನಂಜಲು, ರಂಜಲು, ಬಾಗಳ ಮುಂತಾದ ಹೆಸರುಗಳಿವೆ. 1930ರ ಉಪ್ಪಿನ ಸತ್ಯಾಗ್ರಹದಲ್ಲಿ ಶಿರಸಿ ತಾಲ್ಲೂಕಿನ ಜನ ವಹಿಸಿದ ಪಾತ್ರ ಸ್ಮರಣಾರ್ಹ. ಏಪ್ರಿಲ್ 13ರಂದು ಅಂಕೋಲೆಯಲ್ಲಿ ಜರುಗಿದ ಈ ಸಾಂಕೇತಿಕ ಸತ್ಯಾಗ್ರಹಕ್ಕೆ ಶಿರಸಿಯಿಂದ ಸ್ವಾಮಿ ವಿದ್ಯಾನಂದರ ನೇತೃತ್ವದಲ್ಲಿ ನೂರಾರು ಜನ ಸತ್ಯಾಗ್ರಹಿಗಳು ಪಾಲ್ಗೊಂಡಿದ್ದರು. ಮಹಾತ್ಮಗಾಂಧೀಜಿಯವರು 1934ರಲ್ಲಿ ಶಿರಸಿಗೆ ಭೇಟಿ ಕೊಟ್ಟಿದ್ದರು.

ಹಳಿಯಾಳ ಉತ್ತರ ಕನ್ನಡ ಜಿಲ್ಲೆಯ ಮತ್ತೊಂದು ತಾಲ್ಲೂಕು ಕೇಂದ್ರ. ಕ್ರಿ.ಶ. 1088ರಲ್ಲಿ ಹಳಿಯಾಳದ ಅಗ್ರಹಾರಕ್ಕೆ ಗೋವೆಯ ಕದಂಬರ ದೊರೆ ಮೂರನೆಯ ಗುವಲದೇವ ದತ್ತಿ ಕೊಟ್ಟ ಉಲ್ಲೇಖವಿದೆ. ಕ್ರಿ.ಶ. 1114ರ ಗೋವೆಯ ಕದಂಬರ ಶಾಸನದಲ್ಲಿ ಇದನ್ನು 'ಪಲ್ಲಿಯಾಳ' ಎಂದು ಕರೆದಿದ್ದಾರೆ. ಅದರ ಆಧುನಿಕ ರೂಪವೇ ಹಳಿಯಾಳ.

ಕ್ರಿ.ಶ. 1801ರಲ್ಲಿದ್ದ ಸ್ವಾತಂತ್ರ್ಯ ಹೋರಾಟಗಾರ, ದಕ್ಷಿಣ ಭಾರತದ ಬಂಡಾಯಕಾರನೆಂದು ಖ್ಯಾತನಾದ ಚನ್ನಗಿರಿಯ ದೊಂಡಿಯಾ ವಾಘ ಸ್ವಲ್ಪ ಕಾಲ ಹಳಿಯಾಳದ ಕಾಡಿನಲ್ಲಿದ್ದನು.

1953ರಲ್ಲಿ ದಾಂಡೇಲಿಯಲ್ಲಿ 203 ಚ.ಕಿ.ಮೀ. ವಿಸ್ತೀರ್ಣದಲ್ಲಿ ಅಭಯಾರಣ್ಯವಿತ್ತು. ಹಳಿಯಾಳ ತಾಲ್ಲೂಕಿನ ಹರಗಿ ಗ್ರಾಮದಲ್ಲಿ ಹುಟ್ಟ ಬೆಳೆದ ಡಾ. ಶಾಂತಿನಾಥ ದೇಸಾಯಿ, ಕೆ.ಎಸ್. ರಾವ್ ಕ್ರಮವಾಗಿ ಕನ್ನಡ ಮತ್ತು ಕೊಂಕಣಿ ಭಾಷೆಗೆ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಕರ್ನಾಟಕ ಕೇಸರಿ ನೀಗ್ರೋ ಅಗ್ನೆಲ್ ಹಂಚಿನಮನಿ ಉತ್ತಮ ಕುಸ್ತಿಪಟು. ಕರುಲಾಸಿದ್ದಿ ಪ್ರಖ್ಯಾತ ರಾಷ್ಟ್ರೀಯ ಅಥ್ಲೆಟಿಕ್.

ಉತ್ತರ ಕನ್ನಡ ಜಿಲ್ಲೆಯಲ್ಲಿ ನೂರಾರು ಸ್ವಾತಂತ್ರ್ಯ ಹೋರಾಟಗಾರರನ್ನು ಗುರುತಿಸಲಾಗಿದೆ. ಅಂಕೋಲಾ ಸತ್ಯಾಗ್ರಹವಂತೂ ರಾಷ್ಟ್ರೀಯ ಘಟನೆಗಳಲ್ಲಿ ಒಂದಾಗಿದೆ. ಎಂ.ಪಿ. ನಾಡಕರ್ಣಿ, ಇಡಗುಂಜಿಯ ಟಿ.ಎನ್. ಯಾಜಿ, ಆರ್.ಎಸ್. ಹೆಗಡೆ, ಶಂಕರಗುಲ್ವಾಡಿ, ಹರಿ ಅನಂತ ಪೈ, ವಾಸುದೇವ ಬಾಬುರಾವ್ ಕಾಮತ್, ದಿ|| ಪಕ್ರು ಬಂಡಿಗೇರಿ, ಡಾ|| ಶೇಖರಯ್ಯ, ಎಸ್. ಪಿ. ಹಿರೇಮಠ, ರಾಮದಾಸ ಗುರಪ್ಪ, ಆನವಟ್ಟಿ ವೆಂಕಟೇಶ್ ಪಾಂಡುರಂಗ, ಹುಲೇಕಲ್ ತಿಮ್ಮಪ್ಪನಾಯಕ ಮಾಸ್ತರ, ಕನ್ನಳ್ಳಿ ಶಿವರಾಮ ಮಂಜಯ್ಯ ಹೆಗಡೆ, ಗಣಪತಿ ತಿಮ್ಮಣ್ಣಭಟ್ಟ, ಹಣಜೀಬೈಲ ಸಣ್ಣಪ್ಪಹೆಗಡೆ, ಹೂವಿನಮನೆ ತಿಮ್ಮಪ್ಪ ಹೆಗಡೆ, ಡಾ|| ಎನ್.ಜಿ. ಪೈ, ಗೋವಿಂದ ಶಾಂತಾರಾಮ ಶಾನಭಾಗ, ದೊಡ್ಮನೆ ಮಹಾದೇವಮ್ಮ, ಸೀತಾಬಾಯಿ ಮಡಗಾಂವಕರ್, ನೆಲಮಾವು ಶಿವರಾಮಭಟ್ಟರು, ದೊಡ್ಡಳ್ಳಿ ತಿಮ್ಮಯ್ಯ ಹೆಗಡೆ, ವೈದ್ಯ ನೀಲಕಂಠರಾಯರು, ವಾಸುದೇವ ಥಾಕಪ್ಪ, ಅಕದಾನಿ ಗಣಪತಿಭಟ್ಟ, ತಿಮ್ಮಪ್ಪ ಶ್ರೀನಿವಾಸನಾಯಕ, ಟಿ.ಎಸ್. ನಾಯಕ, ಗಿರಿಜಾಬಾಯಿ ಹೆರವಟ್ಟಾ, ಹಳಿಯಾಳದ ಅಬ್ದುಲ್ ಖಾದರ ಮನಿಯಾರ, ಕೃಷ್ಣಾಜಿ ರಾಮಚಂದ್ರ ಪತ್ನೀಸಾ, ಶ್ರೀಪಾದ ಯಶವಂತ ದೇಶಪಾಂಡೆ, ಗುರುನಾಥ ತುಳುಜಾರಾಮ, ನಿಂಗಪ್ಪ ಪಕೀರಪ್ಪ ಹಳ್ಳಿಕೇರಿ, ವಿ. ಜೀವೋತ್ತಮಭಟ್, ಶ್ರೀ ನಾರಾಯಣ ಮಂಜುನಾಥ್‌ಭಟ್, ವಿ. ಶಂಶುದ್ದೀನ್, ಸರ್. ನಾರಾಯಣ ಚಂದಾವರ್‌ಕರ್, ಹರಿಬಾಬು ಕಾಮತ್, ಕೆ.ಆರ್. ಹಳದೀಪುರ್‌ಕರ್, ಪದ್ಮನಾಭ ಎನ್. ಕಾಮತ್, ರಂಗನಾಥ ದೇವಪ್ಪ ಶಾನುಭಾಗ್, ಕೃಷ್ಣ ನಾರಾಯಣನಾಯಕ್, ಗಣೇಶ ಹೆಗಡೆ ಮುಂತಾದವರು.

ಉತ್ತರ ಕನ್ನಡ ಜಿಲ್ಲೆ ಅನೇಕ ಪ್ರತಿಭಾವಂತರ ಬೀಡಾಗಿದೆ. ಆದಿಕವಿ ಪಂಪನ ಪ್ರೀತಿಯ ತಾಣ ಬನವಾಸಿ, ಉತ್ತರ ಕನ್ನಡ ಜಿಲ್ಲೆಯಲ್ಲಿದೆ. ಕ್ರಿ.ಶ. 9ನೆಯ ಶತಮಾನದ ಭಟ್ಟಾ ಕಳಂಕದೇವ ಇಲ್ಲಿಯವನು. ಕ್ರಿ.ಶ. 1550ರಲ್ಲಿದ್ದ ಸಾಳ್ವ ಮಹಾಭಾರತ ಕಾವ್ಯ ರಚಿಸಿದನು. ಆತ ಗೇರು ಸೊಪ್ಪೆಯಲ್ಲಿದ್ದ. ಗೇರುಸೊಪ್ಪೆಯ ಶಾಂತಪ್ಪಯ್ಯನು ಪ್ರಸಿದ್ಧ ಯಕ್ಷಗಾನ ಪ್ರಸಂಗ ಕರ್ತೃ. 1890ರಲ್ಲಿ ಕನ್ನಡದ ಮೊದಲ ಸಾಮಾಜಿಕ ನಾಟಕ 'ಇಗ್ಗಪ್ಪ ಹೆಗಡೆಯ ವಿವಾಹ ಪ್ರಸಂಗ' ಕೃತಿ ರಚಿಸಿದ ಕೆರ್ಕಿ ವೆಂಕಟರಮಣಶಾಸ್ತ್ರಿ ಹೊನ್ನಾವರದವರು. ಆರ್.ವಿ. ಭಂಡಾರಿ, ಡಾ|| ಎನ್.ಆರ್. ನಾಯಕ್, ಗಿರೀಶ ಕಾರ್ನಾಡ, ಗೌರೀಶ ಕಾಯ್ಕಿಣಿ, ಜಿ.ಯು. ಭಟ್ಟ, ಎಲ್.ಎಸ್. ಶಾಸ್ತ್ರಿ, ಶಾ.ಮಂ. ಕೃಷ್ಣರಾಯ, ದಯಾನಂದ ತೊರ್ಕೆ, ಆರ್.ವಿ. ಹೆಗಡೆ, ಶಶಿಧರ್ ಭಟ್, ಡಾ|| ರೇಖಾ ಗಾಂವಕರ್, ಡಾ|| ಎಲ್.ಜಿ. ಭಟ್, ನಂದನಗದ್ದೆ ಹನುಮಂತರಾವ್ ಮಂಜ್ರೇಕರ್, ಡಾ|| ಹೆಚ್.ಆರ್. ರಘುನಾಥಭಟ್ಟ, ಡಾ|| ಶಾಲಿನಿ ರಘುನಾಥಭಟ್, ನಾಗೇಶಹೆಗಡೆ, ಯಶವಂತ ಚಿತ್ತಾಲ, ಎಸ್.ಆರ್. ಎಕ್ಕುಂಡಿ, ಗಂಗಾಧರ ಚಿತ್ತಾಲ, ಎಂ. ಅಕಬರ ಆಲಿ, ಪ್ರೊ. ಜಿ.ಹೆಚ್. ಶ್ರೀಧರ್, ಹರ್ಡೇಕರ್ ಮಂಜಪ್ಪ (1886-1947) ಗೆಜೆಟಿಯರ್‌ನ ಪ್ರಧಾನ

ಸಂಪಾದಕರಾಗಿದ್ದ, ಸಂಶೋಧಕರಾಗಿದ್ದ ಕೆ. ಅಭಿಶಂಕರ್, ಪ್ರೊ. ಎಲ್. ಟಿ. ಶರ್ಮ, ತದ್ವಲಸೆ ವಿಘ್ನೇಶ್ವರಶರ್ಮ, ಎಂ.ಜಿ. ಶಾಸ್ತ್ರೀ, ಡಾ॥ ಎ.ಕೆ. ಶಾಸ್ತ್ರಿ, ಟಿ.ಎಂ. ಸುಬ್ಬರಾಯ, ಪ್ರೊ. ಜಿ.ಎಚ್. ನಾಯಕ್, ಪ.ಸು. ಭಟ್ಟ, ಸರೋಜಿನಿನಾಯಕ್, ಕವಿ ಜಯಂತಕಾಯ್ಕಿಣಿ, ವಿದ್ಯುಲ್ಲತಾ ಸಾಸನೂರು-ಹೀಗೆ ಪ್ರತಿಭಾವಂತರ ಅಕ್ಷಯ ಭಂಡಾರವೇ ಉತ್ತರ ಕನ್ನಡ ಜಿಲ್ಲೆಯಲ್ಲಿದೆ.

ಉತ್ತರ ಕನ್ನಡ ಜಿಲ್ಲೆಯ ವಿಶಿಷ್ಟ ಕಲೆ ಯಕ್ಷಗಾನ. ಯಕ್ಷಗಾನದಲ್ಲಿ ಇಡಗುಂಜಿ ಮೇಳ ರಾಷ್ಟ್ರೀಯ ಖ್ಯಾತಿ ಗಳಿಸಿದೆ. ಹಾಸ್ಯ ಶೈಲಿಯ ಯಕ್ಷಗಾನ ನಿರ್ಮಾಪಕರು ದಿ॥ ಪರಮಯ್ಯ. ಅಭಿನಯ, ನೃತ್ಯ, ಮುದ್ರೆಗಳ ಬಳಕೆಯಲ್ಲಿ ಕಲಾತ್ಮಕತೆಯನ್ನು ಪ್ರದರ್ಶಿಸಿದವರು ದಿ॥ ಮಾಢ್ಕಣಿ ನಾರಾಯಣ ಹೆಗಡೆ. ಭೀಷ್ಮ ಪಾತ್ರಧಾರಿ ಮಾವಿನಕುರ್ವೆ ತಿಮ್ಮಪ್ಪನಾಯಕ. ಆಂಜನೇಯ ಪಾತ್ರದ ಕೊಂಡದಕುಳ ಲಕ್ಷ್ಮಣಹೆಗಡೆ, ಸ್ತ್ರೀ ಪಾತ್ರಧಾರಿ ಗಜಾನನ ಹೆಗಡೆ, ರಾಕ್ಷಸ ಪಾತ್ರಕ್ಕೆ ಶಿವರಾಮ ಹೆಗಡೆ ಹೆಸರಾದವರು. ಶ್ರೀ ಮಹಾಬಲ ಹೆಗಡೆ, ಕೆರಮನೆ ಶಂಭುಹೆಗಡೆ, ಜಾಲವಳ್ಳಿ ವೆಂಕಟೇಶರಾವ್, ಪಿ.ವಿ. ಹಾಸ್ಯಗಾರ ತಿಟ್ಟಾಣಿ, ರಾಮಚಂದ್ರ ಹೆಗಡೆ, ಬಳಕೂರ ಕೃಷ್ಣಯಾಜಿ, ಗಜಾನನ ಭಂಡಾರಿ, ತರುಣ ಕಲಾವಿದರಾದ ಶಿವಾನಂದ ಹೆಗಡೆ ಮೊದಲಾದ ಅಭಿಜಾತ ಯಕ್ಷಗಾನ ಕಲಾವಿದರನ್ನು ನೆನಪಿಸಿಕೊಳ್ಳಬಹುದು.

ಹಿಂದಿ ಚಲನಚಿತ್ರರಂಗದ ಖ್ಯಾತ ಸಂಗೀತ ನಿರ್ದೇಶಕರಾದ ಪರಶುರಾಮ ಹಳದೀಪುರ ಸಿದ್ದಾಪುರ, ಸಿದ್ದಾಪುರ ತಾಲ್ಲೂಕಿನವರು. ಅದೇ ರೀತಿ ಖ್ಯಾತ ನೃತ್ಯಪಟು ಕೆ.ಆರ್. ಹೊನ್ನೆಗುಂಡಿ ಇಲ್ಲಿನವರು. ರಂಗಭೂಮಿ ಯಕ್ಷನಟ ಹುಲಿಮನೆ ಸೀತಾರಾಮಶಾಸ್ತ್ರಿ, ನಾಟಕಕಾರ ಬೆಟಗೇರಿ ತಿಮ್ಮಯ್ಯ ಮಾಸ್ತರ, ಖ್ಯಾತ ಅರ್ಥಶಾಸ್ತ್ರಜ್ಞರಾದ ಸೂರ್ಯನಾರಾಯಣ ಹಿತ್ಲಳ್ಳಿ, ಅಮೆರಿಕ ಹಾಗೂ ಆಫ್ರಿಕಾದಲ್ಲಿ ತಮ್ಮ ಪ್ರತಿಭೆ ತೋರಿಸಿ ಈಗ ಜಾಂಬಿಯಾದಲ್ಲಿ ನೆಲೆಸಿರುವ ಅರ್ಥಶಾಸ್ತ್ರಜ್ಞರಾದ ಜಿ.ಎನ್. ಶಾಸ್ತ್ರಿ, ವ್ಯಂಗ್ಯ ಚಿತ್ರಕಲೆಯಲ್ಲಿ ಪರಿಣಿತರಾದ ಆರ್.ಜಿ. ರಾಯ್ಕರ್ ಮತ್ತು ಜಿ.ಎಂ. ಹೆಗಡೆ, ಭಾಗವಂತಿಕೆಯಲ್ಲಿ ಹೆಸರು ಗಳಿಸಿದ ಶ್ರೀ ನೆಬ್ಬೂರು ನಾರಾಯಣ ಭಾಗವತರು, ಯಕ್ಷಗಾನ ಮತ್ತು ಜಾನಪದ ಅಕಾಡೆಮಿ ಪ್ರಶಸ್ತಿ ಗಳಿಸಿದ ಮೂರೂರು ದೇವರು ಹೆಗಡೆ ಮೊದಲಾದವರನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಬಸವರಾಜ ರಾಜಗುರುಗಳ ಅಂತರಂಗದ ಶಿಷ್ಯರಾದ ಹಾಣಗಿ ಗಣಪತಿಭಟ್ಟರು ಈ ಜಿಲ್ಲೆಯಲ್ಲಿ ಶಾಸ್ತ್ರೀಯ ಸಂಗೀತ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ.

ಯುವಜನಸೇವೆ, ಪ್ರವಾಸೋದ್ಯಮ ಹಾಗು ಸಾಂಸ್ಕೃತಿಕ ಸಂಘಟನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಯಲ್ಲಾಪುರದ 'ನಿಸರ್ಗ' ಮನೆಯ ಶ್ರೀ ಪ್ರಮೋದ ಹೆಗಡೆ ಅವರನ್ನು ಮರೆಯುವಂತಿಲ್ಲ. ಹಿರಿಯ ತಾರೆ ಪಂಡರಿಬಾಯಿ, ಮೈನಾವತಿ, ಡಾ॥ ಗಿರೀಶ್ ಕಾರ್ನಾಡ್, ಜಯಶ್ರೀ ಗದ್ದರ್, ರಂಗರಾವ್, ಅನಂತನಾಗ್, ಶಂಕರನಾಗ್, ಪದ್ಮಕುಮುಟಾ, ರಾಮಕೃಷ್ಣ

ವೀರನಾಯಕ ಮೊದಲಾದ ಚಲನಚಿತ್ರ ನಟ-ನಟಿಯರು ಉತ್ತರ ಕನ್ನಡ ಜಿಲ್ಲೆಯವರಾಗಿದ್ದಾರೆ. ದೇಶಾದ್ಯಂತ ಅಂಬೇಡ್ಕರ್, ಜಯಪ್ರಕಾಶ್ ನಾರಾಯಣ್, ನೆಹರು ಮೊದಲಾದವರ 'ಪುತ್ಥಳಿ' ಯನ್ನು ಮಾಡಿ ಹೆಸರು ಗಳಿಸಿರುವ ಮುಂಬೈನಲ್ಲಿರುವ ಶಿಲ್ಪಿ ವಾಘ ಕಾರವಾರದವರು.

ಉತ್ತರ ಕನ್ನಡ ಜಿಲ್ಲೆ ಅನೇಕ ಪ್ರತಿಭಾವಂತ ರಾಜಕಾರಣಿಗಳನ್ನು ಕೊಟ್ಟ ಹೆಗ್ಗಳಿಕೆ ಪಡೆದಿದೆ. ಕರ್ನಾಟಕದಲ್ಲಿ ಮೊಟ್ಟಮೊದಲ ಬಾರಿಗೆ ಕಾಂಗ್ರೆಸ್ಸೇತರ ಸರ್ಕಾರದ ಮುಖ್ಯಮಂತ್ರಿ ಯಾಗಿದ್ದ ಶ್ರೀ ರಾಮಕೃಷ್ಣಹೆಗಡೆ ರಾಷ್ಟ್ರದ ಹಿರಿಯ ರಾಜಕಾರಣಿ. ರಾಷ್ಟ್ರ ರಾಜಕಾರಣದಲ್ಲಿ ಪರಿವರ್ತನೆಯ ಗಾಳಿ ಬೀಸಲು ಮೂಲ ಪ್ರೇರಕರು.

ದಿನಕರ ದೇಸಾಯಿ ಕನ್ನಡದ ಪ್ರಸಿದ್ಧ ಕವಿಗಳು ಅಂತೆಯೇ ಲೋಕಸಭಾ ಸದಸ್ಯರಾಗಿದ್ದರು.

1983ರಿಂದಲೂ ಅಧಿಕಾರದಲ್ಲಿರುವ ಸಚಿವ ಆರ್.ವಿ. ದೇಶಪಾಂಡೆ ಅವರು ಜಿಲ್ಲೆಯಲ್ಲಿ ಅತ್ಯುತ್ತಮ ಕೆಲಸಗಾರರೆಂದು ಜನಮೆಚ್ಚುಗೆ ಪಡೆದಿದ್ದಾರೆ. ಆರ್.ಎಂ. ಹೆಗಡೆ, ಎಂ.ಪಿ. ಕರ್ಕಿ, ಜೋಕಿಂ ಆಳ್ವಾ, ಆರ್.ಎನ್. ಕಾಮತ್, ಡಾ. ಬಿ.ಎಂ. ಪೈ, ದಯಾನಂದ ನಾಡಕರ್ಣಿ, ಬಿ.ವಿ. ನಾಯಕ್, ಜೋಗಿ ಬೀರಣ್ಣ ನಾಯಕ, ಕವಿ ಅನಂತಪೈ, ಜಯಪ್ರಕಾಶ ನಾರಾಯಣ್, ಆರ್.ಎಸ್. ನಾಯಕ್, ಆರ್.ಎಸ್. ಕಾಮತ್, ಶಂಕರಪಾಯಿದೆ, ಮೋಟಿನಸರದ ತಿಮ್ಮಪ್ಪ ಹೆಗಡೆ, ಅಜ್ಜೀಬಾಳ ಹೆಗಡೆ, ಕೆ.ಹೆಚ್. ಗೌಡ, ಎನ್.ಎಲ್. ಗೌಡ, ಆರ್.ಎನ್. ನಾಯಕ್, ಡಾ|| ಚಿತ್ತರಂಜನ್, ಬಿ.ಪಿ. ಕದಂಬ, ಎಸ್.ಎಂ. ಯಾಹ್ಯಾ, ಭಾಷಂಹುಲ್ಲೀಸ್, ಜಿ. ದೇವರಾಯನಾಯ್ಕ, ಗೋಪಾಲ ಮುಕುಂದ ಕಾನಡೆ, ಅನಸೂಯ ಗಜಾನನ ಹೆಗಡೆ, ಆರ್.ಎನ್. ನಾಯಕ್, ಪ್ರಭಾಕರರಾಣೆ, ಜೈವಂತ, ಉಮೇಶಭಟ್, ಅನಂತಕುಮಾರಹೆಗಡೆ, ಮಾರ್ಗರೇಟ್ ಆಳ್ವ, ವಿಶ್ವೇಶ್ವರ ಕಾಗೇರಿ, ವಿವೇಕಾನಂದ ವೈದ್ಯ, ವಸಂತ ಆಸ್ನೋಟಿಕರ್, ಜಿ.ಡಿ. ನಾಯಕ್, ವಿ.ಡಿ. ಹೆಗಡೆ, ಮೋಹನಶೆಟ್ಟಿ, ಕಮಲಾಕರ ಗೋಕರ್ಣ, ದಯಾನಂದ ನಾಯಕ, ಮೊದಲಾದ ಹತ್ತಾರು ಜನನಾಯಕರನ್ನು ಹೆಸರಿಸಬಹುದು.

ಉತ್ತರ ಕನ್ನಡ ಜಿಲ್ಲೆ 'ಸೊಬಗಿನ ತಾಣ' ಎಂದೇ ಖ್ಯಾತಿಯಾಗಿದೆ. 1802ರಲ್ಲಿ ಬ್ರಿಟಿಷ್ ಪ್ರವಾಸಿ ಬುಕಾನನ್ ಈ ಜಿಲ್ಲೆಯ ಮಹತ್ವ ತಿಳಿಸುತ್ತಾನೆ. 1960ರಲ್ಲಿ ಮುಂಡಗೋಡಿನಲ್ಲಿ ಟಿಬೆಟ್ ಕಾಲೋನಿ ಪ್ರಾರಂಭವಾದ ಹಿನ್ನೆಲೆಯಲ್ಲಿ ಈ ಜಿಲ್ಲೆಗೆ ಅಂತರರಾಷ್ಟ್ರೀಯ ಖ್ಯಾತಿ ದೊರಕಿದೆ.

12ನೆಯ ಶತಮಾನದ ಕಲ್ಯಾಣ ಕ್ರಾಂತಿಯನಂತರ ಕಲ್ಯಾಣವನ್ನು ತೊರೆದ ಚೆನ್ನಬಸವಣ್ಣ ಅಪಾರ ವಚನ ಸಂಪತ್ತಿನೊಂದಿಗೆ ಈ ಜಿಲ್ಲೆಗೆ ಬಂದು ಉಳಿದುಕೊಂಡ ತಾಣಕ್ಕೆ 'ಉಳವಿ' ಎಂಬ ಹೆಸರು ಬಂದಿದೆ. ಆ ಗ್ರಾಮ ಹಳಿಯಾಳ ತಾಲ್ಲೂಕಿನಲ್ಲಿದೆ.

ಸಿರಸಿ ತಾಲ್ಲೂಕಿನ 'ಸೋಂದಾ' ಶ್ರೀ ವಾದಿರಾಜರ ಕರ್ಮಭೂಮಿಯಾಗಿದ್ದು ಮಾಧ್ವ ಸಂಪ್ರದಾಯದವರ ಯಾತ್ರಾ ಸ್ಥಳವಾಗಿದೆ.

ಸೂಪ, ಗೇರುಸೊಪ್ಪ, ಯಾಣ, ಇಡಗುಂಜಿ, ಹಾಡವಳ್ಳಿ ಮೊದಲಾದ ಹತ್ತಾರು ಸ್ಥಳಗಳು ಪ್ರವಾಸಿಗರಿಗೆ ಪ್ರಿಯವಾದ ತಾಣಗಳು. ಬನವಾಸಿಯ 'ಮಧುಕೇಶ್ವರ' ದೇವಾಲಯವಂತೂ ಶಿಲ್ಪಕಲೆಯ ದೃಷ್ಟಿಯಿಂದ ಮಹತ್ವ ಪಡೆದ ಸ್ಥಳ. ಎಲ್ಲ ಜಾತಿ ಜನಾಂಗಗಳೂ ಸೌಹಾರ್ದಯುತವಾಗಿ ಬಾಳುತ್ತಿರುವ ಜಿಲ್ಲೆಯಿದು. ಆಹಾರ ಬೆಳೆ, ವಾಣಿಜ್ಯ ಬೆಳೆ ಮತ್ತು ಮೀನುಗಾರಿಕೆ ಮೊದಲಾದ ದೃಷ್ಟಿಗಳಿಂದಲೂ 'ಉತ್ತರ ಕನ್ನಡ' ಕರ್ನಾಟಕದ ಸಂಪದ್ಭರಿತ ಜಿಲ್ಲೆಯಾಗಿದೆ.

## ಉಪ್ಪಾರ ಸಮಾಜ

ಉತ್ತರ ಕನ್ನಡ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯವಿರುವುದು ಹೆಮ್ಮೆಯ ವಿಚಾರ. ಏಕೆಂದರೆ ಕರಾವಳಿ ಪ್ರಾಂತ್ಯದಲ್ಲಿ ಉಪ್ಪಾರರು ತಮ್ಮ ವಂಶಪಾರಂಪರಿಕ ವೃತ್ತಿಗೆ ಬ್ರಿಟಿಷರಿಂದ ತೊಂದರೆ ಬಂದಾಗ ಅದನ್ನು ಪ್ರತಿಭಟಿಸಲು ಮುಂದಾದರು. ಬ್ರಿಟಿಷರ ಕೈ ಮೇಲಾದಾಗ ತಮ್ಮ ವೃತ್ತಿಯನ್ನು ತೊರೆದುದಲ್ಲದೆ ಹೆಚ್ಚಿನವರು ತಾವು ತಾವೇ ಕ್ರಿಶ್ಚಿಯನ್ ಮತಕ್ಕೆ ಪರಿವರ್ತನೆಗೊಂಡಿದ್ದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲೂ ಉತ್ತರ ಕನ್ನಡ ಜಿಲ್ಲೆಯಲ್ಲಿ ಸುಮಾರು 2,250 ಉಪ್ಪಾರ ಕುಟುಂಬಗಳಿದ್ದು ಅವುಗಳಲ್ಲಿ 12.500 ಜನರಿರುವುದು ವಿಶೇಷ ಸಂಗತಿಯೇ ಹೌದು.

ಸಿರಸಿ ತಾಲ್ಲೂಕಿನ ಸಿರಸಿ ಟೌನ್, ದಾಸನಕೊಪ್ಪ, ಗಿಡ್ಡಮಾವಿನಕಟ್ಟೆ, ಬನವಾಸಿ, ಮುಂಡಗೋಡು ಮಳಗಿ, ಮಜರೆ, ಕೋಡಂಬಿ, ಚಿಗಳ್ಳಿ, ಸಾಲಗುಂದ, ಕಲಕೇರಿ, ಉನ್ನಿಕೇರಿ, ಕಾವಳಕೊಪ್ಪ, ನ್ಯಾಸಗಿನ ಕಾಳನಕೊಪ್ಪ, ಕ್ಯಾತನಕೇರಿ, ಯಲ್ಲಾಪುರ ತಾಲ್ಲೂಕಿನ ಯಲ್ಲಾಪುರ, ಕುಮಟಾ ತಾಲ್ಲೂಕಿನ ಕುಮಟಾ, ಮಾದನಗೇರಿ, ಚಿತ್ರಗಿ, ಮೂರೂರು, ಗಾಂಧಿನಗರ, ಹೆಗಡೆ, ಮಿರ್ಜಾನ, ಹೊನ್ನಮಾವು ಹಾಗೂ ಧಾರೇಶ್ವರ, ಹೊನ್ನಾವರ ತಾಲ್ಲೂಕಿನ ಚಂದ್ರಾಣಿ, ಸರಳ, ಕವಲಕ್ಕಿ, ಸಿದ್ದಾಪುರ, ಹಳಿಯಾಳ, ಭಟ್ಕಳ, ಅಂಕೋಲಾ ಹಾಗು ಕಾರವಾರಗಳಲ್ಲಿ ಉಪ್ಪಾರ ಕುಟುಂಬಗಳಿವೆ. ಈ ಪ್ರದೇಶಗಳಲ್ಲಿನ ಉಪ್ಪಾರ ಜನಸಂಖ್ಯೆ ಕುರಿತು ವೈಜ್ಞಾನಿಕ ರೀತಿಯ ಸರ್ವೆ ಇನ್ನೂ ಆಗಬೇಕಾಗಿದೆ.

ಸಿರಸಿ ನಗರದ ದ್ಯಾಮಣ್ಣ ಲಿಂಗಪ್ಪ ಕಡಕೋಳ ಈ ಸಮುದಾಯದ ಮುಖಂಡರು, ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದ ಡಿ.ಎಸ್. ರಾಮಪ್ಪ ಅವರು ಅರವತ್ತರ ದಶಕದಲ್ಲಿ ಸಿರಸಿ ಸಿದ್ದಾಪುರ, ಮುಂಡಗೋಡುಗಳಲ್ಲಿ ಇಂಜಿನಿಯರ್ ಆಗಿದ್ದರು. ಆಗಲೇ ಉಪ್ಪಾರ ಸಂಘಟನೆಗೆ ಬೀಜ ಹಾಕಿದ್ದರು.

ಈ ಜಿಲ್ಲೆಯಲ್ಲಿ ಉಪ್ಪಾರರನ್ನು 'ಉಪ್ಪಾರ್', ಕಲ್‌ಕುಟರ್, ಆಗೇರಾ, ಖಾರ್ವಿ, ಉಪ್ಪರಿಗೆ ಕಿಟ್ಟರು, ಮೇಲುಸಕ್ಕರೆಯವರು ಎಂದು ಕರೆಯಲಾಗುತ್ತದೆ. ಬಹುಮಟ್ಟಿನ ಉಪ್ಪಾರರು ಕನ್ನಡವನ್ನೇ ಬಳಸುತ್ತಾರೆ. ಶೇ. ಎರಡರಷ್ಟು ಮಂದಿ ಕೊಂಕಣಿ ಮಾತನಾಡುತ್ತಾರೆ.

ಉಪ್ಪಾರರಿಗೆ ಒಲಿದುಬಂದ ಕಟ್ಟಡ ನಿರ್ಮಾಣ ಈ ಜಿಲ್ಲೆಯಲ್ಲಿ ವ್ಯಾಪಕವಾಗಿದೆ. 'ಮೇಸ್ತ್ರೀ' ಕೆಲಸದಲ್ಲಿ ಉಪ್ಪಾರರು ಹೆಚ್ಚಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕೂಲಿಗೆ ಹೋಗುವುದು ಉಪ್ಪಾರರ ಬಹುಮಟ್ಟಿನ ಕಾಯಕ. ರಸ್ತೆ ಕೆಲಸ ಹಾಗು ತೋಟದ ಕೆಲಸಗಳಲ್ಲೂ ಅವರಿದ್ದಾರೆ.

ಭೂರಹಿತ ಉಪ್ಪಾರರು ಗಣನೀಯ ಸಂಖ್ಯೆಯಲ್ಲಿದ್ದಾರೆ. ಶೇ. 80ಕ್ಕಿಂತ ಹೆಚ್ಚಿನ ಉಪ್ಪಾರ ಕುಟುಂಬಗಳು ಬಡತನದ ರೇಖೆಗಿಂತ ಕೆಳಗಿದ್ದಾರೆ. ಶೇ. 15ರಷ್ಟು ಜನರು ಸಾಧಾರಣ ಜೀವನ ನಡೆಸುತ್ತಿದ್ದಾರೆ. ಇನ್ನುಳಿದವರು ಪರವಾಗಿಲ್ಲ ಎನ್ನಬಹುದು.

ಸಾಕ್ಷರತೆ ಹಾಗು ಜಾಗೃತಿಯಲ್ಲಿ ಉತ್ತರ ಕನ್ನಡ ಜಿಲ್ಲೆ ರಾಜ್ಯಕ್ಕಿಂತ ಹೆಚ್ಚಿನ ಶೇಕಡಾವಾರು ಪ್ರಗತಿ ಸಾಧಿಸಿದ್ದರೂ ಉಪ್ಪಾರರ ಬದುಕು ಶೋಚನೀಯವಾಗಿದೆ. ಪುರುಷರಲ್ಲಿ ಶೇ. ಸರಾಸರಿ 25ರಷ್ಟು ಅಕ್ಷರಸ್ಥರಿದ್ದಾರೆ. ಮಹಿಳೆಯರಲ್ಲಿ ಶೇ. 10ರಷ್ಟಿದ್ದಾರೆ. ಅಂದರೆ ಉಳಿದ 80ರಷ್ಟು ಜನ ಅನಕ್ಷರಸ್ಥರಾಗಿ ಅನುಕಂಪಕ್ಕೆ ಯೋಗ್ಯವಾದ ಬದುಕು ನಡೆಸುತ್ತಿದ್ದಾರೆ.

ಉಪ್ಪಾರ ಸಮುದಾಯಕ್ಕೆ ಸೇರಿದ ಒಬ್ಬ ವೈದ್ಯ, ಒಬ್ಬ ಡಿಪ್ಲೋಮ ಇಂಜಿನಿಯರ್ ಹಾಗು 38 ಜನ ವ್ಯಾಪಾರಸ್ಥರನ್ನು ಗುರುತಿಸಲಾಗಿದೆ. ಡಾ।। ರಮೇಶ್ ಎಫ್ ಕಲ್‌ಕುಟಕರ್ ಬಸವೇಶ್ವರನಗರ ಸಿರಸಿ-ಇವರು ಈ ಸಮುದಾಯದ ಖಾಸಗಿ ವೈದ್ಯರು. ಮನೋಹರ ರುದ್ರಪ್ಪ ಮನಗೊಡ್ಲಿ ಕುಮುಟಾರಸ್ತೆ ಶಿರಸಿ-ಇವರು ಮೆಕ್ಯಾನಿಕ್. ಈ ಸಮುದಾಯಕ್ಕೆ ಸೇರಿದ ಸರ್ಕಾರಿ/ಅರೆ ಸರ್ಕಾರಿ ನೌಕರರೆಂದರೆ ಕೆಎಸ್‌ಆರ್‌ಟಿಸಿಯಲ್ಲಿರುವ ಶಿರಸಿಯ ಷಡಕ್ಷರಪ್ಪ ಬಡಿಯಪ್ಪ ಕಲ್‌ಕುಟಕರ್, ಬ್ಯಾಂಕ್ ನೌಕರರಾದ ಶಿರಸಿಯ ಗಿರಿಜಮ್ಮ ಉಪ್ಪಾರ, ಖಾಸಗಿ ನೌಕರರಾದ ಯಲ್ಲಪ್ಪ ಫಕೀರಪ್ಪ ಉಪ್ಪಾರ, ಮೀನುಗಾರಿಕೆ ಇಲಾಖೆಯಲ್ಲಿರುವ ಹನುಮಂತಪ್ಪ ಭೀಮಪ್ಪ ಉಪ್ಪಾರ, ಮುಂಡಗೋಡು ತಾಲ್ಲೂಕಿನ ಹಾಲಿನ ಡೈರಿಯಲ್ಲಿರುವ ರಾಜಾ ಪರಸಪ್ಪ ಉಪ್ಪಾರ, ವಾಚ್‌ಮನ್ ಗಂಗಾರಾಮ ಮಾರುತಿ ಕೊಳ್ಳಾಗಟ್ಟಿ, ಕುಮುಟಾ ತಾಲ್ಲೂಕಿನ ಸಿದ್ಧನಬಾವಿಯ ಚಾಲಕವೃತ್ತಿಯ ರಾಮು ಸಣ್ಣ ಉಪ್ಪಾರ, ನಾರಾಯಣ ಮಂಜುನಾಥ ಉಪ್ಪಾರ, ವಂಸತ ಶಿವಪ್ಪ ಉಪ್ಪಾರ, ನೆಲ್ಲಿಕೇರಿಯ ಗಂಗೆ, ಕೆಪಿಟಿಸಿಎಲ್‌ನ ನೌಕರರಾದ ಅಶೋಕ ಗಣಪ್ಪಯ್ಯ ಉಪ್ಪಾರ, ಲಾರಿ ಡ್ರೈವರ್ ಮಾಸ್ತಿ ಉಪ್ಪಾರ, ಜಮೀನ್ದಾರರಾದ ಸಿದ್ದಪ್ಪ ಬಂಗಾರೆಪ್ಪ ಉಪ್ಪಾರ, ಶಾಂತಾ ಗಣಪಣ್ಣ ಉಪ್ಪಾರ, ವಸಂತ ಕೃಷ್ಣಪ್ಪ ಉಪ್ಪಾರ, ರಾಮಣ್ಣ ಸಿದ್ದಣ್ಣ ಉಪ್ಪಾರ, ದೇವೇಂದ್ರ ಪುಟ್ಟಪ್ಪ ಉಪ್ಪಾರ, ದುರಗಪ್ಪ ಫಕೀರಪ್ಪ ಉಪ್ಪಾರ, ಕರಿಯಪ್ಪ ಕಲ್ಲಪ್ಪ ಉಪ್ಪಾರ, ಗೌರವ್ವ ಬಸಪ್ಪ ಮಾಳೀನವರ್, ಗುತ್ತೇಗೆದಾರರಾದ ಹನಮಂತಪ್ಪ ಮರ್ಚಪ್ಪ ಮನಗೊಡ್ಲಿ, ದೇವಿದಾಸ ಮರ್ಚಪ್ಪ ಮನಗೊಡ್ಲಿ, ಗುಡಿಗಾರಿಕೆಯ ಕಾವೇರಿ ನಾಗಪ್ಪ ಉಪ್ಪಾರ, ರುಕ್ಮಿಣಿ ಮಂಜುನಾಥ ಉಪ್ಪಾರ ಮುಂತಾದವರನ್ನು ಉಲ್ಲೇಖಿಸಬಹುದು.

ಸಣ್ಣಪುಟ್ಟ ವ್ಯಾಪಾರ ವೃತ್ತಿ ಕೈಗೊಂಡ ಉಪ್ಪಾರ ಸಮುದಾಯದವರ ವಿವರಗಳು ಹೀಗಿವೆ : ಶಿರಸಿ ತಾಲ್ಲೂಕಿನ ದಾಸನಕೊಪ್ಪದ ಬಸವಂತಪ್ಪ ಫಕೀರಪ್ಪ ಉಪ್ಪಾರ, ರಾಮ

ಪರಸಣ್ಣ ಉಪ್ಪಾರ, ಯಲ್ಲಾಪುರದ ಮಹಾದೇವ ಯಲ್ಲಪ್ಪ ಬುರ್ಲಿ, ಯಲ್ಲಪ್ಪ ಹನಮಂತಪ್ಪ ಮನಗೊಡ್ಲಿ, ದೊಡ್ಡಲಕ್ಷ್ಮಣ ಈರಪ್ಪ ಮನಗೊಡ್ಲಿ, ಕಲ್ಲೋಳಪ್ಪ ಉದ್ದಪ್ಪ ಮನಗೊಡ್ಲಿ, ಬಸವ ಗೋಪಾಲ ಇದ್ಲಿ, ಲಕ್ಷ್ಮಣ ರಾಮಪ್ಪ ಉಳ್ಳಾಗಡ್ಡೆ, ಈಶ್ವರ ರಾಮಪ್ಪ ಮನಗೊಡ್ಲಿ, ಫಕೀರವ್ವ ಯಲ್ಲಪ್ಪ ಬುರ್ಲಿ, ಯಲ್ಲಪ್ಪ ಮಹಾದೇವಪ್ಪ ಹಲಗಿ, ಕುಮುಟಾದ ಸಿದ್ದನಬಾವಿಯ ವಸಂತ ಶಿವಪ್ಪ ಉಪ್ಪಾರ, ರಾಮ ಶಿವಪ್ಪ ಉಪ್ಪಾರ, ನೆಲ್ಲಿಕೇರಿಯ ಸೋಮಿಸಣ್ಣಕೂಸ ಉಪ್ಪಾರ, ಉದ್ದಪ್ಪ ಮರ್ಚಪ್ಪ ಮನಗೊಡ್ಲಿ ಮುಂತಾದವರು.

ಉತ್ತರ ಕನ್ನಡ ಜಿಲ್ಲಾ ಉಪ್ಪಾರ (ಸಗರ) ಸಂಘದ ಪದಾಧಿಕಾರಿಗಳು ಈ ಕೆಳಗಿನಂತಿದ್ದಾರೆ: ದ್ಯಾಮಣ್ಣ ಗದಿಗೆಪ್ಪ ಕಡಕೋಳ, ಶಿರಸಿ ಅಧ್ಯಕ್ಷರು. ದೇವಪ್ಪ ರಾಮಕೃಷ್ಣ ಉಪ್ಪಾರ, ಹೆಸ್ಮಾವು, ಭಾಸ್ಕರ ನಾರಾಯಣ ಉಪ್ಪಾರ ಧಾರೇಶ್ವರ, ಉಪಾಧ್ಯಕ್ಷರು, ಮಹಾಬಲೇಶ್ವರ ಮಹಾದೇವ ಉಪ್ಪಾರ ನೆಲ್ಲಿಗೇರಿ, ಪ್ರಧಾನ ಕಾರ್ಯದರ್ಶಿ, ಮಹಾದೇವ ಸೆಣ್ರಮ್ಮಾ ಉಪ್ಪಾರ, ಶೇಖರ ಉಪ್ಪಾರ, ಬನವಾಸಿ ಕಾರ್ಯದರ್ಶಿಗಳು, ಎಸ್. ಶಂಕರ ಧಾರೇಶ್ವರ, ಲೆಕ್ಕಪರಿಶೋಧಕ, ನಾರಾಯಣ ರಾಮ ಉಪ್ಪಾರ ಶಿದ್ದನಭಾವಿ, ಕೋಶಾಧ್ಯಕ್ಷ, ಪರಮೇಶ್ವರ ಹೆಚ್. ಚಂದ್ರಾಣಿ ಕಾನೂನು ಸಲಹೆಗಾರ, ಅಶೋಕ ನಾಗಪ್ಪ ಉಪ್ಪಾರ ಅಗ್ರಹಾರ, ಸುಬ್ರಾಯ ಮಾಸ್ತಿ ಉಪ್ಪಾರ ಚಂದ್ರಾಣಿ, ಭರಮ ದೇವಪ್ಪ ಉಪ್ಪಾರ ನೆಲ್ಲಿಕೇರಿ, ಕಾಶೀನಾಥ ಹನಮಂತ ಉಪ್ಪಾರ ನೆಲ್ಲಿಕೇರಿ, ಭೈರೇಶ್ವರ ಕನ್ನಾ ಹೊನ್ನಾವು, ಗೀತಾ ವಸಂತ ಉಪ್ಪಾರ, ಭಾರತಿ ಭಾಸ್ಕರ ಉಪ್ಪಾರ, ಕಾರ್ಯಕಾರಿ ಸಮಿತಿಯ ಸದಸ್ಯರು.

ಕುಮಟಾ-ಹೊನ್ನಾವರ ತಾಲ್ಲೂಕು ಸಂಘದ ಪದಾಧಿಕಾರಿಗಳು: ದೇವಪ್ಪ ರಾಮಕೃಷ್ಣ ಉಪ್ಪಾರ, ಅಧ್ಯಕ್ಷರು, ಭರಮ ದೇವಪ್ಪ ಉಪ್ಪಾರ, ಉಪಾಧ್ಯಕ್ಷರು, ಪ್ರಭಾಕರ ಬಾಬು ಉಪ್ಪಾರ, ಕಾರ್ಯದರ್ಶಿ, ತಿಮ್ಮಣ್ಣ ಸಣ್ಣೇಶ ಉಪ್ಪಾರ, ಸಹಕಾರ್ಯದರ್ಶಿ, ವಿಷ್ಣು ಮಾಸ್ತಿ ಉಪ್ಪಾರ ಖಜಾಂಚಿ, ಎಸ್. ಶಂಕರ, ಲೆಕ್ಕಪರಿಶೋಧಕರು, ಪರಮೇಶ್ವರ ಹೆಚ್, ಕಾನೂನು ಸಲಹೆಗಾರರು.

ಉತ್ತರ ಕನ್ನಡ ಜಿಲ್ಲೆಯಲ್ಲಿ ಉಪ್ಪಾರ ಸಮಾಜಕ್ಕೆ ಸಂಬಂಧಪಟ್ಟ ಸಣ್ಣ ಖಾಸಗಿ ಆಸ್ಪತ್ರೆಯಿದೆ. ಸಣ್ಣ ಪ್ರಮಾಣದ ಕೈಗಾರಿಕೋದ್ಯಮಿಗಳಾಗಿದ್ದಾರೆ.

ಸಾಹಿತಿ, ಪತ್ರಕರ್ತ ಹಾಗೂ ಇತರೆ ಸಾಂಸ್ಕೃತಿಕ ಕ್ಷೇತ್ರದ ಪ್ರತಿಭೆಯನ್ನು ಈ ಸಮಾಜ ಹೊಂದಿಲ್ಲ. ಡಿ.ಜಿ. ಕಡಕೋಳ ಶಿರಸಿ, ಇವರು ಶಿರಸಿ ಬ್ಲಾಕ್ ಕಾಂಗ್ರೆಸ್ ಅಧ್ಯಕ್ಷರು. ರಾಜಕೀಯ, ಸಮಾಜಸೇವೆ ಹಾಗು ಸಂಘಟನೆಗಳಲ್ಲಿ ಇವರಿಗೆ ಆಸಕ್ತಿಯಿದೆ. ಈ ಸಮುದಾಯಕ್ಕೆ ಸೇರಿದ ಒಬ್ಬರು ಗ್ರಾಮಪಂಚಾಯತ್ ಸದಸ್ಯರು ಇದ್ದಾರೆ.

ಉಪ್ಪಾರ ಸಮಾಜದಲ್ಲಿ ಅಗೇರ, ಖಾರ್ವಿ ಎಂಬ ಒಳಪಂಗಡಗಳಿವೆ. ಅವರು ಕೂಡ ಹಿಂದೆ ಉಪ್ಪು ತಯಾರಿಸುತ್ತಿದ್ದರು. ಆದರೆ ಇಂದು ಉಪಜಾತಿ ಪ್ರಜ್ಞೆಯಿಂದಾಗಿ ಅವರನ್ನು ದೂರ ಇಡಲಾಗಿದೆ. ರಾಜ್ಯಮಟ್ಟದ ನಾಯಕರು ಹಾಗು ಈ ಸಮಾಜದ ಜಗದ್ಗುರುಗಳು

ಈ ಬಗ್ಗೆ ಚಿಂತಿಸಿ ಕ್ರಮ ತೆಗೆದುಕೊಂಡರೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಉಪ್ಪಾರ ಸಮಾಜದ ಸಂಘಟನೆಗೆ ಹೊಸ ಆಯಾಮ ದೊರೆಯಬಹುದು.

ಕುಮುಟಾದಲ್ಲಿ ವಸತಿನಿಲಯ ಹಾಗು ಸಮುದಾಯಭವನ ನಿರ್ಮಿಸುವ ಯೋಜನೆ ಮಾಡಬೇಕು. ಕೊಡುಗೈ ದಾನಿಗಳು, ಶಾಸಕರಾದ ಶ್ರೀ ಮೋಹನಶೆಟ್ಟಿ ಅವರು ಈ ಬಗ್ಗೆ ಸಹಾಯ ಮಾಡುವುದರಲ್ಲಿ ಸಂಶಯವಿಲ್ಲ. ಯಾರಾದರೂ ಈ ಕೆಲಸಕ್ಕೆ ನಾಯಕತ್ವ ವಹಿಸಬೇಕು. ಉತ್ತರ ಕನ್ನಡ ಜಿಲ್ಲೆಯಲ್ಲಿ ಇದೀಗ ಉಪ್ಪಾರರನ್ನು ಗುರುತಿಸುವ ಕೆಲಸ ನಡೆದಿದೆ. ಅದು ಮುಂದುವರಿದು ಸಂಘಟನೆಯತ್ತ ಗಮನ ಕೊಡಬೇಕು.

ಶಿವಮೊಗ್ಗ ಜಿಲ್ಲೆ ಸಾಗರದ ಯು.ಎಲ್. ಮಂಜುನಾಥ್ ಅವರು 'ಸಾಗರದ ಮಾರಿಕಾಂಬಾದೇವಿ ಮತ್ತು ಉಪ್ಪಾರರು' ಎಂಬ ಗ್ರಂಥ ಬರೆದಿದ್ದಾರೆ. ಮಾರಿಕಾಂಬಾದೇವಿ ಹಾಗು ಉಪ್ಪಾರರಿಗೆ ಇರುವ ಅನ್ಯೋನ್ಯ ಸಂಬಂಧ ಕುರಿತಂತೆ ಒಂದು ಪ್ರಸಂಗವನ್ನು ಉಲ್ಲೇಖಿಸುತ್ತಾರೆ : "ಜೋಗದ ಮಹಾತ್ಮಾಗಾಂಧಿ ವಿದ್ಯುದ್‌ಗಾರದ ಶಂಕುಸ್ಥಾಪನೆಯ ಕಾರ್ಯಕ್ರಮಕ್ಕಾಗಿ ಆಗಮಿಸಲಿದ್ದ ಮೈಸೂರು ಮಹಾರಾಜರು ಸಾಗರದ ಮೂಲಕ ಹಾದು ಹೋಗಲಿದ್ದರು. ಆ ಸಂದರ್ಭದಲ್ಲಿ ಅವರು ಬರುವ ರಸ್ತೆಗಳು, ಸ್ಥಳಗಳು ಮುಂತಾದವುಗಳನ್ನು ಪೂರ್ವಭಾವಿಯಾಗಿ ಪರಿಶೀಲಿಸಲು ಬಂದಿದ್ದ ಸಂಸ್ಥಾನದ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರು ಈಗಿನ ಗದ್ದುಗೆಯನ್ನು ಬೇರೆಡೆಗೆ ಸ್ಥಳಾಂತರಿಸುವಂತೆ ಸೂಚಿಸಿದರಂತೆ. ಇದರಿಂದಾಗಿ ಊರಿನಲ್ಲಿ ಸಾಂಕ್ರಾಮಿಕ ರೋಗಗಳು ಹರಡಿತಂತೆ ! ಆಗ ಉಪ್ಪಾರ ಕೇರಿಯಲ್ಲಿನ ಜನ ಹಾನಂಬಿ ರಸ್ತೆಗೆ ಸ್ಥಳಾಂತರಗೊಂಡರಂತೆ ! ಶ್ರೀ ಮಾರಿಕಾಂಬೆ ಮೈಸೂರು ಅರಸರಿಗೆ ಕನಸಿನಲ್ಲಿ ಕಾಣಿಸಿಕೊಂಡು ಗದ್ದುಗೆಯನ್ನು ಸ್ಥಳಾಂತರಿಸದಂತೆ ಸೂಚಿಸಿದಳಂತೆ. ಸಾಗರದ ಶ್ರೀ ಮಾರಿಕಾಂಬಾದೇವಿ ಜಾನಪದ ಶೈಲಿಯ ಪೂಜೆಯಲ್ಲಿ ಉಪ್ಪಾರ ಜನಾಂಗದ ವಿಶಿಷ್ಟ ಪಾತ್ರವಿದೆ. ಹಿಂದಿನಿಂದಲೂ ದೈನಂದಿನ ಪೂಜಾಕೈಂಕರ್ಯವನ್ನು ವಿಶೇಷವಾದ ಧಾರ್ಮಿಕ ವಿಧಿಗಳನ್ನು ಉಪ್ಪಾರ ಸಮಾಜವು ನಡೆಸಿಕೊಂಡು ಬಂದಿರುವುದು ಸರ್ವವಿದಿತ."

ಅಂದರೆ ಶ್ರೀ ಮಾರಿಕಾಂಬದೇವಿ ಹಾಗು ಉಪ್ಪಾರ ಸಮಾಜಕ್ಕೂ ಅವಿನಾಭಾವ ಸಂಬಂಧವಿದೆ. ಇದರ ಬಗ್ಗೆ ವ್ಯಾಪಕವಾದ ಅಧ್ಯಯನವನ್ನು ಸಂಶೋಧಕರು ಕೈಗೊಳ್ಳಬೇಕಾಗಿದೆ.

ಉತ್ತರ ಕನ್ನಡ ಜಿಲ್ಲೆಯು ಜಾನಪದ ಲೋಕದ ಗಣಿ. ಉಪ್ಪಾರ ಸಮಾಜದಲ್ಲೂ ಅನೇಕ ವೈಶಿಷ್ಟ್ಯಗಳಿರುವುದರಿಂದ ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ, ಜಾನಪದ ಅಧ್ಯಯನದ ಹಿನ್ನೆಲೆಯಲ್ಲಿ ಇವುಗಳನ್ನು ಪರಿಶೀಲಿಸಬೇಕು. ಜಿಲ್ಲೆಯಲ್ಲಿ ಇದೀಗ ಉಪ್ಪಾರ ಸಮಾಜ ತನ್ನ ಅಸ್ತಿತ್ವಸ್ನು ಸಾಬೀತುಪಡಿಸುತ್ತಿದೆ. ಮುಂದಿನ ದಿನಗಳಲ್ಲಿ ಇದನ್ನು ಕೈಗೆತ್ತಿಕೊಳ್ಳುತ್ತಾರೆಂದು ಆಶಿಸಬಹುದು.

*ಮಾಹಿತಿಸಂಗ್ರಹ : ಡಿ.ಜಿ. ಕಡಕೋಳ, ಶಿರಸಿ*

*




# * ಕೊಡಗು ಜಿಲ್ಲೆ

## ಐತಿಹಾಸಿಕ ಹಿನ್ನೋಟ

**ಕೊ**ಡಗು ಕರ್ನಾಟಕದ ಕಾಶ್ಮೀರವೆಂದೇ ಖ್ಯಾತವಾಗಿದೆ. ಕೊಡಗು ರಾಜ್ಯದ ನೈರುತ್ಯ ದಿಕ್ಕಿಗಿದೆ. ರಾಜ್ಯದ ರಾಜಧಾನಿ ಬೆಂಗಳೂರಿನಿಂದ ಕೊಡಗಿನ ಕೇಂದ್ರಸ್ಥಳ ಮಡಿಕೇರಿಗೆ 253 ಕಿ.ಮೀ. ಜಿಲ್ಲೆಯು ಉತ್ತರ ಅಕ್ಷಾಂಶ $11^0$.56' ದಿಂದ $12^0$.50' ಯವರೆಗೆ ಮತ್ತು ಪೂರ್ವ ರೇಖಾಂಶ $75^0$.22' ದಿಂದ $76^0$.12' ಯವರಗೆ ಇರುವ ಪ್ರದೇಶದಲ್ಲಿ ಹರಡಿದೆ. ಇದರ ಭೌಗೋಳಿಕ ವಿಸ್ತೀರ್ಣ 4104 ಚ.ಕಿ.ಮೀ. ಮಡಿಕೇರಿ, ಸೋಮವಾರಪೇಟೆ ಹಾಗು ವಿರಾಜಪೇಟೆ ಎಂಬ ಮೂರು ತಾಲ್ಲೂಕುಗಳನ್ನು ಈ ಜಿಲ್ಲೆ ಒಳಗೊಂಡಿದೆ. 11 ಹೋಬಳಿಗಳು, 304 ಗ್ರಾಮಗಳು ಈ ಜಿಲ್ಲೆಯಲ್ಲಿವೆ.

ತಲಕಾವೇರಿಯ ಕಾವೇರಿನದಿಯ ಉಗಮ ಸ್ಥಳ. ಕನ್ನಿಕೆ, ಕಕ್ಕಟೆ, ಕಾಡನೂರು ಹೊಳೆ, ಮುತ್ತಾರುಮುಡಿ, ಚಿಕ್ಕಹೊಳೆ, ಲಕ್ಷ್ಮಣತೀರ್ಥ ಹಾಗು ಹಾರಂಗಿ ಕಾವೇರಿ ನದಿಯ ಉಪನದಿಗಳು. ಜಿಲ್ಲೆಯ ಸರಾಸರಿ ಮಳೆ 2725 ಮಿ.ಮೀ. ಭಾಗಮಂಡಲದಲ್ಲಿ ವಾರ್ಷಿಕ ಮಳೆ 6030 ಮಿ.ಮೀ.

ಪಶ್ಚಿಮ ಘಟ್ಟಗಳ ಪೂರ್ವ ಮತ್ತು ಪಶ್ಚಿಮದ ಇಳಿಜಾರು ಒಳಗೊಂಡಿರುವ ಕೊಡಗು ಅರಣ್ಯ ಸಂಪತ್ತಿನಿಂದ ಸಂಪದ್ಭರಿತವಾದ ಜಿಲ್ಲೆ. 3,30,240 ಹೆಕ್ಟೇರ್ ಪ್ರದೇಶ. ಈ ಜಿಲ್ಲೆಯಲ್ಲಿ ರಕ್ಷಿತ ಅರಣ್ಯವಿದೆ.

ಕೃಷಿ ಈ ಜನರ ಮುಖ್ಯ ಕಸುಬು. ಭತ್ತ ಇಲ್ಲಿನ ಪ್ರಮುಖ ಆಹಾರ ಬೆಳೆ. ಕಾಫಿ, ಕಿತ್ತಳೆ, ಏಲಕ್ಕಿ, ಮೆಣಸು, ಅಡಕೆ ಹಾಗು ಸ್ವಲ್ಪ ಭಾಗ ಟೀ ಕೂಡ ಇಲ್ಲಿನ ಪ್ರಮುಖ ವಾಣಿಜ್ಯ ಬೆಳೆಗಳು.

ಕೊಡಗು ಪ್ರವಾಸೋದ್ಯಮದ ದೃಷ್ಟಿಯಿಂದ ತುಂಬ ಪ್ರಮುಖವಾದ ಸ್ಥಳ. ಮಡಿಕೇರಿ, ತಲಕಾವೇರಿ, ಭಾಗಮಂಡಲ, ರಾಮಸ್ವಾಮಿ ಕಣಿವೆ, ಕೂಡಿಗೆ, ನಾಲ್ಕುನಾಡು ಅರಮನೆ, ಇಗ್ಗುತಪ್ಪದೇವಸ್ಥಾನ ಹಾಗೂ ಶಿಖರ, ಚೆಟ್ಟಳ್ಳಿ, ರಾಜಾಸೀಟ್, ಅಬ್ಬಿಫಾಲ್ಸ್, ನಾಗರಹೊಳೆ, ಇರ್ಪು, ಈ ಜಿಲ್ಲೆಯ ಪ್ರಮುಖ ಪ್ರೇಕ್ಷಣೀಯ ಸ್ಥಳಗಳು.

ಕೊಡಗು ಕೊಡವರ ಕೇಂದ್ರಸ್ಥಾನ. 'ಕಾವೇರಿ ಮಹಾತ್ಮೆ' ಎಂಬ ಪೌರಾಣಿಕ ಗ್ರಂಥದಲ್ಲಿ ಕೊಡಗಿಗೆ ಸಂಬಂಧಪಟ್ಟ ವಿವರಗಳಿವೆ. ಕದಂಬ ವಂಶದ ಚಂದ್ರವರ್ಮ ಕೊಡಗಿನ ಮೂಲಪುರುಷನೆಂದು ಹೇಳಲಾಗಿದೆ. ಕತ್ತಿ ಹಾಗು ಕೋವಿ ಅವರಿಗೆ ಪ್ರಿಯವಾದ ಆಯುಧಗಳು. ಅಂದರೆ ಕೊಡವರು ಹುಟ್ಟಿನಿಂದಲೇ ಶೂರರು ಹಾಗು ಸಾಹಸಿಗಳು. ಕೊಡವರ ಹುತ್ತರಿ ಕುಣಿತ, ಬೊಳುಕಾಟ, ಕೋಲಾಟ, ಪರಿಯಕಳಿ ಎಂಬ ನೃತ್ಯಗಳು ಸಾಕಷ್ಟು ಪ್ರಸಿದ್ಧವಾಗಿವೆ. ಪರಿಯಕಳಿ ಎಂಬುದು ಯುದ್ಧನೃತ್ಯ. ಕೊಡವರ ವೇಷಭೂಷಣಗಳು ತುಂಬ ಆಕರ್ಷಣೀಯವಾದುವು. ಕೊಡವರಿಗೆ ಅವರದೇ ಆದ ಭಾಷೆಯಿದೆ. ಆದರೆ ಅದಕ್ಕೆ ಲಿಪಿಯಿಲ್ಲ. ಕನ್ನಡ, ತಮಿಳು, ಮಲೆಯಾಳಂ ಭಾಷೆಗಳ ಶಬ್ದಗಳು ಕೊಡವ ಭಾಷೆಯಲ್ಲಿವೆ. ಅಪ್ಪನೆರವಂಡ ಅಪ್ಪಚ್ಚ ಕವಿ ಹಾಗು ನಡಿಕೇರಿಯಂಡ ಚಿಣ್ಣಪ್ಪ ಕೊಡವ ಭಾಷೆಯ ಪ್ರಮುಖ ಕೃತಿಕಾರರು. ಕೊಡವ ಭಾಷಾ ಅಕಾಡೆಮಿ ಕೂಡ ಅಸ್ತಿತ್ವದಲ್ಲಿದೆ.

ಕೊಡಗಿನ ಇತಿಹಾಸ ಕ್ರಿ.ಶ. 2ನೆಯ ಶತಮಾನದಿಂದಲೇ ಪ್ರಾರಂಭವಾಗುತ್ತದೆ. ಕ್ರಿ.ಶ. 4ನೆಯ ಶತಮಾನದನಂತರ ಗಂಗ, ಕದಂಬ ಹಾಗು ಚೋಳರು ಈ ಪ್ರದೇಶವನ್ನು ಆಳಿದರು. 11 ಮತ್ತು 12ನೆಯ ಶತಮಾನದಲ್ಲಿ ಕೊಂಗಾಳ್ವರು ಹಾಗು ಚೆಂಗಾಳ್ವರು ಇಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಆನಂತರ ಹೊಯ್ಸಳ, ವಿಜಯನಗರ ರಾಜ್ಯದ ಆಳ್ವಿಕೆಗೆ ಒಳಪಟ್ಟಿತ್ತು. ಹಾಲೇರಿ ವಂಶದ ಅರಸರು ಇಲ್ಲಿ ಆಳ್ವಿಕೆ ನಡೆಸಿದ್ದರು. ಈ ವಂಶದ ಕೊನೆಯ ಅರಸ ಚಿಕವೀರ ರಾಜೇಂದ್ರನನ್ನು ಕ್ರಿ.ಶ. 1834ರಲ್ಲಿ ಸೋಲಿಸಿ ಈ ಭಾಗವನ್ನು ವಶಪಡಿಸಿಕೊಂಡರು. 1947ರಲ್ಲಿ ಭಾರತ ಸ್ವತಂತ್ರ ವಾದಾಗ ಕೊಡಗು ಭಾರತ ಸರ್ಕಾರದ ಗೃಹ ಇಲಾಖೆಯ ಅಧೀನಕ್ಕೆ ಒಳಪಟ್ಟಿತ್ತು. 1951ರಲ್ಲಿ ಕೊಡಗು 'ಸಿ' ರಾಜ್ಯವೆಂದು ಪರಿಗಣಿತವಾಯಿತು. 1956ರಲ್ಲಿ ಕರ್ನಾಟಕದ ಏಕೀಕರಣವಾದನಂತರ ಇದು ಕರ್ನಾಟಕಕ್ಕೆ ಸೇರ್ಪಡೆಯಾಗಿ ರಾಜ್ಯದ ಒಂದು ಜಿಲ್ಲೆಯಾಯಿತು. ಸಾಹಿತ್ಯ ಸಂಸ್ಕೃತಿ ಹಾಗು ಕ್ರೀಡೆಗೆ ಕೊಡಗು ತುಂಬಾ ಹೆಸರುವಾಸಿಯಾದ ಸ್ಥಳ. ಕೊಡಗಿನ ಗೌರಮ್ಮ ಕನ್ನಡದ ಪ್ರಸಿದ್ಧ ಕತೆಗಾರ್ತಿ. ಭಾರತೀಸುತ ಕನ್ನಡದ ಖ್ಯಾತ ಕಾದಂಬರಿಗಾರರು. ಡಾ. ಕೆ. ಕುಶಾಲಪ್ಪಗೌಡ ರಾಷ್ಟ್ರದ ಪ್ರಸಿದ್ಧ ಭಾಷಾತಜ್ಞರು.

ಜನರಲ್ ಕಾರಿಯಪ್ಪ ಹಾಗೂ ಜನರಲ್ ತಿಮ್ಮಯ್ಯ ಅವರು ಕೊಡಗಿನ ಕೀರ್ತಿಯನ್ನು ಅಂತರರಾಷ್ಟ್ರೀಯ ಮಟ್ಟಕ್ಕೇರಿಸಿದ್ದಾರೆ. ಪ್ರಸಿದ್ಧ ಹಾಕಿ ಪಟುಗಳಾದ ಬಿ.ಸಿ. ಗೋವಿಂದ, ಎಂ.ಪಿ. ಗಣೇಶ್, ಸೋಮಯ್ಯ, ಅಂತರರಾಷ್ಟ್ರೀಯ ಅಥ್ಲೆಟಿಕ್ಸ್ ಪಟುಗಳಾದ ರೀತಾ ಅಬ್ರಾಹಂ, ಅಶ್ವಿನಿ ನಾಚಪ್ಪ ಮುಂತಾದವರು ಕೊಡಗಿನ ಕೀರ್ತಿಯನ್ನು ಬೆಳಗಿದ್ದಾರೆ.

ಕೊಡಗು ಚಿಕ್ಕ ಜಿಲ್ಲೆಯಾದರೂ ಉತ್ತಮ ರಾಜಕೀಯ ನಾಯಕರನ್ನು ರಾಷ್ಟ್ರ ಹಾಗು ರಾಜ್ಯಕ್ಕೆ ಕೊಟ್ಟಿದೆ. ಅವರಲ್ಲಿ ಪ್ರಮುಖರೆಂದರೆ : ಸಿ.ಎಂ. ಪೂಣಚ್ಚ, ಎ.ಪಿ. ಅಪ್ಪಣ್ಣ, ಲೋಕಯ್ಯ ನಾಯ್ಕ್, ಜೀವಿಜಯ, ಆರ್. ಗುಂಡೂರಾವ್, ಕೆ.ಬಿ. ಮಲ್ಲಪ್ಪ, ಎ.ಎಸ್. ಸೋಮಯ್ಯ, ಸಿ.ಎಂ. ಬೆಳ್ಳಿಯಪ್ಪ, ಎ.ಕೆ. ಸುಬ್ಬಯ್ಯ, ಜಿ.ಕೆ. ಸುಬ್ಬಯ್ಯ, ಎಂ.ಸಿ. ನಾಣಯ್ಯ, ಎಂ.ಎಂ. ನಾಣಯ್ಯ, ಶ್ರೀಮತಿ ಸುಮಾವಸಂತ ಮುಂತಾದವರು. ಸಿ.ಎಂ. ಪೂಣಚ್ಚ ಕೇಂದ್ರ ಸರಕಾರದಲ್ಲಿ ಸಚಿವರಾಗಿಯೂ ಹಾಗು ರಾಜ್ಯಪಾಲರಾಗಿಯೂ ಸೇವೆ ಸಲ್ಲಿಸಿದರೆ, ಆರ್. ಗುಂಡೂರಾವ್ ರಾಜ್ಯದ ಮುಖ್ಯಮಂತ್ರಿಯಾಗಿದ್ದರು. ಎ.ಪಿ. ಅಪ್ಪಣ್ಣ, ಎಂ.ಎಂ. ನಾಣಯ್ಯ, ಎಂ.ಸಿ. ನಾಣಯ್ಯ, ಸುಮಾವಸಂತ ಅವರುಗಳು ರಾಜ್ಯದಲ್ಲಿ ಸಚಿವರಾಗಿ ಸೇವೆ ಸಲ್ಲಿಸಿದ್ದಾರೆ. ಎ.ಕೆ. ಸುಬ್ಬಯ್ಯ ವಿಧಾನಪರಿಷತ್ತಿನಲ್ಲಿ ವಿರೋಧ ಪಕ್ಷದ ನಾಯಕರಾಗಿದ್ದರು.

2001ರ ಜನಗಣತಿಯ ಪ್ರಕಾರ ಕೊಡಗಿನಲ್ಲಿ 5,45,322 ಜನರಿದ್ದಾರೆ. ಅದರಲ್ಲಿ ಪುರುಷರು 273210, ಸ್ತ್ರೀಯರು 272112. ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 78.17. ಅದರಲ್ಲಿ ಪುರುಷರು ಶೇ. 83.80, ಸ್ತ್ರೀಯರು ಶೇ. 72.53.

### ಉಪ್ಪಾರ ಸಮಾಜ

ಕೊಡಗಿನಂತಹ ಸಣ್ಣ ಜಿಲ್ಲೆಯಲ್ಲಿಯೂ ಸಹ ಉಪ್ಪಾರ ಸಮುದಾಯವಿರುವುದನ್ನು ತುಂಬ ಆಸಕ್ತಿಯಿಂದ ಗಮನಿಸಬೇಕು. ಉಪ್ಪಾರರ ಜನಸಂಖ್ಯೆ 6500 ಎಂದು ಅಂದಾಜು ಮಾಡಲಾಗಿದೆ. ಸೋಮವಾರಪೇಟೆ ತಾಲ್ಲೂಕಿನ ಟೌನ್ ಕುಶಾಲನಗರ ಹೋಬಳಿ ಬೈತೇನಹಳ್ಳಿ, ಮಡಿಕೇರಿ ಟೌನ್, ಚಟ್ಟಳ್ಳಿ, ವಿರಾಜಪೇಟೆ ತಾಲ್ಲೂಕು ಬೀರುಗಾ ಮತ್ತು ವಿರಾಜಪೇಟೆ ಟೌನ್ ಮುಂತಾದ ಗ್ರಾಮಗಳಲ್ಲಿ ಉಪ್ಪಾರ ಕುಟುಂಬಗಳನ್ನು ಕಾಣಬಹುದು. ಉಪ್ಪಾರ ಸಮುದಾಯವನ್ನು ಈ ಜಿಲ್ಲೆಯಲ್ಲಿ ಉಪ್ಪಾರ, ಮೇಲುಸಕ್ಕರೆ, ಉಪ್ಪಲಿಗ ಹಾಗು ಉಪ್ಪಾರಸೆಟ್ಟಿ ಎಂಬ ಉಪನಾಮಗಳಿಂದ ಕರೆಯುತ್ತಾರೆ. ಉಪ್ಪಾರ ಸಮುದಾಯದಲ್ಲಿ ಸಾಮಾನ್ಯವಾಗಿ ಗಂಡಸರು ವಿದ್ಯೆ ಕಲಿತಿದ್ದು ಮಹಿಳೆಯರಿಗೆ ಅಂತಹ ಅವಕಾಶ ಸಿಕ್ಕಿಲ್ಲ. ಶೇ. 51ರಷ್ಟು ಉಪ್ಪಾರ ಬಂಧುಗಳಲ್ಲಿ ಸಾಕ್ಷರತೆ ಪ್ರಮಾಣವನ್ನು ಗುರುತಿಸಬಹುದು. ಡಿಪ್ಲೋಮಾ ಹಾಗು ಇಂಜಿನಿಯರ್ ಪದವಿಯನ್ನು ಪಡೆದ ಇಬ್ಬರು ಯುವಕರನ್ನು ಇಲ್ಲಿ ಗುರುತಿಸಬಹುದು. ವಿವಿಧ ವ್ಯಾಪಾರೋದ್ಯಮಗಳನ್ನು ಕೈಗೊಂಡ ಎಂಟು ಉಪ್ಪಾರ ಕುಟುಂಬಗಳನ್ನು ಗುರುತಿಸಲಾಗಿದ್ದು ಅವರ ಆರ್ಥಿಕಮಟ್ಟ ಚೆನ್ನಾಗಿದ್ದು ಸಮಾಜ ಸೇವೆ ಮಾಡುತ್ತಿದ್ದಾರೆ. ಉಪ್ಪಾರ ಸಮುದಾಯದವರು ಸಾಮಾನ್ಯವಾಗಿ ಕನ್ನಡ ಭಾಷೆಯನ್ನು ತಮ್ಮ ವ್ಯವಹಾರಕ್ಕಾಗಿ ಬಳಸುತ್ತಾರೆ.

ಜಿಲ್ಲೆಯಲ್ಲಿ ಉಪ್ಪಾರ ಸಮುದಾಯಕ್ಕೆ ಸೇರಿದ ರಾಜಕಾರಣಿಗಳ ಪಟ್ಟಿ ಏನೂ ದೊರೆಯುವುದಿಲ್ಲ. ಜನಸಂಖ್ಯೆ ಹಾಗು ಆರ್ಥಿಕ ಸಾಮರ್ಥ್ಯದಿಂದ ತುಂಬ ಹಿಂದಿರುವ ಕಾರಣ ಯಾವುದೇ ರಾಜಕೀಯ ಸ್ಥಾನಮಾನಗಳು ಇವರಿಗೆ ದೊರೆತಿಲ್ಲ. ಆದರೂ ಒಂದಿಬ್ಬರು ತಮ್ಮ ಸ್ವಸಾಮರ್ಥ್ಯದಿಂದ ಇಂತಹ ಸ್ಥಾನಮಾನಗಳನ್ನು ಪಡೆದಿದ್ದಾರೆ. ವಿರಾಜಪೇಟೆ ತಾಲ್ಲೂಕಿನ ಶ್ರೀಮಂಗಲ ಗ್ರಾಮಪಂಚಾಯಿತಿಯ ಸದಸ್ಯರು ಶ್ರೀಮತಿ ದಾಕ್ಷಾಯಿಣಿ ರಘುಪತಿ ಅವರೇ ಈ ಗ್ರಾಮ ಪಂಚಾಯಿತಿಯ ಅಧ್ಯಕ್ಷರೂ ಆಗಿದ್ದಾರೆ. ಶ್ರೀ ಯು.ಕೆ. ಸೀತಾರಾಂ ಅವರು ಜಾತ್ಯತೀತ ಜನತಾದಳ ವಿರಾಜಪೇಟೆ ತಾಲ್ಲೂಕಿನ ಹಿಂದುಳಿದ ವರ್ಗದ ಅಧ್ಯಕ್ಷರಾಗಿದ್ದಾರೆ. ಇವರು ಜಿಲ್ಲೆಯ ಶ್ರೀಮಂಗಲ ಹೋಬಳಿಯ ಹಿಂದುಳಿದ ವರ್ಗಗಳ ಅಧ್ಯಕ್ಷರೂ ಹೌದು.

ಉಪ್ಪಾರ ಸಮುದಾಯ ಆರ್ಥಿಕ ಹಾಗು ಸಾಮಾಜಿಕ ಕ್ಷೇತ್ರಗಳಲ್ಲಿ ಜಿಲ್ಲೆಯಲ್ಲಿ ಹೇಳಿಕೊಳ್ಳುವಂತಹ ಬಲವನ್ನೇನೂ ಪಡೆದಿಲ್ಲ. ಹೀಗಾಗಿ ಇಲ್ಲಿ ಸಾಹಿತಿ, ಪತ್ರಕರ್ತರು ಹಾಗು ಇತರೆ ಪ್ರಭಾವಶಾಲಿ ವ್ಯಕ್ತಿಗಳನ್ನು ಈ ಸಮುದಾಯದಿಂದ ಕಾಣಲು ಸಾಧ್ಯವಿಲ್ಲ. ಜಿಲ್ಲಾ ಉಪ್ಪಾರ ಸಂಘ ಕೂಡ ಇಲ್ಲಿ ಅಸ್ತಿತ್ವಕ್ಕೆ ಬಂದಿಲ್ಲ. ರಾಜ್ಯಮಟ್ಟದ ನಾಯಕರುಗಳು ಇಲ್ಲಿನ ಉಪ್ಪಾರ ಸಮುದಾಯಕ್ಕೆ ಜಾಗೃತಿಯನ್ನು ಕೊಟ್ಟು, ಮೊದಲು ಉಪ್ಪಾರ ಸಂಘ ಸ್ಥಾಪಿಸಬೇಕು. ಕುಟುಂಬವಾರು ಸಮೀಕ್ಷೆ ನಡೆಸಿ ಅವರ ಬೇಕುಬೇಡಗಳನ್ನು ಪಟ್ಟಿಮಾಡಿಕೊಳ್ಳಬೇಕು. ಸರ್ಕಾರದಿಂದ ಸಿಗುವ ಎಷ್ಟೋ ಸವಲತ್ತುಗಳು ಬಡ ಉಪ್ಪಾರ ಸಮುದಾಯಕ್ಕೆ ದೊರೆಯದಿರುವುದಕ್ಕೆ ಈ ಜಿಲ್ಲೆಯ ಸಂಘಟನೆಯ ಕೊರತೆಯೇ ಕಾರಣವಾಗಿದೆ. ಉಪ್ಪಾರ ಸಮುದಾಯದ ಮಕ್ಕಳಿಗೆ ಉನ್ನತ ಶಿಕ್ಷಣದ ಬಗ್ಗೆ ಅಂತಹ ಆಸಕ್ತಿ ಇದ್ದಂತೆ ಕಾಣುತ್ತಿಲ್ಲ. ಇದಕ್ಕೆ ಕಾರಣ ದಿನನಿತ್ಯ ಜೀವನಕ್ಕಾಗಿ ಮಾಡಬೇಕಾದ ಹೋರಾಟ ಮತ್ತು ಅಜ್ಞಾನ. ಇವುಗಳಿಗೆ ಪರಿಹಾರವನ್ನು ರಾಜ್ಯ ಉಪ್ಪಾರ ಸಂಘ ಹಾಗು ಸರ್ಕಾರ ಕಂಡುಹಿಡಿಯುತ್ತದೆಂಬ ದೂರದ ಆಸೆ ನಮ್ಮದು.

**ಮಾಹಿತಿಸಂಗ್ರಹ : *ಯು.ಕೆ. ಸೀತಾರಾಂ***

*






# ಮೈಸೂರು ಜಿಲ್ಲೆ

## ಐತಿಹಾಸಿಕ ಹಿನ್ನೋಟ

**ಕ**ರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಮೈಸೂರು ಜಿಲ್ಲೆಗೆ ವಿಶೇಷ ಮಹತ್ವವಿದೆ. 'ಮೈಸೂರು ಮಲ್ಲಿಗೆ', 'ಮೈಸೂರು ವೀಳ್ಯದೆಲೆ', 'ಮೈಸೂರು ರೇಷ್ಮೆಸೀರೆ', 'ಮೈಸೂರು ದಸರಾ', 'ಮೈಸೂರು ಅರಮನೆ' ಇವುಗಳು ಕರ್ನಾಟಕದ ಸಾಂಸ್ಕೃತಿಕ ಕ್ಷೇತ್ರದಲ್ಲಿ ವಿಶೇಷ ಮಹತ್ವ ಪಡೆದ ಶಬ್ದಗಳಾಗಿವೆ. ಮೈಸೂರು ಕರ್ನಾಟಕದ ಸಾಂಸ್ಕೃತಿಕ ರಾಜಧಾನಿಯೆಂದು ಖ್ಯಾತವಾಗಿದೆ.

ಕನ್ನಡದ ಇಬ್ಬರು ಶ್ರೇಷ್ಠ ಸಾಹಿತ್ಯಪುರುಷರ ಮಾತುಗಳಲ್ಲಿ ಮೈಸೂರಿನ ಮಹತ್ವ ಅಡಗಿದೆ. ಶ್ರೇಷ್ಠ ವಿಮರ್ಶಕರೂ, ಆಧುನಿಕ ವಚನಕಾರರೂ ಆದ ಡಾ|| ಎಸ್. ವಿ. ರಂಗಣ್ಣನವರು ಹೀಗೆ ಹೇಳುತ್ತಾರೆ :

ಅಮರಾವತಿ ಮೈಸೂರು ಎರಡೂ ನನ್ನದಾದಲ್ಲಿ
ಅಮರಾವತಿಯ ದಾನವೀಯವೆ ದೇವೇಂದ್ರನಿಗೆ
ಬಾಳುವೆ ಮುದ್ದು ಮೈಸೂರಿನಲ್ಲಿ !

ಮೈಸೂರಿನ ಮಹತ್ವವನ್ನು ರಾಷ್ಟ್ರಕವಿ ಕುವೆಂಪು ಅವರ ವಾಣಿ ಹೀಗೆ ಹೇಳುತ್ತದೆ :

ಸಿರಿಗಾಗರದ ಮೈಸೂರು
ಕನ್ನಡದ ಕುಶಲತೆಗೆ
ಕನ್ನಡದಾಧುನಿಕತೆಗೆ
ಕನ್ನಡದ ನಿಪುಣತೆಗೆ
ಕನ್ನಡಿಯು ಮೈಸೂರು !

ಭವ್ಯ ಪರಂಪರೆಯೊಂದಿಗೆ ಉಜ್ವಲ ಭವಿಷ್ಯವುಳ್ಳ ಮೈಸೂರು ಶೃಂಗಾರಪ್ರಿಯರಿಗೂ, ಸೌಂದರ್ಯೋಪಾಸಕರಿಗೂ, ಸಂಸ್ಕೃತಿಪ್ರಿಯರಿಗೂ, ಇತಿಹಾಸ, ವಾಸ್ತುಶಿಲ್ಪ, ನಾಣ್ಯ, ಶಾಸನ ಚಿತ್ರಕಲೆಗಳಲ್ಲಿ ಆಸಕ್ತಿಯುಳ್ಳವರಿಗೂ, ಕೇವಲ ವಿನೋದ ವಿಹಾರಗಳನ್ನೇ ಬಯಸುವ ಜನರಿಗೂ, ಶಾಂತಿಪ್ರಿಯರಿಗೂ ಸಮನಾದ ಸವಿಯನ್ನು ನೀಡುವ ವೈಶಿಷ್ಟ್ಯಪೂರ್ಣ ಜಿಲ್ಲೆ.

'ಮೈಸೂನಾಡು', 'ಮಯಿಸೂರು', 'ಮಯ್ಸೂರು', 'ಮಹಿಷವಾರು' ಎಂದು ಕರೆಯಲಾದ ಮೈಸೂರು ಮಹಾಭಾರತದಲ್ಲಿ 'ಮಾಹಿಷ್ಮತಿ'ಯಾಗಿತ್ತು ಎಂದು ಹೇಳಲಾಗಿದೆ.

ಕ್ರಿ.ಪೂ. 3ನೆಯ ಶತಮಾನದಲ್ಲಿ ಅಶೋಕ ಚಕ್ರವರ್ತಿ ಮಹಾದೇವ ಎಂಬುವವನನ್ನು ಮಹಿಷಮಂಡಲಕ್ಕೆ ಕಳುಹಿಸಿದ್ದನೆಂದು ಹೇಳಲಾಗಿದೆ. ಈಜಿಪ್ತ ಭೂಗೋಳ ಶಾಸ್ತ್ರಜ್ಞ ಟಾಲಮಿ ಎರಡನೆಯ ಶತಮಾನದಲ್ಲಿ 'ಮಯ್ಸೂರು' ನಾಡೆಂದು ಹೇಳಿದ್ದಾನೆ.

ದೇವತೆ ಚಾಮುಂಡೇಶ್ವರಿಯು ಮಹಿಷಾಸುರನನ್ನು ಮರ್ದನ ಮಾಡಿದ್ದರಿಂದ ಈ ಊರಿಗೆ 'ಮೈಸೂರು' ಎಂಬ ಹೆಸರು ಬಂತೆಂದು ಜಾನಪದ ನಂಬಿಕೆಯಿದೆ. ಮಹಿಷನೂರು, ಮಹಿಷೂರು, ಮಯಿಸೂರು, ಮೈಸೂರು ಎಂಬುದು ಈ ಊರಿನ ಹೆಸರಿನ ಬೆಳವಣಿಗೆಯಾಗಿದೆ.

ಮೈಸೂರು ಜಿಲ್ಲೆ ಭವ್ಯ ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ಬಬ್ರುವಾಹನನ ಕಾಳಗದ ಚಿತ್ರಾಂಗದೆಯ ತವರೆನ್ನಲಾದ 'ಮಣಿಪುರ' ವೇ ಇಂದಿನ 'ಮೈಸೂರು' ಎಂದು ವರ್ಣಿಸಲಾಗಿದೆ.

ಮೈಸೂರು ಜಿಲ್ಲೆಯ ಪ್ರಾಗೈತಿಹಾಸಿಕ ಪ್ರಭಾವ ತುಂಬಾ ದೊಡ್ಡದು. ಜಿಲ್ಲೆಯಾದ್ಯಂತ ಹತ್ತಾರು ಇತಿಹಾಸ ಪೂರ್ವದ ನೆಲೆಗಳನ್ನು ಕಾಣಬಹುದು. ಮೈಸೂರು ಜಿಲ್ಲೆಯಲ್ಲಿ ಮೂರು ಸೂಕ್ಷ್ಮ ಶಿಲಾಯುಗದ ನೆಲೆಗಳು, ಒಂಬತ್ತು ನವಶಿಲಾಯುಗದ ನೆಲೆಗಳು, ಐವತ್ತು ಬೃಹತ್ ಶಿಲಾಯುಗದ ನೆಲೆಗಳು ಹಾಗೂ ನೂರಾರು ಬೃಹತ್ ಶಿಲಾಗೋರಿಗಳನ್ನು ಕಾಣಬಹುದು.

ಮೈಸೂರು ಜಿಲ್ಲೆಯಲ್ಲಿ 2,385 ಶಾಸನಗಳು ದೊರಕಿವೆ. ಇದರಲ್ಲಿ ಕನ್ನಡ, ತಮಿಳು, ತೆಲುಗು, ದೇವನಾಗರಿ, ಅರೆಬಿಕ್, ಸಂಸ್ಕೃತ ಭಾಷೆಯ ಶಾಸನಗಳನ್ನು ಕಾಣಬಹುದು. ಅಕ್ಷರದ ಗೋಪಣ್ಣ, ಸಭಾಪತಿ ಸಾಸಲಯ್ಯ ಮೊದಲಾದ ಶಾಸನ ಕವಿಗಳನ್ನು ಕಾಣಬಹುದು. ಅನೇಕ ಪ್ರಾಚೀನ ನಾಣ್ಯಗಳನ್ನು ನೋಡಬಹುದಾಗಿದೆ.

ಗಂಗವಾಡಿ 96,000, ಪುನ್ನಾಟ 10,000, ಮೈಸುನಾಡು, ಎರೆನಾಡು ಮುಂತಾದ ಪ್ರದೇಶಗಳು ಈ ಜಿಲ್ಲೆಯಲ್ಲಿದ್ದವು. ಕ್ರಿ.ಶ. 4 ರಿಂದ 11ನೆಯ ಶತಮಾನದವರೆಗೆ ಆಳಿದ ತಲಕಾಡಿನ ಗಂಗರು ಮೈಸೂರು ಜಿಲ್ಲೆಯವರು. ಅವರ ರಾಜಧಾನಿ ಮೈಸೂರು ಜಿಲ್ಲೆಯ ತಲಕಾಡು. ಹೆಗ್ಗಡದೇವನಕೋಟೆ ತಾಲ್ಲೂಕಿನ 'ಪುನ್ನಾಟ'ದಿಂದ ಅವರ ಆಳ್ವಿಕೆ ಪ್ರಾರಂಭವಾಗಿತ್ತು. ಗಂಗರ ಪ್ರಸಿದ್ಧ ದೊರೆ ದುರ್ವಿನೀತ ಪುನ್ನಾಟದವನು. ತಲಕಾಡಿನ ಗಂಗರ ಜೊತೆಗೆ ಬಾದಾಮಿ ಚಾಲುಕ್ಯರ ವೈವಾಹಿಕ ಸಂಬಂಧವಿತ್ತು.

ಹೆಗ್ಗಡದೇವನಕೋಟೆ ಪ್ರಾಂತ್ಯದಲ್ಲಿ ರಾಷ್ಟ್ರಕೂಟರಿಗೆ ಸಂಬಂಧಪಟ್ಟ ಶಾಸನಗಳು ದೊರಕಿವೆ. ಇವರ ಜೊತೆ ಕೂಡ ತಲಕಾಡು ಗಂಗರಿಗೆ ವೈವಾಹಿಕ ಸಂಬಂಧವಿತ್ತು.

ತಲಕಾಡು ಗಂಗರನ್ನು ಸೋಲಿಸಿ ರಾಜೇಂದ್ರಚೋಳ ಹಾಗೂ ರಾಜರಾಜಚೋಳ ಮೊದಲಾದವರು ಮೈಸೂರು ಪ್ರದೇಶವನ್ನು ಆಳಿದ್ದುಂಟು. ತಲಕಾಡಿನ ಗಂಗರ ಉತ್ತರಾಧಿಕಾರಿಗಳಾದ ಹೊಯ್ಸಳರು ಚೋಳರನ್ನು ಸೋಲಿಸಿ ಕನ್ನಡನಾಡಿಗೆ ಮುಕ್ತಿ ದೊರಕಿಸಿಕೊಟ್ಟರು.

ಉಮ್ಮತ್ತೂರು, ಕರಿನಾಡು ಹಾಗೂ ಕಳಲೆ ಪಾಳೇಗಾರರು ಈ ಜಿಲ್ಲೆಯ ಬಹುಭಾಗದ ಮೇಲೆ ಹಿಡಿತ ಹೊಂದಿದ್ದರು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ವಿಜಯನಗರದ ಪ್ರತಿನಿಧಿಯೊಬ್ಬ ಶ್ರೀರಂಗಪಟ್ಟಣದಲ್ಲಿದ್ದುಕೊಂಡು ಆಳ್ವಿಕೆ ನಡೆಸುತ್ತಿದ್ದನು.

ಕ್ರಿ.ಶ. 17ನೆಯ ಶತಮಾನದಿಂದ 20ನೆಯ ಶತಮಾನದವರೆಗೂ ಈ ಜಿಲ್ಲೆಯನ್ನು ವೈಭವದಿಂದ ಆಳಿದ ವಂಶ ಮೈಸೂರು ಒಡೆಯರದು. ಯದುರಾಯರಿಂದ ಹಿಡಿದು ಜಯಚಾಮರಾಜೇಂದ್ರ ಒಡೆಯರ ತನಕ 25 ಅರಸರು ಮೈಸೂರು ಸಂಸ್ಥಾನವನ್ನು ಆಳಿದ್ದಾರೆ.

ಹೈದರಾಲಿ ಮತ್ತು ಟಿಪ್ಪುಸುಲ್ತಾನ ಈ ಸಂಸ್ಥಾನದಲ್ಲಿ ಸ್ವಾಭಿಮಾನದ ಬೀಜವನ್ನು ಬಿತ್ತಿದರು. ಇಬ್ಬರೂ ಬ್ರಿಟಿಷರ ವಿರುದ್ಧ ಹೋರಾಡಿದವರೇ ! 'ಮೈಸೂರು ಹುಲಿ' ಎಂದು ಖ್ಯಾತನಾದ ಟಿಪ್ಪು ಮೈಸೂರು ಸಂಸ್ಥಾನದ ಸ್ವಾತಂತ್ರ ರಕ್ಷಣೆಗಾಗಿ ತನ್ನ ಪ್ರಾಣವನ್ನೇ ಅರ್ಪಿಸಿದ.

ಕ್ರಿ.ಶ. 1799ರನಂತರ ಮೈಸೂರು ಸಂಸ್ಥಾನ ಬ್ರಿಟಿಷರ ಅಧೀನಕ್ಕೆ ಒಳಪಟ್ಟು ದೇಶೀಯ ಸಂಸ್ಥಾನವಾಯಿತು. ಕ್ರಿ.ಶ. 1831ರಿಂದ ಮುಂದಕ್ಕೆ 50 ವರ್ಷಗಳ ಕಾಲ ಮೈಸೂರು, ಕಮೀಷನರ್‌ಗಳ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. ರ 1881 ರಲ್ಲಿ ಮೈಸೂರು ಪ್ರಜಾ ಪ್ರತಿನಿಧಿ ಸಭೆ ಸ್ಥಾಪನೆಯಾಗಿ ಜನಪರ ಆಳ್ವಿಕೆ ಪ್ರಾರಂಭವಾಯಿತು. ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರಂತಹ ಪ್ರಗತಿಪರ ಮನೋಭಾವದ ಆಳರಸರು ಈ ಸಂಸ್ಥಾನಕ್ಕೆ ದೊರಕಿದ್ದುದು ಈ ಜನತೆಯ ಪುಣ್ಯ.

ಮೈಸೂರು ಸಂಸ್ಥಾನದ ದಿವಾನರುಗಳಾದ ಸಿ. ರಂಗಾಚಾರ್ಲು, ಶೇಷಾದ್ರಿ ಅಯ್ಯರ್, ಭಾರತರತ್ನ ಸರ್. ಎಂ. ವಿಶ್ವೇಶ್ವರಯ್ಯ, ಸರ್. ಮಿರ್ಜಾ ಇಸ್ಮಾಯಿಲ್, ದಿವಾನ್ ಮಾಧವರಾವ್, ಮೊದಲಾದ ಅತ್ಯುತ್ತಮ ಹಾಗೂ ದೂರದೃಷ್ಟಿಯುಳ್ಳ ಆಡಳಿತಗಾರರು ಈ ಸಂಸ್ಥಾನಕ್ಕೆ ದೊರಕಿದ ಕಾರಣ ಎಲ್ಲ ಕ್ಷೇತ್ರಗಳಲ್ಲೂ ಅಸಾಧಾರಣ ಪ್ರಗತಿ ಸಾಧಿಸಲಾಯಿತು. ಕೃಷಿ, ನೀರಾವರಿ, ಶಿಕ್ಷಣ, ಕೈಗಾರಿಕೆ, ದುರ್ಬಲ ಹಾಗೂ ದಲಿತರ ಏಳಿಗೆ ಮುಂತಾದ ವಿಚಾರಗಳಲ್ಲಿ ಆಗಿರುವ ಪ್ರಗತಿ ದಾಖಲಾರ್ಹವಾದ ವಿಚಾರವಾಗಿವೆ. ಮಹಾತ್ಮಗಾಂಧೀಜಿ ಅವರ ಗಮನ ಸೆಳೆದಿದ್ದು 'ಮಾದರಿ ಸಂಸ್ಥಾನ' ಎಂಬ ಹೆಸರು ಬರಲು ಇದು ಕಾರಣವಾಯಿತು.

ಮೈಸೂರನ್ನು ಉತ್ತರ ಅಕ್ಷಾಂಶ 11°-30' ಯಿಂದ 12°-45' ಹಾಗೂ ಪೂರ್ವ ರೇಖಾಂಶ 74°-45' ಮತ್ತು 77°-45' ಅಂಶಗಳ ನಡುವೆ ಗುರುತಿಸಲಾಗಿದೆ.

2001ರ ಜನಗಣತಿಯ ಪ್ರಕಾರ ಮೈಸೂರು ಜಿಲ್ಲೆಯಲ್ಲಿ 26,24,911ರಷ್ಟು ಜನರಿದ್ದಾರೆ. ಅವರಲ್ಲಿ ಪುರುಷರು 13,35,841, ಮಹಿಳೆಯರು 12,89,070. ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇಕಡಾ 63.69 ಶೇ. 71.30 ಪುರುಷರು. ಶೇ. 55.81 ಮಹಿಳೆಯರು.

ಮೈಸೂರು ಜಿಲ್ಲೆಯ ಪ್ರಸ್ತುತ ಏಳು ತಾಲ್ಲೂಕುಗಳನ್ನು ಹೊಂದಿದೆ. ಅವುಗಳೆಂದರೆ ಮೈಸೂರು, ತಿರುಮಕೂಡಲು ನರಸೀಪುರ, ನಂಜನಗೂಡು, ಹೆಗ್ಗಡದೇವನಕೋಟೆ, ಕೃಷ್ಣರಾಜ ನಗರ, ಹುಣಸೂರು ಹಾಗೂ ಪಿರಿಯಾಪಟ್ಟಣ. ಮೈಸೂರು ಪ್ರವಾಸಿಗರ ಆಕರ್ಷಣೀಯ ಸ್ಥಳವಾಗಿದೆ. ಮೈಸೂರು ನಗರಕ್ಕೆ ಹೊಂದಿಕೊಂಡಿರುವ ಚಾಮುಂಡಿಬೆಟ್ಟ 3896 ಅಡಿ ಎತ್ತರವಿದೆ.

ಮೈಸೂರು ಜಿಲ್ಲೆಯಲ್ಲಿ ಕಾವೇರಿ, ತಾರಕ, ಕಪಿಲಾ, ಲಕ್ಷ್ಮಣತೀರ್ಥ, ಸುವರ್ಣಾವತಿ, ಭೃಗು, ಕೌಂಡಿಣ್ಯ ಮೊದಲಾದ ನದಿಗಳು ಹರಿಯುತ್ತವೆ. ಕಾವೇರಿನದಿಗೆ ಕಟ್ಟಲಾಗಿರುವ ಕನ್ನಂಬಾಡಿ ಆಣೆಕಟ್ಟು, ಕಪಿಲಾ, ತಾರಕ, ನುಗು, ಬೀರ್‍ವಾಳ ಆಣೆಕಟ್ಟುಗಳಿಂದಾಗಿ ಮೈಸೂರು ಜಿಲ್ಲೆಯ ನೀರಾವರಿ ಸೌಲಭ್ಯ ಹೆಚ್ಚಿದೆ. ಕಾವೇರಿ ನದಿಗೆ ನಿರ್ಮಿಸಲಾದ ವರುಣಾನಾಲೆ ಈ ಜಿಲ್ಲೆಯ ಪ್ರಮುಖ ನೀರಾವರಿ ಸಂಪನ್ಮೂಲವಾಗಿದೆ. ಜಿಲ್ಲೆಯ ವಾರ್ಷಿಕ ಮಳೆ 761.9 ಮಿ.ಮೀ.

ಮೈಸೂರು ಜಿಲ್ಲೆ ದಟ್ಟವಾದ ಅರಣ್ಯ ಸಂಪತ್ತಿನಿಂದ ಕೂಡಿದೆ. ನಾಗರಹೊಳೆ, ಕಾರಾಪುರ, ಕಾಕನಕೋಟೆ, ಬಂಡೀಪುರ ಮೊದಲಾದ ಕಡೆ ದಟ್ಟವಾದ ಅರಣ್ಯ ಸಂಪತ್ತಿದೆ. ತೇಗ, ಶ್ರೀಗಂಧ, ಹೊನ್ನೆ, ನಂದಿ, ಆಲ, ಬೀಟೆ, ಮತ್ತಿ ಮುಂತಾದ ಅಮೂಲ್ಯ ಮರಗಳಿವೆ.

ಕ್ರೋಮೈಟ್, ಕಲ್ನಾರು, ಕೊರಂಡಂ, ಮ್ಯಾಗ್ನಸೈಟ್ ಹಾಗೂ ಸುಣ್ಣದಕಲ್ಲು ಮುಂತಾದ ಅಮೂಲ್ಯ ಖನಿಜ ಸಂಪತ್ತು ಇಲ್ಲಿದೆ. ಭತ್ತ, ಕಬ್ಬು, ರಾಗಿ, ಜೋಳ ಇಲ್ಲಿನ ಪ್ರಮುಖ ಬೆಳೆಗಳು. ತೆಂಗು ಹಾಗೂ ರೇಷ್ಮೆ ಜಿಲ್ಲೆಯ ಪ್ರಮುಖ ವಾಣಿಜ್ಯ ಬೆಳೆ. 'ಮೈಸೂರು ಬದನೆಕಾಯಿ' ಸೇರಿದಂತೆ ಅನೇಕ ತರಕಾರಿಗಳನ್ನು ಈ ಜಿಲ್ಲೆಯಲ್ಲಿ ಬೆಳೆಯಲಾಗುತ್ತದೆ. ಕೇಂದ್ರ ಸರ್ಕಾರ ರೇಷ್ಮೆ ಅಭಿವೃದ್ಧಿಗಾಗಿ ಇಲ್ಲಿ 'ರೇಷ್ಮೆ ಸಂಶೋಧನಾ ಕೇಂದ್ರ'ವನ್ನು ಸ್ಥಾಪಿಸಿದೆ.

ಕೆ.ಆರ್. ನಗರ ತಾ|| ಚುಂಚನಕಟ್ಟೆಯಲ್ಲಿ ಸಕ್ಕರೆ ಕಾರ್ಖಾನೆಯಿದೆ. ಮೈಸೂರು ಕೇವಲ ಪ್ರವಾಸಿ ಕೇಂದ್ರವಾಗದೆ ಕೈಗಾರಿಕಾ ನಗರವಾಗಿಯೂ ಅರಳಿದೆ. ಅದರಲ್ಲೂ ರೇಷ್ಮೆ ಹಾಗೂ ಅಗರಬತ್ತಿ ಉದ್ಯಮಕ್ಕೆ ಮೈಸೂರು ಉಲ್ಲೇಖಿಸಲ್ಪಡಬೇಕಾದ ಸ್ಥಳವಾಗಿದೆ. ವಾಸು ಅಗರಬತ್ತಿಯ ಶ್ರೀ ಗುರು, ಶೃಂಗಾರ ಅಗರಬತ್ತಿಯ ಶ್ರೀ ಸುಬ್ಬರಾವ್ ಮೊದಲಾದವರು ತಮ್ಮ ಉದ್ಯಮಶೀಲತೆಗೆ ರಾಷ್ಟ್ರದೆಲ್ಲೆಡೆ ಹೆಸರು ಪಡೆದಿದ್ದಾರೆ.

ಮೈಸೂರಿನಲ್ಲಿ 'ಜಾವಾಮೋಟರ್' ಸೈಕಲ್ ತಯಾರಿಸಿದ ಎಸ್.ಕೆ. ಇರಾನಿ ಅವರು ರಾಜ್ಯದ ಪ್ರಸಿದ್ಧ ಕೈಗಾರಿಕೋದ್ಯಮಿಗಳಲ್ಲಿ ಒಬ್ಬರಾಗಿದ್ದರ, ವಿಕ್ರಾಂತ್ ಟೈರ್ಸ್, ಬೆಮೆಲ್, ಮೈಸೂರು ಅರಗು ಮತ್ತು ಬಣ್ಣದ ಕಾರ್ಖಾನೆ, ರೇಡ್ ಅಂಡ್ ಟೇಲರ್ ಮೊದಲಾದ

ಕಾರ್ಖಾನೆಗಳಿವೆ. ಮೈಸೂರು ಜಿಲ್ಲೆಯಲ್ಲಿ 1165 ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿವೆ. ಬೀಡಿ ಉದ್ಯಮವು ಜಿಲ್ಲೆಯಲ್ಲಿ ಪ್ರಮುಖ ಸ್ಥಾನ ಪಡೆದಿದೆ.

ಒಕ್ಕಲಿಗ, ವೀರಶೈವ, ಕುರುಬ, ಪರಿಶಿಷ್ಟ ಜಾತಿ ಮತ್ತು ಮುಸ್ಲಿಂ ಜನಾಂಗವನ್ನೊಳಗೊಂಡಂತೆ ಉಪ್ಪಾರ, ಸಮಗಾರ, ಬೋವಿ, ಕಾಡುಕುರುಬ, ಬಂಜಾರ, ಕೊರವ, ಸಿಳ್ಳೇಕ್ಯಾತ, ಮೋಚಿ, ಹಕ್ಕಿಪಿಕ್ಕಿ, ಇರುಳಿಗ, ಜೇನುಕುರುಬ, ಸೋಲಿಗರು ಮೊದಲಾದ ಅನೇಕ ದುರ್ಬಲ ವರ್ಗಗಳಿರುವುದನ್ನು ಈ ಸಂದರ್ಭದಲ್ಲಿ ಗುರುತಿಸಬಹುದು.

ಕರ್ನಾಟಕದ ಪ್ರಮುಖ ಶೈಕ್ಷಣಿಕ ಕೇಂದ್ರಗಳಲ್ಲಿ ಮೈಸೂರು ಮೊದಲನೆಯ ಸ್ಥಾನ ಗಳಿಸಿದೆ. ಪ್ರಾಚೀನ ಕಾಲದಿಂದಲೂ ಇಲ್ಲಿನ ಆಳರಸರು ವಿದ್ಯೆಗೆ ಕೊಟ್ಟ ಮಹತ್ವ ಅದಕ್ಕೆ ಕಾರಣವಾಗಿದೆ. ತಲಕಾಡಿನ ಗಂಗರ ರಾಜಧಾನಿ ತಲಕಾಡು (ತಲವನಪುರ) ಪ್ರಾಚೀನ ವಿದ್ಯಾಕೇಂದ್ರಗಳಲ್ಲಿ ಒಂದಾಗಿತ್ತು. ಮೈಸೂರು ವಿಶ್ವವಿದ್ಯಾಲಯವು ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಅತ್ಯಂತ ಹಳೆಯದು. ಇದಕ್ಕೆ ಸೇರಿದ ಮಹಾರಾಜ ಕಾಲೇಜು ರಾಜ್ಯದ ಅತ್ಯಂತ ಹಳೆಯ ಕಾಲೇಜುಗಳಲ್ಲಿ ಒಂದು. ಮಾನಸಗಂಗೋತ್ರಿ ಈ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರ. ಮೈಸೂರು ನಗರದಲ್ಲಿರುವ ಪ್ರಾಚ್ಯ ವಿದ್ಯಾಸಂಶೋಧನಾಲಯ 1887ರಲ್ಲಿ ಸ್ಥಾಪನೆಯಾಗಿದೆ.

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ಮಾನಸಗಂಗೋತ್ರಿಯ ಆವರಣದಲ್ಲಿದೆ. ಅಲ್ಲೇ 'ಜಾನಪದ ವಸ್ತು ಸಂಗ್ರಹಾಲಯ'ವಿದೆ. ಕೇಂದ್ರ ಸರ್ಕಾರದ ಆಹಾರ ಸಂಸ್ಕರಣಾ ಸಂಶೋಧನಾಲಯ (CFTRI) ಎಂಬ ಅಂತರ ರಾಷ್ಟ್ರೀಯ ಮಹತ್ವದ ಸಂಸ್ಥೆ ಇಲ್ಲಿದೆ. ರೀಜನಲ್ ಕಾಲೇಜು ಆಫ್ ಎಜ್ಯುಕೇಷನ್ ಮತ್ತು ಭಾರತೀಯ ಭಾಷಾ ಕೇಂದ್ರ ಅಧ್ಯಯನ ಸಂಸ್ಥೆ (ಸೆಂಟ್ರಲ್ ಇನ್ಸ್‌ಸ್ಟೂಟ್ ಆಫ್ ಇಂಡಿಯನ್ ಲಾಂಗ್ವೇಜ್ ಸ್ಟಡೀಸ್) ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿ ಪರಿಸರದಲ್ಲಿವೆ.

ಇಂಗ್ಲಿಷ್ ಪ್ರಾಧ್ಯಾಪಕರಾದ ಡಾ॥ ಸಿ.ಡಿ. ನರಸಿಂಹಯ್ಯ ಅವರ 'ಧ್ವನ್ಯಾಲೋಕ', ಡಾ॥ ದೇ. ಜವರೇಗೌಡ ಅವರ ನೇತೃತ್ವದ ಶ್ರೀ ಕುವೆಂಪು ವಿದ್ಯಾವರ್ಧಕ ಸಂಘ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಶ್ರಯದಲ್ಲಿ ವಿಶ್ವಕನ್ನಡ ಸಮ್ಮೇಳನದ ಅಂಗವಾಗಿ ಕಟ್ಟಿದ ರಂಗಾಯಣ, ಕಲಾಭವನ, ಪ್ರಾಣಿ ಸಂಗ್ರಹಾಲಯ, ಮೈಸೂರು ಅರಮನೆ ಹಾಗೂ ಅದರ ಆವರಣ, ಜಗನ್ಮೋಹನ ಪ್ಯಾಲೇಸ್‌ನಲ್ಲಿನ ಕಲಾಕೃತಿಗಳು, ಮಹಾರಾಜ ಹಾಗೂ ಯುವರಾಜ ಕಾಲೇಜು, ಕುಕ್ಕನಹಳ್ಳಿಕೆರೆ, ಸುತ್ತೂರು ಮಠ, ಸೋಸಲೆ ವ್ಯಾಸರಾಯ ಮಠ, ಪರಕಾಲಮಠ, ಸೇಂಟ್ ಫಿಲೋಮಿನಾ ಚರ್ಚ್, ಚಾಮುಂಡಿ ಬೆಟ್ಟದ ಚಾಮುಂಡೇಶ್ವರಿ ದೇವಸ್ಥಾನ, ಅಲ್ಲಿನ ದೊಡ್ಡನಂದಿ, ಇಲವಾಲ, ವರುಣ, ಗೊಮ್ಮಟಗಿರಿ, ತಲಕಾಡು, ಸೋಮನಾಥಪುರ, ಬನ್ನೂರು, ಮುಡುಕುತೊರೆ, ಟಿ. ನರಸೀಪುರ, ಕಾರಾಪುರ, ಸುಜನಗೂಡು, ಕಳಲೆ, ಚುಂಚನಕಟ್ಟೆ, ಬೆಟ್ಟದಪುರ, ಬೈಲಕುಪ್ಪೆ, ಮಂಡ್ಯ ಜಿಲ್ಲೆಗೆ ಸೇರಿದ್ದರೂ ಮೈಸೂರಿಗೆ ಅಂಟಿಕೊಂಡಿರುವ ಕೆ.ಆರ್. ಸಾಗರ ಹೀಗೆ ಮೈಸೂರು ಜಿಲ್ಲೆಗ ಸೇರಿದ ನೂರಾರು ಆಕರ್ಷಣೀಯ ಕೇಂದ್ರಗಳಿವೆ.

ತಲಕಾಡಿನ ಗಂಗರ ದೊರೆ ದುರ್ವಿನೀತ ಮೈಸೂರು ಜಿಲ್ಲೆಯ ಪ್ರಥಮ ಸಾಹಿತ್ಯ ಪುರುಷ. ಈತ ಕನ್ನಡದ ಮೊದಲ ಗದ್ಯಕವಿ. ಶ್ರೀಪುರುಷ, ಸೈಗೊಟ್ಟಶಿವಮಾರ, ನೀತಿಮಾರ್ಗ ಹಾಗೂ ಚಾವುಂಡರಾಯ ಇವರುಗಳು ಗಂಗ ವಂಶದ ಸಾಹಿತ್ಯ ಪುರುಷರು. ಮೈಸೂರು ಒಡೆಯರ ವಂಶದ ಚಿಕ್ಕದೇವರಾಜ ಒಡೆಯರು ಸ್ವತಃ ಸಾಹಿತ್ಯ ನಿರ್ಮಾಪಕರು ಹಾಗೂ ಸಾಹಿತ್ಯ ಪೋಷಕರು. ಇವರ ಸಮಕಾಲೀನ ಕವಿಗಳೆಂದರೆ ತಿರುಮಲಾರ್ಯ, ಪದ್ದಣ್ಣ ಪಂಡಿತ, ನಂಜುಂಡಕವಿ, ವಿರೂಪಾಕ್ಷ ಪಂಡಿತ, ಭಾಸ್ಕರಕವಿ, ಕವಿ ಗೋವಿಂದ ವೈದ್ಯ, ಶೃಂಗಾರಮ್ಮ, ಚಿಕ್ಕುಪಾಧ್ಯಾಯ ಹಾಗು ಸಂಚಿ ಹೊನ್ನಮ್ಮ.

ರಾಜಾಶ್ರಯದಿಂದ ಹೊರಗುಳಿದು ಸಾಹಿತ್ಯಕೃಷಿ ಮಾಡಿದವರಲ್ಲಿ ನಿಜಗುಣ ಶಿವಯೋಗಿ, ಷಡಕ್ಷರದೇವ, ಸಿದ್ಧಲಿಂಗ ಯತಿ, ಬನ್ನೂರಿನ ವ್ಯಾಸರಾಯರು ಪ್ರಮುಖರು.

'ಕನ್ನಡದ ಭೋಜರಾಜ' ರೆಂದು ಖ್ಯಾತರಾದ ಮುಮ್ಮಡಿ ಕೃಷ್ಣರಾಜ ಒಡೆಯರು ಸ್ವತಃ 50 ಕೃತಿಗಳನ್ನು ರಚಿಸಿದ್ದಾರೆ. ಕೆಂಪುನಾರಾಯಣ ಎಂಬ ಕವಿ ಮುದ್ರಾಮಂಜೂಷಾ ಎಂಬ ಕಾವ್ಯ ರಚಿಸಿದ್ದಾನೆ. ಚಾಮರಾಜರ ಕಾಲದಲ್ಲಿ ಬಸವಪ್ಪಶಾಸ್ತ್ರಿ 'ಅಭಿಜ್ಞಾನ ಶಾಕುಂತಲ' ಎಂಬ ನಾಟಕ ಅನುವಾದಿಸಿ ಅಮರರಾಗಿದ್ದಾರೆ.

ಸರ್. ಎಂ. ವಿಶ್ವೇಶ್ವರಯ್ಯ ಹಾಗೂ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ದೂರದೃಷ್ಟಿಯ ಫಲವಾಗಿ ಸ್ಥಾಪಿತವಾದ ವಿಶ್ವವಿದ್ಯಾನಿಲಯ ರಾಷ್ಟ್ರದ ಹಳೆಯ ವಿಶ್ವವಿದ್ಯಾನಿಲಯಗಳಲ್ಲಿ ಒಂದು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅರಳಿದ ಪ್ರತಿಭಾ ಚೇತನಗಳನ್ನು ನೆನೆಯಬಹುದು. ಡಾ।। ಎಸ್. ರಾಧಾಕೃಷ್ಣನ್, ಡಾ।। ಎಂ. ಹಿರಿಯಣ್ಣ, ಪ್ರೊ।। ಡಿಸೋಜಾ, ಡಾ।। ಶಾಮಾಶಾಸ್ತ್ರೀ, ಡಾ।। ಎಸ್. ಶ್ರೀಕಂಠಶಾಸ್ತ್ರೀ, ಪ್ರೊ।। ಕೆ.ಎ. ನೀಲಕಂಠಶಾಸ್ತ್ರಿ, ಪ್ರೊ।। ಎಂ. ಯಮುನಾಚಾರ್ಯ, ಡಾ।। ಕೆ.ಎಂ. ಪಣಿಕ್ಕರ್, ಡಾ।। ಎಂ.ಹೆಚ್. ಕೃಷ್ಣ, ರಾಷ್ಟ್ರಕವಿ ಡಾ।। ಕುವೆಂಪು, ಡಾ।। ಕೆ.ಎಲ್. ಶ್ರೀಮಾಲಿ, ಪ್ರೊ।। ನಾಡಿಯಾ ಮೈಕೆಂಜಿ, ಪ್ರೊ।। ಟಿ.ಎಸ್. ವೆಂಕಣ್ಣಯ್ಯ, ಡಾ।। ಎ.ಆರ್. ಕೃಷ್ಣಶಾಸ್ತ್ರೀ, ಡಾ।। ಡಿ.ಎಲ್.ಎನ್., ಪ್ರೊ।. ತೀನಂಶ್ರೀ, ಡಾ।। ಪುತಿನ, ಡಾ।। ಆರ್.ಕೆ. ನಾರಾಯಣ್, ಡಾ।। ಎಸ್.ವಿ. ರಂಗಣ್ಣ, ಪ್ರೊ।। ಎ. ಎನ್. ಮೂರ್ತಿರಾವ್, ಡಾ।। ದೇಜಗೌ, ಡಾ।। ಹಾಮಾನಾ, ಡಾ।। ಚದುರಂಗ, ಪ್ರೊ।। ಸಿ.ಡಿ.ಎನ್., ಡಾ।। ಯು.ಆರ್. ಅನಂತಮೂರ್ತಿ, ಡಾ।। ಮನುಜ, ಪ್ರೊ।। ಎಸ್.ವಿ. ಪರಮೇಶ್ವರಭಟ್ಟ, ಡಾ।। ತ.ಸು. ಶಾಮರಾಯರು, ಪ್ರೊ।। ಎಂ. ಮಾದಯ್ಯ, ಡಾ।। ಕೆ. ಅನಂತರಾಮು, ಡಾ।। ಪ್ರಭುಶಂಕರ, ಡಾ।। ಸಿಪಿಕೆ, ಪ್ರೊ।। ಸುಜನಾ, ಡಾ।। ಹೆಚ್. ತಿಪ್ಪೆರುದ್ರಸ್ವಾಮಿ, ಪ್ರೊ।। ಎಸ್. ಅನಂತನಾರಾಯಣ, ಡಾ।। ಜಿ:ಎಸ್. ಗಾಯ್, ಡಾ।। ಎನ್.ಎಸ್. ತಾರಾನಾಥ, ಡಾ।। ಬಿ. ಷೇಕ್ಅಲಿ, ಪ್ರೊ।। ಜೀಶಂಪ, ಪ್ರೊ।। ಸಿಂಧುವಳ್ಳಿ ಅನಂತಮೂರ್ತಿ,

ಕಾದಂಬರಿಗಾರರಾದ ತರಾಸು, ಪ್ರೊ॥ ಎಚ್ಚೆಸ್ಕೆ, ಜಿ.ಟಿ. ನಾರಾಯಣರಾವ್, ಪ್ರೊ॥ ರಾಗೌ, ಪಿ.ಆರ್. ತಿಪ್ಪೇಸ್ವಾಮಿ, ಪ್ರೊ॥ ಎಂ. ಪುಟ್ಟಮಾದಯ್ಯ, ಡಾ॥ ಎಂ. ಅಕಬರಅಲಿ, ಆರ್.ಎಲ್. ಅನಂತರಾಮಯ್ಯ, ತ್ರಿವೇಣಿ, ಆರ್ಯಾಂಬ ಪಟ್ಟಾಭಿ, ಮಂಗಳಾಸತ್ಯನ್, ದೇವನೂರು ಮಹಾದೇವ, ಡಾ॥ ಬಿ.ನಂ. ಚಂದ್ರಯ್ಯ, ಡಾ॥ ಸಿ.ಕೆ.ಎನ್. ರಾಜ, ಡಾ॥ ಎಂ.ಬಿ. ಪದ್ಮ, ಡಾ॥ ಎಂ.ಬಿ. ರಾಜಾಮಣಿ, ಪ್ರೊ॥ ಕೆ. ಭೈರವಮೂರ್ತಿ, ಡಿವಿಕೆ ಪ್ರಕಾಶನದ ಡಿವಿಕೆ ಮೂರ್ತಿ, ಶಾರದಾ ಮಂದಿರದ ಪ್ರೊ॥ ಎಚ್.ಎಂ. ಶಂಕರನಾರಾಯಣರಾವ್ ಮೊದಲಾದವರು ಮೈಸೂರಿನಲ್ಲಿದ್ದು ತಮ್ಮ ಕೃತಿಗಳಿಂದ ಕನ್ನಡ ಸಾಹಿತ್ಯದ ಹಿರಿಮೆಯನ್ನು ಹೆಚ್ಚಿಸಿದ್ದಾರೆ.

ಹೆಚ್.ಡಿ. ಕೋಟೆ ತಾಲ್ಲೂಕಿನಲ್ಲಿ ಅತ್ಯಂತ ಹಿಂದುಳಿದ ಕಾಡುಕುರುಬ ಜನಾಂಗದ ಸರ್ವತೋಮುಖ ಅಭಿವೃದ್ಧಿಗಾಗಿ ಕಂಕಣಬದ್ಧರಾಗಿ ಡಾ॥ ಬಾಲಸುಬ್ರಹ್ಮಣ್ಯಂ ಅವರು ತಮ್ಮನ್ನೇ ಸಮರ್ಪಿಸಿಕೊಂಡು ಸೇವಾನಿರತರಾಗಿದ್ದಾರೆ.

1882ರಲ್ಲಿ 'ಚಾಮರಾಜೇಂದ್ರ ನಾಟಕ ಸಭಾ' ಜನ್ಮತಾಳಿತು. ಬಸವಪ್ಪಶಾಸ್ತ್ರೀ, ನಂಜನಗೂಡು ಸುಬ್ಬಾಶಾಸ್ತ್ರೀ, ಅನಂತನಾರಾಯಣ ಶಾಸ್ತ್ರೀ, ಜಯರಾಮಚಾರ್ಯ ಮುಂತಾದ ಖ್ಯಾತ ನಾಟಕಕಾರರು ಈ ಸಂಸ್ಥೆಗೆ ಅನೇಕ ನಾಟಕಗಳನ್ನು ರಚಿಸಿಕೊಟ್ಟಿದ್ದಾರೆ.

ಕೃಷ್ಣಯ್ಯಂಗಾರ್, ವರದಾಚಾರ್, ಲಕ್ಷ್ಮೀಪತಿಶಾಸ್ತ್ರೀ, ಸುಬ್ಬಣ್ಣ, ಪೀರ್, ರಾಜ್‌ಕುಮಾರ್ ತಂದೆ ಪುಟ್ಟಸ್ವಾಮಯ್ಯ ಆ ಕಾಲದ ಶ್ರೇಷ್ಠ ರಂಗನಟರು.

ಚಲನಚಿತ್ರ ಕ್ಷೇತ್ರದಲ್ಲಿ ಈಗ ಚಾಮರಾಜನಗರ ಜಿಲ್ಲೆಗೆ ಸೇರಿದವರೇ ಆಗಿದ್ದರೂ ಮಾನಸಿಕವಾಗಿ ಮೈಸೂರಿನವರಾದ ಡಾ॥ ರಾಜಕುಮಾರ್, ಕೆ.ಆರ್. ನಗರ ತಾಲ್ಲೂಕಿನ ಪಾರ್ವತಮ್ಮ ರಾಜಕುಮಾರ್, ವಜ್ರೇಶ್ವರಿ ಕಂಬೈನ್ಸ್ ಚಿನ್ನೇಗೌಡ, ಗೋವಿಂದರಾಜು, ನಿರ್ದೇಶಕರಾದ ಶಂಕರ್‌ಸಿಂಗ್, ಎಂ.ಆರ್. ವಿಠ್ಠಲ್ ಹಾಗೂ ರವಿ, ಎಸ್.ವಿ. ರಾಜೇಂದ್ರಸಿಂಗ್‌ಬಾಬು, ಪ್ರೀಮಿಯರ್ ಸ್ಟುಡಿಯೋದ ಬಸವರಾಜಯ್ಯ, ನಟರಾದ ಕೆಂಪರಾಜೇ ಅರಸ್, ಪುಟ್ಟಣ್ಣ ಕಣಗಾಲ್, ಕಣಗಾಲ್ ಪ್ರಭಾಕರಶಾಸ್ತ್ರಿ, ಎಂ.ಎಸ್. ಸತ್ಯು, ಹಿರಿಯ ನಟರಾದ ಎಂ.ಪಿ. ಶಂಕರ್, ರಾಘವೇಂದ್ರರಾವ್, ಅಶ್ವತ್ಥ್, ಬಿ.ವಿ. ರಾಧಾ, ಅಂಬರೀಶ್, ವಿಷ್ಣುವರ್ಧನ್, ಶ್ರೀನಾಥ್, ಸಿ.ಆರ್. ಸಿಂಹ, ಮೈಸೂರು ಲೋಕೇಶ್, ಪ್ರತಿಮಾದೇವಿ, ಆರತಿ, ತೂಗುದೀಪ ಶ್ರೀನಿವಾಸ್ ಮೊದಲಾದವರನ್ನು ಉಲ್ಲೇಖಿಸಬಹುದು.

'ರಂಗಾಯಣ' ಮೈಸೂರಿನಲ್ಲಿದ್ದು ರಂಗಚಟುವಟಿಕೆಗಳನ್ನು ಸಕ್ರಿಯವಾಗಿ ಮಾಡುತ್ತಿದೆ. ಶಿಲ್ಪಸಿದ್ಧಾಂತಿ ಸಿದ್ಧಲಿಂಗಯತಿ, ಶುದ್ಧೋದನ, ಬಸವಯ್ಯ, ಪಿ.ಆರ್. ತಿಪ್ಪೇಸ್ವಾಮಿ, ಮುರಳೀಧರರಾವ್ ಮೊದಲಾದ ಚಿತ್ರಕಲಾವಿದರು ಮೈಸೂರಿನಲ್ಲಿದ್ದವರು. ಮೈಸೂರು ಅರಮನೆ ಹಾಗೂ ಜಗನ್ಮೋಹನ ಪ್ಯಾಲೇಸ್ ಚಿತ್ರಕಲಾ ಪ್ರೇಮಿಗಳಿಗೆ ಪುಣ್ಯಸ್ಥಳವೆನಿಸಿವೆ.

ಮೈಸೂರು ಸಂಗೀತ ಕ್ಷೇತ್ರಕ್ಕೆ ಗಣನೀಯ ಕೊಡುಗೆ ಕೊಟ್ಟಿದೆ. ವೀಣೆ ವೆಂಕಟಸುಬ್ಬಯ್ಯ, ವೀಣೆ ಶೇಷಣ್ಣ, ವೀಣೆ ಸುಬ್ಬಣ್ಣ, ಭೈರವಿ ಕೆಂಪೇಗೌಡ, ಬಿಡಾರಂ ಕೃಷ್ಣಪ್ಪ, ಚಿಕ್ಕರಾಮರಾವ್, ವೀಣೆ ದೊರೆಸ್ವಾಮಿ ಅಯ್ಯಂಗಾರ್, ಮೈಸೂರು ವಾಸುದೇವಾಚಾರ್ಯ, ಪಿಟೀಲು ಚೌಡಯ್ಯ, ವಯಲಿನ್ ವಾದಕರಾದ ನಾಗರಾಜ ಹಾಗೂ ಮಂಜುನಾಥ್ ಮುಂತಾದ ಸಂಗೀತ ಲೋಕದ ಖ್ಯಾತನಾಮರನ್ನು ನೆನೆಯಬಹುದು.

ತಿರುಮಕೂಡಲು ಸುಂದರಮ್ಮ, ನಾಟ್ಯ ಸರಸ್ವತಿ ಜಟ್ಟಿ ತಾಯಮ್ಮ, ಪ್ರಖ್ಯಾತ ನರ್ತಕಿ ಚಂದ್ರವದನಮ್ಮ, ಡಾ॥ ವೆಂಕಟಲಕ್ಷ್ಮಮ್ಮ ಮೊದಲಾದವರ ನೃತ್ಯ ಸೇವೆಯನ್ನು ಮರೆಯುವಂತಿಲ್ಲ.

ಜಾನಪದ ಕ್ಷೇತ್ರದಲ್ಲಿ ಬೀಸು ಕಂಸಾಳೆ, ಲಾವಣಿ, ಸಾರಂಗಧರ, ವೀರಗಾಸೆ, ಕಂಬದ ಕುಣಿತ, ಗೊರವರ ಕುಣಿತ, ಬೀರದೇವರ ಕುಣಿತ, ಮುಂಗಾಲು ಕುಣಿತ, ಕೀಲು ಕುದುರೆ, ಸೂತ್ರದ ಬೊಂಬೆ ಮೊದಲಾದ ಜಾನಪದ ನೃತ್ಯ ಪ್ರಕಾರಗಳು ಈ ಜಿಲ್ಲೆಯಲ್ಲಿ ಪ್ರಖ್ಯಾತವಾಗಿವೆ.

ಪತ್ರಿಕೋದ್ಯಮಕ್ಕೆ ಮೈಸೂರು ಜಿಲ್ಲೆ ತುಂಬಾ ಪ್ರಖ್ಯಾತವಾಗಿದೆ. 'ಮೈಸೂರು ತಾತಯ್ಯ' ಎಂದೇ ಖ್ಯಾತರಾಗಿದ್ದ ಎಂ. ವೆಂಕಟಕೃಷ್ಣಯ್ಯ ಪತ್ರಿಕೋದ್ಯಮದ ಪಿತಾಮಹರು. 1859ರಲ್ಲಿ ಪ್ರಕಟವಾದ 'ಮೈಸೂರು ವೃತ್ತಾಂತ ಬೋಧಿನಿ' ಕನ್ನಡದ ಮೊದಲ ವಾರಪತ್ರಿಕೆ. 'ಸಾಧ್ವಿ ಪತ್ರಿಕೆ' ಬೆಳೆಸಿದವರು ಅಗರಂ ರಂಗಯ್ಯ, ಕನ್ನಡ ಪತ್ರಿಕೆಗಳಲ್ಲಿ ಮೊದಲ ಬಾರಿಗೆ ಧಾರಾವಾಹಿಗಳನ್ನು ಪ್ರಕಟಿಸಿ ಸಾಹಿತ್ಯಾಸಕ್ತರ ಗಮನ ಸೆಳೆದ ಕೀರ್ತಿ ರಾಮಾನುಜ ಅಯ್ಯಂಗಾರ್ ಮತ್ತು ಎಸ್.ಜಿ. ನರಸಿಂಹಾಚಾರ್ ಅವರಿಗೆ ಸಲ್ಲಬೇಕು. ಪತ್ರಿಕೋದ್ಯಮದ ಪ್ರಾಧ್ಯಾಪಕರಾಗಿ ಡಾ॥ ನಾಡಿಗ್ ಕೃಷ್ಣಮೂರ್ತಿ ಅವರು ಪ್ರಸಿದ್ಧರಾಗಿದ್ದಾರೆ.

ಈ ಜಿಲ್ಲೆಯ ಹಿರಿಯ ಪತ್ರಕರ್ತರೆಂದರೆ ಅರುಣದ ರಾಮಣ್ಣ, ಕೃಷ್ಣವಟ್ಟಂ, ಪಟ್ಟಾಭಿರಾಮನ್, ಕೆ.ಬಿ. ಗಣಪತಿ, ರಾಜಶೇಖರ ಕೋಟಿ, ಜಿ.ಪಿ. ಬಸವರಾಜು, ಸಂಯುಕ್ತ ಕರ್ನಾಟಕದ ವರದಿಗಾರರಾಗಿದ್ದ ದಿವಂಗತ ಶ್ರೀಕಂಠಮೂರ್ತಿ ಮುಂತಾದವರನ್ನು ಉಲ್ಲೇಖಿಸಬಹುದು.

ಅಖಿಲ ಭಾರತ ಬಾನುಲಿ ವ್ಯವಸ್ಥೆಗೆ 'ಆಕಾಶವಾಣಿ' ಎಂಬ ಹೆಸರು ನೀಡಿದ್ದು ಮೈಸೂರು ಜಿಲ್ಲೆ. ಇದಕ್ಕೆ ಕಾರಣಕರ್ತರು ಡಾ॥ ಎಂ.ವಿ. ಗೋಪಾಲಸ್ವಾಮಿ ಅವರು. ಖ್ಯಾತ ಕ್ರಿಕೆಟ್ ಪಟುಗಳಾದ ಪ್ರಸನ್ನ, ಚಂದ್ರಶೇಖರ್ ಹಾಗೂ ಜಾವಗಲ್ ಶ್ರೀನಾಥ್ ಅವರು ಈ ಜಿಲ್ಲೆಯವರೇ !

ಭಾರತದ ಸ್ವಾತಂತ್ರ ಹೋರಾಟಕ್ಕೆ ಮೈಸೂರು ಜಿಲ್ಲೆಯ ಕೊಡುಗೆ ಅನನ್ಯವಾದುದು. ಮೈಸೂರಿನ ಸೂರಡಿ ರಸ್ತೆಯ ಕೊನೆಗಿರುವ ರಾಮಸ್ವಾಮಿ ಸರ್ಕಲ್, ಸ್ವಾತಂತ್ರಯೋಧನ ಸವಿನೆನಪಿಗಾಗಿ ನಿರ್ಮಿಸಿದ ವೃತ್ತವಾಗಿದೆ.

ನಂಜನಗೂಡಿನಲ್ಲಿ ನಡೆದ ಹರಿಜನೋದ್ಧಾರ ಕಾರ್ಯ ಮಹಾತ್ಮಗಾಂಧೀಜಿ ಅವರಿಗೆ ಮೆಚ್ಚುಗೆ ತಂದಿತು. ಸ್ವಾತಂತ್ರ ಹೋರಾಟಗಾರರು 'ಮೈಸೂರು ಚಲೋ' ಚಳವಳಿ ನಡೆಸಿ

'ಮೈಸೂರು ಸಂಸ್ಥಾನ' ಭಾರತದ ಒಕ್ಕೂಟಕ್ಕೆ ಸೇರುವಂತೆ ಮಾಡಿದ್ದರು. ಎಂ.ಎನ್. ಜೋಯಿಸ್, ತಗಡೂರು ರಾಮಚಂದ್ರರಾವ್, ಹೆಚ್.ವಿ. ಸುಬ್ಬರಾಮಯ್ಯ, ಪಾಲಳ್ಳಿ ಸೀತಾರಾಮಯ್ಯ, ಹೆಚ್.ಸಿ. ದಾಸಪ್ಪ, ಶ್ರೀಮತಿ ಯಶೋಧರಮ್ಮ ದಾಸಪ್ಪ, ಎಂ. ಜೀವಣ್ಣರಾವ್, ದೇವುಡು ನರಸಿಂಹಶಾಸ್ತ್ರೀ, ಸ್ವಾಮಿರಾವ್ ದೇಶಪಾಂಡೆ, ಜಿ. ವಿರೂಪಾಕ್ಷಪ್ಪ, ಟಿ.ಎಸ್. ಸುಬ್ಬಣ್ಣ, ವಿಶ್ವೇಶ್ವರಗೌಡ, ಗಣಪತಿಶಾಸ್ತ್ರೀ, ರಾಮರಾವ್, ಸಿದ್ದೋಜಿರಾವ್, ಟಿ.ಪಿ. ಬೋರಯ್ಯ, ಎಂ.ಎ. ಶ್ರೀನಿವಾಸ ಐಯ್ಯಂಗಾರ್, ಎಲ್.ಎ. ರಾಜಗೋಪಾಲ್, ರಂಗನಾಥನಾಯಕ್ ಎಂ. ಲಕ್ಷ್ಮೀ ನಾರಾಯಣರಾವ್. ಎ.ಎ. ದೊರೆಸ್ವಾಮಿ ಐಯ್ಯಂಗಾರ್, ಎಸ್. ಸುಬ್ಬಯ್ಯ, ಜಿ.ಆರ್. ಸ್ವಾಮಿ, ಅಗರಂ ರಂಗಯ್ಯ, ಕೆ. ಪುಟ್ಟಸ್ವಾಮಿ, ಸಾಹುಕಾರ ಚನ್ನಯ್ಯ ಮೊದಲಾದ ಸ್ವಾತಂತ್ರ್ಯ ಹೋರಾಟಗಾರರನ್ನು ನೆನೆಯಬಹುದು.

ಮೈಸೂರು ಜಿಲ್ಲೆಯ ಪ್ರಮುಖ ಜನನಾಯಕರೆಂದರೆ ಹೆಚ್.ಸಿ. ದಾಸಪ್ಪ, ಟಿ. ಮರಿಯಪ್ಪ, ಸಾಹುಕಾರ ಚನ್ನಯ್ಯ, ಡಿ. ದೇವರಾಜ ಅರಸು, ಬಿ. ರಾಚಯ್ಯ, ಹೆಚ್.ಎಂ. ಚನ್ನಬಸಪ್ಪ, ಎನ್. ರಾಚಯ್ಯ, ಟಿ.ಎನ್. ನರಸಿಂಹಮೂರ್ತಿ, ಎಂ.ಎಸ್. ಗುರುಪಾದಸ್ವಾಮಿ, ಹೆಚ್.ಡಿ. ತುಳಸೀದಾಸಪ್ಪ, ಎನ್. ಶಂಕರಯ್ಯ, ಎಸ್.ಎಂ. ಸಿದ್ಧಯ್ಯ, ಶ್ರೀಕಂಠದತ್ತ ನರಸಿಂಹರಾಜ ಒಡೆಯರ್, ಎಂ. ರಾಜಶೇಖರಮೂರ್ತಿ, ಸಿ.ಹೆಚ್. ವಿಜಯಶಂಕರ, ಡಿ.ಎಂ. ಸಿದ್ಧಯ್ಯ, ಹೆಜ್ಜಿಗೆ ಲಿಂಗಣ್ಣಯ್ಯ, ಬಿ. ನಾರಾಯಣಸ್ವಾಮಿ, ಶಿವನಂಜೇಗೌಡ, ಕೆ. ಸೂರ್ಯನಾರಾಯಣರಾವ್, ಎ. ಮಹಮ್ಮದ್ ಸೇಟ್, ಕೆ. ಪುಟ್ಟಸ್ವಾಮಿ, ಬಿ.ಕೆ. ಪುಟ್ಟಯ್ಯ, ಅಜೀಜ್‌ಸೇಠ್, ಹೆಚ್. ಕೆಂಪೇಗೌಡ, ಹೆಚ್. ಗಂಗಾಧರನ್, ಸಿದ್ದರಾಮಯ್ಯ, ವೇದಾಂತ ಹೆಮ್ಮಿಗೆ, ಕೆಂಪೀರೇಗೌಡ, ಪಿ.ಎಂ. ಚಿಕ್ಕಬೋರಯ್ಯ, ಕೆ.ಎನ್. ಸೋಮಸುಂದರಮೂರ್ತಿ, ಕೆ. ಹರ್ಷಕುಮಾರಗೌಡ, ಎ. ರಾಮದಾಸ, ಶಂಕರಲಿಂಗೇಗೌಡ, ಹೆಚ್. ವಿಶ್ವನಾಥ್, ಹೆಚ್.ಎಸ್. ಪ್ರೇಮಕುಮಾರ್, ಡಿ. ಕರಿಯಪ್ಪಗೌಡ, ಚಂದ್ರಪ್ರಭಾ ಅರಸ್, ಬಿ.ಎಸ್. ಕೆಂಪೇಗೌಡ, ಸುಶೀಲಾ ಚೆಲುವರಾಜು, ಪೀರಣ್ಣ, ಸಂಜಪ್ಪ, ಕೆ.ಬಿ. ಶಿವಯ್ಯ, ಎಂ. ಮಹಾದೇವ, ಡಾ॥ ಭಾರತೀಶಂಕರ್, ಹೆಚ್.ಎಲ್. ತಿಮ್ಮೇಗೌಡ, ಎಂ. ಶಿವಣ್ಣ, ಕಾಳಮರಿಗೌಡ, ಮಾರುತಿರಾವ್‌ಪವಾರ್, ಹೆಚ್.ಸಿ. ಬಸವರಾಜ್, ವೆಂಕಟೇಶ್ ಹಾಗೂ ಪಾಪಣ್ಣ ಮುಂತಾದವರು.

## ಉಪ್ಪಾರ ಸಮಾಜ

ಮೈಸೂರು ಜಿಲ್ಲೆಯಲ್ಲಿ ಉಪ್ಪಾರ ಜನಾಂಗ ಗಣನೀಯ ಸಂಖ್ಯೆಯಲ್ಲಿದ್ದಾರೆ. ಟಿ. ನರಸೀಪುರ, ಕನ್ನಳ್ಳಿಮೋಳೆ, ಕೊತ್ತೇಗಾಲ, ಬಾಗಳಿ, ಹೊಸಮೋಳೆ, ಕೇತುಪುರ, ಮಾದಪುರ, ಮಾವಿನಹಳ್ಳಿ, ಹೆಮ್ಮಿಗೆ, ಕಾವೇರಿಪುರ, ಮೂಡಲಹುಂಡಿ, ಮಾಲಂಗಿ, ಕೃಷ್ಣಪುರ, ದೊಡ್ಡಬಾಗಿಲುಮೋಳೆ, ಕೊಳತೂರು, ಮೂಗೂರು, ಹೊಸಕೋಟೆಮೋಳೆ, ಕಟ್ಟೆಹುಂಡಿ,

ಕೆಂಪಯ್ಯನಹುಂಡಿ, ಹೊಸ ಕೆಂಪಯ್ಯನ ಹುಂಡಿ, ಮೂಗೂರು ಮೋಳೆ, ಬನ್ನೂರು, ರಂಗಾಚಾರಿ ಹುಂಡಿ, ನೀಗೋಡಪುರ, ಕಲಿಯೂರು (ಜೋಡಿ), ತುಂಬಲ ಭೂಗತಗಳ್ಳಿ, ರಂಗನಾಥಪುರ, ವಾಟಾಳು ಹಾಗೂ ಚಾಮರವಳ್ಳಿ ಇತ್ಯಾದಿ. ಟಿ. ನರಸೀಪುರದ ಮೂವತ್ತೊಂದು ಹಳ್ಳಿಗಳಲ್ಲಿ 25,000 ಜನ ಉಪ್ಪಾರರಿದ್ದಾರೆ ಹಾಗೂ 4,545 ಉಪ್ಪಾರ ಕುಟುಂಬಗಳಿವೆ.

ಇದರಲ್ಲಿ ಎಸ್‌ಎಸ್‌ಎಲ್‌ಸಿ ಪಾಸು ಮಾಡಿದವರು 118 ಜನ. ಅವರಲ್ಲಿ ಒಬ್ಬರು ತಾಂತ್ರಿಕ ಪದವಿ ಪಡೆದಿದ್ದಾರೆ. 13 ಜನ ವಿವಿಧ ಪದವಿಗಳನ್ನು ಗಳಿಸಿದ್ದಾರೆ. ಉಪ್ಪಾರ ಜನಾಂಗದಲ್ಲಿ ಶೇ. 53.68ರಷ್ಟು ಸಾಕ್ಷರತೆ ಗುರುತಿಸಬಹುದು. ವಿಶೇಷವಾಗಿ ಮಹಿಳೆಯರಲ್ಲಿ ಸಾಕ್ಷರತೆಯ ಪ್ರಮಾಣ ಕಡಿಮೆ.

ಈ ತಾಲ್ಲೂಕಿನಲ್ಲಿ ಸರ್ಕಾರಿ ಸೌಕರಿಯಲ್ಲಿ 16 ಉಪ್ಪಾರರಿದ್ದಾರೆ. ವಿವಿಧ ಖಾಸಗಿ ಕಂಪನಿಗಳಲ್ಲಿ 59ಜನ ನೌಕರಿ ಮಾಡುತ್ತಿದ್ದಾರೆ. ಪದವಿ ಹಾಗೂ ಇತರ ವಿದ್ಯಾರ್ಹತೆ ಇದ್ದರೂ ಸೂಕ್ತ ಕೆಲಸ ದೊರೆಯದ 251 ನಿರುದ್ಯೋಗಿಗಳಿದ್ದಾರೆ. ಏಳು ಎಕರೆಗಿಂತ ಹೆಚ್ಚಿಗೆ ಜಮೀನು ಹೊಂದಿರುವ 36 ಉಪ್ಪಾರ ಕುಟುಂಬಗಳು ಇವೆ. ಮೂರು ಎಕರೆಗಿಂತ ಕಡಿಮೆ ಜಮೀನು ಹೊಂದಿರುವ 595 ಉಪ್ಪಾರ ಕುಟುಂಬಗಳಿವೆ. 15,019 ಜನ ಬಡತನ ರೇಖೆಗಿಂತ ಕೆಳಮಟ್ಟದಲ್ಲಿದ್ದಾರೆ. ಇನ್ನುಳಿದ ಉಪ್ಪಾರ ಕುಟುಂಬಗಳು ಕೆಳ ಹಾಗೂ ಮಧ್ಯಮ ವರ್ಗದವರಾಗಿದ್ದಾರೆ.

ಟಿ. ನರಸೀಪುರ ತಾಲ್ಲೂಕಿನಲ್ಲಿ 61 ಉಪ್ಪಾರ ಕುಟುಂಬಗಳು ಸಣ್ಣ ಪುಟ್ಟ ವ್ಯಾಪಾರ ವೃತ್ತಿಯನ್ನು ಅವಲಂಬಿಸಿವೆ. ಒಟ್ಟಾರೆ ತಾಲ್ಲೂಕಿನ ಉಪ್ಪಾರರು ಆರ್ಥಿಕವಾಗಿ ಸದೃಢವಾಗಿಲ್ಲ. ಆದರೆ ಕಷ್ಟ ಸಹಿಷ್ಣುಗಳು, ಹೋರಾಟದ ಬದುಕು ಸಾಗಿಸುತ್ತಿರುವ ಶ್ರಮಜೀವಿಗಳು.

ಪ್ರಸ್ತುತ ಈ ತಾಲ್ಲೂಕಿನಲ್ಲಿ 24 ಜನ ಗ್ರಾಮಪಂಚಾಯಿತಿ ಸದಸ್ಯರುಗಳಿದ್ದಾರೆ. ಹಾಗೆಯೇ ಒಬ್ಬರು ತಾಲ್ಲೂಕು ಪಂಚಾಯಿತಿ ಸದಸ್ಯರಿದ್ದಾರೆ. ತಾಲ್ಲೂಕು ಆಶ್ರಯ ಸಮಿತಿಯಲ್ಲಿ ಈ ಜನಾಂಗದ ಒಬ್ಬರು ಸದಸ್ಯರಿದ್ದಾರೆ. ರಾಜಕೀಯ ಜಾಗೃತಿಯ ಅಭಾವ ಈ ತಾಲ್ಲೂಕಿನ ಉಪಾರರಲ್ಲಿ ಎದ್ದುಕಾಣುತ್ತದೆ. ಇಪ್ಪತ್ತೈದು ಸಾವಿರಕ್ಕೂ ಹೆಚ್ಚಿನ ಮತದಾರರಿರುವ ಈ ಕ್ಷೇತ್ರದಲ್ಲಿ ಉಪ್ಪಾರ ಜನಾಂಗಕ್ಕೆ ಸಂಬಂಧಪಟ್ಟಂತೆ ಒಬ್ಬ ಜಿಲ್ಲಾ ಪಂಚಾಯತ್ ಸದಸ್ಯರಿಲ್ಲವೆಂದರೆ ಅಲ್ಲಿನ ಸ್ಥಿತಿ ಯಾರಿಗಾದರೂ ಅರಿವಾಗುತ್ತದೆ. ಇದು ಮೀಸಲು ಕ್ಷೇತ್ರವಾದ ಕಾರಣ ಉಪ್ಪಾರ ಜನಾಂಗದ ನಾಯಕರು ಅಷ್ಟಾಗಿ ಮೂಡಿಬಂದಿಲ್ಲ.

ಈ ತಾಲ್ಲೂಕಿನ ಕಾವೇರಿಪುರದ ಮರಿಸ್ವಾಮಿ, ಕೃಷ್ಣಪುರದ ಮರಿಸ್ವಾಮಿ, ಬಸವಸೆಟ್ಟಿ, ಕೆ.ಎಂ. ಬಸವರಾಜು, ದೊಡ್ಡಬಾಗಿಲುಮೋಳೆಯ ಬಿ. ಪುಟ್ಟಸ್ವಾಮಿ, ಆಚಾರಯ್ಯನಹುಂಡಿಯ ವೆಂಕಟಸೆಟ್ಟಿ, ಹಲವಾರದ ದೊಡ್ಡ ಮಾದಸೆಟ್ಟಿ, ತೊಳ್ಳತ್ತೂರು ಸೆಟ್ಟಯ್ಯ, ರಂಗನಾಥಪುರದ ಮಹದೇವಸೆಟ್ಟಿ, ತುಂಬಲಿ ಗ್ರಾಮದ ಮಹದೇವಸೆಟ್ಟಿ, ಹೊಸಕೆಂಪಯ್ಯನಹುಂಡಿಯ ಎಸ್.

ಭೀಮಸೆಟ್ಟಿ, ರಾಯರಹುಂಡಿಯ ಹುಲಿಮಾದಸೆಟ್ಟಿ, ಅಳಿಕೆಂಪಯ್ಯನ ಹುಂಡಿಯ ಅಮಾಸೆಸೆಟ್ಟಿ, ಪಚ್ಚಾರಿನ ಕಾಮಸೆಟ್ಟಿ, ಗಾಡಿ ಜೋಗಿಹುಂಡಿಯ ಮಾದಸೆಟ್ಟಿ, ತೊಟ್ಟಿವಾಡಿಯ ಸಿದ್ದಸೆಟ್ಟಿ, ಮಾವಿನಹಳ್ಳಿಯ ಮಹಾದೇವಸೆಟ್ಟಿ, ತರುಪಟ್ಟಿಯ ಕಾಮಸೆಟ್ಟಿ, ಪಾಟಾಳದ ಮಾದಸೆಟ್ಟಿ ಮುಂತಾದವರು ಆ ಸಮಾಜದ ಪ್ರಮುಖರು ಹಾಗೂ ಹಿತಚಿಂತಕರು.

ಪಿರಿಯಾಪಟ್ಟಣ ತಾಲ್ಲೂಕಿನ ಪಿರಿಯಾಪಟ್ಟಣ ಟೌನ್, ಮಾಗಳಿ, ಬೇಗೂರು, ಕೋಗಿಲವಾಡಿ, ಚೌಡೇನಹಳ್ಳಿ, ಕಂದೇಗಾಲ, ಜೆ. ಬಸವನಹಳ್ಳಿ, ಬೆಕ್ಕರೆ, ಕೋಮಲಾಪುರ, ಭುವನಹಳ್ಳಿ, ಕೂರ್ಗಲ್, ಹೊನ್ನಾಪುರ, ಹೊಸೂರಮೋಳೆ, ಬೆಟ್ಟದಪುರ, ಅರಳೀಮರದ ಕೊಪ್ಪಲು, ಹರದೂರು, ಮಾಕೋಡು, ಕರನೆಲ್ಲಿ, ಸೀಗರಗಟ್ಟ, ಹಿಟ್ನಳ್ಳಿ, ಹಿಟ್ನೆಹೆಬ್ಬಾಗಿಲು, ಎಂ. ಶೆಟ್ಟಿಹಳ್ಳಿ, ಮಲ್ಲರಾಜಪಟ್ಟಣ, ಬಾಳೆಕಟ್ಟೆ, ಅಬ್ಬಳತಿ, ವಡ್ಡರಕೇರಿ, ಕಣಗಾಲು, ತಿರುಮಲಾಪುರ, ಚನ್ನಕೇಶವಪುರ, ಕೋಗಿಲೂರು ಹಾಗೂ ಕಗ್ಗುಂಡಿ (ಬೋಡ್)ಗಳಲ್ಲಿ ಉಪ್ಪಾರರು ಗಣನೀಯ ಸಂಖ್ಯೆಯಲ್ಲಿದ್ದಾರೆ. ಮೇಲೆ ನಮೂದಿಸಿದ ಗ್ರಾಮಗಳಲ್ಲಿ 7750 ಉಪ್ಪಾರ ಕುಟುಂಬಗಳಿದ್ದು 42,755 ಜನರಿದ್ದಾರೆ. ಪಿರಿಯಾಪಟ್ಟಣದಲ್ಲಿ 108 ಸರ್ಕಾರಿ ನೌಕರರು ಉಪ್ಪಾರ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಸಾಕ್ಷರತೆ ಕೂಡಾ ಜಿಲ್ಲೆಯ ಸರಾಸರಿಗಿಂತ ಕಡಿಮೆಯಿದೆ. ಶೇ. 90ಕ್ಕಿಂತ ಅಧಿಕ ಜನ ವ್ಯವಸಾಯ ವೃತ್ತಿ ಅವಲಂಬಿಸಿದ್ದಾರೆ. ಆರ್ಥಿಕವಾಗಿ ಕೆಳಹಂತದಲ್ಲಿದ್ದಾರೆ.

ಮೈಸೂರು ಜಿಲ್ಲೆ ಹಾಗೂ ಪಿರಿಯಪಟ್ಟಣ ತಾಲ್ಲೂಕಿನಲ್ಲಿ ಉಪ್ಪಾರ ಜನಾಂಗದ ಸಂಘಟನೆ ಮಾಡಿದ ಕೀರ್ತಿ ದಿ|| ಡಾ|| ಕೆ.ಆರ್. ತಮ್ಮಯ್ಯನವರಿಗೆ ಸಲ್ಲಬೇಕು. ತಮ್ಮ ಜೀವನದುದ್ದಕ್ಕೂ ಸಮಾಜದ ಬಗ್ಗೆ ಶ್ರದ್ಧೆ ಹಾಗೂ ಕಳಕಳಿಯಿಂದ ಸಮಾಜವನ್ನು ಮೇಲಕ್ಕೆತ್ತುವ ಅವಿರತ ಪ್ರಯತ್ನ ಮಾಡಿದರು. ಪಿರಿಯಪಟ್ಟಣದಿಂದ ವಿಧಾನಸಭೆಗೆ ಅವರು 1983ರಲ್ಲಿ ಸ್ಪರ್ಧಿಸಿದ್ದರು. ಅವರ ಜೇಷ್ಠ ಪುತ್ರಿ ಪದ್ಮಲತಾ ಮೈಸೂರು ಜಿಲ್ಲಾ ಪರಿಷತ್ತಿಗೆ ಆಯ್ಕೆಯಾಗಿ ಸ್ಥಾಯಿ ಸಮಿತಿಯೊಂದರ ಅಧ್ಯಕ್ಷರಾಗಿದ್ದರು.

ಈ ತಾಲ್ಲೂಕಿನ ಕೆ.ಆರ್. ಮಲ್ಲಯ್ಯ, ಚೌಡೇನಹಳ್ಳಿ ಲಕ್ಕಣ್ಣ, ಪಿ.ಕೆ. ತಿಮ್ಮಯ್ಯ, ಪಿ.ಎಸ್. ವಿಷಕಂಠಯ್ಯ, ಪಿ.ಆರ್. ರಾಮಣ್ಣ, ಹೆಚ್.ಜೆ. ಚೌಡೇಗೌಡ, ಪಿ.ಟಿ. ವೇಣುಗೋಪಾಲ, ಕಳಸಪ್ಪ, ಸಣ್ಣಮೊಗಯ್ಯ, ಹೆಚ್.ಜೆ. ವೀರಪ್ಪ, ಕೃಷ್ಣೇಗೌಡ, ಪಟೇಲ ಕೆ.ಎಲ್. ನಿಂಗಪ್ಪ, ಪುಟ್ಟೇಗೌಡ, ಸಣ್ಣಪ್ಪ, ಪಟೇಲ ಅಣ್ಣೇಗೌಡ, ಮಲ್ಲೇಗೌಡ, ಶಿವಣ್ಣ, ಸೋಮೇಗೌಡ, ಕೆ.ಎಸ್. ಶಿವಣ್ಣ, ಹುಚ್ಚೇಗೌಡ, ಬೈರೇಗೌಡ ಚಿಕ್ಕವಡ್ಡರಕೇರಿ ಶಿವಣ್ಣ, ಗೋಪಾಲ, ಮಾಳಪ್ಪ ಮುಂತಾದವರು ಉಪ್ಪಾರ ಸಮಾಜದ ಪ್ರಮುಖರು ಹಾಗೂ ಹಿತಚಿಂತಕರು. ಕೆ.ಆರ್. ಮಲ್ಲಯ್ಯ ತಾಲ್ಲೂಕು ಉಪ್ಪಾರ ಸಂಘದ ಅಧ್ಯಕ್ಷರು. ತಾಲ್ಲೂಕಿನಲ್ಲಿ ಉಪ್ಪಾರ ವಿದ್ಯಾರ್ಥಿನಿಲಯಗಳಿಲ್ಲ. ಪಿರಿಯಾಪಟ್ಟಣದಲ್ಲಿ ಸಂಸದರ ನಿಧಿ ಸಹಾಯದಿಂದ ಒಂದು ಸಮುದಾಯ ಭವನ ಕಟ್ಟಿದ್ದಾರೆ.

ನಂಜನಗೂಡು ತಾಲ್ಲೂಕಿನ ಹಳ್ಳದಕೇರಿ, ನಂಜನಗೂಡು ಟೌನ್, ಕುರುಬಗೇರಿ, ಗೂಳೂರು, ಚಾಮಲಾಪುರಹುಂಡಿ, ಕಲ್ಲಹಳ್ಳಿ, ಬ್ಯಾಳಾರು, ಮೊಬ್ಬಳ್ಳಿ, ಹೆಗ್ಗಡಹಳ್ಳಿ, ಶಿರಮಳ್ಳಿ, ಹುಲ್ಲಹಳ್ಳಿ, ಆಕಲ, ಹುಸ್ಕೂರ್, ಹಗಿದಾಳು, ಅಂಬಳೆ, ಕೆಲ್ಲೂಪುರ, ಹಾಡ್ಯ, ಮಡುವಿನಹಳ್ಳಿ, ಹಂಚಿಪುರ, ಹರೂರು, ಮಾಕನಪುರ, ಕಸುವಿನಹಳ್ಳಿ, ಸೂರಳ್ಳಿ, ಹುಣಸನಾಳು, ಕರಳಪುರ, ಗೊಣತಗಾಲ, ಕೆಜ್ಜೀಪುರ, ಹೊಸೂರು, ಹೊಸಹಳ್ಳಿ ಹಾಗೂ ಹೊನ್ನಗೇರಿ ಮುಂತಾದ ನಂಜನಗೂಡು ವಿಧಾನಸಭಾ ಕ್ಷೇತ್ರಕ್ಕೆ ಸೇರಿದ 30 ಗ್ರಾಮಗಳಲ್ಲಿ ಉಪ್ಪಾರ ಜನಸಂಖ್ಯೆ ಗಣನೀಯವಾಗಿದೆ.

ನಂಜನಗೂಡು ತಾಲ್ಲೂಕಿನ ಟಿ. ನರಸೀಪುರ ವಿಧಾನಸಭಾ ಕ್ಷೇತ್ರಕ್ಕೆ ಸೇರಿದ ಈ ಕೆಳಕಂಡ ಗ್ರಾಮಗಳಲ್ಲಿ ಉಪ್ಪಾರ ಕುಟುಂಬಗಳು ಯಥೇಚ್ಛ ಸಂಖ್ಯೆಯಲ್ಲಿವೆ. ಈ ಗ್ರಾಮಗಳು, ಇಮ್ಮಾವುಹುಂಡಿ, ಹದಿನಾರು ಮೋಳೆ, ಹೊಸಕೋಟೆ, ಗೆಜ್ಜಗನಹಳ್ಳಿ, ಹರೇಪುರ, ಬಿಳಗಲಿ, ಆಲಂಬೂರು, ತಗಡೂರು (ತೆಂಕಲಗೇರಿ), ತಗಡೂರು (ಬಡಗಲಕೇರಿ), ಮಡಹಳ್ಳಿ, ಆಳಗಂಚಿ ಮುಂತಾದವುಗಳು.

ನಂಜನಗೂಡು ತಾಲ್ಲೂಕು ಸಂತೇಮರಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಸೇರಿದ ಈ ಕೆಳಕಂಡ ಗ್ರಾಮಗಳಲ್ಲಿ ಉಪ್ಪಾರ ಕುಟುಂಬಗಳು ಗಣನೀಯ ಸಂಖ್ಯೆಯಲ್ಲಿವೆ. ಹೆಮ್ಮರಗಾಲ, ಹೆಡತಲೆ, ಮಾಡ್ರಹಳ್ಳಿ, ಕೂಡ್ಲಾಪುರ, ಬಾಗೂರು, ತರದಲೆ, ನೇರಳೆ, ಹಳೇಪುರ, ಗಟ್ಟವಾಡಿ, ಗಟ್ಟವಾಡಿಪುರ, ತೊರಳ್ಳಿ, ತೊರಳ್ಳಿಮೋಳೆ ಮುಂತಾದವುಗಳು.

ನಂಜನಗೂಡು ತಾಲ್ಲೂಕಿನಲ್ಲಿ ಸುಮಾರು 25,636 ಉಪ್ಪಾರ ಕುಟುಂಬಗಳು ಕಾಣಬರುತ್ತವೆ. ಅವುಗಳಲ್ಲಿ 1,41,000 ಉಪ್ಪಾರ ಜನಸಂಖ್ಯೆ ಇದೆ ಎಂದು ಇತ್ತೀಚಿನ ಸಮೀಕ್ಷೆಯೊಂದರಿಂದ ತಿಳಿದುಬರುತ್ತದೆ. ಅಲ್ಲದೆ ನಂಜನಗೂಡು ತಾಲ್ಲೂಕಿನಲ್ಲಿ ಸುಮಾರು 75,273 ಜನ ಉಪ್ಪಾರ ಮತದಾರರಿದ್ದು, ಅದರಲ್ಲಿ 26,112 ಜನ ಮತದಾರರು ನಂಜನಗೂಡು ವಿಧಾನಸಭಾ ಕ್ಷೇತ್ರಕ್ಕೆ ಸೇರಿದವರಾಗಿದ್ದು, ಇನ್ನುಳಿದ 49,000 ಮತದಾರರು ಟಿ. ನರಸೀಪುರ ಹಾಗೂ ಸಂತೆಮರಳ್ಳಿ ಕ್ಷೇತ್ರಕ್ಕೆ ಸೇರಿದವರಾಗಿದ್ದಾರೆ. ನಂಜನಗೂಡು ಕ್ಷೇತ್ರದಲ್ಲಿ ಇಷ್ಟು ಪ್ರಮಾಣದಲ್ಲಿ ಮತದಾರರಿದ್ದರೂ ಸಂಘಟನೆಯ ಹಾಗೂ ರಾಜಕೀಯ ಪ್ರಜ್ಞೆಯ ಕೊರತೆಯಿಂದಾಗಿ ನ್ಯಾಯವಾಗಿ ಉಪ್ಪಾರರಿಗೆ ಸಿಗಬೇಕಾದ ರಾಜಕೀಯ ಅವಕಾಶಗಳು ಸಿಕ್ಕುತ್ತಿಲ್ಲ. ಇನ್ನು ಟಿ. ನರಸಿಪುರ ಹಾಗೂ ಸಂತೇಮರಳ್ಳಿ ಕ್ಷೇತ್ರಗಳು ಮೀಸಲು ಕ್ಷೇತ್ರಗಳಾಗಿದ್ದು ಅಲ್ಲಿಯೂ ಕೂಡ ಇವರು ಅವಕಾಶಗಳಿಂದ ವಂಚಿತರಾಗಿದ್ದಾರೆ. ಒಂದೇ ತಾಲ್ಲೂಕಿನಲ್ಲಿ 70 ಸಾವಿರಕ್ಕಿಂತಲೂ ಹೆಚ್ಚು ಮತದಾರರಿದ್ದು ಮೀಸಲಾತಿ ನೆಪದಿಂದಾಗಿ ಉಪ್ಪಾರ ಮತಗಳು ಒಡೆದು, ಅವರು ರಾಜಕೀಯ ಶಕ್ತಿಯಿಂದ ವಂಚಿತರಾಗಲು ಕಾರಣವಾಗಿದೆ.

ನಂಜನಗೂಡು ತಾಲ್ಲೂಕಿನಲ್ಲಿ ಉಪ್ಪಾರರನ್ನು ಮೇಲುಸಕ್ಕರೆ ಉಪ್ಪಾರರು, ಉಪ್ಪಾರ ಸೆಟ್ಟರು, ಉಪ್ಪಲಿಗಸೆಟ್ಟರು ಎಂದು ಕರೆಯಲಾಗುತ್ತದೆ.

ಈ ತಾಲ್ಲೂಕಿನಲ್ಲಿ ಮಾಜಿ ತಾಲ್ಲೂಕು ಪಂಚಾಯ್ತಿ ಸದಸ್ಯರು ಹಾಗೂ ತಾಲ್ಲೂಕು ಉಪ್ಪಾರ ಸಂಘದ ಅಧ್ಯಕ್ಷರಾದ ಹೆಚ್.ಎಸ್. ಮೂಗಸೆಟ್ಟಿ, ನಂಜನಗೂಡಿನ ಕಂಟ್ರಾಕ್ಟರ್ ಮಸಣಸೆಟ್ಟಿ, ಗೂಳೂರು ಮಹಾದೇವು, ಹಳ್ಳದಕೇರಿ ಶ್ರೀಕಂಠಮೂರ್ತಿ, ಚಾಮ್ಲಾಪುರ ಹುಂಡಿಯ ನಿಂಗಪ್ಪ, ಪಾಪಣ್ಣ, ಹಳ್ಳದಕೇರಿ ಶಂಕರ, ಹೆಮ್ಮರಗಾಲದ ಮರಿಸೆಟ್ಟಿ, ಆಲಂಬೂರ ಮಸಣಸೆಟ್ಟಿ, ಕಳಲೆ ಪಂಚಾಯ್ತಿ ಚೇರಮನ್ ಚಿಕ್ಕವೀರಸೆಟ್ಟಿ, ಆಲಂಬೂರ ಬಸವಸೆಟ್ಟಿ, ಕರಳಪುರ ರಾಜಸೆಟ್ಟಿ ಮುಂತಾದವರು ಸಮಾಜದ ಮುಖಂಡರು ಹಾಗೂ ಹಿತಚಿಂತಕರು. ನಂಜನಗೂಡು ಟೌನಿನಲ್ಲಿ ಒಂದು ವಿದ್ಯಾರ್ಥಿನಿಲಯವಿದ್ದು, ಅದು ದಿ|| ಜಿ. ಗೋವಿಂದರಾಯ, ಮಸಣಸೆಟ್ಟಿ ಮುಂತಾದವರ ಪ್ರಯತ್ನದ ಫಲವಾಗಿ ಪ್ರಾರಂಭವಾಗಿದೆ. ನಂಜನಗೂಡು ಟೌನಿನಲ್ಲಿ ಈ ಸಮಾಜಕ್ಕೆ ಸೇರಿದ ಒಂದು ಛತ್ರ, ನಂಜುಂಡೇಶ್ವರ ದೇವಸ್ಥಾನದ ಹತ್ತಿರ ಇದೆ. ಚಾಮ್ಲಾಪುರ ಹುಂಡಿಯ ನಿಂಗಪ್ಪ ಮುನ್ಸಿಪಲ್ ಕೌನ್ಸಿಲರ್ ಆಗಿದ್ದರು.

ಕೆ.ಆರ್. ನಗರ ತಾಲ್ಲೂಕಿನ ಕೆ.ಆರ್. ನಗರ ಟೌನ್, ತಿಪ್ಪೂರು ಗ್ರಾಮ, ಕಾಟ್ನಾಳು, ಹಂಪಾಪುರ, ಮಿರ್ಲೆ, ಸಾಲಿಗ್ರಾಮ, ಹರದನಹಳ್ಳಿ, ಕುಪ್ಪಹಳ್ಳಿ, ರಾಮಪುರ, ಭೇರ್ಯ, ಮಂಜನಹಳ್ಳಿ, ಹಳೇಮಿರ್ಲೆ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 3,500ಕ್ಕಿಂತಲೂ ಅಧಿಕ ಉಪ್ಪಾರ ಕುಟುಂಬಗಳಿದ್ದು, 21,750 ಉಪ್ಪಾರ ಜನಸಂಖ್ಯೆ ಇದೆ.

ಈ ತಾಲ್ಲೂಕಿನಲ್ಲಿ ಉಪ್ಪಾರರನ್ನು 'ಸಗರ ಉಪ್ಪಾರ', 'ಮೇಲು ಸಕ್ಕರೆ ಉಪ್ಪಾರ' ಹಾಗೂ 'ಉಪ್ಪಲಿಗ' ಎಂಬ ಹೆಸರುಗಳಿಂದ ಕರೆಯುತ್ತಾರೆ. ಈ ತಾಲ್ಲೂಕಿನ ಉಪ್ಪಾರರು ಕನ್ನಡವನ್ನೇ ಬಳಸುತ್ತಾರೆ.

ಉಪ್ಪಾರರು ವಿಶೇಷವಾಗಿ ಕೃಷಿಯನ್ನೇ ಪ್ರಧಾನವೃತ್ತಿಯನ್ನಾಗಿ ಅವಲಂಬಿಸಿರುತ್ತಾರೆ. ಕೆಲವೆಡೆ ಗಾರೆ ಕೆಲಸದಲ್ಲಿ ಉಪ್ಪಾರರು ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ.

ಉಪ್ಪಾರರಲ್ಲಿ ಅನಕ್ಷರತೆ ದೊಡ್ಡ ಸಾಮಾಜಿಕ ದೋಷ, ಶೇ. 20ರಷ್ಟು .ಅಕ್ಷರಸ್ಥರು ಈ ಸಮಾಜದಲ್ಲಿರುತ್ತಾರೆ. ಮಹಿಳೆಯರ ಪ್ರಮಾಣ ಶೇ. 15 ಎಂದು ಹೇಳಲಾಗಿದೆ.

ಉಪ್ಪಾರರಲ್ಲಿ ಶೇ. 15ರಷ್ಟು ಕುಟುಂಬಗಳು ಮಧ್ಯಮ ದರ್ಜೆಯವರು. ಶೇ. 80ಕ್ಕಿಂತ ಹೆಚ್ಚಿನವರು ಬಡತನದ ರೇಖೆಗಿಂತ ಕೆಳಗಿರುತ್ತಾರೆ. ಶೇ. 5ರಷ್ಟು ಜನ ಆರ್ಥಿಕ ಸದೃಢತೆ ಹೊಂದಿದ್ದಾರೆ.

ಶ್ರೀಧರ ಹಾಗೂ ತಿಮ್ಮಶೆಟ್ಟಿ ಈ ಸಮುದಾಯಕ್ಕೆ ಸೇರಿದ ಇಂಜಿನಿಯರ್‌ಗಳಾಗಿದ್ದಾರೆ. ಕೆ.ಆರ್. ಶಿವಪ್ಪ ವಕೀಲರು, ಕೆ.ಆರ್. ನಗರದ ಡಾ|| ಕೆ.ಎಲ್. ರಾಮದಾಸ್ ಅವರು ಸುಪ್ರಸಿದ್ಧ ವೈದ್ಯರು. ಅವರು ಅಮೆರಿಕಾದಲ್ಲಿ ನೆಲೆಸಿರುತ್ತಾರೆ.

ಕೆ.ಆರ್. ನಗರದಲ್ಲಿ ದಿವಂಗತ ಯಾಲಕ್ಕಯ್ಯ ಸಾಮಾಜಿಕ ವಿದ್ಯಾರ್ಥಿ ನಿಲಯವಿದೆ. ಈ ಸಮುದಾಯಕ್ಕೆ ಸೇರಿದ ಶ್ರೀರಾಮಮಂದಿರವಿದೆ. ಪ್ರತಿದಿನ ಬೆಳಗ್ಗೆ ಸುಪ್ರಭಾತದಿಂದ

ಪೂಜೆ ಪ್ರಾರಂಭವಾಗಿ ವ್ಯವಸ್ಥಿತವಾಗಿ ನಡೆಯುತ್ತದೆ. ಅದರ ಪಕ್ಕದಲ್ಲಿರುವ ಕಲ್ಯಾಣಮಂಟಪವು ಸಾರ್ವಜನಿಕರ ಉಪಯೋಗಕ್ಕೆ ಬರುತ್ತಿದೆ.

ಕೆ.ಆರ್. ನಗರದಲ್ಲಿ 1962-63ರಿಂದಲೂ ಶ್ರೀಶೈಲದ ಸ್ವಾಮೀಜಿ ಮಾರ್ಗದರ್ಶನದಲ್ಲಿ ಪ್ರತಿವರ್ಷ ಭಗೀರಥ ಜಯಂತಿಯನ್ನು ಶ್ರದ್ಧಾಭಕ್ತಿಯಿಂದ ಆಚರಿಸಿಕೊಂಡು ಬರಲಾಗುತ್ತಿದೆ.

ಕೆ.ಆರ್. ನಗರದಲ್ಲಿ ಬಹಳ ಹಿಂದಿನಿಂದಲೂ ಉಪ್ಪಾರ ಸಂಘವಿದೆ. ಅದರ ಆಶ್ರಯದಲ್ಲಿ ಕಾರ್ಯಕಾರಿ ಸಮಿತಿಯಿದೆ. ವರ್ಷಕ್ಕೊಮ್ಮೆ ಜನಾಂಗದ ಮುಖಂಡರು ಹಾಗೂ ಕಾರ್ಯಕಾರಿ ಸಮಿತಿ ಸದಸ್ಯರು ಸಭೆ ಸೇರಿ ಚರ್ಚಿಸಿ ನಿರ್ಣಯಗಳನ್ನು ಕೈಗೊಳ್ಳುತ್ತಾರೆ. ಉಪ್ಪಾರಸಮುದಾಯದ ಆಗುಹೋಗುಗಳನ್ನು 'ಯಜಮಾನ', 'ಚಿಕ್ಕಯಜಮಾನ'ರು ನೋಡಿಕೊಳ್ಳುತ್ತಾರೆ.

ತಾಲ್ಲೂಕು ಉಪ್ಪಾರ ಸಂಘದ ಅಧ್ಯಕ್ಷರಾದ ಕೆ.ಬಿ. ಮಂಜುನಾಥ್ ಅವರು ಬಿ.ಕಾಂ. ಪದವೀಧರರು. ಕೆ.ಆರ್. ಸುರೇಶ್ ಕಾರ್ಯದರ್ಶಿಯಾಗಿದ್ದಾರೆ. ಇದರಲ್ಲಿ ಒಂಬತ್ತು ಜನರ ಕಾರ್ಯಕಾರಿ ಸಮಿತಿಯಿದೆ. ಈ ಸಂಘದ ಈಗಿನ ಯಜಮಾನರು ಶಂಕರಲಿಂಗಯ್ಯ ಮತ್ತು ಚಿಕ್ಕಯಜಮಾನರು ನಾರಾಯಣ.

ಹಿಂದಿನ ಅಧ್ಯಕ್ಷರು ಶ್ರೀಧರ ಜಯರಾಮ ಹಾಗೂ ಕಾರ್ಯದರ್ಶಿ ನಟರಾಜ ಮತ್ತು ಕೆ.ಎನ್. ಕೆಂಪಯ್ಯ. ಈ ಸಮುದಾಯಕ್ಕಿದ್ದ ಯಜಮಾನರುಗಳೆಂದರೆ ದಿವಂಗತ ವೈ.ವಿ. ರಾಮುಮಲ್ಲಯ್ಯ ಹಾಗೂ ಟಿ. ಪುಟ್ಟಣ್ಣ.

ಕೆ.ಆರ್. ಶಿವಪ್ಪ ಅವರ ಅಧ್ಯಕ್ಷತೆಯಲ್ಲಿ ಉಪ್ಪಾರ ಸಮಾಜದ ಮುಖಂಡರು ಅವಿರತವಾಗಿ ಶ್ರಮಿಸಿ 26 ಚ.ಅ. ಇರುವ ಉಪ್ಪಾರ ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸಿದ್ದಾರೆ. ಅದರ ನಿರ್ಮಾಣಕ್ಕೆ ಕೆ.ವಿ. ರಾಮು, ಕೆ.ಎನ್. ಕೆಂಪಯ್ಯ, ಯಾಲಕ್ಕಯ್ಯ ಅವರನ್ನೊಳಗೊಂಡಂತೆ ಅನೇಕರು ಸಹಾಯ ಹಸ್ತ ಚಾಚಿದ್ದಾರೆ. ಕೇಂದ್ರ ಉಪ್ಪಾರ ಸಂಘದ ಅಧ್ಯಕ್ಷರಾದ ಡಿ.ಎಸ್. ರಾಮಪ್ಪ ಅವರ ಅಧ್ಯಕ್ಷತೆಯಲ್ಲಿ ಜನಾಂಗದ ಜಗದ್ಗುರುಗಳಾದ ಪೂಜ್ಯಶ್ರೀಲೇಪಾಕ್ಷ ಸ್ವಾಮೀಜಿ ಅವರು ಕಟ್ಟಡದ ಉದ್ಘಾಟನೆ ಮಾಡಿದರು. ಅಂದಿನ ಕಾರ್ಯದರ್ಶಿಗಳಾದ ಎಂ. ಹನುಮಯ್ಯ ಈ ಸಮಾರಂಭದಲ್ಲಿ ಭಾಗವಹಿಸಿದ್ದರು.

ಕೆ.ಆರ್. ನಗರ ತಾಲ್ಲೂಕಿನಿಂದ ಟಿ. ಪುಟ್ಟಣ್ಣ ಹಾಗೂ ಶ್ರೀ ಕೆ.ಬಿ. ರುಕ್ಮಾಂಗದ ಎಂಬುವವರು ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಸ್ವಾತಂತ್ರ್ಯ ಯೋಧರಾಗಿದ್ದಾರೆ. ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾರಾಗೃಹವಾಸ ಅನುಭವಿಸಿದ ಇವರಿಗೆ ಕರ್ನಾಟಕ ಸರ್ಕಾರದಿಂದ ಮಾಸಿಕ ಗೌರವಧನ ಬರುತ್ತಿದೆ.

ಕೆ.ಆರ್. ನಗರದಲ್ಲಿ ಪುರಸಭೆಯ ಉಪಾಧ್ಯಕ್ಷರಾಗಿ ವೈ.ಟಿ. ತಿರುಮಲಯ್ಯ ಸೇವೆ ಸಲ್ಲಿಸಿರುತ್ತಾರೆ. ವೈ.ಎಸ್. ಲಿಂಗಯ್ಯ ಎರಡು ಭಾರಿ ಪುರಸಭೆಯ ಅಧ್ಯಕ್ಷರಾಗಿ ಸೇವೆ

ಸಲ್ಲಿಸಿರುತ್ತಾರೆ. ವೈ.ಕೆ. ಖಂಡಯ್ಯ, ಕೆ.ಎಲ್. ಶಂಕರಲಿಂಗಯ್ಯ ಅವರು ಪುರಸಭೆಯ ಸದಸ್ಯರಾಗಿ ಸೇವೆ ಮಾಡಿರುತ್ತಾರೆ. ನಟರಾಜ ಪುರಸಭೆಯ ಉಪಾಧ್ಯಕ್ಷರಾಗಿ ಸೇವೆ ಮಾಡಿದ್ದಾರೆ. ಕೆ.ಆರ್. ನಗರ ತಾಲ್ಲೂಕಿನ ವಿವಿಧ ಗ್ರಾಮ ಪಂಚಾಯಿತಿಗಳಲ್ಲಿ ಕೆಲವು ಉಪ್ಪಾರ ಮಹಿಳೆಯರು ಚುನಾಯಿತರಾಗಿ ಸೇವೆ ಸಲ್ಲಿಸಿದ್ದಾರೆ.

ಕೆ.ಆರ್. ನಗರದ ಪತ್ರಕರ್ತ ಕೆ.ಟಿ. ಮಂಜುನಾಥ್ ಉಪ್ಪಾರ ಸಮುದಾಯದವರು. ಇವರು 'ನಗರ ದೂತ' ಎಂಬ ದಿನಪತ್ರಿಕೆಯನ್ನು ಕಳೆದ 14 ವರ್ಷಗಳಿಂದಲೂ ತಾವೇ ಸಂಪಾದಕರಾಗಿ ನಡೆಸಿಕೊಂಡು ಬರುತ್ತಿದ್ದಾರೆ!

1988ರಲ್ಲಿ 'ಎಡತೊರೆ' ಪತ್ರಿಕೆಯನ್ನು ತಾವೇ ಸಂಪಾದಕರಾಗಿ ಪಿ. ಸೋಮಶೇಖರ್ ಪ್ರಾರಂಭಿಸಿದ್ದರು. ಸುಮಾರು ಎರಡು ವರ್ಷಗಳ ಕಾಲ ಈ ಪತ್ರಿಕೆ ನಡೆಯಿತು.

ಕೆ.ಆರ್. ನಗರದಲ್ಲಿ ಉಪ್ಪಾರ ಜನಾಂಗದ ನಾಟಕ ಮಂಡಳಿಯೊಂದು ಅಸ್ತಿತ್ವದಲ್ಲಿದೆ. ಇವರು ಪ್ರತಿವರ್ಷ ಪೌರಾಣಿಕ ನಾಟಕವನ್ನಾಡುತ್ತಾರೆ.

ಕೆ.ಆರ್. ನಗರದಲ್ಲಿ ಉಪ್ಪಾರರು ಬೇರೆ ತಾಲ್ಲೂಕುಗಳಿಗೆ ಹೋಲಿಸಿದರೆ ಒಂದಷ್ಟು ಪ್ರಗತಿ ಸಾಧಿಸಿದ್ದಾರೆ. ಕುರುಬ ಜನಾಂಗಕ್ಕೆ ಸೇರಿದ ಸ್ಥಳೀಯ ಶಾಸಕರಾದ, ಸಚಿವರಾದ ಹೆಚ್. ವಿಶ್ವನಾಥ್ ಅವರ ಮೇಲೆ ಈ ಉಪ್ಪಾರ ಜನಾಂಗವನ್ನು ಮುಂಚೂಣಿಗೆ ತರುವ ನೈತಿಕ ಜವಾಬ್ದಾರಿಯಿದೆ. ಎಲ್ಲಾ ಹಿಂದುಳಿದ ಸಂಘಟನೆ ಹಾಗೂ ಪ್ರಗತಿಯನ್ನು ಜೀವನದ ಗುರಿಯನ್ನಾಗಿಸಿಕೊಂಡಿರುವ ಹೆಚ್. ವಿಶ್ವನಾಥ್ ಅವರು ಸಕಾರಾತ್ಮವಾಗಿ ಸ್ಪಂದಿಸುತ್ತಾರೆಂಬ ನಿರೀಕ್ಷೆ ಈ ತಾಲ್ಲೂಕಿನ ಉಪ್ಪಾರ ಸಮುದಾಯದವರಿಗಿದೆ.

ಉಪ್ಪಾರ ಜನಾಂಗದ ಜಗದ್ಗುರುಗಳಾದ ಶ್ರೀ ಶ್ರೀ ಪುರುಷೋತ್ತಮಾನಂದಪುರಿ ಸ್ವಾಮೀಜಿ ಅವರು ಈ ತಾಲ್ಲೂಕಿಗೆ ಆಗಾಗ್ಗೆ ಭೇಟಿ ಕೊಟ್ಟು ಜನರನ್ನು ಸಂಘಟಿಸಬೇಕೆಂದು ಈ ಜನತೆ ತಮ್ಮ ಆಶಯವನ್ನು ವ್ಯಕ್ತಪಡಿಸುತ್ತಾರೆ. ಸ್ಥಳೀಯ ನಾಯಕತ್ವ ಬಲಗೊಳ್ಳಬೇಕೆಂಬ ಆಶಯ ಎಲ್ಲಾ ಬುದ್ಧಿಜೀವಿಗಳದು.

ಹುಣಸೂರು ತಾಲ್ಲೂಕಿನ ಹುಣಸೂರು ಟೌನ್, ಕಟ್ಟೆಮಳಲವಾಡಿ, ಮರೂರು, ಕೆರಗಲ್ಲು, ಕಲ್ಕುಣಿಕೆ, ಬಿಳಿಕೆರೆ ಹಾಗೂ ರಾಮಪಟ್ಟಣಗಳನ್ನೊಳಗೊಂಡಂತೆ 1250 ಉಪ್ಪಾರ ಕುಟುಂಬಗಳಿದ್ದು, ಅಲ್ಲಿ 7500 ಜನರಿದ್ದಾರೆ. ಉಪ್ಪಾರ ಜನಾಂಗಕ್ಕೆ ಸೇರಿದ ಮಸಣಸೆಟ್ಟಿ, ದೇವರಾಜ ಅರಸುರವರು ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲಿ ವಿಧಾನಪರಿಷತ್ ಸದಸ್ಯರಾಗಿದ್ದರು. ಅದಕ್ಕಾಗಿ ದೇವರಾಜ ಅರಸು ಅವರನ್ನು ಈ ತಾಲ್ಲೂಕಿನ ಜನ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಾರೆ. ಹುಣಸೂರು ತಾಲ್ಲೂಕಿನಲ್ಲಿ ಜನಾಂಗದ ಸಂಘಟನೆಯ ಎದ್ದು ಕಾಣುತ್ತದೆ.

ಹೆಗ್ಗಡದೇವನಕೋಟೆ ತಾಲ್ಲೂಕಿನ ಹೆಚ್.ಡಿ. ಕೋಟೆ ಟೌನ್, ನಾಗನಹಳ್ಳಿ, ತುಂಬಸೋಗೆ, ಮಾಗಲ್ಲು, ಕೆಂಚನಹಳ್ಳಿ, ಹಿರೇಹಳ್ಳಿ, ಸರಗೂರು, ಎಂ. ಕನ್ನೇನಹಳ್ಳಿ, ನಾಯ್ಕನಹುಂಡಿ,

(ಸಿದ್ರಾಮನಹುಂಡಿ), ಗೊಂತಗಾಲಹುಂಡಿ, ಸ್ವಾವೆ, ನೇರಳೆಹೊಸೂರು, ನೇರಳೆ, ಕೊತ್ತೆಗಾಲ ಗುಜ್ಜಪ್ಪನಹುಂಡಿ, ಚಾಮನಹಳ್ಳಿಹುಂಡಿ, ಕಾರೆಪುರ, ಸಿದ್ಧಯ್ಯನಗುಲ್ಲು ಹಾಗೂ ಮರೂರು ಮೊದಲಾದ ಗ್ರಾಮಗಳಲ್ಲಿ ಉಪ್ಪಾರ ಜನಾಂಗದವರಿದ್ದಾರೆ. ಈ ತಾಲ್ಲೂಕಿನಲ್ಲಿ 1,425 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 8,575 ಜನರಿದ್ದಾರೆ. ವಸ್ತುತಃ ಹೆಗ್ಗಡದೇವನಕೋಟೆ ಅತ್ಯಂತ ಹಿಂದುಳಿದ ತಾಲ್ಲೂಕು. ಅಂದಮೇಲೆ ಜನರ ಆರ್ಥಿಕ ಮಟ್ಟ ಹೇಳಿಕೊಳ್ಳುವಂತಹದು ಅಲ್ಲ. ಬಹುಮಟ್ಟಿನ ಉಪ್ಪಾರರು ಕೃಷಿಯನ್ನೇ ಮುಖ್ಯ ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಕೆಲವರು ಸಣ್ಣಪುಟ್ಟ ವ್ಯಾಪಾರವನ್ನು ಮಾಡಿಕೊಂಡಿದ್ದಾರೆ. ಶೇ. 80ರಷ್ಟು ಜನ ಕೂಲಿ ಕಾರ್ಮಿಕರು. ಸಾಕ್ಷರತೆಯ ಪ್ರಮಾಣ ಉಪ್ಪಾರ ಜನಾಂಗದಲ್ಲಿ ಶೇ. 10ರಷ್ಟು ಮಾತ್ರವೇ.

ಹೆಗ್ಗಡದೇವನಕೋಟೆಯ ಉಪ್ಪಾರ ಜನಾಂಗದಲ್ಲಿನ ವಿದ್ಯಾವಂತರ ಸ್ಥಿತಿಯನ್ನು ಕೆಳಗಿನ ವಿವರಗಳಿಂದ ತಿಳಿಯಬಹುದು.

ಎಸ್.ಎಸ್.ಎಲ್.ಸಿ. ಪಾಸಾದವರು 30, ಪಿ.ಯು.ಸಿ. 11, ಬಿ.ಎ. 4, ಬಿ.ಎಡ್.2, ಎಂ.ಎ. 2, ಎಂ.ಕಾಮ್. 11, ಟಿ.ಸಿ.ಹೆಚ್. 3, ಬಿ.ಇ. 1, ಡಿಪ್ಲೋಮಾ 1. ಇಡೀ ತಾಲ್ಲೂಕಿನಲ್ಲಿ ಇಷ್ಟೇ ಜನ ವಿದ್ಯಾವಂತರಿದ್ದರೆ ಜನಾಂಗದ ಸುಧಾರಣೆಯಾಗುವುದು ಹೇಗೆ ಸಾಧ್ಯ ?

ಉಪ್ಪಾರ ಸಮುದಾಯದಲ್ಲಿ ನಾಲ್ಕು ಪಿಡಬ್ಲ್ಯುಡಿ ಗುತ್ತಿಗೆದಾರರು, ಹತ್ತು ವಾಹನ ಚಾಲಕರು, ಹದಿನೈದು ಜನ ಸರ್ಕಾರಿ ನೌಕರರು, ಹತ್ತು ಜನ ವ್ಯಾಪಾರ ಹಾಗೂ ಐದು ಇತರೆ ವೃತ್ತಿಗಳನ್ನು ಅವಲಂಬಿಸಿರುತ್ತಾರೆ. ಒಟ್ಟಾರೆ ಆರ್ಥಿಕವಾಗಿ ಈ ತಾಲ್ಲೂಕಿನ ಉಪ್ಪಾರರು ಸಬಲರಲ್ಲ. ಸಂಘಟನೆಯ ವಿಚಾರದಲ್ಲಂತೂ ಈ ತಾಲ್ಲೂಕು ಅತ್ಯಂತ ಹಿಂದುಳಿದಿದೆ.

ನಿವೃತ್ತ ಇಂಜಿನಿಯರ್ ಹೆಬ್ಬೂರಯ್ಯ, ಹಿರೇಹಳ್ಳಿ ಸಿದ್ದಸೆಟ್ಟಿ, ನಾಗನಹಳ್ಳಿಯ ಕಳಸೇಗೌಡ, ಕುಂಸೊಗೆಯ ಮೈಲಾರಗೌಡ, ಸರಗೂರಿನ ಮಲ್ಲೇಶಪ್ಪ, ಕುಂಸೊಗೆಯ ಸುಬ್ರಮಣ್ಯ, ಹೆಚ್.ಡಿ. ಕೋಟೆಯ ಮಂಜುನಾಥ, ಸಾಗರೆಯ ಚನ್ನಬಸವ, ಸರಗೂರಿನ ವಾಸುದೇವ, ಗೊಂತಗಾಲ ಹುಂಡಿಯ ಸಿದ್ದಸೆಟ್ಟಿ, ನಾಗನಹಳ್ಳಿಯ ಲಕ್ಕೇಗೌಡ, ಕುಂಸೊಗೆಯ ಶಿವಣ್ಣ, ಹಿರೇಹಳ್ಳಿಯ ರಾಜಸೆಟ್ಟಿ, ಕಳಸೂರಿನ ಕಳಸೇಗೌಡ, ಕೊತ್ತೇಗಾಲದ ಮಹಾದೇವಸೆಟ್ಟಿ, ಕೆರೂರಿನ ಮಾದಸೆಟ್ಟಿ ಮುಂತಾದವರು ಈ ತಾಲ್ಲೂಕಿನ ಉಪ್ಪಾರ ಸಮಾಜದ ಪ್ರಮುಖರು ಹಾಗೂ ಹಿತಚಿಂತಕರು.

ಮೈಸೂರು ತಾಲ್ಲೂಕು ಹಾಗೂ ನಗರದಲ್ಲಿ ಸುಮಾರು 3,000 ಉಪ್ಪಾರ ಕುಟುಂಬಗಳಿವೆಯೆಂದು ಹೇಳಲಾಗಿದೆ. ಅವುಗಳಲ್ಲಿ 19,500 ಜನ ಉಪ್ಪಾರ ಬಂಧುಗಳಿದ್ದಾರೆ. ಮೈಸೂರು ನಗರದ ಎನ್.ಆರ್. ಮೊಹಲ್ಲಾ, ಗಣೇಶನಗರ, ಉದಯಗಿರಿ, ಕೆ.ಎನ್. ಪುರ, ಗಾಯತ್ರಿಪುರ, ಮಂಡಿಮೊಹಲ್ಲದ ಸೊಪ್ಪಿನ ಕೇರಿ, ಕಾಮಾಟಗೇರಿ, ಕುಂಬಾರಗೇರಿ, ಮಿಷನ್ ಆಸ್ಪತ್ರೆ, ತಿಲಕ್‌ನಗರ, ಬಂಡಿಪಾಳ್ಯ, ಕುವೆಂಪುನಗರ, ಸಿದ್ಧಾರ್ಥ ಲೇಔಟ್, ಗೋಕುಲಂ, ಹೆಬ್ಬಾಳು, ಬೃಂದಾವನ ಬಡಾವಣೆ, ಕುಂಬಾರ ಕೊಪ್ಪಲು, ಮೊಳೆರಂಗಶೆಟ್ಟಿ ವಠಾರ,

ಮಹದೇಶ್ವರ ಬಡಾವಣೆ, ಸೂರ್ಯಬೇಕರಿ ಹತ್ತಿರ, ವಿಜಯನಗರ ಮೊದಲನೆಯ ಹಂತ, ಹೆಬ್ಬಾಳ 1 ಮತ್ತು 2ನೆಯ ಹಂತ, ಮಂಚೇಗೌಡನ ಕೊಪ್ಪಲು, ಹಿನಕಲ್ ಗ್ರಾಮ, ಜಯಲಕ್ಷ್ಮೀಪುರಂ, ಪಡುವಾರಳ್ಳಿ, ಲಕ್ಷ್ಮೀಪುರ, ಗುಂಡೂರಾವ್ ನಗರ, ಅಗ್ರಹಾರ, ಕೆ.ಆರ್. ಮೊಹಲ್ಲಾ, ಹುಲ್ಲಿನ ಬೀದಿ, ಜೆ.ಪಿ. ನಗರ (ಹೊಸೂರು) ತೊಣಚಿ ಕೊಪ್ಪಲು, ಜನತಾನಗರ, ವಸಂತನಗರ, ಬೋಗಾದಿ 2ನೆಯ ಹಂತ, ಸುಣ್ಣದಕೇರಿ, ಆರ್.ಎಸ್. ನಾಯ್ಡುನಗರ, ರಾಜೇಂದ್ರನಗರ, ಓ.ಡಿ. ಬ್ಲಾಕ್, ರಾಜೀವನಗರ, ಯಾದವಗಿರಿ, ವಿದ್ಯಾರಣ್ಯಪುರ, ಸಿದ್ಧಲಿಂಗಪುರ, ಕೂಡನಳ್ಳಿ, ಕೆ. ಹೆಮ್ಮನಹಳ್ಳಿ, ಮಂಟಕ್ಯಾತನಹಳ್ಳಿ ಹಾಗೂ ಬೋಗಾದಿ ಗ್ರಾಮಗಳಲ್ಲಿ ಹೆಚ್ಚಿನ ಸಂಖ್ಯೆಯ ಉಪ್ಪಾರರು ಇರುವುದು ಕಾಣಬರುತ್ತದೆ.

ಹೀಗೆ ಮೈಸೂರು ಜಿಲ್ಲೆಯಲ್ಲಿ 46850ಕ್ಕೂ ಅಧಿಕ ಉಪ್ಪಾರ ಕುಟುಂಬಗಳಿದ್ದು, ಸುಮಾರು 2,66,000 ಉಪ್ಪಾರ ಜನಸಂಖ್ಯೆ ಇದೆ.

ಮೈಸೂರು ನಗರದಲ್ಲಿ ಪ್ರಮುಖ ಉಪ್ಪಾರರು ಈ ಕೆಳಕಂಡಂತಿದ್ದಾರೆ. ಎನ್.ಆರ್. ಮೊಹಲ್ಲಾದಲ್ಲಿ ಲಕ್ಕಸೆಟ್ಟಿ, ಮಹಾದೇವಸೆಟ್ಟಿ, ವೆಂಕಟರಮಣ, ಪಾಪಶೆಟ್ಟಿ, ನಾಗರಾಜ ಹಾಗೂ ಜಯಲಕ್ಷ್ಮಮ್ಮ ಸಿದ್ದಶೆಟ್ಟಿ, ಗಣೇಶನಗರದ ಮಿಲ್ಟ್ರಿ ಸಿದ್ಧಸೆಟ್ಟಿ, ಸಿದ್ಧರಾಜು, ಕುಂತೂರು ಮೋಳೆ ಮಹಾದೇವಶೆಟ್ಟಿ, ಎಸ್. ಮಹಾದೇವ ಹಾಗೂ ಶ್ರೀನಿವಾಸ ಮುಂತಾದವರು.

ಕೆ.ಎನ್. ಪುರ ಬಡಾವಣೆಯ ನಿಂಗಸೆಟ್ಟಿ, ಮಾವನಳ್ಳಿ ಮಹಾದೇವಸೆಟ್ಟಿ, ನಿಂಗರಾಜ, ಉದಯಗಿರಿಯ ಸಮಾಜ ಕಾರ್ಯಕರ್ತರಾದ ಕಾರಾಪುರದ ಮಹಾದೇವಸೆಟ್ಟಿ, ಕಾಳಯ್ಯ, ಗಾಯತ್ರಿಪುರದ ಎಸ್.ಎನ್. ಬೋರೇಗೌಡ ಮತ್ತು ಪುಟ್ಟಶೆಟ್ಟಿ, ಮಂಡಿಮೊಹಲ್ಲಾದ ಸೊಪ್ಪಿನಕೇರಿ ಬೀದಿಯ ಜಿ.ಎಸ್. ಸುರೇಶ್, ವಿ. ಆನಂದಕುಮಾರ, ಬಂಡಿಪಾಳ್ಯದ ಶ್ರೀನಿವಾಸ ಮತ್ತು ರಾಮಣ್ಣ, ಕುವೆಂಪು ನಗರದ ರಂಗಪ್ಪ, ಸಿದ್ದಾರ್ಥ ಲೇಔಟ್ ಎ.ಎಂ. ಪುಟ್ಟಸ್ವಾಮಯ್ಯ, ಗೋವಿಂದರಾಜು, ಗೋಕುಲದ ಪುಟ್ಟರಾಮಣ್ಣ, ಹೆಬ್ಬಾಳುಪಿನ ಹನುಮಂತಪ್ಪ, ಬೃಂದಾವನ ಬಡಾವಣೆಯ ಕೆ. ರಾಜಶೇಖರ, ಕುಂಬಾರಕೊಪ್ಪಲಿನ ಟಿ. ಸ್ವಾಮಿ, ಮೋಳೆ ರಂಗಸೆಟ್ಟಿ, ಅಂಕಯ್ಯ, ಲಿಂಗಯ್ಯ, ಸಿದ್ಧಯ್ಯ, ಸಂಜುಂಡಶೆಟ್ಟಿ, ವಿಜಯನಗರದ ಅಂಜನಪ್ಪ. ಹೆಬ್ಬಾಳಿಗ ಮಹಾದೇವಸೆಟ್ಟಿ, ಮಾದಸೆಟ್ಟಿ, ಮಂಚೇಗೌಡನ ಕೊಪ್ಪಲಿನ ನಂಜುಂಡಸೆಟ್ಟಿ, ಕುಂಬಾರ ಕೊಪ್ಪಲಿನ ಶಂಕರ, ಹಿನಕಲ್‌ನ ವೆಂಕಟೇಶ್, ಮಹದೇವಸ್ವಾಮಿ, ಡ್ರೈವರ್ ನಾಗರಾಜ, ಜಯಯಲಕ್ಷ್ಮೀಪುರದ ಮಹಾದೇವಮ್ಮ, ಮಹಾದೇವಸೆಟ್ಟಿ, ಪಡುವಾರಳ್ಳಿಯ ಮಾರಸೆಟ್ಟಿ, ನಾರಾಯಣ್, ವೆಂಕಟೇಶ, ಲಕ್ಷ್ಮೀಪುರದ ಪದ್ಮನಾಭ, ಗುಂಡೂರಾವ್ ನಗರದ ಶಿವಪ್ಪ, ಅಗ್ರಹಾರದ ನಂಜುಂಡೇಶ್, ಜೆ.ಪಿ. ನಗರದ ಗೋವಿಂದಪ್ಪ, ಕೃಷ್ಣಸೆಟ್ಟಿ, ಮಹಾದೇವಶೆಟ್ಟಿ, ತೊಣಚಿಕೊಪ್ಪಲಿನ ಸಿದ್ಧರಾಜು, ತಿಮ್ಮಣ್ಣ, ಲಕ್ಷ್ಮಣ, ಗುರುಸಿದ್ಧಸೆಟ್ಟಿ, ಆರ್.ಎಸ್. ನಾಯಿಡು ನಗರದ ಮಹಾದೇವ, ಮಹದೇವು, ಪಾರ್ವತಮ್ಮ, ಸುಣ್ಣದಕೇರಿಯ ಎಸ್. ಕೋಟೇಗೌಡ,

ಯಾದವಗಿರಿಯ ಎ.ಟಿ. ಸೋಮಶೇಖರ, ಅಡ್ವೋಕೇಟ್ ದೇವರಾಜು, ರಾಜೀವನಗರದ ಶಿವಮಲ್ಲು, ನಾಗ, ವಿದ್ಯಾರಣ್ಯಪುರದ ಯೋಗೇಶ್, ಲಕ್ಷ್ಮೀನಾರಾಯಣ, ಸಿದ್ಧಲಿಂಗಪುರದ ಎಸ್.ಎಂ. ಪುಟ್ಟಸ್ವಾಮಿ, ಕೂಡನಹಳ್ಳಿ ಯಜಮಾನ್ ಬುಡಕಶೆಟ್ಟಿ, ರಂಗಸೆಟ್ಟಿ, ಹೊನ್ನಸೆಟ್ಟಿ, ಗೋಪಾಲಸೆಟ್ಟಿ, ಕೆ. ಹೆಮ್ಮನಹಳ್ಳಿಯ ಗ್ರಾಮ ಪಂಚಾಯತ್ ಅಧ್ಯಕ್ಷರಾದ ಕರಿಯಮ್ಮ, ಸದಸ್ಯರಾದ ಎಸ್. ಜವರಪ್ಪ, ರಾಮಶೆಟ್ಟಿ, ಮರುಚಿ ಕ್ಯಾತನಹಳ್ಳಿಯ ಸಿದ್ದು, ಮಹಾದೇವ, ಬಿ. ನಾರಾಯಣ ಅಧ್ಯಾಪಕರು ಹಾಗೂ ಮೈಸೂರು ಜಿಲ್ಲಾ ಉಪ್ಪಾರರ ನೌಕರರ ಸಂಘದ ಅಧ್ಯಕ್ಷರು, ಕೆ.ಎಂ. ಶಿವಕುಮಾರಸ್ವಾಮಿ, ಎ.ಟಿ. ಸೋಮಶೇಖರಪ್ಪ, ಪುಟ್ಟರಾಮಣ್ಣ ಕೆ.ಎಲ್. ಇನ್ನೂ ಅನೇಕರನ್ನು ಗುರುತಿಸಬಹುದು.

ಬಹುತೇಕ ಉಪ್ಪಾರರು ಕೂಲಿ ಕೆಲಸ ಮಾಡಿಕೊಂಡಿದ್ದಾರೆ. ಕಟ್ಟಡ ನಿರ್ಮಾಣ ಇವರಿಗೆ ಪ್ರಾಚೀನ ಕಾಲದಿಂದಲೂ ಬಂದ ವೃತ್ತಿ. ಸುಮಾರು ಹತ್ತು ಗುತ್ತಿಗೆದಾರರು ಈ ಸಮುದಾಯದಲ್ಲಿ ದೊರಕುತ್ತಾರೆ. ಇಬ್ಬರು ಪದವೀಧರರು, ನಾಲ್ವರು ಸ್ನಾತಕೋತ್ತರ ಪದವೀಧರರು, ತಾಂತ್ರಿಕ ಪದವಿ ಪಡೆದ ಎಂಟು ಜನ ಹಾಗೂ ವೈದ್ಯಕೀಯ ಪದವಿ ಪಡೆದ ಮೂವರನ್ನು ಗುರುತಿಸಲಾಗಿದೆ. ಈ ಸಮಾಜದಲ್ಲಿ ಶೇ. 1ರಷ್ಟು ಜನ ಮಾತ್ರವೇ ಸರ್ಕಾರಿ ನೌಕರಿಯಲ್ಲಿದ್ದಾರೆ.

ಸಮಾಜದ ಪ್ರಮುಖ ಜನನಾಯಕರೆಂದರೆ ನಾಗರಾಜ ಎನ್.ಆರ್. ಮೊಹಲ್ಲಾದ ನಾಲ್ಕನೇ ವಾರ್ಡಿಗೆ ಸ್ವತಂತ್ರ ಅಭ್ಯರ್ಥಿಯಾಗಿ ನಗರಸಭಾ ಚುನಾವಣೆಗೆ ಸ್ಪರ್ಧಿಸಿದ್ದರು. ಜಯಲಕ್ಷ್ಮಮ್ಮ ಕೋಂ ಸಿದ್ದುಸೆಟ್ಟಿ ಅವರು ಬಿಜೆಪಿ ಅಭ್ಯರ್ಥಿಯಾಗಿ ಮೈಸೂರು ನಗರಸಭಾ ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ವೆಂಕಟರಮಣ ಕೆ.ಆರ್. ಮಿಲ್ಲಿನ ಕಾರ್ಮಿಕ ನಾಯಕರಾಗಿದ್ದರು. ಎಸ್. ಮಹಾದೇವ ಅವರು ಎನ್.ಆರ್. ಕ್ಷೇತ್ರದ ಜನತಾದಳದ ಯುವ ಮೋರ್ಚಾದ ಅಧ್ಯಕ್ಷರಾಗಿ ಬಹಳ ದಿನಗಳಿಂದಲೂ ದುಡಿಯುತ್ತಿದ್ದಾರೆ. ಲಕ್ಕಸೆಟ್ಟಿ, ಕಾರ್ಪೋರೇಷನ್ ಉದ್ಯೋಗಿ ಹಾಗೂ ಸಮಾಜ ಸೇವಕರು. ಶ್ರೀನಿವಾಸ ಅವರು ರಾಷ್ಟ್ರೀಯ ಭಗೀರಥ ಮಹಾಸಭಾದ ಅಧ್ಯಕ್ಷರು. ಯಜಮಾನ್ ಬುಡಕಸೆಟ್ಟಿ ಅವರು ಕೂಡನಳ್ಳಿ ಗ್ರಾಮದ ಪಂಚಾಯತ್ ಸದಸ್ಯರು ಹಾಗೂ ಸಿದ್ದಲಿಂಗಪುರದ ಎಸ್.ಎಂ. ಪುಟ್ಟಸ್ವಾಮಿ ರಾಷ್ಟ್ರೀಯ ಭಗೀರಥ ಮಹಾಸಭಾದ ಜಿಲ್ಲಾಧ್ಯಕ್ಷರು. ನರಸಿಂಹರಾಜ ವಿಧಾನಸಭಾ ಕ್ಷೇತ್ರದಲ್ಲಿ 8,000 ಮತದಾರರು ಉಪ್ಪಾರ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಅವರಲ್ಲಿ ಒಗ್ಗಟ್ಟಿಲ್ಲದ ಕಾರಣ ಅವರು ಸಮರ್ಥ ರಾಜಕೀಯ ಶಕ್ತಿಯಾಗಿ ಹೊರಬರಲು ಸಾಧ್ಯವಾಗಿಲ್ಲ. ಇವರಲ್ಲಿ ಸಂಘಟನೆ ಹಾಗೂ ರಾಜಕೀಯ ಪ್ರಜ್ಞೆ ಜಾಗೃತವಾದರೆ 2-3 ಜನ ಕಾರ್ಪೋರೇಟರ್ ಆಗಿ ಆಯ್ಕೆಯಾಗಬಹುದು. ಸಿದ್ಧಲಿಂಗಪುರದ ಮಸಣಸೆಟ್ಟಿ ತಬಲ ವಾದಕರು ಕೆ. ಹೆಮ್ಮನಹಳ್ಳಿ ಮಾದಶೆಟ್ಟಿ ನಾಟಕದ ಮೇಸ್ಟ್ರು, ಸಿಳ್ಳರಸೆಟ್ಟಿ, ಚಾಮಶೆಟ್ಟಿ ಹಾಗೂ ಜವರಸೆಟ್ಟಿ ಈ ಸಮಾಜದ ರಂಗ ಕಲಾವಿದರು.

ಮೈಸೂರು ಜಿಲ್ಲೆಯಲ್ಲಿ ಉಪ್ಪಾರ ಸಮಾಜದ ಸಂಘಟನೆಗೆ ದುಡಿದವರಲ್ಲಿ ಪಿರಿಯಾಪಟ್ಟಣದ ಡಾ|| ಕೆ.ಆರ್. ತಮ್ಮಯ್ಯನವರು ಉಲ್ಲೇಖಾರ್ಹರು.

ಮೈಸೂರು ಜಿಲ್ಲೆಯ ಉಪ್ಪಾರರಲ್ಲಿ ಒಳಪಂಗಡಗಳಿದ್ದು ಎಲ್ಲ ಉಪ್ಪಾರರೂ ಮಾನಸಿಕವಾಗಿ ಒಂದಾಗಿಲ್ಲ. ಉಪ್ಪಾರ, ಉಪ್ಪಲಿಗಶೆಟ್ಟಿ ಉಪಪಂಗಡಗಳು ತಮ್ಮ ಭಿನ್ನಾಭಿಪ್ರಾಯ ಮರೆತು ಒಂದಾಗಿ ತಮ್ಮ ಸಂಘಟನೆಯನ್ನು ಬಲಪಡಿಸಬೇಕು. ಇದರ ಪರಿಹಾರಕ್ಕೆ ಶಾಖಾಮಠ ಮಾಡುವುದು ಸೂಕ್ತವೆಂದು ಈ ಸಮಾಜದ ಮುಖಂಡರ ಅನಿಸಿಕೆ. ಮೈಸೂರು, ನಂಜನಗೂಡು ಹಾಗೂ ಪಿರಿಯಾಪಟ್ಟಣಗಳಲ್ಲಿ ವಿದ್ಯಾರ್ಥಿ ನಿಲಯಗಳಿದ್ದು ಅವುಗಳನ್ನು ಇತರ ತಾಲ್ಲೂಕುಗಳಲ್ಲಿ ಪ್ರಾರಂಭಿಸಬೇಕು. ರಾಜ್ಯಮಟ್ಟದ ಉಪ್ಪಾರ ಸಂಘ ಕ್ರಿಯಾಶೀಲವಾದರೆ ಮೈಸೂರು ಜಿಲ್ಲೆಯ ಸಂಘ ಚೈತನ್ಯ ಪಡೆದುಕೊಳ್ಳುತ್ತದೆಂಬ ದೂರದ ಆಸೆ ಕೆಲವರದು. ಒಟ್ಟಾರೆ ಮೈಸೂರು ಜಿಲ್ಲೆಯ ಉಪ್ಪಾರರ ಸ್ಥಿತಿಗತಿ ಸುಮಾರಾಗಿದ್ದು ಸಂಘಟನೆ ಬಲಗೊಂಡರೆ ಉತ್ತಮ ಫಲಿತಾಂಶಗಳು ಹೊರಬರುವುದರಲ್ಲಿ ಯಾವುದೇ ಸಂಶಯವಿಲ್ಲ.

**ಮಾಹಿತಿಸಂಗ್ರಹ :** ***ಕೆ.ಎಂ. ಶಿವಕುಮಾರ್, ಬಸವರಾಜು, ಶಾಂತರಾಜ, ಕೃಷ್ಣ ಕನ್ನಳ್ಳಿ ಮೋಳೆ, ರಾಜ ದೊಡ್ಡಬಾಗಿಲುಮೋಳೆ, ನಂಜುಂಡಸ್ವಾಮಿ, ಕೆಂಪಯ್ಯನ ಹುಂಡಿ, ಹೆಚ್.ಎನ್. ಮೂಗಶೆಟ್ಟಿ, ಯು.ಬಿ. ಪುಟ್ಟಣ್ಣ, ಟಿ.ಬಿ. ಮಲ್ಲಪ್ಪ, ಕೆ.ಎಲ್. ಶಂಕರಲಿಂಗಯ್ಯ, ಎ.ಟಿ. ಸೋಮಶೇಖರಪ್ಪ, ಪುಟ್ಟರಾಮಣ್ಣ, ಎಸ್.ಎಂ. ಪುಟ್ಟಸ್ವಾಮಿ, ಶ್ರೀನಿವಾಸ, ರಂಗಪ್ಪ***

❋




# * ಚಾಮರಾಜನಗರ ಜಿಲ್ಲೆ

## ಐತಿಹಾಸಿಕ ಹಿನ್ನೋಟ

1997ರ ಜಿಲ್ಲಾ ಪುನರ್ ವಿಂಗಡಣೆಯಿಂದಾಗಿ ಚಾಮರಾಜನಗರ ಜಿಲ್ಲೆ ಜನ್ಮ ತಾಳಿತು. ಚಾಮರಾಜನಗರ ಜಿಲ್ಲೆಯು ಚಾಮರಾಜನಗರ, ಗುಂಡ್ಲುಪೇಟೆ, ಯಳಂದೂರು ಮತ್ತು ಕೊಳ್ಳೇಗಾಲ ಎಂಬ ನಾಲ್ಕು ತಾಲ್ಲೂಕುಗಳನ್ನೊಳಗೊಂಡಿದೆ. ಕೊಳ್ಳೇಗಾಲ ಜಿಲ್ಲೆಯ ಅತಿದೊಡ್ಡ ತಾಲ್ಲೂಕು. ಯಳಂದೂರು ಈ ಜಿಲ್ಲೆಯ ಅತಿ ಚಿಕ್ಕ ತಾಲ್ಲೂಕು. ಯಳಂದೂರು ದಿವಾನ್ ಪೂರ್ಣಯ್ಯನವರ ಜಹಗೀರಾಗಿತ್ತು. ಎಂಟನೆಯ ಚಾಮರಾಜ ಒಡೆಯರ್ (ಕ್ರಿ.ಶ. 1774-96) ಅವರ ನೆನಪಿಗಾಗಿ ಇದಕ್ಕೆ ಚಾಮರಾಜನಗರವೆಂಬ ಹೆಸರು ಬಂದಿದೆ. ಇದಕ್ಕೆ ಮೊದಲು 'ಅರಿಕೊಠಾರ' ಎಂಬ ಹೆಸರಿತ್ತು.

ಜಿಲ್ಲೆಯ ವಾರ್ಷಿಕ ಮಳೆ 760 ಮಿ.ಮೀ. ಸುವರ್ಣಾವತಿ ನದಿಯಿಂದ ಇಲ್ಲಿ ನೀರಾವರಿ ಸೌಲಭ್ಯವಿದೆ. ಜಿಲ್ಲೆಯ ಹವಾಮಾನ ರೇಷ್ಮೆ ಬೆಳೆಗೆ ಉತ್ತೇಜನಕಾರಿಯಾಗಿರುತ್ತದೆ. ಜಿಲ್ಲೆಯ ಒಟ್ಟು ಜನಸಂಖ್ಯೆ 9,64275. ಅದರಲ್ಲಿ ಪುರುಷರು 4,89,895, ಮಹಿಳೆಯರು 4,74,380 ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 51.26. ಪುರುಷರು ಶೇ. 59.25. ಸ್ತ್ರೀಯರು ಶೇ. 43.02. ಜಿಲ್ಲೆಯಲ್ಲಿ ಭತ್ತ, ಕಬ್ಬು, ರಾಗಿ, ಜೋಳ, ದ್ವಿದಳಧಾನ್ಯ ಹಾಗೂ ಎಣ್ಣೆಕಾಳುಗಳು ಬೆಳೆಯುವುದನ್ನು ಗಮನಿಸಬಹುದು. ವಿಶೇಷವಾಗಿ ಜಿಲ್ಲೆಯಲ್ಲಿ ರೇಷ್ಮೆ ವ್ಯವಸಾಯಕ್ಕೆ ಹೆಚ್ಚಿನ ಆದ್ಯತೆಯಿದೆ. ಸಂತೇಮರಳ್ಳಿ ಇಡೀ ತಾಲ್ಲೂಕಿನಲ್ಲಿ ಅತಿ ದೊಡ್ಡ ಸಂತೆ ನಡೆಯುವ ಸ್ಥಳ.

ಚಾಮರಾಜನಗರ ಜಿಲ್ಲೆಗೆ ಭವ್ಯ ಸಾಂಸ್ಕೃತಿಕ ಇತಿಹಾಸವಿದೆ. ಕ್ರಿ.ಶ. 1818ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಈ ಜಿಲ್ಲೆಗೆ 'ಚಾಮರಾಜನಗರ' ಎಂದು ನಾಮಕರಣ ಮಾಡಿದರಲ್ಲದೆ, 1826ರಲ್ಲಿ ಚಾಮರಾಜೇಶ್ವರ ದೇವಾಲಯವನ್ನು ನಿರ್ಮಿಸಿದರು.

ಚಾಮರಾಜನಗರ ತಾಲ್ಲೂಕಿನಲ್ಲಿ ಇತಿಹಾಸ ಪೂರ್ವದ ಅವಶೇಷಗಳನ್ನು ಡಾ. ಕೆ.ಪಿ. ಸೌಂದರರಾಜನ್ ಪತ್ತೆಹಚ್ಚಿದ್ದಾರೆ. ಸರಸಮಂಗಲದಲ್ಲಿ ಬೃಹತ್ ಶಿಲಾಗೋರಿಗಳನ್ನು ಗುರುತಿಸಬಹುದು.

ಚಾಮರಾಜನಗರವೊಂದರಲ್ಲೇ ಐನೂರು ಶಾಸನಗಳು ದೊರಕಿವೆ. ಅದರಲ್ಲಿ ತಲಕಾಡಿನ ಗಂಗರ ದೊರೆ ಒಂದನೆಯ ಶಿವಮಾರನ ಶಾಸನವೇ ಅತ್ಯಂತ ಪ್ರಾಚೀನವಾದುದು. ಚಾಮರಾಜನಗರ ತಾಲ್ಲೂಕನ್ನು ತಲಕಾಡಿನ ಗಂಗರು, ಕಲ್ಯಾಣದ ಚಾಲುಕ್ಯರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಒಡೆಯರು, ಉಮ್ಮತ್ತೂರು ಹಾಗೂ ಕಳಲೆ ಪಾಳೇಗಾರರು ಆಳುತ್ತಿದ್ದರೆಂದು ಈ ಶಾಸನಗಳು ಹೇಳುತ್ತವೆ.

ಕಲ್ಯಾಣಿ ಚಾಳುಕ್ಯರ ಎರಡನೆಯ ತೈಲಪನ ಕ್ರಿ.ಶ. 993ರ ಶಾಸನವೊಂದು 'ಸೋಮ ಸಮುದ್ರ' ಗ್ರಾಮದ ಕಾಳಿಕೆರೆಯ ಏರಿಯ ಮೇಲೆ ದೊರಕಿದೆ.

ಕ್ರಿ.ಶ. 1116ರ ಶಾಸನದಲ್ಲಿ ಹೊಯ್ಸಳ ವಿಷ್ಣುವರ್ಧನ ಸಂಧಿ ವಿಗ್ರಹಿಯಾಗಿದ್ದ ಇಮ್ಮಡಿ ಪುಣಿಸಮ್ಮಯ್ಯನ ವಿವರವನ್ನು ಚಾಮರಾಜನಗರದ ಪಾರ್ಶ್ವನಾಥಬಸದಿಯ ಶಾಸನ ತಿಳಿಸುತ್ತದೆ.

ವಿಜಯನಗರದ ಒಂದನೆಯ ದೇವರಾಯನ ಮಗ ವೀರಹರಿಹರರಾಯ ಒಡೆಯನ ವಿವರಗಳು ಮಲೆಯೂರಿನ ಪಾರ್ಶ್ವನಾಥ ಬಸದಿಯ ತಾಮ್ರ ಶಾಸನದಲ್ಲಿ ದೊರೆಯುತ್ತವೆ.

ಚಾಮರಾಜನಗರದ ನಾರಾಯಣಸ್ವಾಮಿ ದೇವಸ್ಥಾನದ ಮೂರು ತಾಮ್ರ ಶಾಸನಗಳಲ್ಲಿ ಮೈಸೂರು ಸಂಸ್ಥಾನದ ಅರಸರಾದ ಚಿಕ್ಕದೇವರಾಯ ಒಡೆಯರ ಬಗ್ಗೆ ಸಾಕಷ್ಟು ವಿವರಗಳು ದೊರೆಯುತ್ತವೆ.

ಚಾಮರಾಜನಗರವು ಭಾರತದ ಸ್ವಾತಂತ್ರ್ಯ ಹೋರಾಟದಲ್ಲೂ ಸಾಕಷ್ಟು ಸಕ್ರಿಯವಾಗಿ ಭಾಗವಹಿಸಿದ ತಾಲ್ಲೂಕು. ತಾಲ್ಲೂಕುವೊಂದರಲ್ಲೇ ಎಂಬತ್ತು ಮಂದಿ ಸ್ವಾತಂತ್ರ್ಯ ಹೋರಾಟಗಾರರಿದ್ದಾರೆ. ಅವರುಗಳಲ್ಲಿ ಪ್ರಮುಖರಾದವರು ಡಿ.ಜೆ. ಶಂಕರಪ್ಪ, ಡಿ. ಗೋಪಾಲರಾವ್, ಪುನೆನೂರಿನ ಪುಟ್ಟಸ್ವಾಮಿ, ಕೆ.ಎನ್. ಕುಮಾರಸ್ವಾಮಿ, ದೊಡ್ಡರಾಯಪೇಟೆ ಎನ್.ಎನ್. ಮಹದೇವಯ್ಯ, ಕಾಳನಹುಂಡಿ ಪುಟ್ಟಸುಬ್ಬಯ್ಯ, ಮಾರಾಪುರದ ಎಸ್. ಪುಟ್ಟನಂಜಪ್ಪ, ಮಲೆಯೂರಿನ ಕಲ್ಯದ ಸಿದ್ದಪ್ಪ, ಕರಿಯನಕಟ್ಟೆ ಕೆ.ಪಿ. ನಾಗಣ್ಣ, ಸೋಮಣ್ಣ, ಮಹಿಳೆಯರಾದ ಗಜಲಕ್ಷ್ಮಿಬಾಯಿ, ಸುಮಿತ್ರಾಬಾಯಿ ಹಾಗೂ ಭದ್ರಕಾಳಮ್ಮ ಮುಂತಾದವರು.

ಚಾಮರಾಜನಗರ ಜಿಲ್ಲೆ ರಾಜ್ಯದ ಅನೇಕ ಹಿರಿಯ ರಾಜಕಾರಣಿಗಳಿಗೆ ಜನ್ಮ ಕೊಟ್ಟ ಸ್ಥಳ. ಮಾಜಿ ಸಚಿವರಾದ ಬಿ. ರಾಚಯ್ಯ ಅವರ ಜನ್ಮಸ್ಥಳ ಆಲೂರು. ಪ್ರಸ್ತುತ ಲೋಕಸಭಾ

ಸದಸ್ಯರೂ ಹಾಗೂ ಕೇಂದ್ರ ಸಚಿವರಾದ ಶ್ರೀನಿವಾಸ ಪ್ರಸಾದ್, ಮಾಜಿ ಲೋಕಸಭಾ ಸದಸ್ಯರಾದ ಸಿದ್ದರಾಜು, ಕೆ.ಬಿ. ಶಿವಯ್ಯ, ಎಂ.ಸಿ. ಬಸಪ್ಪ, ಎನ್. ಜಯಣ್ಣ, ಜಿ.ಎನ್. ನಂಜುಂಡಸ್ವಾಮಿ, ಎಸ್. ಪುಟ್ಟಸ್ವಾಮಿ, ವಾಟಾಳ್ ನಾಗರಾಜ್ ಹಾಗೂ ಎ.ಎಸ್. ಗುರುಸ್ವಾಮಿ ಮುಂತಾದವರು ಈ ಪ್ರದೇಶದಿಂದ ಚುನಾಯಿತರಾಗಿದ್ದಾರೆ. 1952ರಿಂದಲೂ ಸಂತೇಮರಳ್ಳಿ ವಿಧಾನಸಭಾ ಕ್ಷೇತ್ರ ರಾಜ್ಯಕ್ಕೆ ಅನೇಕ ರಾಜಕಾರಣಿಗಳನ್ನು ನೀಡಿದೆ. ಎಂ. ರಾಜಶೇಖರಮೂರ್ತಿ, ಬಿ. ವೆಂಕಟರಂಗನಾಯಕ, ಯು.ಎಂ. ಮಾದಪ್ಪ, ಟಿ.ಪಿ. ಬೋರಯ್ಯ, ಶ್ರೀಮತಿ ಕೆಂಪಮ್ಮ, ಬಿ. ಬಸವಯ್ಯ, ಎಂ. ಸಿದ್ಧಮಾರಯ್ಯ, ಕೆ. ಸಿದ್ಧಯ್ಯ ಹಾಗೂ ಎ.ಆರ್. ಕೃಷ್ಣಮೂರ್ತಿ ಮೊದಲಾದವರು.

ಕನ್ನಡ ಸಾಹಿತ್ಯ ಹಾಗೂ ಭಾಷೆಗೆ ಅನುಪಮ ಕಾಣಿಕೆ ಕೊಟ್ಟ ಕೀರ್ತಿ ಚಾಮರಾಜನಗರ ಜಿಲ್ಲೆಗೆ ಸೇರುತ್ತದೆ. ತೋಂಟದ ಸಿದ್ಧಲಿಂಗೇಶ್ವರ (ಕ್ರಿ.ಶ. 1470) ಹಾಗೂ ಸ್ವತಂತ್ರ ಸಿದ್ಧಲಿಂಗೇಶ್ವರ (1480) ಇವರಿಬ್ಬರೂ ಅನುಕ್ರಮವಾಗಿ ಚಾಮರಾಜನಗರ ಮತ್ತು ಹರಪನಹಳ್ಳಿಯಲ್ಲಿ ಜನಿಸಿದವರು. ಮತ್ತೊಬ್ಬ ಕವಿ ನಂಜಣ್ಣಾರ್ಯ (ಕ್ರಿ.ಶ. 1650) ಹಾಗೂ ಜೈನ ಕವಿ ನೇಮಿಚಂದ್ರ ಮಲೆಯೂರಿನವರು.

ಕನ್ನಡ ಖ್ಯಾತ ಕತೆಗಾರರಾದ ಅಶ್ವತ್ಥ್, ಖ್ಯಾತ ವಿಮರ್ಶಕರಾದ ಡಾ. ಪ್ರಭುಶಂಕರ್, ನಿವೃತ್ತ ಐಪಿಎಸ್ ಅಧಿಕಾರಿ ಹಾಗೂ ಖ್ಯಾತ ಲೇಖಕರಾದ ಡಾ. ಪಿ.ಎಸ್. ರಾಮಾನುಜಂ, ಕೃಷಿವಿಜ್ಞಾನಿ ಡಾ. ಎಂ. ಮಹಾದೇವಪ್ಪ, ತತ್ವಶಾಸ್ತ್ರ ಪ್ರಾಧ್ಯಾಪಕರಾದ ನಂಜಪ್ಪ, ದಲಿತ ಸಾಹಿತಿ ಡಾ|| ದೇವಯ್ಯ ಹರವೆ, ಸಸ್ಯತಳಿ ವಿಜ್ಞಾನಿ ಡಾ|| ರಂಗಸ್ವಾಮಿ, ಪ್ರಸಿದ್ಧ ಇಂಜಿನಿಯರ್ ಆರ್. ವೈ. ವಾಸುದೇವ್, ನಿವೃತ್ತ ಐ.ಎ.ಎಸ್. ಅಧಿಕಾರಿ ದೊರೈರಾಜ್, ಕನ್ನಡ ಚಲನಚಿತ್ರ ನಿರ್ದೇಶಕರಾದ ಬಸವರಾಜ್ ಕೆಸ್ತೂರ್, ಖ್ಯಾತ ಶಿಲ್ಪಿ ಸಿದ್ಧಲಿಂಗಸ್ವಾಮಿ, ಗಮಕಿಗಳಾದ ಕೆ. ವೆಂಕಟಸುಬ್ಬಯ್ಯ, ಹೆಚ್. ರಾಮದಾಸ್ ಹಾಗೂ ಎ.ಎಸ್. ವೆಂಕಟದಾಸ್ ಚಾಮರಾಜನಗರದವರು.

ಯಳಂದೂರು ತಾಲ್ಲೂಕಿನ ಬಿಳಿಗಿರಿರಂಗನಬೆಟ್ಟದಲ್ಲಿ ಡಾ|| ಹೆಚ್. ಸುದರ್ಶನ್ ಅವರು ವಿವೇಕಾನಂದ ಕೇಂದ್ರವನ್ನು ಸ್ಥಾಪಿಸಿಕೊಂಡು ತನ್ಮೂಲಕ ಆ ಪರಿಸರದ ಸೋಲಿಗರ ಸರ್ವತೋಮುಖ ಅಭಿವೃದ್ಧಿಯನ್ನು ಸಾಧಿಸುತ್ತಿದ್ದಾರೆ. ಅವರು ತಮ್ಮ ಮಹತ್ಕಾರ್ಯಕ್ಕಾಗಿ 'ರೈಟ್ ಲೈವ್ ಲಿ ಹುಡ್' ಎಂಬ ಅಂತರಾಷ್ಟ್ರೀಯ ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

ಚಾಮರಾಜನಗರವು ಜನಪದ ಕಲೆಗಳ ಕಣಜ. ಗೊರವರ ಕುಣಿತ, ನಂದಿಕೋಲು ಕುಣಿತ, ಲಿಂಗದಬೀರರ ಕುಣಿತ, ಬೀಸು ಕಂಸಾಳೆ, ಕೋಲಾಟ, ಗಾರುಡಿ ಕುಣಿತ, ಈರ ಮಕ್ಕಳ ಕುಣಿತ ಮುಂತಾದ ಜಾನಪದ ಕಲೆಗಳನ್ನು ಈ ಜಿಲ್ಲೆಯಲ್ಲಿ ಕಾಣಬಹುದು.

ಚಾಮರಾಜನಗರ ತಾಲ್ಲೂಕಿನಲ್ಲಿ ಮಂಟೇಸ್ವಾಮಿ ನೀಲಗಾರರು ಹಾಗೂ ಚೌಡಿಕೆ ಯಲ್ಲಮ್ಮನ ಚೌಡಿಕೆಯವರು ಕಾಣಬರುತ್ತಾರೆ. ಉಮ್ಮತ್ತೂರು, ಹರದನಹಳ್ಳಿ, ಮಲೆಯೂರು,

ಪರಳುಕೋಟೆ ಹಾಗೂ ಬೂದಿಬಡಗ ಚಾಮರಾಜನಗರದ ಪ್ರಮುಖ ಐತಿಹಾಸಿಕ ಸ್ಥಳಗಳು. ಬೂದಿಬಡಗದಲ್ಲಿ ಈ ಹಿಂದೆ ಖೆಡ್ಡಾ ನಡೆಸುತ್ತಿದ್ದರು.

ಚಾಮರಾಜನಗರದಲ್ಲಿ ಯಾವುದೇ ಕೈಗಾರಿಕೆ ಕಾಣಬರುವುದಿಲ್ಲ. ಅಭಿವೃದ್ಧಿ ದೃಷ್ಟಿಯಿಂದ ಅದು ಅತ್ಯಂತ ಹಿಂದುಳಿದ ಜಿಲ್ಲೆಯಾಗಿದೆ. ಕಲ್ಲುಗಣಿಗಾರಿಕೆ ಜಿಲ್ಲೆಯಲ್ಲಿ ವ್ಯಾಪಕವಾಗಿ ಕಾಣಬರುತ್ತದೆ.

ಚಾಮರಾಜನಗರಕ್ಕೆ ಸಂಬಂಧಪಟ್ಟಂತೆ ಮೂಢನಂಬಿಕೆಯಿಂದಾಗಿ ಈ ಜಿಲ್ಲೆ ಅತ್ಯಂತ ಹಿಂದುಳಿದಿದೆ. ಅಧಿಕಾರಸ್ಥ ಮುಖ್ಯಮಂತ್ರಿ, ಮಂತ್ರಿ ಹಾಗೂ ಹಿರಿಯ ರಾಜಕಾರಣಿಗಳು ಚಾಮರಾಜನಗರಕ್ಕೆ ಭೇಟಿ ಕೊಟ್ಟರೆ ತಮ್ಮ ಅಧಿಕಾರ ಕಳೆದುಕೊಳ್ಳುತ್ತಾರೆಂಬ ಮೌಢ್ಯದ ವಿಚಾರ ಬೆಂಗಳೂರಿನ ರಾಜಕಾರಣಿಗಳ ವಲಯದಲ್ಲಿ ವ್ಯಾಪಕವಾಗಿ ಹರಡಿದೆ. ಆದ ಕಾರಣ ಯಾವದೇ ಮುಖ್ಯಮಂತ್ರಿ ಅಥವಾ ಸಚಿವರು ಈ ಜಿಲ್ಲೆಯ ಕೇಂದ್ರ ನಗರ ಚಾಮರಾಜನಗರಕ್ಕೆ ಭೇಟಿ ಕೊಡಲು ಹೆದರುತ್ತಾರೆ. 1999ರಲ್ಲಿ ಸಮಾಜವಾದಿ ನಾಯಕರಾದ ಜೆ.ಹೆಚ್. ಪಟೇಲ್ ಕೂಡಾ ಈ ಭಯದಿಂದಲೋ ಏನೋ ಚಾಮರಾಜನಗರ ಜಿಲ್ಲೆಯನ್ನು ಮಲೆಮಹದೇಶ್ವರ ಬೆಟ್ಟದಿಂದಲೇ ಉದ್ಘಾಟಿಸಿದರು. ಈ ಅಪಪ್ರಚಾರದಿಂದ ಚಾಮರಾಜನಗರ ಎಂದಿಗೆ ಮುಕ್ತಿ ಪಡೆಯುತ್ತದೆಯೋ ಗೊತ್ತಿಲ್ಲ. ಆ ತನಕ ಚಾಮರಾಜನಗರ ಪ್ರಗತಿಯ ಮುಖ್ಯವಾಹಿನಿಗೆ ಬರದೆ ಅಜ್ಞಾತವಾಸದಲ್ಲೇ ಉಳಿಯುವಂತೆ ಕಾಣುತ್ತದೆ.

ಚಾಮರಾಜನಗರ ಜಿಲ್ಲೆಯ ಅತಿ ದೊಡ್ಡ ತಾಲ್ಲೂಕು ಕೊಳ್ಳೇಗಾಲ. ತಾಲ್ಲೂಕಿನ ವಿಸ್ತೀರ್ಣ 2787.7 ಚ.ಕಿ.ಮೀ. ಈ ತಾಲ್ಲೂಕಿನಲ್ಲಿ 125 ಗ್ರಾಮಗಳಿವೆ. 1956ರ ಏಕೀಕರಣದ ನಂತರ ಕೊಳ್ಳೇಗಾಲ ವಿಶಾಲ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಯಿತು. ಈ ಹಿಂದೆ ಈ ತಾಲ್ಲೂಕು ಮದ್ರಾಸ್ ರಾಜ್ಯದ ಕೊಯಮತ್ತೂರು ಜಿಲ್ಲೆಗೆ ಸೇರಿತ್ತು.

ಪ್ರಾಕೃತಿಕವಾಗಿ ಕೊಳ್ಳೇಗಾಲ ಮೈಸೂರು ಪ್ರಸ್ಥಭೂಮಿಯ ಒಂದು ಭಾಗ. ಈ ತಾಲ್ಲೂಕಿನಲ್ಲಿರುವ ಮಲೆಮಾದೇಶ್ವರಬೆಟ್ಟ ಲೋಕಪ್ರಸಿದ್ಧವಾದುದು. 1967ರಲ್ಲಿ ಕೊಳ್ಳೇಗಾಲದಿಂದ ಹನೂರು ವಿಧಾನಸಭಾ ಕ್ಷೇತ್ರ ರೂಪುಗೊಂಡಿತು. ಹೆಚ್. ನಾಗಪ್ಪ, ಆರ್. ರಾಜುಗೌಡ, ಕೆ.ಪಿ. ಶಾಂತಮೂರ್ತಿ, ಜಿ. ವೆಂಕಟೇಗೌಡ ಹಾಗೂ ಚಿಕ್ಕಮರಿಗೌಡ ಈ ವಿಧಾನಸಭಾ ಕ್ಷೇತ್ರದಿಂದ ಮೂಡಿಬಂದ ಜನನಾಯಕರಾಗಿದ್ದಾರೆ. ಇದೀಗ ರಾಜುಗೌಡ ಅವರು ಕೃಷಿ ಆಹಾರ ಸಂಸ್ಕರಣ ಸಚಿವರಾಗಿದ್ದಾರೆ.

ಕೊಳ್ಳೇಗಾಲದ ಉತ್ತರ ಮತ್ತು ಪೂರ್ವದ ಅಂಚುಗಳಲ್ಲಿ ಕಾವೇರಿ ನದಿ ಹರಿಯುತ್ತದೆ. ನದಿಯ ಗಗನಚುಕ್ಕಿ ಹಾಗೂ ಭರಚುಕ್ಕಿ ಜಲಪಾತಗಳು ತಾಲ್ಲೂಕಿನ ವಾಯುವ್ಯ ಭಾಗದಲ್ಲಿದೆ. ಸುವರ್ಣಾವತಿ ನದಿ ಈ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಹರಿದು ಕಾವೇರಿ ನದಿಯನ್ನು ಸೇರುತ್ತದೆ. ತಾಲ್ಲೂಕಿನ ವಾರ್ಷಿಕ ಮಳೆ 791.3 ಮಿ.ಮೀ. ತಾಲ್ಲೂಕಿನ ಅರ್ಧಭಾಗ

ಬೆಟ್ಟಗುಡ್ಡಗಳಿಂದ ಆವೃತವಾಗಿದೆ. ಕೊಳ್ಳೇಗಾಲ ತಾಲ್ಲೂಕು ದಟ್ಟವಾದ ಕಾಡುಗಳಿಂದ ಕೂಡಿದೆ. ಮುಳ್ಳೂರು, ಸತ್ತೇಗಾಲ, ಸಿಂಗಾನಲ್ಲೂರು, ಹನೂರು, ಅಜ್ಜಿಪುರ, ಬಲ್ಲೂರು, ಲೊಕ್ಕನಹಳ್ಳಿ, ಬಂಡಿಹಳ್ಳಿ, ಕಾಡಳ್ಳಿ, ಸೆಟ್ಟಳ್ಳಿ ಹಾಗೂ ತೆಲ್ಲನೂರು ಕೊಳ್ಳೇಗಾಲ ತಾಲ್ಲೂಕಿನ ಪ್ರಮುಖ ಸ್ಥಳಗಳು.

ಕೃಷಿ ತಾಲ್ಲೂಕಿನ ಮುಖ್ಯ ಜೀವನಾಧಾರ. ಭತ್ತ, ರಾಗಿ, ಕಡಲೆ ಹಾಗೂ ದ್ವಿದಳ ಧಾನ್ಯ ಪ್ರಮುಖ ಬೆಳೆಗಳು. ರೇಷ್ಮೆ ವ್ಯವಸಾಯಕ್ಕೆ ಅತ್ಯಂತ ಪ್ರಸಿದ್ಧವಾದ ಸ್ಥಳ. ಜೈನಯತಿ ಪೂಜ್ಯಪಾದರು ಈ ತಾಲ್ಲೂಕಿನವರೆಂದು ಹೇಳಲಾಗಿದೆ. ಹಾಗೆಯೇ ನಿಜಗುಣ ಶಿವಯೋಗಿ ಸಹ ಈ ತಾಲ್ಲೂಕಿನವರು. ಮಹದೇಶ್ವರ ಬೆಟ್ಟ ಈ ತಾಲ್ಲೂಕಿನ ಅತ್ಯಂತ ಆಕರ್ಷಣೀಯವಾದ ಕೇಂದ್ರ. ಕ್ರಿ.ಶ. 15 ಮತ್ತು 16 ನೆಯ ಶತಮಾನದಲ್ಲಿ ಮಹದೇಶ್ವರಸ್ವಾಮಿ ಕುಂತೂರು ಮಠದಿಂದ ಇಲ್ಲಿಗೆ ಬಂದು ನೆಲೆಸಿದರೆಂದು ಹೇಳಲಾಗಿದೆ. ಬೆಟ್ಟದ ಮೇಲೆ ಯುಗಾದಿ, ಶಿವರಾತ್ರಿ ಹಾಗೂ ದೀಪಾವಳಿ ದಿನಗಳಂದು ವಿಶೇಷ ಪೂಜೆ ನಡೆಯುತ್ತದೆ. ಹನ್ನೆರಡು ವರ್ಷಕ್ಕೊಮ್ಮೆ ವಿಶೇಷವಾದ ಮಹದೇಶ್ವರ ಜಾತ್ರೆ ನಡೆಯುತ್ತದೆ. ಚಾಮರಾಜನಗರ ತಾಲ್ಲೂಕಿನ ಹರದನಹಳ್ಳಿ ಹೋಬಳಿ ಕಸಬಾ ಗ್ರಾಮದಲ್ಲಿರುವ ಕುಮಾರಾರಾಧ್ಯರ ಮಕ್ಕಳು ಚನ್ನವೀರಾರಾಧ್ಯರು ಬಳಿಯಿರುವ ತಾಮ್ರ ಶಾಸನ ಒಕ್ಕಣೆಯನ್ನು ಗಮನಿಸಬೇಕು :

"ವೀರಬಲ್ಲಾಳ ದೇವರು ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1246ನೆಯ ತಾರಣಸಂಬತ್ತರದ ಮಾಗಸುದ್ದ ತದಿಗೆಯಲು ದಕ್ಷಿಣ ದೇಶ ವಿಜಯಯಾತ್ರೆಯಲು ಬರೆಸಿಕೊಟ್ಟ ತಾಂಬ್ರಶಾಸನ ಕ್ರಮವೆಂತೆಂದೊಡೆ ।।".....ಮೇಲಿನ ಪಂಚಮಠದ ಸ್ವಾಮಿಗಳು ಒಂದು ಬೇಡ ಗಂಪಣಕ್ಕೆ ಲಿಂಗಧಾರಣೆಯಂ ಮಾಡಿ ರಾಯಪ್ಪ ನಾಯ್ಕರಿಗೆ ವೋಕಳಿ ಸೇವೆಗೆ ಕರ್ತನ ಮಾಡಿ ಶ್ರೀ ಮಹಾದೇವನು ಉಪ್ಪಲಿಗಶೆಟ್ಟಿಯ ದೃಢಕ್ಕೆ ಮೆಚ್ಚಿ ಗುಡ್ಡನ ಮಾಡಿ ಯಂಣೆಮಜ್ಜನದ ಸೇವೆಗೆ ಕರ್ತನ ಮಾಡಿ ಭಕ್ತರುಗಳಿಂದೇವಾಲ್ಯವಂ ವಿಸ್ತರಿಸಿ ಇದಕೆ ಪೂಜಾಕರ್ತರು ಆಲಸಾಲಂಮಗ ವಂಶಸ್ಥರಾದ ಕೆಂಪಮಾದ ತಂಮಡಿ ಕಾಳ ಮಾದ..." ಇತ್ಯಾದಿ.

ಮೇಲುಸಕ್ಕರೆ ಉಪ್ಪಾರಶೆಟ್ಟರ ಮತದವರ ಶಾಖಾಗುರು ಮಠ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಬೊಪ್ಪೆಗೌಡನಪುರದ ಹೋಬಳಿಯಲ್ಲಿರುವ ಐಯ್ಯನಸರಗೂರಿನಲ್ಲಿದೆ. ಈ ಗುರುವಂಶಪರಂಪರೆಯ ಮೂಲ ಪುರುಷ ಶ್ರೀ ಮೂಗಪ್ಪ. ಈಗ ಅದೇ ಸಂತತಿಯ ಶ್ರೀ ಚಿನ್ನಸ್ವಾಮಿಯವರು ಆ ಪೀಠದಲ್ಲಿದ್ದಾರೆ. ಮೇಲಿನ ಶಾಸನದಂತೆ ಮಾದೇಶ್ವರಸ್ವಾಮಿಗೆ ಎಣ್ಣೆ ಮಜ್ಜನ ಸೇವೆ ಮಾಡುವ ಕೈಂಕರ್ಯ ಇವರಿಗೆ ಸೇರಿದ್ದು. ಆದರೆ ಕೆಲವು ಮತೀಯ ಗೊಂದಲಗಳಿಂದ ವ್ಯಾಜ್ಯ ಪ್ರಾರಂಭವಾಗಿದ್ದು, ಅದು ನ್ಯಾಯಾಲಯಕ್ಕೆ ಹೋಗಿದೆ. ವಂಶಪಾರಂಪರ್ಯವಾಗಿ ಬಂದಿದ್ದ ಮಹದೇಶ್ವರಸ್ವಾಮಿಯ ಕೈಂಕರ್ಯ ಹಕ್ಕು ಬಾಧ್ಯತೆಗಳಿಗೆ ತಾತ್ಕಾಲಿಕವಾಗಿ ತೊಂದರೆಯಾಗಿದೆಯೆಂದು ಶ್ರೀ ಚಿನ್ನಸ್ವಾಮಿಗಳು ಹೇಳುತ್ತಾರೆ.

ಪರನಟ ಡಾ. ರಾಜಕುಮಾರ್ ಈ ತಾಲ್ಲೂಕಿನವರು. ಕಾಡುಗಳ್ಳ ವೀರಪ್ಪನ್ ವಿರುದ್ಧದ ಕಾರ್ಯಾಚರಣೆ ಈ ತಾಲ್ಲೂಕಿನಲ್ಲಿ ನಡೆಯುತ್ತಲೇ ಇದೆ. ಇದೀಗ ಮಾಜಿ ಸಚಿವ ಎಚ್. ನಾಗಪ್ಪ ಅವರನ್ನು ಕಾಡುಗಳ್ಳ ವೀರಪ್ಪನ್ ಅಪಹರಿಸಿರುವುದನ್ನು ವಿಶೇಷವಾಗಿ ಗಮನಿಸಬೇಕು.

ಲಂಡನ್ ನಗರದಲ್ಲಿರುವ 22 ಅಡಿ ಸುತ್ತಳತೆಯ ಪ್ರಸಿದ್ಧ 'ಬಿಗ್‌ಬೆನ್' ಗಡಿಯಾರಕ್ಕಿಂತ ದೊಡ್ಡದಾದ ಹಾಗೂ ಜಗತ್ತಿನಲ್ಲಿಯೇ ಎರಡನೆಯ ಅತಿ ದೊಡ್ಡದಾದ 24 ಅಡಿ ವ್ಯಾಸದ ಗಡಿಯಾರವನ್ನು ವಿಶೇಷವಾಗಿ ತಯಾರಿಸಿ ಬೆಂಗಳೂರು ನಗರದ ಓಂಕಾರ ಆಶ್ರಮದಲ್ಲಿ ಸ್ಥಾಪಿಸಲು ಆಸಕ್ತಿ ವಹಿಸಿದ ಹಿಂದುಸ್ತಾನ ಮೆಶಿನ್ ಟೂಲ್ಸ್ ಮಾಜಿ ಅಧ್ಯಕ್ಷ ಹಾಗೂ ಮ್ಯಾನೇಜಿಂಗ್ ಡೈರೆಕ್ಟರ್ ಎ. ರಾಮಾನುಜಂ ಅವರು ಕೊಳ್ಳೇಗಾಲದವರು.

ಚಾಮರಾಜನಗರ ಜಿಲ್ಲೆಯ ಪುಟ್ಟ ತಾಲ್ಲೂಕು ಯಳಂದೂರು. ತಾಲ್ಲೂಕಿನ ವಿಸ್ತೀರ್ಣ 264.7 ಚ.ಕಿ.ಮೀ. ಯಳಂದೂರು ಹಾಗೂ ಅಗರ ಈ ತಾಲ್ಲೂಕಿನ ಹೋಬಳಿಗಳು.

ಮರಳು ಮಿಶ್ರಿತ ಕೆಂಪುಮಣ್ಣು ಹಾಗೂ ಕಪ್ಪು ಮಣ್ಣಿನಿಂದಾಗಿ ಯಳಂದೂರು ಅತ್ಯಂತ ಫಲವತ್ತಾದ ಪ್ರದೇಶವಾಗಿದೆ. ಈ ತಾಲ್ಲೂಕಿನಲ್ಲಿ 2,700 ಹೆಕ್ಟೇರ್ ಭೂಮಿಯಲ್ಲಿ ವ್ಯವಸಾಯ ಕೈಗೊಳ್ಳಲಾಗುತ್ತಿದೆ. ಸುಮಾರು 10,722 ಹೆಕ್ಟೇರ್ ಕಾಡು ಈ ತಾಲ್ಲೂಕಿನಲ್ಲಿದೆ. ತೇಗ, ಹೊನ್ನೆ, ಬೀಟೆ, ಮತ್ತಿ, ಕಲ್ಲುಬಾಗಿ ಮರಗಳನ್ನು ಈ ತಾಲ್ಲೂಕಿನ ಕಾಡುಗಳಲ್ಲಿ ಕಾಣಬಹುದು. ವಾರ್ಷಿಕ ಮಳೆ ಸರಾಸರಿ 779 ಮಿ.ಮೀ. ತಾಲ್ಲೂಕಿನ ಮುಖ್ಯ ನದಿ ಸುವರ್ಣಾವತಿ. ಕೆರೆಗಳನ್ನು ಆಶ್ರಯಿಸಿ ಕಬ್ಬು, ಅಡಕೆ, ತೆಂಗು, ಹಿಪ್ಪುನೇರಳೆಗಳನ್ನು ಬೆಳೆಯುತ್ತಾರೆ. ರೇಷ್ಮೆ ಕೃಷಿ ಈ ತಾಲ್ಲೂಕಿನ ಪ್ರಮುಖ ಉದ್ಯಮ.

ಬಿಳಿಗಿರಿರಂಗನ ಬೆಟ್ಟ ಹಾಗೂ ಅಗರ ಈ ತಾಲ್ಲೂಕಿನ ಪ್ರಮುಖ ಪ್ರೇಕ್ಷಣೀಯ ಸ್ಥಳಗಳು. ಅಗರದಲ್ಲಿ ರಾಮೇಶ್ವರ, ನರಸಿಂಹ, ವರದರಾಜ ಹಾಗೂ ದುರ್ಗಾದೇವಿ ಎಂಬ ನಾಲ್ಕು ದೇವಾಲಯಗಳಿವೆ.

ಯಳಂದೂರು ವಿಜಯನಗರ ಕಾಲದಲ್ಲಿ ಸಂಪದ್ಭರಿತ ಪಟ್ಟಣವಾಗಿತ್ತು. ಕ್ರಿ.ಶ. 1801ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ದಿವಾನ್ ಪೂರ್ಣಯ್ಯ ಅವರಿಗೆ ಈ ತಾಲ್ಲೂಕನ್ನು ಉಂಬಳಿಯಾಗಿ ಕೊಟ್ಟರು.

ಈ ತಾಲ್ಲೂಕಿನ ನಗರೇಶ್ವರ ದೇವಾಲಯವನ್ನು ಹದಿನಾಡು ದೊರೆ ನಾಗಿದೇವ ಕ್ರಿ.ಶ. 1450ರಲ್ಲಿ ಕಟ್ಟಿಸಿದನೆಂದು ಹೇಳಲಾಗಿದೆ. ತಮಿಳಿನ ಶಾಸನವೊಂದರಲ್ಲಿ ಈ ಊರನ್ನು 'ಇಳ-ಮರದೂರು' ಎಂದು ಉಲ್ಲೇಖಿಸಲಾಗಿದೆ. ಕಪಿಲೇಶ್ವರ ದೇವಸ್ಥಾನದ ಶಾಸನವೊಂದರಲ್ಲಿ ಇದು ಚೋಳರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಲಾಗಿದೆ.

ರಾಜಶೇಖರ ವಿಳಾಸ ಬರೆದ ಷಡಕ್ಷರದೇವ, ವೈದ್ಯಶಾಸ್ತ್ರ ಗ್ರಂಥ ಬರೆದ ನರಸಿಂಹ ಭಟ್ಟ, ಹದಿಬದೆಯ ಧರ್ಮ ಗ್ರಂಥ ರಚಿಸಿದ ಸಂಚಿ ಹೊನ್ನಮ್ಮ ಹಾಗೂ ಜೈನ ವಿದ್ವಾಂಸ ವಿರೂಪಾಕ್ಷ ಪಂಡಿತ ಈ ತಾಲ್ಲೂಕಿಗೆ ಸೇರಿದವರು.

ಗುಂಡ್ಲುಪೇಟೆ ಚಾಮರಾಜನಗರ ಜಿಲ್ಲೆಯ ಮತ್ತೊಂದು ತಾಲ್ಲೂಕು. ಗುಂಡ್ಲುಪೇಟೆ ರಾಜಧಾನಿ ಬೆಂಗಳೂರಿನಿಂದ 199 ಕಿ.ಮೀ. ದೂರದಲ್ಲಿದೆ. ಊಟಿಗೆ ಹೋಗುವವರು ಇದನ್ನು ಹಾದು ಹೋಗಬೇಕು.

ಗುಂಡ್ಲುಪೇಟೆಯನ್ನು ಮೊದಲು 'ಪ್ರಸನ್ನ ವಿಜಯಪುರ'ವೆಂದು ಕರೆಯುತ್ತಿದ್ದರು. ಕ್ರಿ.ಶ. 1751ರ ಶಾಸನದಲ್ಲಿ ಇದನ್ನು 'ದೂರಾ ಪಟ್ಟಣ' ಎಂದು ಉಲ್ಲೇಖಿಸಲಾಗಿದೆ. 'ಗುಂಡಲು' ಎಂಬ ನದಿ ತೀರದಲ್ಲಿ ಬೆಳೆಯುತ್ತಿದ್ದುದರಿಂದ ಇದಕ್ಕೆ ಗುಂಡ್ಲುಪೇಟೆ ಎಂಬ ಹೆಸರು ಬಂತೆಂಬ ಉಲ್ಲೇಖವಿದೆ. ಈ ತಾಲ್ಲೂಕಿನಲ್ಲಿ 162 ಗ್ರಾಮಗಳಿವೆ. ತಾಲ್ಲೂಕಿನ ಒಟ್ಟು ವಿಸ್ತೀರ್ಣ 1405 ಚ.ಕಿ.ಮೀ. ತಾಲ್ಲೂಕಿನ ವಾರ್ಷಿಕ ಮಳೆ 678.7 ಮಿ.ಮೀ. ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ವೀರಶೈವರು, ಪರಿಶಿಷ್ಟ ಜಾತಿಯವರು, ಉಪ್ಪಲಿಗರು, ಕುಂಬಾರರು, ಗಂಗಟಕಾರ, ಕುರುಬರು, ಮುಸ್ಲಿಂರು, ಅಗಸರು, ನಯನಜ, ಕ್ಷತ್ರಿಯರು, ಲಬ್ಬೆಯರು, ಬ್ರಾಹ್ಮಣರು, ಕ್ರೈಸ್ತರು ಮೊದಲಾದ ಸಮುದಾಯದವರಿದ್ದಾರೆ.

ಈ ತಾಲ್ಲೂಕಿನ ಮುಖ್ಯ ಹೊಳೆ ಗುಂಡ್ಲುಹೊಳೆ. ಇದಕ್ಕೆ ಕೌಂಡಿನ್ಯ ಎಂಬ ಹೆಸರೂ ಇದೆ. ಮೋಯರ್ ನದಿ ಕೂಡಾ ಇಲ್ಲಿ ಹರಿಯುತ್ತದೆ. ಈ ತಾಲ್ಲೂಕಿನ ಪ್ರಮುಖ ಕೆರೆಗಳೆಂದರೆ ಕೋಡಹಳ್ಳಿ ಕೆರೆ, ನಲ್ಲೂರು ಅಮಾನಿಕೆರೆ, ಕೊತನೂರುಕೆರೆ, ಮಲ್ಲಯ್ಯನಪುರ, ಗುಂಡ್ಲುಪೇಟೆ ಹಾಗೂ ಅಣ್ಣೂರು ಕೆರೆಗಳು.

ಶ್ರೀ ಹಿಮವದ್ಗೋಪಾಲಸ್ವಾಮಿ ಈ ತಾಲ್ಲೂಕಿನ ಪ್ರಮುಖ ಬೆಟ್ಟ. ಇದರ ಎತ್ತರ 1446 ಮೀ. ಪಾರ್ವತೀಬೆಟ್ಟ, ಕಂದಾಗಾಲಬೆಟ್ಟ, ಹುಲಿಗನಮರಡಿಬೆಟ್ಟ ಹಾಗೂ ಶ್ರೀರಾಮದೇವರಗುಡ್ಡ ತಾಲ್ಲೂಕಿನ ಎತ್ತರವಾದ ಬೆಟ್ಟಗಳು.

ಈ ತಾಲ್ಲೂಕಿನಲ್ಲಿ 44,800 ಹೆಕ್ಟೇರ್ ಅರಣ್ಯ ಪ್ರದೇಶವಿದೆ. ಇದರಲ್ಲಿ ಶ್ರೀಗಂಧ, ತೇಗ, ಹೊನ್ನೆ, ನಂದಿ, ಹಲಸು, ಸಂಪಿಗೆ, ನೇರಳೆ, ಸುರಗಿ ಮುಂತಾದ ಮರಗಳಿವೆ.

ಗುಂಡ್ಲುಪೇಟೆ ತಾಲ್ಲೂಕಿನ ಖನಿಜ ಸಂಪತ್ತು ವಿಶ್ವ ಪ್ರಸಿದ್ಧವಾದುದು. ಈ ತಾಲ್ಲೂಕಿನ ಮ್ಯಾಂಗನೀಸ್, ಗ್ರಾನೈಟ್ ಹಾಗೂ ಡ್ರೆನೇಟ್ ಶಿಲೆಗಳು ಎಲ್ಲೆಡೆ ಪ್ರಸಿದ್ಧವಾಗಿವೆ.

ಮೈಸೂರು ಸಂಸ್ಥಾನದ ಚಿಕ್ಕದೇವರಾಜ ಒಡೆಯರು ಕ್ರಿ.ಶ. 1674ರಲ್ಲಿ ತಮ್ಮ ಬಾಲ್ಯವನ್ನು ಇಲ್ಲಿ ಕಳೆದದ್ದುಂಟು. ಗುಂಡ್ಲುಪೇಟೆಯ ಜನ ಬಹಳ ಸಾಹಸಿಗರು. ಹುಲಿಯೊಡನೆ ಹೋರಾಡಿದ ಸಾಹಸ ಅವರಲ್ಲಿದೆ. ಈ ಬಗ್ಗೆ ಅನೇಕ ವೀರಗಲ್ಲುಗಳು ಸಾಕ್ಷ್ಯ ನುಡಿಯುತ್ತವೆ. ಈ ತಾಲ್ಲೂಕಿನಲ್ಲಿ 224 ಶಿಲಾಶಾಸನಗಳಿವೆ. ಗಂಗವಾಡಿ 96,000 ಎಂದರೆ ಗುಂಡ್ಲುಪೇಟೆ ಪ್ರದೇಶವನ್ನೊಳಗೊಂಡಿತ್ತೆಂದು ಅರ್ಥ. ಎಂಟನೆಯ ಶತಮಾನದ ಗಂಗರ ಕಾಲದ ಶಾಸನವೊಂದು ನಳ್ಳೂರು ಗ್ರಾಮದಲ್ಲಿ ದೊರಕಿದೆ. ಕೆಲಕಾಲ ಚೋಳರು ಈ ಪ್ರದೇಶವನ್ನು ಆಳಿದ್ದರೆಂದು ಇಲ್ಲಿನ ಅವರ ಶಾಸನಗಳು ಹೇಳುತ್ತವೆ. ಕ್ರಿ.ಶ. 1006 ರಿಂದ ಹೊಯ್ಸಳರ ಅನೇಕ ಶಾಸನಗಳು ದೊರಕಿದ್ದು ಒಂದನೆಯ ನರಸಿಂಹನ (ಕ್ರಿ.ಶ. 1162-63) ಮಹಾ ಪ್ರಧಾನ ಸರ್ವಾಧಿಕಾರಿ ಮಲ್ಲಿಕಾರ್ಜುನ

ದಣ್ಣಾಯಕನ ನಿಟ್ರೆ ಶಾಸನ ಉಲ್ಲೇಖಾರ್ಹ. ಹೊಯ್ಸಳ ಕಾಲದಲ್ಲಿ ನಡೆದ ಪ್ರಮುಖ 'ಕಣ್ಣಾನೂರು ಯುದ್ಧ' ಈ ಪ್ರದೇಶಕ್ಕೆ ಸೇರಿತ್ತು. ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಪಟ್ಟ 40 ಶಾಸನಗಳು ಈ ಪ್ರದೇಶದಲ್ಲಿ ದೊರಕಿವೆ. ವಿಜಯನಗರ ಸಾಮ್ರಾಜ್ಯದ ಒಂದನೆಯ ಬುಕ್ಕರಾಯನ ಮಗ ಕಂಪಣ್ಣ ಒಡೆಯರು ಹಾಗೂ ನಂಜಣ್ಣ ಒಡೆಯರು ಈ ಪ್ರದೇಶವನ್ನು ಆಳುತ್ತಿದ್ದರು. ವಿಜಯನಗರ ಸಾಮ್ರಾಜ್ಯದ ಸಾಮಂತರಾದ ಉಮ್ಮತ್ತೂರು ಪಾಳೇಗಾರರು ಇಲ್ಲಿ ಆಳ್ವಿಕೆ ಮಾಡಿದ್ದಾರೆ. ಈ ವಂಶದ ಸೋಮಣ್ಣ ಒಡೆಯ, ಚಿಕ್ಕಣ್ಣ ಒಡೆಯ, ರೇವಣ್ಣ ಒಡೆಯ ಹಾಗೂ ನಂಜರಾಯ ಒಡೆಯ ಅವರ ಶಾಸನಗಳೂ ದೊರಕಿವೆ. ಮೈಸೂರು ಸಂಸ್ಥಾನದ ಭಾಗವಾಗಿತ್ತು ಗುಂಡ್ಲುಪೇಟೆ ತಾಲ್ಲೂಕು. ಗುಂಡ್ಲುಪೇಟೆ ವಿಜಯನಾರಾಯಣ ಸ್ವಾಮಿ ದೇವಾಲಯದಲ್ಲಿರುವ ಪರವಾಸುದೇವನ ಉತ್ಸವಮೂರ್ತಿ ಪೀಠದ ಮೇಲೆ ಶ್ರೀ ದೊಡ್ಡ ದೇವರಾಜ ಒಡೆಯರ ಶಾಸನವಿದೆ. ಇಮ್ಮಡಿ ಕೃಷ್ಣರಾಜ ಒಡೆಯರ ತಾಮ್ರ ಶಾಸನ ಮಾದಾಪುರ ಪಟ್ಟಣದಲ್ಲಿ ದೊರೆತಿದೆ.

ಗುಂಡ್ಲುಪೇಟೆಯ ಪ್ರಮುಖ ದೇವಾಲಯವೆಂದರೆ ವಿಜಯನಾರಾಯಣ, ಶಾರದ ದೇವಸ್ಥಾನ, ನವಗ್ರಹ, ರಾಮೇಶ್ವರ, ರಾಮದೇವರ ದೇವಾಲಯ, ಆಂಜನೇಯ ದೇವಾಲಯ, ಊರ ಮಧ್ಯೆಯಿರುವ ಮಂಟೇಸ್ವಾಮಿ ಹಾಗೂ ಕೆರೆಯ ಅಂಗಳದಲ್ಲಿ ಪಟ್ಟದಲಮ್ಮ.

ಗುಂಡ್ಲುಪೇಟೆ ತಾಲ್ಲೂಕಿನ ಪ್ರಮುಖ ಪ್ರೇಕ್ಷಣೀಯ ಸ್ಥಳಗಳು ಹೀಗಿವೆ : ತೆರಕಣಾಂಬಿ, ತ್ರಿಯಂಬಕಪುರ, ಹುಲಿಗನಮುರಡಿ, ಕೋಟೆಕೆರೆ, ಹಂಗಳ, ರಾಘವಾಪುರ, ಗೋಪಾಲಸ್ವಾಮಿಬೆಟ್ಟ, ಪಾರ್ವತಿಬೆಟ್ಟ, ಕರಸ್ಥಲ ನಾಗಲಿಂಗನ ಬೆಟ್ಟ ಹಾಗೂ ಬಂಡೀಪುರ ಅಭಯಾರಣ್ಯ.

ತಾಲ್ಲೂಕಿನಲ್ಲಿ ಎರೆಮಣ್ಣು ಮಿಶ್ರಿತ ಕಪ್ಪುಭೂಮಿಯಿದೆ. ತಾಲ್ಲೂಕಿನಲ್ಲಿ 60,600 ಹೆಕ್ಟೇರ್ ಕೃಷಿ ಭೂಮಿಯಿದೆ. ಇದರಲ್ಲಿ ಜೋಳ, ರಾಗಿ, ಹಿಪ್ಪುನೇರಳೆ, ಕಡಲೆ, ಹರಳು, ಹತ್ತಿ, ತೊಗರಿ, ಸೂರ್ಯಕಾಂತಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಮೈಸೂರು ವೀಳ್ಯದೆಲೆಯಂತೆ ಗುಂಡ್ಲುಪೇಟೆ ವೀಳ್ಯದೆಲೆ ಕೂಡಾ ಪ್ರಸಿದ್ಧವಾದುದು.

ಈ ತಾಲ್ಲೂಕಿನ ಪ್ರಮುಖ ನಾಯಕರುಗಳೆಂದರೆ ಕಬ್ಬಳ್ಳಿ ಸಾಹುಕಾರ ಚನ್ನಬಸಪ್ಪ, ಕೆ.ಸಿ. ಸುಬ್ಬಣ್ಣ, ದೊಡ್ಡಹುಂಡಿ ಬೋಗಪ್ಪ, ಅಬ್ದುಲ್ ಗಫಾರ್‌ಖಾನ್, ಪತ್ತರಪುರದ ಚಿಕ್ಕಮಲ್ಲಪ್ಪ, ಕಬ್ಬಳ್ಳಿ ಗಿರಿಯಪ್ಪ, ಕಲ್ಲಹಳ್ಳಿ ಕೊಂಗಳಪ್ಪ, ಅಡವೀಮಠದ ಶಿವಕುಮಾರಸ್ವಾಮೀಜಿ ಕೆ.ಎಸ್. ನಾಗರತ್ನಮ್ಮ, ಹೆಚ್. ಶಿವರುದ್ರಪ್ಪ, ಬಂಡವಾಡಿ ಕಾಳಮಾರಪ್ಪ ಮುಂತಾದವರು.

ಗುಂಡ್ಲುಪೇಟೆ ತಾಲ್ಲೂಕಿನ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರೆಂದರೆ ಜೆ. ಸಿದ್ದನಾಯ್ಕ, ಎಚ್.ಎಸ್. ರಾಮಣ್ಣ, ಜೆ.ವಿ. ಕೃಷ್ಣಮೂರ್ತಿ, ಜೆ.ಎಲ್. ಚಿಕ್ಕಸಿದ್ಧಪ್ಪ, ವೈ.ಜಿ. ಶ್ರೀಕಂಠಾಚಾರ್, ಜಿ.ಎನ್. ಅಪ್ಪಣ್ಣ, ಜಿ.ಎಲ್. ದೊಡ್ಡಸಿದ್ಧಪ್ಪ, ಜಿ.ವಿ. ಶಿವರಾಮಯ್ಯ, ಜಿ.ಪಿ. ಕೃಷ್ಣಶೆಟ್ಟಿ, ಜಿ.ಬಿ. ಚಿಕ್ಕಣ್ಣ, ಹನುಮಂತಪ್ಪ ಮತ್ತು ವೀರಭದ್ರಪ್ಪ ಮುಂತಾದವರು.

ಗುಂಡ್ಲುಪೇಟೆ ತಾಲ್ಲೂಕು ಅತ್ಯುತ್ತಮ ರಾಜಕಾರಣಿಗಳನ್ನು ಪಡೆದ ಕೀರ್ತಿಗೆ ಪಾತ್ರವಾಗಿದೆ. ಭಾರತದಲ್ಲೇ ಪ್ರಪ್ರಥಮ ಮಹಿಳಾ ಸ್ಪೀಕರ್ ಎಂದು ಖ್ಯಾತರಾಗಿರುವ ಶ್ರೀಮತಿ ಕೆ.ಎಸ್. ನಾಗರತ್ನಮ್ಮ ಈ ತಾಲ್ಲೂಕಿನವರು. ನೀರುಸಾಬ್ ಎಂದೇ ಪ್ರಸಿದ್ಧರಾದ ಅಬ್ದುಲ್ ನಸೀರ್‌ಸಾಬ್, ಎರೆಯೂರು ಕನ್ನಯ್ಯ, ಹೆಚ್.ಕೆ. ಶಿವರುದ್ರಪ್ಪ, ಪ್ರಸ್ತುತ ವಿಧಾನಸಭಾ ಸದಸ್ಯರಾದ ಹೆಚ್.ಎಸ್. ಮಹದೇವ ಪ್ರಸಾದ್ ಈ ತಾಲ್ಲೂಕಿನವರು.

ಗುಂಡ್ಲುಪೇಟೆ ಸಾಹಿತ್ಯ, ಕಲೆ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೆ ಗಣನೀಯ ಕೊಡುಗೆ ಕೊಟ್ಟಿದೆ. 15ನೆಯ ಶತಮಾನದಲ್ಲಿ ತೆರಕಣಾಂಬಿಯ ಬೊಮ್ಮರಸನು 'ಸನತ್ಕುಮಾರ ಚರಿತೆ' ಎಂಬ ಕಾವ್ಯ ರಚಿಸಿದನು.

16ನೆಯ ಶತಮಾನದಲ್ಲಿ ಲಕ್ಷ್ಮಯ್ಯ ಎಂಬುವರು 'ಮದನ ಮೋಹಿನಿ' ಎಂಬ ಕತೆಯನ್ನು ಬರೆದರು. ಚಿಕ್ಕದೇವರಾಜ ಒಡೆಯರ ಆಸ್ಥಾನ ಪಂಡಿತ ಚಿಕ್ಕುಪಾಧ್ಯಾಯ ತೆರಕಣಾಂಬಿಯವನಾಗಿದ್ದು ಮೂವತ್ತು ಗ್ರಂಥಗಳನ್ನು ರಚಿಸಿದ್ದಾನೆ.

ವ್ಯಾಕರಣದ ಮಲ್ಲಪ್ಪ ಎಂದು ಖ್ಯಾತರಾಗಿರುವ ಬೇಗೂರು ಮಲ್ಲಪ್ಪ, ಶಿಕ್ಷಣ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡಿದ್ದಾರೆ. ಈ ತಾಲ್ಲೂಕಿನವಾರದ ಸಿ.ಎನ್. ಶ್ರೀನಿವಾಸ ಐಯ್ಯಂಗಾರ್ ಕನ್ನಡದಲ್ಲಿ ವಾಲ್ಮೀಕಿ ರಾಮಾಯಣ ರಚಿಸಿದ್ದಾರೆ. ಖ್ಯಾತ ಸಂಶೋಧಕರಾದ ಜಿ.ಜಿ. ಮಂಜುನಾಥನ್ ಗುಂಡ್ಲುಪೇಟೆಯವರು. ಘನಪಾಠಿ ನಾರಾಯಣ ಅಯ್ಯಂಗಾರ್, ಎಸ್. ಸಿದ್ಧಪ್ಪ, ಜವರೇಗೌಡ (ಶ್ರೀ ವಿಜಯ) ರಾಮದಾಸ ಹಲಗೂರು ಪೀಠಾಧಿಪತಿ ಸ್ವಾಮೀಜಿ ವೀರಭದ್ರಾ ಶಿವಾಚಾರ್ಯರು ಈ ತಾಲ್ಲೂಕಿನ ಪ್ರಮುಖ ಸಾಹಿತ್ಯ ಪುರುಷರು.

## ಉಪ್ಪಾರ ಸಮಾಜ

ಚಾಮರಾಜನಗರ ಜಿಲ್ಲೆಯ ಎಲ್ಲ ತಾಲ್ಲೂಕುಗಳಲ್ಲೂ ಉಪ್ಪಾರರು ಅಧಿಕ ಸಂಖ್ಯೆಯಲ್ಲಿದ್ದಾರೆ. ಈ ಜಿಲ್ಲೆಯಲ್ಲಿ ಗುಂಡ್ಲುಪೇಟೆ (ಸಾಮಾನ್ಯ) ಚಾಮರಾಜನಗರ (ಸಾಮಾನ್ಯ) ಸಂತೆಮಾರಹಳ್ಳಿ (ಮೀಸಲು) ಕೊಳ್ಳೇಗಾಲ (ಮೀಸಲು) ಹಾಗೂ ಹನೂರು (ಸಾಮಾನ್ಯ) ಎಂಬ ಐದು ವಿಧಾನಸಭಾ ಕ್ಷೇತ್ರಗಳಿವೆ. ಅನೇಕ ಕಡೆ ಉಪ್ಪಾರರೇ ನಿರ್ಣಾಯಕ ಮತದಾರರು.

ಇತ್ತೀಚಿಗೆ ಜಿಲ್ಲೆಯಲ್ಲಿ ಸಮೀಕ್ಷೆ ನಡೆಸಿದ್ದು, ಗ್ರಾಮ, ಹೋಬಳಿ, ತಾಲ್ಲೂಕು, ಜಿಲ್ಲೆಯಲ್ಲಿನ ಉಪ್ಪಾರ ಜನಸಂಖ್ಯೆಯನ್ನು ಹೀಗೆ ಸೂಚಿಸಲಾಗಿದೆ.

ಚಾಮರಾಜನಗರ ತಾಲ್ಲೂಕಿನಲ್ಲಿ ಚಾಮರಾಜನಗರ, ಹರದನಹಳ್ಳಿ, ಹರವೆ, ಚಂದಕವಾಡಿ, ಸಂತೆಮರಳ್ಳಿ ಎಂಬ ಐದು ಹೋಬಳಿಗಳಿವೆ. ಚಾಮರಾಜನಗರ ಹೋಬಳಿಯ 22 ಗ್ರಾಮಗಳಲ್ಲಿ ಉಪ್ಪಾರ ಜನಸಂಖ್ಯೆ ಇದ್ದು, ವಿವರಗಳು ಈ ರೀತಿ ಇವೆ : ಚಾಮರಾಜನಗರ ಭಗೀರಥ ಉಪ್ಪಾರ ಬಡಾವಣೆ 3,158 ಕುಟುಂಬಗಳು, ಮೇಗಲ ಬೀದಿ 83, ವರದರಾಜಪುರ

28, ರಾಮಸಮುದ್ರ 97, ಮೂಡಲಮೋಳೆ 128, ಜಾಲಹಳ್ಳಿ ಹುಂಡಿ 189, ಚೆನ್ನಪುರದ ಮೋಳೆ 519, ಭಗೀರಥನಗರ 432, ಬೂದಿತಿಟ್ಟು 126, ಕೂಡ್ಲೂರು 312, ಹಂಡ್ರಕಳ್ಳಿಮೋಳೆ 218, ಮಂಗಲ 563, ಕರಡಿಮೋಳೆ 187, ಯಲಿಕ್ಕೂರು 45, ಹುಲ್ಲೇಪುರ 117, ಮಹಂತಾಳಪುರ 56, ಮರಿಯಾಲ 13, ಬೆಂಡರವಾಡಿ 124, ಮಲ್ಲಯ್ಯನಪುರ 44, ಮೇಗಲಹುಂಡಿ 209, ಬೇಡರಪುರ 118, ಕಟ್ಟೆಪುರ 12, ದೊಡ್ಡಮೋಳೆ 967, ಹರದನಹಳ್ಳಿ ಹೋಬಳಿಯ ಬಂಡಿಗೆರೆ 633, ತಾವರೆಗಟ್ಟಮೋಳೆ 112, ಚಂದುಕಟ್ಟೆ ಮೋಳೆ 237, ಚಿಕ್ಕಮೋಳೆ 283, ಬಾಡಮೂಡಲು 218, ಸೆಡ್ಡು 63, ನಂಜಾಗ್ರ 38, ವೆಂಕಟಯ್ಯನ ಛತ್ರ 327, ಬೇವಿನತಾಳಪುರ 8, ನರಸಮಂಗಲ 124, ಲಕ್ಷ್ಮೀಪುರ 38, ಅಮಚವಾಡಿ 517, ಬೇಡಗುಳಿ 43, ಕೋಳಿಪಾಳ್ಯ 3, ದೊಳ್ಳಿಪುರ 38.

ಹರವೆ ಹೋಬಳಿಯ ಮಲಿಯೂರು 163, ಚಿಕ್ಕಬೇಗೂರು 81, ಹಿರೇಬೇಗೂರು 64, ಮುಕ್ಕಡಹಳ್ಳಿ 38, ಕಾಳನಹುಂಡಿ 208, ಕೊತ್ತಲವಾಡಿ 43, ಕುಮಚಹಳ್ಳಿ 32, ತಮ್ಮಡಹಳ್ಳಿ 137, ಚುದಕವಾಡಿ ಹೋಬಳಿಯ ಕೋಡಿಮೋಳೆ 213, ಸರಗೂರು ಮೋಳೆ 187, ಲಿಂಗರಾಜಪುರ 210, ಕರಿಯನಕಟ್ಟೆ 30, ಆಲೂರು 675, ಕೋಟಂಬಳ್ಳಿ 185, ಬೂದಂಬಳ್ಳಿ ಮೋಳೆ 167, ಇರಸವಾಡಿ 720, ಮಸಣಾಪುರ 40, ಹೊಂಗನೂರು 85, ಬೆಲ್ಲತ್ತೆಕೆರೆ 4, ಕಾಗಲವಾಡಿಮೋಳೆ 712, ಕಾಗಲವಾಡಿ 40, ಅಮ್ಮನಪುರ 80, ಜೋತಿಗೌಡನಮೋಳೆ 67, ನಾಗವಳ್ಳಿಮೋಳೆ 117, ನಾಗವಳ್ಳಿ 368, ಒಂದು ಕಾಸಿನ ಮೋಳೆ 3, ಕೊಕ್ಕನಲ್ಲಿ 120, ಸಂತೆಮರಳ್ಳಿ ಹೋಬಳಿಯ ಹೊಸಮೋಳೆ 215, ಕೆಂಪನಪುರ 125, ಮರಹಳ್ಳಿಮೋಳೆ 247, ನಡಕಲಮೋಳೆ 283, ತೆಳ್ಳನೂರು 96, ಬಾಗ್ಳಿ 45, ಉಮ್ಮತ್ತೂರು 468, ಮೂಡಲ ಅಗ್ರಹಾರ 397, ಕುದೇರು ಮೋಳೆ 510, ತೆಂಕಲಮೋಳೆ 573, ದೇಮಹಳ್ಳಿ ಮೋಳೆ 188, ಕಮರವಾಡಿ 67, ಕಮರವಾಡಿಮೋಳೆ 103. ಹೀಗೆ ತಾಲ್ಲೂಕಿನಲ್ಲಿ 18,796 ಉಪ್ಪಾರ ಕುಟುಂಬಗಳಿದ್ದು, ಅದರಲ್ಲಿ 30,980 ಗಂಡಸರು, 31,204 ಹೆಂಗಸರು ಹಾಗೂ 39126 ಮಕ್ಕಳು ಸೇರಿದಂತೆ ಒಟ್ಟು 101,580 ಉಪ್ಪಾರ ಜನಸಂಖ್ಯೆ ಇದೆ ಎಂದು ತಿಳಿದುಬಂದಿದೆ.

ಯಳಂದೂರು ತಾಲ್ಲೂಕಿನಲ್ಲಿ ಯಳಂದೂರು ಹಾಗೂ ಅಗರ ಎಂಬ ಎರಡು ಹೋಬಳಿಗಳಿವೆ. ಯಳಂದೂರು ಹೋಬಳಿಯ ಬಳೆಪೇಟೆಯಲ್ಲಿ 43 ಕುಟುಂಬಗಳು, ದುಗ್ಗಹಟ್ಟಿಯಲ್ಲಿ 213, ಕಂದಹಳ್ಳಿ 370, ವೈ.ಕೆ. ಮೋಳೆ 880, ಉಪ್ಪಿನ ಮೋಳೆ 417, ಕೃಷ್ಣಾಪುರ 865, ಕೋಮಾರನಪುರ 60, ಗಣಿಗನೂರು 75, ಗೌಡಹಳ್ಳಿ 30, ಅಲ್ಕೆರೆ ಅಗ್ರಹಾರ 30, ಬನ್ನಿಸಾರಿಗೆ 28, ಮದ್ದೂರು 270, ಯರಿಯೂರು 589, ಅಂಬಳೆ 1, ಬಿಳಿಗಿರಿರಂಗನಬೆಟ್ಟ 3, ಅಗರ ಹೋಬಳಿಯ ಹೊನ್ನೂರಲ್ಲಿ 310, ಬೀಚಹಳ್ಳಿ 270, ಕೆಸ್ತೂರು 735, ಕೆಸ್ತೂರು ಹೊಸೂರು 620, ಮಲ್ಲಿಗಳ್ಳಿ 125, ಬಸವಾಪುರ 280. ಕಿನಕಹಳ್ಳಿ 745, ಅಗರದಲ್ಲಿ 5 ಹೀಗೆ ತಾಲ್ಲೂಕಿನಲ್ಲಿ 6964 ಉಪ್ಪಾರ ಕುಟುಂಬಗಳಿದ್ದು, ಅದರಲ್ಲಿ 14,529 ಗಂಡಸರು, 15018 ಹೆಂಗಸರು, 15603 ಮಕ್ಕಳು ಸೇರಿದಂತೆ ಒಟ್ಟು 45,110 ಉಪ್ಪಾರ ಜನಸಂಖ್ಯೆ ಇದೆ.

ಕೊಳ್ಳೇಗಾಲ ತಾಲ್ಲೂಕಿನಲ್ಲಿ ಕೊಳ್ಳೇಗಾಲ, ಪಾಳ್ಯ, ಹನೂರು, ಲೊಕ್ಕನಹಳ್ಳಿ, ರಾಮಾಪುರ ಎಂಬ ಐದು ಹೋಬಳಿಗಳಿವೆ. ಕೊಳ್ಳೇಗಾಲ ಟೌನಿನಲ್ಲಿ 263 ಕುಟುಂಬಗಳು, ಕೊಳ್ಳೇಗಾಲಮೋಳೆ 1817, ಕುಂತೂರು ಮೋಳೆ 572, ಚಿಲಕವಾಡಿ 60, ಟಗರಪುರ ಮೋಳೆ 137, ಹೊಸಮೂಲಂಗಿ 21, ಎಡಮೋಳೆ 60, ಉತ್ತಂಬಳ್ಳಿ 289, ಕುಣಗಳ್ಳಿ 2012, ಅರೇಪಾಳ್ಯ 45, ಹಂಪಾಪುರ 25, ಅಗ್ರಹಾರ 117, ತಿಮ್ಮರಾಜಿಪುರ 8, ಮುಳ್ಳೂರು 627, ಕಲಿಯೂರು 60, ಪಾಳ್ಯಹೋಬಳಿಯ ಪಾಳ್ಯದಲ್ಲಿ 163, ದೊಡ್ಡಿಂದುವಾಡಿ 1612, ಚಿಕ್ಕಿಂದುವಾಡಿ 733, ಇಕ್ಕಡಹಳ್ಳಿ 60, ಸಿಂಗನಲ್ಲೂರು 18, ಗುಂಡಲ್ ಜಲಾಶಯ 30, ಸತ್ತೆಗಾಲ 1118, ಮಧುವನಹಳ್ಳಿ 4200, ಹೊಂಡರಬಾಳು 77, ಲಕ್ಷ್ಮೀಪುರ 73, ಬಸ್ತೀಪುರ 28, ಆಂಜನೇಯಪುರ 712, ತೆಳ್ಳನೂರು 16, ಹನೂರು ಹೋಬಳಿಯ ಹನೂರಿನಲ್ಲಿ 215, ಮಂಗಲ 105, ಬಾಣಹಳ್ಳಿ 15, ಆರ್.ಎಸ್. ದೊಡ್ಡಿ 129, ಕಾಮಗೆರೆ 225, ಲೊಕ್ಕನಹಳ್ಳಿ ಹೋಬಳಿಯ ಲೊಕ್ಕನಹಳ್ಳಿ 713, ಪಿ.ಜಿ. ಪಾಳ್ಯ 13, ಬೈಲೂರು 21, ರಾಮಾಪುರ ಹೋಬಳಿಯ ರಾಮಾಪುರದಲ್ಲಿ 63, ಅಜ್ಜಿಪುರ 215, ಒಡೆಯರಪಾಳ್ಯ 112, ಒಡ್ಡರದೊಡ್ಡಿ 87, ಮಲೆಮಹದೇಶ್ವರಬೆಟ್ಟ 125. ಹೀಗೆ ತಾಲ್ಲೂಕಿನಲ್ಲಿ ಒಟ್ಟು 51 ಗ್ರಾಮಗಳಲ್ಲಿ 16619 ಉಪ್ಪಾರ ಕುಟುಂಬಗಳಿದ್ದು, ಅದರಲ್ಲಿ 31,592 ಗಂಡಸರು, 28,409 ಹೆಂಗಸರು, 41007 ಮಕ್ಕಳು ಸೇರಿದಂತೆ ಒಟ್ಟು 101008 ಉಪ್ಪಾರ ಜನಸಂಖ್ಯೆ ಇದೆ ಎಂದು ತಿಳಿದುಬಂದಿದೆ.

ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಗುಂಡ್ಲುಪೇಟೆ, ಬೇಗೂರು, ತೆರಕಣಾಂಬಿ, ಹಂಗಳ ಎಂಬ ಹೋಬಳಿಗಳಿವೆ. ಗುಂಡ್ಲುಪೇಟೆ ಹೋಬಳಿಯ ಅಣ್ಣೂರುಕೇರಿಯಲ್ಲಿ 1613, ಚಿಕ್ಕಕೋಡಹಳ್ಳಿ 927, ದೊಡ್ಡಕೋಡಹಳ್ಳಿ 1018, ಕೂತನೂರು 416, ಭೀಮನಬೀಡು 2129, ಶಿವಪುರ 210, ಹಸಗೂಲಿ 170, ಮಾಡ್ರಹಳ್ಳಿ 163, ಆಲತ್ತೂರು 81, ಬಂಡಳ್ಳಿ 17, ಬೇಗೂರು ಹೋಬಳಿಯ ಬೇಗೂರಿನಲ್ಲಿ 2213, ರಂಗನಾಥಪುರ 180, ನಿಟ್ರೆ 363, ಬರಗಿ 80, ತೊರೆಹಳ್ಳಿ 21, ಮಾದಾಪುರ 67, ತೊಂಡವಾಡಿ 136, ಬೆಳಚವಾಡಿ 65, ರಾಘವಪುರ 217, ಹಾಲಹಳ್ಳಿ 6, ಸೋಮಹಳ್ಳಿ 13, ಬನ್ನಿತಾಳಪುರ 2180, ಕಲ್ಮಳ್ಳಿ 71, ಮೂಡಗುರು 96, ಪಡುಗೂರು 85, ಹೆಗ್ಗಡಹಳ್ಳಿ 44, ದಾರಿಬೇಗೂರು 10, ಹಂಗಳ ಹೋಬಳಿಯ ಮದ್ದೂರು 21, ಮುದ್ದಯ್ಯನಹುಂಡಿ 17. ಹೀಗೆ ತಾಲ್ಲೂಕಿನಲ್ಲಿ 12629 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 18,884 ಗಂಡಸರು, 18250 ಹೆಂಗಸರು, 27404 ಮಕ್ಕಳು ಸೇರಿದಂತೆ ಒಟ್ಟು 62384 ಉಪ್ಪಾರ ಜನಸಂಖ್ಯೆ ಇದೆ.

ಹೀಗೆ ಜಿಲ್ಲೆಯ ಚಾಮರಾಜನಗರ ತಾಲ್ಲೂಕಿನಲ್ಲಿ 1,01580, ಯಳಂದೂರು ತಾಲ್ಲೂಕಿನಲ್ಲಿ 45,110, ಕೊಳ್ಳೇಗಾಲ ತಾಲ್ಲೂಕಿನಲ್ಲಿ 1,01,008 ಮತ್ತು ಗುಂಡ್ಲುಪೇಟೆ ತಾಲ್ಲೂಕಿನಲ್ಲಿ 6,2384, ಒಟ್ಟು 55,008 ಉಪ್ಪಾರ ಕುಟುಂಬಗಳಲ್ಲಿ 3,10,082 ಉಪ್ಪಾರ ಜನಸಂಖ್ಯೆ ಇದೆ ಎಂದು ಸಮೀಕ್ಷೆಯಿಂದ ತಿಳಿದುಬರುತ್ತದೆ.

ಈ ಕೆಳಗಿನ ಅಂಶಗಳು ಮಹತ್ವದ ಬೆಳಕು ಚೆಲ್ಲುತ್ತವೆ. ಈ ಜಿಲ್ಲೆಯಲ್ಲಿ ಐದು ವಿಧಾನಸಭಾ ಕ್ಷೇತ್ರಗಳಿವೆ. ಅವು (1) ಚಾಮರಾಜನಗರ (ಸಾಮಾನ್ಯ) ಉಪ್ಪಾರ ಜನಸಂಖ್ಯೆ 60,278, (2) ಸಂತೆಮರಹಳ್ಳಿ (ಮೀ) ಉಪ್ಪಾರ ಜನಸಂಖ್ಯೆ 41,302, (3) ಗುಂಡ್ಲುಪೇಟೆ (ಸಾ) ಉಪ್ಪಾರ ಜನಸಂಖ್ಯೆ 62,384, (4) ಕೊಳ್ಳೇಗಾಲ (ಮೀ) ಉಪ್ಪಾರ ಜನಸಂಖ್ಯೆ 79,945, (5) ಹನೂರು (ಸಾ) ಉಪ್ಪಾರ ಜನಸಂಖ್ಯೆ 66,173. ಸಮೀಕ್ಷೆಯಿಂದ ಚಾಮರಾಜನಗರ ತಾಲ್ಲೂಕಿನಲ್ಲಿ 62,184 ಉಪ್ಪಾರ ಮತದಾರರಿದ್ದಾರೆ ಎಂದು ಯಳಂದೂರು ತಾಲ್ಲೂಕಿನಲ್ಲಿ 29,547 ಉಪ್ಪಾರ ಮತದಾರರಿದ್ದಾರೆಂದೂ, ಕೊಳ್ಳೇಗಾಲ ತಾಲ್ಲೂಕಿನಲ್ಲಿ 60,001 ಉಪ್ಪಾರ ಮತದಾರರಿದ್ದಾರೆಂದು, ಗುಂಡ್ಲುಪೇಟೆಯಲ್ಲಿ 37,404 ಉಪ್ಪಾರ ಮತದಾರರಿದ್ದಾರೆಂದು ತಿಳಿದುಬರುತ್ತದೆ. ಅಂದರೆ ಜಿಲ್ಲೆಯ ಐದು ಕ್ಷೇತ್ರಗಳಲ್ಲಿ ಉಪ್ಪಾರರು ನಿರ್ಣಾಯಕ ಮತದಾರರಾಗಿದ್ದಾರೆ. ಇದರಲ್ಲಿ ಸಂತೆಮರಳ್ಳಿ ಹಾಗೂ ಕೊಳ್ಳೇಗಾಲ ಕ್ಷೇತ್ರಗಳು ಮೀಸಲು ಕ್ಷೇತ್ರಗಳಾಗಿದ್ದು, ಇದರಿಂದ ಉಪ್ಪಾರರು ಪ್ರಾತಿನಿಧ್ಯ ಪಡೆಯುವಲ್ಲಿ ವಂಚಿತರಾಗಿದ್ದಾರೆ. ಅಲ್ಲದೆ ಒಂದೇ ಜಿಲ್ಲೆಯಲ್ಲಿ ಎರಡು ಮೀಸಲು ಕ್ಷೇತ್ರಗಳನ್ನು ನಿಗದಿ ಮಾಡಿರುವದು ಅವರಿಗೆ ಮಾರಕವಾಗಿದೆ. ಉಳಿದ ಮೂರು ಕ್ಷೇತ್ರಗಳಲ್ಲಿ ಕೂಡ ಉಪ್ಪಾರರು ಗಣನೀಯ ಪ್ರಮಾಣದಲ್ಲಿದ್ದು, ಅವರಲ್ಲಿ ರಾಜಕೀಯ ಪ್ರಜ್ಞೆ ಹಾಗೂ ಒಗ್ಗಟ್ಟಿನ ಕೊರತೆಯಿಂದಾಗಿ ಬೇರೆಯವರ ಮನೆ ಬಾಗಿಲು ಕಾಯುವ ದುಃಸ್ಥಿತಿ ಬಂದಿದೆ. ಕ್ಷೇತ್ರ ಮರುವಿಂಗಡಣೆಯ ಸಮಯದಲ್ಲಿ ಈ ಭಾಗದ ಉಪ್ಪಾರರು ಈ ಬಗ್ಗೆ ಸರಿಯಾದ ಹೋರಾಟ ಮಾಡಬೇಕಾದದ್ದು ಅನಿವಾರ್ಯ.

ಚಾಮರಾಜನಗರ ಜಿಲ್ಲೆಯ ಉಪ್ಪಾರರು ಕನ್ನಡ ಭಾಷೆಯನ್ನೇ ಬಳಸುತ್ತಾರೆ. ಚಾಮರಾಜನಗರದಲ್ಲಿನ ಉಪ್ಪಾರರು ತಮಿಳು, ಉರ್ದು ಭಾಷೆಗಳನ್ನು ಹೊರವ್ಯವಹಾರಕ್ಕೆ ಬಳಸುತ್ತಾರೆ. ಯಳಂದೂರಿನಲ್ಲಿ ಕೊಂಚ ಉರ್ದು ಬಳಕೆಯಲ್ಲಿದೆ. ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಉಪ್ಪಾರರು ಮಲೆಯಾಳಂ ಹಾಗೂ ತಮಿಳು ಭಾಷೆಯನ್ನು ಬಳಸುತ್ತಾರೆ. ಕೊಳ್ಳೇಗಾಲದ ಉಪ್ಪಾರರು ಯಥೇಚ್ಛವಾಗಿ ತಮಿಳು ಭಾಷೆಯನ್ನು ಉಪಯೋಗಿಸುತ್ತಾರೆ. ಒಟ್ಟಾರೆ ಉಪ್ಪಾರರ ಮಾತೃಭಾಷೆ ಕನ್ನಡವೆಂದು ನಿಸ್ಸಂದೇಹವಾಗಿ ಹೇಳಬಹುದು.

ಚಾಮರಾಜನಗರ ಜಿಲ್ಲೆಯಲ್ಲಿ ಉಪ್ಪಾರರಿಗೆ ಉಪ್ಪಾರ, ಉಪ್ಪಲಿಗಶೆಟ್ಟಿ ಹಾಗೂ ಮೇಲು ಸಕ್ಕರೆಶೆಟ್ಟಿ ಎಂಬ ಹೆಸರುಗಳಿವೆ.

ಚಾಮರಾಜನಗರ ತಾಲ್ಲೂಕಿನಲ್ಲಿ ಶೇ. 15ರಷ್ಟು ವ್ಯವಸಾಯ, ಶೇ. 30 ರಷ್ಟು ವ್ಯಾಪಾರ. ಶೇ. 33 ರಷ್ಟು ಕೂಲಿ ಕಾರ್ಮಿಕರು, ಶೇ. 20ರಷ್ಟು ಕುಶಲಕರ್ಮಿಗಳು ಕೊನೆಯದಾಗಿ ಶೇ. 2ರಷ್ಟು ಜನ ಸರ್ಕಾರಿ ನೌಕರರು ಉಪ್ಪಾರ ಸಮುದಾಯದಲ್ಲಿದ್ದಾರೆ.

ಯಳಂದೂರು ತಾಲ್ಲೂಕಿನಲ್ಲಿ ಉಪ್ಪಾರರು ಶೇ. 33 ರಷ್ಟು ವ್ಯಾಪಾರ, ಶೇಕಡ 20ರಷ್ಟು ವ್ಯವಸಾಯ, ಶೇ. 32ರಷ್ಟು ಕೂಲಿ, ಶೇ. 12ರಷ್ಟು ಕುಶಲಕರ್ಮಿಗಳು ಹಾಗೂ ಶೇ. 3ರಷ್ಟು ಸರ್ಕಾರಿ ನೌಕರಿಯನ್ನು ಮಾಡುತ್ತಿದ್ದಾರೆ.

ಕೊಳ್ಳೇಗಾಲ ತಾಲ್ಲೂಕಿನಲ್ಲಿ ಉಪ್ಪಾರರು ಶೇ. 10 ವ್ಯಾಪಾರಸ್ಥರು, ಶೇ. 33ರಷ್ಟು ವ್ಯವಸಾಯಗಾರರು, ಶೇ. 35 ರಷ್ಟು ಕೂಲಿ ಕಾರ್ಮಿಕರು, ಶೇ. 8ರಷ್ಟು ಕುಶಲ ಕರ್ಮಿಗಳು ಹಾಗೂ ಶೇ. 12ರಷ್ಟು ಸರ್ಕಾರಿ ನೌಕರರೆಂದು ಹೇಳಲಾಗಿದೆ.

ಗುಂಡ್ಲುಪೇಟೆ ತಾಲ್ಲೂಕಿನ ಉಪ್ಪಾರರು ಶೇ. 10ರಷ್ಟು ವ್ಯಾಪಾರ, ಶೇ. 10ರಷ್ಟು ವ್ಯವಸಾಯ, ಶೇ. 65ರಷ್ಟು ಕೂಲಿ, ಶೇ. 13ರಷ್ಟು ಕುಶಲ ಕರ್ಮಿಗಳು ಹಾಗೂ ಶೇ. 2ರಷ್ಟು ಸರ್ಕಾರಿ ನೌಕರಿಯನ್ನು ಹೊಂದಿದ್ದಾರೆ. ಈ ಸಮೀಕ್ಷೆಯಿಂದ ಗುಂಡ್ಲುಪೇಟೆ ಉಪ್ಪಾರರು ಆರ್ಥಿಕವಾಗಿ ಅತ್ಯಂತ ದುಃಸ್ಥಿತಿಯಲ್ಲಿ ಇದ್ದಾರೆಂದು ತಿಳಿದುಬರುತ್ತದೆ. ಚಾಮರಾಜನಗರ ತಾಲ್ಲೂಕಿನಲ್ಲಿ ಉಪ್ಪಾರರು ಬಡವರು ಹಾಗೂ ಕಡುಬಡವರು ಕ್ರಮವಾಗಿ ಶೇ. 40 ಮತ್ತು 20ರಷ್ಟಿದ್ದಾರೆ. ಯಳಂದೂರು ತಾಲ್ಲೂಕಿನಲ್ಲಿ ಬಡವರು ಮತ್ತು ಕಡು ಬಡವರು ಶೇ. 35 ಮತ್ತು 15ರಷ್ಟಿದ್ದಾರೆ. ಕೊಳ್ಳೇಗಾಲ ತಾಲ್ಲೂಕಿನಲ್ಲಿ ಬಡವರು ಶೇ. 35 ಹಾಗೂ ಕಡುಬಡವರು ಶೇ. 20ರಷ್ಟಿದ್ದಾರೆ. ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಶೇ. 55 ಬಡವರು, ಶೇ. 25ರಷ್ಟು ಕಡುಬಡವರಿದ್ದಾರೆ. ಬಡವರು ಹಾಗೂ ಕಡುಬಡವರ ಸಂಖ್ಯೆಯೇ ಅತಿ ಹೆಚ್ಚು. ಬಡತನ ಅಜ್ಞಾನ, ಮೌಢ್ಯ, ಕೀಳರಿಮೆಗಳು ಅಸಂಘಟನೆಗೆ ಕಾರಣವಾಗಿವೆ. ವಿದ್ಯೆ ಕಲಿಕೆಯಲ್ಲಿ ಈ ಸಮುದಾಯ ಅತ್ಯಂತ ಹಿಂದುಳಿದಿದೆ. ಚಾಮರಾಜನಗರ ತಾಲ್ಲೂಕಿನಲ್ಲಿ ಶೇ. 60 ಪುರಷರು, ಶೇ. 75ರಷ್ಟು ಮಹಿಳೆಯರು ಅನಕ್ಷರಸ್ಥರಿದ್ದಾರೆ. ಯಳಂದೂರು ತಾಲ್ಲೂಕಿನಲ್ಲಿ ಶೇ. 70ರಷ್ಟು ಗಂಡಸರು ಹಾಗೂ 85ರಷ್ಟು ಸ್ತ್ರೀಯರು ಅನಕ್ಷರಸ್ಥರಿದ್ದಾರೆ. ಕೊಳ್ಳೇಗಾಲ ತಾಲ್ಲೂಕಿನಲ್ಲಿ ಪುರುಷರು ಶೇ. 45 ಮತ್ತು ಸ್ತ್ರೀಯರು ಶೇ. 55ರಷ್ಟು ಅಕ್ಷರ ಬಾರದವರಿದ್ದಾರೆ. ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಶೇ. 80ರಷ್ಟು ಗಂಡಸರು ಮತ್ತು ಹೆಂಗಸರು ಓದು ಬರಹದಿಂದ ದೂರವಿದ್ದಾರೆ. ಈ ಅಂಕಿ ಅಂಶದಿಂದ ಉಪ್ಪಾರರು ಜಿಲ್ಲೆಯಲ್ಲಿ ಏಕೆ ಸಂಘಟಿತರಾಗಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಜಿಲ್ಲೆಯಲ್ಲಿ ಅವರಿಗೆ ದೊರೆಯಬೇಕಾದ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಉಪ್ಪಾರರು ಶಕ್ತಿಯಾಗಿಯೇ ಉಳಿದಿಲ್ಲ. ಇದಕ್ಕೆ ಕಾರಣ ಅವರ ಅನಕ್ಷರತೆ ಹಾಗೂ ಬಡತನ. ಅದರಿಂದಾಗಿ ಆರ್ಥಿಕ ಸ್ಥಿತಿ ರಸಾತಳಕ್ಕೆ ಕುಸಿದಿದ್ದು ಉಪ್ಪಾರರನ್ನು ಮೇಲೆತ್ತುವುದು ಅತೀ ಜರೂರು.

ಇಂತಹ ಸಮುದಾಯದಲ್ಲಿ ವೈದ್ಯರು, ವಕೀಲರು, ಇಂಜಿನಿಯರ್‌ಗಳು ಹಾಗೂ ಬೃಹತ್ ಉದ್ಯಮಿಗಳನ್ನು ಹುಡುಕುವುದು ಕಗ್ಗತ್ತಲಿನಲ್ಲಿ ಸ್ಪರ್ಶಮಣಿ ಹುಡುಕಿದಂತಾಗುತ್ತದೆ. ಈ ಸಮುದಾಯದಲ್ಲಿ ಮೂರು ಜನ ವೈದ್ಯರಿದ್ದಾರೆ. ಅವರುಗಳೆಂದರೆ ಡಾ।। ನಾಗರಾಜ್ ನಾಗವಳ್ಳಿ, ಡಾ।। ಕೃಷ್ಣಯ್ಯ ವೈ.ಕೆ. ಮೋಳೆ ಹಾಗೂ ಡಾ।। ರಾಜು ವೈ.ಕೆ. ಮೋಳೆ.

ಅದೇ ರೀತಿ ಹತ್ತು ಜನ ವಕೀಲರನ್ನು ಈ ಸಮುದಾಯದಲ್ಲಿ ಗುರುತಿಸಲಾಗಿದೆ. ಅವರು ಎಂ. ಮಹೇಶ್ ಕೆಸ್ತೂರು, ನಾಗರಾಜು ಕೊಳ್ಳೇಗಾಲದ ಮೋಳೆ, ಗುರುನಂಜಶೆಟ್ಟಿ ಕುಂತೂರು ಮೋಳೆ, ವೆಂಕಟೇಶ್ ಮುಳ್ಳೂರು, ದಿಲೀಪ ಚಕ್ರವರ್ತಿ ಚಾಮರಾಜನಗರ,

ವೆಂಕಟಾಚಲ ಮಧುವನಹಳ್ಳಿ, ಸಿದ್ಧಪ್ಪಸ್ವಾಮಿ, ದೇವರಾಜ್, ಎ. ನಟರಾಜು, ಅರಸಶೆಟ್ಟಿ ಮಧುವನಹಳ್ಳಿ ಮುಂತಾದವರು.

ಈ ಸಮುದಾಯಕ್ಕೆ ಸೇರಿದ ಇಂಜಿನಿಯರ್ ಯಾರೂ ಕಾಣಬರುವುದಿಲ್ಲ. ಅದೇ ರೀತಿ ಜಿಲ್ಲೆಯಲ್ಲಿ ಯಥೇಚ್ಛ ಸಂಖ್ಯೆಯಲ್ಲಿ ಸಣ್ಣ ಪುಟ್ಟ ವ್ಯಾಪಾರಸ್ಥರು ಇದ್ದಾರೆ. ಇದು ಅವರಿಗೆ ಜೀವನ ನಿರ್ವಹಣೆಯ ವೃತ್ತಿಯೇ ಹೊರತು ಬೇರೆಯವರಿಗೆ ದೊಡ್ಡ ಪ್ರಮಾಣದಲ್ಲಿ ಅನ್ನ ನೀಡುವ ಉದ್ಯಮವಾಗಿಲ್ಲ. ಯಾವುದೇ ರೀತಿಯ ದೊಡ್ಡ ವ್ಯಾಪಾರವನ್ನು ಉಪ್ಪಾರರು ಆಶ್ರಯಿಸಿಲ್ಲ.

ಹನೂರು ಹೋಬಳಿಯ ಗೋವಿಂದಶೆಟ್ಟಿ ವೃತ್ತಿಯಲ್ಲಿ ಅಧ್ಯಾಪಕರು. ಪ್ರವೃತ್ತಿಯಿಂದ ಕವಿಗಳಾಗಿದ್ದಾರೆ. ಸಾಕ್ಷರತೆ ಕುರಿತು ಬೀದಿ ನಾಟಕಗಳನ್ನು ಬರೆದಿದ್ದಾರೆ. ಚಾ. ಹ. ರಾಮು ವಾಣಿಜ್ಯ ಪದವೀಧರರು. ಕನ್ನಡ ಚಳವಳಿಯ ನಾಯಕರು. ಭಗೀರಥ ಉಪ್ಪಾರ ಯುವ ಸಂಘದ ಅಧ್ಯಕ್ಷರು, ಮೂರು ಕಾದಂಬರಿಗಳನ್ನು ರಚಿಸಿದ್ದು ಅವಿನ್ನೂ ಬೆಳಕು ಕಂಡಿಲ್ಲ.

ಈ ಸಮುದಾಯಕ್ಕೆ ಸೇರಿದ ಮೂವರು ಕಲಾವಿದರನ್ನು ಗುರುತಿಸಲಾಗಿದೆ. ಚೆನ್ನಿಗ ಆರ್ಟ್ಸ್, ಶಿವಣ್ಣ ಕೆ. ಹಾಗೂ ವೆಂಕಟೇಶ್ ಉಪ್ಪಾರ ಜನಾಂಗಕ್ಕೆ ಸೇರಿದ ಕಲಾವಿದರು. ಕೊಳ್ಳೇಗಾಲದ ವೆಂಕಟಾಚಲ ಈ ಜಿಲ್ಲೆಯ ಪತ್ರಕರ್ತರು. 'ರೇಷ್ಮೆ ನಗರಿ' ಎಂಬ ದಿನಪತ್ರಿಕೆ ಮತ್ತು 'ಉಪ್ಪಾರ ವೇದಿಕೆ' ಎಂಬ ಮಾಸಪತ್ರಿಕೆಯ ಸಂಪಾದಕರಾಗಿದ್ದಾರೆ.

ಕೊಳ್ಳೇಗಾಲದ ಮೋಳೆಯ ರಾಜಶೆಟ್ಟಿ ಮತ್ತು ಸಂಗಡಿಗರು ಶ್ರೀ ಮಂಟೇಸ್ವಾಮಿ ಕತೆ ಹೇಳುವಲ್ಲಿ ಪರಿಣಿತರು. ಅನೇಕ ಯುವಕರು ದೊಣ್ಣೆವರಸೆ, ಹುಲಿವರಸೆ, ಕೋಲಾಟ ಹಾಗೂ ಇತರ ಜಾನಪದ ಕಲೆಗಳಲ್ಲಿ ಪರಿಣಿತಿ ಪಡೆದಿದ್ದಾರೆ.

ಉಪ್ಪಾರ ಸಮುದಾಯದಲ್ಲಿ ನಿರೀಕ್ಷೆಯಷ್ಟು ರಾಜಕಾರಣಿಗಳು ಬೆಳಕಿಗೆ ಬಂದಿಲ್ಲ. ಸ್ವಾತಂತ್ರ್ಯಾನಂತರ ಈ ಜಿಲ್ಲೆಯಿಂದ ಒಂದಿಬ್ಬರು ವಿಧಾನಸಭಾ ಸದಸ್ಯರು ಇಷ್ಟು ಹೊತ್ತಿಗೆ ಈ ಸಮುದಾಯದಿಂದ ಬರಬೇಕಾಗಿತ್ತು. ಜಾಗೃತಿ ಹಾಗೂ ಸಂಘಟನೆಯ ಕೊರತೆಯಿಂದಾಗಿ ಜಿಲ್ಲೆಯಲ್ಲಿ ದೊಡ್ಡಮಟ್ಟದ ನಾಯಕರೇ ಬಂದಿಲ್ಲ.

ದಿ. ಎ. ಮಸಣಸೆಟ್ಟಿಯವರು ಕೊಳ್ಳೇಗಾಲ ತಾಲ್ಲೂಕು ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾಗಿ ಮತ್ತು ವಿಧಾನ ಪರಿಷತ್ತು ಸದಸ್ಯರಾಗಿ ಗಣನೀಯ ಸೇವೆ ಸಲ್ಲಿಸಿದ್ದಾರೆ. ಯಳಂದೂರಿನ ದಿವಂಗತ ಜವರಾಯಿಸೆಟ್ಟಿಯವರೂ ಕೂಡ ತಾಲ್ಲೂಕು ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾಗಿ, ವಿಧಾನ ಪರಿಷತ್ ಸದಸ್ಯರಾಗಿ ಉತ್ತಮ ಸೇವೆ ಸಲ್ಲಿಸಿದ್ದಾರೆ. ಅದೇ ತಾಲ್ಲೂಕಿನ ಹನುಮಂತಸೆಟ್ಟರು ಕೂಡ ಬೆಂಗಳೂರಿನ ದೇವರಾಜ ಅರಸು ಟ್ರಕ್ಸ್ ಟರ್ಮಿನಲ್ ಅಧ್ಯಕ್ಷರಾಗಿ, ಮಧುವನಹಳ್ಳಿ ಎ. ನಟರಾಜ ಅವರು ಕಾಡಾ ಅಧ್ಯಕ್ಷರಾಗಿ, ಚಾಮರಾಜನಗರದ ಶಿವನಂಜಯ್ಯ ಅವರು ಚಾಮರಾಜನಗರ ಪುರಸಭೆಯ ಅಧ್ಯಕ್ಷರಾಗಿ ಉತ್ತಮ ಸೇವೆ ಸಲ್ಲಿಸಿದ್ದಾರೆ.

ಶಿವನಂಜಯ್ಯ ಅವರು ಪ್ರಸ್ತುತ ಚಾಮರಾಜನಗರ ಸಭೆಯ ಉಪಾಧ್ಯಕ್ಷರು. ಜಿ.ಎಂ.

ಗಾಡ್ಕರ್ 1999 ವಿಧಾನಸಭಾ ಚುನಾವಣೆಯಲ್ಲಿ ಚಾಮರಾಜನಗರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಭಗೀರಥ ಉಪ್ಪಾರ ಯುವಕ ಸಂಘ ಹಾಗೂ ಭಗೀರಥ ಉಪ್ಪಾರ ಮಹಾಸಭಾದ ಸಂಸ್ಥಾಪಕ ಅಧ್ಯಕ್ಷರು.

ಹನುಮಂತಶೆಟ್ಟರು ಕೂಡ 1999ರ ವಿಧಾನಸಭಾ ಚುನಾವಣೆಯಲ್ಲಿ ಚಾಮರಾಜನಗರ ಕ್ಷೇತ್ರದಿಂದ ಸ್ಪರ್ಧಿಸಿದ್ದರು. ಭಾರತಿ ನಾಗರಾಜ್ ಜಿಲ್ಲಾ ಪಂಚಾಯತ್ ಸದಸ್ಯರು, ನಾಗರತ್ನ ಸಣ್ಣ ಮಾದಶೆಟ್ಟಿ ಜಿಲ್ಲಾ ಪಂಚಾಯಿತಿ ಸದಸ್ಯರು, ಅಣ್ಣೂರು ಕೇರಿ ರಾಜಣ್ಣ ಜಿಲ್ಲಾ ಪಂಚಾಯತ್ ಸದಸ್ಯರು, ಎಂ.ಪಿ. ಗೋಪಾಲಕೃಷ್ಣ ಅಧ್ಯಕ್ಷರು ತಾಲ್ಲೂಕು ಪಂಚಾಯತ್ ಚಾಮರಾಜನಗರ, ಚಿಕ್ಕರಂಗಶೆಟ್ಟರು ಮಾಜಿ ತಾಲ್ಲೂಕು ಪಂಚಾಯತಿ ಸದಸ್ಯರು, ಹೆಚ್.ಎಂ. ಮಹಾದೇವ ಶೆಟ್ಟರು ಅಧ್ಯಕ್ಷರು ಹರದನಹಳ್ಳಿ ಗ್ರಾಮ ಪಂಚಾಯತ್, ಪುಟ್ಟರಂಗಶೆಟ್ಟಿ ಮಾಜಿ ಜಿಲ್ಲಾ ಪಂಚಾಯತ್ ಸದಸ್ಯರು ಯಳಂದೂರು, ನಾಗರಾಜ ಮಾಜಿ ಜಿಲ್ಲಾ ಪಂಚಾಯತ್ ಸದಸ್ಯರು, ಗುಂಡ್ಲುಪೇಟೆ ಕೆ. ನಟರಾಜ್ ಸದಸ್ಯರು ಕರ್ನಾಟಕ ಮೀನು ಸಹಕಾರ ಮಂಡಳಿ. ಹಾಗೂ ಗೋವಿಂದ ಶೆಟ್ಟಿ ಉಪಾಧ್ಯಕ್ಷರು ಗುಂಬಳ್ಳಿ ಗ್ರಾಮಪಂಚಾಯಿತಿ ಯಳಂದೂರು ತಾಲ್ಲೂಕು.

ಉಪ್ಪಾರ ಸಮುದಾಯಕ್ಕೆ ಸೇರಿದ ನಗರಸಭಾ ಸದಸ್ಯರೆಂದರೆ ಕೆಂಪರಾಜು, ಜಯಲಲಿತಾ ಶಿವಣ್ಣ, ಕಮಲಮ್ಮ ಗೋವಿಂದರಾಜು ಹಾಗೂ ಬಿ. ನಾರಾಯಣಸ್ವಾಮಿ.

ಸಾಂಸ್ಕೃತಿಕ ಕ್ಷೇತ್ರದಲ್ಲೂ ಉಪ್ಪಾರ ಸಮುದಾಯಕ್ಕೆ ಸೇರಿದ ಅನೇಕ ಗಣ್ಯ ವ್ಯಕ್ತಿಗಳಿರುವುದನ್ನು ಕಾಣಬಹುದು. ಅವರುಗಳೆಂದರೆ ಕುಸ್ತಿ ಪಟುಗಳಾದ ಪೈಲ್ವಾನ್ ನಂಜುಂಡಶೆಟ್ಟಿ, ಪೈಲ್ವಾನ್ ನಂಜಶೆಟ್ಟಿ, ಪೈಲ್ವಾನ್ ಅಣ್ಣಯ್ಯ ಹಾಗೂ ಪೈಲ್ವಾನ್ ಮಹದೇವಶೆಟ್ಟಿ.

ಅಥ್ಲೆಟಿಕ್ ಪಟುಗಳೆಂದರೆ ರಾಜ್ಯಮಟ್ಟ ಓಟಗಾರರಾದ ಎನ್. ನಂಜುಂಡಶೆಟ್ಟಿ, ಅದೇ ರೀತಿ ಎಸ್. ರಮೇಶ್ ಹಾಗೂ ಜಿಲ್ಲಾ ಮಟ್ಟದ ಓಟದ ಸ್ಪರ್ಧೆಯಲ್ಲಿ ಭಾಗವಹಿಸಿದ್ದ ಎಂ. ನಾರಾಯಣ ಅವರುಗಳನ್ನು ಹೆಸರಿಸಬಹುದು.

ಸಮಾಜ ಸೇವೆಯಲ್ಲಿ ಶಿವನಂಜಸೆಟ್ಟರು, ಹನುಮಂತಸೆಟ್ಟರು, ಡಿ. ನಂಜಸೆಟ್ರು, ಎ. ನಟರಾಜ, ಶಾಂತಮ್ಮ, ಎ. ಅರಸುಸೆಟ್ಟಿ ಸಿ. ಪಟ್ಟರಂಗಸೆಟ್ಟಿ, ಚಾ.ಹ. ರಾಮು, ಸಿ.ಬಿ. ನಾಗರಾಜು, ಚಾ.ಹ. ಶಿವರಾಜು, ಸಿ.ಕೆ. ರಂಗರಾಮು, ಸಿ.ಎಂ. ಕೆಂಪರಾಜು, ಎಂ. ಗೋವಿಂದರಾಜು, ಜಯಲಲಿತಾ ಶಿವಣ್ಣ, ಎನ್. ಮಹಾದೇವಸ್ವಾಮಿ, ಎಸ್. ಮಹಾದೇವಸೆಟ್ಟಿ, ಪುಟ್ಟರಾಜು, ನಂಜಸೆಟ್ಟಿ, ಜಿ.ಎಂ. ಗಾಡ್ಕರ್, ಹೆಚ್.ಎಂ. ಮಹಾದೇವಸೆಟ್ಟಿ, ವೈ.ಸಿ. ಶಿವಪ್ರಕಾಶ, ಎಂ. ಚಿಕ್ಕಮಹದೇವು, ಜಿ. ಮಹೇಶ, ಎಂ.ಪಿ. ಗೋಪಾಲಕೃಷ್ಣ, ಅಣ್ಣೂರಕೇರಿ ರಾಜಣ್ಣ, ಭಾರತಿ ನಾಗರಾಜು, ನಾಗರತ್ನ ಸಣ್ಣಮಾದಸೆಟ್ಟಿ, ಕಮಲಮ್ಮ ಗೋವಿಂದರಾಜು, ಬಿ. ನಾರಾಯಣಸ್ವಾಮಿ ಮುಂತಾದವರು ಉಲ್ಲೇಖಾರ್ಹರು.

ಸುಮಾರು ಮೂರು ಲಕ್ಷಕ್ಕೂ ಮೇಲ್ಪಟ್ಟು ಇರುವ ಉಪ್ಪಾರರು ಇನ್ನು ಅಸಂಘಟಿತರಾಗಿದ್ದಾರೆ. ಸ್ಥಳೀಯರಾದ, ಮೈಸೂರಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಸಹ ನಿರ್ದೇಶಕರಾದ ಕೆ. ರಾಮಯ್ಯ 'ಚಾಮರಾಜನಗರ ಜಿಲ್ಲೆಯ ಉಪ್ಪಾರ ನ್ಯಾಯ ತೀರ್ಮಾನದಲ್ಲಿ ಸಿದ್ಧಹಸ್ತರು. ಹಳ್ಳಿಯ ಯಾವುದೇ ಜಗಳ ಅಥವಾ ಯಾರ ಮನೆಯ ಸಣ್ಣ ಪುಟ್ಟ ವೈಮನಸ್ಸುಗಳಿದ್ದರೆ ಅದನ್ನು ಪರಿಹರಿಸಲು ಉಪ್ಪಾರ ಶೆಟ್ಟರಿಗೆ ಮಾತ್ರ ಸಾಧ್ಯ ಎಂಬ ನಂಬಿಕೆ ನಮ್ಮಲ್ಲಿದೆ. ಅವರಲ್ಲಿನ ನ್ಯಾಯಪದ್ಧತಿ ಕ್ರಮ ತಿಳಿಯಲು ಗಡಿಮನೆ, ಕಟ್ಟೇಮನೆ ಮತ್ತು ಗ್ರಾಮ ಅಧ್ಯಯನ ಮಾಡಬೇಕು' ಎನ್ನುತ್ತಾರೆ.

ಕನ್ನಡದ ಖ್ಯಾತ ಲೇಖಕರಾದ ಡಾ. ಪಿ.ಎಸ್. ರಾಮಾನುಜಂ ಅವರು ಚಾಮರಾಜನಗರದಲ್ಲಿ ಉಪ್ಪಾರರು ತುಂಬಾ ಸಜ್ಜನರು, ಶ್ರಮಜೀವಿಗಳು, ನ್ಯಾಯಪರರು, ಅವರಾಡುವ ಭಾಷೆಯಂತೂ ಅಧ್ಯಯನಾರ್ಹವಾದುದು. ಅವರು ಬಳಸುವ ಕನ್ನಡದಲ್ಲಿ ವಿಶಿಷ್ಟ ರೀತಿಯ 'ಯಾಸೆ'ಯನ್ನು ಕಾಣಬಹುದು ಎಂದಿದ್ದಾರೆ.

ಇಷ್ಟು ದೊಡ್ಡ ಸಮುದಾಯ ಜಿಲ್ಲೆಯಲ್ಲಿದ್ದರೂ ವಿದ್ಯಾರ್ಥಿ ನಿಲಯಗಳಿಲ್ಲ. ಸಮುದಾಯದಿಂದ ನಡೆಸುವ ಯಾವುದೇ ಶಾಲಾ ಕಾಲೇಜುಗಳಿಲ್ಲ. ತುಂಬಾ ಮುಗ್ಧರಾದ ಉಪ್ಪಾರರನ್ನು ಸಂಘಟಿಸುವ ಕಾರ್ಯವೇ ನಡೆದಿಲ್ಲ. ಉಪ್ಪಾರ ಸಮುದಾಯ ತನ್ನ ಶಕ್ತಿ ಸಾಮರ್ಥ್ಯಗಳನ್ನು ರಾಜ್ಯಮಟ್ಟದಲ್ಲಿ ಎತ್ತಿಹಿಡಿಯಬೇಕಾದರೆ ಚಾಮರಾಜನಗರ ಕ್ಷೇತ್ರವನ್ನು 'ಕರ್ಮ ಭೂಮಿ' ಯನ್ನಾಗಿ ಮಾಡಿಕೊಳ್ಳಬೇಕು. ಗ್ರಾಮದಿಂದ ಜಿಲ್ಲೆಯ ತನಕ ಒಂದೆಂಬಂತೆ ಉಪ್ಪಾರ ಸಮುದಾಯ ಒಂದುಗೂಡಬೇಕು. ಇದಕ್ಕೆ ರಾಜ್ಯಮಟ್ಟದ ನಾಯಕರು ಕಾಯೇನ ವಾಚಾ ಮನಸಾ ದುಡಿಯಬೇಕು.

ಆರ್ಥಿಕವಾಗಿ ಅತ್ಯಂತ ಹಿಂದುಳಿದ ಉಪ್ಪಾರರನ್ನು ಪ್ರಗತಿ ಪಥಕ್ಕೆ ಕೊಂಡೊಯ್ಯಬೇಕು. ಈ ಸಮುದಾಯದ ಮಕ್ಕಳಿಗೆ ಬೇಕಾದ ವಿದ್ಯೆಯನ್ನು ನೀಡಲು ವಿದ್ಯಾಸಂಸ್ಥೆಗಳನ್ನೂ ಅವರಿಗಾಗಿ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಬೇಕು. ಸಣ್ಣಪುಟ್ಟ ವ್ಯಾಪಾರಸ್ಥರ ಅನುಕೂಲಕ್ಕೆ ಭಗೀರಥ ಪತ್ತಿನ ಸಹಾಕರ ಸಂಘ ಹಾಗೂ ಭಗೀರಥ ಸಹಕಾರ ಬ್ಯಾಂಕ್‌ನ್ನು ಪ್ರಾಂಭಿಸಬೇಕು. ಸಾಮಾಜಿಕ ಹಾಗೂ ಸಾಂಸ್ಕೃತಿಕ ಸೇವೆಗಾಗಿ ಸಂಘ ಸಂಸ್ಥೆಗಳನ್ನು ರೂಪಿಸಬೇಕು. ಹೀಗೆ ಹತ್ತು ಹಲವು ಕಾರ್ಯಕ್ರಮಗಳನ್ನು ರೂಪಿಸಲು ಉಪ್ಪಾರ ಸಮುದಾಯದಲ್ಲಿ ನಾಯಕತ್ವ ಬೆಳೆಯಬೇಕು. ಈ ಸಮುದಾಯದ ಯಜಮಾನರುಗಳು ಉದಾರಿಗಳಾಗಿ ಈ ಸಮುದಾಯದ ಬಗ್ಗೆ ಚಿಂತನೆ ಮಾಡುವ ಮೂಲಕ ಅದರ ಏಳಿಗೆಗೆ ಅನುಕೂಲವಾಗುವಂತೆ ಹೊಸ ಹೊಸ ನಾಯಕರನ್ನು ಬೆಳಸಬೇಕು. ಆಗ ಮಾತ್ರ ಚಾಮರಾಜನಗರ ಜಿಲ್ಲೆಯ ಉಪ್ಪಾರರ ಬದುಕಿನಲ್ಲಿ ಹೊಸ ಆಶಾಕಿರಣ ಮೂಡಲು ಸಾಧ್ಯವಿದೆ.

**ಮಾಹಿತಿಸಂಗ್ರಹ : ಚಾ.ಹ. ರಾಮು**

*




# * ಮಂಡ್ಯ ಜಿಲ್ಲೆ

## ಐತಿಹಾಸಿಕ ಹಿನ್ನೋಟ

'ಸಕ್ಕರೆಯ ಸೀಮೆ'ಯೆಂದೇ ಖ್ಯಾತವಾಗಿರುವ ಮಂಡ್ಯ ಜಿಲ್ಲೆ ಕರ್ನಾಟಕದ ಹೃದಯವಿದ್ದಂತೆ. ಕರ್ನಾಟಕ ಸಂಸ್ಕೃತಿಯ ಕೇಂದ್ರಸ್ಥಾನವೂ ಹೌದು. ಸಾಹಿತ್ಯ, ಸಂಸ್ಕೃತಿ, ಕಲೆ, ಜಾನಪದ, ಧಾರ್ಮಿಕ ಸಮನ್ವಯತೆ, ಶಿಕ್ಷಣ, ಕ್ರಿಯಾಶೀಲತೆ, ರಾಜಕೀಯ, ಆಧುನಿಕ ವ್ಯವಸಾಯ, ಪ್ರವಾಸೋದ್ಯಮ, ಕೈಗಾರಿಕೆ-ಹೀಗೆ ಯಾವ ಕ್ಷೇತ್ರವನ್ನು ತೆಗೆದುಕೊಂಡರೂ ಮಂಡ್ಯ ಜಿಲ್ಲೆಯನ್ನು ಮರೆಯುವಂತಿಲ್ಲ. ಪ್ರಸ್ತುತ ಕರ್ನಾಟಕ ರಾಜ್ಯಕ್ಕೆ ಮುಖ್ಯಮಂತ್ರಿಯನ್ನು ಕೊಟ್ಟ ಹೆಗ್ಗಳಿಕೆ ಮಂಡ್ಯ ಜಿಲ್ಲೆಯದು.

ಮಂಡ್ಯ ಕರ್ನಾಟಕ ರಾಜ್ಯದ ದಕ್ಷಿಣ ಭಾಗದಲ್ಲಿದೆ. ರಾಜಧಾನಿ ಬೆಂಗಳೂರಿನಿಂದ 90 ಕಿ.ಮೀ. ದೂರದಲ್ಲಿ ಮಂಡ್ಯ ಜಿಲ್ಲಾ ಕೇಂದ್ರವಿದೆ. ಉತ್ತರ ಅಕ್ಷಾಂಶ 12°15' ನಿಂದ 13°15' ಪೂರ್ವ ರೇಖಾಂಶ 76°15 ರಿಂದ 77°20'ವರೆಗೆ ಹರಡಿದೆ. ಮಂಡ್ಯ ಜಿಲ್ಲೆಯ ದಕ್ಷಿಣ ಮತ್ತು ನೈರುತ್ಯದಲ್ಲಿ ಮೈಸೂರು, ವಾಯುವ್ಯದಲ್ಲಿ ಹಾಸನ, ಉತ್ತರದಲ್ಲಿ ತುಮಕೂರು, ಪೂರ್ವದಲ್ಲಿ ಬೆಂಗಳೂರು ಜಿಲ್ಲೆಗಳಿವೆ. ಜಿಲ್ಲೆಯ ವಿಸ್ತೀರ್ಣ 4,958 ಚ.ಕಿ.ಮೀ.

2001ರ ಜನಗಣತಿಯ ಪ್ರಕಾರ ಮಂಡ್ಯ ಜಿಲ್ಲೆಯ ಜನಸಂಖ್ಯೆ 17,61,718. ಅದರಲ್ಲಿ ಪುರುಷರು 8,87,307, ಸ್ತ್ರೀಯರು 8,74,401. ಸಾಕ್ಷರತೆಯ ಪ್ರಮಾಣ ಶೇ. 61.21 ಅದರಲ್ಲಿ ಗಂಡಸರು 70.77, ಹೆಂಗಸರು 51.62.

ಮಂಡ್ಯ ಜಿಲ್ಲೆಯಲ್ಲಿ ಶ್ರೀರಂಗಪಟ್ಟಣ, ಪಾಂಡವಪುರ, ನಾಗಮಂಗಲ, ಕೃಷ್ಣರಾಜ ಪೇಟೆ, ಮಂಡ್ಯ, ಮದ್ದೂರು ಹಾಗು ಮಳವಳ್ಳಿ ಎಂಬ ಏಳು ತಾಲ್ಲೂಕುಗಳಿವೆ.

ಜಿಲ್ಲೆಯ ಬಹುಭಾಗ ಸಮತಟ್ಟಾದ ಬಯಲುಗಳಿಂದ ಕೂಡಿದೆ. ಈ ಪ್ರದೇಶವು ಸಮುದ್ರ ಮಟ್ಟದಿಂದ ಸುಮಾರು 762 ರಿಂದ 914 ಮೀಟರ್ ಎತ್ತರದಲ್ಲಿದೆ.

ಮಳವಳ್ಳಿ ತಾಲ್ಲೂಕಿನ ಪೂರ್ವದ ಅಂಚಿನಲ್ಲಿ ಬಿಳಿಗಿರಿರಂಗನ ಬೆಟ್ಟದ ಸಾಲುಗಳು ಮತ್ತು ದಕ್ಷಿಣದ ಅಂಚಿನಲ್ಲಿ ಹುಲಿಕೆರೆ ಹಾಗು ಕರಿಘಟ್ಟದ ಬೆಟ್ಟಗಳ ಸಾಲುಗಳಿವೆ. ಜಿಲ್ಲೆಯ ಪ್ರಮುಖ ಬೆಟ್ಟಗಳೆಂದರೆ ಆದಿಚುಂಚನಗಿರಿ ಬೆಟ್ಟ, ಮಳವಳ್ಳಿ ತಾಲ್ಲೂಕಿನ ಕಬ್ಬಾಳದುರ್ಗ, ಶ್ರೀರಂಗಪಟ್ಟಣದ ಬಳಿಯ ಕರಿಘಟ್ಟ, ಮೇಲುಕೋಟೆ ಹಾಗು ನಾರಾಯಣದುರ್ಗ. ಕಾವೇರಿ, ಹೇಮಾವತಿ, ಲೋಕಪಾವನಿ, ಶಿಂಷಾ, ವೀರವೈಷ್ಣವಿ ಈ ಜಿಲ್ಲೆಯ ನದಿಗಳು. ಜಿಲ್ಲೆಯ ಬಹುಭಾಗ ನೈಸ್ ಶಿಲಾಪ್ರದೇಶದಿಂದ ಕೂಡಿದೆ. ಜಿಲ್ಲೆಯ ವಾರ್ಷಿಕ ಸರಾಸರಿ ಮಳೆ 691 ಮಿಲಿಮೀಟರ್, ವರ್ಷಕ್ಕೆ ಸರಾಸರಿ 45 ದಿವಸ ಮಳೆಯಾಗುತ್ತದೆ. ಹವಾಗುಣ ತುಂಬ ಹಿತಕರವಾಗಿದೆ.

ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯನವರು ಈ ಜಿಲ್ಲೆಗೆ ಪ್ರಾತಃಸ್ಮರಣೀಯರು. ಅವರು ನಿರ್ಮಿಸಿದ ಕೆ.ಆರ್. ಸಾಗರದ ಪೂರ್ಣ ಪ್ರಯೋಜನ ಈ ಜಿಲ್ಲೆಗೆ ದೊರಕಿದೆ. ಮಂಡ್ಯ ಜಿಲ್ಲೆಯ ಆರ್ಥಿಕ ಕ್ಷೇತ್ರದ ಮೇಲೆ ಕೆ.ಆರ್. ಸಾಗರ ಅಣೆಕಟ್ಟು ಬೀರಿದ ಪ್ರಭಾವ ಅನನ್ಯವಾದುದು. ಮಂಡ್ಯ 'ಭತ್ತದ ಕಣಜ', 'ಸಕ್ಕರೆಯ ಸೀಮೆ' ಎಂದು ಕರೆಯಿಸಿಕೊಳ್ಳಲು ಸರ್ ಎಂ.ವಿ. ಅವರು ಕಾರಣಕರ್ತರಾಗಿದ್ದಾರೆ.

ಭತ್ತದ ಜೊತೆ ಕಬ್ಬು, ರಾಗಿ, ದ್ವಿದಳ ಧಾನ್ಯಗಳು, ಜೋಳ, ತೆಂಗು, ಕಡಲೆಕಾಯಿ ಮೊದಲಾದ ಬೆಳೆಗಳನ್ನು ಈ ಜಿಲ್ಲೆಯಲ್ಲಿ ಕಾಣಬಹುದು. ಪಶುಸಂಪತ್ತು, ಕುರಿಸಾಕಾಣಿಕೆ ಹಾಗು ಮತ್ಸ್ಯೋದ್ಯಮಕ್ಕೆ ಈ ಜಿಲ್ಲೆ ಹೆಸರಾಗಿದೆ.

ಕೈಗಾರಿಕೋದ್ಯಮಕ್ಕೂ ಈ ಜಿಲ್ಲೆ ಖ್ಯಾತವಾಗಿದೆ. 1933ರಲ್ಲಿ 'ಮೈಸೂರು ಶುಗರ್ ಕಂಪನಿ' ಪ್ರಾರಂಭವಾಯಿತು. ಇದು ಕರ್ನಾಟಕದ ಹಳೆಯ ಸಕ್ಕರ ಕಾರ್ಖಾನೆಗಳಲ್ಲಿ ಒಂದು. ಪಾಂಡವಪುರ ಹಾಗು ಭಾರತೀನಗರಗಳಲ್ಲೂ ಸಕ್ಕರೆ ಕಾರ್ಖಾನೆಗಳಿವೆ. ಈ ಜಿಲ್ಲೆಯ ಬೆಳಗೊಳದಲ್ಲಿ 'ಮಂಡ್ಯ ಪೇಪರ್ ಮಿಲ್ಸ್' ಕಾರ್ಖಾನೆ ಇದೆ. ಅದು ಈಗ ಸ್ಥಗಿತಗೊಂಡಿದೆ. ಛಾಯಾಚಿತ್ರ ಉದ್ಯಮಕ್ಕೆ ಬೇಕಾದ ಅಸಿಟೇಟ್ ಅಂಡ್ ಕೆಮಿಕಲ್ಸ್ ಕಂಪನಿ ಮಂಡ್ಯದಲ್ಲಿದೆ. ಆ ಕಾರ್ಖಾನೆ ಕೂಡ ಈಗ ಸ್ಥಗಿತಗೊಂಡಿದೆ. ಮದ್ದೂರು ಬಳಿ ಬಿ.ಪಿ.ಎಲ್. ನವರ ಕೈಗಾರಿಕಾ ಘಟಕವಿದೆ. ರೇಷ್ಮೆ ಉತ್ಪಾದನೆಗೂ ಮಂಡ್ಯ ಜಿಲ್ಲೆ ಪ್ರಸಿದ್ಧವಾಗಿದೆ. ಪಾದರಕ್ಷೆ, ಮಣ್ಣಿನ ವಸ್ತುಗಳು, ಹಿತ್ತಾಳೆ ಪಾತ್ರೆ, ವಿಗ್ರಹ ತಯಾರಿಕೆ, ಚಾಪೆ ನೆಯ್ಗೆ, ಮರಗೆಲಸ, ಕಬ್ಬಿಣದ ಕೆಲಸ ಮುಂತಾದ ಗೃಹ ಕೈಗಾರಿಕೆಗಳು ಈ ಜಿಲ್ಲೆಯಲ್ಲಿವೆ. ಶಿವನಸಮುದ್ರದಲ್ಲಿ ಪ್ರಪ್ರಥಮವಾಗಿ 'ಜಲವಿದ್ಯುತ್' ಕೇಂದ್ರ 1901ರಲ್ಲಿ ಪ್ರಾರಂಭವಾಯಿತು.

ಮಂಡ್ಯ ಜಿಲ್ಲೆ ಶಿಕ್ಷಣ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡಿದೆ. ಮಾಜಿ ಶಿಕ್ಷಣ ಸಚಿವರು ಹಾಗು ಮಂಡ್ಯದ ರೂವಾರಿಗಳಾದ ಕೆ.ವಿ. ಶಂಕರಗೌಡ ಅವರು 'ಜನತಾ ಶಿಕ್ಷಣ ಸಂಸ್ಥೆ'ಯನ್ನು ಸ್ಥಾಪಿಸಿದರು. ಇದರ ಮೂಲಕ ಇಂಜಿನಿಯಿರಿಂಗ್ ಕಾಲೇಜು, ಪದವಿ ಕಾಲೇಜು, ಕಾನೂನು ಕಾಲೇಜು ಹಾಗು ಶಿಕ್ಷಕರ ತರಬೇತಿ ಕಾಲೇಜುಗಳನ್ನು ಪ್ರಾರಂಭಿಸಲಾಯಿತು.

ಆದಿಚುಂಚನಗಿರಿ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದ ಪೂಜ್ಯ ಬಾಲಗಂಗಾಧರ ಸ್ವಾಮೀಜಿಯವರು ಅದಕ್ಕೊಂದು ವಿಶೇಷ ರೂಪ ಕೊಟ್ಟರು.

ಮಾಜಿ ಸಚಿವರಾದ ಜಿ. ಮಾದೇಗೌಡ ಅವರು ಭಾರತಿನಗರದಲ್ಲಿ ಅತ್ಯುತ್ತಮ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರ ಮಂಡ್ಯ ನಗರದಲ್ಲಿದೆ.

ಸಾಹಿತ್ಯ ದೃಷ್ಟಿಯಿಂದ ಮಂಡ್ಯಕ್ಕೆ ಹಿರಿದಾದ ಸ್ಥಾನವಿದೆ. ಪ್ರಾರಂಭದ ಕಾಲದಿಂದಲೂ ಈ ಜಿಲ್ಲೆ ಸಾಹಿತ್ಯ ಸಂಸ್ಕೃತಿಗಳ ತವರೂರು. ರಾಜಶೇಖರ ವಿಲಾಸದ ಷಡಕ್ಷರದೇವ, ಚಿಕ್ಕದೇವರಾಯ, ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ಸಂಚಿಹೊನ್ನಮ್ಮ ಹಾಗು ಶೃಂಗಾರಮ್ಮ ಈ ಜಿಲ್ಲೆಗೆ ಸೇರಿದ ಪ್ರಾಚೀನ ಕಾಲದ ಸಾಹಿತಿಗಳು.

ಆಧುನಿಕ ಯುಗದಲ್ಲಿ ಎಸ್.ಜಿ. ನರಸಿಂಹಾಚಾರ್ಯರು, ಎಂ.ವಿ. ರಾಮಾನುಜಯ್ಯಂಗಾರ್, ಕನ್ನಡದ ಕಣ್ವರಾದ ಪ್ರೊ. ಬಿ.ಎಂ.ಶ್ರೀ., ಎಂ.ಆರ್. ಶ್ರೀನಿವಾಸಮೂರ್ತಿ, ವೀರಕೇಸರಿ ಸೀತಾರಾಮಶಾಸ್ತ್ರಿ, ಪ್ರೊ. ಎ.ಎನ್. ಮೂರ್ತಿರಾವ್, ಡಾ. ಪು.ತಿ. ನರಸಿಂಹಾಚಾರ್, ಡಾ. ಕೆ.ಎಸ್. ನರಸಿಂಹಸ್ವಾಮಿ, ಡಾ. ಎಚ್.ಎಲ್. ನಾಗೇಗೌಡ, ಡಾ. ಜಿ.ಶಂ. ಪರಮಶಿವಯ್ಯ, ಪ್ರೊ. ಜಿ. ವೆಂಕಟಸುಬ್ಬಯ್ಯ, ಜಿ. ನಾರಾಯಣ, ಶಿಕ್ಷಣ ಸಚಿವರು ಹಾಗೂ ಚಿಂತಕರಾದ ಪ್ರೊ. ಬಿ.ಕೆ. ಚಂದ್ರಶೇಖರ್, ಡಾ. ಬೆಸಗರಹಳ್ಳಿ ರಾಮಣ್ಣ, ಪ್ರೊ. ಎಚ್.ಎಲ್. ಕೇಶವಮೂರ್ತಿ, ಹ.ಕ. ರಾಜೇಗೌಡ ಪ್ರೊ॥ ಕೆ. ಭೈರವಮೂರ್ತಿ ಮೊದಲಾದ ಹತ್ತಾರು ಸಾಹಿತ್ಯಪುರುಷರನ್ನು ನೆನೆಯಬಹುದು. ದೊಡ್ಡಾಟ, ಪೂಜಾಕುಣಿತ ಹಾಗು ಸೋಮನಕುಣಿತ ಈ ಜಿಲ್ಲೆಯ ಪ್ರಸಿದ್ದ ಜಾನಪದ ಕಲೆಗಳು.

ಪ್ರಮುಖ ಕಲಾವಿದರಾದ ಚಿತ್ರನಟ ಅಂಬರೀಶ್, ಮಂಡ್ಯದ ರಮೇಶ್, ಬೆಳಕವಾಡಿ ಶ್ರೀನಿವಾಸ ಅಯ್ಯಂಗಾರ್, ವರದರಾಜ ಅಯ್ಯಂಗಾರ್, ಮಳವಳ್ಳಿ ಸುಬ್ಬಣ್ಣ, ಮಳವಳ್ಳಿ ಸುಂದರಮ್ಮ, ಖ್ಯಾತ ನೃತ್ಯಗಾರ್ತಿ ವೈಜಯಂತಿಮಾಲಾ, ದೇಶದ ಪ್ರಸಿದ್ಧ ವರ್ಣಚಿತ್ರಕಾರರಾದ ಎಂ.ಟಿ.ವಿ. ಆಚಾರ್ಯ, ತಮಿಳುನಾಡಿನ ಮುಖ್ಯಮಂತ್ರಿ ಹಾಗು ಚಿತ್ರನಟಿ ಜೆ. ಜಯಲಲಿತಾ ಅವರಿಗೆ ಮಂಡ್ಯ ಜಿಲ್ಲೆಯ ನಿಕಟ ಸಂಬಂಧವಿದೆ.

ಪುರಾಣಗಳ ಪ್ರಕಾರ ಕೃತಯುಗದಲ್ಲಿ ಮಂಡ್ಯ ಜಿಲ್ಲೆಯನ್ನು 'ದೇವಾರಣ್ಯ' ಎಂದು ಕರೆಯಲಾಗುತ್ತಿತ್ತು. ದ್ವಾಪರಯುಗದಲ್ಲಿ ಇಂದ್ರವರ್ಮನೆಂಬ ರಾಜ ಇಲ್ಲಿಗೆ ಬಂದು ತಪಸ್ಸು

ಮಾಡಿದ ಪರಿಣಾಮವಾಗಿ ಅವನಿಗ 'ಸೋಮವರ್ಮ' ಎಂಬ ಮಗ ಜನಿಸಿದ. ಆತ ಇಲ್ಲಿ ಕೋಟೆ ಕೊತ್ತಲು ಹಾಗು ಅಗ್ರಹಾರ ಕಟ್ಟಿಸಿ ಅದಕ್ಕೆ 'ಮಂಡೇಮ' ಎಂದು ಹೆಸರಿಟ್ಟನು. ಅದೇ ಮುಂದೆ 'ಮಂಡ್ಯ' ಎಂದು ಪ್ರಖ್ಯಾತಿಗೆ ಬಂತೆಂಬ ಐತಿಹ್ಯವಿದೆ.

ಮಂಡ್ಯ ಜಿಲ್ಲೆ ಪ್ರಾಗೈತಿಹಾಸ ಕಾಲದಿಂದಲೂ ಜನವಸತಿ ಪ್ರದೇಶವಾಗಿತ್ತು. ಬೆಳಕವಾಡಿ, ಮುತ್ತತ್ತಿ, ಪಾಂಡವಪುರಗಳಲ್ಲಿ ನವಶಿಲಾಯುಗ, ಕಬ್ಬಿಣದ ಯುಗ ಮತ್ತು ಆದಿ ಚಾರಿತ್ರಿಕ ಕಾಲದ ನೆಲೆಗಳು ಕಂಡುಬರುತ್ತವೆ. ಮಂಡ್ಯಜಿಲ್ಲೆ ಕ್ರಿ.ಶ. 4ನೆಯ ಶತಮಾನದಿಂದಲೂ ತಲಕಾಡು ಗಂಗರ ಆಳ್ವಿಕೆಗೆ ಸೇರಿತ್ತು. ಶಿಂಷಾ ಕಣಿವೆ ಪ್ರದೇಶಕ್ಕೆ 'ಚಿಕ್ಕಗಂಗವಾಡಿ' ಎಂಬ ಹೆಸರಿತ್ತು. ಕ್ರಿ.ಶ. 9ನಯ ಶತಮಾನದಲ್ಲಿ ಈ ಜಿಲ್ಲೆಯು ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. 1004ರಲ್ಲಿ ಚೋಳರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತು. ಶಿವನಸಮುದ್ರ ಹಾಗು ಮಳವಳ್ಳಿ ಭಾಗಗಳಿಗೆ 'ರಾಜೇಂದ್ರ ಚೋಳವಳನಾಡು' ಎಂದು ಹೆಸರಿತ್ತು. ಹೊಯ್ಸಳ ವಿಷ್ಣುವರ್ಧನನು ಚೋಳರನ್ನು ಸೋಲಿಸಿ ತಲಕಾಡು ವಶಪಡಿಸಿಕೊಂಡಿದ್ದನೆಂದು ತೊಣ್ಣೂರನ್ನು (ಮೇಲುಕೋಟೆ) ಎರಡನೆಯ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂದು ಹೇಳಲಾಗಿದೆ.

ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಮಂಡ್ಯ ಜಿಲ್ಲೆ ಪ್ರಮುಖ ಕೇಂದ್ರವಾಗಿತ್ತು. ಶ್ರೀರಂಗಪಟ್ಟಣದಲ್ಲಿ ವಿಜಯನಗರದ ರಾಜಪ್ರತಿನಿಧಿಗಳು ಖಾಯಂಆಗಿ ಇರುತ್ತಿದ್ದರು. ಮೈಸೂರು ಒಡೆಯರ್ ಆಳ್ವಿಕೆಯಂತೂ ಈ ಜಿಲ್ಲೆಯನ್ನು ಸುತ್ತಿ ಬಳಸಿತು. ಕ್ರಿ.ಶ. 1799ರಲ್ಲಿ ಶ್ರೀರಂಗಪಟ್ಟಣದಲ್ಲಿ ನಡೆದ ನಿರ್ಣಾಯಕ ಯುದ್ಧದಲ್ಲಿ ಟಿಪ್ಪು ಸೋತು ಮೈಸೂರು ಸಂಸ್ಥಾನ ಬ್ರಿಟಿಷರ ವಶವಾಯಿತು. ಅಲ್ಲಿಂದ ಈ ಜಿಲ್ಲೆ ಮೈಸೂರು ಒಡೆಯರ ಹಾಗು ಕೆಲವು ಕಾಲ ಬ್ರಿಟಿಷರ ನೇರ ಆಳ್ವಿಕೆಗೆ ಒಳಪಟ್ಟಿತ್ತು.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಈ ಜಿಲ್ಲೆಯದು ಪ್ರಮುಖ ಕಾಣಿಕೆಯಿದೆ. 1938ರ ಏಪ್ರಿಲ್‌ನಲ್ಲಿ ಮದ್ದೂರು ಬಳಿಯ ಶಿವಪುರದಲ್ಲಿ ಕಾಂಗ್ರೆಸ್ ಸಭೆ ಸೇರಿದ ಜ್ಞಾಪಕಾರ್ಥ ಅಲ್ಲಿ ಸ್ಮಾರಕವನ್ನು ನಿರ್ಮಿಸಲಾಗಿದೆ. ಎಚ್.ಕೆ. ವೀರಣ್ಣಗೌಡ, ಟಿ. ಸಿದ್ದಲಿಂಗಯ್ಯ, ಕೆಂಗಲ್ ಹನುಮಂತಯ್ಯ ಮೊದಲಾದವರ ನೇತೃತ್ವದಲ್ಲಿ ಸಭೆ ಸೇರಿದ ಕಾಂಗ್ರೆಸ್ ಅಧಿವೇಶನ ಸ್ವಾತಂತ್ರ್ಯ ಹೋರಾಟದಲ್ಲಿ ಅತ್ಯಂತ ಪ್ರಮುಖ ಮೈಲಿಗಲ್ಲು ಎಂದು ಖ್ಯಾತವಾಗಿದೆ. 1942ರ ಕ್ವಿಟ್ ಇಂಡಿಯಾ ಚಳುವಳಿಯಲ್ಲೂ ಈ ಜಿಲ್ಲೆ ಪ್ರಮುಖ ಪಾತ್ರವಹಿಸಿದೆ.

1940ರ ಜುಲೈ 1ರಂದು ಮೈಸೂರು ಜಿಲ್ಲೆಯ ಕೆಲವು ತಾಲ್ಲೂಕುಗಳನ್ನು ಬೇರ್ಪಡಿಸಿ ಮಂಡ್ಯಜಿಲ್ಲೆ ನಿರ್ಮಾಣವಾಯಿತು. ಮಂಡ್ಯ ಜಿಲ್ಲೆಯ ಸಾರ್ವಜನಿಕ ಕ್ಷೇತ್ರದಲ್ಲಿ ಅತಿ ದೊಡ್ಡ ಹೆಸರು ಗಳಿಸಿದೆ. ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಹಾಗು ಮಾಜಿ ಶಿಕ್ಷಣ ಸಚಿವರಾದ ದಿವಂಗತ ಕೆ.ವಿ. ಶಂಕರಗೌಡ ಅವರಿಗೆ ಹಿರಿದಾದ ಸ್ಥಾನವಿದೆ. ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದ ಪಿ.ಎಸ್. ಜವರಪ್ಪಗೌಡ ಅವರ ನೆನಪುಗಳು ಈ ಜಿಲ್ಲೆಯ ಬಗ್ಗೆ ಅಪೂರ್ವ ದಾಖಲೆಯಾಗಿದೆ.

ಎಚ್. ಹೊನ್ನಯ್ಯ, ಟಿ. ಮರಿಯಪ್ಪ, ಎಚ್.ಕೆ. ವೀರಣ್ಣಗೌಡ, ಸಾಹುಕಾರ ಎಸ್. ಚನ್ನಯ್ಯ, ಎಂ.ಕೆ. ಶಿವನಂಜಪ್ಪ, ಮಲ್ಲಿಕಾರ್ಜುನಸ್ವಾಮಿ, ಜಿ. ಮಾದೇಗೌಡ, ಶ್ರೀಕಂಠಯ್ಯ, ಎಸ್.ಎಂ. ಲಿಂಗಪ್ಪ, ಲೀಲಾ ಶಿವನಂಜಪ್ಪ, ಡಾ|| ಬಂದೀಗೌಡ, ಬೊಮ್ಮೇಗೌಡ, ಶಿವಲಿಂಗಯ್ಯ, ಕೆ. ಸಿಂಗಾರಿಗೌಡ, ಚಿಗರಿಗೌಡ, ಬಂಡಿಸಿದ್ದೇಗೌಡ, ಎಚ್.ಡಿ. ಚೌಡಯ್ಯ, ಎಂ.ಎಸ್. ಆತ್ಮಾನಂದ, ಮಂಚೇಗೌಡ, ಕೆ.ಎನ್. ನಾಗೇಗೌಡ, ಬಿ. ಸೋಮಶೇಖರ್, ಲೋಕಸಭಾ ಸದಸ್ಯರಾದ ಅಂಬರೀಶ್ ಹಾಗೂ ಮಾಜಿ ಶಾಸಕರಾದ ಮಲ್ಲಾಜಮ್ಮ, ಶ್ರೀನಿವಾಸ್, ಎಸ್.ಡಿ. ಜಯರಾಂ, ಎಲ್.ಆರ್. ಶಿವರಾಮೇಗೌಡ, ಎಚ್.ಟಿ. ಕೃಷ್ಣಪ್ಪ, ಕೆ.ಎಸ್. ಸಚ್ಚಿದಾನಂದ, ಹೊನ್ನಯ್ಯ ಮೊದಲಾದ ಹತ್ತಾರು ವ್ಯಕ್ತಿಗಳ ಹೆಸರು ಒಮ್ಮೆಲೇ ಜ್ಞಾಪಕಕ್ಕೆ ಬರುತ್ತದೆ.

ಮಂಡ್ಯ ಜಿಲ್ಲೆ ರೈತಸಂಘಟನೆಗೆ ಖ್ಯಾತಿಯಾದ ಜಿಲ್ಲೆ. ವರುಣಾ ನಾಲೆಯ ಅನುಷ್ಠಾನದ ವಿರುದ್ಧ ಚಡ್ಡಿ ಮೆರವಣಿಗೆ ರಾಜ್ಯದ ಪ್ರಮುಖ ರೈತ ಅಂದೋಲನದಲ್ಲಿ ಒಂದಾಗಿದೆ. ಯಾವುದೇ ವೃತ್ತಿ ನಾಟಕ ಬೇರೆಲ್ಲಿ ನಷ್ಟ ಹೊಂದಿದ್ದರೂ ಮಂಡ್ಯಕ್ಕೆ ಬಂದರೆ ಜೇಬು ತುಂಬ ದುಡ್ಡು ಮಾಡಿಕೊಂಡು ಹೋಗುತ್ತಾರೆಂದು ಪ್ರತೀತಿ ಇದೆ.

ರಾಷ್ಟ್ರಕವಿ ಕುವೆಂಪು ಸಾಹಿತ್ಯ ಕೃತಿಗಳು ಮಂಡ್ಯ ಜಿಲ್ಲೆಯಲ್ಲಿ ಪ್ರಸಿದ್ಧವಾಗಿರುವಷ್ಟು ರಾಜ್ಯದ ಯಾವ ಭಾಗದಲ್ಲೂ ಪ್ರಸಿದ್ಧವಾಗಿಲ್ಲ.

ಕರ್ನಾಟಕ ರಾಜ್ಯದ ಗ್ರಾಮೀಣ ಪ್ರದೇಶದ ಸೊಗಡನ್ನು ನೋಡಬೇಕಾದರೆ ಒಮ್ಮೆ ಮಂಡ್ಯ ಜಿಲ್ಲೆಯನ್ನು ಸಂದರ್ಶಿಸಬೇಕು.

## ಉಪ್ಪಾರ ಸಮಾಜ

ಮಂಡ್ಯ ತಾಲ್ಲೂಕಿನಲ್ಲಿ 992 ಉಪ್ಪಾರ ಕುಟುಂಬಗಳಿವೆ. ಅದರಲ್ಲಿ 7,208 ಜನರಿದ್ದಾರೆಂದು ಹೇಳಲಾಗಿದೆ. ಉಪ್ಪಾರ ಸಮುದಾಯ ಹೆಚ್ಚಿರುವ ಮಂಡ್ಯ ತಾಲ್ಲೂಕಿನ ಗ್ರಾಮಗಳೆಂದರೆ ದುದ್ದ, ಉಪ್ಪಾರ ಕೊಪ್ಪಲು, ಮಂಡ್ಯ ನಗರ, ಹೊಳಲು, ಕೋಣನಹಳ್ಳಿಗರೀಭಿ, ಕಾರಸವಾಡಿ, ಕನ್ನಲಿ, ಗುನ್ನಾಯನಕಹಳ್ಳಿ, ಶಿವಳ್ಳಿ, ಪಣಕನಹಳ್ಳಿ, ಹಾಡ್ಯ, ಹುಳ್ಳೇನಹಳ್ಳಿ ಹಾಗು ಮಾಡಬಾಕನಹಳ್ಳಿ.

ಶ್ರೀರಂಗಪಟ್ಟಣ ತಾಲ್ಲೂಕಿನಲ್ಲಿ 350 ಉಪ್ಪಾರ ಕುಟುಂಬಗಳಿದ್ದು, 2,500 ಜನಸಂಖ್ಯೆ ಇದೆ. ಶ್ರೀರಂಗಪಟ್ಟಣ, ರಾಂಪುರ, ಪಾಲಹಳ್ಳಿ, ಬೆಳಗೊಳ ಹಾಗು ಪಾಳ್ಯ ಗ್ರಾಮಗಳಲ್ಲಿ ಉಪ್ಪಾರರು ಹೆಚ್ಚಾಗಿದ್ದಾರೆ.

ಪಾಂಡವಪುರ ತಾಲ್ಲೂಕಿನಲ್ಲಿ 100 ಕುಟುಂಬಗಳಿದ್ದು 737 ಉಪ್ಪಾರ ಸಮುದಾಯದವರಿದ್ದಾರೆ. ಪಾಂಡವಪುರ ಹಾಗು ಮೇಲುಕೋಟೆಗಳಲ್ಲಿ ಹಲವು ಉಪ್ಪಾರರ ಕುಟುಂಬಗಳಿವೆ.

ಕೆ.ಆರ್. ಪೇಟೆ ತಾಲ್ಲೂಕಿನ ಕೆ.ಆರ್. ಪೇಟೆ, ದೇವನಹಳ್ಳಿ, ಬನ್ನಂಗಾಡಿ ಹಾಗು ಬೂಕನಕೆರೆ ಪ್ರದೇಶಗಳಲ್ಲಿ 119 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 992 ಜನರಿದ್ದಾರೆ.

ಮಳವಳ್ಳಿ ತಾಲ್ಲೂಕಿನಲ್ಲಿ 987 ಉಪ್ಪಾರ ಕುಟುಂಬಗಳಿದ್ದು ಅವರಲ್ಲಿ 5,987 ಉಪ್ಪಾರ ಸಮುದಾಯದವರಿದ್ದಾರೆ. ಉಪ್ಪಾರರು ಹೆಚ್ಚಾಗಿರುವ ಮಳವಳ್ಳಿ ತಾಲ್ಲೂಕಿನ ಸ್ಥಳಗಳೆಂದರೆ ಮಳವಳ್ಳಿ, ಬಿ.ಬಿ. ಮೊಳೆ, ಸೋಮನಹಳ್ಳಿ, ಪೂರಿಗಾಲಿ, ಉಪ್ಪಲಗೇರಿಕೊಪ್ಪಲು, ಐನೋರಹುಂಡಿ, ನರೀಪುರ, ತಿಗಡಹಳ್ಳಿ, ಬೆಳಕವಾಡಿ, ಹುಲ್ಲಂಬಳ್ಳಿ, ಸುಜ್ಜಲೂರು, ಗಣಗನೂರು, ಸಿರಮಳ್ಳಿ, ಕುಂದೂರು, ಕೊಡಗಹಳ್ಳಿ, ಶಿಂಷಾ ಬ್ಲಫ್, ಆಲಗಟ್ಟಿ ಕೊಪ್ಪಲು ಮುಂತಾದವುಗಳು.

ನಾಗಮಂಗಲ ತಾಲ್ಲೂಕಿನಲ್ಲಿ 550 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 3,300 ಜನರಿದ್ದಾರೆ. ಹೆಚ್ಚು ಉಪ್ಪಾರ ಜನಸಂಖ್ಯೆ ಇರುವ ಗ್ರಾಮಗಳೆಂದರೆ ಉಪ್ಪಾರಹಳ್ಳಿ, ನಾಗಮಂಗಲ, ಚಾಮನಕೊಪ್ಪಲು, ಚಾಕೇನಹಳ್ಳಿ, ದ್ಯಾಪಸಂದ್ರ, ಬೆಳ್ಳೂರು, ಎಲಾದಹಳ್ಳಿ, ಚೋಳಸಂದ್ರ, ಹೊನ್ನೇಪಳ್ಳಿ, ಮಾರುತೀಪುರ, ಹೊಸಹಳ್ಳಿ ಕೃಷ್ಣಾಪುರ, ದೊಡ್ಡಜಟಕ, ತೊಳಲಿ, ನಾಗಮಂಗಲ ಟಿ.ಬಿ. ಹುಲ್ಲೇಕೆರೆ, ಗೆದ್ದಬೂವನಹಳ್ಳಿ, ಜೋಡಿಚಿಕ್ಕನಹಳ್ಳಿ, ನಲಕುಂದಿ, ಹೆಚ್. ಕೋಡಿಹಳ್ಳಿ, ಬದ್ರಿ ಕೊಪ್ಪಲು ಹಾಗು ಅರಣಿ ಮುಂತಾದವುಗಳು.

ಮದ್ದೂರು ತಾಲ್ಲೂಕಿನಲ್ಲಿ 690 ಉಪ್ಪಾರ ಕುಟುಂಬವಿದ್ದು 5,280 ಜನರಿದ್ದಾರೆ. ಮದ್ದೂರು, ಉಪ್ಪಾರದೊಡ್ಡಿ, ಚಾಪುರದೊಡ್ಡಿ, ಉಪ್ಪಾರಕೊಪ್ಪಲು, ಚಿಕ್ಕಳಲೆ, ತೊಪ್ಪನಹಳ್ಳಿ, ಚುಂದಳ್ಳಿದೊಡ್ಡಿ, ಗೋರೂನಹಳ್ಳಿ, ಮರಕಾರದೊಡ್ಡಿ, ಚನ್ನಸಂದ್ರ ಹಾಗು ಆತಗೂರು ಗ್ರಾಮಗಳಲ್ಲಿ ಉಪ್ಪಾರ ಜನಸಂಖ್ಯೆಯನ್ನು ಗುರುತಿಸಲಾಗಿದೆ.

ಮಂಡ್ಯ ಜಿಲ್ಲೆಯಲ್ಲಿ ಸುಮಾರು 3,788 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 26,004 ಜನರಿದ್ದಾರೆ.

ಮಂಡ್ಯ ಜಿಲ್ಲೆಯ ಉಪ್ಪಾರರು ಹೆಚ್ಚಾಗಿ ಕೂಲಿ ಕಾರ್ಮಿಕರು. ಮೂಲತಃ ಜಮೀನುರಹಿತ ಕುಟುಂಬಗಳೇ ಹೆಚ್ಚು. ಆರ್ಥಿಕವಾಗಿ ತುಂಬ ದುರ್ಬಲವಾದ ಈ ಸಮುದಾಯ ಇಲ್ಲಿಯ ಒಕ್ಕಲಿಗರ ಜೊತೆ ತುಂಬ ಆತ್ಮೀಯವಾಗಿ ಬದುಕುತ್ತಿದೆ.

ಮಂಡ್ಯ ತಾಲ್ಲೂಕಿನ ಡಿ.ಎಂ. ರಾಮಯ್ಯ, ಡಿ.ಪಿ. ಮಾದಯ್ಯ, ಮದ್ದೂರು ತಾಲ್ಲೂಕಿನ ಸಿ.ಎಂ. ಮಹಾದೇವಯ್ಯ, ಮಹಾದೇವಯ್ಯ ಉಪ್ಪಾರ, ಮರಿಮಾದಯ್ಯ ಉಪ್ಪಾರದೊಡ್ಡಿ, ಮಳವಳ್ಳಿ ತಾಲ್ಲೂಕಿನ ಅಯ್ಯನಸರಗೂರು ಮಠದ ಚಿನ್ನಸ್ವಾಮಿಗಳು, ದಿ|| ಎಸ್.ಆರ್. ಮಾದಸೆಟ್ಟಿ, ಜೈಶಂಕರಮೂರ್ತಿ, ಬಿ.ಎಸ್. ಸ್ವಾಮಿ, ನಾಗಮಂಗಲ ತಾಲ್ಲೂಕಿನ ಟಿ. ಕೃಷ್ಣಪ್ಪ, ಎಂ. ರಮೇಶ ಉಪ್ಪಾರಹಳ್ಳಿ, ಎಂ. ಸುಂದರ ಉಪ್ಪಾರಹಳ್ಳಿ, ಪುಟ್ಟಸ್ವಾಮಿ ತೊಳಲೆ ಗ್ರಾಮ ಮುಂತಾದವರನ್ನು ಈ ಸಮುದಾಯದಲ್ಲಿ ಹೆಸರಿಸಬಹುದು. ಮೀಸಲಾತಿ ಅನುಷ್ಠಾನದಿಂದಾಗಿ ಜಿಲ್ಲೆಯಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಏಳು ಜನ ಈ ಸಮುದಾಯವರು ಆಯ್ಕೆ ಆಗಿದ್ದಾರೆ. ಅವರುಗಳೆಂದರೆ ದುದ್ದ ಗ್ರಾಮಪಂಚಾಯ್ತಿಯ ಸದಸ್ಯರಾದ ಡಿ.ಪಿ. ನಾಗಸೆಟ್ಟಿ, ನಾಗಮಂಗಲ

ತಾಲ್ಲೂಕು ಉಪ್ಪಾರಹಳ್ಳಿ ಗ್ರಾಮಪಂಚಾಯ್ತಿಯ ರಾಜು ಮುಡಿ, ತಿಮ್ಮಯ್ಯ, ಮಳವಳ್ಳಿ ತಾಲ್ಲೂಕು ಸರಗೂರು ಗ್ರಾಮ ಪಂಚಾಯ್ತಿಯ ನಿಂಗಸೆಟ್ಟಿ ಹಾಗೂ ಅದೇ ಗ್ರಾಮ ಪಂಚಾಯ್ತಿಯ ಅಧ್ಯಕ್ಷೆಯಾದ ಮಹಾಲಕ್ಷ್ಮಿ, ಮದ್ದೂರು ತಾಲ್ಲೂಕಿನ ಉಪ್ಪಾರದೊಡ್ಡಿ ಗ್ರಾಮ ಪಂಚಾಯ್ತಿ ಸದಸ್ಯರಾದ ಸಿದ್ದಪ್ಪ, ಶಿವರಾಮು ಮುಂತಾದವರು.

ಮೇಲುಸಕ್ಕರೆ ಉಪ್ಪಾರ, ಉಪ್ಪಲಿಗಶೆಟ್ಟಿ ಎಂಬ ಹೆಸರುಗಳಿಂದ ಉಪ್ಪಾರರನ್ನು ಕರೆಯುತ್ತಾರೆ. ಉಪ್ಪಾರರಲ್ಲಿ ಅಕ್ಷರಸ್ಥರ ಸಂಖ್ಯೆ ಶೇಕಡ ಇಪ್ಪತ್ತೈದರಷ್ಟು ಎನ್ನಬಹುದು. ಹೆಂಗಸರ ಅಕ್ಷರಸ್ಥರ ಸಂಖ್ಯೆ ಎರಡು ಅಂಕಿಗೆ ಮುಟ್ಟಿಲ್ಲ. ಮನೆಮಾತು ಕನ್ನಡವೇ ಆಗಿರುತ್ತದೆ. ಇಂಜಿನಿಯರ್, ವಕೀಲರು ಹಾಗು ವೈದ್ಯರು ಈ ಸಮುದಾಯಕ್ಕೆ ಸೇರಿದವರು ಯಾರೂ ಇಲ್ಲ. ಶೇ. 5ರಷ್ಟು ಜನ ಸಣ್ಣ ಪುಟ್ಟ ವ್ಯಾಪಾರ ಮಾಡುತ್ತಿದ್ದಾರೆ.

ಮಂಡ್ಯ ಜಿಲ್ಲೆಯಲ್ಲಿ ಉಪ್ಪಾರ ಅಭಿವೃದ್ಧಿಗೆ ಯಾವುದೇ ರಚನಾತ್ಮಕ ಕೆಲಸ ಆಗಿಲ್ಲ. ಈ ಸಮುದಾಯಕ್ಕೆ ಸೇರಿದ ಕೆ.ಎ.ಎಸ್. ಅಥವಾ ಸರ್ಕಾರಿ ಅಧಿಕಾರಿಗಳು ಯಾರು ಬಾರದ ಕಾರಣ ಸಂಘಟನೆಯೂ ಇಲ್ಲ. ಮೇಲುಸಕ್ಕರೆ ಉಪ್ಪಾರಸಂಘ ಮಂಡ್ಯದಲ್ಲಿ ಅಸ್ತಿತ್ವದಲ್ಲಿದೆ. ರಾಜಋಷಿ ಭಗೀರಥ ಜಯಂತಿಯ ಆಚರಣೆಯನ್ನು ಮಾಡಲಾಗುತ್ತಿವೆ.

ಉಪ್ಪಾರರಿಗೆ ಯಾವುದೇ ಕಲ್ಯಾಣ ಕಾರ್ಯಕ್ರಮಗಳ ಪ್ರಯೋಜನ ದೊರಕುತ್ತಿಲ್ಲ. ಉದಾಹರಣೆಗೆ ಇವರಿಗೆ ಹರಿಜನ ವಿದ್ಯಾರ್ಥಿಗಳಿಗೆ ದೊರೆಯುವ ಎಲ್ಲ ಶೈಕ್ಷಣಿಕ ಪ್ರಯೋಜನ ದೊರೆಯಬೇಕೆಂದು ಸರಕಾರಿ ಆದೇಶ ಹೇಳುತ್ತಿದೆ. ಆದರೆ ಕೆಲವು ಅನುದಾನಿತ ಶಿಕ್ಷಣ ಸಂಸ್ಥೆಗಳು ಈ ಸೌಲಭ್ಯ ಕೊಡಲು ನಿರಾಕರಿಸಿವೆ.

ಗಂಗಾ ಕಲ್ಯಾಣ, ಆಶ್ರಯ ನಿವೇಶನ ಹಾಗು ಡಾ. ಅಂಬೇಡ್ಕರ್ ಮತ್ತು ಇಂದಿರಾ ಅವಾಸ್ ಯೋಜನೆಗಳ ಪ್ರಯೋಜನ ಉಪ್ಪಾರ ಸಮಾಜಕ್ಕೆ ಇನ್ನೂ ದೊರೆಯಬೇಕಾಗಿದೆ. ಉಪ್ಪಾರ ಸಮಾಜಕ್ಕೆ ಅಭಿವೃದ್ಧಿ ಕೆಲಸಗಳನ್ನು ಕೊಡುವ ಸಂಕಲ್ಪವನ್ನು ಅಧಿಕಾರಿವರ್ಗದವರು ಮಾಡಬೇಕು. ರಾಜಕಾರಣಿಗಳು ಈ ದಿಸೆಯಲ್ಲಿ ಇಚ್ಛಾಶಕ್ತಿಯನ್ನು ಪ್ರದರ್ಶಿಸಬೇಕು.

ರಾಜ್ಯಮಟ್ಟದಲ್ಲಿ ಉಪ್ಪಾರರ ಸಂಘಟನೆ ತುಂಬ ಹೀನಾಯ ಸ್ಥಿತಿಯಲ್ಲಿದೆ. ವ್ಯಕ್ತಿ ಪ್ರತಿಷ್ಠೆಯ ಕಾಳಗವಾಗಿ ಈ ಸಂಘಟನೆ ಸೊರಗಿದೆ. ಹೆಚ್. ಸಿ. ನೀರಾವರಿ ಅವರ ದೂರದೃಷ್ಟಿಯ ಫಲವಾಗಿ ಈ ಸಂಘಕ್ಕೆ ಬೆಂಗಳೂರಿನಲ್ಲಿ ಕೋಟ್ಯಂತರ ರೂಪಾಯಿ ಬೆಲೆಬಾಳುವ ನಿವೇಶನ ದೊರಕಿದೆ. ಈಗ ಅಲ್ಲಿ ವಸತಿನಿಲಯವೇನೋ ಕಾರ್ಯಾಚರಣೆ ಮಾಡುತ್ತಿದೆ. ಸಂಘಕ್ಕೆ ಖಾಯಂ ಆದಾಯ ಬರುವ ಯೋಜನೆಯನ್ನು ಮುಖಂಡರು ರೂಪಿಸಬೇಕು. ಮತ್ತೆ ಅದರ ಆದಾಯ ಜಿಲ್ಲಾ ಸಂಘಟನೆಗಳಿಗೆ ಹೋಗಬೇಕು. ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ವಿದ್ಯಾರ್ಥಿ ವಸತಿನಿಲಯಗಳನ್ನು ಸ್ಥಾಪಿಸಬೇಕು. ಸಂಘದ ಕಾರ್ಯಚಟುವಟಿಕೆಗಳು ಇಡೀ ರಾಜ್ಯಾದ್ಯಂತ ವ್ಯಾಪಿಸಬೇಕು. ಡಿ.ಎಸ್. ರಾಮಪ್ಪ ಅವರು ಹನ್ನೊಂದು ವರ್ಷಗಳು ಸಂಘದ ಅಧ್ಯಕ್ಷರಾಗಿ ಜಾಗೃತಿಯ ಕಾರ್ಯವನ್ನು

ಅತ್ಯಂತ ಸಮರ್ಪಕವಾಗಿ ಮಾಡಿದ್ದಾರೆ. ಸಾಮಾನ್ಯ ಉಪ್ಪಾರರಲ್ಲಿ ತಮ್ಮ ದುಸ್ಥಿತಿಗೆ ತಮ್ಮ ಅಸಂಘಟನೆ ಕಾರಣ ಎಂಬ ವಿಚಾರ ಚೆನ್ನಾಗಿ ಮನದಟ್ಟಾಗಿದೆ. ಇಂತಹ ಸ್ಥಿತಿಯಲ್ಲಿ ಇವರನ್ನು ಶಕ್ತಿಯನ್ನಾಗಿ ಪರಿವರ್ತಿಸುವ ಮಹತ್ತರ ಹೊಣೆಗಾರಿಕೆಯನ್ನು ಯಾರಾದರೂ ಹೊರಲೇಬೇಕು. ಅದು ಉಪ್ಪಾರ ಸಮುದಾಯದವರ ಹಿತ ಬಯಸುವವರೆಲ್ಲರ ಆಸೆ.

**ಮಾಹಿತಿಸಂಗ್ರಹ : ಎಂ. ರಾಮಯ್ಯ**

*




# * ಹಾಸನ ಜಿಲ್ಲೆ

## ಐತಿಹಾಸಿಕ ಹಿನ್ನೋಟ

ಹಾಸನ ಜಿಲ್ಲೆಯಲ್ಲಿನ ಕಾಫಿ, ಏಲಕ್ಕಿ ಹಾಗು ತೆಂಗಿನ ತೋಟಗಳು, ಭತ್ತದ ಗದ್ದೆಗಳು ಬೆಟ್ಟಗುಡ್ಡ ನದಿ ತಟಾಕಗಳು ಪ್ರಕೃತಿ ನೀಡಿರುವ ವರಪ್ರಸಾದದಂತಿದೆಯಲ್ಲದೆ, ಇಲ್ಲಿನ ಹಳೇಬೀಡು, ಬೇಲೂರು, ಶ್ರವಣಬೆಳಗೊಳದಲ್ಲಿನ ಶಿಲ್ಪಕಲಾ ಭಂಡಾರವು ಕನ್ನಡ ಜನತೆಯ ಸೌಂದರ್ಯಾರಾಧನೆಯ ಸಿದ್ಧಿಯನ್ನು ಎತ್ತಿಹಿಡಿಯುವಂತೆ, ಪ್ರಕೃತಿಯ ವರ ಪಡೆದು, ಸಂಸ್ಕೃತಿಯ ಸಾರವನ್ನುಂಡು, ಧೀರೋದಾತ್ತ ಗುಣವನ್ನು ಮೆರೆಸಿ, ಸರ್ವಧರ್ಮ ಸಮನ್ವಯವನ್ನು ಅನುಷ್ಠಾನದಲ್ಲಿ ತಂದುಕೊಂಡು ಮಾದರಿಯಾದ ಚಕ್ರಾಧಿಪತ್ಯವನ್ನು ಮೆರೆಸಿದ ಪುಣ್ಯಭೂಮಿ ಹಾಸನ ಜಿಲ್ಲೆ.

2001ರ ಜನಗಣತಿಯ ಪ್ರಕಾರ ಹಾಸನ ಜಿಲ್ಲೆಯಲ್ಲಿ 17,21,319 ಜನರಿದ್ದಾರೆ. ಸಾಕ್ಷರತೆಯ ಪ್ರಮಾಣ ಶೇ. 68.75. ಅದರಲ್ಲಿ ಪುರುಷರು ಶೇ. 78.29, ಮಹಿಳೆಯರು ಶೇ. 59.32. ಹಾಸನವು ಬೆಂಗಳೂರಿನಿಂದ 286ಕಿ.ಮೀ. ದೂರದಲ್ಲಿದೆ.

ಬೇಲೂರಿನ ಚೆನ್ನಕೇಶವ ದೇವಾಲಯದ ಬಳಿಯಿರುವ ಪ್ರಾರ್ಥನಾ ಶ್ಲೋಕ ಹೀಗಿದೆ: "ಶಿವಭಕ್ತರಿಂದ ಶಿವನೆಂದೂ, ವೇದಾಂತಿಗಳಿಂದ ಬ್ರಹ್ಮನೆಂದೂ, ಬೌದ್ಧರಿಂದ ಬುದ್ಧನೆಂದೂ, ನೈಯಾಯಿಕರಿಂದ ಕರ್ತನೆಂದೂ, ಜೈನರಿಂದ ಅರ್ಹಂತನೆಂದೂ, ಮೀಮಾಂಸಕರಿಂದ ಕರ್ಮನೆಂದೂ ಕರೆಯಲ್ಪಡುವ ತ್ರೈಲೋಕಾಧಿಪನಾದ ಆ ದೇವದೇವನು ಅವರವರ ವಾಂಛಿತ ಫಲಗಳನ್ನು

ಅವರವರಿಗ ನೀಡಲಿ". ಕ್ರಿ.ಶ. 1397ರ ಸಮಯದಲ್ಲಿ ರಚಿತವಾದ ಹಾಸನ ಜಿಲ್ಲೆಯಲ್ಲಿನ ಈ ಶಿಲಾಶಾಸನದಿಂದ ಕರ್ನಾಟಕದಲ್ಲಿ ಸರ್ವಧರ್ಮ ಸಮನ್ವಯ ಭಾವನೆ ಆಚರಣೆಯಲ್ಲಿತ್ತೆಂದು ತಿಳಿದುಬರುತ್ತದೆ.

ಹಾಸನ ಜಿಲ್ಲೆಯ ಪೂರ್ವಕ್ಕೆ ತುಮಕೂರು, ಮಂಡ್ಯ, ಪಶ್ಚಿಮಕ್ಕೆ ದಕ್ಷಿಣ ಕನ್ನಡ ಹಾಗು ಚಿಕ್ಕಮಗಳೂರು ಜಿಲ್ಲೆಯ ಸ್ವಲ್ಪ ಭಾಗ, ಉತ್ತರಕ್ಕೆ ಚಿಕ್ಕಮಗಳೂರು, ದಕ್ಷಿಣಕ್ಕೆ ಮೈಸೂರು ಹಾಗು ಕೊಡಗು ಜಿಲ್ಲೆಗಳು ಹಬ್ಬಿವೆ.

ಹಾಸನ ಜಿಲ್ಲೆಯ ಒಟ್ಟು ವಿಸ್ತೀರ್ಣ 2168 ಚ.ಮೀ. ಸಮುದ್ರ ಮಟ್ಟದಿಂದ 3400 ಅಡಿ ಎತ್ತರವಿದೆ. ವಾರ್ಷಿಕ ಮಳೆ 901.6 ಮಿ.ಮೀ. ಸಕಲೇಶಪುರ, ಆಲೂರು ಮತ್ತು ಬೇಲೂರು ಜಿಲ್ಲೆಯಲ್ಲಿ ಅತ್ಯಧಿಕ ಮಳೆಯಾಗುವ ತಾಣಗಳು. ಇದು ಮಲೆನಾಡ ಪ್ರದೇಶ. ಅರಕಲಗೂಡು, ಆಲೂರು ಹಾಗು ಬೇಲೂರು ತಾಲ್ಲೂಕಿನ ಕೆಲವು ಭಾಗಗಳು ಅರೆಮಲೆನಾಡು ಪ್ರದೇಶಗಳು. ಹೊಳೆನರಸೀಪುರ, ಹಾಸನ, ಚನ್ನರಾಯಪಟ್ಟಣ ಮತ್ತು ಅರಸೀಕೆರೆಗಳು ಮೈದಾನ ಪ್ರದೇಶಗಳಾಗಿವೆ. ಹಾಸನ ಜಿಲ್ಲೆಯ ಹವಾಮಾನ ಕುರಿತಂತೆ 'ಬಡವರ ನೀಲಗಿರಿ' ಎಂದು ವರ್ಣಿಸಲಾಗಿದೆ.

ಕೆಂಪಾದ ಕಪ್ಪು ಮಣ್ಣು ಹಾಗು ಮರಳು ಮಿಶ್ರಿತವಾದ ಭೂಮಿಯನ್ನು ಈ ಜಿಲ್ಲೆಯಲ್ಲಿ ಕಾಣಬಹುದು. ಜಿಲ್ಲೆಯಲ್ಲಿ 61,640 ಹೇಕ್ಟೇರ್ ಅರಣ್ಯ ಪ್ರದೇಶವಿದೆ. ಸುಮಾರು 1,25,598 ಹೆಕ್ಟೇರ್ ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯಿದೆ. ಹಾಸನ ಜಿಲ್ಲೆಯಲ್ಲಿ 247 ಕೆರೆಗಳಿವೆ. ಜಿಲ್ಲೆಯಲ್ಲಿ ಅತ್ಯಂತ ಫಲವತ್ತಾದ ಭೂಪ್ರದೇಶವಿದೆ. ಮಲೆನಾಡು ಪ್ರದೇಶದಲ್ಲಿ ತೆಂಗು, ರಾಗಿ, ನೆಲಗಡಲೆ, ಜೋಳ, ಉದ್ದು, ಹುರಳಿ, ಮೆಣಸಿನಕಾಯಿ, ಆಲೂಗಡ್ಡೆ, ಮುಸುಕಿನ ಜೋಳ ಹಾಗು ಹತ್ತಿಗಳನ್ನು ಬೆಳೆಯಲಾಗುತ್ತದೆ.

ಹಾಸನ ತಾಲ್ಲೂಕಿನಲ್ಲಿ 399 ಹೋಬಳಿಗಳಿವೆ. ಕಟ್ಟಾಯ, ಶಾಂತಿಗ್ರಾಮ, ದುದ್ದ, ಹಾಸನ ಹಾಗು ಸಾಲಗಾಮೆ ಎಂಬ ಹೋಬಳಿಗಳಿವೆ. ಜಿಲ್ಲೆಯ ಪ್ರಮುಖ ನದಿಗಳೆಂದರೆ ಕಾವೇರಿ, ಹೇಮಾವತಿ ಹಾಗು ಯಗಚಿ.

ಹೇಮಾವತಿ ಜಲಾನಯನ ಪ್ರದೇಶ 1085 ಚ.ಮೈ. ಜಲಾಶಯದ ಉದ್ದ 15,394 ಅಡಿ. ಈ ಜಲಾಶಯದಿಂದ ಸಾವಿರಾರು ಎಕರೆ ಭೂಮಿಗೆ ನೀರಾವರಿ ಒದಗುತ್ತದೆ. ತಾಲ್ಲೂಕಿನ ಪ್ರಮುಖ ಗುಡ್ಡಗಳೆಂದರೆ ಸೀಗೆಗುಡ್ಡ, ಮುಕುಂದೂರುಬೆಟ್ಟ, ಪಿರಳ್ಳಿ ಕಾವಲ್ ಹಾಗು ಕಟ್ಟಾಯಕಾವಲ್. ಜಿಲ್ಲೆಯ ಪ್ರಮುಖ ಬೆಟ್ಟಗಳೆಂದರೆ ಸುಬ್ರಹ್ಮಣ್ಯದೇವರಗುಡ್ಡ, ಮೂರು ಕಣ್ಣು ಗುಡ್ಡ, ಜೇನುಕಲ್ಲುಬೆಟ್ಟ ಹಾಗೂ ರಂಗನಬೆಟ್ಟಗಳು.

ಪುರಾಣದಲ್ಲಿ ಹಾಸನವನ್ನು 'ಸಿಂಹಾಸನಪುರ' ಎಂದು ಉಲ್ಲೇಖಿಸಲಾಗಿದ. ಅರ್ಜುನನ ಮೊಮ್ಮಗ ಜನಮೇಜಯ ಮಹಾರಾಜನ ಸ್ಥಳ ಇದಾಗಿತ್ತೆಂದು ಹೇಳಲಾಗುತ್ತಿದೆ. ಸಪ್ತಮಾತೃಕೆಯಲ್ಲಿ

ಒಬ್ಬಳಾದ 'ಕೆಂಪಾಂಬದೇವಿ' ಹಾಸನದಲ್ಲಿ ನೆಲೆಸಿದಳೆಂದು ಹೇಳಲಾಗಿದೆ. ಹಾಸನ ತಾಲ್ಲೂಕಿನ ಗೊರೂರಿನಲ್ಲಿ ಗೋಕರ್ಣ ಎಂಬ ಋಷಿ ನರಸಿಂಹನನ್ನು ಕುರಿತು ತಪಸ್ಸು ಮಾಡಿದನಂತೆ!

ಕನ್ನಡದ ಮೊದಲ ಶಾಸನ ಹಲ್ಮಿಡಿ ಈ ಜಿಲ್ಲೆಯಲ್ಲೇ ದೊರಕಿದ್ದು ಅದರ ಕಾಲ ಕ್ರಿ.ಶ. 450. ಇದು ಬನವಾಸಿ ಕದಂಬರ ಕಾಲದ ಶಾಸನ. ಅಂದರೆ ಐದನೆಯ ಶತಮಾನದಿಂದ ಇಲ್ಲಿ ವ್ಯವಸ್ಥಿತ ಆಳ್ವಿಕೆಯಿತ್ತು. ಇದಕ್ಕೆ ಪೂರ್ವದಲ್ಲಿ ಅಂದರೆ ಕ್ರಿ.ಪೂ. 298ರಲ್ಲಿ ಉತ್ತರ ಭಾರತದ ಮಹಾನ್ ದೊರೆ ಮೌರ್ಯವಂಶದ ಒಂದನೆಯ ಚಂದ್ರಗುಪ್ತಮೌರ್ಯ ಜೈನ ಮತ ಸ್ವೀಕರಿಸಿ ತನ್ನ ಗುರು ಭದ್ರಬಾಹುವಿನೊಡನೆ ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ ತಾಲ್ಲೂಕಿನ ಶ್ರವಣಬೆಳಗೊಳಕ್ಕೆ ಬಂದು ಸಲ್ಲೇಖನ ವ್ರತ ಸ್ವೀಕರಿಸಿ ದೇಹತ್ಯಾಗ ಮಾಡಿದನೆಂದು ಜೈನ ಪರಂಪರೆ ಹೇಳುತ್ತದೆ. ಹೀಗೆ ಉತ್ತರದಿಂದ ಬಂದವನು ಮೌರ್ಯ ವಂಶದ ಸ್ಥಾಪಕ ಒಂದನೆಯ ಚಂದ್ರಗುಪ್ತಮೌರ್ಯನಲ್ಲದೇ ಆತನ ಮೊಮ್ಮಗ ಸಂಪ್ರತಿ ಚಂದ್ರಗುಪ್ತನೆಂದು ಹೇಳಲಾಗಿದೆ.

ಹೊಯ್ಸಳರಂತೂ ಇಲ್ಲಿನ ಮಣ್ಣಿನ ಮಕ್ಕಳು. ಹೊಯ್ಸಳ ದೊರೆ ವಿಷ್ಣುವರ್ಧನನ ರಾಣಿ ಶಾಂತಲಾದೇವಿಯ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಶಾಸನಗಳು ವರ್ಣಿಸುತ್ತವೆ. ಎರಡನೆಯ ಬಲ್ಲಾಳನ ರಾಣಿ ಬೊಮ್ಮಲಾದೇವಿ ಆನೆಯ ಮೇಲೆ ಕುಳಿತು ಯುದ್ಧಕ್ಕೆ ಹೊರಟ ಚಿತ್ರವನ್ನು ಆ ಕಾಲದ ಶಾಸನಗಳು ಪ್ರಚುರಪಡಿಸಿವೆ.

ವಿಜಯನಗರ ಸಾಮ್ರಾಜ್ಯದ ನೈತಿಕ ಶಕ್ತಿಯಾಗಿದ್ದ ವಿದ್ಯಾರಣ್ಯರು 'ಸಿಂಹಾಸನಪುರಿ' ಅರ್ಥಾತ್ ಹಾಸನಕ್ಕೆ ಬಂದಿದ್ದರು. ಸಪ್ತಮಾತೃಕೆಯೆಂಬ ಪಾರ್ವತಿ ಮೂರ್ತಿಯನ್ನು ಸ್ಥಾಪಿಸಿದ್ದರು.

ಬೇಲೂರು ಹಾಸನ ಜಿಲ್ಲೆಯ ತಾಲ್ಲೂಕುಗಳಲ್ಲೊಂದು. ಬೆಂಗಳೂರಿನಿಂದ 222 ಕಿ.ಮೀ. ದೂರದಲ್ಲಿದೆ. ತಾಲ್ಲೂಕಿನ ವಿಸ್ತೀರ್ಣ 840.20 ಚ.ಕಿ.ಮೀ. ತಾಲ್ಲೂಕಿನಲ್ಲಿನ ಗ್ರಾಮಗಳ ಸಂಖ್ಯೆ 383. ಬೇಲೂರು ತಾಲ್ಲೂಕಿನಲ್ಲಿ ಚಿಕ್ಕೋಡು, ಬೇಲೂರು, ಅರೆಹಳ್ಳಿ, ಮಾರಿಹಳ್ಳಿ ಮತ್ತು ಹಳೇಬೀಡು ಎಂಬ ಐದು ಹೋಬಳಿಗಳಿವೆ. ಬೇಲೂರು ಸಮುದ್ರ ಮಟ್ಟದಿಂದ 968 ಮೀ. ಎತ್ತರದಲ್ಲಿದೆ. ಇಲ್ಲಿನ ವಾರ್ಷಿಕ ಮಳೆ 1,033 ಮಿ.ಮೀ. ಬೇಲೂರು, ಮಲೆನಾಡು ಹಾಗು ಅರೆಮಲೆನಾಡು ಪ್ರದೇಶವನ್ನು ಹೊಂದಿದೆ.

ಹೊಯ್ಸಳ ದೊರೆ ವಿನಯಾದಿತ್ಯ ತನ್ನ ರಾಜಧಾನಿಯನ್ನು ಸೊಸೆವೂರಿನಿಂದ ಬೇಲೂರಿಗೆ ವರ್ಗಾಯಿಸಿದನು. ಈ ವಂಶದ ಮಹತ್ವದ ದೊರೆ ವಿಷ್ಣುವರ್ಧನನ ಕಾಲದಲ್ಲಿ ಕ್ರಿ.ಶ. 1113ರಲ್ಲಿ ಬೇಲೂರಿನಿಂದ ಹಳೇಬೀಡಿಗೆ ರಾಜಧಾನಿ ವರ್ಗಾವಣೆಯಾಯಿತು. ಆದರೂ ಬೇಲೂರಿನ ಮಹತ್ವ ಕಡಿಮೆಯಾಗಲಿಲ್ಲ. ದೊರೆ ವಿಷ್ಣುವರ್ಧನ ಚೋಳರ ಮೇಲಿನ ತನ್ನ ದಿಗ್ವಿಜಯಕ್ಕಾಗಿ ಕ್ರಿ.ಶ. 1117ರಲ್ಲಿ ವಿಜಯನಾರಾಯಣ ದೇವಾಲಯವನ್ನು ನಿರ್ಮಾಣ ಮಾಡಿದನು.

ಬೇಲೂರು ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಪ್ರಾಂತೀಯ ಕೇಂದ್ರವಾಗಿತ್ತು. ವಿಜಯನಗರ ಸಾಮ್ರಾಜ್ಯದ ಮಹಾನ್ ಸಾಮ್ರಾಟ್ 'ಕೃಷ್ಣದೇವರಾಯ'ನು ಕೃಷ್ಣಪ್ಪನಾಯಕನಿಗೆ

ಬೇಲೂರನ್ನು ಬಳುವಳಿಯನ್ನಾಗಿ ಕೊಟ್ಟನು. ಅವರೇ ಬೇಲೂರು ಪಾಳೇಗಾರರು. ಇವರು ಕ್ರಿ.ಶ. 1799ರವರೆಗೆ ಆಳುತ್ತಿದ್ದರು. ಟಿಪ್ಪು ಮರಣಾನಂತರ ಈ ವಂಶದ ಪಾಳೇಗಾರನಾದ ವೆಂಕಟಾದ್ರಿ ಸ್ವತಂತ್ರನಾಗಲು ಪ್ರಯತ್ನಿಸಿದಾಗ ಬ್ರಿಟಿಷರು ಕ್ರಿ.ಶ. 1802ರಲ್ಲಿ ಉಗ್ಗಿಹಳ್ಳಿಯಲ್ಲಿ ಇವನನ್ನು ಗಲ್ಲಿಗೇರಿಸಿದರು.

ಬೇಲೂರಿನಲ್ಲಿ 85 ಶಾಸನಗಳು ದೊರಕಿವೆ. ಬೇಲೂರಿನ ಮಹತ್ವವಿರುವುದು ಅದರ ಶಿಲ್ಪಕಲಾ ವೈಭವದಲ್ಲಿ. ಇಲ್ಲಿನ ಚೆನ್ನಕೇಶವ ದೇವಾಲಯ ವಿಶ್ವಪ್ರಸಿದ್ಧವಾಗಿದೆ. ಈ ದೇವಾಲಯವನ್ನು ಕುರಿತಂತೆ ಪ್ರೊ. ಎಸ್. ಶ್ರೀಕಂಠಶಾಸ್ತ್ರಿ ಅವರು ಹೀಗೆ ವರ್ಣಿಸುತ್ತಾರೆ: "ಬೇಲೂರಿನ ಚೆನ್ನಕೇಶವ ದೇವಾಲಯದ ಒಂದೊಂದು ಶಿಲ್ಪದ ನಿರೂಪಣೆಯಲ್ಲೂ ಕಲಾವೈವಿಧ್ಯ ಹಾಗು ಜೀವನ ಸೃಷ್ಟಿಯ ಸಾರವನ್ನು ಕಾಣಬಹುದು".

ಹಾಸನ ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲಿ ಚನ್ನರಾಯಪಟ್ಟಣವೂ ಒಂದು. ತಾಲ್ಲೂಕಿನ ವಿಸ್ತೀರ್ಣ 1044 ಚ.ಕಿ.ಮೀ. ಶ್ರವಣಬೆಳಗೊಳದಿಂದಾಗಿ ಚನ್ನರಾಯಪಟ್ಟಣ ವಿಶ್ವಪ್ರಸಿದ್ಧಿ ಪಡೆದಿದೆ. 'ಜೈನರ ಕಾಶಿ' ಎಂದು ಈ ತಾಲ್ಲೂಕು ಖ್ಯಾತವಾಗಿದೆ. ತಾಲ್ಲೂಕಿನಲ್ಲಿ 389 ಗ್ರಾಮಗಳಿವೆ. ವಾರ್ಷಿಕ ಮಳೆ ಸರಾಸರಿ 645.0 ಮಿ.ಮೀ. ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ 242 ಕೆರೆಗಳಿವೆ. 63.317 ಹೆ. ಕೃಷಿಭೂಮಿ ಈ ತಾಲ್ಲೂಕಿನಲ್ಲಿದೆ.

ಭೂಕನಬೆಟ್ಟದಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ಶ್ರವಣಬೆಳಗೊಳದ 56 ಅಡಿ ಎತ್ತರದ ಗೊಮ್ಮಟ ವಿಗ್ರಹ ಕಲ್ಲಿನಲ್ಲಿ ಕೆತ್ತಿರುವ ಮಹಾಕಾವ್ಯವಾಗಿದೆ. ಹನ್ನೆರಡು ವರುಷಕ್ಕೊಮ್ಮೆ ನಡೆಯುವ 'ಮಹಾಮಸ್ತಕಾಭಿಷೇಕ' ಅತ್ಯಂತ ಮಹತ್ವದ ಘಟನೆಯಾಗಿದೆ.

ಕ್ರಿ.ಶ. 15ನೆಯ ಶತಮಾನದ ಉತ್ತರಾರ್ಧದಲ್ಲಿ ಚನ್ನರಾಯಪಟ್ಟಣ ತಾಲ್ಲೂಕನ್ನು ಪುಟ್ಟಗಿರಿ ರಾಜಾ ಹೆಬ್ಬಾರ್ ಎಂಬುವವರು ಆಳುತ್ತಿದ್ದರು. ಕ್ರಿ.ಶ. 1600ರಲ್ಲಿ ಹೊಳೇನರಸೀಪುರದ ಬಲಿಷ್ಠ ಪಾಳೆಗಾರನಾಗಿದ್ದ ಲಕ್ಷ್ಮಪ್ಪ ನಾಯಕನು ಈತನನ್ನು ಸೋಲಿಸಿ ತನ್ನ ಮಗ 'ಚನ್ನರಾಯ'ನಿಗೆ ಈ ಪ್ರಾಂತ್ಯವನ್ನು ಬಳುವಳಿಯನ್ನಾಗಿ ನೀಡಿದ. ಚನ್ನರಾಯ ಈ ಪಟ್ಟಣದ ಸುಧಾರಣೆಗಾಗಿ ಅನೇಕ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳನ್ನು ಮಾಡಿದ್ದರಿಂದ 'ಚನ್ನರಾಯನ' ಸ್ಮರಣೆಗಾಗಿ ಇದನ್ನು 'ಚನ್ನರಾಯಪಟ್ಟಣ' ಎಂದು ಕರೆಯಲಾಗಿತ್ತು. ಕ್ರಿ.ಶ. 1663ರಲ್ಲಿ ಚಾಮರಾಜ ಒಡೆಯರ್ ಈ ಪಟ್ಟಣವನ್ನು ವಶಪಡಿಸಿಕೊಂಡರು. ಮೈಸೂರು ಸಂಸ್ಥಾನದ ಹೈದರಾಲಿ ತನ್ನ ಅಧೀನಕ್ಕೆ ಈ ಪ್ರದೇಶವನ್ನು ವಶಪಡಿಸಿಕೊಂಡು ಇಲ್ಲಿನ ಕೋಟೆಯನ್ನು ರಿಪೇರಿ ಮಾಡಿದನು. ಕಾನಕಾನಹಳ್ಳಿಯ ಅಂದರೆ ಕನಕಪುರದ ಚನ್ನವೀರೇಗೌಡ, ದೊಡ್ಡೇಗೌಡ ಅವನ ಮಕ್ಕಳಾದ ಚನ್ನಒಡೆಯ ಹಾಗು ಭರಮಯ್ಯ ಎಂಬುವವರು ಈ ಪ್ರಾಂತ್ಯವನ್ನು ಆಳುತ್ತಿದ್ದರು.

ಚನ್ನರಾಯಪಟ್ಟಣದಲ್ಲಿ ಐದು ದೇವಾಲಯಗಳಿವೆ. ಚಂದ್ರಮೌಳೇಶ್ವರ ದೇವಾಲಯದಲ್ಲಿ ಶಿವನು ಬೇಡರ ಕಣ್ಣಪ್ಪನಿಗೆ ದರ್ಶನ ಕೊಟ್ಟಿರುವ ದೃಶ್ಯ ಶಿಲ್ಪಕಲೆಯಲ್ಲಿ ಸುಂದರವಾಗಿ ಚಿತ್ರಿತವಾಗಿದೆ. ಗದ್ದೆ ರಾಮೇಶ್ವರ ದೇವಾಲಯದಲ್ಲಿ ಎರಡು ತಲೆಯ ಬಸವನ ವಿಗ್ರಹವಿದೆ.

ಚನ್ನರಾಯಪಟ್ಟಣ ತೆಂಗು ಬೆಳೆಗೆ ಹಾಗು ಈ ತಾಲ್ಲೂಕು ಮಾಂಸದೂಟ ತಯಾರಿಕೆಗೆ ಜನಪ್ರಿಯವಾಗಿದೆ. ಕುರಿ, ಕೋಳಿ ಸಾಕಾಣಿಕೆಗೆ ಗ್ರಾಮಾಂತರ ಪ್ರದೇಶದಲ್ಲಿ ಪ್ರಸಿದ್ಧವಾಗಿದೆ. ಶನಿವಾರ ನಡೆಯುವ ಚನ್ನರಾಯಪಟ್ಟಣದ ಸಂತೆ ತೆಂಗಿನಕಾಯಿ ವ್ಯಾಪಾರಕ್ಕೆ ಖ್ಯಾತಿ ಪಡೆದಿದೆ.

ಅರಸೀಕೆರೆ ತಾಲ್ಲೂಕಿನ ವಿಸ್ತೀರ್ಣ 1227.24 ಚ.ಕಿ.ಮೀ. ಈ ತಾಲ್ಲೂಕಿನಲ್ಲಿ 369 ಗ್ರಾಮಗಳಿವೆ. ತಾಲ್ಲೂಕಿನ ಮಳೆಯ ಪ್ರಮಾಣ 487.7 ಮಿ.ಮೀ. ಅರಸೀಕೆರೆ, ಗಂಡಸಿ, ಜಾವಗಲ್, ಬಾಣಾವರ ಹಾಗು ಕಣಕಟ್ಟೆ-ಇವು ಐದು ಹೋಬಳಿಗಳು. ತಾಲ್ಲೂಕಿನಲ್ಲಿ 85 ಕೆರೆಗಳಿವೆ. ಹಿರೇಕಲ್ಲು ಎಂಬುದು ಈ ತಾಲ್ಲೂಕಿನ ಎತ್ತರವಾದ ಬೆಟ್ಟ. ಅದು 1533 ಮೀ. ಎತ್ತರದಲ್ಲಿದೆ. ಈ ಬೆಟ್ಟದ ಮೇಲೆ ವೆಂಕಟರಮಣಸ್ವಾಮಿ ದೇವಸ್ಥಾನವಿದೆ. ಬಾಣಾವರ ತಾಲ್ಲೂಕಿನ ಗರುಡನಗಿರಿ 1057 ಮೀ. ಎತ್ತರದಲ್ಲಿದೆ.

ಈ ತಾಲ್ಲೂಕಿನ ಇತಿಹಾಸ ತಿಳಿಯಲು ಅನುಕೂಲವಾದ 250 ಶಾಸನಗಳಿವೆ. ರಾಮಾಯಣ ಕಾಲದಲ್ಲಿ ಆಯಾಸದಿಂದ ಲಕ್ಷ್ಮಣನು ಬಾಣ ಹೊರಲಾರದೆ ಕೆಳಗೆ ಹಾಕಿದ್ದ ಬಾಣವನ್ನು ಶ್ರೀರಾಮಚಂದ್ರನು ಸುಲಭವಾಗಿ ಎತ್ತಿಕೊಂಡನಂತೆ ! ಅದಕ್ಕೆ 'ಬಾಣಾವರ' ಎಂಬ ಹೆಸರು ಬಂತೆಂದು ಪ್ರತೀತಿಯಿದೆ.

ಕ್ರಿ.ಶ. 11ನೆಯ ಶತಮಾನದಲ್ಲಿ ಹೊಯ್ಸಳರ ದೊರೆ ಎರೆಯಂಗನ ಅರಸಿ ಮಹಾದೇವಿ ಕೆರೆ ಕಟ್ಟಿಸಿದಳೆಂದು ಹೇಳಲಾಗಿದೆ. ಬಲ್ಲಾಳನ ಹಿರಿಯರಾಣಿ ಉಮಾದೇವಿಯ ತವರಾಗಿದ್ದ ಈ ಪ್ರದೇಶ ಹೊಯ್ಸಳರ ಕಾಲದಲ್ಲಿ 'ಭಂಡಾರವಾಡ'ವಾಗಿತ್ತು. ಚನ್ನಪಟ್ಟಣದ ಜಗದೇವರಾಯ, ತರೀಕೆರೆಯ ತಿಮ್ಮಪ್ಪನಾಯಕ ಹಾಗು ಇಕ್ಕೇರಿ ಶಿವಪ್ಪನಾಯಕರ ಕಾಲದಲ್ಲಿ ಇದೊಂದು ಸಾಮಾನ್ಯ ಪ್ರದೇಶವಾಗಿತ್ತು.

ಅರಸೀಕೆರೆಗಿಂತ ಮೊದಲು 'ಹಾರನಹಳ್ಳಿ' ತಾಲ್ಲೂಕು ಕೇಂದ್ರವಾಗಿತ್ತು. 1882ರಲ್ಲಿ ಅರಸೀಕೆರೆ ತಾಲ್ಲೂಕು ರೂಪುಗೊಂಡಿತು.

ಹಾಸನ ಜಿಲ್ಲೆಯಲ್ಲಿ ಕ್ರಿ.ಶ. 1875 ರಲ್ಲಿ ಮಹಾರಾಜನದುರ್ಗ ತಾಲ್ಲೂಕಿನ ಕೇಂದ್ರ ಸ್ಥಳವಾಗಿತ್ತು. ಆಲೂರು ಹಾಸನ ತಾಲ್ಲೂಕಿನ ಒಂದು ಉಪ ತಾಲ್ಲೂಕು ಕೇಂದ್ರವಾಗಿತ್ತು. 1941ರಲ್ಲಿ ಆಲೂರು ಸ್ವತಂತ್ರ ತಾಲ್ಲೂಕಾಯಿತು. ದಾಟಿಹೊಳೆ, ಪದ್ಮಾವತಿ ಹಾಗು ಯಗಚಿ ಈ ತಾಲ್ಲೂಕಿನ ಮುಖ್ಯ ನದಿಗಳು. ತಾಲ್ಲೂಕಿನ ಭೌಗೋಳಿಕ ವಿಸ್ತೀರ್ಣ 40,265 ಹೆ.

ತಾಲ್ಲೂಕು ಕೇಂದ್ರವಾದ ಸಕಲೇಶಪುರಕ್ಕೆ ಇತ್ತೀಚಿನವರೆಗೆ ಮಂಜರಾಬಾದ್ ಎಂಬ ಹೆಸರಿತ್ತು. ನದಿ ದಂಡೆಯ ಮೇಲಿನ ಸಕಲೇಶ್ವರ ದೇವಾಲಯದಿಂದಾಗಿ ಈ ಊರಿಗೆ 'ಸಕಲೇಶಪುರ' ಎಂಬ ಹೆಸರು ಬಂತು.

1832ರಲ್ಲಿ ಇದನ್ನು ಅಷ್ಟಗ್ರಾಮ ಸಬ್ ಡಿವಿಜನ್‌ಗೆ ಸೇರಿಸಲಾಗಿತ್ತು. ಸಕಲೇಶಪುರ ತಾಲ್ಲೂಕಿನ ವಿಸ್ತೀರ್ಣ 1029 ಚ.ಕೀ. ತಾಲ್ಲೂಕಿನ ಗ್ರಾಮಗಳ ಸಂಖ್ಯೆ 227. ಹಾನಬಾಳು,

ಹೆತ್ತೂರು, ಯಳಸೂರು ಮತ್ತು ಸಕಲೇಶಪುರ ಇಲ್ಲಿನ ಹೋಬಳಿಗಳು. ಇದೊಂದು ಮಲೆನಾಡು ಪ್ರದೇಶ. ವಾರ್ಷಿಕ ಸರಾಸರಿ ಮಳೆ 2348 ಮಿ.ಮೀ. ಬಿಸಿಲೆಘಾಟಿ ಸಮುದ್ರ ಮಟ್ಟದಿಂದ 914 ಮೀ. ಎತ್ತರದಲ್ಲಿದೆ. ದಕ್ಷಿಣ ಕನ್ನಡ ಜಿಲ್ಲೆಗೆ ಸಕಲೇಶಪುರ ಪ್ರವೇಶದ್ವಾರವಿದ್ದಂತೆ. ಸಕಲೇಶಪುರದಿಂದ ಆರು ಕಿ.ಮೀ. ದೂರದಲ್ಲಿರುವ ಹಳೇಬೇಲೂರುನಲ್ಲಿ ಹೊಯ್ಸಳರ ಕಾಲದ ಚೆನ್ನಕೇಶವ ದೇವಾಲಯವಿದೆ. ಇಂದು ಅದು ಶಿಥಿಲಾವಸ್ಥೆಯಲ್ಲಿದೆ. ಅಲ್ಲೇ ಕದಂಬರ ಕಾಲದ ರಾಮದೇವರ ವಿಗ್ರಹವಿದೆ.

ಅರಕಲುಗೂಡು ಹಾಸನ ಜಿಲ್ಲೆಯ ಮತ್ತೊಂದು ತಾಲ್ಲೂಕು. ಗೌತಮಮುನಿ ಇಲ್ಲಿ ತಪಸ್ಸು ಮಾಡಿದ್ದರಿಂದ ಇದಕ್ಕೆ 'ಅರ್ಕಾಪುರ' ಎಂಬ ಹೆಸರು ಬಂತು. ತಾಲ್ಲೂಕಿನ ವಿಸ್ತೀರ್ಣ 672.98 ಚ.ಕಿ.ಮೀ. ಅರಕಲಗೂಡು, ಕೊಣನೂರು, ಮಗ್ಗೆ, ಮಲ್ಲಿಪಟ್ಟಣ ಹಾಗು ರಾಮನಾಥಪುರ ಹೋಬಳಿಗಳು. ಅರಕಲಗೂಡಿನಲ್ಲಿ 296 ಗ್ರಾಮಗಳಿವೆ. ಹಿಪ್ಪಳಿ ಬೆಟ್ಟ ಅತ್ಯಂತ ಎತ್ತರವಾದ ಬೆಟ್ಟ. ವಾರ್ಷಿಕ ಮಳೆಯ ಪ್ರಮಾಣ 679.7 ಮಿ.ಮೀ. ಮರಳುಮಿಶ್ರಿತ ಕಪ್ಪು ಮಣ್ಣು ಇರುವುದರಿಂದ ರಾಗಿ ಬೆಳೆಗೆ ಅತ್ಯುತ್ತಮ ಅವಕಾಶವಿದೆ.

ಅಸುರರ ಗುರು ಶುಕ್ರಾಚಾರ್ಯರು ಮೃತ ಸಂಜೀವಿನಿ ಮಂತ್ರದ ಉಪದೇಶವನ್ನು ಪಡೆಯುವ ಸಲುವಾಗಿ ರಾಮನಾಥಪುರದ ಕಾವೇರಿ ದಂಡೆಯಲ್ಲಿ ತಪಸ್ಸು ಮಾಡಿದರಂತೆ!

ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ಲಂಕೆಯಿಂದ ಅಯೋಧ್ಯೆಗೆ ಹಿಂದಿರುಗಿ ಬರುತ್ತಿರುವಾಗ ಬ್ರಹ್ಮಹತ್ಯಾ ದೋಷ ನಿವಾರಣೆಗಾಗಿ ರಾಮನಾಥಪುರದ ಶಿವಲಿಂಗವನ್ನು ಪೂಜಿಸಿದನಂತೆ ! ಈ ಶಿವಲಿಂಗ ಮುಂದೆ 'ರಾಮೇಶ್ವರ' ಎಂದು ಖ್ಯಾತಿ ಪಡೆಯಿತು. ಇಲ್ಲಿನ ಅಗಸ್ತ್ಯೇಶ್ವರ ಲಿಂಗವನ್ನು ಅಗಸ್ತ್ಯ ಮುನಿಗಳು ಪ್ರತಿಷ್ಠಾಪಿಸಿದರೆಂದು ಹೇಳಲಾಗಿದೆ. ಕ್ರಿ.ಶ. 16ನೆಯ ಶತಮಾನದಲ್ಲಿ ಐಗೂರು ಪಾಳೇಗಾರ ಕೃಷ್ಣಪ್ಪನಾಯಕ ಇದನ್ನು ಸ್ಥಾಪಿಸಿದ. ನವಾಬ್ ಹೈದರಾಲಿಯ ಗುರುವಾಗಿದ್ದ ದಳವಾಯಿ ನಂಜರಾಜ ಹೈದರ್‌ನಿಂದಲೇ ಪದಚ್ಯುತನಾಗಿ ಈ ಪ್ರದೇಶವನ್ನು ಜಹಗೀರಾಗಿ ಪಡೆದನು.

ಅರಕಲಗೂಡು ತಾಲ್ಲೂಕಿನ 'ರುದ್ರಪಟ್ಟಣ', ಕರ್ನಾಟಕದ ಸಾಂಸ್ಕೃತಿಕ ಲೋಕದ ಮಹತ್ವದ ಸ್ಥಳವಾಗಿದೆ.

ಹೊಳೆನರಸೀಪುರವು ಹಾಸನ ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲೊಂದು ಹಳ್ಳಿಮೈಸೂರು, ಹೊಳೆನರಸೀಪುರ ಮತ್ತು ಹಳೇಕೋಟೆ ಈ ತಾಲ್ಲೂಕಿನ ಹೋಬಳಿಗಳು. ತಾಲ್ಲೂಕಿನ ವಿಸ್ತೀರ್ಣ 604.4 ಚ.ಕಿ.ಮೀ. ತಾಲ್ಲೂಕಿನ ಗ್ರಾಮಗಳ ಸಂಖ್ಯೆ 249. ತಾಲ್ಲೂಕಿನ ಮಲ್ಲಯ್ಯನ ಬೆಟ್ಟ 1006 ಮೀ. ಎತ್ತರವಿದೆ.

ಹೊಳೆನರಸೀಪುರದ ಪೂರ್ವಕ್ಕೆ ಹರಿದಿರುವ ಪದರು ಶಿಲಾಸ್ತೋಮ ಮೂರು ಮಿಲಿಯನ್ ವರ್ಷಗಳಿಗೂ ಹಳೆಯದು. ಎಣ್ಣೆಹೊಳೆ, ರಂಗನತಿಟ್ಟು, ಕಬ್ಬೂರು, ಎಡಗೊಂಡನಹಳ್ಳಿ, ತಿರುಮಲಪುರ ಹಾಗು ಮಂಗಳಾಪುರ ಈ ಸುತ್ತಲಿನ ಕಲ್ಲಾರಿನ ಗಣಿಗಳು.

ಈ ತಾಲ್ಲೂಕಿನ ಮುಖ್ಯ ನದಿ ಹೇಮಾವತಿ. ನೂರು ವರ್ಷದ ಕೆಳಗೆ ಈ ನದಿಗೆ 'ಶ್ರೀರಾಮದೇವರ ಕಟ್ಟೆ' ಅಣೆಕಟ್ಟನ್ನು ಕಟ್ಟಲಾಗಿದೆ. ತಾಲ್ಲೂಕಿನಲ್ಲಿ 17 ದೊಡ್ಡ ಕೆರೆಗಳು, 277 ಚಿಕ್ಕ ಕೆರೆಗಳು ಇವೆ. ಈ ತಾಲ್ಲೂಕಿನಲ್ಲಿ ಕೆಂಪುಮಿಶ್ರಿತ ಕಪ್ಪು ಮಣ್ಣಿನ ಭೂಮಿಯಿದೆ.

ಹೊಳೆನರಸೀಪುರದ ಈಶಾನ್ಯಕ್ಕೆ 13 ಕಿ.ಮೀ. ದೂರದಲ್ಲಿರುವ 'ದೊಡ್ಡ ಕುಂಟೆ' ಗ್ರಾಮ ಹಿಂದೆ ಒಂದು ಪಾಳೆಯಪಟ್ಟಾಗಿತ್ತು. ಹಳ್ಳಿಮೈಸೂರು ಸ್ಥಳೀಯ ರಾಜನ ಪಟ್ಟಣವಾಗಿತ್ತು. ಗಂಗದೊರೆ ಮಾರಸಿಂಹ (ಕ್ರಿ.ಶ. 963-964)ನ ಕಾಲದ ವೀರಗಲ್ಲು ಇಲ್ಲಿ ದೊರೆತಿದೆ. ಹೊಳೆನರಸೀಪುರದ 10 ಕಿ.ಮೀ. ದೂರದಲ್ಲಿರುವ ಹರಿಹರಪುರದಲ್ಲಿ ಹೊಯ್ಸಳರ ಕಾಲದ ಸುಂದರವಾದ ಹರಿಹರೇಶ್ವರ ದೇವಾಲಯವಿದೆ. ಕ್ರಿ.ಶ. 1168ರಲ್ಲಿ ನರಸಿಂಹ ನಾಯಕ ಎಂಬುವವನು ಹೊಳೆನರಸೀಪುರದ ಕೋಟೆ ಕಟ್ಟಿಸಿದನು. ಕ್ರಿ.ಶ. 1667ರಲ್ಲಿ ಹೊಳೆನರಸೀಪುರವು ಮೈಸೂರಿನ ದೊಡ್ಡ ದೇವರಾಜ ಒಡೆಯರ ಕೈಸೇರಿತು. ಇಲ್ಲಿ ಲಕ್ಷ್ಮೀನರಸಿಂಹ ದೇವಾಲಯವಿದೆ.

ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಹಾಸನಜಿಲ್ಲೆ ಗಣನೀಯ ಕೊಡುಗೆ ನೀಡಿದೆ. ಬೇಲೂರು ಪಾಳೇಗಾರರು ಬ್ರಿಟಿಷರ ವಿರುದ್ಧ ಸಶಸ್ತ್ರ ಹೋರಾಟ ನಡೆಸಿದ್ದರು. 1927ರಲ್ಲಿ ಮಹಾತ್ಮಗಾಂಧೀಜಿಯವರು ಹಾಸನಕ್ಕೆ ಭೇಟಿ ಕೊಟ್ಟಿದ್ದರು. ಎ.ಜಿ. ರಾಮಚಂದ್ರರಾವ್ ಹಾಸನ ಜಿಲ್ಲೆಯ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು. ಸ್ವಾತಂತ್ರ್ಯಾನಂತರದ ಸರ್ಕಾರದಲ್ಲಿ ಸಚಿವರಾಗಿದ್ದರು. ಎಸ್.ಜಿ. ಅತ್ರಿ, ಕೆ.ಎಂ. ರುದ್ರಪ್ಪ, ಎಲ್.ಟಿ. ಕಾರ್ಲೆ, ಹಾರನಹಳ್ಳಿ ರಾಮಸ್ವಾಮಿ, ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್, ವೈದ್ಯರಾದ ಹೆಚ್.ಕೆ. ಸತ್ಯನಾರಾಯಣ, ಹೆಚ್. ಸಿದ್ಧನಂಜಪ್ಪ, ಹೆಚ್. ವೀರಬಸಪ್ಪ, ಹೆಚ್.ಎಸ್. ವೆಂಕಟಪ್ಪ, ಎನ್. ರಂಗನಾಥನ್, ಎಲ್.ಎಲ್. ಗೋಪಾಲಶೆಟ್ಟಿ, ದುದ್ದಗ್ರಾಮದ ಬಿ.ಎನ್. ಮಂಜಪ್ಪಗೌಡ, ಹಲಸಿಹಳ್ಳಿ ಸಂಜೀವಯ್ಯ, ಚಿಕ್ಕದುಂಡಿಗನಹಳ್ಳಿ ದೊಡ್ಡಯ್ಯಶೆಟ್ಟಿ, ನಿಟ್ಟೂರಿನ ಬಸವೇಗೌಡ, ಕಾಳಾಚಾರಿ, ಗರುಡಶರ್ಮ ಮೊದಲಾದವರು ಇಲ್ಲಿನ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು.

ಚನ್ನರಾಯಪಟ್ಟಣದಲ್ಲಿ 1936ರಲ್ಲಿ ಅಂಕಂ ಸಂಜೀವಶೆಟ್ಟಿ ನೇತೃತ್ವದಲ್ಲಿ ಸ್ವಾತಂತ್ರ್ಯ ಹೋರಾಟ ಪ್ರಾರಂಭವಾಯಿತು. ಅರಸೀಕೆರೆ ಕೃಷ್ಣಮೂರ್ತಿ, ನಾರಾಯಣ, ಕಾಂತರಾಜಪುರದ ಸೋಮಯ್ಯ, ದೊಡ್ಡಲಕ್ಕಪ್ಪ, ನರಸಣ್ಣ, ನಲ್ಲೂರು ಸಂಜೀವಯ್ಯ, ಅಣ್ಣೇರಹಳ್ಳಿ ಜವರೇಗೌಡ ಬಿಳಿದಲೆ ನಂಜಪ್ಪ ಮೊದಲಾದವರು ಸ್ವಾತಂತ್ರ್ಯ ಹೋರಾಟಗಾರರು.

ಆಲೂರು ತಾಲ್ಲೂಕಿನ ಎ.ಡಿ. ಲಿಂಗೇಗೌಡ, ಕಣಗಾಲ್ ಲಿಂಗೇಗೌಡ, ಬಿ.ಎನ್. ದೊಡ್ಡೇಗೌಡ, ಬಿ.ಎನ್. ಕಾಳಿಂಗನ್ ನೆರಗಳಲೆ, ಕೆ.ಸಿ. ಚಿಕ್ಕೇಗೌಡ ಕಣಗಾಲು, ಬಿ.ವಿ. ಹಲಗೇಗೌಡ ಬೆಳ್ಳೂರು, ಕೆ.ಸಿ. ಅಣ್ಣೇಗೌಡ ಕಣಗಾಲು, ಕೆ.ಪಿ. ಮಲ್ಲೇಗೌಡ ಕಣಗಾಲು, ಎಂ.ಡಿ. ಲಿಂಗೇಗೌಡ ಮತ್ತು ಬಸವಲಿಂಗೇಗೌಡ ಪ್ರಮುಖ ಸ್ವಾತ್ರಂತ್ರ್ಯ ಹೋರಾಟಗಾರರು.

ಹಾಸನ ಜಿಲ್ಲೆಯ ನಾಯಕರೂ ರಾಷ್ಟ್ರ ಖ್ಯಾತಿಯ ಹೆಗ್ಗಳಿಕೆ ಪಡೆದಿದ್ದಾರೆ. ಕನ್ನಡನಾಡಿನ 'ಮಣ್ಣಿನ ಮಗ' ಎಂದು ಖ್ಯಾತರಾಗಿರುವ ಹೆಚ್.ಡಿ. ದೇವೇಗೌಡ ಅವರು ರಾಷ್ಟ್ರದ ಅತ್ಯುನ್ನತ ಸ್ಥಾನಗಳಲ್ಲಿ ಒಂದಾದ 'ಪ್ರಧಾನ ಮಂತ್ರಿ' ಹುದ್ದೆಯನ್ನು ಅಲಂಕರಿಸಿದ್ದರು. ಇದಕ್ಕೆ ಮೊದಲು ಅವರು ಕರ್ನಾಟಕದ ಮುಖ್ಯಮಂತ್ರಿ, ವಿರೋಧ ಪಕ್ಷದ ನಾಯಕರು ಹಾಗು ವಿವಿಧ ಖಾತೆಗಳ ಸಚಿವರಾಗಿ ಸೇವೆ ಸಲ್ಲಿಸಿರುವುದುಂಟು. ಕರ್ನಾಟಕ ಲೋಕಸೇವಾ ಆಯೋಗದ ಪ್ರಥಮ ಅಧ್ಯಕ್ಷರಾಗಿದ್ದ ಹೆಚ್.ಜಿ. ಗುಂಡಪ್ಪಗೌಡ ಈ ಜಿಲ್ಲೆಯವರು.

1952ರಿಂದ 62ರವರೆಗೆ ಹೆಚ್. ಸಿದ್ಧನಂಜಪ್ಪ ಅವರು ಹಾಸನ ಲೋಕಸಭೆಯ ಸದಸ್ಯರಾಗಿದ್ದರು. 1970ರಲ್ಲಿ ಎಸ್. ಶಿವಪ್ಪ, ಕಾಂಗ್ರೆಸೇತರ ಪಕ್ಷದ ಮೂಲಕ ಲೋಕಸಭೆ ಪ್ರವೇಶಿಸಿದ್ದರು. ನುಗ್ಗೇಹಳ್ಳಿ ಶಿವಪ್ಪ, ಎಸ್. ನಂಜೇಶಗೌಡ, ಹೆಚ್.ಎನ್. ನಂಜೇಗೌಡ, ಹೆಚ್.ಸಿ. ಶ್ರೀಕಂಠಯ್ಯ, ಹೆಚ್. ಡಿ. ದೇವೇಗೌಡ, ವೈ.ಎನ್. ರುದ್ರೇಶಗೌಡ, ಹಾಗು ಜಿ. ಪುಟ್ಟಸ್ವಾಮಿಗೌಡ ಅವರುಗಳು ಹಾಸನ ಕ್ಷೇತ್ರದಿಂದ ಲೋಕಸಭೆಗೆ ಚುನಾಯಿತರಾದವರು.

1952ರಲ್ಲಿ ವಿಧಾನಸಭೆಗೆ ಡಿ.ಆರ್. ಕರೀಗೌಡ, ಹೆಚ್.ಕೆ. ಸಿದ್ಧಯ್ಯ, ಎ.ಜಿ. ರಾಮಚಂದ್ರರಾವ್, ಜಿ. ತಿಮ್ಮಪ್ಪಗೌಡ, ಕೆ. ಲಕ್ಕಪ್ಪ ಹಾಗು ಬಿ. ಚಿಕ್ಕಣ್ಣ ಆಯ್ಕೆಯಾಗಿದ್ದರು.

1957ರಲ್ಲಿ ವಿಧಾನಸಭೆಗೆ ಎ.ಆರ್. ಕೋರಿಸಿದ್ಧಪ್ಪ, ಕೆ.ಬಿ. ದಾಸಪ್ಪ, ಬಿ.ಎನ್. ಬೋರಣ್ಣಗೌಡ, ವೈ. ವೀರಪ್ಪ, ಪುಟ್ಟಸ್ವಾಮಿಗೌಡ, ದ್ಯಾವಮ್ಮ ಹಾಗು ಎನ್.ಜಿ. ನರಸಿಂಗೇಗೌಡ ಆಯ್ಕೆಯಾಗಿದ್ದರು.

ಪಿ.ಎಂ. ಬೊಮ್ಮಣ್ಣ, ಬಿ.ಎಂ. ಲಕ್ಷ್ಮಯ್ಯ, ಹೆಚ್.ಡಿ. ದೇವೇಗೌಡ, ಜಿ.ಎ. ತಿಮ್ಮಪ್ಪಗೌಡ, ಹೆಚ್.ಆರ್. ಕೇಶವಮೂರ್ತಿ, ಎಸ್. ಶಿವಪ್ಪ, ದಾಸಣ್ಣಶೆಟ್ಟಿ ಮೊದಲಾದವರು 1962ರಲ್ಲಿ ನಡೆದ ಚುನಾವಣೆಯ ಮೂಲಕ ವಿಧಾನಸಭೆ ಪ್ರವೇಶಿಸಿದ್ದರು.

1967ರಲ್ಲಿ ಹೆಚ್.ಬಿ. ಜ್ವಾಲನಯ್ಯ, ಚನ್ನಬಸಪ್ಪ, ಎನ್.ಎ. ಪುಟ್ಟರಂಗನಾಥ್, ಎಸ್.ಎ. ಶಿವಪ್ಪ, ಬಿ. ನಂಜಪ್ಪ, ಹೆಚ್.ಎನ್. ನಂಜೇಗೌಡ, ಎನ್. ಶಿವಪ್ಪ, ಕೆ.ಪಿ. ಚಿಕ್ಕೇಗೌಡ ಹಾಗು ಹೆಚ್.ಡಿ. ದೇವೇಗೌಡ ವಿಧಾನಸಭೆ ಪ್ರವೇಶಿಸಿದ್ದರು.

1972ರಲ್ಲಿ ಹೆಚ್.ಎನ್. ಸಿದ್ಧಪ್ಪ, ಎನ್.ಎ. ಪುಟ್ಟರಂಗನಾಥ್, ಹೆಚ್.ಎನ್. ನಂಜೇಗೌಡ, ಎಂ. ನಂಜೇಗೌಡ, ಹೆಚ್.ಸಿ. ಶ್ರೀಕಂಠಯ್ಯ, ಕೆ.ಎಂ. ರುದ್ರಪ್ಪ ಮೊದಲಾದವರು ಆಯ್ಕೆಯಾಗಿದ್ದರು.

1978ರಲ್ಲಿ ಬಿ. ಗಂಗಾಧರಪ್ಪ, ಕೆ.ಹೆಚ್. ಹನುಮೇಗೌಡ, ಬಿ.ಎಂ. ಲಕ್ಷ್ಮಣಯ್ಯ, ಕೆ.ಎಂ. ಮಲ್ಲಪ್ಪ, ಹೆಚ್.ಡಿ. ದೇವೇಗೌಡ, ಹಾರನಹಳ್ಳಿ ರಾಮಸ್ವಾಮಿ, ಹೆಚ್.ಸಿ. ಶ್ರೀಕಂಠಯ್ಯ ಹಾಗು ಜೆ.ಡಿ. ಸೋಮಪ್ಪ ಅವರುಗಳು ವಿಧಾನಸಭೆ ಪ್ರವೇಶಿಸಿದ್ದರು.

1983ರಲ್ಲಿ ಜಿ.ಎನ್. ಬಸವರಾಜು, ಬಿ.ವಿ. ಕರಿಗೌಡ, ಡಿ. ಮಲ್ಲೇಶ್, ಹೆಚ್.ಡಿ. ದೇವೇಗೌಡ, ಕೆ. ಮಲ್ಲಪ್ಪ, ಬಿ. ನಂಜಪ್ಪ, ಹೆಚ್.ಸಿ. ಶ್ರೀಕಂಠಯ್ಯ ಹಾಗು ಜೆ.ಡಿ. ಸೋಮಪ್ಪ ಈ ಕಾಲದಲ್ಲಿ ವಿಧಾನಸಭಾ ಸದಸ್ಯರಾಗಿದ್ದರು.

1985ರಲ್ಲಿ ಡಿ.ಬಿ. ಗಂಗಾಧರಪ್ಪ, ಬಿ.ವಿ. ಕರೀಗೌಡ, ಹೆಚ್.ಡಿ. ಕುಮಾರಸ್ವಾಮಿ, ಹೆಚ್.ಡಿ. ದೇವೇಗೌಡ, ಕೆ.ಬಿ. ಮಲ್ಲಪ್ಪ, ಈ ನಂಜೇಗೌಡ, ಎನ್. ಗಂಗಾಧರ್ ಹಾಗು ಜೆ.ಡಿ. ಬಸವರಾಜು ವಿಧಾನಸಭೆಯ ಸದಸ್ಯರಾಗಿದ್ದರು.

1989ರಲ್ಲಿ ಕೆ.ಬಿ. ಪ್ರಭುಕುಮಾರ್, ಕೆ.ಹೆಚ್. ಹನುಮೇಗೌಡ, ಬಿ.ಎಂ. ಲಕ್ಷ್ಮಣಯ್ಯ, ಬಿ. ಪುಟ್ಟಸ್ವಾಮಿಗೌಡ, ಎ.ಟಿ. ರಾಮಸ್ವಾಮಿ, ಬಿ. ಶಿವರಾಂ, ಡಾ. ಎನ್.ಬಿ. ನಂಜಪ್ಪ ಮತ್ತು ಗುರುದೇವ್ ಹಾಸನ ಜಿಲ್ಲೆಯಿಂದ ವಿಧಾನಸಭೆಗೆ ಆಯ್ಕೆಯಾಗಿದ್ದರು.

1994ರಲ್ಲಿ ಹೆಚ್.ಕೆ. ಕುಮಾರಸ್ವಾಮಿ, ಜಿ.ಎನ್. ಪರಮೇಶ್ವರಪ್ಪ, ಸಿ. ಶಿವರಾಂ, ಹೆಚ್.ಡಿ. ರೇವಣ್ಣ, ಎನ್. ಪುಟ್ಟೇಗೌಡ, ಎ.ಟಿ. ರಾಮಸ್ವಾಮಿ, ಹೆಚ್.ಎನ್. ಪ್ರಕಾಶ್ ಹಾಗು ಬಿ.ಬಿ. ಶಿವಪ್ಪ ಅವರುಗಳು ಜಿಲ್ಲೆಯಿಂದ ವಿಧಾನಸಭೆಗೆ ಆಯ್ಕೆಯಾಗಿದ್ದರು.

1999ರಲ್ಲಿ ಎಸ್.ಎಚ್. ಪುಟ್ಟರಂಗನಾಥ್, ಜಿ.ವಿ. ಸಿದ್ಧಪ್ಪ, ಬಿ. ಶಿವರಾಂ, ಹೆಚ್.ಸಿ. ಶ್ರೀಕಂಠಯ್ಯ, ಎ. ದೊಡ್ಡೇಗೌಡ, ಎ. ಮಂಜು, ಕೆ.ಹೆಚ್. ಹನುಮೇಗೌಡ ಹಾಗು ಬಿ.ಬಿ. ಶಿವಪ್ಪ ಅವರುಗಳು ರಾಜ್ಯ ವಿಧಾನಸಭೆಗೆ ಹಾಸನ ಜಿಲ್ಲೆಯಿಂದ ಆಯ್ಕೆಯಾಗಿದ್ದಾರೆ.

ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್, ಹಾರನಹಳ್ಳಿ ರಾಮಸ್ವಾಮಿ, ಜಿ. ಪುಟ್ಟಸ್ವಾಮಿಗೌಡ ಹಾಗು ದೊಡ್ಡೇಗೌಡ ಅವರುಗಳು ವಿಧಾನಪರಿಷತ್ತು ಸದಸ್ಯರಾಗಿದ್ದರು.

ಹಾಸನ ಜಿಲ್ಲೆಯಲ್ಲಿ ವೀರಶೈವ ಹಾಗು ಒಕ್ಕಲಿಗ ಸಮುದಾಯ ರಾಜಕಾರಣದಲ್ಲಿ ಅಧಿಕಾರ ಹಂಚಿಕೆ ವಿಚಾರದಲ್ಲಿ ಪ್ರತಿಸ್ಪರ್ಧಿಗಳಾಗಿರುತ್ತಾರೆ. ಇವರ ಜೊತೆ ಈ ಜಿಲ್ಲೆಯಲ್ಲಿರುವ ಇತರ ಸಮುದಾಯವೆಂದರೆ ಕುರುಬ, ಉಪ್ಪಾರ, ಬೆಸ್ತರು, ಮುಸ್ಲಿಂ, ಪರಿಶಿಷ್ಟ ಜಾತಿ, ಗಾಣಿಗರು, ಪರಿಶಿಷ್ಟ ವರ್ಗ, ಜೈನರು, ಬ್ರಾಹ್ಮಣರು, ಕ್ರೈಸ್ತರು, ದೇವಾಡಿಗರು, ಬಣಜಿಗರು, ಕುಂಬಾರರು, ನಾಯಿಂದರು, ವಡ್ಡರು, ಈಡಿಗರು ಹಾಗೂ ವಿಶ್ವಕರ್ಮ ಮೊದಲಾದ ಹಿಂದುಳಿದ ಸಮುದಾಯಗಳಿಗೆ ಸ್ಥಳೀಯ ಸಂಸ್ಥೆಗಳಲ್ಲಿ ಅಧಿಕಾರ ದೊರಕಿದೆ. ಮೀಸಲು ಕ್ಷೇತ್ರವನ್ನುಳಿದು ಬೇರಾವ ಕ್ಷೇತ್ರದಲ್ಲೂ ಪರಿಶಿಷ್ಟರಿಗಾಗಲಿ ಅಥವಾ ಹಿಂದುಳಿದವರಿಗಾಗಲಿ ರಾಜ್ಯಮಟ್ಟದಲ್ಲಿ ಅಧಿಕಾರ ದೊರಕಿಲ್ಲದಿರುವುದು ವಿಪರ್ಯಾಸ.

ಕರ್ನಾಟಕದ ಸಾಂಸ್ಕೃತಿಕ ಲೋಕಕ್ಕೆ ಹಾಸನ ಜಿಲ್ಲೆಯ ಕೊಡುಗೆ ಅಪಾರ. 10ನೆಯ ಶತಮಾನದ ಕನ್ನಡದ ಮಹಾಕವಿ ರನ್ನನಿಗೆ ಶ್ರವಣಬೆಳಗೊಳ ಪುಣ್ಯಕ್ಷೇತ್ರವಾಗಿತ್ತು.

ಹೊಯ್ಸಳ ಕಾಲದ ಮಹತ್ವದ ಕವಿಗಳಾದ ಹರಿಹರ, ರಾಘವಾಂಕ, ಜನ್ನ, ರುದ್ರಭಟ್ಟ, ಕೇಶಿರಾಜ. ಸಂಸ್ಕೃತಕವಿ ವೆಂಕಟಾದ್ರಿ, ಗೊರೂರು ಶ್ರೀನಿವಾಸ ಅಯ್ಯಂಗಾರ್, ಅ.ನ.

ನರಸಿಂಹಾಚಾರ್ಯರು, ಆಧುನಿಕ ಯುಗದ ಪೂರ್ವ ಕವಿಗಳು. ಹಿರಿಯ ಸಾಹಿತಿಗಳಾದ ಗೊರೂರು ರಾಮಸ್ವಾಮಿ ಅಯ್ಯಂಗಾರ್, ಚನ್ನರಾಯಪಟ್ಟಣ ತಾಲ್ಲೂಕಿನ ಸಂತೇಶಿವರದ ಡಾ. ಎಸ್.ಎಲ್. ಭೈರಪ್ಪ, ಪ್ರಕಾಶಕರೂ ಹಾಗು ಸಣ್ಣ ಕತೆಗಾರರಾದ ಮಾಪಿನಕೆರೆ ರಂಗನಾಥ್, ಹಿರಿಯ ಸಂಸ್ಕೃತ ವಿದ್ವಾಂಸರಾದ ಡಾ. ಕೆ. ಕೃಷ್ಣಮೂರ್ತಿ, ಹಿರಿಯ ವಿಮರ್ಶಕರಾದ ಡಾ. ಎಸ್.ವಿ. ರಂಗಣ್ಣ, ಪ್ರೊ. ಎಲ್. ಗುಂಡಣ್ಣ, ಎಚ್.ಬಿ. ಜ್ವಾಲನಯ್ಯ, ಇಂಗ್ಲಿಷ್ ಸಾಹಿತ್ಯದ ದಿಗ್ಗಜರಾದ ಹಾಸನದ ರಾಜಾರಾವ್, ಖ್ಯಾತ ಕಾದಂಬರಿಕಾರರಾದ ಡಾ|| ಅನಕೃ, ಜನಪದ ಸಾಹಿತ್ಯ ಸಂಗ್ರಹಕಾರರಾದ ಮತ್ತಿಘಟ್ಟ ಕೃಷ್ಣಮೂರ್ತಿ, ಮೈಸೂರು ವಿಶ್ವವಿದ್ಯಾನಿಲಯದ ಡಾ. ಡಿ.ಕೆ. ರಾಜೇಂದ್ರ, ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿ ಡಾ|| ಹೆಚ್.ಜೆ. ಲಕ್ಕಪ್ಪಗೌಡ, ಸಂವೇದನಾಶೀಲ ಲೇಖಕಿ ಭಾನುಮುಷ್ತಾಕ್ ಈ ಜಿಲ್ಲೆಯವರು.

ಹೊಳೇನರಸೀಪುರದ ಸುಬ್ಬಸ್ವಾಮಿ, ಸಿ.ಆರ್. ಶ್ರೀನಿವಾಸ ಅಯ್ಯಂಗಾರ್, ಪತ್ರಕರ್ತ ಹೆಚ್.ಎನ್. ರಾಮಪ್ರಸಾದ್, ಚನ್ನರಾಯಪಟ್ಟಣದ ಪಿ. ಕೃಷ್ಣ, ಮೈಸೂರು ವಿಶ್ವವಿದ್ಯಾಲಯದ ಪರೀಕ್ಷಾ ನಿಯಂತ್ರಣಾಧಿಕಾರಿಯಾಗಿದ್ದ ಸಾಹಿತಿ ಜೆ.ಆರ್. ನಂಜುಂಡೇಗೌಡ, ಜಾನಪದ ಅಕಾಡೆಮಿಯ ಅಧ್ಯಕ್ಷರಾದ ಡಾ. ಹಿ.ಶಿ. ರಾಮಚಂದ್ರೇಗೌಡ, ಪ್ರೊ. ಸಿ. ಬೋರಲಿಂಗಯ್ಯ, ಮಳಲಿವಸಂತಕುಮಾರ್, ಡಾ|| ನಲ್ಲೂರು ಪ್ರಸಾದ್, ಚಂದ್ರುಕಾಳೇನಹಳ್ಳಿ, ಮೇಟಿಕೆರೆ ಹಿರಿಯಣ್ಣ, ಪತ್ರಕರ್ತರಾದ ಸಿ. ಗುಂಡೂರಾವ್ ಹಾಗು ಸಿ. ಸತ್ಯನಾರಾಯಣ ಹರಿದಾಸ ಸಾಹಿತ್ಯ ಸಂಗ್ರಹಕಾರರಾದ ಬೇಲೂರು ಕೇಶವದಾಸ, ವೇದಪುರಾಣಗಳಲ್ಲಿ ತುಂಬ ಪಾಂಡಿತ್ಯ ಪಡೆದಿದ್ದ ಆಸ್ಥಾನ ವಿದ್ವಾನ್ ವಿ. ಕರಿಬಸಪ್ಪ ಶಾಸ್ತ್ರೀ ಮೊದಲಾದವರು ವಿವಿಧ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ದುಡಿದಿದ್ದಾರೆ.

ಇಂದು ಭಾರತವು ಅರ್ಥಶಾಸ್ತ್ರ ಹಾಗು ರಾಜ್ಯಶಾಸ್ತ್ರಗಳಲ್ಲಿ ವಿಶ್ವದ ಮನ್ನಣೆಗೆ ಪಾತ್ರವಾಗಿದ್ದರೆ ಅದಕ್ಕೆ ಮೂಲ ಕಾರಣ ಮೌರ್ಯ ವಂಶದ ಚಂದ್ರಗುಪ್ತ ಮೌರ್ಯನ ಅಮಾತ್ಯನಾಗಿದ್ದ ಕೌಟಿಲ್ಯ ರಚಿಸಿದ 'ಅರ್ಥಶಾಸ್ತ್ರ' ಎಂಬ ಕೃತಿಯಿಂದ ಎನ್ನಬಹುದು. ಈ ಕೃತಿಯನ್ನು ಮೊದಲ ಬಾರಿಗೆ ಶಾಸ್ತ್ರೀಯ ರೀತಿಯಲ್ಲಿ ಸಂಪಾದಿಸಿ ಮೈಸೂರು ಸಂಸ್ಥಾನಕ್ಕೆ ಅರ್ಥಾತ್ ಭಾರತಕ್ಕೆ ನೀಡಿದ ಆರ್. ಶಾಮಶಾಸ್ತ್ರಿ ಅವರು ಅರಕಲಗೂಡಿನವರು.

ಸ್ವಾಮಿಸಚ್ಚಿದಾನಂದ ಸರಸ್ವತಿ ಅವರು ಬೆಂಗಳೂರಿನಲ್ಲಿ 1920ರಲ್ಲಿ ಸ್ಥಾಪಿಸಿದ ಆಧ್ಯಾತ್ಮ ಪ್ರಕಾಶನ ಕಾರ್ಯಾಲಯ 1935 ರಿಂದ ಹೊಳೇನರಸಿಪುರದಲ್ಲಿಯೂ ಕಾರ್ಯಾಚರಣೆ ಮಾಡುತ್ತಿದೆ.

ಕಾಂತರಾಜಪುರದ ಡಾ. ಕೆ. ಅವಲಪ್ಪ ಅವರು ಅಮೇರಿಕದ 'ಮೆಸಾಚುಸೆಟ್ಸ್' ವಿಶ್ವವಿದಾನಿಲಯದಲ್ಲಿ ತಳಿಶಾಸ್ತ್ರದಲ್ಲಿ ಪ್ರಾಧ್ಯಾಪಕರಾಗಿದ್ದರು. ಅವರು ವಿಶ್ವಮಟ್ಟದ ಕೃಷಿ ವಿಜ್ಞಾನಿಗಳಲ್ಲಿ ಒಬ್ಬರು. ಕರ್ನಾಟಕ ಲೋಸೇವಾ ಆಯೋಗದ ಮಾಜಿ ಅಧ್ಯಕ್ಷರಾದ ಹಿರಿಯ ಐಎಎಸ್ ಅಧಿಕಾರಿ ವೈ.ಕೆ. ಪುಟ್ಟಸ್ವಾಮಿಗೌಡ ಸಕಲೇಶಪುರ ತಾಲ್ಲೂಕಿನವರು. ಬೆಂಗಳೂರು

ಕೃಷಿ ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿ ಡಾ. ಜಿ.ಕೆ. ವೀರೇಶ್ ರಾಷ್ಟ್ರದ ಶ್ರೇಷ್ಠ ಕೃಷಿ ವಿಜ್ಞಾನಿ, ಅವರು ಸಕಲೇಶಪುರ ತಾಲ್ಲೂಕಿನವರು. ಶಿಕ್ಷಕರಾಗಿ ರಾಷ್ಟ್ರಪ್ರಶಸ್ತಿ ಪಡೆದ ಸಿ.ಆರ್. ಶ್ರೀನಿವಾಸ ಅಯ್ಯಂಗಾರ್, ಸಮಾಜಶಾಸ್ತ್ರಜ್ಞರಾದ ಪ್ರೊ. ಎನ್. ಸೋಮಯ್ಯ, ಮಲೆನಾಡ ಇಂಜಿನಿಯರಿಂಗ್ ಕಾಲೇಜು ಪ್ರಾಧ್ಯಾಪಕರಾದ ಹಾಗು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಡಾ. ಎನ್. ನಿಂಗಪ್ಪ ಇತಿಹಾಸಕಾರರಾದ ಪ್ರೊ. ಕೆ.ಎಸ್. ನಂಜುಂಡಪ್ಪ, ವಯಸ್ಕರ ಶಿಕ್ಷಣ ತಜ್ಞ ಕೆ. ಗಂಗೇಗೌಡ, ಪುಟ್ಟಣ್ಣಕಣಗಾಲ್ ಮೇಲೆ ಪುಸ್ತಕ ಬರೆದ ಡಿ.ಬಿ. ಬಸವೇಗೌಡ, ಶಿಕ್ಷಣತಜ್ಞ ಪ್ರೊ. ಎಂ. ರಾಮಕೃಷ್ಣ, ಸಮಾಜ ಸೇವಕರಾದ ನಲ್ಲೂರು ಟಿ. ಚೆಲುವೇಗೌಡ ಪತ್ರಿಕೋದ್ಯಮದಲ್ಲಿ ಹೆಸರಾದ ಆರ್.ಎನ್. ಲಕ್ಷ್ಮೀಕಾಂತಯ್ಯ, ಗರುಡನಗಿರಿ ನಾಗರಾಜ, ಗಣಿತಶಾಸ್ತ್ರದ ಲೇಖಕರಾದ ಡಾ. ಕೆ. ಮಂಜುನಾಥ್ ಹಾಗೂ ಗಾಯಕರು ಮತ್ತು ಅಧಿಕಾರಿಯಾದ ವೈ.ಕೆ. ಮುದ್ದುಕೃಷ್ಣ ಮೊದಲಾದವರನ್ನು ಜ್ಞಾಪಿಸಿಕೊಳ್ಳಬಹುದು.

ಅರಕಲಗೂಡಿನ 'ರುದ್ರಪಟ್ಟಣ' ಸಂಗೀತ ಕ್ಷೇತ್ರದಲ್ಲಿ ಬಹುದೊಡ್ಡ ಹೆಸರು ಮಾಡಿದೆ. ಕರ್ನಾಟಕದ ಅನೇಕ ಸಂಗೀತ ವಿದ್ವಾಂಸರು ಈ ಪ್ರದೇಶದಿಂದ ಬಂದವರಾಗಿದ್ದಾರೆ. ಹರಿಕಥಾ ವಿದ್ವಾಂಸರೂ ಗಾಯಕರೂ ಆದ ಆರ್.ಕೆ. ಕೃಷ್ಣಶಾಸ್ತ್ರಿ ಅವರ ನಾಲ್ವರು ಮಕ್ಕಳು ಇಂದು ಸಂಗೀತಪ್ರಪಂಚದಲ್ಲಿ ಖ್ಯಾತರಾಗಿದ್ದಾರೆ. ಆರ್.ಕೆ. ವೆಂಕಟರಾಮಾಶಾಸ್ತ್ರಿ, ಪಿಟೀಲು ವಿದ್ವಾಂಸರಾದ ಆರ್.ಕೆ. ರಾಮನಾಥನ್, ಸಂಗೀತ ವಿದ್ವಾಂಸರಾದ ಆರ್.ಕೆ. ಶ್ರೀಕಂಠನ್ ಹಾಗು ಆರ್.ಕೆ. ನಾರಾಯಣಸ್ವಾಮಿ, ಆರ್.ಕೆ. ಶ್ರೀಕಂಠನ್ ಅವರ ಮಕ್ಕಳಾದ ರಮಾಕಾಂತ್ ಹಾಗು ರತ್ನಮಾಲಪ್ರಕಾಶ್ ಅವರುಗಳೆಲ್ಲ ಮೂಲತಃ ರುದ್ರಪಟ್ಟಣಕ್ಕೆ ಸೇರಿದವರು.

ವೀಣಾ ವಿದ್ವಾಂಸರಾದ ವೆಂಕಟರಾಮಯ್ಯ ಹಾಗು ಶತಾವಧಾನಿ ವೆಂಕಟರಾವ್, ಆಸ್ಥಾನ ವಿದ್ವಾಂಸರಾದ ಆರ್.ಎಸ್. ಕೇಶವಮೂರ್ತಿ, ಆರ್.ಎನ್. ದೊರೆಸ್ವಾಮಿ, ಆರ್.ಕೆ. ಸೂರ್ಯನಾರಾಯಣ್, ಅರ್.ಕೆ. ಶ್ರೀನಿವಾಸಮೂರ್ತಿ, ಖ್ಯಾತ ಪಿಟೀಲು ವಿದ್ವಾಂಸರಾದ ಆರ್.ಆರ್. ಕೇಶವಮೂರ್ತಿ ಅವರುಗಳು ಮೂಲತಃ ರುದ್ರಪಟ್ಟಣಕ್ಕೆ ಸೇರಿದವರು.

ಹರಿಕಥಾ ವಿದ್ವಾಂಸರಾದ ಕೆ.ಎನ್. ಚಂದ್ರಶೇಖರಯ್ಯ, ಕೊಣನೂರು ಸೀತಾರಾಮ ಶಾಸ್ತ್ರಿ ಮತ್ತು ಪ್ರಸಿದ್ಧ ನಾದಸ್ವರ ವಾದಕರಾದ ಎ. ನಾರಾಯಣಪ್ಪ ಅರಕಲಗೂಡಿನವರು.

ಹಾಸನದ ತಿಮ್ಮಯ್ಯ ಪ್ರಖ್ಯಾತ ನಾದಸ್ವರ ವಿದ್ವಾಂಸರು. ಅವರ ಮಗ ಹೆಚ್.ಜಿ. ವೆಂಕಟರಾಮಯ್ಯ ಪಿಟೀಲು ವಿದ್ವಾಂಸರು. ಚನ್ನರಾಯಪಟ್ಟಣ ತಾಲ್ಲೂಕಿನ ಗಮಕಿಗಳಾದ ವೀರಭದ್ರಶೆಟ್ಟಿ, ಆಕಾಶವಾಣಿ ಕಲಾವಿದ ಹಾಗು ಗಮಕಿ ಚ.ರಾ. ರಂಗಸ್ವಾಮಿ, ಹರಿಕಥಾ ಪ್ರವೀಣೆ ಸಿ. ಆರ್. ರಂಗಮ್ಮ, ರಂಗನಟ ಸುರೇಶ್ ಚಲ್ಯ ಅವರುಗಳು ಜ್ಞಾಪಕಾರ್ಹರು.

ಆಧುನಿಕ ಕಾಲದಲ್ಲೂ ಹಾಸನ ತನ್ನ ಪ್ರಾಮುಖ್ಯತೆಯನ್ನು ನಿರೂಪಿಸಿಕೊಂಡಿದೆ. 'ಇಸ್ರೋ' ಕೇಂದ್ರ ಹಾಸನದಲ್ಲಿದ್ದು ಇದಕ್ಕೆ ವಿಶ್ವಭೂಪಟದಲ್ಲಿ ಪ್ರಮುಖ ಸ್ಥಾನ ನೀಡಿದೆ. ಹೆಚ್.ಡಿ.

ದೇವೇಗೌಡ ಅವರು ಪ್ರಧಾನಿಯಾಗಿದ್ದಾಗ ಬೆಂಗಳೂರು-ಹಾಸನ ನಡುವೆ ನೇರ ರೈಲು ಸಂಪರ್ಕ ಯೋಜನೆಗೆ ಅನುಮತಿ ನೀಡಿದರು. ಇದು ಅನುಷ್ಠಾನಗೊಂಡರೆ ಹಾಸನದ ಅಭಿವೃದ್ಧಿ ಪೂರಕವಾಗುವುದರಲ್ಲಿ ಸಂಶಯವಿಲ್ಲ. ದೇವೇಗೌಡ ಅವರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದಾಗ ಹಾಸನದಲ್ಲಿ 'ಕೈಗಾರಿಕಾಭಿವೃದ್ಧಿ' ಪೂರಕ ಕೇಂದ್ರವನ್ನು ಸ್ಥಾಪಿಸಿದ್ದು ಹಾಸನದ ಬೆಳವಣಿಗೆಗೆ ಸಹಾಯಕವಾಗಿದೆ.

## ಉಪ್ಪಾರ ಸಮಾಜ

ಹಾಸನ ಜಿಲ್ಲೆಯಲ್ಲಿ ಉಪ್ಪಾರ ಸಮಾಜ ಸಾಕಷ್ಟು ಸಂಖ್ಯಾಬಲವನ್ನು ಹೊಂದಿದೆ. ಈ ಗ್ರಂಥಕ್ಕಾಗಿ ಜಿಲ್ಲೆಯ ಎಂಟು ತಾಲ್ಲೂಕುಗಳಲ್ಲಿ ಸರ್ವೆ ಕಾರ್ಯ ಕೈಗೊಂಡಾಗ ಆಶ್ಚರ್ಯ ಕಾದಿತ್ತು. ಯಾರೂ ನಿರೀಕ್ಷಿಸದಷ್ಟು ಉಪ್ಪಾರ ಜನಸಂಖ್ಯಾ ಬಾಹುಳ್ಯ ಈ ಜಿಲ್ಲೆಯಲ್ಲಿದೆ.

ಹಾಸನ ಜಿಲ್ಲೆಯ ಕಸಬಾ ಹೋಬಳಿಯ ಹಾಸನ ನಗರ, ಕಿಂಡೀಪುರ, ಕಂದಲ, ಯಲಗನಹಳ್ಳಿ, ತಿಮ್ಮನಹಳ್ಳಿ, ಜಲ್ಲೇನಹಳ್ಳಿ, ದುದ್ದ ಹೋಬಳಿಯ ದುದ್ದ, ಸಾವಂತನಹಳ್ಳಿ, ಸಾವಂತನಹಳ್ಳಿ ಕೊಪ್ಪಲು ಹಾಗು ಕೃಷ್ಣಾಪುರ, ಶಾಂತಿಗ್ರಾಮ ಹೋಬಳಿಯ ಕಣ್ಣೆನಹಳ್ಳಿ, ಚಾಕೇಲನಹಳ್ಳಿ, ಉದ್ದೂರು, ಹೊಸಹಳ್ಳಿ, ಪಿರಮೇನಹಳ್ಳಿ, ಮರ್ಕುಲಿ ಮತ್ತು ಕಟ್ಟಾಯ ಹೋಬಳಿಯ ಸತ್ತಿಗರಹಳ್ಳಿ, ಅವ್ವೇರಹಳ್ಳಿ (ಬನವಾಸೆ ಕೊಪ್ಪಲು) ಮೊದಲಾದ ಕಡೆ 954 ಉಪ್ಪಾರ ಕುಟುಂಬಗಳಿವೆ. ಅವುಗಳಲ್ಲಿ 5,480 ಜನರಿದ್ದಾರೆ.

ಹೊಳೆನರಸೀಪುರ ತಾಲ್ಲೂಕಿನ ಹೊಳೆನರಸಿಪುರ ನಗರ, ಓರಿಹಳ್ಳಿ ಕೊಪ್ಪಲು ಹಾಗು ದೊಡ್ಡ ಬ್ಯಾಗತವಳ್ಳಿಗಳಲ್ಲಿ 385 ಕುಟುಂಬಗಳಿದ್ದು 2120 ಜನರಿದ್ದಾರೆ.

ಚನ್ನರಾಯಪಟ್ಟಣ ತಾಲ್ಲೂಕಿನ ಕಸಬಾ ಹೋಬಳಿ, ಚನ್ನರಾಯಪಟ್ಟಣ ಟೌನ್, ಹೌಸಿಂಗ್ ಬೋರ್ಡ್ ಕಾಲೋನಿ, ಗುಳದ ಬಾಗೂರು ಹೋಬಳಿಯ, ಮರಗೂರು ಶಿವರ, ಹೊನ್ನುನಕೊಪ್ಪಲು, ಮುದ್ದಾಪುರ ಹಾಗು ಕೆಂಬಾಳು, ನುಗ್ಗೇಹಳ್ಳಿ ಹೋಬಳಿಯ ನುಗ್ಗೇಹಳ್ಳಿ, ಕಾರೇಕೆರೆ ಮತ್ತು ತಾವರೆಕೆರೆ, ಹಿರೇಸಾವೆ ಹೋಬಳಿಯ ಕೊಳ್ಳೇನಹಳ್ಳಿ ಮತ್ತು ಮೂಕೀಕೆರೆ, ದಂಡಿಗನಹಳ್ಳಿ ಹೋಬಳಿಯ ಮಾಳೇನಹಳ್ಳಿ, ಹಾಲಗೋಡನಹಳ್ಳಿ ಮತ್ತು ತಿರುಮಲಾಪುರ, ಶ್ರವಣಬೆಳಗೊಳದ ಕೊತ್ತನಹಳ್ಳಿ ಸೇರಿದಂತೆ 875 ಉಪ್ಪಾರ ಕುಟುಂಬಗಳಿದ್ದು ಅವರಲ್ಲಿ 5,398 ಜನರಿದ್ದಾರೆ.

ಅರಸೀಕೆರೆ ತಾಲ್ಲೂಕಿನ ಕಸಬಾ ಹೋಬಳಿಯ ಅರಸೀಕೆರೆ, ಬೊಮ್ಮೇನಹಳ್ಳಿ, ಕಾಟೀಕೆರೆ, ಕಂಕೋಡಿಹಳ್ಳಿ, ಬಂಡಿಹಳ್ಳಿ, ಜಾಜೂರು, ಲಕ್ಷ್ಮೀದೇವರಹಳ್ಳಿ, ಕಲ್ಲಂಗೆರೆ, ದಾಸೀಹಳ್ಳಿ, ಚಿಕ್ಕಣ್ಣನ ಕೊಪ್ಪಲು, ಕನಕಂಚನಹಳ್ಳಿ, ರುದ್ರನಹಳ್ಳಿ, ಜಾವಗಲ್ ಹೋಬಳಿಯ ತಿಮ್ಮನಹಳ್ಳಿ, ಸೇರ್ಲಿಗೆ ಮಲ್ಲದೇವಿಹಳ್ಳಿ, ಗಂಡಸಿ ನಾರಮ್ಮನಹಳ್ಳಿ, ಕರಿಮಾರನಹಳ್ಳಿ, ಬಾಣಾವರ ಹೋಬಳಿಯ ಸೂಲದಿಮ್ಮನಹಳ್ಳಿ, ಊಪಿನಹಳ್ಳಿ, ಬಾಣಾವರ, ಕಂಡಿಲಿಂಗನಹಳ್ಳಿ, ಆರ್.ಎಸ್. ಕೊಪ್ಪಲು,

ಮನಗತ್ತೂರು ಮತ್ತು ಕಣಕಟ್ಟೆ ಹೋಬಳಿಯ ಸೊಪ್ಪಿನಹಳ್ಳಿ, ಕಣಕಟ್ಟೆ ಕುಂಬಾರಗಟ್ಟೆಪಾಳ್ಯ, ಸೋಮೇನಹಳ್ಳಿ, ಕಾಮಸಮುದ್ರ, ಹೊಳಲ್ಕೆರೆ, ಹೆರಗೇನಹಳ್ಳಿ, ದಿಬ್ಬೂರು, ಮೇಳೇನಹಳ್ಳಿ ಮತ್ತು ಹರಳಕಟ್ಟೆ ಗ್ರಾಮಗಳಲ್ಲಿ 2057 ಉಪ್ಪಾರ ಕುಟುಂಬಗಳಿದ್ದು, 13,008 ಜನರಿದ್ದಾರೆ.

ಸಕಲೇಶಪುರ ತಾಲ್ಲೂಕಿನ ಕಸಬಾ ಹೋಬಳಿಯ ಸಕಲೇಶಪುರ ಮತ್ತು ಕುಶಾಲನಗರ ಬಡಾವಣೆ, ಬೆಳಗೋಡು ಹೋಬಳಿಯ ಬೆಳಗೋಡು ಮತ್ತು ಮೂಗಲಿ ಗ್ರಾಮಗಳಲ್ಲಿ 450 ಉಪ್ಪಾರ ಕುಟುಂಬಗಳಿದ್ದು ಅಲ್ಲಿ 2350 ಜನರಿದ್ದಾರೆ.

ಆಲೂರು ತಾಲ್ಲೂಕಿನ ಕಸಬಾ ಹೋಬಳಿಯ ಗುಡ್ಡೇನಹಳ್ಳಿ ಲಕ್ಷ್ಮೀಪುರ ಮತ್ತು ಕಡಬಗಾಲ ಗ್ರಾಮಗಳಲ್ಲಿ 350 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 1920 ಜನರಿದ್ದಾರೆಂದು ಹೇಳಲಾಗಿದೆ.

ಬೇಲೂರು ತಾಲ್ಲೂಕಿನ ಕಸಬಾ ಹೋಬಳಿ ಬೇಲೂರು ಟೌನ್, ಸಿ. ಹೊಸಹಳ್ಳಿ, ನಿಡುಗೋಡು, ಲಕ್ಷ್ಮೀಪುರ, ಹಳೇಬೀಡು ಹೋಬಳಿಯ ಶಿವನೇನಹಳ್ಳಿ, ದೊಡ್ಡಗಟ್ಟೆ, ಸೂರನಾಯಕನಹಳ್ಳಿ ಕೊಂಡಲ, ಗೋಣಸೋಮನಹಳ್ಳಿ, ರಾಜಗೆರೆ, ಗಟ್ಟದಹಳ್ಳಿ, ಲಕ್ಷ್ಮೀಪುರ, ಚಡಚಟ್ಟನಹಳ್ಳಿ ಮತಿಘಟ್ಟ, ಮಾದಿಹಳ್ಳಿ ಹೋಬಳಿಯ ಮಾದಿಹಳ್ಳಿ, ಹನಿಕ ಮತ್ತು ಅಜ್ಜೇನಹಳ್ಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 1,600 ಉಪ್ಪಾರ ಕುಟುಂಬಗಳಿದ್ದು, 9,140 ಜನ ಉಪ್ಪಾರರಿದ್ದಾರೆ.

ಅರಕಲಗೂಡು ತಾಲ್ಲೂಕಿನ ಕಸಬಾ ಹೋಬಳಿಯ ಅರಕಲಗೂಡು ಟೌನ್, ಹಂಪಾಪುರ, ಬಾದಹಳ್ಳಿ, ಕತ್ತಿಮಲ್ಲೇನಹಳ್ಳಿ, ಜಟ್ಟಿಗೊಡನಹಳ್ಳಿ, ಅತ್ನಿ ಕೊಪ್ಪಲು, ಸೆಣವಿನಕುಪ್ಪೆ, ಅರಮಂತಿಗತಿಟ್ಟ, ಹುರಳಿಕೊಪ್ಪಲು, ಗುಂಜಲಗೂಡು, ಕೊಣನೂರು ಹೋಬಳಿಯ ಕೊಣನೂರು, ಅಕ್ಕಲವಾಡಿ, ವೆಂಕಟೇಗೌಡನಕೊಪ್ಪಲು, ಹಿರಿಹಳ್ಳಿಕೊಪ್ಪಲು, ಅರಳಿ ಮರದಕೊಪ್ಪಲು, ಲಕ್ಕನಹಳ್ಳಿ, ವೆಂಕಟೇಶಪುರ, ಕಡವಿನ ಹೊಸಹಳ್ಳಿ, ಚಿಗಳ್ಳಿಕೊಪ್ಪಲು, ರಾಮನಾಥಪುರ ಹೋಬಳಿಯ ಕೇರಳಾಪುರ, ಬಸವನಹಳ್ಳಿ ಬಸವಾಪಟ್ಟಣ, ಬೂದನೂರು, ಮೂಲಿಹೊಸಹಳ್ಳಿ, ಗಂಗೂರು, ಹೊಸಹಳ್ಳಿ, ರುದ್ರಪಟ್ಟಣ, ರಾಮನಕೊಪ್ಪಲು, ಉಪ್ಪಾರ ಕೊಪ್ಪಲು, ಕಂಟಾಪುರ, ರಾಮನಾಥಪುರ, ಕಾಳೇನಹಳ್ಳಿ, ಗರುಡನಹಳ್ಳಿ ಮೊದಲಾದ ಕಡೆ 5,083 ಉಪ್ಪಾರ ಕುಟುಂಬಗಳಿದ್ದು 21,498 ಜನರಿದ್ದಾರೆ.

ಹಾಸನ ಜಿಲ್ಲೆಯಲ್ಲಿ 11,200 ಉಪ್ಪಾರ ಕುಟುಂಬಗಳಿದ್ದು 60,914 ಜನರಿದ್ದಾರೆ. ಅರಕಲಗೂಡು, ಬೇಲೂರು ಹಾಗು ಅರಸೀಕೆರೆ ತಾಲ್ಲೂಕಿನಲ್ಲಿ ಉಪ್ಪಾರರು ಹೆಚ್ಚಾಗಿದ್ದಾರೆ.

ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನ ಸುಮಾರು ಮೂವತ್ತೈದು ಹಳ್ಳಿಗಳಲ್ಲಿ ಉಪ್ಪಾರರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ತಾಲ್ಲೂಕಿನಾದ್ಯಂತ ತೀವ್ರತರವಾದ ಸರ್ವೆ ಕಾರ್ಯ ಕೈಗೊಂಡಾಗ 4083 ಕುಟುಂಬಗಳು ಕಂಡುಬಂದವು. 21,498 ಜನರನ್ನು ಇಲ್ಲಿ ಗುರುತಿಸಬಹುದು.

ರಾಮನಾಥಪುರ ಹೋಬಳಿಯ ಕೇರಳಾಪುರ ಗ್ರಾಮದಲ್ಲಿ ಉಪ್ಪಾರರು ಯಥೇಚ್ಛವಾಗಿದ್ದಾರೆ. ಇವರ ಸಂಖ್ಯೆ ಇನ್ನೂ ಹೆಚ್ಚಾಗುವ ಸಾಧ್ಯತೆಗಳಿವೆ. ಇಷ್ಟಾದರೂ ಅರಕಲಗೂಡು ತಾಲ್ಲೂಕಿನಲ್ಲಿ ಈ ಜನಾಂಗವನ್ನು ರಾಜಕೀಯವಾಗಿ ಯಾರೂ ಗುರುತಿಸಿಲ್ಲ.

ಹಾಸನ ಜಿಲ್ಲೆಯಲ್ಲಿನ ಉಪ್ಪಾರರ ಮನೆಮಾತು ಹಾಗು ವ್ಯವಹಾರ ಭಾಷೆ ಕನ್ನಡವೇ ಆಗಿದೆ. ಗ್ರಾಮೀಣ ಪ್ರದೇಶದಲ್ಲಿ ಶಿಕ್ಷಣದ ಮಹತ್ವದ ಅರಿವಿದೆ. ಗಂಡಸರು ಶೇ. 60ರಷ್ಟು ಸಾಕ್ಷರರಿದ್ದಾರೆ. ಮಹಿಳೆಯರು ಶೇ. 40ರಷ್ಟು ಅಕ್ಷರಸ್ಥರಾಗಿದ್ದಾರೆ.

ಹಾಸನ ಜಿಲ್ಲೆಯಲ್ಲಿ ಉಪ್ಪಾರರನ್ನು ಮೇಲುಸಕ್ಕರೆ, ಉಪ್ಪಾರ, ಉಪ್ಪಾರಗೌಡ ಎಂಬ ಹೆಸರುಗಳಿಂದ ಕರೆಯುತ್ತಾರೆ.

ಈ ಜಿಲ್ಲೆಯಲ್ಲಿನ ಉಪ್ಪಾರರ ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲ. ದೊಡ್ಡ ದೊಡ್ಡ ಜಮೀನ್ದಾರರ ಬಳಿ ಕೂಲಿ ಕೆಲಸ ಮಾಡುವುದರಲ್ಲಿ ಇವರು ನಿರತರಾಗಿದ್ದಾರೆ. ಅತ್ಯಂತ ಸಣ್ಣ ಹಿಡುವಳಿದಾರರು ಈ ಸಮಾಜದಲ್ಲಿ ಹೆಚ್ಚು. ತಮ್ಮ ವಂಶ ಪಾರಂಪರಿಕವಾದ ವೃತ್ತಿ ತೊರೆದ ನಂತರ ಕಂಟ್ರಾಕ್ಟರ್ ಕೆಲಸಕ್ಕೆ ಇವರು ಮುಂದಾಗಿದ್ದಾರೆ. ವಿವಿಧ ವ್ಯಾಪಾರಗಳಲ್ಲಿ ಸಹ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಉಪ್ಪಾರರಿಗೆ ಪ್ರವರ್ಗIರಲ್ಲಿ ಮೀಸಲಾತಿ ಸೌಲಭ್ಯ ದೊರಕಿದ ಕಾರಣ ಶಿಕ್ಷಕ ಹಾಗು ಪೊಲೀಸ್ ಕಾನ್‌ಸ್ಟೇಬಲ್ ಹುದ್ದೆಗಳು ಈಗೀಗ ದೊರೆಯುತ್ತಿವೆ.

ಡಾ|| ಎಸ್. ರಾಮಪ್ಪ ಹೆಸರಾಂತ ವೈದ್ಯರು. ಅರಕಲಗೂಡು ತಾಲ್ಲೂಕಿನ ಕೇರಳಾಪುರ ಗ್ರಾಮದವರಾದ ಅವರು ಸುಮಾರು 40 ವರ್ಷಗಳಿಂದ ಬೆಂಗಳೂರಿನಲ್ಲಿ ವೈದ್ಯಕೀಯ ವೃತ್ತಿ ಕೈಗೊಂಡಿದ್ದು, ಆ ಕ್ಷೇತ್ರದಲ್ಲಿ ಒಳ್ಳೆಯ ಹೆಸರು ಗಳಿಸಿದ್ದಾರೆ. ಕೆ.ಎನ್. ಜುಂಜಪ್ಪ ನಿವೃತ್ತ ಅಸ್ಸಿಸ್ಟೆಂಟ್, ರಿಜಿಸ್ಟ್ರಾರ್ ಸಹಕಾರಿ ಸಂಘಗಳು, ಹಾಸನ ಇವರು ಕೂಡ ಅರಕಲಗೂಡು ತಾಲ್ಲೂಕಿನ ಕೇರಳಾಪುರ ಗ್ರಾಮದವರು. ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲರಾಗಿ ನಿವೃತ್ತರಾಗಿರುವ ಬಿ.ಆರ್. ರಾಮೇಗೌಡರು ಬೇಲೂರಿನವರು. ಪ್ರಥಮ ದರ್ಜೆ ಕಂಟ್ರಾಕ್ಟರ್ ರಾಮಣ್ಣ ಅವರು ಚನ್ನರಾಯಪಟ್ಟಣದವರು. ಉದ್ಯಮಿ ಎ.ಸಿ. ನರಸಿಂಹೇಗೌಡ ಅವರು ಅರಕಲಗೂಡಿನವರು, ಬೆಂಗಳೂರಿನಲ್ಲಿ ತಮ್ಮದೇ ಆದ ಉದ್ಯಮ ಹೊಂದಿದ್ದಾರೆ.

ಜಿಲ್ಲೆಯಾದ್ಯಂತ ಐವರು ವೈದ್ಯರುಗಳು ಸೇವೆ ಸಲ್ಲಿಸುತ್ತಿದ್ದಾರೆ. ಚನ್ನರಾಯಪಟ್ಟಣದಲ್ಲಿ ಡಾ|| ಧನಶೇಖರನ್, ಹಾಸನ ಇಎಸ್ಐ ಆಸ್ಪತ್ರೆಯಲ್ಲಿರುವ ಡಾ|| ಶಾಂತಾ, ಹೊಳೆನರಸೀಪುರದ ಖಾಸಗಿ ವೈದ್ಯರಾದ ಡಾ|| ಸಾವಿತ್ರಿ, ಅರಸೀಕೆರೆ ತಾಲ್ಲೂಕು ಕುರುವಂಕದಲ್ಲಿರುವ ಡಾ|| ಕುಮಾರ ಸಾಗರ ಅವರು ಈ ಸಮುದಾಯದ ವೈದ್ಯರಾಗಿದ್ದಾರೆ. ದೊಡ್ಡಮೇಟಿ ಕುರ್ಕೆಯಲ್ಲಿ ಪಶುಸಂಗೋಪನಾ ವೈದ್ಯರಾಗಿ ಸೇವೆ ಸಲ್ಲಿಸುತ್ತಿರುವ ಡಾ|| ನಾಗೇಂದ್ರಕುಮಾರ ಹಾಗು ಸಿ.ಡಿ.ಪಿ.ಓ. ಆಗಿ ಕಾರ್ಯನಿರ್ವಹಿಸುತ್ತಿರುವ ಅವರ ಧರ್ಮಪತ್ನಿ ವಾಸಂತಿ ಉಪ್ಪಾರ ಅವರು ಕೂಡ ಈ ಸಮುದಾಯದ ಹಿತಚಿಂತಕರು.

ಹಾಸನ ಜಿಲ್ಲೆಯ ಇಂಜಿನಿಯರ್‌ಗಳೆಂದರೆ ಕೆ.ಸಿ. ಕೃಷ್ಣ ಉಪನ್ಯಾಸಕರು, ಎಂಸಿಇ ಹಾಸನ, ಸಿ.ಎಸ್. ಚಂದ್ರಶೇಖರ್ ಜ್ಯೂನಿಯರ್ ಮ್ಯಾನೇಜರ್ ಕ್ರಿಸ್ಕೊ ಪೆಣಂಬೂರು, ಮಂಗಳೂರು ಧರ್ಮೇಂದ್ರ ಮೆಕ್ಯಾನಿಕಲ್ ಇಂಜಿನಿಯರ್, ಮ್ಯಾನೇಜರ್ ಕರಾರಸಾಸಂ ಕೆ.ಆರ್. ನಗರ ಮೈಸೂರು, ಹೇಮಂತಕುಮಾರ್ ಬಿಇಎಲ್ ಬೆಂಗಳೂರು, ದುಷ್ಯಂತಕುಮಾರ್ ಹೈದ್ರಾಬಾದ್ ಕಂಪನಿಯೊಂದರಲ್ಲಿ ಕೆಲಸ ಮಾಡುತ್ತಿದ್ದಾರೆ. ಕುಮಾರಿ ಕವಿತಾ ಇಂಜಿನಿಯರ್ ಕಂಪ್ಯೂಟರ್ ತರಬೇತಿ ಕೇಂದ್ರ ಹಾಸನ, ಶ್ರೀ ಮಂಜುನಾಥ್ ಮೆಕ್ಯಾನಿಕಲ್ ಇಂಜಿನಿಯರ್ ಹಾಸನ, ಜೆ. ಪುರುಷೋತ್ತಮ್ ಆರ್.ಟಿ.ಓ. ಕೊಪ್ಪಳ, ಜೈಪರಮೇಶ್ ಸಿವಿಲ್ ಇಂಜಿನಿಯರ್ ಕೇರಳಾಪುರ, ಅರಕಲಗೂಡು ಕರಿಯಪ್ಪ, ಸೊಪ್ಪಿನಹಳ್ಳಿ, ಅರಸೀಕೆರೆ ತಾಲ್ಲೂಕು ಇವರು ಮಹಾರಾಷ್ಟ್ರದ ಸರ್ಕಾರ ಸೇವೆಯಲ್ಲಿದ್ದರು, ಈಗ ನಿವೃತ್ತರಾಗಿದ್ದಾರೆ. ಸಿ.ವಿ. ಭಾಸ್ಕರ ಸಹಾಯಕ ಕಾರ್ಯಪಾಲಕ ಅಭಿಯಂತರರು ಗೊರೂರು ಮುಂತಾದವರು.

ಈ ಸಮುದಾಯಕ್ಕೆ ಸೇರಿದ 200 ಜನ ವ್ಯಾಪಾರಸ್ಥರನ್ನು ಗುರುತಿಸಲಾಗಿದೆ. ತಾಲ್ಲೂಕು ಕೇಂದ್ರಗಳಲ್ಲಿ ಹೂವು, ತರಕಾರಿ, ಸೊಪ್ಪು ಬೆಳೆದು ಅದನ್ನು ಮಾರಾಟ ಮಾಡಿ ಜೀವನ ಸಾಗಿಸುತ್ತಿದ್ದಾರೆ. ಅನೇಕ ಕಡೆ ಇವರನ್ನು ವ್ಯಾಪಾರಗಾರರು ಎಂದೇ ಗುರುತಿಸಲಾಗುವುದು.

ಪ್ರಥಮ ದರ್ಜೆ ಕಂಟ್ರ್ಯಾಕ್ಟರ್ ರಾಮಣ್ಣ ಚನ್ನರಾಯಪಟ್ಟಣದವರು. ರಾಯಪ್ಪ ಅವರು ಚನ್ನರಾಯಪಟ್ಟಣದಲ್ಲಿ ಮೆಡಿಕಲ್ ಸ್ಟೋರ್ ನಡೆಸುತ್ತಿದ್ದಾರೆ. ಅದೇ ಊರಿನಲ್ಲಿ ನಿವೃತ್ತ ಆರ್‌ಎಫ್‌ಓ ಆದ ಲಕ್ಕಪ್ಪ ಜನರಲ್ ಸ್ಟೋರ್ಸ್ ಇಟ್ಟುಕೊಂಡಿದ್ದಾರೆ. ಹಾಸನದ ಎಸ್.ಎನ್. ವಿಜಯಕುಮಾರ್, ಆಲೂರು ತಾಲ್ಲೂಕಿನ ಯೋಗೇಂದ್ರಗೌಡ ಮತ್ತು ಬೇಲೂರು ತಾಲ್ಲೂಕಿನ ಮಂಜುನಾಥ್ ಗುರಪ್ಪಗೌಡ ಇಂಜಿನಿಯರ್ ಹಾಗು ಕಂಟ್ರಾಕ್ಟರ್ ಬೆಂಗಳೂರು ಈ ಸಮಾಜದ ಪ್ರಮುಖ ಗುತ್ತಿಗೆದಾರರು.

ಉಪ್ಪಾರ ಸಮಾಜಕ್ಕೆ ಸೇರಿದ 27 ಜನ ಗ್ರಾಮ ಪಂಚಾಯತ್‌ನ ಸದಸ್ಯರನ್ನು ಗುರುತಿಸಲಾಗಿದೆ. ಅವರುಗಳೆಂದರೆ ಚನ್ನರಾಯಪಟ್ಟಣ ತಾಲ್ಲೂಕಿನ ಕಲ್ಕೆರೆ ಗ್ರಾಮಪಂಚಾಯತ್ ಸದಸ್ಯೆ ನಾಗಮಣಿ ಕೃಷ್ಣಪ್ಪ, ಹಾಸನ ತಾಲ್ಲೂಕಿನ ಮರ್ಕುಲಿ ಗ್ರಾಮಪಂಚಾಯತ್ ಸದಸ್ಯೆ ಶಾರದಮ್ಮ, ಅರಕಲಗೂಡಿನ ಕೇರಳಾಪುರ ಗ್ರಾಮಪಂಚಾಯತ್ ಸದಸ್ಯ ನಾಗರಾಜ್, ಅದೇ ಪಂಚಾಯತ್ ಉಪಾಧ್ಯಕ್ಷೆಯಾದ ಸರೋಜ ಶಿವಪ್ಪ, ಅದೇ ಪಂಚಾಯತ್‌ನ ಇತರ ಸದಸ್ಯರಾದ ವೀರಪ್ಪ ಮತ್ತು ಲಕ್ಷ್ಮಮ್ಮ, ಸಕಲೇಶಪುರ ಪುರಸಭೆಯ ಅಧ್ಯಕ್ಷರಾದ ಕೌಸಲ್ಯ ಲಕ್ಷ್ಮಣಗೌಡ, ಸದಸ್ಯರಾದ ಲಕ್ಷ್ಮಮ್ಮ, ಅರಕಲಗೂಡು ತಾಲ್ಲೂಕಿನ ಚಿಗಳ್ಳಿ ಗ್ರಾಮಪಂಚಾಯತ್‌ನ ಅಧ್ಯಕ್ಷರಾದ ತಿಮ್ಮಮ್ಮ, ಉಪಾಧ್ಯಕ್ಷರಾದ ಸ್ವಾಮಿಗೌಡ ಸದಸ್ಯರುಗಳಾದ ಗಂಗಮ್ಮ ಮತ್ತು ಸಣ್ಣಪುಟ್ಟಮ್ಮ, ಅರಸಿಕೆರೆ ತಾಲ್ಲೂಕು ಜಾಜೂರು ಗ್ರಾಮಪಂಚಾಯತ್‌ನ ಅಧ್ಯಕ್ಷರಾದ ಗಂಗಾಧರಪ್ಪ, ಸದಸ್ಯೆ ರಾಜಮ್ಮ, ಅದೇ ತಾಲ್ಲೂಕಿನ ಕಾಚಗಟ್ಟೆ ಗ್ರಾಮಪಂಚಾಯತ್‌ನ ಸದಸ್ಯರಾದ ಮಿಲಟರಿ ರಂಗಪ್ಪ ಹಾಗು ಪಾರ್ವತಮ್ಮ, ಅರಸೀಕೆರೆ ತಾಲ್ಲೂಕಿನ ಶಂಕರನಹಳ್ಳಿ ಗ್ರಾಮಪಂಚಾಯತ್‌ನ

ಸದಸ್ಯರಾದ ಮೈಲಾರಪ್ಪ, ಓಂಕಾರಮ್ಮ, ಅದೇ ತಾಲ್ಲೂಕಿನ ಅರಳಕಟ್ಟೆ ಗ್ರಾಮಪಂಚಾಯತ್‌ನ ಸದಸ್ಯರಾದ ಶಂಕರಪ್ಪ, ಡಿ.ಎಂ. ಕುರ್ಕೆ, ಗ್ರಾಮಪಂಚಾಯತ್‌ನ ಸದಸ್ಯರಾದ ಸೋಮಗಣ್ಣಜ್ಜ ತಿಮ್ಮೇನಹಳ್ಳಿ, ಸದಸ್ಯರಾದ ಶಶಿಕಲಾ ದಾಸಿಹಳ್ಳಿ, ಶಾಲಿಗೆರೆ ಗ್ರಾಮಪಂಚಾಯತ್‌ನ ಸದಸ್ಯರಾದ ಮಾಯಮ್ಮ, ಬೇಲೂರು ತಾಲ್ಲೂಕ್ ಗೋಣಿಸೋಮೇನಹಳ್ಳಿ ಗ್ರಾಮಪಂಚಾಯತ್‌ನ ಸದಸ್ಯರಾದ ರುದ್ರೇಗೌಡ, ಅದೇ ತಾಲ್ಲೂಕಿನ ಶಿವನೇನಹಳ್ಳಿ ಗ್ರಾಮಪಂಚಾಯತ್‌ನ ಸದಸ್ಯರಾದ ಹಾಲಪ್ಪ ಹಾಗೂ ಬೇಲೂರು ಪುರಸಭೆ ಸದಸ್ಯರಾದ ಮೋಹನ-ಇವರುಗಳು ಉಪ್ಪಾರ ಸಮುದಾಯಕ್ಕೆ ಸೇರಿದ್ದು ಜನಪ್ರತಿನಿಧಿಗಳಾಗಿ ಚುನಾಯಿತರಾದವರು. ಮುಂದಿನ ದಿನಗಳಲ್ಲಿ ತಾಲ್ಲೂಕು ಹಾಗು ಜಿಲ್ಲಾಮಟ್ಟದಲ್ಲಿ 'ನಾಯಕತ್ವ' ಮೂಡಿಬರುವ ಅವಕಾಶಗಳು ಯಥೇಚ್ಛವಾಗಿವೆ. ರಾಜಕೀಯ ಪಕ್ಷಗಳು ಜಿಲ್ಲೆಯಲ್ಲಿನ ಉಪ್ಪಾರ ಸಮುದಾಯದ ಯುವಶಕ್ತಿಯನ್ನು ಪರಿಶೋಧಿಸಬೇಕಾಗಿದೆ.

ಹಾಸನ ಜಿಲ್ಲೆಯಲ್ಲಿನ ಉಪ್ಪಾರರು ಸಹಕಾರ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಸ್ವಾಗತಾರ್ಹ ವಿಚಾರ. ಅವರುಗಳೆಂದರೆ ಅರಕಲಗೂಡು ಕೇರಳಾಪುರದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಬ್ಯಾಂಕ್‌ನ ಅಧ್ಯಕ್ಷರಾದ ಜಯರಾಮು, ಬಸವಾಪಟ್ಟಣದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಬ್ಯಾಂಕ್‌ನ ಅಧ್ಯಕ್ಷರಾದ ನಾಗರಾಜ ಹಾಗು ಹಾಸನದ ಪ್ರಾಥಮಿಕ ಕೃಷಿ ಸಹಕಾರ ಹಾಗು ಗ್ರಾಮೀಣ ಬ್ಯಾಂಕ್‌ನ ನಿರ್ದೇಶಕರಾದ ಬಿ.ಎಸ್. ನಾಗರಾಜ್ ಮುಂತಾದವರು.

ಉಪ್ಪಾರ ಸಮಾಜದ ಯಜಮಾನ್ ಚಂದ್ರೇಗೌಡ ಅವರು ಶಿಲ್ಪ ವಿಗ್ರಹಗಳನ್ನು ಕೆತ್ತುವುದರಲ್ಲಿ ನಿಷ್ಣಾತರು. ಇವರು ಬೇಲೂರಿನ ಕೊಟ್ಟಿನಗರದ ಬೀದಿಯಲ್ಲಿದ್ದಾರೆ. ಬೇಲೂರಿನಲ್ಲಿ ಉಪ್ಪಾರರು ಶಿಲ್ಪಕಲಾ ವೃತ್ತಿಯಲ್ಲಿದ್ದಾರೆ ಎಂದರೆ ಈ ವೃತ್ತಿಯನ್ನು ಅನುಸರಿಸಿದ ಜನ ಹಿಂದೆ ಸಾಕಷ್ಟು ಸಂಖ್ಯೆಯಲ್ಲಿದ್ದರೆಂದು ಊಹಿಸಬಹುದು.

ಬೇಲೂರು ಕೊಟ್ಟಿನಗರದ ಬಿ.ವಿ. ಉಮೇಶ್ ಈ ಸಮುದಾಯದಿಂದ ಬಂದ ಪತ್ರಕರ್ತರು.

ಅರಕಲಗೂಡು ಕೇರಳಾಪುರದ ಕೆ.ಬಿ. ನಾಗರಾಜ ರಾಜ್ಯಮಟ್ಟದ ಹಾಗು ವಿಶ್ವವಿದ್ಯಾನಿಲಯ ಪ್ರತಿನಿಧಿಸಿದ ವಾಲಿಬಾಲ್ ಆಟಗಾರರಾಗಿದ್ದಾರೆ. ಹಾಸನದ ಕೆ.ಎಸ್. ಅನುರಾಧಾ ಅವರು ಅಂತರರಾಷ್ಟ್ರೀಯ ಮಟ್ಟದ ಖೋಖೋ ಮತ್ತು ಹ್ಯಾಂಡ್‌ಬಾಲ್ ಕ್ರೀಡಾಪಟು. ಪ್ರಸ್ತುತ ಮಂಡ್ಯದಲ್ಲಿ ಅಥ್ಲೆಟಿಕ್ ಕ್ರೀಡಾ ತರಬೇತುದಾರರಾಗಿದ್ದಾರೆ. ಹರದನಹಳ್ಳಿ ಶಾಲಾ ಮುಖ್ಯೋಪಾಧ್ಯಾಯರಾದ ಪಿ.ಕೆ. ತಿಮ್ಮಪ್ಪ ಅವರು ಹಾಸನ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಆಯುಕ್ತರಾಗಿದ್ದಾರೆ.

ಅರಸೀಕೆರೆ ತಾಲ್ಲೂಕಿನ ಜಾಜೂರು ಗ್ರಾಮಪಂಚಾಯತ್‌ನ ಮಾಜಿ ಅಧ್ಯಕ್ಷರು ಹಾಗು ತಾಲ್ಲೂಕಿನ ಉಪ್ಪಾರ ಸಂಘದ ಉಪಾಧ್ಯಕ್ಷರಾದ ಬಿ.ಕೆ. ಬಸಪ್ಪ ಅವರು ಸಮಾಜ

ಸೇವಾಕಾರ್ಯದಲ್ಲಿ ಆಸಕ್ತಿ ಹೊಂದಿದ್ದಾರೆ. ಅಲ್ಲದೆ ಚನ್ನರಾಯಪಟ್ಟಣದ ಜಿಲ್ಲಾ ಸಂಘದ ಅಧ್ಯಕ್ಷರಾದ ಜಿ. ರಾಮಣ್ಣ, ಮಾಳೇನಹಳ್ಳಿ ಗೋಪಾಲಗೌಡ, ಅಣ್ಣಯ್ಯ, ಸಿ.ಕೆ. ಕಾಂತರಾಜ, ಅರಕಲಗೂಡಿನ ರಾಮೇಗೌಡ, ದಾಸೇಗೌಡ, ಎ.ಸಿ. ನರಸಿಂಹೇಗೌಡ ಬೆಂಗಳೂರಿನಲ್ಲಿ ಉದ್ಯಮಿಗಳು. ಹೊಳೆನರಸಿಪುರ ತಾಲ್ಲೂಕಿನ ಹಿರೇಹಳ್ಳಿ ರಾಜಪ್ಪ, ಹೊಳೇನರಸಿಪುರದ ರಂಗಪ್ಪ, ವೈ.ಎಸ್. ಲಿಂಗಣ್ಣ, ಕೆ. ಶ್ರೀನಿವಾಸ, ಹನುಮಂತಯ್ಯ ನಿವೃತ್ತ ಉಪಕಾರ್ಯದರ್ಶಿ, ಹಾಸನ ತಾಲ್ಲೂಕಿನ ಹಾಸನದ ಕೆ.ಸಿ. ಕೃಷ್ಣ, ಸಿ.ಕೆ. ಶಿವಕುಮಾರ, ಎಸ್.ಜೆ. ನೀಲಪ್ಪ, ಕೆ.ಎನ್. ಜುಂಜಪ್ಪ, ಮೈಲಾರೇಗೌಡ, ಸಕಲೇಶಪುರ ತಾಲ್ಲೂಕಿನ ಹೆಚ್.ಕೆ. ಕಂಬೇಗೌಡ, ಕೌಶಲ್ಯ ಲಕ್ಷ್ಮಣಗೌಡ, ನರಸಿಂಹಮೂರ್ತಿ, ಎನ್. ರಾಜು, ಬೇಲೂರು ತಾಲ್ಲೂಕಿನ ಬಿ.ಕೆ. ಗುರಪ್ಪಗೌಡ, ಮೋಹನಕುಮಾರ, ಬಿ.ಆರ್. ಮಂಜುನಾಥ, ಎಂ.ಕೆ. ಭದ್ರೇಗೌಡ, ಅರಸಿಕೆರೆ ತಾಲ್ಲೂಕಿನ ಆರ್. ಲಕ್ಷ್ಮಣ, ಎಲ್. ಶಿವಣ್ಣ, ಜಾಜೂರು ಗ್ರಾಮದ ಬಿ.ಕೆ. ಬಸಪ್ಪ ಮುಂತಾದವರು ಈ ಸಮದಾಯದ ಪ್ರಮುಖರು ಹಾಗು ಸಮಾಜದ ಹಿತಚಿಂತಕರು.

ಹಾಸನ ಜಿಲ್ಲೆಯಲ್ಲಿ ಉಪ್ಪಾರ ಸಂಘ ಅಸ್ತಿತ್ವದಲ್ಲಿದೆ. ಇದರ ಹಿಂದಿನ ಅಧ್ಯಕ್ಷರು ಚನ್ನರಾಯಪಟ್ಟಣ ತಾಲ್ಲೂಕಿನ ಆಲಗೋಡುಹಳ್ಳಿಯ ದಿವಂಗತ ಕಾಳೇಗೌಡರು. ಪ್ರಸ್ತುತ ಉಪ್ಪಾರ ಸಂಘದ ಅಧ್ಯಕ್ಷರು ಚನ್ನರಾಯಪಟ್ಟಣದ ಪ್ರಥಮ ದರ್ಜೆ ಕಂಟ್ರಾಕ್ಟರ್ ಜಿ. ರಾಮಣ್ಣ.

ಸುಮಾರು ಅರ್ಧ ಲಕ್ಷಕ್ಕೂ ಹೆಚ್ಚು ಜನಸಂಖ್ಯೆ ಹೊಂದಿರುವ ಈ ಸಮಾಜ ಯಾವುದೇ ವಿದ್ಯಾಸಂಸ್ಥೆಗಳನ್ನು ನಡೆಸುತ್ತಿಲ್ಲ. ಆಸ್ಪತ್ರೆ, ಖಾಸಗಿ ಬ್ಯಾಂಕ್ ಅಥವಾ ಕೈಗಾರಿಕೆಗಳು ಇವರ ಒಡೆತನದಲ್ಲಿಲ್ಲ.

ಹಾಸನ ಜಿಲ್ಲಾಮಟ್ಟದಲ್ಲಿ ಇವರ ಧ್ವನಿಯೇ ಕೇಳುತ್ತಿಲ್ಲ. ಇದಕ್ಕೆ ಮುಖ್ಯ ಕಾರಣ ಈ ಸಮಾಜ ಇನ್ನೂ ಸಂಘಟಿತವಾಗಿಲ್ಲ. ಎಲ್ಲಿಯೂ ಈ ಜನಾಂಗಕ್ಕೆ ಸಂಬಂಧಪಟ್ಟ ವಿದ್ಯಾರ್ಥಿನಿಲಯವನ್ನು ಕಾಣಲು ಸಾಧ್ಯವಾಗುತ್ತಿಲ್ಲ.

ಹಾಸನ ಜಿಲ್ಲೆಯ ಉಪ್ಪಾರರು ರಾಜಕೀಯವಾಗಿ ತಮ್ಮ ಸಾಮರ್ಥ್ಯ ತೋರಿಸಬೇಕಾದರೆ ಮೊದಲು ಅವರು ಸಂಘಟಿತರಾಗಬೇಕು. ಬೇಲೂರು ವಿಧಾನಸಭಾ ಕ್ಷೇತ್ರ ಮೀಸಲು ಕ್ಷೇತ್ರವಾದರೂ ಉಪ್ಪಾರರು ಇಲ್ಲಿ ಗಣನೀಯ ಸಂಖ್ಯೆಯಲ್ಲಿದ್ದಾರೆ. ಅರಸೀಕೆರೆ ಮತ್ತು ಅರಕಲಗೂಡು ತಾಲ್ಲೂಕಿನಲ್ಲೂ ಇವರು ಗಣನೀಯ ಪ್ರಮಾಣದಲ್ಲಿದ್ದಾರೆ. ಈ ಮೂರು ವಿಧಾನಸಭಾ ಕ್ಷೇತ್ರಗಳಲ್ಲಿ ಉಪ್ಪಾರರ ಮತಗಳು ನಿರ್ಣಾಯಕ. ಲೋಕಸಭಾ ಕ್ಷೇತ್ರದಲ್ಲಿ ಕೂಡ ಇವರ ಮತಗಳು ನಿರ್ಣಾಯಕ. ಜಿಲ್ಲೆಯಲ್ಲಿ ಇವರು ಸಂಘಟಿತರಾಗಿ ಹೋರಾಟ ನಡೆಸಿದರೆ ರಾಜಕೀಯ ಶಕ್ತಿಯನ್ನೇ ಏರುಪೇರು ಮಾಡುವ ಸಾಮರ್ಥ್ಯವನ್ನು ಹೊಂದಿದ್ದಾರೆಂದರೆ ತಪ್ಪಾಗಲಾರದು. ಉಪ್ಪಾರರು ಜಿಲ್ಲೆಯಲ್ಲಿ ಸಂಘಟಿತರಾಗಿ ತಮ್ಮ ಧ್ವನಿಯನ್ನು ಏರಿಸಿದರೆ ಆಗ ರಾಜಕೀಯ ಪಕ್ಷಗಳೂ ಇವರತ್ತ ನೋಡಲು ಸಾಧ್ಯವುಂಟು.

ಮೂಲಭೂತವಾಗಿ ಉಪ್ಪಾರ ಸಮಾಜದಲ್ಲಿ ಒಳಕ್ರಾಂತಿ ನಡೆಯಬೇಕಾಗಿದೆ. ಜಿಲ್ಲೆಯ ಉಪ್ಪಾರರು ವರ್ಷಕ್ಕೊಮ್ಮೆ ಎಲ್ಲಿಯಾದರೂ ಒಂದೆಡೆ ಕುಳಿತು ತಮ್ಮ ಕಷ್ಟ ಸುಖ ಹಂಚಿಕೊಳ್ಳಬೇಕು. ರಾಜರ್ಷಿ ಭಗೀರಥ ಜಯಂತಿ ಆಚರಿಸುವ ಸತ್ಸಂಪ್ರದಾಯ ಬೆಳೆಸಿಕೊಳ್ಳಬೇಕು.

ಉಪ್ಪಾರ ಸಮಾಜ ಸಂಕುಚಿತ ಮನೋಭಾವವನ್ನು ತೊರೆಯಬೇಕು. ಅಲ್ಲಲ್ಲಿ ಕಾಣಬರುವ 'ಒಳಪಂಗಡ'ದ ಭೇದವನ್ನು ತೊರೆಯಬೇಕು. ಅತ್ಯಂತ ಹಿಂದುಳಿದ ಈ ಸಮಾಜದ ಸದಸ್ಯರು ಪ್ರೀತಿ-ವಿಶ್ವಾಸಗಳಿಂದ ಸಂಘಟಿತವಾದರೆ ಬಲಾಢ್ಯ ಕೋಮಿನವರು ಇವರನ್ನು ಗಣನೆಗೆ ತೆಗೆದುಕೊಳ್ಳುತ್ತಾರೆ.

ಉಪ್ಪಾರರು ಆತ್ಮವಿಶ್ವಾಸ ಬೆಳೆಸಿಕೊಳ್ಳಬೇಕು. ವಿಶೇಷವಾಗಿ ಕೀಳರಿಮೆಯಿಂದ ಈ ಜನಾಂಗ ಮುಂದೆ ಬರಲು ಸಾಧ್ಯವಾಗುತ್ತಿಲ್ಲ. ಇಂಥ ಕೀಳರಿಮೆ ತೊರೆಯಲು ವಿದ್ಯಾ ಪ್ರಸಾರವಾಗಬೇಕು. ಹೆಣ್ಣುಮಕ್ಕಳು ಅಕ್ಷರಸ್ಥರಾಗಬೇಕು. ಉಪ್ಪಾರ ಜನಾಂಗದ ಹಿರಿಯರು ವಿದ್ಯೆಯ ಬಗ್ಗೆ ಅರಿವು ಮೂಡಿಸಬೇಕು.

ದೈವಶ್ರದ್ಧೆಯು ವ್ಯಕ್ತಿಯಲ್ಲಿ ಹೆಚ್ಚು ವಿನಯ, ಆತ್ಮವಿಶ್ವಾಸವನ್ನು ಮೂಡಿಸುತ್ತದೆ. ಇದನ್ನು ಉಪ್ಪಾರ ಬಂಧುಗಳು ಚೆನ್ನಾಗಿ ಮನಗಾಣಬೇಕು. ಮಕ್ಕಳಿಗೆ ಮೊದಲಿನಿಂದಲೂ ಒಳ್ಳೆಯ ಗುಣಗಳನ್ನು ಕಲಿಸಬೇಕು. ಒಂದೊಂದು ಗ್ರಾಮದಿಂದ ಒಬ್ಬ ಯುವಕ/ಯುವತಿಯರು ಮುಂದೆ ಬಂದು ಈ ಜನಾಂಗದ ಸಂಘಟನೆ ಕಾರ್ಯ ಕೈಗೊಂಡರೆ ಅದ್ಭುತ ಪ್ರತಿಫಲ ದೊರೆಯುವುದರಲ್ಲಿ ಸಂಶಯವಿಲ್ಲ.

ಉಪ್ಪಾರ ಬಂಧುಗಳು ಪಿತೃಋಣ, ದೈವಋಣವಿದ್ದಂತೆ ಸಮಾಜ ಋಣವಿರುತ್ತದೆಂಬುದನ್ನು ಮರೆಯಬಾರದು. ಈ ಸಮಾಜದಲ್ಲಿ ಜಾಗೃತಿ ಮೂಡಿಸುವುದು ಭಗೀರಥನ ಕೆಲಸದಷ್ಟೇ ತ್ರಾಸದಾಯಕವಾದ ಕೆಲಸ. ವಿಶೇಷವಾಗಿ ಸಂಪನ್ಮೂಲದ ಕೊರತೆ ಎದುರಾಗುತ್ತದೆ. ಜೊತೆಗೆ ಯಾವುದೇ ಅರಿವು ಇಲ್ಲದ ಕಾರಣ ಸಮಾಜದ ಜನಸಾಮಾನ್ಯರು ಸ್ಪಂದಿಸುವುದು ಕಷ್ಟದ ಕೆಲಸ. ಸಮಾಜದಲ್ಲಿ ಪರವಾಗಿಲ್ಲ ಎನ್ನುವವರು ತಮ್ಮ ಆದಾಯದ ಒಂದು ಭಾಗವನ್ನಾದರೂ ಈ ಸಮಾಜಕ್ಕೆ ಮೀಸಲಾಗಿಡಬೇಕು. ತಾಲ್ಲೂಕು ಕೇಂದ್ರದಲ್ಲಿ ತಿಂಗಳಿಗೊಮ್ಮೆ ಸೇರಿ ಚರ್ಚೆಮಾಡಿ ಕಾರ್ಯಕ್ರಮ ರೂಪಿಸಬೇಕು. ಇಂತಹ ಕಾರ್ಯಕ್ರಮಗಳು ಆಗಿಂದಾಗ್ಗೆ ನಡೆಯುತ್ತಿದ್ದರೆ ಮಾಧ್ಯಮಗಳು ಇವರಿಗೆ ಪ್ರಚಾರ ಕೊಡುತ್ತವೆ. ಅವುಗಳೇ ಸಾರ್ವಜನಿಕ ಕ್ಷೇತ್ರದ ನಾಯಕರನ್ನು ಈ ಸಮಾಜದತ್ತ ತಿರುಗಿಸುತ್ತವೆ. ಈಗಾಗಲೇ ಬಹಳ ತಡವಾದರೂ ಚಿಂತೆ ಇಲ್ಲ. ಉಪ್ಪಾರರು ತಮ್ಮ ಜಡನಿದ್ರೆ ತೊರೆದು ಜಾಗೃತರಾಗಬೇಕು. ಯಾರ ಮೇಲೆಯೋ ಆರೋಪ ಹೊರಿಸುತ್ತಾ ಕುಳಿತುಕೊಳ್ಳುವ ಬದಲು ಸಮಾಜದ ಗುರುಗಳು ಹಾಗು ಹಿರಿಯರು ಒಂದು ಹೆಜ್ಜೆ ಮುಂದೆ ಇಟ್ಟರೆ ಇಡೀ ರಾಜ್ಯಕ್ಕೆ ಹಾಸನ ಜಿಲ್ಲೆಯ ಉಪ್ಪಾರರು ಮಾರ್ಗದರ್ಶಿಗಳಾಗಬಲ್ಲರು.

**ಮಾಹಿತಿಸಂಗ್ರಹ : ಕೆ.ಎನ್. ಜುಂಜಪ್ಪ**

*




# * ಚಿಕ್ಕಮಗಳೂರು ಜಿಲ್ಲೆ

## ಐತಿಹಾಸಿಕ ಹಿನ್ನೋಟ

**ಚಿ**ಕ್ಕಮಗಳೂರು ಜಿಲ್ಲೆ ರಾಜ್ಯದ ನೈರುತ್ಯ ದಿಕ್ಕಿನಲ್ಲಿದೆ. ಈ ಜಿಲ್ಲೆಯು ಮಲೆನಾಡು ಹಾಗು ಬಯಲು ಪ್ರದೇಶಗಳೆಂದು ವಿಭಜನೆಗೊಂಡಿದೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ಏಳು ತಾಲ್ಲೂಕುಗಳಿವೆ. ಅವುಗಳೆಂದರೆ ಚಿಕ್ಕಮಗಳೂರು, ಕಡೂರು, ತರೀಕೆರೆ, ಶೃಂಗೇರಿ, ಕೊಪ್ಪ, ಮೂಡಿಗೆರೆ ಹಾಗು ನರಸಿಂಹರಾಜಪುರ.

ಚಿಕ್ಕಮಗಳೂರು ಜಿಲ್ಲೆಯ ಮಲೆನಾಡು ಪ್ರದೇಶ ದಟ್ಟವಾದ ಅರಣ್ಯ ಪ್ರದೇಶದಿಂದ ಕೂಡಿದೆ. ಈ ಜಿಲ್ಲೆ ಮಲೆನಾಡು ಮತ್ತು ಮೈದಾನ ಪ್ರದೇಶದಿಂದ ಕೂಡಿದೆ. ಇದರ ಪಶ್ಚಿಮದಂಚಿನಲ್ಲಿ ಪಶ್ಚಿಮ ಘಟ್ಟಗಳು ಹಬ್ಬಿವೆ. ಈ ಪರ್ವತ ಶ್ರೇಣಿಯಲ್ಲಿ ಮುಳ್ಳಯ್ಯನಗಿರಿ, ಎತ್ತರವಾದ ಶಿಖರ. ಇದರ ಸಮೀಪದಲ್ಲಿಯೇ ಇರುವ ಬಾಬಾಬುಡನ್‌ಗಿರಿ ಮತ್ತು ಕಲ್ಹತ್ತಗಿರಿಗಳು ಸಮುದ್ರ ಮಟ್ಟದಿಂದ ಅನುಕ್ರಮವಾಗಿ 1894 ಮತ್ತು 1876 ಮೀ. ಎತ್ತರವಾಗಿವೆ. ಪಶ್ಚಿಮ ಘಟ್ಟದ ಕುದುರೆಮುಖ ಶಿಖರ 1894 ಮೀ. ಎತ್ತರವಾಗಿದೆ. ಕಡೂರು, ತರೀಕೆರೆ ಮತ್ತು ಚಿಕ್ಕಮಗಳೂರು ತಾಲ್ಲೂಕಿನ ಕೆಲವು ಭಾಗಗಳನ್ನು ಬಿಟ್ಟರೆ ಜಿಲ್ಲೆಯ ಉಳಿದೆಲ್ಲ ಮಲೆನಾಡಿನ ಭಾಗ. ಈ ಜಿಲ್ಲೆ ಸಮುದ್ರ ಮಟ್ಟದಿಂದ 1925ಮೀ. ಎತ್ತರದಲ್ಲಿದೆ.

ಕರ್ನಾಟಕದಲ್ಲಿ ಹರಿಯುವ ಅನೇಕ ನದಿಗಳು ಹುಟ್ಟುವುದು ಈ ಜಿಲ್ಲೆಯಲ್ಲೆ. ಇಲ್ಲಿಯ ಜಲಸಂಪತ್ತನ್ನು ಇಲ್ಲಿಯ ಪರ್ವತ ಪ್ರದೇಶಗಳು ಇಬ್ಭಾಗವಾಗಿ ಒಡೆಯುತ್ತವೆ. ಆಗ್ನೇಯದಂಚಿನಲ್ಲಿ

ಬಲ್ಲಾಳರಾಯನದುರ್ಗದಿಂದ ಹಿಡಿದು ಚಿಕ್ಕಮಗಳೂರು ಪಟ್ಟಣದ ಸಮೀಪವಿರುವ ಬಾಬಾಬುಡನ್‌ಗಿರಿಯವರೆಗೂ ಹಬ್ಬಿರುವ ಪರ್ವತಶ್ರೇಣಿ ಕರ್ನಾಟಕದ ಉತ್ತರ ಮತ್ತು ದಕ್ಷಿಣದ ನದಿಗಳನ್ನು ಪ್ರತ್ಯೇಕಿಸುತ್ತದೆ. ವರಾಹ ಪರ್ವತದ ಗಂಗಾಮೂಲದಲ್ಲಿ ಹುಟ್ಟುವ ತುಂಗಾ ಮತ್ತು ಭದ್ರಾನದಿಗಳು ಉತ್ತರ ದಿಕ್ಕಿಗೆ ಹರಿದರೆ, ದಕ್ಷಿಣ ಭಾಗದಲ್ಲಿ ಮೆಲ್ಬಂಗಾಡಿಯ ಜಾವಳಿಯ ಬಳಿ ಹುಟ್ಟುವ ಹೇಮಾವತಿ ನದಿ ಮೂಡಿಗೆರೆ ತಾಲ್ಲೂಕಿನಲ್ಲಿ ದಕ್ಷಿಣ ದಿಕ್ಕಿಗೆ ಹರಿದು ಹಾಸನ ಜಿಲ್ಲೆಯನ್ನು ಪ್ರವೇಶಿಸುತ್ತದೆ. ತುಂಗಾ ಮತ್ತು ಭದ್ರಾನದಿಗಳು ಒಂದೇ ಪ್ರದೇಶದಲ್ಲಿ ಹುಟ್ಟಿದರೂ ಕೊಪ್ಪ ತಾಲೂಕಿನಲ್ಲಿ ಎದ್ದಿರುವ ಬೆಟ್ಟಗಳ ಸಾಲು ಅವುಗಳನ್ನು ಪ್ರತ್ಯೇಕಿಸುತ್ತವೆ. ಮುಳ್ಳಯ್ಯನಗಿರಿಯ ಬಳಿ ಹುಟ್ಟುವ ಯಗಚಿನದಿ ಚಿಕ್ಕಮಗಳೂರನ್ನು ದಾಟಿ ಹಾಸನ ಜಿಲ್ಲೆಯನ್ನು ಪ್ರವೇಶಿಸಿ, ಗೊರೂರು ಬಳಿ ಹೇಮಾವತಿಯನ್ನು ಸೇರುತ್ತದೆ. ವೇದಾವತಿ ಕೂಡ ಇದೇ ಪರ್ವತ ಶ್ರೇಣಿಯಿಂದ ಹುಟ್ಟುತ್ತದೆ.

ಜಿಲ್ಲೆಯ ಸುಮಾರು ಅರ್ಧಭಾಗ ಧಾರವಾಡ ಭಿನ್ನಸ್ತರ ಶಿಲೆಗಳಿಂದ ಕೂಡಿದೆ. ಬಾಬಾಬುಡನ್‌ಗಿರಿ, ಗಂಗಾಮೂಲ, ಮೈತ್ರಿಪರ್ವತ ಹಾಗು ಕುದುರೆಮುಖ ಪ್ರದೇಶಗಳಲ್ಲಿ ಈ ಬಗೆಯ ಶಿಲೆಗಳಿವೆ. ಕಲ್ಲತ್ತಗಿರಿ ಮತ್ತು ಕೆಮ್ಮಣ್ಣುಗುಂಡಿಯಲ್ಲಿ ಅದುರನ್ನು ತೆಗೆಯುವ ಕೆಲಸ ನಡೆಯುತ್ತಿದೆ. ಇದನ್ನು ಭದ್ರಾವತಿಯಲ್ಲಿರುವ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗೆ ಸಾಗಿಸಲಾಗುತ್ತಿದೆ. ಮೂಡಿಗೆರೆ ತಾಲ್ಲೂಕಿನಲ್ಲಿರುವ ಕುದುರೆಮುಖದಲ್ಲಿ ಕಬ್ಬಿಣದ ಅದುರು ತೆಗೆಯುವ ಬೃಹತ್ ಯೋಜನೆ ನಡೆಯುತ್ತಿದೆ.

ಬಾಬಾಬುಡನ್‌ಗಿರಿ ಮತ್ತು ಮುಳ್ಳಯ್ಯನಗಿರಿಯ ದಕ್ಷಿಣಕ್ಕಿರುವ ಬಯಲುಗಳದು ಕಪ್ಪು ಮಣ್ಣು. ಚಿಕ್ಕಮಗಳೂರು ಮತ್ತು ತರೀಕೆರೆ ತಾಲ್ಲೂಕುಗಳ ಬಯಲು ಪ್ರದೇಶಗಳಿಂದ ಕಡೂರಿನವರೆಗೂ ಇದು ವ್ಯಾಪಿಸಿದೆ. ಇವು ಫಲವತ್ತಾದ ಪ್ರದೇಶಗಳು.

ಜಿಲ್ಲೆಯು ಉತ್ತರ ಅಕ್ಷಾಂಶ $12^{0}54'$ ಮತ್ತು $13^{0}53'$. ಪೂರ್ವದ ರೇಖಾಂಶ $75^{0}4'$ ಮತ್ತು $76^{0}2'$ ಪರಿಧಿಯಲ್ಲಿ ಬರುತ್ತದೆ.

ಪೂರ್ವ-ಪಶ್ಚಿಮವಾಗಿ ಈ ಜಿಲ್ಲೆಯ ಗರಿಷ್ಠ ಉದ್ದ 138 ಕಿ.ಮೀ., ಉತ್ತರ-ದಕ್ಷಿಣವಾಗಿ ಗರಿಷ್ಠ ಅಗಲ 88 ಕಿ.ಮೀ. ಜಿಲ್ಲೆಯ ವಿಸ್ತೀರ್ಣ 7,199 ಚ.ಕಿಮೀ.

2001ರ ಜನಗಣತಿಯ ಪ್ರಕಾರ ಜನಸಂಖ್ಯೆ 11,39,104 ಅದರಲ್ಲಿ ಪುರುಷರು 5,74,275, ಸ್ತ್ರೀಯರು 5,64,829. ಸಾಕ್ಷರತೆ ಶೇ. 72.63, ಪುರುಷರು 80.68, ಸ್ತ್ರೀಯರು 64.47.

ಜಿಲ್ಲೆಯ ವಾಯುಗುಣ ಹಿತಕರವಾದದ್ದು. ಇದರ ಪಶ್ಚಿಮ ಭಾಗ ಹೆಚ್ಚು ತಂಪು. ಚಳಿಗಾಲದಲ್ಲಿ ಚಳಿ ಹೆಚ್ಚು. ಜಿಲ್ಲೆಯ ಅರಣ್ಯ ಸಂಪತ್ತು ಉತ್ಕೃಷ್ಟವಾದದ್ದು. ಪಶ್ಚಿಮ ಘಟ್ಟಗಳ ಉದ್ದಕ್ಕು ಹಬ್ಬಿರುವ ಈ ಕಾಡುಗಳಲ್ಲಿ ತೇಗ, ಶ್ರೀಗಂಧ, ಮತ್ತಿ, ಹಲಸು, ಹೆಬ್ಬಲಸು, ನೇರಳೆ, ಸಾಗುವಾನಿ ಮುಂತಾದ ಉಪಯುಕ್ತವಾದ ಮರಗಳಿವೆ. ಈ ಜಿಲ್ಲೆಯು ಪ್ರಾಣಿ

ಸಂಪದ್ಭರಿತವಾದದ್ದು. ಇಲ್ಲಿಯ ಕಾಡುಗಳಲ್ಲಿ ಆನೆ, ಹುಲಿ, ಕಾಡುಕೋಣ, ತೋಳ, ಚಿರತೆ, ಹಂದಿ, ಕಡವೆ, ಸಾರಂಗ, ಜಿಂಕೆ, ಕರಡಿ, ಕಾಡುಕುರಿ, ನರಿ, ಮೊಲ, ಹದ್ದು, ನವಿಲು, ಕೋಗಿಲೆ ಮುಂತಾದ ಪ್ರಾಣಿಪಕ್ಷಿಗಳು ಇವೆ.

ಜಿಲ್ಲೆಯ ಮುಖ್ಯ ಕಸುಬು ಕೃಷಿ ಮತ್ತು ಪ್ಲಾಂಟೇಶನ್ ಕೈಗಾರಿಕೆ. ಕಾಫಿ ಇಲ್ಲಿಯ ಮುಖ್ಯ ವಾಣಿಜ್ಯ ಬೆಳೆ. ಏಲಕ್ಕಿ, ತೆಂಗು ಇತ್ಯಾದಿ ಕೂಡ ವಾಣಿಜ್ಯ ಬೆಳೆಗಳು. ಭತ್ತ ಮುಖ್ಯ ಆಹಾರ ಬೆಳೆ.

ಸಖರಾಯಪಟ್ಟಣದ ಪೌರಾಣಿಕ ದೊರೆ ರುಕ್ಮಾಂಗದ ಇದನ್ನು ತನ್ನ ಚಿಕ್ಕ ಮಗಳಿಗೆ ವರದಕ್ಷಿಣೆ ರೂಪದಲ್ಲಿ ಕೊಟ್ಟಿದ್ದರಿಂದ ಚಿಕ್ಕಮಗಳೂರಾಯಿತೆಂದು ಪ್ರತೀತಿಯಿದೆ. ಹನುಮಂತನು ಲಕ್ಷ್ಮಣನ ಪ್ರಾಣ ಉಳಿಸಲು ಸಂಜೀವಿನಿ ಪರ್ವತವನ್ನು ಇಲ್ಲಿಂದಲೇ ತಂದನೆಂದು ಪೌರಾಣಿಕ ಕಥೆಯೊಂದು ಹೇಳುತ್ತದೆ.

ಕೆಲವು ಶಾಸನಗಳಲ್ಲಿ ಕಿರಿಯ ಮುಗಳಿ ಹಾಗೂ ಹಿರಿಯ ಮುಗಳಿ ಎಂಬ ಉಲ್ಲೇಖವಿದೆ. ಮುಗಳಿ ಅಂದರೆ ಸಸಿ. ಯಥೇಚ್ಛವಾಗಿ ಚಿಕ್ಕಮಗಳೂರು ಹಾಗು ಹಿರೇಮಗಳೂರು ಪ್ರದೇಶದಲ್ಲಿ ಈ ಸಸಿ ಬೆಳೆಯುತ್ತಿದ್ದುದರಿಂದ ಚಿಕ್ಕ ಮುಗಳಿ ಹಾಗು ಹಿರೇಮುಗಳಿ ಅನುಕ್ರಮವಾಗಿ ಆ ಹೆಸರು ತಳೆದು ಕಾಲಕ್ರಮೇಣದಲ್ಲಿ ಚಿಕ್ಕಮಗಳೂರು ಹಾಗು ಹಿರೇಮಗಳೂರು ಎಂದು ಆಗಿವೆ ಎಂದು ಇನ್ನೊಂದು ವಾದವಿದೆ.

ಈ ಪ್ರದೇಶವು ಬನವಾಸಿ ಕದಂಬರ ಆಧಿಪತ್ಯಕ್ಕೆ ಒಳಪಟ್ಟಿತ್ತು. ತದನಂತರ ತಲಕಾಡು ಗಂಗರ ಆಡಳಿತಕ್ಕೆ ಸೇರಿತು. ಕ್ರಿ.ಶ. 7ನೆಯ ಶತಮಾನದಲ್ಲಿ ಸಂತರದೇವ ಎಂಬವನು ಶಿವಮೊಗ್ಗ ಜಿಲ್ಲೆಯ ಹುಂಚ ಎಂಬಲ್ಲಿ ತನ್ನ ಪಾಳೆಗಾರಿಕೆಯನ್ನು ಸ್ಥಾಪಿಸಿ, ತನ್ನ ಆಡಳಿತವನ್ನು ಈ ಜಿಲ್ಲೆಯ ಕಳಸದವರೆಗೂ ವಿಸ್ತರಿಸಿ, ಕಳಸ ಪಟ್ಟಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಹನ್ನೊಂದನೆಯ ಶತಮಾನದ ಪೂರ್ವಾರ್ಧದಲ್ಲಿ ಪ್ರಸಿದ್ಧ ಹೊಯ್ಸಳರು ಈ ಪ್ರದೇಶದಲ್ಲಿ ರಾಜ್ಯವನ್ನು ಸ್ಥಾಪಿಸಿದರು. ಹೊಯ್ಸಳರು ಮೂಡಿಗೆರೆ ತಾಲ್ಲೂಕಿನ 'ಸೊಸೆ ಊರನ್ನು' (ಶಶಕಪುರ ಎಂದು ಕರೆಯಲ್ಪಡುತ್ತಿದ್ದ ಈಗ ಅಂಗಡಿ ಎಂದು ಕರೆಯಲ್ಪಡುವ) ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ತದನಂತರ ಹಾಸನ ಜಿಲ್ಲೆಯ ದೋರಸಮುದ್ರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ದಕ್ಷಿಣ ಭಾರತದಲ್ಲಿ ಪ್ರಸಿದ್ಧ ಹಾಗು ಬಲಿಷ್ಠ ರಾಜ್ಯವನ್ನು ಕಟ್ಟಿ, ಸುಮಾರು 14ನೆಯ ಶತಮಾನದವರೆಗೆ ರಾಜ್ಯಭಾರ ಮಾಡಿದರು. ಇವರ ಆಳ್ವಿಕೆಯಲ್ಲಿ ಸಾಹಿತ್ಯ, ಸಂಗೀತ, ಮತ್ತು ಶಿಲ್ಪಕಲಾ ಕ್ಷೇತ್ರಗಳಲ್ಲಿ ಅಪೂರ್ವ ಬೆಳವಣಿಗೆಯಾಗಿತ್ತು.

ವಿಜಯನಗರ ಸಾಮ್ರಾಜ್ಯದಲ್ಲಿ, ಈ ಜಿಲ್ಲೆಯ ಪಶ್ಚಿಮ ಭಾಗ ಸಂತಾರರ ಆಧಿಪತ್ಯಕ್ಕೆ ಸೇರಿದ್ದು, ಅವರ ರಾಜಧಾನಿ ಕಾರ್ಕಳವಾಗಿತ್ತು. ದಕ್ಷಿಣ ಭಾಗ ಐನೂರು ನಾಯಕರ ಆಡಳಿತಕ್ಕೆ ಒಳಪಟ್ಟಿದ್ದರೆ, ಈಶಾನ್ಯ ಭಾಗ ಬಸವಾಪಟ್ಟಣದ (ತದನಂತರ ತರೀಕೆರೆ ಎಂದು ಪ್ರಸಿದ್ಧವಾದ)

ಮಾಂಡಲೀಕರ ಆಡಳಿತಕ್ಕೆ ಒಳಪಟ್ಟಿತ್ತು. ತದನಂತರ ಈ ಜಿಲ್ಲೆಯ ಬಹುಭಾಗ ಕೆಳದಿ ರಾಜ್ಯಕ್ಕೆ ಸೇರ್ಪಡೆಯಾಯಿತು. 17ನೆಯ ಶತಮಾನದಲ್ಲಿ ಕೆಳದಿಯ ರಾಜ ಶಿವಪ್ಪನಾಯಕ ವಿಜಯನಗರದ ಶ್ರೀರಂಗರಾಯನಿಗೆ ಆಶ್ರಯ ನೀಡಿ ಸಖರಾಯ ಪಟ್ಟಣ (ಸಕ್ಕರೆಪಟ್ಟಣ), ಬೇಲೂರು ಮತ್ತು ಸುತ್ತಮುತ್ತಲಿನ ಪ್ರದೇಶವನ್ನು ಅವನಿಗೆ ಕೊಟ್ಟನು. ಶ್ರೀರಂಗರಾಯನ ಆಳ್ವಿಕೆನಂತರ ಕೆಳದಿ ರಾಜರ ಹಾಗು ಮೈಸೂರು ಒಡೆಯರ ನಡುವೆ ಆದ ಒಪ್ಪಂದದ ಪ್ರಕಾರ ಈ ಜಿಲ್ಲೆಯ ಕೆಲವು ಭಾಗವು ಕ್ರಿ.ಶ. 1694ರಲ್ಲಿ ಮೈಸೂರು ಒಡೆಯರ ಸ್ವಾಧೀನಕ್ಕೆ ಬಂದಿತು. ಕ್ರಿ.ಶ. 1763ರಲ್ಲಿ ಹೈದರ್‌ಆಲಿ ಬಿದನೂರು ವಶಪಡಿಸಿಕೊಳ್ಳುವ ಮೂಲಕ ಈ ಜಿಲ್ಲೆಯ ಸಂಪೂರ್ಣ ಪ್ರದೇಶವನ್ನು ಮೈಸೂರು ಪ್ರಾಂತ್ಯಕ್ಕೆ ಸೇರಿಸಿದನು. ಮೈಸೂರು ಆಡಳಿತವು ಕಮೀಷನರ್‌ಗೆ ವರ್ಗವಾದಾಗ ಚಿಕ್ಕಮಗಳೂರು ಜಿಲ್ಲೆ ನಗರ ವಿಭಾಗಕ್ಕೆ ಸೇರ್ಪಡೆಯಾಗಿತ್ತು. 1863ರಲ್ಲಿ ಇದು ಪ್ರತ್ಯೇಕ ಜಿಲ್ಲೆಯಾಯಿತು. ಕಡೂರು ಜಿಲ್ಲೆಯೆಂದೇ ಇದನ್ನು ಮೊದಲು ಕರೆಯಲಾಗುತ್ತಿದ್ದು ಕಡೂರು ಜಿಲ್ಲಾ ಆಡಳಿತ ಕೇಂದ್ರವಾಗಿತ್ತು. 1865ರಲ್ಲಿ ಈಗಿನ ಚಿಕ್ಕಮಗಳೂರು ಜಿಲ್ಲೆ ನಿರ್ಮಾಣವಾಯಿತು.

ಚಿಕ್ಕಮಗಳೂರು ಜಿಲ್ಲೆ ಸಾಹಿತ್ಯ, ಕಲೆ ಹಾಗು ಸಂಸ್ಕೃತಿಗಳಿಗೆ ವಿಶ್ವಪ್ರಸಿದ್ಧವಾಗಿದೆ. ಶೃಂಗೇರಿಯ ಶಾರದಾಪೀಠ ಆದಿ ಶಂಕರಾಚಾರ್ಯರ ಪ್ರಭಾವದಿಂದಾಗಿ ರಾಷ್ಟ್ರೀಯ ಖ್ಯಾತಿ ಪಡೆದಿದೆ. ಪಂಚಪೀಠಗಳಲ್ಲಿ ಒಂದಾದ ಬಾಳೆಹೊನ್ನೂರು ರಂಭಾಪುರಿ ಮಠವು ಭಕ್ತರ ಆಕರ್ಷಣೆಯ ಕೇಂದ್ರವಾಗಿದೆ. ಹೊರನಾಡು ಅನ್ನಪೂರ್ಣೇಶ್ವರಿ ಹಾಗು ಹಿರೇಮಗಳೂರಿನ ಕೋದಂಡರಾಮ ದೇವಾಲಯಗಳು ಸಹ ಪ್ರಸಿದ್ಧವಾಗಿವೆ. ಬಾಬಬುಡನ್‌ಗಿರಿಯು ಧಾರ್ಮಿಕ ವೈಷಮ್ಯಕ್ಕೆ ಕಾರಣವಾಗಿದೆ. ಕಳಸ, ಕಿಗ್ಗ ಮೊದಲಾದವು ಪ್ರಸಿದ್ಧ ಸ್ಥಳಗಳಾಗಿವೆ.

ಶೃಂಗೇರಿ ಮಠದ ಎಲ್ಲ ಸ್ವಾಮಿಗಳೂ ತಮ್ಮ ಪಾಂಡಿತ್ಯ ಹಾಗು ಸೃಜನಶೀಲಶಕ್ತಿಗೆ ಪ್ರಖ್ಯಾತರಾಗಿದ್ದಾರೆ. ಶ್ರೀ ವಿದ್ಯಾತೀರ್ಥ ಸ್ವಾಮೀಜಿ, ಶ್ರೀ ಭಾರತೀ ಕೃಷ್ಣತೀರ್ಥ ಸ್ವಾಮೀಜಿ, ಒಂದನೆಯ ಸಚ್ಚಿದಾನಂದ ಭಾರತೀಸ್ವಾಮಿಜಿ, ಶ್ರೀ ಸಚ್ಚಿದಾನಂದ ಶಿವಾನುಭವ ನರಸಿಂಹ ಭಾರತೀಸ್ವಾಮೀಜಿ ಮುಂತಾದ ಸದ್ಗುರುಗಳ ಸೇವೆ ಗಮನಾರ್ಹವಾದುದು.

ಕ್ರಿ.ಶ. 1197ರಲ್ಲಿ ಅಮೃತಪುರದ ಅಮೃತೇಶ್ವರ ದೇವಾಲಯದ ಶಾಸನವನ್ನು ಮಹಾಕವಿ ಜನ್ನ ರಚಿಸಿದ್ದಾನೆ. ಕನ್ನಡದ ಕವಿಗಳಾದ ರುದ್ರಭಟ್ಟ ಹಾಗು ದೇವನೂರಿನ ಲಕ್ಷ್ಮೀಶ ಈ ಜಿಲ್ಲೆಯವರು. ಸಂಸ್ಕೃತ ವಿದ್ವಾನ್ ಪಂಡಿತ ರಮಾದೇವಿ, ಚಿದಂಬರ ಪಂಡಿತ, ಸುಬೋಧರಾಮರಾಯರು, ಡಾ. ಎ.ಆರ್. ಕೃಷ್ಣಶಾಸ್ತ್ರಿ, ಭಾಷಾತಜ್ಞರಾದ ಡಾ. ಕೆ.ಎಸ್. ಗುರುಬಸವೇಗೌಡ, ಶಿಕ್ಷಣತಜ್ಞ ಪ್ರೊ. ಎ.ಸಿ. ದೇವೇಗೌಡ, ಕನ್ನಡ ಕತೆಗಾರರಾದ ಅಶ್ವತ್ಥ ಈ ಜಿಲ್ಲೆಯವರು. ರಾಷ್ಟ್ರಕವಿ ಕುವೆಂಪು ಅವರ ತಾಯಿಮನೆ ಈ ಜಿಲ್ಲೆಯ ಹಿರೇಕೂಡಿಗೆ ಎಂಬುದು ಮುಖ್ಯ ವಿಷಯ. ಅವರ ಮಗ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಕನ್ನಡದ ಪ್ರಮುಖ ಬರಹಗಾರರಲ್ಲಿ ಒಬ್ಬರು. ಅವರು ಮೂಡಿಗೆರೆಯಲ್ಲಿ ನೆಲೆಸಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಗೊ.ರು. ಚನ್ನಬಸಪ್ಪ, ಖ್ಯಾತ ಜಾನಪದ ಗಾಯಕರಾದ ಕೆ.ಆರ್. ಲಿಂಗಪ್ಪ, ಮಹಾಕಾವ್ಯ ರಚಿಸಿದ ಕಾಶಿ ವಿಶ್ವನಾಥಶೆಟ್ಟಿ, ಕನ್ನಡದಲ್ಲಿ ಪೂಜೆ ಮಾಡುವ ಹಿರೇಮಗಳೂರಿನ ಕಣ್ಣನ್, ಕನ್ನಡ ಮತ್ತು ಸಂಸ್ಕೃತಿ ಸಚಿವರ ಆಪ್ತ ಕಾರ್ಯದರ್ಶಿಯಾದ ಡಾ. ಎ.ಆರ್. ಮಂಜುನಾಥ್, ಡಾ. ರಹಮತ್ ತರೀಕೆರೆ, ಲ.ನ. ಶಾಸ್ತ್ರಿ ಹಾಗು ಅಜ್ಜಂಪುರ ಸೂರಿ ಅವರುಗಳನ್ನು ಈ ಸಂದರ್ಭದಲ್ಲಿ ಸಾಂಸ್ಕೃತಿಕ ವಿಶೇಷಕ್ಕಾಗಿ ಉಲ್ಲೇಖಿಸಬೇಕು.

1977ರ ಲೋಕಸಭಾ ಉಪಚುನಾವಣೆಯಲ್ಲಿ ಉತ್ತರದಲ್ಲಿ ಸೋತ ಪ್ರಧಾನಿ ಇಂದಿರಾಗಾಂಧಿ ಚಿಕ್ಕಮಗಳೂರಿನಿಂದ ರಾಜಕೀಯ ಪುನರ್‌ಜನ್ಮ ಪಡೆದ ವಿಷಯ ವಿಶ್ವವಿಖ್ಯಾತ. ಸ್ವಾತಂತ್ರ್ಯಪೂರ್ವ ಜನನಾಯಕರಲ್ಲಿ 'ಲೋಕಸೇವಾನಿರತ' ಎಂ.ಎಸ್. ದ್ಯಾವೇಗೌಡ ಅವರು ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು. ಮಾಜಿ ಮುಖ್ಯಮಂತ್ರಿ ಕಡಿದಾಳು ಮಂಜಪ್ಪ ಶೃಂಗೇರಿ ಕ್ಷೇತ್ರವನ್ನು ಪ್ರತಿನಿಧಿಸಿದ್ದರು. ಯು.ಕೆ. ಲಕ್ಷ್ಮಣಗೌಡ, ಎಂ. ಹುಚ್ಚೇಗೌಡ, ಎನ್.ಪಿ. ಗೋವಿಂದೇಗೌಡ, ಕೆ.ಎಚ್. ರಂಗನಾಥ್, ಕೆ.ಎಸ್. ವೀರಣ್ಣಗೌಡ, ಟಿ.ಪಿ. ಬಸಪ್ಪಸೆಟ್ಟಿ, ಎಲ್.ಹೆಚ್. ತಿಮ್ಮಾಬೋವಿ, ಎಂ.ಡಿ. ನಾರಾಯಣ್, ಕೆ.ಎನ್. ಮಲ್ಲೇಗೌಡ, ಎಸ್.ವಿ. ಕೃಷ್ಣಮೂರ್ತಿರಾವ್, ಡಿ.ಬಿ. ಚಂದ್ರೇಗೌಡ, ಡಿ.ಕೆ. ತಾರಾದೇವಿ, ಮಾರ್ಗದ ಮಲ್ಲಪ್ಪ, ಡಾ. ಹೆಚ್.ಆರ್. ರಾಜು, ಮಲ್ಲಿಕಾರ್ಜುನಪ್ರಸನ್ನ, ಹೆಚ್.ಜಿ. ಗೋವಿಂದಗೌಡ, ಬಿ.ಎಲ್. ಶಂಕರ, ಡಿ.ಎಂ. ಪುಟ್ಟೇಗೌಡ, ಮೋಟಮ್ಮ, ಸಗೀರ್ ಅಹಮ್ಮದ್, ಬಿ.ಆರ್. ಕೃಷ್ಣಮೂರ್ತಿ, ನೀಲಕಂಠಪ್ಪ, ಲೋಕಸಭಾ ಸದಸ್ಯ ಶ್ರೀಕಂಠಪ್ಪ ಮೊದಲಾದವರನ್ನು ಪ್ರಮುಖ ರಾಜಕೀಯ ನಾಯಕರೆಂದು ಉಲ್ಲೇಖಿಸಬಹುದು.

## ಉಪ್ಪಾರ ಸಮಾಜ

ಉಪ್ಪಾರ ಸಮುದಾಯ ಚಿಕ್ಕಮಗಳೂರು ಜಿಲ್ಲೆಯಲ್ಲಿ ಸುಮಾರು ಅರವತ್ಮೂರು ಸಾವಿರ ಎಂದು ಅಂದಾಜು ಮಾಡಲಾಗಿದೆ. ಇತ್ತೀಚಿನ ಸಮೀಕ್ಷೆ ಪ್ರಕಾರ ಕಡೂರು ತಾಲ್ಲೂಕಿನ ಬೀರೂರು ಗ್ರಾಮದಲ್ಲಿ ಉಪ್ಪಾರರ 300 ಕುಟುಂಬಗಳು, ಬ್ಯಾಗಡೆಹಳ್ಳಿಯಲ್ಲಿ 160, ಕಡೂರಿನಲ್ಲಿ 30, ಹರುವನಹಳ್ಳಿಯಲ್ಲಿ 12, ತಂಗಲಿಯಲ್ಲಿ 60, ಕಾನಗೊಂಡನಹಳ್ಳಿಯಲ್ಲಿ 170, ಮಚ್ಚೇರಿಯಲ್ಲಿ 140, ಕಲ್ಲಾಪುರದಲ್ಲಿ 100, ಚೌಡ್ಲಾಪುರ 90, ಬಂಟುಗನಳ್ಳಿ 105, ತುರುವನಹಳ್ಳಿ 60, ಚಪ್ಪರದಳ್ಳಿ 130, ನಾಗಗೊಂಡನಳ್ಳಿ 245, ಬಿಳುವಾಲ 130, ಚಿಕ್ಕಬಾಸೂರು 120, ಬೈರಗೊಂಡನಹಳ್ಳಿ 40, ಗೌಡನಕಟ್ಟೆಹಳ್ಳಿ 150, ಜಕ್ಕನಹಳ್ಳಿ 30, ಹಿರೇಬಳ್ಳೆಕೆರೆ 135, ಪಿ. ಕೋಡಿಹಳ್ಳಿ 12, ಅಂಕನಹಳ್ಳಿ 160, ದಡಗಲು 60, ಕಲ್ಕೆರೆ 100, ರಂಗಾಪುರ 40, ಯಗಟಿ 80, ಹರಿಸಮುದ್ರ 50, ಗುಡ್ಡೆಹಳ್ಳಿ 180, ಉಡುಗೆರೆ 120, ಕೊತ್ತಗೆರೆ 180, ಹನುಮನಹಳ್ಳಿ 80, ಹುಳಿಗೆರೆ 90, ಕುಕ್ಕನಾಡು 4, ಗರುಡದಳ್ಳಿ 105, ಬಿಟ್ಟೇನಳ್ಳಿ 115, ನಿಡುವಳ್ಳಿ 70, ಉಪ್ಪಿನಹಳ್ಳಿ 90, ಕಂಚುವಾಳ

70, ಚಿಕ್ಕದೇವರಹಳ್ಳಿ 25, ದೊಡ್ಡಬೀರನಹಳ್ಳಿ 50, ಹೊಸೂರು 90, ಹೊಗರೇಹಳ್ಳಿ 12, ಯಳವಗೊಂಡನಹಳ್ಳಿ 130, ಯಳ್ಳಂಬೆಳಸೆ 20, ಸಾಣೆಹಳ್ಳಿ 120, ಪಾತೆನಳ್ಳಿ 165, ಮುಗಳಿಕಟ್ಟೆ 60, ಗುಜೇನಹಳ್ಳಿ 135, ಜಿ. ತಿಮ್ಮಾಪುರ 50 ಹೀಗೆ ಮೇಲೆ ನಮೂದಿಸಿದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 6500 ಉಪ್ಪಾರ ಕುಟುಂಬಗಳಿದ್ದು, 39,000 ಉಪ್ಪಾರ ಜನಾಂಗವಿದೆ.

ತರೀಕೆರೆ ತಾಲ್ಲೂಕಿನಲ್ಲಿ ತರೀಕೆರೆ 450, ಉಪ್ಪಾರ ಬಸವನಳ್ಳಿ 40, ಕೆರೆಹೊಸಳ್ಳಿ 50, ಚಿಕ್ಕೋನಳ್ಳಿ 30, ಗಾಳಿಹಳ್ಳಿ 30, ಗುಳ್ಳದ ಮನೆ 75, ಐಯ್ಯನಹಳ್ಳಿ 60, ಲಿಂಗದಹಳ್ಳಿ 80, ಅಮೃತಾಪುರ 15, ಹುಣಸೆಗಟ್ಟೆ 30, ವಡೇರಹಳ್ಳಿ 35, ರಾಗಿ ಬಸವನಹಳ್ಳಿ 50, ಅಜ್ಜಂಪುರ 45, ಹೆಣ್ಣೆರಂಗಾಪುರ 25, ಶೆಟ್ಟಿಹಳ್ಳಿ 30, ಸಿದ್ದಾಪುರ 50, ಜಾವೂರು 40, ನಾರಣಾಪುರ 75, ಬಂಕನಕಟ್ಟೆ 80, ಶಿವನಿ 40, ಬಾಣೂರು 40, ತ್ಯಾಗದಕಟ್ಟೆ 50, ನಂದಿಪುರ 200, ಬೀರನಹಳ್ಳಿ 25, ಮುಗಳಿ 90, ಅತ್ತಿಕಟ್ಟೆ 70, ಸಾಗವಂಗಲ 100, ಹೊಸೂರು (ವೀರಾಪುರ) 120, ಬಾವಿಕೆರೆ 18, ಲಕ್ಕವಳ್ಳಿ 12, ಇಟ್ಟಿಗೆ 20 ಹೀಗೆ ಮೇಲೆ ನಮೂದಿಸಿದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 3500 ಉಪ್ಪಾರ ಕುಟುಂಬಗಳಿದ್ದು, 21,000 ಉಪ್ಪಾರ ಜನಸಂಖ್ಯೆ ಇದೆ.

ಚಿಕ್ಕಮಗಳೂರು ತಾಲ್ಲೂಕಿನಲ್ಲಿ ಭಕ್ತರಹಳ್ಳಿಯಲ್ಲಿ 150, ಲಕ್ಯದಲ್ಲಿ 130, ಅರೇಗೌಜದಲ್ಲಿ 15, ಹಳೇ ಆಲ್ದೂರಿನಲ್ಲಿ 25 ಹೀಗೆ 500 ಉಪ್ಪಾರ ಕುಟುಂಬಗಳಿದ್ದು 3000 ಉಪ್ಪಾರ ಜನಸಂಖ್ಯೆ ಇದೆ.

ಹೀಗೆ ಚಿಕ್ಕಮಗಳೂರು ಜಿಲ್ಲೆಯಲ್ಲಿ 10,500 ಉಪ್ಪಾರ ಕುಟುಂಬಗಳಿದ್ದು, 63,000ದಷ್ಟು ಉಪ್ಪಾರ ಜನಸಂಖ್ಯೆ ಇದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಉಪ್ಪಾರರನ್ನು ಉಪ್ಪಾರ, ಉಪವೀರ ಹಾಗೂ ಮೇಲು ಸಕ್ಕರೆ ಎಂಬ ಹೆಸರುಗಳಿಂದ ಕರೆಯಲಾಗುತ್ತಿದೆ. ಈ ಜಿಲ್ಲೆಯ ಉಪ್ಪಾರರ ಮನೆಮಾತು ಹಾಗು ವ್ಯವಹಾರ ಭಾಷೆ ಎರಡೂ ಕನ್ನಡವೇ ಆಗಿದೆ.

ಹೆಚ್ಚಿನ ಸಂಖ್ಯೆಯ ಉಪ್ಪಾರರು ವ್ಯವಸಾಯವನ್ನು ಅವಲಂಬಿಸಿರುತ್ತಾರೆ. ಕಡೂರು ಹಾಗು ತರೀಕೆರೆಗಳಲ್ಲಿ ವಾಸಿಸುವ ಶೇಕಡ 35 ರಷ್ಟು ಉಪ್ಪಾರರಿಗೆ ಸ್ವಂತ ಜಮೀನು ಇದೆ. ಇವರಲ್ಲಿ ಬಹುಪಾಲು ಸಣ್ಣ ಹಿಡುವಳಿದಾರರು. ಇವರೆಲ್ಲ ಮಧ್ಯಮ ವರ್ಗಕ್ಕೆ ಸೇರಿದ್ದಾರೆ. ಇನ್ನುಳಿದ ಶೇ. 65ರಷ್ಟು ಜನ ಕೃಷಿ ಕಾರ್ಮಿಕರು ಹಾಗು ಇತರೆ ಕೂಲಿ ವಗ್ಯರೆ ಕೆಲಸದಿಂದ ಉದರ ನಿರ್ವಹಣೆ ಮಾಡುತ್ತಿದ್ದಾರೆ. ತುಂಬ ಬಡವರು. ವ್ಯವಸಾಯದ ಜೊತೆಗೆ ರಸ್ತೆ ಕೆಲಸ ಹಾಗು ಇತರೆ ಕೂಲಿ ಕೆಲಸವನ್ನು ಉಪ್ಪಾರರು ಮಾಡುವುದು ಸರ್ವೇಸಾಮಾನ್ಯ. ಒಟ್ಟಾರೆ ಜಿಲ್ಲೆಯಲ್ಲಿ ಉಪ್ಪಾರರ ಆರ್ಥಿಕ ಸ್ಥಿತಿಗತಿ ಉತ್ತಮವಾಗಿಲ್ಲ. ಹೊಟ್ಟೆ-ಬಟ್ಟೆಗಾಗಿ ಬಹುಪಾಲು ಜನರು ಪ್ರತಿನಿತ್ಯ ಹೋರಾಟ ಮಾಡುತ್ತಿದ್ದಾರೆ.

ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇ. 72 ಕ್ಕಿಂತ ಅಧಿಕವಾಗಿದ್ದರೂ ಉಪ್ಪಾರರ ಸಾಕ್ಷರತೆ ಪ್ರಮಾಣ ಶೇ. 40ನ್ನು ದಾಟುವದಿಲ್ಲ. ಮಹಿಳೆಯರಲ್ಲಿ ಶೇ. 30ಕ್ಕಿಂತ ಕಡಿಮೆ ಸಾಕ್ಷರತೆಯ ಪ್ರಮಾಣವಿದೆ.

ಜಿಲ್ಲೆಯಲ್ಲಿ ಉಪ್ಪಾರ ಸಮುದಾಯದವರು ದೊಡ್ಡ ಪ್ರಮಾಣದಲ್ಲಿ ವಿದ್ಯಾಸಂಸ್ಥೆಗಳನ್ನು ನಡೆಸುತ್ತಿಲ್ಲ. ಜನಾಂಗದ ಜಗದ್ಗುರುಗಳ ನೇತೃತ್ವದಲ್ಲಿ ಕಡೂರು ತಾಲ್ಲೂಕಿನ ಅಂತರಗಟ್ಟದಲ್ಲಿ ಶ್ರೀ ದುರ್ಗಾಂಬಾ ಪ್ರೌಢಶಾಲೆ ಹಾಗು ಚಿಕ್ಕಮಗಳೂರು ತಾಲ್ಲೂಕು ಲಕ್ಯದಲ್ಲಿ ಶ್ರೀ ಸಿದ್ದೇಶ್ವರ ಪ್ರೌಢಶಾಲೆ ನಡೆಯುತ್ತಿವೆ.

ಉಪ್ಪಾರ ಸಮುದಾಯಕ್ಕೆ ಸೇರಿದ ಮೂವರು ವೈದ್ಯರು, ನಾಲ್ವರು ಇಂಜಿನಿಯರ್, ಆರು ಜನ ವಕೀಲರು, ಸುಮಾರು 600 ಜನ ಸರಕಾರಿ ನೌಕರರನ್ನು ಗುರುತಿಸಬಹುದು. ವೈದ್ಯರಾದ ಡಾ. ರಾಜು, ಇಂಜಿನಿಯರುಗಳಾದ ಆರ್. ಕೆಂಚಪ್ಪ, ಬಾಬು, ಗೋವಿಂದಪ್ಪ, ಮತ್ತು ವಕೀಲರಾದ ಟಿ. ಶಾಂತಪ್ಪ, ಎಸ್. ನಾಗರಾಜ, ಚೌಡಯ್ಯ, ಶೇಷಪ್ಪ, ಬಿ.ಆರ್. ಕೃಷ್ಣಮೂರ್ತಿ ಹಾಗು ಅಣ್ಣಪ್ಪ ಅವರುಗಳನ್ನು ಹೆಸರಿಸಬಹುದು.

ಈ ಸಮುದಾಯಕ್ಕೆ ಸೇರಿದ ಅರವತ್ತು ವ್ಯಾಪಾರಸ್ಥರನ್ನು ಗುರುತಿಸಲಾಗಿದೆ. ಆದರೆ ಈ ಸಮುದಾಯಕ್ಕೆ ಸೇರಿದ ಕೈಗಾರಿಕೆ ಮತ್ತು ಸಂಸ್ಥೆಗಳು ಇಲ್ಲ. ಕಡೂರಿನಲ್ಲಿ 23 ಕೊಠಡಿಗಳ ವಿದ್ಯಾರ್ಥಿನಿಲಯದ ಕಟ್ಟಡದ ಕಾಮಗಾರಿ ಮುಕ್ತಾಯ ಹಂತದಲ್ಲಿ ಇದೆ. ಆದರೆ ಅದು ಬೇಗ ಕಾರ್ಯಾರಂಭ ಮಾಡಬೇಕಾಗಿದೆ.

ಬಿ.ಆರ್. ಬಾಲಕೃಷ್ಣ ಈ ಸಮುದಾಯಕ್ಕೆ ಸೇರಿದ ಜಿಲ್ಲಯ ಏಕೈಕ ಪತ್ರಕರ್ತ. ರವಿ, ಬಿ.ಕೆ. ನಂಜುಂಡಪ್ಪ, ಬಿ. ರುದ್ರಪ್ಪ, ಎನ್.ಪಿ.ಟಿ. ರಾಮಯ್ಯ, ಗಂಗಾಧರಪ್ಪ ಹಾಗೂ ಎನ್.ಕೆ. ಗೋವಿಂದಪ್ಪ ಅವರುಗಳು ಬರಹಗಾರರಾಗಿದ್ದಾರೆ. ಸಾಂಸ್ಕೃತಿಕ ಕ್ಷೇತ್ರಕ್ಕೆ ಸೇರಿದ 150 ವ್ಯಕ್ತಿಗಳನ್ನು ಈ ಜಿಲ್ಲೆಯಲ್ಲಿ ಗುರುತಿಸಲಾಗಿದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಉಪ್ಪಾರ ಸಂಘ ಮೊದಲಿನಿಂದಲೂ ಅಸ್ತಿತ್ವದಲ್ಲಿದೆ. ಟಿ.ಪಿ. ಸಿದ್ದಪ್ಪ, ಬಿ.ಆರ್. ದೇವರಾಜ್ ಭಕ್ತರಹಳ್ಳಿ, ಟಿ.ಡಿ. ರಾಮಣ್ಣ ತರೀಕೆರೆ, ಶಿವಣ್ಣ ತರೀಕೆರೆ, ಎಂ. ಲಕ್ಷ್ಮಣ ಅಜ್ಜಂಪುರ-ಇವರುಗಳು ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದರು. ಸಮುದಾಯದ ಸಂಘಟನೆಗೆ ಸಾಕಷ್ಟು ಕೊಡುಗೆ ಕೊಟ್ಟಿದ್ದಾರೆ. ಉಪ್ಪಾರ ಸಂಘದ ಪ್ರಸ್ತುತ ಅಧ್ಯಕ್ಷರು ಕಡೂರಿನ ಬಿ. ಲೋಕನಾಥ್. ಚಿಕ್ಕಮಗಳೂರು ಜಿಲ್ಲೆಯಲ್ಲಿ ಉಪ್ಪಾರ ನೌಕರರ ಸಂಘ ಅಸ್ತಿತ್ವದಲ್ಲಿದೆ. ಬಿ.ವೈ. ರಂಗಯ್ಯ ಜಿಲ್ಲಾ ನೌಕರರ ಸಂಘದ ಅಧ್ಯಕ್ಷರು. ಚಿನ್ಮೂಲಾದ್ರಿಯಲ್ಲಿರುವ ಉಪ್ಪಾರ ಜನಾಂಗದ ಧರ್ಮಪೀಠದ ಪ್ರಭಾವ ಈ ಜಿಲ್ಲೆಯ ಜನರಲ್ಲಿ ವ್ಯಾಪಕವಾಗಿ ಹರಡಿದೆ.

ಚಿಕ್ಕಮಗಳೂರು ಜಿಲ್ಲೆ ಉಪ್ಪಾರ ಗುರುಪೀಠವನ್ನು ಗುರುತಿಸಿದ ಜಿಲ್ಲೆ ಎಂದು ಖ್ಯಾತವಾಗಿದೆ. ಮುಗಳಿ ಸಿದ್ರಾಮಯ್ಯ, ಬೀರೂರಿನ ಹಳ್ಳೀರಪ್ಪ, ಒಗರೇಹಳ್ಳಿ ತಿರುಮಲಯ್ಯ,

ಬಾಗಡೇಪಳ್ಳಿ, ಬೈರಪ್ಪ ಇವರುಗಳ ಶ್ರಮದ ಫಲವಾಗಿ ನಾಲ್ಕು ದಶಕಗಳ ಹಿಂದೆ ಬ್ರ. ಚಪ್ಪರದಪ್ಪಯ್ಯಸ್ವಾಮೀಜಿ ಅವರ ದಿವ್ಯ ಆಶೀರ್ವಾದದೊಂದಿಗೆ ಭಾವೈಕ್ಯ ಕಾರ್ಯ ನಡೆಯಿತು. 1973ರ ಜೂನ್ 2 ಮತ್ತು 3 ರಂದು ಬೀರೂರಿನಲ್ಲಿ ಅಖಿಲ ಕರ್ನಾಟಕ ರಾಜ್ಯ ಉಪ್ಪಾರ ಸಮ್ಮೇಳನ ವಿಜೃಂಭಣೆಯಿಂದ ಜರುಗಿತು. ಇದು ಉಪ್ಪಾರ ಸಂಘಟನೆಗೆ ಕಾರಣವಾದುದಲ್ಲದೆ ಆಗಿನ ಮುಖ್ಯಮಂತ್ರಿ ದೇವರಾಜ ಅರಸು ಅವರು ಉಪ್ಪಾರ ಸಮುದಾಯವನ್ನು ಗುರುತಿಸುವಂತಾಯಿತು. ಇದರ ಪ್ರತಿಫಲವಾಗಿ ಕೊಳ್ಳೇಗಾಲದ ಎ. ಮಸಣಸೆಟ್ಟರು ಕರ್ನಾಟಕ ವಿಧಾನಪರಿಷತ್ ಪ್ರವೇಶಿಸುವ ಮೂಲಕ ಸ್ವಾತಂತ್ರ್ಯಸಂತರ ಈ ಜನಾಂಗದಲ್ಲಿ ಪ್ರಪ್ರಥಮ ಶಾಸಕರಾದರು.

ಉಪ್ಪಾರ ಸಮುದಾಯಕ್ಕೆ ಸೇರಿದ ಸಮಾಜದ ಗಣ್ಯರೆಂದರೆ ಬೀರೂರಿನ ಬಿ.ಟಿ. ರಾಮಯ್ಯ ಪುರಸಭಾ ಸದಸ್ಯರು, ಬಿ.ಕೆ. ಸಂಜಪ್ಪ, ಬಿ.ಜಿ. ಕರಿಯಪ್ಪ, ಹಿರೇಗೌಡ ಗುಡ್ಡೆಹಳ್ಳಿ, ಎಂ.ಎಂ. ಕರಿಯಪ್ಪ ಮಚ್ಚೇರಿ, ಹೈ.ವೈ. ಕರಿಯಪ್ಪ ಮಚ್ಚೇರಿ, ಛೇರ್‌ಮನ್ ಗೋವಿಂದಪ್ಪ ಬಿಳುವಾಲ, ಬೇಲೂರಪ್ಪ ಚಿಕ್ಕಬಾಸೂರು, ಸಾಕರ ನಾಗಪ್ಪ ತಂಗಲಿ, ಪಟೇಲ್ ತಿಮ್ಮೇಗೌಡ ನಾಗಗೊಂಡನಹಳ್ಳಿ, ಬೀರೂರು ಸಿ. ಸೋಮಶೇಖರ್, ಟಿ.ಆರ್, ಲಕ್ಕಪ್ಪ, ತಂಗಲಿ ಮುಂತಾದವರು.

ಜಿಲ್ಲೆಯಲ್ಲಿ ಉಪ್ಪಾರ ಸಮುದಾಯದ ಪ್ರಮುಖ ರಾಜಕಾರಣಿಗಳೆಂದರೆ ಬಿ. ಲೋಕನಾಥ ಅಧ್ಯಕ್ಷರು ಮತ್ತು ಆಶ್ರಯ ಕಮಿಟಿ ಸದಸ್ಯರು. ಕಡೂರು, ಎಂ.ಎಂ. ಕರಿಯಪ್ಪ ಅಧ್ಯಕ್ಷರು, ಭಗೀರಥ ವಿದ್ಯಾರ್ಥಿನಿಲಯದ ಕಟ್ಟಡ ಸಮಿತಿ ಮತ್ತು ಮಾಜಿ ತಾಲ್ಲೂಕುಪಂಚಾಯತ್ ಸದಸ್ಯರು, ಮಚ್ಚೇರಿ, ಪಿ.ಎಂ. ಚೌಡಯ್ಯ ಮಾಜಿ ಅಧ್ಯಕ್ಷರು ತಾಲ್ಲೂಕು ವ್ಯವಸಾಯ ಸೇವಾ ಸಹಕಾರ ಸಂಘ, ಕಡೂರು ಪಾತೆನಳ್ಳಿ, ಜಿ.ಎಂ. ಕೆಂಚಪ್ಪ, ಮಾಜಿ ಮಂಡಲಪಂಚಾಯತ್ ಸದಸ್ಯರು, ಕರಗದಹಳ್ಳಿ ಬಿ.ಟಿ. ರಾಮಯ್ಯ ಪುರಸಭಾ ಸದಸ್ಯರು, ಬೀರೂರು, ಬಿ.ಕೆ. ಸಂಜಪ್ಪ ಬೀರೂರು, ಸೋಮಶೇಖರ, ಭಗೀರಥ ಯುವಕ ಸಂಘ ಬೀರೂರು. ಬಿ.ಕೆ. ನಂಜುಂಡಪ್ಪ, ಮಾಜಿ ಪುರಸಭಾ ಸದಸ್ಯರು ಬೀರೂರು, ಸಾವಿತ್ರಮ್ಮ ಮಾಜಿ ಪುರಸಭಾ ಉಪಾಧ್ಯಕ್ಷರು ಬೀರೂರು, ಪಿ.ಕೆ. ಮೈಲಾರಪ್ಪ ಮಾಜಿ ಜಿಲ್ಲಾಪಂಚಾಯತ್ ಸದಸ್ಯರು ಪಾತೇನಹಳ್ಳಿ, ಬಿ.ಆರ್. ಚನ್ನವೀರಗೌಡ ತಾಲ್ಲೂಕ್ ಪಂಚಾಯತ್ ಸದಸ್ಯರು ಭಕ್ತರಹಳ್ಳಿ, ದೇವೇಂದ್ರಪ್ಪ ಗ್ರಾಮಪಂಚಾಯತ್ ಅಧ್ಯಕ್ಷರು ಲಿಂಗದಹಳ್ಳಿ, ಶಾಂತವೀರಪ್ಪ, ಮಾಜಿ ಗ್ರಾಮಪಂಚಾಯತ್ ಉಪಾಧ್ಯಕ್ಷರು, ಲಿಂಗದಹಳ್ಳಿ, ಟಿ.ಎಸ್. ಮಂಜುನಾಥ್, ಸಮಾಜದ ಕಾರ್ಯಕರ್ತರು ತರೀಕೆರೆ, ಟಿ.ಆರ್. ಕೃಷ್ಣಮೂರ್ತಿ ವಕೀಲರು ಮತ್ತು ಪುರಸಭೆ ಸದಸ್ಯರು, ತರೀಕೆರೆ, ಗಿರಿಜಮ್ಮ ಸಗನಪ್ಪ ಟಿ.ಕೆ. ಮಾಜಿ ಪುರಸಭಾ ಅಧ್ಯಕ್ಷರು ತರೀಕೆರೆ, ಕೆಂಚಪ್ಪ ಪುರಸಭಾ ಸದಸ್ಯರು ತರೀಕೆರೆ, ಸುಮಿತ್ರಮ್ಮ ಮಾಜಿ ತಾಲ್ಲೂಕು ಪಂಚಾಯತ್ ಸದಸ್ಯರು, ನಂದೀಪುರ, ಎಂ.

ನಿಂಗಪ್ಪ ಮಾಜಿ ಮಂಡಲ್‌ಪಂಚಾಯಿತ್ತಿ ಸದಸ್ಯರು, ಭಂಟಗನಹಳ್ಳಿ, ಸುಮಿತ್ರಮ್ಮ ಗ್ರಾಮಪಂಚಾಯಿತ್ತಿ ಅಧ್ಯಕ್ಷರು, ಗುಳ್ಳದಮನೆ, ಮಲ್ಲಿಕಾರ್ಜುನಪ್ಪ ಗ್ರಾಮಪಂಚಾಯಿತ್ತಿ ಸದಸ್ಯರು ಗುಳ್ಳದಮನೆ, ದಾಸಪ್ಪ ಮಾಜಿ ಗ್ರಾಮ ಪಂಚಾಯತ್ ಅಧ್ಯಕ್ಷರು, ಗುಳ್ಳದಮನೆ, ಡಿ. ದೇವೀರಪ್ಪ ಮತ್ತು ಬಿ. ಲಿಂಗರಾಜು ಮಾಜಿ ಗ್ರಾಮಪಂಚಾಯಿತ್ತಿ ಸದಸ್ಯರು, ಬಾಣೂರು, ಹೆಚ್. ರಾಮಚಂದ್ರಪ್ಪ ಮಾಜಿ ಗ್ರಾಮಪಂಚಾಯಿತ್ತಿ ಅಧ್ಯಕ್ಷರು, ಜಾವೂರು, ಡಿ.ಬಿ. ಚಂದ್ರಪ್ಪ, ಮಾಜಿ ಮಂಡಲಪಂಚಾಯಿತ್ತಿ ಅಧ್ಯಕ್ಷರು ನಾರಾಯಣಪುರ, ಈಶ್ವರಪ್ಪ, ಮಾಜಿ ಗ್ರಾಮಪಂಚಾಯಿತ್ತಿ ಸದಸ್ಯರು, ಬಂಕನಕಟ್ಟೆ, ಹೆಚ್. ನಿಂಗೇಶಪ್ಪ, ಗ್ರಾಮಪಂಚಾಯತ್ ಅಧ್ಯಕ್ಷರು ಅತ್ತಿಗಟ್ಟೆ, ಲಕ್ಷ್ಮಮ್ಮ, ಗ್ರಾಮಪಂಚಾಯತ್ ಅಧ್ಯಕ್ಷರು, ನಾಗಗೊಂಡನಹಳ್ಳಿ, ಸುಮಿತ್ರಮ್ಮ, ತಾಲ್ಲೂಕುಪಂಚಾಯಿತ್ತಿ ಸದಸ್ಯರು ತುರುವನಹಳ್ಳಿ, ಶ್ರೀನಿವಾಸ, ಗ್ರಾಮಪಂಚಾಯಿತ್ತಿ ಅಧ್ಯಕ್ಷರು ಸಾನಿಹಳ್ಳಿ, ಕಡೂರು ತಾಲ್ಲೂಕು, ಬಿ.ಎನ್. ತಿಪ್ಪೇಶಪ್ಪ ಗ್ರಾಮಪಂಚಾಯಿತ್ತಿ ಸದಸ್ಯರು, ಗುಜ್ಜೇನಹಳ್ಳಿ, ವೈ.ಹೆಚ್. ಕೃಷ್ಣಪ್ಪ, ಗ್ರಾಮಪಂಚಾಯಿತ್ತಿ ಸದಸ್ಯರು ಎಳಗೊಂಡನಹಳ್ಳಿ, ಕೆಂಚಪ್ಪ, ಗ್ರಾಮಪಂಚಾಯಿತ್ತಿ ಅಧ್ಯಕ್ಷರು, ಕಾನಗೊಂಡನಹಳ್ಳಿ, ರತ್ನಮ್ಮ, ಅಧ್ಯಕ್ಷರು, ಗ್ರಾಮ ಪಂಚಾಯಿತ್ತಿ ಲಕ್ಯ, ರುದ್ರಮ್ಮ, ನಾಗರಾಜು, ಮಾಜಿ ತಾಲ್ಲೂಕುಪಂಚಾಯಿತ್ತಿ ಸದಸ್ಯರು, ತಂಗಲಿ, ಬಿ.ಜಿ. ಕೇಶವಪ್ಪ, ಮಾಜಿ ಅಧ್ಯಕ್ಷರು, ಬಿಳುವಾಲ, ಲಕ್ಕಪ್ಪ, ಮಾಜಿ ಅಧ್ಯಕ್ಷರು, ಬಿಟ್ಟೇನಹಳ್ಳಿ, ಶಾಂತಲಿಂಗೇಗೌಡರು, ಸಮಾಜ ಸೇವಕರು, ಕೊತ್ತಗೆರೆ, ಬಿ.ಆರ್. ನಾಗರಾಜ್, ಅಧ್ಯಕ್ಷರು, ಗ್ರಾಮಪಂಚಾಯಿತ್ತಿ ಬೆಳವಾಡಿ, ಪಾಂಡು, ಗ್ರಾಮಪಂಚಾಯಿತ್ತಿ ಸದಸ್ಯರು, ನಾಗವಂಗಲ, ಗಂಗಮ್ಮ, ಗ್ರಾಮಪಂಚಾಯಿತ್ತಿ ಸದಸ್ಯರು, ನಾಗವಂಗಲ, ರಾಮಸ್ವಾಮಿ ಗ್ರಾಮಪಂಚಾಯಿತ್ತಿ ಸದಸ್ಯರು, ಪೀರಾಪುರ, ದೇವೀರಮ್ಮ, ಪುರಸಭೆ ಸದಸ್ಯರು, ತರೀಕೆರ, ಕಮಲಮ್ಮ, ಪುರಸಭೆ ಸದಸ್ಯರು, ತರೀಕೆರೆ, ಬಿ.ಎಂ. ಚಂದ್ರಪ್ಪ, ಮಾಜಿ ಪುರಸಭೆ ಅಧ್ಯಕ್ಷರು ಬೀರೂರು, ಮುಂತಾದವರು.

ಉಪ್ಪಾರ ಸಮುದಾಯದಲ್ಲಿ ಐಕ್ಯತೆಯ ಕೊರತೆ ಇದೆ. ಇದನ್ನು ಮೊದಲು ನಿವಾರಿಸುವ ಅವಶ್ಯಕತೆ ಇದೆ. ಎಲ್ಲ ಉಪ್ಪಾರ ಮಕ್ಕಳಿಗೆ ವಿದ್ಯಾಭ್ಯಾಸದ ವ್ಯವಸ್ಥೆ ಮಾಡಬೇಕು. ಸರಕಾರದ ಅನೇಕ ಯೋಜನೆಗಳ ಸತ್ಫಲ ಈ ಸಮುದಾಯಕ್ಕೆ ಸರಿಯಾಗಿ ದೊರಕುತ್ತಿಲ್ಲ. ಕಾರಣ ರಾಜಕೀಯದ ಇಚ್ಛಾಶಕ್ತಿಯ ಕೊರತೆ ಇದೆ. ಆಶ್ರಯ ಮನೆ ಹಾಗು ನಿವೇಶನ, ಗಂಗಾ ಕಲ್ಯಾಣ, ಇಂದಿರಾ ಆವಾಸ್, ಜನತಾ ಮನೆ, ಮಾಸಾಶನ ಮೊದಲಾದ ಯೋಜನೆಗಳ ಫಲ ಸಮರ್ಪಕವಾಗಿ ಈ ಸಮುದಾಯದವರಿಗೆ ದೊರಕುತ್ತಿಲ್ಲ. ಈ ಬಗ್ಗೆ ಸಂಘಟಿತ ಪ್ರಯತ್ನ ಅವಶ್ಯಕ.

ಉಪ್ಪಾರ ಸಮುದಾಯವನ್ನು ರಾಜ್ಯಮಟ್ಟದಲ್ಲಿ ಸಂಘಟಿಸುವ ಸಮರ್ಥ ನಾಯಕತ್ವದ ಕೊರತೆ ಇದೆ. ಸಮಾಜದ ಆರ್ಥಿಕ, ಸಾಮಾಜಿಕ ಹಾಗು ಶೈಕ್ಷಣಿಕ ಅಭಿವೃದ್ಧಿ ಇಂತಹ ನಾಯಕತ್ವವನ್ನು ಅವಲಂಬಿಸುತ್ತದೆ. ಮೊದಲಿಗೆ ರಾಜ್ಯ ಉಪ್ಪಾರ ಸಂಘ ಹೊಸ ಚೈತನ್ಯ

ಪಡೆಯಬೇಕು. ಈ ಸಮಾಜದ ಹಿಂದಿನ ಕುಲಗುರುಗಳಾಗಿದ್ದ ಬ್ರ. ಲೇಪಾಕ್ಷ ಸ್ವಾಮಿಗಳವರು ಉಪ್ಪಾರ ಸಮಾಜವನ್ನು ಗ್ರಾಮಮಟ್ಟದಿಂದ ಸಂಘಟಿಸಬೇಕೆಂಬ ಆಲೋಚನೆ ಹೊಂದಿದ್ದರು. ಈಗಿನ ಶ್ರೀಗಳಾದ ಪುರುಷೋತ್ತಮಾನಂದಪುರಿಗಳವರು ಈ ಸಮಾಜದ ಧಾರ್ಮಿಕ ನಾಯಕತ್ವ ವಹಿಸಿ ಎಲ್ಲ ನಾಯಕರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಸಮಾಜವನ್ನು ಸಂಘಟಿಸುತ್ತಾರೆಂಬ ನಂಬಿಕೆ ಇದೆ. ಪ್ರತಿ ವರ್ಷ ರಾಜರ್ಷಿ ಭಗೀರಥ ಜಯಂತಿಯನ್ನು ಜಿಲ್ಲೆ ಹಾಗೂ ತಾಲ್ಲೂಕ್ ಮಟ್ಟದಲ್ಲಿ ಆಚರಿಸುವ ಮೂಲಕ ಸಮಾಜದವರಲ್ಲಿ ತಿಳಿವಳಿಕೆ, ಸಂಘಟನೆ ಹಾಗು ಸ್ವಾಭಿಮಾನ ಹೆಚ್ಚುವಂತೆ ಮಾಡಬೇಕಿದೆ. ಹೀಗೆ ಸಂಘಟನೆ ಆದಾಗ ಸಮುದಾಯಕ್ಕೆ ರಾಜಕೀಯ ಸ್ಥಾನಮಾನಗಳು ತನಗೆ ತಾನೇ ದೊರೆಯುತ್ತವೆ. ಇದಕ್ಕೆ ಬೇರೆ ಸಹೋದರ ಸಮಾಜದ ನಿದರ್ಶನಗಳು ನಮ್ಮ ಮುಂದೆ ಇವೆ ಎಂಬುದನ್ನು ಮರೆಯಬಾರದು. ಉಪ್ಪಾರ ಜನಾಂಗವನ್ನು ಒಂದಾಗಿ ಬೆಸೆಯುವ ಮಾಧ್ಯಮವೊಂದನ್ನು ಪ್ರಾರಂಭಿಸಬೇಕು. ಈ ಸಮಾಜದ ಮುಖಂಡರು ಇನ್ನಾದರೂ ಈ ಸಮಾಜದತ್ತ ಕಣ್ಣುಹಾಯಿಸಿ ವಿಶಾಲ ಮನೋಭಾವದಿಂದ ಸಮಾಜದ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಕಾರ್ಯಪ್ರವೃತ್ತರಾಗಬೇಕು. ಅದೇ ನಮ್ಮೆಲ್ಲರ ಆಶಯ.

**ಮಾಹಿತಿಸಂಗ್ರಹ : ಬಿ.ಟಿ. ರಾಮಯ್ಯ**

*




# * ಶಿವಮೊಗ್ಗ ಜಿಲ್ಲೆ

## ಐತಿಹಾಸಿಕ ಹಿನ್ನೋಟ

ಶಿವಮೊಗ್ಗ ಜಿಲ್ಲೆ ಸುಮಾರಾಗಿ ರಾಜ್ಯದ ಮಧ್ಯದ ನೈರುತ್ಯ ದಿಕ್ಕಿಗಿದೆ. ಈ ಜಿಲ್ಲೆಯ ಪಶ್ಚಿಮ ಭಾಗ ಪರ್ವತ ಶ್ರೇಣಿಗಳಿಂದ ಕೂಡಿದ್ದು, ಪೂರ್ವಭಾಗ ಮಲೆನಾಡು, ಅರೆ ಮಲೆನಾಡು ಹಾಗು ಬಯಲುಸೀಮೆಗಳಿಂದು ಪ್ರಸಿದ್ಧವಾಗಿದೆ. ಇದು ಉತ್ತರ ಅಕ್ಷಾಂಶ 13°-27'ರಿಂದ 14°-39' ಪೂರ್ವರೇಖಾಂಶ 74°-38'ರಿಂದ 76°-4' ಗಳ ಮಧ್ಯೆ ಹರಡಿದೆ. ಜಿಲ್ಲೆಯ ವಾರ್ಷಿಕ ಸರಾಸರಿ ಮಳೆ 1710 ಮಿ.ಮೀ.ಗಳು.

1997 ರಲ್ಲಿ ಜಿಲ್ಲೆಯ ಪುನರ್ ವಿಂಗಡಣೆಯಿಂದಾಗಿ ಈ ಜಿಲ್ಲೆಯು ಹೊನ್ನಾಳಿ ಮತ್ತು ಚನ್ನಗಿರಿ ತಾಲ್ಲೂಕುಗಳನ್ನು ಕಳೆದುಕೊಂಡಿತು. ಈಗ ಶಿವಮೊಗ್ಗ, ಭದ್ರಾವತಿ, ತೀರ್ಥಹಳ್ಳಿ, ಹೊಸನಗರ, ಸಾಗರ, ಶಿಕಾರಿಪುರ ಮತ್ತು ಸೊರಬ ತಾಲ್ಲೂಕುಗಳನ್ನೊಳಗೊಂಡಿದೆ.

2001ರ ಜನಗಣತಿಯ ಪ್ರಕಾರ ಈ ಜಿಲ್ಲೆಯಲ್ಲಿ 16,39,595 ಜನರಿದ್ದಾರೆ. ಅವರಲ್ಲಿ 8,29,365 ಪುರುಷರು, 8,10,230 ಮಹಿಳೆಯರು. ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇ. 74.80.

ಶಿವಮೊಗ್ಗ ಜಿಲ್ಲೆ ಐತಿಹಾಸಿಕವಾಗಿ ಪ್ರಮುಖವಾದ ಸ್ಥಳ. 'ಶಿವಮೊಗ್ಗ' ಹೆಸರಿನ ಬಗ್ಗೆ ಒಂದೆರಡು ಐತಿಹ್ಯಗಳನ್ನು ಗಮನಿಸಬಹುದು. ದೂರ್ವಾಸಮುನಿಗಳ ಆಶ್ರಮದಲ್ಲಿ ತಮ್ಮ ಕೋಪಶಮನ ಮಾಡಿಕೊಳ್ಳಲು ಗರಿಕೆ ರಸವನ್ನು ಸಂಗ್ರಹಿಸಿಟ್ಟಿದ್ದರು.

ಇಂತಹ ಗರಿಕೆ ರಸ ಸಿಹಿಯಾಗಿದ್ದ ಕಾರಣ 'ಮೊಗೆ'ಯಲ್ಲಿ ಸಂಗ್ರಹಿಸಿಟ್ಟುಕೊಂಡು ಕುಡಿಯುತ್ತಿದ್ದರು. 'ಸೀಮೊಗೆ' ಕಾಲಕ್ರಮೇಣ 'ಶೀಮೊಗೆ' ಆಯಿತು. ಶಿವನಮುಖ, ಶಿವಮುಖ, ಶಿವನಮೊಗ, ಶಿವನಮೊಗ್ಗು ಆಗಿದ್ದು ಶಿವನಿಗೆ ಸಂಬಂಧಿಸಿದ್ದರಿಂದ 'ಶಿವಮೊಗ್ಗ' ಆಯಿತೆಂದು ಹೇಳಲಾಗಿದೆ.

ಕೆಳದಿ ಶಿವಪ್ಪನಾಯಕನ (1640-1660) ಅರಮನೆಯಿತ್ತೆಂದೂ ಅಹಿಂದಾಗಿ ಈ ಊರಿಗೆ 'ಶಿವಮೊಗ್ಗ' ಎಂಬ ಹೆಸರು ಬಂತೆಂಬ ಉಲ್ಲೇಖವಿದೆ.

ಮಹಾಭಾರತದಲ್ಲಿ ಬರುವ 'ಕಾಮ್ಯಕವನ' ಈ ಪ್ರದೇಶದಲ್ಲಿತ್ತೆಂದು ಹೇಳಲಾಗಿದೆ. ಶ್ರೀರಾಮ ಭೂಮಿಗೆ ಬಾಣ ಹೊಡೆದು ನೀರು ಬರುವಹಾಗೆ ಮಾಡಿದನಂತೆ. ಅದೇ ಮುಂದೆ ಹರಿದು ಶರಾವತಿ ನದಿಯಾಯಿತು. ಈ ಜಿಲ್ಲೆಯ ಬಳ್ಳಿಗಾವೆಯನ್ನು 'ದಕ್ಷಿಣ ಕೇದಾರ' ಎಂದು ಕರೆಯಲಾಗುತ್ತದೆ.

ಶ್ರೀಗಂಧದ ಮರದ ಕಂಪು ಬೀರುವ 'ಸುರಭಿಪುರ' ಎಂಬುದೇ 'ಸೊರಬ' ಎಂಬ ಹೆಸರು ಬರಲು ಕಾರಣವಾದ ಹಿನ್ನೆಲೆ ಹೇಳುತ್ತದೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಅರಗ ಪ್ರಮುಖ ಕೇಂದ್ರವಾಗಿದ್ದು, ಅಲ್ಲಿನ ಅಖಂಡೇಶ್ವರ ದೇವಾಲಯದ ಶಿವಲಿಂಗ ಪ್ರಮುಖವಾದುದು. 'ನೋಡಿದರೆ ನೋಡಬೇಕು ಅರಗದ ಶಿವಲಿಂಗವ' ಎಂಬ ಮಾತು ಜನಪ್ರಿಯವಾಗಿದೆ.

ಹನ್ನೆರಡನೆಯ ಶತಮಾನದ ಶ್ರೇಷ್ಠ ವಿಭೂತಿಪುರುಷರಾದ ಅಲ್ಲಮಪ್ರಭು, ಅಕ್ಕಮಹಾದೇವಿ ಅವರುಗಳು ಕ್ರಮವಾಗಿ ಬಳ್ಳಿಗಾಮೆ ಹಾಗು ಉಡುತಡಿಯವರು. ಬ್ರಾಹ್ಮಣ ಸಮಾಜದ 'ಕೂಡಲಿ' ಎಂಬ ಅದ್ವೈತ ತತ್ವ ಕೇಂದ್ರ ಕೂಡ ಶಿವಮೊಗ್ಗ ಜಿಲ್ಲೆಯಲ್ಲಿದೆ. 'ಹುಂಚ' ಶಿವಮೊಗ್ಗ ಜಿಲ್ಲೆಯಲ್ಲಿನ ಪ್ರಸಿದ್ಧ ಜೈನಕೇಂದ್ರವಾಗಿದೆ. ಶಿವಮೊಗ್ಗದಲ್ಲಿನ ಜೋಗಜಲಪಾತ ವಿಶ್ವಪ್ರಸಿದ್ಧವಾಗಿದೆ. ಇಲ್ಲಿ 270 ಮೀ. ಎತ್ತರದಿಂದ ನೀರು ಧುಮುಕುತ್ತದೆ. ಶರಾವತಿಯ ಮಹಾತ್ಮಗಾಂಧಿ ವಿದ್ಯುಚ್ಛಕ್ತಿ ಉತ್ಪಾದನಾ ಕೇಂದ್ರ ಜಿಲ್ಲೆಯ ತುಂಬ ಮಹತ್ತರ ಯೋಜನೆ. ರಾಜ್ಯಕ್ಕೆ ಶಕ್ತಿಯ ಆಗರವೇ ಮೊದಲು ಇದಾಗಿತ್ತು.

ತುಂಗಭದ್ರಾ, ಶರಾವತಿ, ವರದಾ, ಕುಮದ್ವತಿ ಹಾಗೂ ವಾರಾಹಿ ಈ ಜಿಲ್ಲೆಯ ನದಿಗಳಾಗಿವೆ. ಕುಮದ್ವತಿ ಜಲಾಶಯ, ಲಿಂಗನಮಕ್ಕಿ ಅಣೆಕಟ್ಟು, ಗಾಜನೂರು ತುಂಗಾ ಜಲಾಶಯ, ಲಕ್ಕವಳ್ಳಿಯ ಭದ್ರಾಜಲಾಶಯಗಳನ್ನು ಇಲ್ಲಿ ಹೆಸರಿಸಬಹುದು. ಈ ಜಿಲ್ಲೆಯ ಮಲೆನಾಡು ಪ್ರದೇಶ ಸಾಕಷ್ಟು ಸಂಪದ್ಭರಿತವಾಗಿದೆ. 'ಆಗುಂಬೆ'ಯ ಸೂರ್ಯಾಸ್ತಮಾನ ಪ್ರವಾಸಿಗರ ಕಣ್ಮನ ಸೆಳೆಯುತ್ತದೆ. ಇಲ್ಲಿ ವಾರ್ಷಿಕ ಸರಾಸರಿ ಮಳೆ 610 ಮಿ.ಮೀ.ಗಳು. ಕೊಡಚಾದ್ರಿ, ತಳಕಳ (ಸಾಗರ ತಾಲ್ಲೂಕು) ಹಾಗು ಕಂಚಿಕಲ್ ಅಬ್ಬೆ ಪ್ರಸಿದ್ಧ ಯಾತ್ರಾ ಸ್ಥಳಗಳಾಗಿವೆ.

ಈ ಜಿಲ್ಲೆಯ ಮಲೆನಾಡು ಪ್ರದೇಶದಲ್ಲಿ 1,42,648ರಷ್ಟು ಪ್ರದೇಶ ಅರಣ್ಯದಿಂದ ಆವೃತವಾಗಿದೆ. ಅಲ್ಲಿ ಶ್ರೀಗಂಧ, ನಾಗಸಂಪಿಗೆ, ತೇಗ, ಹೊನ್ನೆ, ದಿಂಡಿಗ, ಬೇವು, ಹುಣಸೆ, ಜಾಜಿ, ಮಾವು, ನೇರಳೆ, ಹಲಸು ಮೊದಲಾದ ವೃಕ್ಷ ಸಂಪತ್ತಿದೆ.

ಹುಲಿ, ಚಿರತೆ, ಕರಡಿ, ಮುಳ್ಳುಹಂದಿ, ಆನೆ, ಕಾಡೆಮ್ಮೆ, ಚಿಗರೆ, ಜಿಂಕೆ, ಹದ್ದು, ಗಿಡುಗ, ಗಿಳಿ, ಪಾರಿವಾಳ, ಕಾಡುಕೋಳಿ, ಮೈನಾಪಕ್ಷಿ, ಹಾವು ಹಾಗು ಮೊಸಳೆ ಮೊದಲಾದ ಪ್ರಾಣಿಸಂಪತ್ತು ಶಿವಮೊಗ್ಗ ಜಿಲ್ಲೆಯಲ್ಲಿದೆ. ಭತ್ತ, ಅಡಿಕೆ, ತೆಂಗು, ಮೆಣಸು, ಮಾವು, ಬಾಳೆ, ಕಬ್ಬು, ಏಲಕ್ಕಿ ಮೊದಲಾದ ಬೆಳೆಗಳನ್ನು ಮಲೆನಾಡು ಪ್ರದೇಶದಲ್ಲಿ ಬೆಳೆಯಲಾಗುತ್ತದೆ. ಶಿವಮೊಗ್ಗ 'ಭತ್ತದ ಕಣಜ' ಎಂದೇ ಖ್ಯಾತವಾಗಿದೆ. ಬಯಲು ಪ್ರದೇಶದಲ್ಲಿ ರಾಗಿ, ಹುರುಳಿ, ಜೋಳ ಹಾಗು ಶೇಂಗಾ ವಿಶೇಷ ಬೆಳೆಗಳಾಗಿವೆ.

ಐತಿಹಾಸಿಕವಾಗಿ ಕೂಡ ಶಿವಮೊಗ್ಗ ಜಿಲ್ಲೆ ಭವ್ಯ ಪರಂಪರೆ ಹೊಂದಿದೆ. ಕರ್ನಾಟಕವನ್ನಾಳಿದ ಎಲ್ಲ ರಾಜಮನೆತನಗಳೂ ಈ ಪ್ರದೇಶದ ಒಡೆತನ ಹೊಂದಿದ್ದವು. ಶಿವಮೊಗ್ಗೆಯು ಪ್ರಸಿದ್ಧ ವಿದ್ಯಾಕೇಂದ್ರವಾಗಿಯೂ ಬೆಳವಣಿಗೆ ಹೊಂದುತ್ತ ಕುವೆಂಪು ವಿಶ್ವವಿದ್ಯಾನಿಲಯವನ್ನು ತನ್ನದನ್ನಾಗಿಸಿಕೊಂಡಿದೆ.

ನ್ಯಾಮತಿ ಬಳಿ ಲಕ್ಷಾಂತರ ವರ್ಷಗಳ ಹಿಂದಿನ ಆದಿ ಹಳೇ ಶಿಲಾಯುಗದ ಸಂಸ್ಕೃತಿಯ ಅವಶೇಷಗಳನ್ನು ರಾಬರ್ಟ್ ಬ್ರೂಸ್‌ಫೂಟ್ ಶೋಧಿಸಿದ್ದಾರೆ. ಡಾ|| ಎಂ.ಎಚ್. ಕೃಷ್ಣ ಅವರು ಕುಂಸಿಯಲ್ಲಿ ಇತಿಹಾಸಪೂರ್ವ ಕಾಲದ ನೆಲೆಯನ್ನು ಗುರುತಿಸಿದ್ದಾರೆ. ಪ್ರೊ. ಅ. ಸುಂದರ ಅವರು ಶಿವಮೊಗ್ಗ ಹತ್ತಿರದ ನದಿಯ ಬಲಬದಿಗೆ ಇರುವ ಗುಡ್ಡೆಮರಡಿಯಲ್ಲಿ ಬೃಹತ್ ನೂತನ ಶಿಲಾಯುಗ ಹಾಗು ಇತಿಹಾಸ ಪ್ರಾರಂಭ ಕಾಲದ ನೆಲೆಯನ್ನು ಗುರುತಿಸಿದ್ದಾರೆ.

ಬನವಾಸಿ ಕದಂಬರ ರಾಜ್ಯಸ್ಥಾಪನೆ, ವಂಶಾವಳಿ ಹಾಗು ಇತರ ಮಹತ್ವದ ವಿಷಯಗಳನ್ನು ಸೊರಬ ತಾಲ್ಲೂಕಿನ ತಾಳಗುಂದಸ್ಥಂಭಶಾಸನ ತಿಳಿಸುತ್ತದೆ. ಬನವಾಸಿ ಕದಂಬರು ಈ ಭಾಗದವರು. ತಾಳಗುಂದ ಬನವಾಸಿ ಕದಂಬರ ಪ್ರಾಚೀನ ಕಾಲದ ಅಗ್ರಹಾರ. ಈ ಅಗ್ರಹಾರದ ಸ್ಥಾಪಕ ತ್ರಿನೇತ್ರ ಕದಂಬ. ಅವನ ಮಹಾದಂಡನಾಯಕ ಕೇಶಿಮಯ್ಯ ಇದಕ್ಕೆ ವಿಫುಲವಾದ ದಾನ ನೀಡಿದ. ಬಳ್ಳಿಗಾಮೆಯ ಕೋಡಿಮಠ ಪ್ರಸಿದ್ಧ ಶೈವ ಕೇಂದ್ರ.

ಬನವಾಸಿ ಕಪಂಬ ರಾಜ್ಯವಂಶದ ಸ್ಥಾಪಕ ಮಯೂರವರ್ಮನ ಕಾಲದಲ್ಲಿ ಸೇಂದ್ರಕ ಅರಸನು ಶಿವಮೊಗ್ಗದಲ್ಲಿ ಆಳ್ವಿಕೆ ನಡೆಸುತ್ತಿದ್ದನೆಂದು ಕೆಲವು ದಾಖಲೆಗಳು ಹೇಳುತ್ತವೆ.

ಶಿಕಾರಿಪುರ ಹಾಗು ಸೊರಬ ಭಾಗಗಳನ್ನು ಬಾದಾಮಿ ಚಾಳುಕ್ಯರ ವಿಜಯಾದಿತ್ಯನ ಕಾಲದಲ್ಲಿ ಸಾಂತರಸರು ಆಳುತ್ತಿದ್ದರು. ಮಂಡಳಿ, ನಾಡು ಎಂಬ ಪ್ರಾಂತ್ಯವನ್ನು ಗಂಗರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು ಹಾಗು ಕಲಚೂರಿ ವಂಶದವರು ಆಳುತ್ತಿದ್ದರು. ಈ ಪ್ರಾಂತ್ಯಕ್ಕೆ 'ಶಿವಮೊಗ್ಗ' ಕೂಡ ಸೇರ್ಪಡೆಯಾಗಿತ್ತು.

ಸಾಂತರಸರ 'ನನ್ನಿ ಪಾಂಡರಸ'ನು ಕಲ್ಯಾಣ ಚಾಲುಕ್ಯರ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ವಿಶೇಷ ಆದರಕ್ಕೆ ಪಾತ್ರನಾಗಿದ್ದನು. ಜಿಡ್ಡುಪಿಗೆ ನಾಡು ಎಂದರೆ ಈಗಿನ ಸೊರಬ ತಾಲ್ಲೂಕಿನ ಉದ್ರಿ ಅಥವಾ ಉದ್ದುವೆ ಗಂಗ-ಹೊಯ್ಸಳರ ಅಧೀನಕ್ಕೆ ಒಳಪಟ್ಟಿತ್ತು.

ನಾಗರಖಂಡ 70 ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟ ಪ್ರದೇಶವಾಗಿತ್ತು. ನಾಗರಖಂಡ 70 ಶಿಕಾರಿಪುರದ ಪ್ರದೇಶವಾಗಿತ್ತು ಇದನ್ನು 'ನಾಲ್ಗಾವುಂಡರು' ಆಳುತ್ತಿದ್ದರು. ಬನವಾಸಿ 12,000 ವನ್ನು ರಾಷ್ಟ್ರಕೂಟರ ಮಾಂಡಲೀಕ ವಿಠ್ಠಲರಸನು ಆಳುತ್ತಿದ್ದನು. ಬಳ್ಳಿಗಾಮೆ ಬನವಾಸಿ ಅರಸರ ರಾಜಧಾನಿಯಾಗಿತ್ತು. ಸಿಂಧರು ಶಿವಮೊಗ್ಗ ಜಿಲ್ಲೆ ಆಳುತ್ತಿದ್ದರು. ಇವರ ದೊರೆ ಈಶ್ವರ ದೇವ ಅರಸನು ಹೊಯ್ಸಳ ಮಾಂಡಲೀಕನಾಗಿದ್ದನು. ಬೇಡರ ಚೆನ್ನ ಎಂಬುವನು ಬೆಳಗುತ್ತಿಯಲ್ಲಿ ಕೋಟೆ ನಿರ್ಮಿಸಿ ಆಳ್ವಿಕೆ ಪ್ರಾರಂಭಿಸಿದ್ದನು.

ಹೊಯ್ಸಳರನಂತರ ಬಂದ ವಿಜಯನಗರದ ಅರಸರ ಕಾಲದಲ್ಲಿ ಈ ಪ್ರಾಂತ್ಯಕ್ಕೆ 'ಮಲೆರಾಜ್ಯ' ಎಂಬ ಹೆಸರಿತ್ತು. ತೀರ್ಥಹಳ್ಳಿ ತಾಲ್ಲೂಕು 'ಅರಗ' ಇವರ ರಾಜಧಾನಿ. ಬುಕ್ಕರಾಯನ ಮಗ ವಿರೂಪಾಕ್ಷ ಅರಗವನ್ನು ಆಳುತ್ತಿದ್ದನು.

ಈ ಭಾಗದ ಅತ್ಯಂತ ಪ್ರಮುಖರು ಕೆಳದಿ ಅರಸರು. ಕ್ರಿ.ಶ. 1500-1763 ವರೆಗೆ ಆಳಿದ 18 ದೊರೆಗಳು ಈ ಮನೆತನದವರು. ಅವರಲ್ಲಿ ಎಂಟನೆಯ ದೊರೆ 'ಸಿಸ್ತಿ'ನ ದೊರೆ ಶಿವಪ್ಪನಾಯಕ ಪ್ರಸಿದ್ಧನಾಗಿದ್ದಾನೆ. ಅವನು ಜಾರಿಗೆ ತಂದ ಕಂದಾಯ ನೀತಿಗೆ 'ಸಿಸ್ತು' ಎಂದು ಕರೆಯಲಾಗಿತ್ತು. ಕೆಳದಿ ಮನೆತನದಲ್ಲಿ 'ಚೆನ್ನಮ್ಮಾಜಿ' ಅತ್ಯಂತ ಪ್ರಸಿದ್ಧ ರಾಣಿ. ಮೊಗಲ್ ದೊರೆ ಔರಂಗಜೇಬನನ್ನು ಸೋಲಿಸಿದ ಖ್ಯಾತಿ ಇವಳದು. ಈ ಮನೆತನದ ಕೊನೆಯ ರಾಣಿ ವೀರಮ್ಮಾಜಿ (1756-65) ಕೂಡ ಉತ್ತಮ ಆಡಳಿತಗಾರಳು. ಬಸವಾಪಟ್ಟಣದ ಪಾಳೇಗಾರರ ಪ್ರಭಾವ ಈ ಪ್ರಾಂತ್ಯದ ಮೇಲಿದೆ.

ಸ್ವಾತಂತ್ರ್ಯಹೋರಾಟದಲ್ಲಿ 'ದೋಂಡಿಯ ವಾಘ'ನ ಹೆಸರು ಮೊದಲಿಗೇ ಉಲ್ಲೇಖಿಸಲ್ಪಡುತ್ತದೆ. ಕ್ರಿ.ಶ. 1800ರಲ್ಲಿ ಆತ ಮಡಿದ. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ 1830ರಲ್ಲಿ ನಗರದಲ್ಲಿ ರೈತರ ಹೋರಾಟ ನಡೆಯಿತು. ಅದು 'ನಗರ ದಂಗೆ' ಎಂದೇ ಪ್ರಸಿದ್ಧವಾಗಿದೆ. ಶಿಕಾರಿಪುರ ತಾಲ್ಲೂಕಿನ ಈಸೂರು ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ ಗ್ರಾಮ. ಕರ ನಿರಾಕರಣೆ ಮಾಡಿದ ಈಸೂರಿನ ಏಳು ಜನರನ್ನು ಬ್ರಿಟಿಷ್ ಸರ್ಕಾರ ಗಲ್ಲಿಗೇರಿಸಿತು.

ಸ್ವಾತಂತ್ರ್ಯ ಹೋರಾಟದಲ್ಲಿ ಶಿವಮೊಗ್ಗ ಜಿಲ್ಲೆಯ ಅನೇಕ ಮಹನೀಯರು ಪಾಲ್ಗೊಂಡಿದ್ದಾರೆ. ಪಾರ್ಥನಾರಾಯಣ ಪಂಡಿತ, ಹೆಚ್.ಎಸ್. ರುದ್ರಪ್ಪ, ಎ.ಆರ್. ಬದರಿನಾರಾಯಣ, ಕಡಿದಾಳು ಮಂಜಪ್ಪ, ಎಚ್.ವಿ. ಕೃಷ್ಣಮೂರ್ತಿರಾವ್, ನಾಗಪ್ಪಶೆಟ್ಟಿ ಮೊದಲಾದ ಹಲವಾರು ನಾಯಕರನ್ನು ಹೆಸರಿಸಬಹುದು.

ಶಿವಮೊಗ್ಗ ಜಿಲ್ಲೆ ರಾಜ್ಯಕ್ಕೆ ಉತ್ತಮ ನಾಯಕರನ್ನು ಕೊಟ್ಟಿದೆ. ರಾಜ್ಯಕ್ಕೆ ಮೂವರು ಮುಖ್ಯಮಂತ್ರಿಗಳನ್ನು ಕೊಟ್ಟ ಕೀರ್ತಿ ಈ ಜಿಲ್ಲೆಗೆ ಸೇರುತ್ತದೆ. ಕಡಿದಾಳ್ ಮಂಜಪ್ಪ,

ಎಸ್. ಬಂಗಾರಪ್ಪ, ಜೆ.ಎಚ್. ಪಟೇಲ್ ಅವರು ಶಿವಮೊಗ್ಗ ಜಿಲ್ಲೆಗೆ ಸೇರಿದವರು. ರಾಜ್ಯದ ಮುಖ್ಯಮಂತ್ರಿಗಳಾಗಿದ್ದವರು. ಕಾಗೂಡು ತಿಮ್ಮಪ್ಪ, ಟಿ.ವಿ. ಚಂದ್ರಶೇಖರಪ್ಪ, ಕೆ.ಹೆಚ್. ಶ್ರೀನಿವಾಸ್, ಎಲ್. ಟಿ. ತಿಮ್ಮಪ್ಪ ಹೆಗಡೆ, ಎನ್. ಜಿ. ಹಾಲಪ್ಪ, ಚಂದ್ರಶೇಖರಯ್ಯ, ಬಿ.ಎಸ್. ಯಡಯೂರಪ್ಪ, ಎಲ್.ಟಿ. ಶಾಸ್ತ್ರಿ, ಡಿ.ಬಿ. ಚಂದ್ರೇಗೌಡ, ಜಿ. ಬಸವಣ್ಣಪ್ಪ, ಕೆ. ವೆಂಕಟಪ್ಪ, ಶೀರನಹಳ್ಳಿ ಚಂದ್ರಶೇಖರ, ಮಲ್ಲಿಕಾರ್ಜುನಪ್ಪ, ಅರಗ ಜ್ಞಾನೇಂದ್ರ, ಕುಮಾರ ಬಂಗಾರಪ್ಪ, ಆಯನೂರು ಮಂಜುನಾಥ್, ಕೆ.ಎಸ್. ಈಶ್ವರಪ್ಪ, ಸ್ವಾಮಿರಾವ್, ಬಸವನಗೌಡ, ಕರಿಯಣ್ಣ, ಅಪ್ಪಾಜಿ ಮೊದಲಾದ ರಾಜಕೀಯ ನಾಯಕರನ್ನು ಜ್ಞಾಪಿಸಿಕೊಳ್ಳಬಹುದು.

ಶಿವಮೊಗ್ಗ ಸಮಾಜವಾದಿ ಚಳವಳಿಯ ತವರೂರು. ಕರ್ನಾಟಕದ ಅತ್ಯುತ್ತಮ ಜನನಾಯಕರಲ್ಲಿ ಶಾಂತವೇರಿ ಗೋಪಾಲಗೌಡ ಅವರು ಪ್ರಮುಖರು. ಕರ್ನಾಟಕ ವಿಧಾನಸಭೆಯ ವಿರೋಧಪಕ್ಷದ ನಾಯಕರಾಗಿದ್ದ ಶಾಂತವೇರಿ ಗೋಪಾಲಗೌಡ ಅವರು ವಿಧಾನಸಭೆಯಲ್ಲಿ ಮಾಡಿದ ಭಾಷಣಗಳು ಹಾಗು ಜನಜಾಗೃತಿ ಕೈಗೊಂಡ ಯೋಜನೆಗಳು ಜನಮನದಲ್ಲಿ ಶಾಶ್ವತ ಪ್ರಭಾವ ಬೀರಿವೆ.

ಇಂತಹದೇ ಮತ್ತೊಂದು ಕ್ಷೇತ್ರ ರೈತರ ಹೋರಾಟ. ರೈತ ಚಳವಳಿಯ ಉಗಮಸ್ಥಾನವೇ ಶಿವಮೊಗ್ಗ. ದಿವಂಗತ ಹೆಚ್.ಎಸ್. ರುದ್ರಪ್ಪ ಹಾಗು ಎನ್.ಡಿ. ಸುಂದರೇಶ್ ಅವರುಗಳು ರೈತ ಚಳವಳಿಗೆ ತಾತ್ವಿಕ ನೆಲೆ ಒದಗಿಸಿದ್ದರು. ರೈತ ಹೋರಾಟದ ಹಿನ್ನೆಲೆಯಲ್ಲಿ ನಡೆದ ಕಾಗೋಡು ಸತ್ಯಾಗ್ರಹ ಇತಿಹಾಸ ಪ್ರಸಿದ್ಧವಾದುದು.

ಶಿವಮೊಗ್ಗ ಸಾಹಿತ್ಯ, ಕಲೆ ಹಾಗು ಸಂಸ್ಕೃತಿಗಳ ವಿಚಾರದಲ್ಲಿ ರಾಷ್ಟ್ರದಲ್ಲೇ ಖ್ಯಾತಿಯಾದ ಜಿಲ್ಲೆ. 1927-28ರಿಂದ ಶಿವಮೊಗ್ಗದಲ್ಲಿ 'ಕರ್ನಾಟಕ ಸಂಘ' ತನ್ನ ಸಾಂಸ್ಕೃತಿಕ ಪ್ರಸಾರದ ಕಾರ್ಯವನ್ನು ನಿಷ್ಠೆಯಿಂದ ಮಾಡುತ್ತಾ ಬಂದಿದೆ. ಜಿಲ್ಲೆಯಾದ್ಯಂತ 45 ವಾರ್ಷಿಕ ಜಾತ್ರೆಗಳು ನಡೆಯುತ್ತಿದ್ದು ಅವೆಲ್ಲಾ ಸಾಂಸ್ಕೃತಿಕ ರಸಘಟ್ಟಗಳಾಗಿವೆ.

ಶಿವಮೊಗ್ಗಜಿಲ್ಲೆಯ ಸಾಹಿತ್ಯ ಪರಂಪರೆ ತುಂಬ ಪ್ರಾಚೀನವಾದುದು. ಕದಂಬ ವಂಶದ ಶಾಂತಿವರ್ಮನ ತಾಳಗುಂದ ಶಾಸನ ಪ್ರೌಢಸಂಸ್ಕೃತ ಕಾವ್ಯ. ಇದರ ಕವಿ ಕುಬ್ಜ. ಬಳ್ಳಿಗಾವೆಯ ಸೋಮೇಶ್ವರ ದೇವಾಲಯದ ಬಳಿ ಶಾಂತಿನಾಥನ ಶಾಸನವೊಂದಿದೆ. ಈತ 'ಸುಕುಮಾರಚರಿತ' ಎಂಬ ಕಾವ್ಯ ರಚಿಸಿದ್ದಾನೆ.

ಕೆಳದಿ ಅರಸರ ಕಾಲದ ತಿರುಮಲಭಟ್ಟ, ಒಂದನೇ ಬಸವಪ್ಪನಾಯಕ, ಗಂಗಾದೇವಿ ಹಾಗು ಲಿಂಗಣ್ಣ ಕವಿ ಈ ಕಾಲದ ಪ್ರಮುಖ ಕವಿಗಳಾಗಿದ್ದಾರೆ.

ರಾಷ್ಟ್ರಕವಿ ಕುವೆಂಪು ತೀರ್ಥಹಳ್ಳಿಯ ಕುಪ್ಪಳ್ಳಿಯವರು. ಆಧುನಿಕ ಕನ್ನಡ ಸಾಹಿತ್ಯಕ್ಕೆ ರಾಷ್ಟ್ರೀಯ ಮಾನ್ಯತೆ ತಂದುಕೊಟ್ಟ ಯುಗಪುರುಷರು. ಅವರು ಹುಟ್ಟಿದ ಮನೆಯನ್ನು ನ್ಯಾಯಮೂರ್ತಿ ಎನ್.ಡಿ. ವೆಂಕಟೇಶ್ ಅವರು ಕುವೆಂಪು ಪ್ರತಿಷ್ಠಾನದ ಮೂಲಕ

ವಸ್ತುಸಂಗ್ರಹಾಲಯವಾಗಿಸಿದ್ದಾರೆ. ನರಸಿಂಹ ಶಾಸ್ತ್ರೀ, ಎಸ್.ವಿ. ಪರಮೇಶ್ವರಭಟ್ಟ, ಡಾ. ಹಾ.ಮಾ. ನಾಯಕ, ಡಾ. ಯು.ಆರ್. ಅನಂತಮೂರ್ತಿ, ಡಾ. ಸುಮತೀಂದ್ರನಾಡಿಗ, ಪ್ರೊ. ಜಿ.ಎಸ್. ಶಿವರುದ್ರಪ್ಪ, ಪಿ. ಲಂಕೇಶ್, ಕೆ.ವಿ. ಸುಬ್ಬಣ್ಣ, ಎಂ.ಆರ್. ಶೇಷಗಿರಿರಾವ್, ಪತ್ರಕರ್ತ ಟಿ.ಎಸ್. ರಾಮಚಂದ್ರರಾವ್, ಕಡಿದಾಳು ಮಂಜಪ್ಪ, ಎಂ.ಕೆ. ಇಂದಿರಾ, ಮಲ್ಲಿಕಾ ಕಡಿದಾಳು, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಎನ್. ಪ್ರಹ್ಲಾದ್, ಡಾ. ಶ್ರೀಕಂಠಕೂಡಿಗೆ, ಮತ್ತೂರು ಕೃಷ್ಣಮೂರ್ತಿ, ಕೆಳದಿ ಗುಂಡಾಜೋಯಿಸ್, ಪಾಂಡುರಂಗ ಉಡುಪ, ನಾ. ಡಿಸೋಜಾ ಮೊದಲಾದವರು ತಮ್ಮ ಸಾಹಿತ್ಯ ಕೃತಿಗಳಿಂದ ರಾಜ್ಯದ ಕೀರ್ತಿ ಹೆಚ್ಚಿಸಿದ್ದಾರೆ. ಬಿ. ದೇವೇಂದ್ರಪ್ಪ, ಗೋವಿಂದ ದೀಕ್ಷಿತ, ಬಿ. ಶೇಷಪ್ಪ, ಹೆಚ್.ಆರ್. ಶಾಮಾಶಾಸ್ತ್ರಿ, ಶಿವಮೊಗ್ಗ ಸುಬ್ಬಣ್ಣ ಮೊದಲಾದ ಖ್ಯಾತ ಸಂಗೀತ ನಿರ್ದೇಶಕರನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಸಾಗರ ಹಾಗು ಸೊರಬದ ಗುಡಿಗಾರರು ಗಂಧ ಹಾಗು ದಂತ ಕೆತ್ತನೆಯ ವಸ್ತುಗಳಿಗೆ ಖ್ಯಾತರಾಗಿದ್ದಾರೆ. ಶಿಲ್ಪಿ ಕಾಶೀನಾಥ್ ಶಿವಮೊಗ್ಗದ ಕೀರ್ತಿಯನ್ನು ಎಲ್ಲೆಡೆ ಹರಡಿದ್ದಾರೆ. ಸಾಗರದ ಛಾಯಾಚಿತ್ರಕಾರರಾದ ಎಸ್. ಹನುಮಂತಜೋಯಿಸರು ರಾಷ್ಟ್ರೀಯ ಖ್ಯಾತಿ ಪಡೆದಿದ್ದಾರೆ.

ಶಿವಮೊಗ್ಗ ಜಿಲ್ಲೆ ಕೈಗಾರಿಕೆಗಳ ಉಗಮ ಸ್ಥಾನವೆಂದು ಹೇಳಲ್ಪಟ್ಟಿದೆ. 1923ರಲ್ಲೇ ಉಕ್ಕು ಮತ್ತು ಕಬ್ಬಿಣ ಕಾರ್ಖಾನೆ, 1938ರಲ್ಲಿ ಕಾಗದ ಕಾರ್ಖಾನೆ ಮತ್ತು 1948ರಲ್ಲಿ ಸಿಮೆಂಟು ಕಾರ್ಖಾನೆ ಪ್ರಾರಂಭವಾದವು. ಅನೇಕ ಖಾಸಗಿ ಸಕ್ಕರೆಕಾರ್ಖಾನೆಗಳು ಈ ಜಿಲ್ಲೆಯಲ್ಲಿ ಕಾರ್ಯಪ್ರವೃತ್ತವಾಗಿವೆ.

## ಉಪ್ಪಾರ ಸಮಾಜ

ಹೀಗೆ ಸಾಮಾಜಿಕ, ಆರ್ಥಿಕ ಹಾಗು ಸಾಂಸ್ಕೃತಿಕ ವಿಷಯಗಳಿಗೆ ರಾಜ್ಯದಲ್ಲೇ ಮಹತ್ವ ಪಡೆದಿರುವ ಶಿವಮೊಗ್ಗ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯ ಜನಸಂಖ್ಯೆಯಿಂದ ಗಣನೀಯವಲ್ಲದಿದ್ದರೂ ಮುಖ್ಯವಾಹಿನಿಯಲ್ಲಿ ಬೆರೆತ ಜನಾಂಗವಾಗಿದೆ.

ಶಿವಮೊಗ್ಗ ತಾಲ್ಲೂಕಿನಲ್ಲಿ ಶಿವಮೊಗ್ಗ ನಗರ, ಬೊಮ್ಮನಕಟ್ಟೆ, ಕಾಶೀಪುರ, ಕೋಟೀಗಂಗೂರು, ಸೋಮಿನಕೊಪ್ಪ, ಬೇಡರಹೊಸಳ್ಳಿ, ಹಾರ್ನಹಳ್ಳಿ, ಆಯನೂರು, ಚಿನ್ನಹಳ್ಳಿ, ಕುಂಸಿ, ಬಿಲ್ಲಹಳ್ಳಿ, ಗಾಜನೂರು, ವೀರಾಪುರ, ಹೊನ್ನಾಪುರ, ಅಗಸವಳ್ಳಿ ಕ್ಯಾಂಪ್, ಕೂಸ್ಕೂರು, ಉಂಬ್ಳೆಬೈಲ್, ಹೊಳೇಬೆನವಳ್ಳಿ, ಗೆಜ್ಜೇನಹಳ್ಳಿ ಹಾಗು ಗೋಪಶೆಟ್ಟಿಕೊಪ್ಪ ಮೊದಲಾದ ಕಡೆ 1,056 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 7,218 ಜನರಿದ್ದಾರೆ.

ಭದ್ರಾವತಿ ತಾಲ್ಲೂಕಿನ ಭದ್ರಾವತಿ ನಗರ, ಕೋಡೀಹಳ್ಳಿ, ಕಾರೇಹಳ್ಳಿ, ಕೂಡ್ಲಿಗೆರೆ, ಅತ್ತಿಗುಂದ, ಸೀತಾರಾಮಪುರ, ಅರಳೀಹಳ್ಳಿ, ಉಕ್ಕುಂದ, ಎಮ್ಮೆದೊಡ್ಡಿ, ಹೊಳೆಹೊನ್ನೂರು, ತಟ್ಟೇಹಳ್ಳಿ, ಮಾರಶೆಟ್ಟಿಹಳ್ಳಿ, ಅರಕೆರ ಹಾಗು ಬೊಮ್ಮನಕಟ್ಟೆ ಮೊದಲಾದ ಕಡೆ 1,092

ಉಪ್ಪಾರ ಕುಟುಂಬಗಳಿವೆ. ಆ ಮೂಲಕ ಭದ್ರಾವತಿ ತಾಲ್ಲೂಕಿನಲ್ಲಿ 7,036 ಜನ ಉಪ್ಪಾರರಿದ್ದಾರೆ.

ಹೊಸನಗರ ತಾಲ್ಲೂಕಿನ ಹೊಸನಗರ, ಕೆಂಚನಾಲ ಗ್ರಾಮಗಳಲ್ಲಿ 178 ಕುಟುಂಬಗಳಿದ್ದು ಅವುಗಳಲ್ಲಿ 1,157ರಷ್ಟು ಜನರಿದ್ದಾರೆ.

ಸಾಗರ ತಾಲ್ಲೂಕಿನಲ್ಲಿ ಸಾಗರ ಹಾಗು ತ್ಯಾಗರ್ತಿಗಳಲ್ಲಿ 240 ಕುಟುಂಬಗಳಿದ್ದು ಅವುಗಳಲ್ಲಿ 1,620 ಉಪ್ಪಾರ ಸಮುದಾಯದವರಿದ್ದಾರೆ.

ಸೊರಬ ತಾಲ್ಲೂಕಿನಲ್ಲಿ ಸೊರಬ ಟೌನ್, ಜಡೆ ಆನವಟ್ಟಿ, ಎಣ್ಣೆಕೊಪ್ಪ, ಭಾರಂಗಿ, ಮಲ್ಲಾಪುರ ಹಾಗು ನೆಗವಾಡಿಗಳಲ್ಲಿ 220 ಕುಟುಂಬಗಳಿದ್ದು ಅವುಗಳಲ್ಲಿ 1,430 ಉಪ್ಪಾರರಿದ್ದಾರೆ.

ಶಿಕಾರಿಪುರ ತಾಲ್ಲೂಕಿನಲ್ಲಿ ಶಿಕಾರಿಪುರ ಟೌನ್, ಬಗನಕಟ್ಟೆ, ವಿಟ್ಲಾಪುರ, ಉಡಗಣಿ, ಪುನೇದಹಳ್ಳಿ, ನರಸಾಪುರ, ಕುಸ್ಕೂರು, ಶಿರಾಳಕೊಪ್ಪ ಹಾಗು ನೇರಳಗಿ ಗ್ರಾಮಗಳಲ್ಲಿ 525 ಉಪ್ಪಾರ ಕುಟುಂಬಗಳಿದ್ದು ಅವುಗಳಲ್ಲಿ 3,420 ಉಪ್ಪಾರ ಬಂಧುಗಳಿದ್ದಾರೆ.

ಹೀಗೆ ಶಿವಮೊಗ್ಗ ಜಿಲ್ಲೆಯಲ್ಲಿ ಒಟ್ಟಾರೆ 3320 ಉಪ್ಪಾರ ಕುಟುಂಬಗಳಿದ್ದು, 21,875 ಉಪ್ಪಾರ ಜನಸಂಖ್ಯೆ ಇದೆ. ಶಿವಮೊಗ್ಗ ಜಿಲ್ಲೆಯ ಉಪ್ಪಾರರು ಕನ್ನಡ ಭಾಷೆಯನ್ನೇ ಬಳಸುತ್ತಾರೆ. ಇವರಿಗೆ ಯಾವುದೇ ಉಪನಾಮ ಕಂಡುಬರುತ್ತಿಲ್ಲ.

ರಾಜ್ಯದ ಇತರ ಕಡೆಯಂತೆ ಬಹಳಷ್ಟು ಉಪ್ಪಾರರು ಸಣ್ಣ ಹಿಡುವಳಿದಾರರು. ಬಹುಮಟ್ಟಿಗೆ ಕೃಷಿ ಕಾರ್ಮಿಕರೂ ಆಗಿದ್ದಾರೆ. ಪಟ್ಟಣ ಪ್ರದೇಶದಲ್ಲಿ ಅರ್ಧ ಭಾಗದಷ್ಟು ಜನ ಕೂಲಿ ಕಾರ್ಮಿಕರಾಗಿ ಬಹುಮಟ್ಟಿಗೆ ಕಟ್ಟಡನಿರ್ಮಾಣ ಹಾಗು ಬಡಗಿ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಜನಸಂಖ್ಯೆಯ ಶೇ. 80ರಷ್ಟು ಜನ ಅತ್ಯಂತ ಬಡವರು, ಅವರ ಆರ್ಥಿಕ ಸ್ಥಿತಿಯ ಬಗ್ಗೆ ಒಂದು ಚಿತ್ರಣ ಹೀಗಿದೆ : ಶಿವಮೊಗ್ಗದಲ್ಲಿ ಮೂರು ಜನ ತರಕಾರಿ ವ್ಯಾಪಾರಸ್ಥರು ಇದ್ದರೆ, ಭದ್ರಾವತಿಯಲ್ಲಿ ಒಬ್ಬರು ತರಕಾರಿ ಮಂಡಿಯಿಟ್ಟುಕೊಂಡಿದ್ದಾರೆ. ಭದ್ರಾವತಿಯಲ್ಲಿ 5 ವೀಳ್ಯದೆಲೆ ವ್ಯಾಪಾರಿಗಳು, ಹೊಳೆಹೊನ್ನೂರಿನಲ್ಲಿ 15 ಹೂವಿನ ವ್ಯಾಪಾರಿಗಳಿದ್ದಾರೆ. ಜನಸಂಖ್ಯೆಯ ಶೇ. 5ರಷ್ಟು ಜನ ಆರ್ಥಿಕವಾಗಿ ಅನುಕೂಲಸ್ಥರು. ಶೇ. 15ರಷ್ಟು ಮಧ್ಯಮ ವರ್ಗದವರು. ಜಿಲ್ಲೆಯಲ್ಲಿ ಈ ಸಮುದಾಯಕ್ಕೆ ಸೇರಿದ ಒಬ್ಬರು ರೈಸ್‌ಮಿಲ್ ಮಾಲೀಕರಿದ್ದಾರೆ. ಕೆಲವರು ಭತ್ತದ ವ್ಯಾಪಾರ ಮಾಡುತ್ತಾರೆ.

ಶಿವಮೊಗ್ಗ ಜಿಲ್ಲೆಯ ಉಪ್ಪಾರ ಜನಾಂಗದಲ್ಲಿ ಸಾಕ್ಷರತೆಯ ಪ್ರಮಾಣ ಜಿಲ್ಲೆಯ ಸರಾಸರಿಗಿಂತ ಅತ್ಯಂತ ಕಡಿಮೆ ಪ್ರಮಾಣದಲ್ಲಿದೆ. ನಗರ ಪ್ರದೇಶದಲ್ಲಿ ಶೇಕಡ 60ರಷ್ಟು ಸಾಕ್ಷರರು ಇದ್ದರೆ ಗ್ರಾಮೀಣ ಪ್ರದೇಶದಲ್ಲಿ ಅದು ಶೇ. 40ಕ್ಕಿಂತ ಕಡಿಮೆಯಿದೆ. ಗ್ರಾಮಾಂತರ ಪ್ರದೇಶದಲ್ಲಿ ಹೆಣ್ಣುಮಕ್ಕಳು ಶಿಕ್ಷಣ ಸೌಕರ್ಯದಿಂದ ವಂಚಿತರಾಗಿದ್ದಾರೆ.

ಈ ಸಮಾಜದ ಕೆಲವು ಹಿರಿಯ ಸರ್ಕಾರಿ ಅಧಿಕಾರಿಗಳೆಂದರೆ ದಿ. ಸಿ.ಎಚ್. ದಾಸಪ್ಪ, ಅಸಿಸ್ಟೆಂಟ್ ಕಮೀಷನರ್, ಚೀಫ್ ಇಂಜಿನಿಯರ್ ಹಳದಪ್ಪ, ಎಕ್ಸಿಕ್ಯೂಟೀವ್ ಇಂಜಿನಿಯರ್ ವೆಂಕಟದಾಸಪ್ಪ, ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಸಹಾಯಕ ಆಯುಕ್ತರಾದ ಡಿ. ಜಗನ್ನಾಥ್

ಸಾಗರ್ ಹಾಗು ಜಿ. ಶ್ರೀಧರ್, ಕಂದಾಯ ಇಲಾಖೆಯಿಂದ ನಿವೃತ್ತರಾದ ಈಶ್ವರಪ್ಪ, ಆರ್.ಎಫ್.ಓ. ಶಿವಮೂರ್ತಿ, ಚಂದ್ರಕಾಂತ ಉಪ್ಪಾರ್, ರೇಷ್ಮೆ ಇಲಾಖೆಯಲ್ಲಿ ಹಿರಿಯ ಸಂಶೋಧನಾಧಿಕಾರಿಯಾಗಿರುವ ಜೆ.ಪಿ. ರೇಣುಕೇಶ್ವರಪ್ಪ ಪ್ರಮುಖರು. ಅಂದರೆ ಅತ್ಯಲ್ಪ ಸಂಖ್ಯೆಯಲ್ಲಿ ಮಾತ್ರ ಅಧಿಕಾರಿ ವರ್ಗದರವನ್ನು ಕಾಣಬಹುದು. ಇತರೆ ಹುದ್ದೆಗಳಲ್ಲೂ ಕೂಡ ಅವರ ಸಂಖ್ಯೆ ಗಣನೀಯವಾಗಿಲ್ಲ. ಚಿನ್ನಪ್ಪರೆಡ್ಡಿ ಹಿಂದುಳಿದ ಆಯೋಗದ ಅನುಷ್ಠಾನದಿಂದ ಈ ವರ್ಗಕ್ಕೆ ಸರ್ಕಾರಿ ನೌಕರಿಯಲ್ಲಿ ಸ್ವಲ್ಪಮಟ್ಟಿನ ಅವಕಾಶಗಳು ದೊರೆಯುತ್ತಿರುವುದು ಸಂತಸದ ವಿಚಾರ.

ಈ ಸಮುದಾಯಕ್ಕೆ ಸೇರಿದ ಹನ್ನೊಂದು ಜನ ವೈದ್ಯರನ್ನು ಗುರುತಿಸಲಾಗಿದೆ. ಮೂಲತಃ ಶಿವಮೊಗ್ಗ ಜಿಲ್ಲೆಯವರಾದ ಇವರು ವಿದ್ಯಾಭ್ಯಾಸದ ನಂತರ ದೊಡ್ಡ ಪಟ್ಟಣದಲ್ಲಿ ನೆಲೆಸಿದ್ದಾರೆ. ಆದರೆ ಅವರ ಮೂಲನೆಲೆಯನ್ನು 'ಶಿವಮೊಗ್ಗ ಜಿಲ್ಲೆ' ಎಂದು ಗುರುತಿಸಲಾಗಿದೆ. ಡಾ॥ ಡಿ.ಬಿ. ಸೂರ್ಯನಾರಾಯಣ, ಡಾ॥ ಮಂಜುನಾಥ್, ಡಾ॥ ಶೋಭ, ಡಾ॥ ಎಸ್. ರಮೇಶ್, ಡಾ॥ ಗಾಯತ್ರಿದೇವಿ, ಡಾ॥ ಪುಟ್ಟಪ್ಪ, ಡಾ॥ ರವಿ, ಡಾ॥ ರೇಣುಕಮ್ಮ, ಡಾ॥ ಪುರುಷೋತ್ತಮ ಅವರುಗಳನ್ನು ವೈದ್ಯಕೀಯ ಕ್ಷೇತ್ರದಲ್ಲಿ ಹೆಸರಿಸಬಹುದು.

ಈ ಜಿಲ್ಲೆಯಲ್ಲಿ ಎಂಟು ಜನ ಇಂಜಿನಿಯರ್‌ಗಳಿದ್ದಾರೆ. ಅವರು ವೃತ್ತಿಪರರಾಗಿದ್ದಾರೆ. ಹಾಗೆಯೇ ಜಿಲ್ಲೆಯಲ್ಲಿ ಹತ್ತು ಜನ ವಕೀಲ ವೃತ್ತಿ ಕೈಗೊಂಡಿದ್ದಾರೆ. ಉಪ್ಪಾರ ಸಮುದಾಯದವರು ಶಿವಮೊಗ್ಗ ಜಿಲ್ಲೆಯಲ್ಲಿ ಶ್ರೀಮಠದ ಆಶ್ರಯದಲ್ಲಿ ಶ್ರೀ ಶ್ರೀ ಲೇಪಾಕ್ಷಸ್ವಾಮಿ ವಿದ್ಯಾಸಂಸ್ಥೆ, ಭದ್ರಾವತಿ ತಾಲ್ಲೂಕು ಅತ್ತಿಗುಂದ ಹಾಗು ಸೀತಾರಾಮಪುರಗಳಲ್ಲಿ ಪ್ರೌಢಶಾಲೆ ಹಾಗು ಪದವಿ ಪೂರ್ವ ಕಾಲೇಜು ನಡೆಸುತ್ತಿದೆ.

ಉಪ್ಪಾರ ಸಮುದಾಯಕ್ಕೆ ಸೇರಿರುವ ಆಸ್ಪತ್ರೆ ಹಾಗು ಇತರೆ ಪ್ರಮುಖ ಸಂಸ್ಥೆಗಳು ಜಿಲ್ಲೆಯಲ್ಲಿ ಕಾಣಬರುತ್ತಿಲ್ಲ. ಉಪ್ಪಾರ ಸಂಘದ ಆಶ್ರಯದಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ವಿದ್ಯಾರ್ಥಿನಿಲಯವೊಂದು ಕಾರ್ಯಾಚರಣೆ ಮಾಡುತ್ತಿದೆ.

ಈ ಸಮುದಾಯಕ್ಕೆ ಸೇರಿದ ಕಲಾವಿದರೆಂದರೆ ವಿಗ್ರಹ ಕೆತ್ತನೆಯಲ್ಲಿ ಶಿವಮೊಗ್ಗದ ಆನಂದ ಬಿನ್ ಶಂಕರಪ್ಪ, ಹೊಳೆಹೊನ್ನೂರಿನ ಮಂಜುನಾಥ್ ಬಿನ್ ಕೆಂಚಪ್ಪ ಅವರುಗಳು.

ಶಿವಮೊಗ್ಗದ 'ಕ್ರಾಂತಿದೀಪ' ದೈನಂದಿನ ಪತ್ರಿಕೆಯ ಸಂಪಾದಕರಾದ ಎನ್. ಮಂಜುನಾಥ್ ಹಾಗು ಪೊಲೀಸ್ ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ಲೋಕೇಶ್ ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದಾರೆ. ಡೊಳ್ಳು ಕುಣಿತದ ಯುವ ಕಲಾವಿದರು ಶಿಕಾರಿಪುರ, ಹಾರ್ನಹಳ್ಳಿ ಹಾಗು ಇತರ ಕಡೆಗಳಿದ್ದರೆ, ಅತ್ತಿಗುಂದದಲ್ಲಿ ಸುಗಮ ಸಂಗೀತ ತಂಡವಿದೆ.

ಈ ಸಮುದಾಯದಲ್ಲಿ ಈಗೀಗ ರಾಜಕೀಯ ನಾಯಕರು ಕಾಣಬರುತ್ತಿದ್ದಾರೆ. ಅದಕ್ಕೆ ಕಾರಣ ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿ ಸೌಲಭ್ಯ ದೊರಕಿ ನಾಯಕತ್ವ ಬೆಳೆಯುತ್ತಿದೆ.

ಈ ಜಿಲ್ಲೆಯವರಾದ ದಿ। ಸಿ.ಹೆಚ್. ದಾಸಪ್ಪ, ರಿ। ಅಸಿಸ್ಟೆಂಟ್ ಕಮೀಷನರ್ ಎಸ್. ಹಳದಪ್ಪ, ರಿ। ಚೀಫ್ ಇಂಜಿನಿಯರ್ ದಿ। ಅತ್ತಿಗುಂದ ರಾಮಣ್ಣ ಮಾಜಿ ಭದ್ರಾವತಿ ತಾಲ್ಲೂಕು ಅಭಿವೃದ್ಧಿ ಮಂಡಳಿ ಅಧ್ಯಕ್ಷರು, ಎ. ಸಿದ್ದಪ್ಪ ಮಾಜಿ ಅಧ್ಯಕ್ಷರು, ತಾಲ್ಲೂಕು ಅಭಿವೃದ್ಧಿ ಮಂಡಳಿ ಚನ್ನಗಿರಿ, ದಿ। ಯು. ಹಾಲಪ್ಪ ಮಾಜಿ ಅಧ್ಯಕ್ಷರು ತಾಲ್ಲೂಕು ಪಂಚಾಯ್ತಿ ಚನ್ನಗಿರಿ, ದಿ। ಕೆ.ಆರ್. ಕೆಂಚಪ್ಪ, ಯು. ದಾಸಪ್ಪ, ಕೆ. ಕೃಷ್ಣಪ್ಪ ಮುಂತಾದ ಹಿರಿಯರು ಈ ಸಮಾಜಕ್ಕೆ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಅವರು ಸದಾ ಸ್ಮರಣೀಯರು.

ಅರಳೀಹಳ್ಳಿಯಲ್ಲಿ ಕೆ. ಚಂದ್ರಶೇಖರಪ್ಪ ಅವರು ಜಿಲ್ಲಾ ಪಂಚಾಯತ್ ಸದಸ್ಯರಾಗಿದ್ದಾರೆ. ಶಿವಮೊಗ್ಗ ತಾಲ್ಲೂಕಿನ ಗ್ರಾಮಪಂಚಾಯತ್ ಸದಸ್ಯರೆಂದರೆ ಕೋಟೆಗಂಗೂರು ಗ್ರಾಮಪಂಚಾಯತ್ ಅಧ್ಯಕ್ಷರಾದ ಶೇಖರಪ್ಪ, ಗಾಜನೂರು ಪಂಚಾಯತ್ ಅಧ್ಯಕ್ಷರಾದ ಕೆ.ವೈ. ಪರಮೇಶಿ, ಪಂಚಾಯ್ತಿ ಸದಸ್ಯರಾದ ಕೆ.ವೈ. ಕರಿಯಪ್ಪ, ಕುಂಸಿ ಗ್ರಾಮಪಂಚಾಯತ್ ಉಪಾಧ್ಯಕ್ಷರಾದ ಹುಲಗಪ್ಪ, ಸದಸ್ಯರಾದ ಹೊಳೇಬೆನವಳ್ಳಿ ಯು. ಮಂಜಪ್ಪ ಅವರುಗಳನ್ನು ಹೆಸರಿಸಬಹುದು.

ಭದ್ರಾವತಿ ತಾಲ್ಲೂಕಿನಲ್ಲಿ ಅತ್ತಿಗುಂದ ಗ್ರಾಮಪಂಚಾಯತ್ ಅಧ್ಯಕ್ಷರಾದ ಕೆ. ಗೋಪಾಲಪ್ಪ, ಅದರ ಸದಸ್ಯರಾದ ಗೋವಿಂದಪ್ಪ, ಮತ್ತೊಬ್ಬ ಸದಸ್ಯರಾದ ಲಲಿತಮ್ಮ, ಅಂತರಗಂಗೆ ಸದಸ್ಯರಾದ ಶೇಷಪ್ಪ, ತಟ್ಟೇಹಳ್ಳಿ ಗ್ರಾಮಪಂಚಾಯತ್ ಉಪಾಧ್ಯಕ್ಷರಾದ ಮುದ್ದವೀರಪ್ಪ, ಸದಸ್ಯರಾದ ಲಕ್ಷ್ಮಮ್ಮ, ಹೊಳೆಹೊನ್ನೂರು ಗ್ರಾಮಪಂಚಾಯತ್‌ನ ಸದಸ್ಯರಾದ ಪ್ರೇಮ, ಸದಸ್ಯರಾದ ಅಸಗೂಡು ಕೆಂಚಪ್ಪ ಹಾಗು ಜಗನ್ನಾಥ್ ಅವರುಗಳನ್ನು ಹೆಸರಿಸಬಹುದು.

ಶಿಕಾರಿಪುರ ತಾಲ್ಲೂಕಿನ ಯು. ತಿಪ್ಪಣ್ಣ, ಹವಳಪ್ಪ, ನಾಗರಾಜಪ್ಪ, ಉಡಗಣಿ ಶೇಖರಪ್ಪ, ನಿರ್ವಾಣಿ ಸಿದ್ದಪ್ಪ, ಸುಭಾಷಚಂದ್ರ, ಮಂಜಪ್ಪಬಗಟ್ಟೆ, ಪುನೇದಹಳ್ಳಿ ಗ್ರಾಮಪಂಚಾಯತ್ ಸದಸ್ಯರಾದ ಹನುಮಂತಪ್ಪ ಹಾಗು ಪ್ರೇಮ ಈ ಸಮುದಾಯಕ್ಕೆ ಸೇರಿದ ಗಣ್ಯರು ಮತ್ತು ಸಮಾಜದ ಹಿತಚಿಂತಕರು.

ಸೊರಬ ತಾಲ್ಲೂಕಿನ ಎಣ್ಣೆಕೊಪ್ಪ ಗ್ರಾಮಪಂಚಾಯತ್‌ನ ಸದಸ್ಯ ಬಿ. ಬಸವಣ್ಣೆಪ್ಪ, ಜಾರಂಗಿ ಗ್ರಾಮಪಂಚಾಯತ್‌ನ ಸದಸ್ಯ ಹನುಮಂತಪ್ಪ ಬಿನ್ ಫಕೀರಪ್ಪ ಬಂಗೇರ ಅವರು ಉಪ್ಪಾರ ಸಮುದಾಯಕ್ಕೆ ಸೇರಿದವರಾಗಿದ್ದಾರೆ.

ಈ ಸಮುದಾಯಕ್ಕೆ ಸೇರಿದ ಪ್ರಮುಖ ಮುಖಂಡರು ನಗರಸಭೆಯ ಮಾಜಿ ಸದಸ್ಯರಾದ ಎಸ್.ಟಿ. ಹಾಲಪ್ಪ ಬನ್ನಿಕೆರೆ, ನಾರಾಯಣ, ಎಸ್.ಆರ್. ಸತ್ಯನಾರಾಯಣ, ಶಿವಮೊಗ್ಗ ಪುರಸಭೆಯ ಮಾಜಿ ಅಧ್ಯಕ್ಷರಾದ ಹೊರಟ್ಟಿ ರಾಮಣ್ಣ, ಭದ್ರಾವತಿಯ ಎಪಿಎಂಸಿಯ ಮಾಜಿ ಅಧ್ಯಕ್ಷರಾದ ಹೆಚ್. ಕೃಷ್ಣಪ್ಪ, ಜಿಲ್ಲಾಪಂಚಾಯತ್‌ನ ಮಾಜಿ ಸದಸ್ಯರಾದ ಗಾಜನೂರಿನ ಕೆ.ವೈ. ಗಣೇಶ್ ಅವರುಗಳನ್ನು ಈ ಸಂದರ್ಭದಲ್ಲಿ ನೆನೆಯಬೇಕು.

ಉಪ್ಪಾರಸಮಾಜಕ್ಕೆ ಮಾರ್ಗದರ್ಶನ ನೀಡುತ್ತ ಸಂಘಟನೆ ಕೈಗೊಂಡವರಲ್ಲಿ ಈ ಕೆಳಗಿನವರು ಪ್ರಮುಖರು. ಎಂಬತ್ಮೂರು ವರ್ಷದ ಹಿರಿಯರಾದ ಯು. ದಾಸಪ್ಪನವರು ಉತ್ತಮ ಸಂಘಟನಾಕಾರರು, ಭಾಷಣಕಾರರು ಹಾಗೂ ಕ್ರಿಯಾಶೀಲರು. ಸಮಾಜದ ಬಗ್ಗೆ ಹಗಲಿರುಳು ಚಿಂತಿಸುವವರು. ಹೊಳೆಹೊನ್ನೂರಿನ ಇವರು ಜಿಲ್ಲೆಯ ಉಪ್ಪಾರ ಸಂಘದ ಗೌರವಾಧ್ಯಕ್ಷರು, ಉಪ್ಪಾರ ಸಂಘದ ಜಿಲ್ಲಾ ಅಧ್ಯಕ್ಷರಾದ ಎಸ್.ಟಿ. ಹಾಲಪ್ಪ ದಾನಿಗಳು, ಸಮಾಜದ ಹಿತಚಿಂತಕರು ಹಾಗು ರಾಜಕಾರಣಿಗಳು. ಟಿ. ಕುಮಾರಸ್ವಾಮಿ ಅವರು ಶ್ರೀ ದುರ್ಗಾ ಪರಮೇಶ್ವರಿ ದೇವಸ್ಥಾನದ ಕಾರ್ಯದರ್ಶಿಗಳು, ದಾನಿಗಳು. ದುರ್ಗಾ ಪರಮೇಶ್ವರಿ ದೇವಸ್ಥಾನದ ಅಧ್ಯಕ್ಷರಾದ ಹೆಚ್.ಎನ್. ರಾಮಪ್ಪನವರು ದಾನಿಗಳು ಹಾಗು ಸಮಾಜದ ನೇತಾರ. ನಿವೃತ್ತ ಡೆಪ್ಯುಟಿ ತಹಶೀಲ್ದಾರ್ ಯು. ಗಂಗಪ್ಪ, ಶಿವಮೊಗ್ಗ, ಇವರು ದಾನಿಗಳು ಹಾಗು ಸಮಾಜದ ಹಿತಚಿಂತಕರು. ಜಿಲ್ಲಾ ಸಂಘದ ಖಜಾಂಚಿ ಎಸ್.ಆರ್. ಸತ್ಯನಾರಾಯಣ, ಪ್ರಧಾನ ಕಾರ್ಯದರ್ಶಿ ಕೆ. ಈಶ್ವರಪ್ಪ, ಉಪಾಧ್ಯಕ್ಷರಾದ ಬಸವಣ್ಣೆಪ್ಪ ಮತ್ತೊಬ್ಬ ಉಪಾಧ್ಯಕ್ಷರಾದ ನಾಗರಾಜಪ್ಪ, ಕಾರ್ಯದರ್ಶಿ ಪೂಜಾರ್ ತಿಪ್ಪಣ್ಣ, ಮಾಜಿ ಕಾರ್ಯದರ್ಶಿ ಹೆಚ್. ರಾಮಪ್ಪ, ಕುಂಸಿಯ ಎಸ್. ಸಂಜೀವಪ್ಪ, ಭದ್ರಾವತಿ ವೀಳ್ಯದೆಲೆ ವ್ಯಾಪಾರಿ ಹೆಚ್. ನಂಜುಂಡಪ್ಪ, ಹೊನ್ನೇಮರದ ರಂಗಪ್ಪ, ವಿ.ಡಿ.ಎಸ್.ನ ನೌಕರರಾದ ಎಸ್.ಕೆ. ಸತ್ಯನಾರಾಯಣ, ಅತ್ತಿಗುಂದದ ಪಂಚಾಯತ್‌ನ ಮಾಜಿ ಅಧ್ಯಕ್ಷರಾದ ಗೋಪಾಲಪ್ಪ ಹಾಗು ಅದೇ ಗ್ರಾಮದ ಕರಿಯಪ್ಪ ಮಾಜಿ ಪ್ರಧಾನರಾದ ಗೋವಿಂದಪ್ಪ ಹಾಗು ಹೊನ್ನಾಪುರದ ಕೆ.ವೈ. ಕರಿಯಪ್ಪ ಮೊದಲಾದವರು ಈ ಸಮಾಜಕ್ಕೆ ಅನೇಕ ಸೇವೆ ಸಲ್ಲಿಸಿದ್ದಾರೆ. ಅಗತ್ಯವಿದ್ದಾಗ ಎಲ್ಲ ನೆರವು ನೀಡಿದ್ದಾರೆ. ಹೆಚ್. ರಾಮಪ್ಪ ಅವರು ಸಾಹಿತ್ಯಾಸಕ್ತರು, ವಾಸ್ತುಶಾಸ್ತ್ರದಲ್ಲಿ ಪ್ರವೀಣರು.

ಶಿವಮೊಗ್ಗ ಜಿಲ್ಲೆಯಲ್ಲಿ 1953ರಿಂದಲೂ ಉಪ್ಪಾರ ಸಂಘ ಅಸ್ತಿತ್ವದಲ್ಲಿದೆ. ಅದರ ಪ್ರಸ್ತುತ ಅಧ್ಯಕ್ಷರು ಶಿವಮೊಗ್ಗದ ಎಸ್.ಟಿ. ಹಾಲಪ್ಪ, ಪ್ರಧಾನ ಕಾರ್ಯದರ್ಶಿ ಕೆ. ಈಶ್ವರಪ್ಪ ಹಾಗು ಗೌರವಾಧ್ಯಕ್ಷರು ಯು. ದಾಸಪ್ಪ, ಹೊಳೆಹೊನ್ನೂರು.

ಈ ಸಂಘಕ್ಕೆ ಈಗಾಗಲೇ ಎಂಟು ಜನ ಅಧ್ಯಕ್ಷರು ಆಗಿಹೋಗಿದ್ದಾರೆ. ಅವರುಗಳೆಂದರೆ ಶಿವಮೊಗ್ಗದ ಗೌಡ್ರ ಬೈರಪ್ಪ, ಭದ್ರಾವತಿಯ ಎನ್. ಸೋಮಯ್ಯ, ಅತ್ತಿಗುಂದದ ಜಿ. ರಾಮಪ್ಪ, ಇಟ್ಟಿಗೆ ರಂಗಪ್ಪ, ದೇವರಹಳ್ಳಿಯ ಎ. ಸಿದ್ಧಪ್ಪ, ದೇವರಹಳ್ಳಿ ಡಿ.ಎಸ್. ರಾಮಪ್ಪ, ಜಿ. ರಾಮಪ್ಪ ಹಾಗು ನಲ್ಲೂರು ಹಾಲಪ್ಪ. ಕಡಿದಾಳು ಮಂಜಪ್ಪನವರು ಕೊಡಮಾಡಿದ ನಿವೇಶನದಲ್ಲಿ ಶಿವಮೊಗ್ಗೆಯಲ್ಲಿ ವಿದ್ಯಾರ್ಥಿನಿಲಯವೊಂದು ಮೇಲೆದ್ದಿತು. ಶ್ರೀ ಡಿ.ಎಸ್. ರಾಮಪ್ಪನವರು ಅಧ್ಯಕ್ಷರಾಗಿದ್ದಾಗ ಭೋಜನಶಾಲೆ ಮತ್ತು ಶೌಚಾಲಯಗಳನ್ನು ಅಲ್ಲಿ ಸಜ್ಜುಗೊಳಿಸಿದರು.

ಶಿವಮೊಗ್ಗ ಜಿಲ್ಲೆಯ ಉಪ್ಪಾರ ಬಂಧುಗಳ ಬೇಡಿಕೆ ಎಂದರೆ ಜಿಲ್ಲೆಗೆ ಒಂದು ಸಮುದಾಯ ಭವನ ಹಾಗೂ ಜಿಲ್ಲಾಮಟ್ಟದ ಸಹಕಾರ ಸಂಘ.

ಉಪ್ಪಾರ ಸಮಾಜವನ್ನು ಗ್ರಾಮಮಟ್ಟದಿಂದ ಸಂಘಟಿಸಬೇಕು. ರಾಜ್ಯಮಟ್ಟದಲ್ಲಿ ಉಪ್ಪಾರ ಸಂಘವಿದೆಯೇ ಎಂಬ ಪರಿಸ್ಥಿತಿಯಿದೆ. ವ್ಯಕ್ತಿ ಪ್ರತಿಷ್ಠೆಯ ಕಾಳಗದಿಂದ ಈ ಸಮಾಜ ನೊಂದಿದೆ. ಪೂಜ್ಯ ಶ್ರೀ ಪುರುಷೋತ್ತಮಾನಂದಪುರಿ ಸ್ವಾಮೀಜಿ ಅವರು ಈಗ ಈ ಸಮಾಜದ ಆಪದ್ಬಾಂದವರು. ಅವರು ಕೃಪೆ ಮಾಡಿ ಇವರನ್ನೆಲ್ಲಾ ಒಗ್ಗೂಡಿಸಬೇಕು. ಹಿಂದಿನ ಪೂಜ್ಯಶ್ರೀ ಲೇಪಾಕ್ಷ ಸ್ವಾಮಿಗಳಂತೆ ಅವರು ಒಡೆದ ಮನಸ್ಸುಗಳನ್ನು ಬೆಸೆಯಬೇಕು.

ಈ ಸಮಾಜ ತನ್ನ ಗಮನವನ್ನು ವಿದ್ಯೆಗೆ ಕೇಂದ್ರೀಕರಿಸಬೇಕು. ವಿಶೇಷವಾಗಿ ಹೆಣ್ಣುಮಕ್ಕಳಲ್ಲಿ ವಿದ್ಯೆಯ ಮಹತ್ವದ ಅರಿವಾಗಬೇಕು. ಸರ್ಕಾರವು ಸಮಾಜ ಕಲ್ಯಾಣ ಇಲಾಖೆಯ ಮೂಲಕ ಕೊಡುವ ಸೌಲಭ್ಯ ಬಳಸಿಕೊಂಡು ಜಿಲ್ಲಾಮಟ್ಟದಲ್ಲಿ ವಸತಿನಿಲಯ ಪ್ರಾರಂಭಿಸಬೇಕು.

ಮೇಲ್ವರ್ಗದ ಸಮಾಜ ಪ್ರಗತಿಯಾಗುತ್ತಿರುವುದರ ಜೊತೆಗೆ ಅದರೊಡನೆ ಇರುವ ಅನೇಕ ಹಿಂದುಳಿದ ವರ್ಗಗಳು ಇಂದು ಮುಂಚೂಣಿಗೆ ಬರಬೇಕಾಗಿದೆ. ಗೊಲ್ಲ ಹಾಗು ಬೆಸ್ತರಂತಹ ಸಮಾಜವನ್ನು ಉದಾಹರಣೆಗೆ ತೆಗೆದುಕೊಳ್ಳಬಹುದು. ಇದಕ್ಕೆ ಕಾರಣ ಅವರು ಪಡೆದುಕೊಂಡ 'ರಾಜಕೀಯ ಶಕ್ತಿ'. ಉಪ್ಪಾರ ಜನಾಂಗ ದೃಢ ನಿರ್ಧಾರ ಮಾಡಿಕೊಂಡು ರಾಜ್ಯಮಟ್ಟದಲ್ಲಿ ರಾಜಕೀಯ ಶಕ್ತಿ ಪಡೆದುಕೊಳ್ಳಬೇಕು. ಆಗ ಸರ್ಕಾರಕ್ಕೆ ಅವರ ಮಾತು ಕೇಳಿಸುತ್ತದೆ. ಇದಕ್ಕಾಗಿ ಅವರೇ ಹಳ್ಳಿಯ ಮಟ್ಟದಿಂದ ರಾಜ್ಯಮಟ್ಟದವರೆಗೆ ಸಂಘಟನೆ ಅವಶ್ಯಕ. ಇಂತಹ ಕನಸು ಕಂಡವರು ಶ್ರೀ ಡಿ.ಎಸ್. ರಾಮಪ್ಪ ಅವರು. ಅವರ ಹೆಸರಿನಲ್ಲಿ ಈಗ ಹಚ್ಚಿರುವ 'ಉಪ್ಪಾರ ಹಣತೆ' ಈ ಸಮಾಜಕ್ಕೆ ಶಾಶ್ವತ ಬೆಳಕು ನೀಡಲಿ.

**ಮಾಹಿತಿಸಂಗ್ರಹ : *ಕೆ. ಈಶ್ವರಪ್ಪ***






# * ದಾವಣಗೆರೆ ಜಿಲ್ಲೆ

## ಐತಿಹಾಸಿಕ ಹಿನ್ನೋಟ

1997ರ ಜಿಲ್ಲಾ ಪುನರ್‌ವಿಂಗಡಣೆಯಿಂದಾಗಿ ದಾವಣಗೆರೆ ಜಿಲ್ಲೆ ಜನ್ಮತಾಳಿತು. ಈ ಜಿಲ್ಲೆ ದಾವಣಗೆರೆ, ಹರಿಹರ, ಜಗಳೂರು, ಹರಪನಹಳ್ಳಿ, ಚನ್ನಗಿರಿ ಮತ್ತು ಹೊನ್ನಾಳಿ ತಾಲ್ಲೂಕುಗಳನ್ನು ಒಳಗೊಂಡಿದೆ. ದಾವಣಗೆರೆ ಕರ್ನಾಟಕದ ಪ್ರಮುಖ ನಗರಗಳಲ್ಲಿ ಒಂದಾಗಿದೆ. ಕೈಗಾರಿಕೆಗೆ ಪ್ರಸಿದ್ಧವಾಗಿದೆ. ಇಲ್ಲಿ ಹತ್ತಿ ಮತ್ತು ತೈಲೋತ್ಪಾದನಾ ಕಾರ್ಖಾನೆಗಳಿವೆ. ಉತ್ತಮ ರೈಲು ಮತ್ತು ವಾಹನ ಸಂಪರ್ಕವುಳ್ಳ ಮಾರ್ಗಗಳಿದ್ದು, ಸಾರಿಗೆ ಸಂಪರ್ಕ ವ್ಯವಸ್ಥಿತವಾಗಿದ್ದು, ವ್ಯಾಪಾರ ವಾಣಿಜ್ಯಾಭಿವೃದ್ಧಿಗೆ ನೆರವಾಗಿವೆ. ಕಂಬಳಿ ಮತ್ತು ವನಸ್ಪತಿ ಉತ್ಪಾದನೆಗೂ ಇದು ಪ್ರಸಿದ್ಧವಾಗಿದೆ. ದಾವಣಗೆರೆಗೆ ಒಂದು ಸಾವಿರ ವರ್ಷಗಳಿಗಿಂತಲೂ ಹೆಚ್ಚಿನ ಭವ್ಯವಾದ ಇತಿಹಾಸವಿದೆ. 'ದಾವಣಗೆರೆ' ಎಂಬ ಹೆಸರು ಹೇಗೆ ಬಂದಿತೆಂಬುದಕ್ಕೆ ಸಾಕಷ್ಟು ಚರ್ಚೆ ನಡೆದಿದೆ. ದಾವ-ಅಡಿವಿ-ಕಾಡು-ಕೆರೆ ಇಂದಿನ ಜಾಲಿ ನಗರದ ಬಳಿಯಿದ್ದ ದೊಡ್ಡಕೆರೆಯಿಂದಾಗಿ ಈ ಊರಿಗೆ ಈ ಹೆಸರು ಬಂದಿತೆಂದು ಒಂದು ವಾದ. ದನಗಳನ್ನು ಕಟ್ಟುವ 'ದವಣೆಕಟ್ಟು' ಎಂಬ ಶಬ್ದದಿಂದ 'ದಾವಣಗೆರೆ' ಬಂದಿದೆಯಂತೆ ! ಬೇತೂರಿನ ವರ್ತಕ ದೇವಿಸೆಟ್ಟಿ ಎನ್ನುವ ಶಿವಭಕ್ತ ತ್ರಿಭುವನೇಶ್ವರ ದೇವರಿಗೆ ದಾನ ನೀಡಿದ ಹೊಲಗಳ ಸ್ಥಳವೇ 'ದಾವಣಗೆರೆ' ಎನ್ನಲಾಗಿದೆ.

2001ರ ಜನಸಂಖ್ಯೆಯ ಪ್ರಕಾರ ದಾವಣಗೆರೆ ಜಿಲ್ಲೆಯ ಒಟ್ಟು ಜನಸಂಖ್ಯೆ 17,89,693. ಅದರಲ್ಲಿ ಪುರುಷರು 9,17,320,

ಸ್ತ್ರೀಯರು 8,72,373. ಜಿಲ್ಲೆಯ ಇಂದಿನ ಸಾಕ್ಷರತೆಯ ಪ್ರಮಾಣ ಶೇ. 67.67. ಪುರುಷರ ಸಾಕ್ಷರತೆ ಶೇ. 76.44, ಸ್ತ್ರೀಯರ ಸಾಕ್ಷರತೆ ಶೇ. 58.45. ದಾವಣಗೆರೆ ರಾಜ್ಯದ ರಾಜಧಾನಿ ಬೆಂಗಳೂರಿನಿಂದ 265 ಕಿ.ಮೀ. ದೂರದಲ್ಲಿದೆ.

ಕ್ರಿ.ಶ. 1121ರ ಶಾಸನದಲ್ಲಿ 'ತುಂಬಿನ ಹಳ್ಳಿಯ ಹೊಲದೊಳಗೆ ದಾವಣಗೆರ್ಯ ಸೀಮೆಯಂ' ಎಂಬ ವಾಕ್ಯ ಬರುತ್ತದೆ. ಕ್ರಿ.ಶ. 1124ರ ಶಾಸನದಲ್ಲಿ 'ವಣಿಗರ ದೇವನಾಗರಿಯಂ' ಎಂಬ ಮಾತಿನಿಂದ ಈ ಸ್ಥಳ ಮೊದಲಿನಿಂದಲೂ ವ್ಯಾಪಾರ ಸ್ಥಳವಾಗಿತ್ತೆಂದು ಊಹಿಸಬಹುದು.

ಕಾಶಿಪುರದ ಶಾಸನವೊಂದರಿಂದ ಈ ಸ್ಥಳ ಕ್ರಿ.ಶ. 3ರಿಂದ 6ನೆಯ ಶತಮಾನದವರೆಗೆ ಬನವಾಸಿ ಕದಂಬರ ಆಳ್ವಿಕೆಗೆ ಒಳಪಟ್ಟಿತ್ತೆಂದೂ, ಕ್ರಿ.ಶ. 1042ರ ಹದಡಿ ಶಾಸನದಿಂದ ಈ ಪ್ರದೇಶವನ್ನು ಕಲ್ಯಾಣಿ ಚಾಳುಕ್ಯರ ತ್ರೈಲೋಕ್ಯಮಲ್ಲ ಅಥವಾ ಸೋಮೇಶ್ವರ ಆಳುತ್ತಿದ್ದನೆಂದು ತಿಳಿದುಬರುತ್ತದೆ. ಹೊಯ್ಸಳರ ಕಾಲದ ಅನೇಕ ದೇವಾಲಯಗಳು, ಈ ಜಿಲ್ಲೆಯಾದ್ಯಂತ ಇವೆ. ಚಿತ್ರದುರ್ಗದ ಪಾಳೆಗಾರರು 210 ವರ್ಷಗಳ ಕಾಲ ಈ ಪ್ರಾಂತ್ಯವನ್ನು ಆಳಿದರು.

ಅವರಿಂದ ಹೈದರ್ ಆಲಿ ಈ ಪ್ರದೇಶವನ್ನು ವಶಪಡಿಸಿಕೊಂಡನು. ಅವನ ಮಗ ಟಿಪ್ಪು ಬ್ರಿಟಿಷರಿಗೆ ಸೋತಾಗ 1792ರಲ್ಲಿ ಮರಾಠರಿಗೆ ಇದನ್ನು ಮಾರಿದನು. ಮರಾಠರ ಅವಸಾನದನಂತರ ಈ ಪ್ರದೇಶ ಮೈಸೂರು ಸಂಸ್ಥಾನಕ್ಕೆ ಸೇರಿತು. 1799ರಲ್ಲಿ ಬ್ಯಾರಿಕ್ಲೋಸ್ ಎನ್ನುವ ಬ್ರಿಟಿಷ್ ಅಧಿಕಾರಿ ಹರಿಹರದಲ್ಲಿ ಸೈನಿಕ ಠಾಣೆ ಸ್ಥಾಪಿಸಿದ. ಕ್ರಿ.ಶ. 1800ರಲ್ಲಿ ಏಪ್ರಿಲ್ ತಿಂಗಳಲ್ಲಿ ಪ್ರಸಿದ್ಧ ಪ್ರವಾಸಿ ಬುಕನೆನ್ ಇಲ್ಲಿಗೆ ಭೇಟಿ ಕೊಟ್ಟು ಇಲ್ಲಿನ ವ್ಯಾಪಾರ ವಹಿವಾಟನ್ನು ಹೇಳುತ್ತಾನೆ. 1834ರ ಮಾರ್ಚ್ 2ರಂದು ಮಹಾತ್ಮಾಗಾಂಧೀಜಿ ಇಲ್ಲಿಗೆ ಆಗಮಿಸಿ ಹರಿಜನ ವಿದ್ಯಾರ್ಥಿನಿಲಯಕ್ಕೆ ಅಡಿಗಲ್ಲು ಹಾಕಿದರು.

ಈ ಜಿಲ್ಲೆಯಲ್ಲಿ ಹೆಚ್ಚು ಒಣಭೂಮಿ ಇದೆ. ಜಿಲ್ಲೆಯ ಕೆಲವು ಭಾಗ ಕಪ್ಪು ಎರೆ ಮಣ್ಣಿನಿಂದ ಹಾಗೂ ಇನ್ನು ಕೆಲವು ಭಾಗ ಕೆಂಪು ಮಣ್ಣಿನಿಂದ ಕೂಡಿದೆ. ಜಿಲ್ಲೆಯ ಸರಾಸರಿ ಮಳೆ 639.9 ಮಿ.ಮೀ. ಲಕ್ಕವಳ್ಳಿಯ ಭದ್ರಾಜಲಾಶಯದಿಂದ ತೆಗೆದಿರುವ ಮಲೆಬೆನ್ನೂರು ಮತ್ತು ದಾವಣಗೆರೆ ಶಾಖೆಯ ಎರಡು ನಾಲೆಗಳು ದಾವಣಗೆರೆಯನ್ನು ಹಾದುಹೋಗುತ್ತವೆ. ಹೊಳಲ್ಕೆರೆ ತಾಲ್ಲೂಕು ಪಶ್ಚಿಮದ ಬೆಟ್ಟದಲ್ಲಿ ಹುಟ್ಟುವ ಸ್ಯಾಗಲಹಳ್ಳ ದಾವಣಗೆರೆ ತಾಲ್ಲೂಕಿನ ಮುಖಾಂತರ ಹರಿದು ತುಂಗಭದ್ರಾ ನದಿಯನ್ನು ಹರಿಹರಸಾಗರದ ಹತ್ತಿರ ಸೇರುತ್ತದೆ. ಭತ್ತ, ಕಬ್ಬು, ಜೋಳ, ಹತ್ತಿ, ನೆಲಗಡಲೆ, ಸೂರ್ಯಕಾಂತಿ, ರಾಗಿ ಮುಂತಾದವುಗಳು ಜಿಲ್ಲೆಯ ಮುಖ್ಯ ಬೆಳೆಗಳು. ಚನ್ನಗಿರಿ ತಾಲ್ಲೂಕಿನಲ್ಲಿ ಇತ್ತಿತ್ತಲಾಗಿ ಅಡಕೆ ಬೆಳೆಗೆ ರೈತರು ಹೆಚ್ಚಿನ ಒಲವು ತೋರಿಸುತ್ತಿದ್ದಾರೆ.

1918ರಲ್ಲಿ ಬಿ.ಟಿ. ಎಣ್ಣೆ ಕಂಪನಿ ಆರಂಭವಾಯಿತು. 1936ರಲ್ಲಿ ದಾವಣಗೆರೆಯಲ್ಲಿ ಕಾಟನ್ ಮಿಲ್ ಪ್ರಾರಂಭವಾಗಿ 'ಕರ್ನಾಟಕದ ಮ್ಯಾಂಚೆಸ್ಟರ್' ಎಂಬ ಕೀರ್ತಿಗೆ ಪಾತ್ರವಾಯಿತು.

ದಾವಣಗೆರೆ ರಾಜ್ಯದ ಪ್ರಮುಖ ಶೈಕ್ಷಣಿಕ ಕೇಂದ್ರಗಳಲ್ಲಿ ಒಂದು. ಬಾಪೂಜಿ ವಿದ್ಯಾಸಂಸ್ಥೆ, ಬಿ.ಡಿ.ಟಿ. ಇಂಜಿನಿಯರಿಂಗ್ ಕಾಲೇಜು, ಮುರುಘರಾಜೇಂದ್ರ ವೈದ್ಯಕೀಯ ಕಾಲೇಜು ಹಾಗು ಇನ್ನಿತರ ಶಿಕ್ಷಣ ಸಂಸ್ಥೆಗಳು ಇದರ ಕೀರ್ತಿಯನ್ನು ಎತ್ತರಕ್ಕೆ ಒಯ್ದಿವೆ. ತೋಳಹುಣಸೆಯಲ್ಲಿ ಪ್ರಾರಂಭವಾಗಿರುವ 'ಶಿವಗಂಗೋತ್ರಿ' ಸ್ನಾತಕೋತ್ತರ ಕೇಂದ್ರ ಈ ಜಿಲ್ಲೆಯ ಮುಂದಿನ ಶೈಕ್ಷಣಿಕ ಬೆಳವಣಿಗೆಯ ಸೂಚಕವಾಗಿದೆ.

ಹರಿಹರ ಈ ಜಿಲ್ಲೆಯ ಇನ್ನೊಂದು ತಾಲ್ಲೂಕು. ವಿಸ್ತೀರ್ಣ 486.8 ಚ.ಕಿ.ಮೀ. 86 ಗ್ರಾಮಗಳಿವೆ. ತುಂಗಾಭದ್ರಾ ನದಿಯ ಬಲದಂಡೆಯ ಮೇಲಿರುವ ಒಂದು ಕೈಗಾರಿಕಾ ಪಟ್ಟಣ. ಇಲ್ಲಿಯ ಸ್ಥಳ ಪುರಾಣದ ಪ್ರಕಾರ ಹಿಂದೆ ಇದು ಗುಹಾಸುರ ಎಂಬ ರಾಕ್ಷಸನ ರಾಜಧಾನಿಯಾಗಿತ್ತು. ಈತ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ, ತನಗೆ ಹರಿಯಿಂದಾಗಲಿ, ಹರನಿಂದಾಗಲಿ ಸಾವು ಬರದಂತೆ ವರ ಪಡೆದುಕೊಂಡ. ಈ ವರದ ಬಲದಿಂದ ಮದೋನ್ಮತ್ತನಾಗಿ ಮಾನವರನ್ನು, ದೇವತೆಗಳನ್ನೂ ಕಾಡತೊಡಗಿದ. ಆಗ ಶಿವ ಮತ್ತು ವಿಷ್ಣು ಒಂದುಗೂಡಿ ಹರಿಹರ ರೂಪಿನಿಂದ ಈ ರಾಕ್ಷಸನನ್ನು ಕೊಂದುಹಾಕಿದರು. ಈ ಕಾರಣದಿಂದ ಇದಕ್ಕೆ 'ಹರಿಹರ' ಎಂಬ ಹೆಸರು ಬಂದಿತೆನ್ನುವರು. ಸಾಯುವ ಮೊದಲು ಈ ರಾಕ್ಷಸ ಈ ಕ್ಷೇತ್ರಕ್ಕೆ ತನ್ನ ಹೆಸರನ್ನು ಇಡಬೇಕೆಂದು ಕೇಳಿಕೊಂಡದ್ದರಿಂದ ಇದಕ್ಕೆ 'ಗುಹಾರಣ್ಯ ಕ್ಷೇತ್ರ'ವೆಂಬ ಹೆಸರು ಬಂದಿತೆಂಬ ಪ್ರತೀತಿ. ಹರಿಹರದ ಪ್ರಸಿದ್ಧ ದೇವಾಲಯವನ್ನು ಹೊಯ್ಸಳ ದೊರೆ ಇಮ್ಮಡಿ ನಾರಸಿಂಹನ ಪ್ರಧಾನ ಮಂತ್ರಿಯೂ ದಳಪತಿಯೂ ಆಗಿದ್ದ ಪೋಲಾಳ್ವನು ಕ್ರಿ.ಶ. 1224ರಲ್ಲಿ ನಿರ್ಮಿಸಿದನು.

ಚನ್ನಗಿರಿ ಈ ಜಿಲ್ಲೆಯ ಇನ್ನೊಂದು ತಾಲ್ಲೂಕು. ವಿಸ್ತೀರ್ಣ 1212 ಚ.ಕಿ.ಮೀ. 245 ಹಳ್ಳಿಗಳಿವೆ. ರಾಣಿ ಚನ್ನಮ್ಮಾಜಿ ಇಲ್ಲೊಂದು ಕೋಟೆಯನ್ನು ಕಟ್ಟಿಸಿ ಈ ಪಟ್ಟಣಕ್ಕೆ ತನ್ನ ಹೆಸರನ್ನಿಟ್ಟು ಇದನ್ನು ತನ್ನ ತಂಗಿಗೆ ಜಾಹಗೀರಾಗಿ ಕೊಟ್ಟಳು. ನಗರದ ನೈಋತ್ಯ ಮೂಲೆಯಲ್ಲಿ ಇರುವ ಸಣ್ಣ ಬೆಟ್ಟದ ಮೇಲೆ ಕೋಟೆ ಇದೆ.

ಬೆಟ್ಟದ ತುದಿಯಲ್ಲಿ ಬೇಟೆ ರಂಗನಾಥಸ್ವಾಮಿ ದೇವಸ್ಥಾನವಿದೆ. ಕಲ್ಲುಮಠ ಎಂಬ ಒಂದು ವೀರಶೈವ ಮಠವಿದೆ. ಇಲ್ಲಿಯ ದೊಡ್ಡ ಮಸೀದಿಯಲ್ಲಿ ಮೊಹಬ್ಬತ್-ಷಾ-ಮಸ್ತಾನ್ ಖಾದ್ರಿ ಎನ್ನುವವರ ಗೋರಿಯುಂಟು. ಇದು ಕ್ರಿ.ಶ. 1636ರಲ್ಲಿ ನಿರ್ಮಿತವಾದುದು. ಟಿಪ್ಪು, ದಿವಾನ್ ಪೂರ್ಣಯ್ಯ ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರ್ ಈ ಮಸೀದಿಗೆ ಸನ್ನದುಗಳನ್ನು ನೀಡಿದ್ದರೆಂದು ತಿಳಿದುಬರುತ್ತದೆ.

ಜಿಲ್ಲೆಯ ಇನ್ನೊಂದು ತಾಲ್ಲೂಕು ಹೊನ್ನಾಳಿ. ವಿಸ್ತೀರ್ಣ 856.7 ಚ.ಕಿ.ಮೀ. 166 ಗ್ರಾಮಗಳು. 'ಭಾಸ್ಕರ ಕ್ಷೇತ್ರ'ವೆಂದು ಪುರಾಣಪ್ರಸಿದ್ಧವಾದ ಈ ಪಟ್ಟಣಕ್ಕೆ 'ಬಿದಿರಿ' ಎಂದೂ 'ಹೊನ್ನಹಳ್ಳಿ' ಎಂದೂ ಹೆಸರಿತ್ತೆಂದು ತಿಳಿದುಬರುತ್ತದೆ. ರಾಣಿ ಹೊಯ್ಸಳದೇವಿ ಮಲ್ಲಿಕಾರ್ಜುನನಿಗೆ ಇಲ್ಲೊಂದು ಶಿಲಾದೇಗುಲ ಕಟ್ಟಿ ಅದನ್ನು 'ಮಲ್ಲಿಕೇಶ್ವರ ತೀರ್ಥ' ಎಂದು ಕರೆದಿದ್ದಾಳೆಂದು

ಇಲ್ಲಿನ ಶಿಲಾಶಾಸನದಿಂದ ತಿಳಿದುಬರುತ್ತದೆ. ತುಂಗಾಭದ್ರಾ ನದಿಯ ಸೇತುವೆ ಬಳಿ ಸಂತ ಶ್ರೀನಿವಾಸತೀರ್ಥರ ಸಮಾಧಿ ಇದೆ. ರಾಘವೇಂದ್ರ ಸ್ವಾಮಿಗಳ ಬೃಂದಾವನವಿದೆ.

ಜಗಳೂರು ಜಿಲ್ಲೆಯ ಇನ್ನೊಂದು ತಾಲ್ಲೂಕು. ವಿಸ್ತೀರ್ಣ 966.7 ಚ.ಕಿ.ಮೀ. 170 ಗ್ರಾಮಗಳಿವೆ. ಜೋಗಪ್ಪ ಎಂಬ ಋಷಿಯ ಹೆಸರಿನಿಂದ ಈ ಊರಿನ ಹೆಸರು ರೂಢಿತವಾಗಿದೆ ಎಂದು ಪ್ರತೀತಿ. ತ್ರಿಶೂಲ ಕಮಂಡಲುಗಳನ್ನು ಹಿಡಿದಿರುವ 3 ಅಡಿ ಎತ್ತರದ ಮೂರ್ತಿ ಇದೆ. ಇಲ್ಲಿನ ಕೆಮ್ಮವ್ವ ದೇವಾಲಯದಲ್ಲಿ 1½ ಅಡಿ ಎತ್ತರದ ತ್ರಿಶೂಲ ಮತ್ತು ಡಮರುಧಾರಿ ಆಸೀನ ವಿಗ್ರಹವಿದೆ. ಇದರ ಅರ್ಚನೆಯಿಂದ ಕೆಮ್ಮು ನಿಲ್ಲುವದೆಂಬ ಪ್ರತೀತಿ.

ಹರಪನಹಳ್ಳಿ ಜಿಲ್ಲೆಯ ಇನ್ನೊಂದು ತಾಲ್ಲೂಕು. ವಿಸ್ತೀರ್ಣ 1422.3 ಚ.ಕಿ.ಮೀ. 75 ಗ್ರಾಮಗಳಿವೆ. ಪಟ್ಟಣ ಸಣ್ಣಪುಟ್ಟ ಗುಡ್ಡಗಳಿಂದ ಸುತ್ತುವರಿದಿವೆ. ಇವುಗಳಲ್ಲಿ ಗೋಸಾಯಿಯ ಸಮಾಧಿ ಇರುವ ಗೋಸಾಯಿ ಗುಡ್ಡ ಒಂದು. ಈ ಪಟ್ಟಣದಲ್ಲಿ ಎರಡು ಸುತ್ತಿನ ಒಂದು ಕೋಟೆ ಇದೆ. ಕೋಟೆಯ ಎರಡು ಪಕ್ಕಗಳಲ್ಲಿಯೂ ಎರಡು ಕೆರೆಗಳಿದ್ದು ಇವು ಕೋಟೆಗೆ ರಕ್ಷಣೆಯಂತಿವೆ. ಕೋಟೆಯೊಳಗೆ ಹನುಮಂತನ ಹಾಗು ಜೈನ ದೇವಾಲಯಗಳಿವೆ. ಹರಪನಹಳ್ಳಿಯ ಬೇಡರ ದಾದಯ್ಯ ನಾಯಕನ ಮನೆತನವೇ ಈ ಜಿಲ್ಲೆಯ ಇತರ ಪಾಳೇಗಾರರಲ್ಲೆಲ್ಲ ಪ್ರಸಿದ್ಧವಾದದ್ದು. ಹರಪನಹಳ್ಳಿ ಭೀಮವ್ವ (1822-1902) ಹರಿದಾಸ ಸಾಹಿತ್ಯದ ಪ್ರಖ್ಯಾತ ಕವಿಯತ್ರಿ.

ದಾವಣಗೆರೆ ಜಿಲ್ಲೆ ಅನೇಕ ಸ್ವಾತಂತ್ರ್ಯ ಹೋರಾಟಗಾರರನ್ನು ಈ ನಾಡಿಗೆ ನೀಡಿದೆ. ಅನೇಕ ನಾಯಕರು ಈ ಜಿಲ್ಲೆಗೆ ಬಂದು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದಾರೆ. ಅಂತಹವರಲ್ಲಿ ಏಕೀಕರಣದ ಶಿಲ್ಪಿ ಸಿದ್ಧವ್ವನಹಳ್ಳಿ ನಿಜಲಿಂಗಪ್ಪ, ಬಳ್ಳಾರಿ ಸಿದ್ದಮ್ಮ, ಕೂಟಗೆ ಸಿದ್ಧಲಿಂಗಪ್ಪ, ಕೊಟ್ರಬಸಪ್ಪ, ಕಾಸಲ ಶ್ರೀನಿವಾಸಶೆಟ್ಟಿ, ಇಬ್ರಾಹಿಂ ಸಾಹೇಬ, ಎ.ಹೆಚ್. ಶಿವಾನಂದಸ್ವಾಮಿ, ಮುರುಗಯ್ಯ ಮುಂತಾದವರು ಪ್ರಸಿದ್ಧರು.

ಈ ಜಿಲ್ಲೆ ಅನೇಕ ರಾಜಕೀಯ ಧುರೀಣರನ್ನು ರಾಜ್ಯದ ರಾಜಕೀಯ ಕ್ಷೇತ್ರಕ್ಕೆ ಕೊಟ್ಟಿದೆ. ಜಗಳೂರಿನ ಇಮಾಮ್‌ಸಾಬ್, ಮಾಜಿ ಮುಖ್ಯಮಂತ್ರಿ ಸಿದ್ಧವ್ವನಹಳ್ಳಿ ನಿಜಲಿಂಗಪ್ಪ, ಹೆಚ್. ಸಿದ್ದವೀರಪ್ಪ, ಗಾಂಜಿವೀರಪ್ಪ, ಕೊಂಡಜ್ಜಿ ಬಸಪ್ಪ, ಭೀಮಪ್ಪನಾಯಕ, ದುಗ್ಗಪ್ಪ ಜಿ., ಎನ್.ಜಿ. ಹಾಲಪ್ಪ, ಕಾಡಸಿದ್ದಪ್ಪ, ಪಂಪಾಪತಿ, ಹೆಚ್. ಶಿವಪ್ಪ, ಕೆ. ಮಲ್ಲಪ್ಪ, ಡಾ॥ ವೈ. ನಾಗಪ್ಪ, ಡಾ. ತಿಪ್ಪೇಸ್ವಾಮಿ, ಮಾಜಿ ಮುಖ್ಯಮಂತ್ರಿ ಜೆ.ಹೆಚ್. ಪಟೇಲ್, ಚನ್ನಯ್ಯ ಒಡೆಯರ್, ಕೆ.ಜಿ. ಮಹೇಶ್ವರಪ್ಪ, ಜಿ.ಹೆಚ್. ಅಶ್ವತ್ಥರೆಡ್ಡಿ, ನಾಗಮ್ಮ ಕೇಶವಮೂರ್ತಿ, ಸಚಿವ ಎಸ್.ಎಸ್. ಮಲ್ಲಿಕಾರ್ಜುನ, ವಡನಾಳ್ ರಾಜಣ್ಣ, ಸಂಸದರಾದ ಜಿ. ಮಲ್ಲಿಕಾರ್ಜುನಪ್ಪ ಹಾಗೂ ಮಾಜಿ ಸಂಸದರಾದ ಶಾಮನೂರ ಶಿವಶಂಕರಪ್ಪ ಮುಂತಾದವರನ್ನು ನೆನಪಿಸಿಕೊಳ್ಳಬಹುದು.

ಜಗಳೂರಿನಿಂದ ಕರ್ನಾಟಕ ಪ್ರದೇಶ ಕಾಂಗ್ರೆಸ್ ಪಕ್ಷದ ಸದಸ್ಯರಾಗಿರುವ ಎ.ಎಸ್. ಜಯಸಿಂಹ ಅವರು ಜಿಲ್ಲೆಯ ಹಾಗೂ ರಾಜ್ಯದ ಹಿರಿಯ ರಾಜಕಾರಣಿಗಳಿಗೆ ಬಲಗೈಯಂತಿದ್ದಾರೆ.

ದಾವಣಗೆರೆ ಮೊದಲಿನಿಂದಲೂ ತನ್ನ ಸಾಂಸ್ಕೃತಿಕ ಆಸಕ್ತಿಗಾಗಿ ಪ್ರಸಿದ್ಧವಾಗಿದೆ. ಡಾ।। ಎಂ. ಚಿದಾನಂದಮೂರ್ತಿ, ಡಾ।। ಜಿ.ಎಸ್. ಶಿವರುದ್ರಪ್ಪ, ಅರಾಸೇ, ಡಾ।। ಸುಮತೀಂದ್ರನಾಡಿಗ, ಎಸ್.ಎಸ್. ಚಿದಂಬರರಾವ್, ಡಾ।। ಹೆಚ್.ಎಸ್. ವೆಂಕಟೇಶಮೂರ್ತಿ, ಹೆಚ್. ನೀಲಪ್ಪ, ಡಾ. ಎನ್. ಸುಧೀಂದ್ರ, ಬಿ.ಎಲ್. ವೇಣು, ಚ. ಸರ್ವಮಂಗಳ, ಪ್ರೊ. ಬಿ.ವಿ. ವೀರಭದ್ರಪ್ಪ, ಪ್ರೊ।। ರಂಗನಾಥರಾವ್, ಟಿ. ಗಿರಿಜಾ, ಕಥೆಗಾರ್ತಿ ಹಾಗೂ ಹಿಂದುಳಿದ ಆಯೋಗದಲ್ಲಿ ಸಹಾಯಕ ನಿರ್ದೇಶಕರಾಗಿರುವ ಕೆ.ಎಂ. ವಿಜಯಲಕ್ಷ್ಮಿ, ಬೆಂಗಳೂರಿನ ಅಂಕಿತ ಪ್ರಕಾಶನದ ಪ್ರಕಾಶ ಕಂಬತ್ತಳ್ಳಿ, ಡಾ।। ಹೆಚ್. ಗಿರಿಜಮ್ಮ ಮೊದಲಾದ ಸೃಜನಶೀಲ ಪ್ರತಿಭೆಯುಳ್ಳ ಬರಹಗಾರರನ್ನು ಒಮ್ಮೆಲೆ ನೆನೆಯಬಹುದು.

ದಾವಣಗೆರೆಯ ಕೆ.ಬಿ. ಡ್ರಾಮಾ ಕಂಪನಿ ಹಾಗು ಅದರ ಮಾಲೀಕರಾದ ಚಿಂದೋಡಿ ಲೀಲಾ, ಕರ್ನಾಟಕ ವೃತ್ತಿರಂಗ ಭೂಮಿಯಲ್ಲಿ ಚರಿತ್ರಾರ್ಹ ಸಾಧನೆ ಮಾಡಿದ್ದಾರೆ. ಪ್ರಸಿದ್ಧ ನೇತ್ರ ವೈದ್ಯರಾದ ಡಾ।। ಎಂ.ಸಿ. ಮೋದಿ ಹಾಗು ಶಿಲ್ಪಿ ಸಿ. ಪರಮೇಶ್ವರ ಆಚಾರ್ ಅವರು ಸಹ ಈ ಜಿಲ್ಲೆಯ ನಂಟರೇ. ಪ್ರಸಿದ್ಧ ಅಥ್ಲೆಟಿಕ್ ಏಂಜೆಲ್ ಮೇರಿ ಹಾಗು ಪವರ್ ಲಿಫ್ಟರ್ ದಾದಾಪೀರ್ ಅವರುಗಳು ಏಕಲವ್ಯ ಪ್ರಶಸ್ತಿ ಪಡೆದಿದ್ದಾರೆ.

ಹೀಗೆ ದಾವಣಗೆರೆ ಐತಿಹಾಸಿಕ ಹಾಗು ಸಮಕಾಲೀನ ವಿಚಾರಗಳಿಗೆ ಗುರುತಿಸಲೇಬೇಕಾದ ಅತಿಮುಖ್ಯ ಜಿಲ್ಲೆಯಾಗಿದೆ.

## ಉಪ್ಪಾರ ಸಮಾಜ

ದಾವಣಗೆರೆ ಜಿಲ್ಲೆಯ ಎಲ್ಲ ತಾಲ್ಲೂಕುಗಳಲ್ಲಿ ಉಪ್ಪಾರ ಸಮುದಾಯವನ್ನು ಗುರುತಿಸಬಹುದು. ಅನೇಕ ವಿಧಾನಸಭಾ ಕ್ಷೇತ್ರಗಳಲ್ಲಿ ಇವರ ಮತ ನಿರ್ಣಾಯಕ ಮತಗಳಾಗಿದ್ದರೂ ಯಾವುದೇ ರಾಜಕೀಯ ಪಕ್ಷ ಇವರನ್ನು ಗಂಭೀರವಾಗಿ ಪರಿಗಣಿಸದಿರುವದು ಜನಾಂಗದ ಸಂಘಟನೆಯಲ್ಲಿರುವ ಕೊರತೆ. ಈ ಭಾಗದಲ್ಲಿ ಅಂದರೆ ಚಿತ್ರದುರ್ಗ ಜಿಲ್ಲೆಗೆ ಸೇರಿದಂತೆ ಈ ಜನಾಂಗದ ಪ್ರಮುಖ ಧಾರ್ಮಿಕ ಕೇಂದ್ರವಿದ್ದಾಗ್ಯೂ ಸಮುದಾಯದಲ್ಲಿ ಜಾಗೃತಿ ಉಂಟಾಗದಿರುವದು ದುರ್ದೈವದ ವಿಚಾರ.

ದಾವಣಗೆರೆ ತಾಲ್ಲೂಕಿನಲ್ಲಿ ಉಪ್ಪಾರ ಸಮುದಾಯದವರು ದಾವಣಗೆರೆ, ಮಾಯಕೊಂಡ, ನರಸೀಪುರ, ತೋಳಹುಣಸೆ, ಚಂದ್ರನಳ್ಳಿ, ಬುಳ್ಳಾಪುರ, ಕೊಲ್ಕುಂಟೆ, ಕುಂಟುಪಾಳಳ್ಳಿ, ಯರವನಾಗ್ತಿಹಳ್ಳಿ, ಹಳೆ ಕುಂದುವಾಡ, ಕೆರೆಯಾಗಳಹಳ್ಳಿ, ಹೂಲಿಕಟ್ಟೆ, ಅವರಗೆರೆ, ಪುಟಗನಾಳ, ಅರಸಾಪುರ ಕ್ಯಾಂಪ್, ನಲ್ಕುಂದ, ಹಿಂಡಸಕಟ್ಟೆ, ತುರ್ಚಗಟ್ಟೆ, ಹೊಸನಾಯ್ಕನ ಹಳ್ಳಿ, ಯರವನಾಯಕನಹಳ್ಳಿ ಕ್ಯಾಂಪ್, ಮತ್ತಿ, ಹದಡಿ, ಕೈದಾಳೆ, ಗಿರಿಯಾಪುರ, ಬಾತಿ, ಮಾಗಾನಳ್ಳಿ, ನಿಟ್ಟುವಳ್ಳಿ, ಕೈದಾಳೆ ಕ್ಯಾಂಪ್, ಮಹದೇವಿಪುರ, ಕುಕ್ಕುವಾಡ, ಕಾಡಜ್ಜಿ, ಬಿಕಲ್ಪನಹಳ್ಳಿ, ಬಿ. ಚಿತ್ತಾನಳ್ಳಿ, ಬೆಳವನೂರು, ಅಣಬೇರು, ಆರನೆಮ್ಮೆಲಿ ಕಲ್ಲು, ಶಾಗ್ಲಿ,

ಲೋಕಿಕೆರೆ ಮುಂತಾದ ಗ್ರಾಮಗಳನ್ನೊಳಗೊಂಡಂತೆ 2,950 ಉಪ್ಪಾರ ಕುಟುಂಬಗಳಿದ್ದು 17,500 ಜನಸಂಖ್ಯೆ ಇದೆ.

ಚನ್ನಗಿರಿ ತಾಲ್ಲೂಕು ಉಪ್ಪಾರರು ಹೆಚ್ಚಿರುವ ಮತ್ತೊಂದು ತಾಲ್ಲೂಕು. ಈ ತಾಲ್ಲೂಕಿನಲ್ಲಿ ಚನ್ನಗಿರಿ, ಉಬ್ರಾಣಿ, ಉಬ್ರಾಣಿ ಕ್ಯಾಂಪ್, ಕೊಡಗಿಕೆರೆ, ಬಸಾಪುರ, ಹರೂವನಳ್ಳಿ, ತಾವರೆಕೆರೆ, ಮೇದಗೊಂಡನಹಳ್ಳಿ, ಗೋಪ್ಪೆನಹಳ್ಳಿ, ವಡ್ಡನಾಳು, ಹೊದಿಗೆರೆ, ಅಜ್ಜಿಹಳ್ಳಿ, ಕೋಟೆಹಾಳು, ತೋಪೆನಳ್ಳಿ, ತಣಿಗೆರೆ, ರಾಮಗೊಂಡನಹಳ್ಳಿ, ಕುಳೇನೂರು, ಚಿರಡೋಣಿ, ಇಟ್ಟಿಗೆ, ಜಯಂತಿನಗರ, ನಲ್ಲೂರು, ಸೆಟ್ಟಿಹಳ್ಳಿ, ಗಾಂಧಿನಗರ, ದೇವರಹಳ್ಳಿ, ಸಂತೆಬೆನ್ನೂರು, ಗೆದ್ಲೆಹಟ್ಟಿ, ಬೈಲದಿಣ್ಣೆ, ಕಂಸಾಗರ, ಗಂಗೂರು, ಹಿರೇಮಳಲಿ, ಬುಳ್ಳಸಾಗರ, ಮಾವಿನಕಟ್ಟೆ, ಗಾಣದಕಟ್ಟೆ, ಜೋಳದಹಾಳು, ಬೈರನಳ್ಳಿ, ಮಾಡಾಳು, ನಾಗಸೆಟ್ಟಿಹಳ್ಳಿ, ಸೋಮಾಲಾಪುರ, ಚನ್ನಾಪುರ, ಕಸೆಟ್ಟಿಹಳ್ಳಿ, ಕಣಿವೆ ಬಿಳಚಿ, ಮ್ಯಾಳನಾಯ್ಕನಕಟ್ಟೆ, ಗಿರಿಯಾಪುರ, ಮಂಗೇನಹಳ್ಳಿ, ಮಾದೇನಹಳ್ಳಿ, ಕೊಂಡದಹಳ್ಳಿ, ಮುದ್ದೇನಹಳ್ಳಿ, ಇಕ್ಕಮಗೇರಿ, ಬಿಕ್ಕಿಕಟ್ಟೆ, ಮೊದಲಾದ ಗ್ರಾಮಗಳನ್ನೊಳಗೊಂಡಂತೆ 4500 ಉಪ್ಪಾರ ಕುಟುಂಬಗಳಿದ್ದು, 24,500 ಜನಸಂಖ್ಯೆ ಇದೆ.

ಹರಿಹರ ತಾಲ್ಲೂಕಿನಲ್ಲಿ ಹರಿಹರ ಟೌನ್, ಸಾಲಕಟ್ಟೆ, ನಿಟ್ಟೂರು, ಯಲವಟ್ಟಿ, ಮಲೆಬೆನ್ನೂರು ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 350 ಕುಟುಂಬಗಳಿದ್ದು ಎರಡು ಸಾವಿರಕ್ಕಿಂತಲೂ ಹೆಚ್ಚಿನ ಉಪ್ಪಾರ ಜನಸಂಖ್ಯೆ ಇದೆ.

ಹರಪನಹಳ್ಳಿ ತಾಲ್ಲೂಕಿನ ಹರಪನಹಳ್ಳಿ, ತಾಳೆದಹಳ್ಳಿ, ಚಿರಸ್ತೆಹಳ್ಳಿ, ಎಡೆಹಳ್ಳಿ, ಇಂಗಳಗೊಂದಿ, ನಾಗಲಾಪುರ, ಶಿಂಗ್ರಿಹಳ್ಳಿ, ಸತ್ತೂರು, ಬಿ. ಓಬಳಾಪುರ, ಜೋಷಿಲಿಂಗಾಪುರ, ಕಸವನಹಳ್ಳಿ, ಶೃಂಗಾರತೋಟ, ತಿಪ್ಪನಾಯ್ಕನಹಳ್ಳಿ, ಸಿರಿಗಾನಹಳ್ಳಿ, ಎಲ್ಲಾಪುರ, ದ್ಯಾಪನಾಯ್ಕನಹಳ್ಳಿ, ಶಂಕರನಳ್ಳಿ, ಮಾಡಲಗೇರಿ, ಗುಂಡಗತ್ತಿ, ಅಲಮರಸಿಕೆರೆ, ಗೌರಿಹಳ್ಳಿ, ತಲವಾಗಿಲು, ಚಟ್ನಳ್ಳಿ, ಕಲ್ಹಳ್ಳಿ, ಕರಡಿದುರ್ಗ, ಉಚ್ಚಂಗಿದುರ್ಗ, ಅಡವಿಹಳ್ಳಿ, ವಡೇರಹಳ್ಳಿ, ಕಬ್ಬಳ್ಳಿ, ರಾಗಿಮಸಲವಾಡ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 2,100 ಉಪ್ಪಾರ ಕುಟುಂಬಗಳಿದ್ದು, 11,500 ಕ್ಕಿಂತಲೂ ಹೆಚ್ಚು ಉಪ್ಪಾರ ಜನಸಂಖ್ಯೆ ಇದೆ.

ಜಗಳೂರು ತಾಲ್ಲೂಕಿನ ಜಗಳೂರು, ದೇವಿಕೆರೆ, ಹಿರೇಅರಕೆರೆ, ಕ್ಯಾಸೆನಳ್ಳಿ, ರಸ್ತೆಮಾಕುಂಟೆ, ಜೋತಿಪುರ, ಮೂಡಲಮಾಚಿಕೆರೆ, ಹೊಸಟ್ಟಿ, ಉದ್ದಗಟ್ಟ, ದೊಣ್ಣೆಹಳ್ಳಿ, ಭರಮಸಮುದ್ರ, ಜಮ್ಮಾಪುರ, ಗಿಡ್ಡನಕಟ್ಟೆ, ಚಿಕ್ಕ ಅರಕೆರೆ, ಅಸಗೋಡು, ಹೊಸೂರು, ಸಾಗಲಕಟ್ಟೆ, ಚಿಕ್ಕಬನ್ನಟ್ಟಿ, ಹಳುವದಂಡೆ, ತೋರಣಗಟ್ಟೆ, ರಸ್ತೆಮಾಚಿಕೆರೆ, ಬೈರನಾಯಕನಹಳ್ಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 1,500 ಉಪ್ಪಾರ ಕುಟುಂಬಗಳಿದ್ದು, 8,250 ಜನಸಂಖ್ಯೆ ಇದೆ ಎಂದು ಅಂದಾಜು ಮಾಡಲಾಗಿದೆ.

ಹೊನ್ನಾಳಿ ತಾಲ್ಲೂಕಿನ ಹಳೇದೇವರ ಹೊನ್ನಾಳಿ, ಸುಂಕದಕಟ್ಟೆ, ಗೊಲ್ಲರಹಳ್ಳಿ, ಹೊಸದೇವರ ಹೊನ್ನಾಳಿ, ಬಳ್ಳೇಶ್ವರ, ಟಕ್ಕನಹಳ್ಳಿ, ಸಾಸ್ವೆಹಳ್ಳಿ, ಕುಳಗಟ್ಟೆ, ಹುಣಸಗಟ್ಟೆ,

ತ್ಯಾಗದಕಟ್ಟೆ, ಹೊನ್ನಾಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ 750 ಉಪ್ಪಾರ ಕುಟುಂಬಗಳಿದ್ದು 4,125 ಕ್ಕಿಂತಲೂ ಹೆಚ್ಚಿನ ಜನಸಂಖ್ಯೆ ಇದೆ.

ಹೀಗೆ ದಾವಣಗೆರೆ ಜಿಲ್ಲೆಯಲ್ಲಿ 11,750 ಉಪ್ಪಾರ ಕುಟುಂಬಗಳಿದ್ದು 65,875 ಕ್ಕಿಂತ ಅಧಿಕ ಜನಸಂಖ್ಯೆ ಇದೆ.

ದಾವಣಗೆರೆ ಜಿಲ್ಲೆಯಲ್ಲಿ ಉಪ್ಪಾರ ಸಂಘವು ಮೊದಲಿನಿಂದಲೂ ಕ್ರಿಯಾಶೀಲವಾಗಿದೆ. ಹಿಂದಿನಿಂದಲೂ ಈ ಸಂಘದ ಚಟುವಟಿಕೆಗಳು ಕ್ರಿಯಾಶೀಲವಾಗಿದ್ದ ಕಾರಣ ಉಪ್ಪಾರ ವಿದ್ಯಾರ್ಥಿನಿಲಯ ಹಾಗು ಉಪ್ಪಾರ ಜನಾಂಗಕ್ಕೆ ಸಂಬಂಧಪಟ್ಟ ಶಾಖಾಮಠ ಸ್ಥಾಪನೆಯಾಗಿದೆ. ಡಿ.ಎಸ್. ರಾಮಪ್ಪ, ಎಂ. ಮಲ್ಲಪ್ಪ ಕೈದಾಳೆ, ಯು. ಹನುಮಂತಪ್ಪ ವಕೀಲರು, ಹೆಚ್. ಹನುಮಂತಪ್ಪ, ಕೆ.ಜಿ. ಬಸಪ್ಪ, ಎಂ.ಎನ್. ಚಂದ್ರಶೇಖರ, ಹೆಚ್. ತಿಪ್ಪಣ್ಣ, ಎಸ್. ಬಸವರಾಜಪ್ಪ, ಎಸ್.ಎಂ. ವಾಸುದೇವಪ್ಪ, ಬಿ. ರುದ್ರಪ್ಪ, ಕೆ.ಹೆಚ್. ಗೋವಿಂದಪ್ಪ, ಎಂ. ಚಿಕ್ಕಪ್ಪ, ಕೆ. ರುದ್ರಪ್ಪ, ಬಾತಿ ಪರಸಪ್ಪ, ಕೆ.ಟಿ. ಚಂದ್ರಕಾಂತ ಇನ್ನು ಮುಂತಾದ ಗಣ್ಯರ ಪ್ರಯತ್ನದಿಂದ ಇಲ್ಲಿ ಶಾಖಾಮಠ ಸ್ಥಾಪಿಸಲು ಸಾಧ್ಯವಾಗಿದೆ. ಸಿದ್ಧರಾಮಸ್ವಾಮಿಗಳು ಈ ಶಾಖಾಮಠದ ನೇತೃತ್ವ ವಹಿಸಿದ್ದಾರೆ. ಹೆಚ್. ತಿಪ್ಪಣ್ಣ, ಎ.ವೈ. ಪ್ರಕಾಶ, ಎನ್.ಬಿ. ಶಿವಮೂರ್ತಿ, ಡಿ.ಎಸ್. ರಾಮಪ್ಪ ಮುಂತಾದ ಪ್ರಮುಖರ ನೇತೃತ್ವದಲ್ಲಿ ವಿದ್ಯಾರ್ಥಿನಿಲಯ ಅಚ್ಚುಕಟ್ಟಾಗಿ ಕಾರ್ಯನಿರ್ವಹಿಸುತ್ತಿದೆ. ಇಲ್ಲಿಯ ಉಪ್ಪಾರ ಸಮುದಾಯವನ್ನು ಯಾವುದೇ ಉಪನಾಮಗಳಿಂದ ಕರೆಯುವುದಿಲ್ಲ. ಇತರ ಜನರಂತೆ ಸಾಮಾನ್ಯ ಹೆಸರುಗಳು ಇವರಿಗುಂಟು. ಶೇ. 99ರಷ್ಟು ಉಪ್ಪಾರರು ಕನ್ನಡ ಬಳಸುತ್ತಾರೆ. ಉಳಿದ ಶೇ. 1 ರಷ್ಟು ಜನರು ತೆಲುಗು ಭಾಷೆಯನ್ನು ಬಳಸುತ್ತಾರೆ. ಮೇಲುಸಕ್ಕರೆಯವರು ಮತ್ತು ಉಪ್ಪಾರರೆಂದು ಈ ಜನರನ್ನು ಗುರುತಿಸುತ್ತಾರೆ.

ಆಂಜನೇಯ, ತಿರುಪತಿ ತಿಮ್ಮಪ್ಪ, ಮೈಲಾರಲಿಂಗ, ಉತ್ಸವಾಂಬಾ, ಮಸಿಯಮ್ಮ ಮುಂತಾದ ದೇವತೆಗಳನ್ನು ಈ ಭಾಗದ ಉಪ್ಪಾರರು ಆರಾಧಿಸುತ್ತಾರೆ.

ಉಪ್ಪಾರರು ಮೂಲತಃ ಕಷ್ಟಜೀವಿಗಳು. ಬಹಳಷ್ಟು ಜನ ವ್ಯವಸಾಯ ವೃತ್ತಿಯನ್ನು ಅವಲಂಬಿಸಿರುತ್ತಾರೆ. ಭೂಮಿ ಇಲ್ಲದ ಹೆಚ್ಚು ಕಡಿಮೆ ಎಲ್ಲರನ್ನೂ ಕೃಷಿ ಕಾರ್ಮಿಕರೆಂದು ಹೇಳಲಾಗಿದೆ. ಇಟ್ಟಿಗೆ ತಯಾರಿಸುವುದು, ಕಟ್ಟಡ ನಿರ್ಮಾಣ ಮಾಡುವದು ಕೂಡ ಇವರ ವೃತ್ತಿಯಾಗಿದೆ. ಉಪ್ಪಾರರಲ್ಲಿ ಶೇ. 3ರಷ್ಟು ಜನ ಉತ್ತಮ ಜೀವನ ಮಟ್ಟದ ನಿರ್ವಹಣೆ ಮಾಡುತ್ತಿದ್ದಾರೆಂದೂ, ಶೇ. 27ರಷ್ಟು ಜನ ಮಧ್ಯಮ ವರ್ಗದ ಜೀವನ ಸಾಗಿಸುತ್ತಿದ್ದಾರೆಂದೂ, ಉಳಿದ ಶೇ. 70ರಷ್ಟು ಉಪ್ಪಾರರು ಬಡತನ ರೇಖೆಗಿಂತ ಕೆಳಹಂತದಲ್ಲಿದ್ದಾರೆಂದು ಇತ್ತೀಚಿನ ಸಮೀಕ್ಷೆಯೊಂದು ತಿಳಿಸುತ್ತದೆ.

ರಾಜ್ಯದ ಸಾಕ್ಷರತೆ ಪ್ರಮಾಣ ಶೇ. 67.04. ಜಿಲ್ಲೆಯ ಸಾಕ್ಷರತಾ ಪ್ರಮಾಣ ಶೇ. 67.67. ಅದರಲ್ಲಿ ಪುರುಷರು 76.44 , ಸ್ತ್ರೀಯರು 58.45. ಜಿಲ್ಲೆಯಲ್ಲಿ ಉಪ್ಪಾರರ ಸಾಕ್ಷರತಾ

ಪ್ರಮಾಣ ಶೇ. 35.5 ಅದರಲ್ಲಿ ಪುರುಷರು ಶೇ. 40, ಸ್ತ್ರೀಯರು ಶೇ. 20. ಸಾಕ್ಷರತೆಯಲ್ಲಿ ಜಿಲ್ಲೆಯ ಉಪ್ಪಾರರ ಸ್ಥಾನ ಎಲ್ಲಿದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಲ್ಲದೆ ಜಿಲ್ಲೆಯಲ್ಲಿ ಸ್ತ್ರೀಯರು ಕೇವಲ ಶೇ. 20ರಷ್ಟು ಸಾಕ್ಷರರಿದ್ದಾರೆಂದು ತಿಳಿದುಬಂದಿದ್ದು, ಇದು ನಿಜವಾಗಿಯೂ ಶೋಚನೀಯ.

ದಾವಣಗೆರೆ ಜಿಲ್ಲೆಯ ಉಪ್ಪಾರ ಸಮುದಾಯದಲ್ಲಿ 25 ವೈದ್ಯರು, 41 ಜನ ಇಂಜಿನಿಯರುಗಳು, 12 ಜನ ವಕೀಲರು ಹಾಗು 30 ಜನ ವ್ಯಾಪಾರೋದ್ಯಮಿಗಳನ್ನು ಗುರುತಿಸಲಾಗಿದೆ. ಹರಪನಹಳ್ಳಿಯಲ್ಲಿ ಮೂವರು, ದೇವರಹಳ್ಳಿಯಲ್ಲಿ ಒಬ್ಬರು, ಹೂಲಿಕೆರೆ ಇಬ್ಬರು, ನಲ್ಲೂರು ಐದು ಜನ, ಸೋಮಾಲಾಪುರ, ಮಾಯಕೊಂಡ ಹಾಗು ತೋಪನಹಳ್ಳಿಯಲ್ಲಿ ತಲಾ ಒಬ್ಬರಂತೆ ವೈದ್ಯರಿದ್ದಾರೆ.

ದಾವಣಗೆರೆಯಿಂದ ಡಿ.ಎಸ್. ರಾಮಪ್ಪ, ಹೆಚ್. ಹನುಮಂತಪ್ಪ, ಎ.ಬಿ. ಮಲ್ಲಪ್ಪ, ಮಂಜುನಾಥ, ನಿಟ್ಟುವಳ್ಳಿ ಹನಮಂತಪ್ಪ, ವೈ. ಚನ್ನಬಸಪ್ಪ, ಶಾಂತಕುಮಾರ, ಗೋಪಾಲಕೃಷ್ಣ, ಹೊದಿಗೆರೆ ಕೃಷ್ಣ, ಎಂ.ಎಸ್. ಮಹೇಶ್ವರಪ್ಪ, ಶಿವಮೂರ್ತಿ, ಹದಡಿಯ ಮಾರ್ತಾಂಡಪ್ಪ, ಮಾಲತೇಶ, ತುರ್ಚಗಟ್ಟಾ ಶರಣಪ್ಪ, ಮಾಯಕೊಂಡ ರೇವಣಸಿದ್ದಪ್ಪ, ಜಿ.ಬಿ. ಚನ್ನಬಸಪ್ಪ, ಹರಪನಹಳ್ಳಿ ವಸಂತಕುಮಾರ, ಪ್ರಕಾಶ ಮುಂತಾದ ಇಂಜಿನಿಯರುಗಳು.

ಈ ಜಿಲ್ಲೆಯಲ್ಲಿ ಹನ್ನೆರಡು ಜನ ವಕೀಲರಿದ್ದಾರೆ. ದಾವಣಗೆರೆಯಲ್ಲಿ ಯು. ಹನುಮಂತಪ್ಪ, ಎ.ವೈ. ಪ್ರಕಾಶ, ಶರಣಪ್ಪ, ಕೆ. ರಮೇಶ ಮುಂತಾದವರು ಪ್ರಸಿದ್ಧರು.

ದಾವಣಗೆರೆ ನಗರದಲ್ಲಿ 12, ನಿಟ್ಟುವಳ್ಳಿಯಲ್ಲಿ 3, ತುರ್ಚಗಟ್ಟೆ ಹಾಗು ಹದಡಿಯಲ್ಲಿ 5, ನಲ್ಲೂರಿನಲ್ಲಿ 2, ಸಂತೆಬೆನ್ನೂರಿನಲ್ಲಿ 3, ಗೆದ್ಲಹಟ್ಟಿಯಲ್ಲಿ 1, ಮಾಯಕೊಂಡದಲ್ಲಿ 5, ಹೀಗೆ 30ಕ್ಕೂ ಹೆಚ್ಚಿನ ಕುಟುಂಬಗಳು ಜಿಲ್ಲೆಯಲ್ಲಿ ವ್ಯಾಪಾರೋದ್ಯಮ ಕೈಗೊಂಡಿವೆ. ಅಕ್ಕಿಗಿರಣಿ, ವೆಲ್ಡಿಂಗ್ ಶಾಪ್, ಇಟ್ಟಿಗೆ ತಯಾರಿಕೆ, ಬ್ರೆಡ್ ಹಾಗು ಪೌಲ್ಟ್ರಿ ಫಾರಂ ಮೊದಲಾದ ವಾಣಿಜ್ಯ ವೃತ್ತಿಗಳನ್ನು ಉಪ್ಪಾರ ಸಮುದಾಯದವರು ಕೈಗೊಂಡಿದ್ದಾರೆ.

ನಿಟ್ಟುವಳ್ಳಿ ಚಂದ್ರಶೇಖರಪ್ಪ ಹಾಗು ಕೈದಾಳೆ ರುದ್ರಪ್ಪ ಅವರು ಎರಡು ವಿದ್ಯಾಸಂಸ್ಥೆಗಳನ್ನು ನಡೆಸುತ್ತಿದ್ದಾರೆ. ಈ ಸಮುದಾಯದವರೊಬ್ಬರು ನಲ್ಲೂರಿನಲ್ಲಿ ಆಸ್ಪತ್ರೆಯೊಂದನ್ನು ನಡೆಸುತ್ತಿದ್ದಾರೆ.

ಚನ್ನಗಿರಿಯ ಬುಳ್ಳಿಕರಿಯಪ್ಪ ಅವರು ರಾಜ್ಯದ ಹಿರಿಯ ಪತ್ರಕರ್ತರು. ಅವರು ಪ್ರಜಾವಾಣಿಯ ವರದಿಗಾರರು. ಗ್ರಾಮೀಣ ಪ್ರದೇಶದಲ್ಲಿದ್ದರೂ ಉತ್ತಮ ರೀತಿಯಲ್ಲಿ ಪತ್ರಿಕಾ ವ್ಯವಸಾಯ ಮಾಡುತ್ತಿದ್ದಾರೆ. ಅವರ ಸುಪುತ್ರ ಡಾ|| ಯು.ಬಿ. ಅಶೋಕಕುಮಾರ್ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸಮಾಜಶಾಸ್ತ್ರದ ಪ್ರಾಧ್ಯಾಪಕರು. ನಲ್ಲೂರಿನ ಯು. ಶಿವನಪ್ಪ ಅವರು ಪುರಸಭೆಯ ಮಾಜಿ ಅಧ್ಯಕ್ಷರು, ದಿ|| ಯು. ಹಾಲಪ್ಪ, ಇಂಜನಿಯರ್. ನಿವೃತ್ತಿನಂತರ ರಾಜಕೀಯ ಪ್ರವೇಶಿಸಿ ತಾಲ್ಲೂಕುಪಂಚಾಯ್ತಿ ಅಧ್ಯಕ್ಷರಾಗಿದ್ದರು. ಸಂತೆಬೆನ್ನೂರಿನ ಹೆಚ್.

ನೀಲಪ್ಪ ಕವಿ-ಸಾಹಿತಿ ಹಾಗೂ ಮುಖ್ಯೋಪಾಧ್ಯಾಯರು. ಸುಭದ್ರಮ್ಮ ಸಾಹಿತಿ, ದೇವರಹಳ್ಳಿಯ ಎ. ಸಿದ್ದಪ್ಪ, ತಾಲ್ಲೂಕು ಬೋರ್ಡ್ ಮಾಜಿ ಅಧ್ಯಕ್ಷರು, ಕೃಷ್ಣಪ್ಪ, ತಾಲ್ಲೂಕು ಉಪ್ಪಾರ ಸಂಘದ ಅಧ್ಯಕ್ಷರು, ಜೆ. ರಂಗನಾಥ, ತಾಲ್ಲೂಕುಪಂಚಾಯ್ತಿ ಅಧ್ಯಕ್ಷ, ಜೆ. ಮಾಯಪ್ಪ, ಜಿ.ಜಿ. ರಾಮಪ್ಪ, ಯು.ಎನ್. ವೀರಪ್ಪ, ಪಂಚಾಯ್ತಿ ಮಾಜಿ ಅಧ್ಯಕ್ಷರು, ವನಜಾಕ್ಷಮ್ಮ, ಸುನಂದಮ್ಮ, ತಾಲ್ಲೂಕುಪಂಚಾಯ್ತಿ ಮಾಜಿ ಸದಸ್ಯರು, ಬಿ. ಭೀಮಪ್ಪ ಹಿರಿಯ ಕೆ.ಎ.ಎಸ್. ಅಧಿಕಾರಿ. ದಾವಣಗೆರೆಯ ಕೈದಾಳೆ ಮಲ್ಲಪ್ಪ ಪ್ರಗತಿಪರ ರೈತರು. ಯು. ಹನಮಂತಪ್ಪ, ವಕೀಲರು, ಹೆಚ್. ಹನಮಂತಪ್ಪ, ನಿವೃತ್ತ ನಗರಸಭೆ ಇಂಜಿನಿಯರ್, ಎನ್. ಬಸವರಾಜಪ್ಪ ಮಂಡಲಪಂಚಾಯ್ತಿ ಮಾಜಿ ಅಧ್ಯಕ್ಷರು, ಜಿಲ್ಲಾಪಂಚಾಯ್ತಿ ಹಾಲಿ ಸದಸ್ಯರು, ಪ್ರಗತಿಪರ ರೈತರು ಹಾಗು ಅಕ್ಕಿಗಿರಣಿ ಮಾಲೀಕರು, ಎಸ್.ಎಂ. ವಾಸುದೇವಪ್ಪ ಪ್ರಗತಿಪರ ವ್ಯವಸಾಯಗಾರರು, ಬಿ. ರುದ್ರಪ್ಪ, ತಿಪ್ಪಣ್ಣ ಪ್ರಗತಿಪರ ಕೃಷಿಕರು, ವ್ಯಾಪಾರಸ್ಥರು, ರುದ್ರಪ್ಪ ತಾಲ್ಲೂಕು ಸಂಘದ ಅಧ್ಯಕ್ಷರು, ಡಿ.ಎನ್. ಸಿದ್ದಪ್ಪ ಸರ್ವೆ ಇಲಾಖೆಯಲ್ಲಿ ಉಪನಿರ್ದೇಶಕರಾಗಿ ಕೆಲಸ ಮಾಡಿ ನಿವೃತ್ತರು, ಪ್ರಗತಿಪರ ವ್ಯವಸಾಯಗಾರರು. ಕೈದಾಳೆ ರುದ್ರಪ್ಪ, ಪಂಚಾಯ್ತಿ ಮಾಜಿ ಅಧ್ಯಕ್ಷರು, ದಾವಣಗೆರೆ ಸಕ್ಕರೆ ಕಾರ್ಖಾನೆ ಮಾಜಿ ನಿರ್ದೇಶಕರು, ಪ್ರಗತಿಪರ ವ್ಯವಸಾಯಗಾರರು, ಹೆಚ್. ತಿಪ್ಪಣ್ಣ, ಹದಡಿಯಲ್ಲಿ ರೈಸ್‌ಮಿಲ್ ನಡೆಸುತ್ತಿದ್ದಾರೆ. ಹದಡಿಯ ಚಂದ್ರಶೇಖರಪ್ಪ, ದೊಣ್ಣೇರ ಭೀಮಣ್ಣ, ಪ್ರಗತಿಪರ ವ್ಯವಸಾಯಗಾರರು. ಮಾಯಕೊಂಡದ ಮುದ್ದಪ್ಪ, ಪ್ರಗತಿಪರ ವ್ಯವಸಾಯಗಾರರು, ಮಾಜಿ ಜಿಲ್ಲಾಪಂಚಾಯ್ತಿ ಸದಸ್ಯರು, ಕೈದಾಳೆ ಪಂಚಾಯ್ತಿ ಅಧ್ಯಕ್ಷರಾದ ಕೆ. ಗೋವಿಂದಪ್ಪ, ಪ್ರಗತಿಪರ ರೈತರು. ಬಾತಿ ಪರಸಪ್ಪ, ಪ್ರಗತಿಪರ ವ್ಯವಸಾಯಗಾರರು. ಕೆ.ಜಿ. ಬಸಪ್ಪ ಎಂ. ಚಿಕ್ಕಪ್ಪ, ವ್ಯವಸಾಗಾರರು. ಎಂ.ಎನ್. ಚಂದ್ರಶೇಖರ್, ಪಿ. ಜಯದೇವಪ್ಪ, ಡಾ. ಬಿ.ಎಂ. ರಾಮಪ್ಪ, ವೈ. ಚನ್ನಬಸಪ್ಪ, ಅಜ್ಜಿಹಳ್ಳಿ ಬಸವರಾಜಪ್ಪ, ಸಿದ್ದಲಿಂಗಪ್ಪ ಬಾತಿ, ಜಿ. ವೀರಭದ್ರಪ್ಪ, ಮಂಜಪ್ಪ ಕಂಸಾಗರ, ಕುಂದವಾಡದ ಗೋಪಾಲಪ್ಪ ಮುಂತಾದವರು ಸಮಾಜದ ಪ್ರಮುಖರು. ಸಿ.ಹೆಚ್. ಸಾವಿತ್ರಮ್ಮ ಮಾಜಿ ಜಿಲ್ಲಾಪಂಚಾಯ್ತಿ ಸದಸ್ಯೆ. ಟಿ.ಡಿ. ಹಾಲೇಶ ದಾವಣಗೆರೆ ನಗರಸಭೆ ಸದಸ್ಯ. ಈ ಎಲ್ಲ ಮಹನೀಯರು ಸಮಾಜದ ಪ್ರಮುಖರು ಹಾಗೂ ಸಮಾಜದ ಬಗ್ಗೆ ಅನನ್ಯ ಕಾಳಜಿ ಹಾಗು ಶ್ರದ್ಧೆ ಹೊಂದಿದ್ದಾರೆ.

ಹರಿಹರದ ಎಲ್‌ಐಸಿ ಡೆವಲಪ್‌ಮೆಂಟ್ ಆಫೀಸರ್ ಎಂ. ಕೆಂಚಪ್ಪ, ಜಗಳೂರಿನ ಎಂ.ಕೆ. ರೇವಣಸಿದ್ದಪ್ಪ, ಗುರುಸಿದ್ದಪ್ಪ ದೇವಿಕೆರೆ, ಲಕ್ಕಪ್ಪ, ಜಮ್ಮಾಪುರ, ರಂಗಪ್ಪ, ಅಧ್ಯಕ್ಷರು ಗ್ರಾಮಪಂಚಾಯ್ತಿ ಜಮ್ಮಾಪುರ, ಎಂ. ಬಂಗಾರಪ್ಪ, ಮುನ್ಸಿಪಲ್ ಚೀಫ್ ಆಫೀಸರ್ ಮುಂತಾದವರು ಸಮಾಜದ ಹಿತಚಿಂತಕರು.

ಹೊನ್ನಾಳಿಯ ಕೃಷ್ಣಮೂರ್ತಿ ಕುಳಗಟ್ಟೆ, ತಾಲ್ಲೂಕುಪಂಚಾಯ್ತಿ ಮಾಜಿ ಸದಸ್ಯರು. ಹರಪನಹಳ್ಳಿ ತಾಲ್ಲೂಕಿನ ಡಾ. ಎಸ್. ಭೀಮಪ್ಪ, ಖ್ಯಾತ ಸರ್ಜನ್, ಸರ್ಜರಿಯ

ಪ್ರಾಧ್ಯಾಪಕರಾಗಿ ನಿವೃತ್ತಿ ಹೊಂದಿದನಂತರ ಜನತಾ ದಳದ ರಾಜ್ಯ ಘಟಕದ ಉಪಾಧ್ಯಕ್ಷರಾಗಿದ್ದರು. ವೆಂಕಟಸ್ವಾಮಿ ಹಿಂದುಳಿದ ಆಯೋಗದ ಸದಸ್ಯರಾಗಿದ್ದರು, ಬೆಂಗಳೂರಿನಲ್ಲಿ ನೆಲೆಸಿದ್ದಾರೆ. 'ಹಿಲ್ ಸೈಡ್' ಎಂಬ ಆಸ್ಪತ್ರೆ ನಡೆಸುತ್ತಿದ್ದಾರೆ. ಇವರು ಶಂಕರನಹಳ್ಳಿಯವರು. ರಾಜ್ಯಸಂಘದ ಅಧ್ಯಕ್ಷರಾಗಿ ಸಮಾಜಕ್ಕೆ ಗಣನೀಯ ಸೇವೆ ಸಲ್ಲಿಸಿದ್ದಾರೆ. ಇದೇ ತಾಲ್ಲೂಕಿನ ಶೃಂಗಾರತೋಟದ ವೈ.ಎಸ್. ಕೆಂಚಪ್ಪ, ಕಂದಾಯ ಇಲಾಖೆಯ ಉನ್ನತ ಅಧಿಕಾರಿಯಾಗಿದ್ದು ನಿವೃತ್ತಿ ನಂತರ ದಾವಣಗೆರೆ ಯಲ್ಲಿ ನೆಲೆಸಿದ್ದಾರೆ. ಟಿ. ಸಣ್ಣತಿಮ್ಮಪ್ಪ, ಪರಶುರಾಮ, ಜಿ. ಹಾಲಪ್ಪ, ಡಿ. ಬಸವರಾಜ, ವೈ. ಚನ್ನಬಸಪ್ಪ, ಭೀಮಪ್ಪ, ಹೈಸ್ಕೂಲ್ ಹೆಡ್‌ಮಾಸ್ಟರ್ ಕೆ. ಹನಮಂತಪ್ಪ ಸಿ.ಇ.ಓ. ಮುಂತಾದವರು ಈ ಸಮುದಾಯದ ಗಣ್ಯರು ಹಾಗು ಹಿತಚಿಂತಕರು.

ದಾವಣಗೆರೆ ಟೈಮ್ಸ್‌ನ ಯು. ಗುರುಸ್ವಾಮಿ ಜನಾಂಗದ ಪ್ರತಿಭಾವಂತ ಪತ್ರಕರ್ತ.

ಹದಡಿ ಬಿ.ಎಂ. ರಂಗಪ್ಪ, ನಿಟ್ಟುವಳ್ಳಿ ಮಾರ್ತಾಂಡಪ್ಪ, ದೇವರಹಳ್ಳಿ ಲಕ್ಷ್ಮಣಪ್ಪ, ಕೋಲ್ಕುಂಟೆ ಗೋವಿಂದಪ್ಪ, ತಣಿಗೆರೆ ಹನಮಂತಪ್ಪ, ಎಂ.ಜಿ. ಗಂಗಪ್ಪ ಅವರುಗಳು ಈ ಸಮುದಾಯಕ್ಕೆ ಸೇರಿದ ಪ್ರಮುಖ ಕಲಾವಿದರು.

ಚಂದ್ರಪ್ಪ, ಶಿವು, ಪರಶುರಾಮ, ಕುಸ್ತಿ ರವಿಕುಮಾರ ಹಾಗು ಕ್ರಿಕೆಟ್‌ನ ಸಂತೋಷ ಈ ಜಿಲ್ಲೆಯ ಪ್ರಮುಖ ಕ್ರೀಡಾಪಟುಗಳು.

ತುಚನಗಟ್ಟ ಎಸ್. ಬಸವರಾಜಪ್ಪ ಜಿಲ್ಲಾಪಂಚಾಯ್ತಿ ಸದಸ್ಯರು, ದೇವರಹಳ್ಳಿ ಎ.ಎಸ್. ಬಸವರಾಜಪ್ಪ, ಚನ್ನಗಿರಿ ಸಿ.ಎಂ. ಶ್ರೀನಿವಾಸ, ಭೈರನಹಳ್ಳಿ ಮಂಜುಳಾ, ತಾಲ್ಲೂಕು ಪಂಚಾಯ್ತಿ ಸದಸ್ಯರು, ಟಿ.ಡಿ. ಹಾಲೇಶ್, ದಾವಣಗೆರೆ ನಗರಸಭಾ ಸದಸ್ಯರು. ಕೊಲ್ಕುಂಟೆ ಗೋವಿಂದಪ್ಪ, ಮೀನಾ ಶ್ರೀನಿವಾಸ ತುರ್ಚಗಟ್ಟಾ, ಅಜ್ಜಪ್ಪ ಸೋಮ್ಲಾಪುರ ಗ್ರಾಮಪಂಚಾಯ್ತಿ ಅಧ್ಯಕ್ಷರು. ಬಿ. ಲಕ್ಷ್ಮಣ ಮಾಯಕೊಂಡ, ಮಲೇಶಪ್ಪ ಹದಡಿ, ಗ್ರಾಮಪಂಚಾಯ್ತಿ ಉಪಾಧ್ಯಕ್ಷರು. ಬಿ. ರುದ್ರಪ್ಪ, ಶಿರಮಗೊಂಡನಹಳ್ಳಿ ಹನಮಂತಪ್ಪ, ಜೆ. ರಂಗನಾಥ ಸಂತೆಬೆನ್ನೂರು, ಗಂಗಮ್ಮ ಅಜ್ಜಿಹಳ್ಳಿ, ಆರ್. ಕೃಷ್ಣಮೂರ್ತಿ ಕುಳಗಟ್ಟೆ, ಅನಸೂಯಮ್ಮ ಅಜ್ಜಿಹಳ್ಳಿ, ಜಿ.ಜಿ. ರಾಮಪ್ಪ, ಹದಡಿ ರಾಮಪ್ಪ, ಜೆ. ಮಾಯಪ್ಪ ಮುಂತಾದವರು ಸಕ್ರಿಯ ರಾಜಕೀಯದಲ್ಲಿದ್ದಾರೆ. ಒಟ್ಟಾರೆ ಈ ಸಮುದಾಯದವರು ರಾಜಕೀಯ ಕ್ಷೇತ್ರದಲ್ಲಿ ತಮ್ಮ ಪ್ರಭಾವವನ್ನು ಸಾಕಷ್ಟು ಬೀರುತ್ತಿದ್ದಾರೆ. ಸಾಕಷ್ಟು ಸಂಘಟನೆ ಹಾಗು ಪ್ರೋತ್ಸಾಹ ದೊರೆತರೆ ಅವರು ಇನ್ನೂ ಹೆಚ್ಚಿನ ಸಾಧನೆ ಮಾಡಲು ಸಮರ್ಥರಿದ್ದಾರೆ.

ದಾವಣಗೆರೆಯಲ್ಲಿ ಉಪ್ಪಾರ ಸಮುದಾಯ ಪ್ರಗತಿ ಪಥದಲ್ಲಿದ್ದರೂ ಆಗಬೇಕಾದ ಕೆಲಸಗಳು ಸಾಕಷ್ಟು ಇವೆ. ಪ್ರಸ್ತುತ ಜಿಲ್ಲಾ ಕೇಂದ್ರದಲ್ಲಿ ಮಾತ್ರ ವಿದ್ಯಾರ್ಥಿನಿಲಯವಿದ್ದು, ಅದನ್ನು ಈ ಸಮುದಾಯ ಹೆಚ್ಚು ಸಂಖ್ಯೆಯಲ್ಲಿರುವ ಎಲ್ಲ ಸ್ಥಳಗಳಿಗೂ ವಿಸ್ತರಿಸಬೇಕಾಗಿದೆ.

ಎಲ್ಲ ತಾಲ್ಲೂಕು ಕೇಂದ್ರಗಳಲ್ಲಿ ಭಗೀರಥ ಸಮುದಾಯಭವನ ಬರಬೇಕು. ಆಗ ಈ ಸಮುದಾಯ ಜನರು ಒಂದೆಡೆ ಸೇರಿ ವಿಚಾರ ವಿನಿಮಯಕ್ಕೆ ಅನುಕೂಲವಾಗುತ್ತದೆ.

ಚಿನ್ಮೂಲಾದ್ರಿ ಬ್ರ॥ ಲೇಪಾಕ್ಷ ಸ್ವಾಮಿಗಳವರ ಪುಣ್ಯತಿಥಿ ಹಾಗು ರಾಜರ್ಷಿ ಭಗೀರಥ ಜಯಂತಿಯನ್ನು ಪ್ರತಿ ವರ್ಷ ಆಚರಿಸುವುದರ ಮೂಲಕ ಜನಾಂಗದಲ್ಲಿ ಭಾವನಾತ್ಮಕ ಸಂಘಟನೆ ಮಾಡಬೇಕಾಗಿದೆ. ಜಗದ್ಗುರುಗಳ ಪಟ್ಟಾಭಿಷೇಕ ಮಹೋತ್ಸವದ ಸವಿನೆನಪನ್ನು ಪ್ರತಿ ವರ್ಷ ಆಚರಿಸುವ ಅವಶ್ಯವಿದೆ. ದಾವಣಗೆರೆಯಲ್ಲಿರುವ ಶಾಖಾಮಠದ ಪುರೋಭಿವೃದ್ಧಿಗೆ ಯೋಜನೆ ರೂಪಿಸಬೇಕು. ಗುಲ್ಬರ್ಗಾ ವಿಭಾಗದಲ್ಲಿ ಒಂದು, ಬೆಳಗಾವಿ ವಿಭಾಗದಲ್ಲಿ ಒಂದು, ಮೈಸೂರು ವಿಭಾಗದಲ್ಲಿ ಒಂದು, ಬೆಂಗಳೂರು ವಿಭಾಗದಲ್ಲಿ ಒಂದು-ಹೀಗೆ ಇನ್ನುಳಿದ ನಾಲ್ಕು ಶಾಖಾಮಠಗಳು ಕೂಡಲೇ ಸ್ಥಾಪನೆಯಾಗಬೇಕಾಗಿದೆ.

ಈ ಸಮಾಜದ ಏಳಿಗೆಗೆ ಹಗಲಿರುಳು ದುಡಿಯುತ್ತಿರುವಂತಹ ಡಿ.ಎಸ್. ರಾಮಪ್ಪ ಅವರನ್ನು ಸದಾ ಕಾಲ ಸ್ಮರಿಸುವಂತಹ ಕಾರ್ಯಕ್ರಮ ರೂಪಿಸಬೇಕು. ಹೀಗೆ ಬೆಟ್ಟದಷ್ಟು ಆಸೆ ಆಕಾಂಕ್ಷೆಗಳಿವೆ. ಜಿಲ್ಲೆಯಲ್ಲಿ ಉತ್ಸಾಹ ತರುಣಪಡೆ ಕೂಡ ಇದೆ. ಹಿರಿಯರು ಅವರಿಗೆ ಸರಿಯಾದ ಮಾರ್ಗದರ್ಶನ ನೀಡಬೇಕು. ದಾವಣಗೆರೆ ಜಿಲ್ಲೆಯ ರಾಜಕೀಯ, ಸಾಮಾಜಿಕ ಹಾಗು ಆರ್ಥಿಕ ಚಟುವಟಿಕೆಗಳಲ್ಲಿ ಉಪ್ಪಾರ ಸಮುದಾಯ ಗಣನೀಯ ಪಾತ್ರ ವಹಿಸುವ ಕಾಲ ಸನ್ನಿಹಿತವಾಗಿದೆ.

**ಮಾಹಿತಿಸಂಗ್ರಹ : ಯು. ಹನುಮಂತಪ್ಪ**

*




# * ಚಿತ್ರದುರ್ಗ ಜಿಲ್ಲೆ

## ಐತಿಹಾಸಿಕ ಹಿನ್ನೋಟ

**ಚಿ**ತ್ರದುರ್ಗ ಜಿಲ್ಲೆ ಕರ್ನಾಟಕ ರಾಜ್ಯದ ಅತಿಮುಖ್ಯ ಜಿಲ್ಲೆಯೆನಿಸಿದೆ. 1997ರಲ್ಲಿ ದಾವಣಗೆರೆ ಜಿಲ್ಲೆ ರೂಪುಗೊಂಡನಂತರ, ಈ ಜಿಲ್ಲೆ ಮೂರು ತಾಲ್ಲೂಕನ್ನು ಕಳೆದುಕೊಂಡಿತು. ರಾಜಧಾನಿ ಬೆಂಗಳೂರಿನಿಂದ ಈ ಜಿಲ್ಲೆ 200ಕಿ.ಮೀ. ದೂರದಲ್ಲಿದೆ. ಈ ಜಿಲ್ಲೆಯ ಪೂರ್ವಕ್ಕೆ ಆಂಧ್ರಪ್ರದೇಶದ ಅನಂತಪುರ, ಆಗ್ನೇಯಕ್ಕೆ ತುಮಕೂರು, ನೈರುತ್ಯಕ್ಕೆ ಚಿಕ್ಕಮಗಳೂರು, ಪಶ್ಚಿಮಕ್ಕೆ ಶಿವಮೊಗ್ಗ ಹಾಗು ವಾಯವ್ಯಕ್ಕೆ ದಾವಣಗೆರೆ ಜಿಲ್ಲೆಗಳು ಸುತ್ತುವರಿದಿವೆ. ಚಳ್ಳಕೆರೆ, ಚಿತ್ರದುರ್ಗ, ಹಿರಿಯೂರು, ಮೊಳಕಾಲ್ಮೂರು, ಹೊಸದುರ್ಗ ಮತ್ತು ಹೊಳಲ್ಕೆರೆ ತಾಲ್ಲೂಕುಗಳು ಈ ಜಿಲ್ಲೆಯಲ್ಲಿವೆ.

2001ರ ಜನಗಣತಿಯ ಪ್ರಕಾರ ಈ ಜಿಲ್ಲೆಯಲ್ಲಿ 15,10,223 ಜನಸಂಖ್ಯೆಯಿದೆ. ಅದರಲ್ಲಿ ಪುರುಷರು 7,72,649, ಸ್ತ್ರೀಯರು 7,37,578. ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 64.98. ಅದರಲ್ಲಿ ಪುರುಷರ ಸಾಕ್ಷರತೆ ಶೇ. 74.69. ಸ್ತ್ರೀಯರ ಸಾಕ್ಷರತೆಯ ಪ್ರಮಾಣ ಶೇ. 54.62.

ಚಿತ್ರದುರ್ಗಕ್ಕೆ ಹಿಂದೆ ಹಿಡಿಂಬಾಪಟ್ಟಣ, ಚಿನ್ಮೂಲಾದ್ರಿ, ಬೆಮ್ಮಟನಕಲ್ಲು, ಸೂಳಗಲ್ಲು, ಪೆರುಮಾಳಪುರ, ಚಿತ್ರಕಲ್ಲುದುರ್ಗ, ಮಲ್ಲನಾಯಕನದುರ್ಗ ಎಂಬ ಹೆಸರುಗಳಿತ್ತೆಂದು ತಿಳಿದುಬರುತ್ತದೆ. ಇದಕ್ಕೆ ಟಿಪ್ಪು ಕೊಟ್ಟ ಹೆಸರು ಫರೂಕಾಬಾದ್. ಚಿತ್ರದುರ್ಗದ ಕೋಟೆ ವಿಶ್ವಪ್ರಸಿದ್ಧವಾದುದು. ಈ ಕೋಟೆಯಲ್ಲಿ 19 ದ್ವಾರಗಳು, 38 ದಿಡ್ಡಿಬಾಗಿಲು, 35 ಗುಪ್ತದ್ವಾರಗಳು ಹಾಗು ನಾಲ್ಕು ಸುರಂಗಮಾರ್ಗಗಳಿವೆ.

ಈ ಜಿಲ್ಲೆಯಲ್ಲಿನ ಎತ್ತರದ ಶಿಖರಗಳೆಂದರೆ ದಕ್ಷಿಣಕ್ಕಿರುವ ಜೋಗಿಮರಡಿ (1159 ಮಿ) ಏಚಲದುರ್ಗ (1160 ಮೀ) ಬೀರನಕಲ್ಲು ದುರ್ಗ ಹಾಗು ಅತಿ ಎತ್ತರದ ಹೊಸದುರ್ಗ ತಾಲ್ಲೂಕಿನ ಹಾಲರಾಮೇಶ್ವರಗುಡ್ಡ (1181 ಮೀ).

ಜಿಲ್ಲೆಯ ಪ್ರಮುಖ ಬೆಟ್ಟಗಳೆಂದರೆ ನುಲಿಕಭೈರವ (921 ಮೀ) ಜಟ್ಟಂಗಿ ರಾಮೇಶ್ವರ (1057 ಮೀ) ಹಾಗು ಶಾಂತಿಗುಡ್ಡ (991 ಮೀ). ಶಾಂತಿಗುಡ್ಡದ ಈ ಪ್ರದೇಶ ವಿಶಿಷ್ಟ ಸೌಂದರ್ಯದಿಂದ ಕೂಡಿದ್ದೆಂದು ಬ್ರೂಸ್ ಫೂಟ್ ಎಂಬ ಪ್ರವಾಸಿ ಬರೆಯುತ್ತಾನೆ.

ಈ ಜಿಲ್ಲೆಯ ಪ್ರಮುಖ ನದಿ ವೇದಾವತಿ. ತುಮಕೂರಿನಲ್ಲಿ ಹುಟ್ಟುವ 'ಸ್ವರ್ಣಮುಖಿ' ನದಿ ಕೂಡ ಈ ಜಿಲ್ಲೆಯಲ್ಲಿ ಹರಿದು ವೇದಾವತಿಯನ್ನು ಸೇರುತ್ತದೆ. ವಾಣಿವಿಲಾಸ ಸಾಗರದ ಹತ್ತಿರದ ಗಾಯತ್ರಿ ಜಲಾಶಯ ಈ ಜಿಲ್ಲೆಯ ಅತಿ ದೊಡ್ಡ ನೀರಾವರಿ ಆಸರೆ. ಭದ್ರಾ ಎಡದಂಡೆ ನಾಲಾ ಕಾಮಗಾರಿ ಅನುಷ್ಠಾನಗೊಂಡರೆ ಜಿಲ್ಲೆಯ ನೀರಾವರಿಗೆ ಹೆಚ್ಚಿನ ಇಂಬು ದೊರೆಯುತ್ತದೆ. ಚಿತ್ರದುರ್ಗ ತಾಲ್ಲೂಕಿನ ಭೀಮಸಮುದ್ರ, ಚಳ್ಳಕೆರೆ ತಾಲ್ಲೂಕಿನ ಧರ್ಮಾಪುರ ಮತ್ತು ಹೊಳಲ್ಕೆರೆ ತಾಲ್ಲೂಕಿನ ಮುತಗನೂರು ಕೆರೆಗಳನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು.

ಚಿತ್ರದುರ್ಗ ಜಿಲ್ಲೆಯಲ್ಲಿ ವಾರ್ಷಿಕ ಮಳೆ ಸರಾಸರಿ 573 ಮಿ.ಮೀ. ಚಳಿಗಾಲದ ಸರಾಸರಿ ಉಷ್ಣತೆ 27.9 ಸೆಂ. ಹಾಗು ಬೇಸಿಗೆಯ ಗರಿಷ್ಠ ಉಷ್ಣತೆಯ ಪ್ರಮಾಣ $37^0$ ಸೆಂ. ಜಿಲ್ಲೆಯಲ್ಲಿ ಅನೇಕ ಸಾರಿ ಮಳೆಯ ಪ್ರಮಾಣ ಕಡಿಮೆಯಾದ ಕಾರಣ ಆಗಾಗ್ಗೆ ಭೀಕರ ಬರಗಾಲಕ್ಕೆ ತುತ್ತಾಗುತ್ತದೆ.

ಚಿತ್ರದುರ್ಗ ಜಿಲ್ಲೆ ಮೂಲತಃ ಕೃಷಿ ಪ್ರಧಾನವಾದ ಜಿಲ್ಲೆ. ಹಿಂದೆ ಹೊಸದುರ್ಗ ಹಾಗು ಚಳ್ಳಕೆರೆಗಳಲ್ಲಿದ್ದ ಅಮೃತಮಹಲ್ ಹುಲ್ಲುಗಾವಲು, ಈಗ ವ್ಯವಸಾಯ ಯೋಗ್ಯವಾದ ಭೂಮಿಯಾಗಿದೆ. ಜೋಳ, ರಾಗಿ ಇಲ್ಲಿನ ಪ್ರಮುಖ ಆಹಾರ ಬೆಳೆ. ಶೇಂಗಾ, ಹತ್ತಿ, ಕಬ್ಬು, ಸೂರ್ಯಕಾಂತಿ, ಹೊಗೆಸೊಪ್ಪು, ತೆಂಗು ಮುಂತಾದ ವಾಣಿಜ್ಯ ಬೆಳೆಗಳಿಗೆ ಇಲ್ಲಿ ಅವಕಾಶವಿದೆ. ತೊಗರಿ, ನವಣೆ, ಸಾಸಿವೆ, ಈರುಳ್ಳಿ, ಬಾಳೆ, ಮೆಣಸಿನಕಾಯಿ, ಹಣ್ಣು ಮತ್ತಿತರ ತರಕಾರಿಗಳನ್ನು ಇಲ್ಲಿ ಬೆಳೆಯಲಾಗುತ್ತದೆ.

ಅರಣ್ಯ ಸಂಪತ್ತು ಹೆಚ್ಚಿಲ್ಲದಿದ್ದರೂ ಹುಣಸೆ, ಹಿಪ್ಪೆ, ಮಾವು, ಜಾಲಿ, ದಿಂಡಿಗ, ಬೇವು, ಕಲ್ಲೆ, ಚುಜ್ಜಲು, ತಂಗಡಿ ಮೊದಲಾದ ಮರಗಳನ್ನು ಈ ಜಿಲ್ಲೆಯಲ್ಲಿ ಕಾಣಬಹುದು.

ಚಿತ್ರದುರ್ಗ ಜಿಲ್ಲೆ ಖನಿಜ ಸಂಪತ್ತಿಗೆ ಪ್ರಸಿದ್ಧವಾದ ಸ್ಥಳ. ಇಂಗಳದಾಳುವಿನಲ್ಲಿ ಅಪಾರವಾದ ತಾಮ್ರ ನಿಕ್ಷೇಪವಿದೆ. ಕೋಟೆಮುರಡಿ, ಗೊಣೂರು, ಬೂದಿಮರಡಿ, ಜವನಗೊಂಡನಹಳ್ಳಿ, ಅಣ್ಣೇಸಿರ್ರಿ, ದಿಂಡಾವರಗಳಲ್ಲಿ ಚಿನ್ನದ ನಿಕ್ಷೇಪವಿದೆ ಎಂದು ತಿಳಿದು ಬಂದಿದೆ. ಹಿರಿಯೂರು ತಾಲ್ಲೂಕಿನ ಹಲವೆಡೆ ಕಬ್ಬಿಣದ ಅದಿರು ಕಾಣಬರುತ್ತದೆ. ಸುಣ್ಣದ ಕಲ್ಲು ಹಾಗು ಮ್ಯಾಂಗನೀಸ್ ಈ ಜಿಲ್ಲೆಯ ಹಲವು ಕಡೆ ದೊರೆಯುತ್ತದೆ.

ಚಿತ್ರದುರ್ಗ ಜಿಲ್ಲೆ ಪ್ರಾಚೀನ ಕಾಲದಿಂದಲೂ ಜನವಸತಿಯ ಸ್ಥಳವೆಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಬ್ರಹ್ಮಗಿರಿ, ಚಿಕ್ಕಮದುರೆ, ತುರುವನೂರು ಮೊದಲಾದ ಕಡೆ ಪ್ರಾಗೈತಿಹಾಸದ ಕುರುಹುಗಳು ಯಥೇಚ್ಛವಾಗಿ ದೊರಕಿವೆ.

ಬ್ರಹ್ಮಗಿರಿ, ಸಿದ್ಧಾಪುರ ಹಾಗು ಜಟ್ಟಂಗಿ ರಾಮೇಶ್ವರಗಳಲ್ಲಿ ಮೌರ್ಯವಂಶದ ಪ್ರಸಿದ್ಧ ದೊರೆ, ಅಶೋಕನ ಶಿಲಾಶಾಸನಗಳು ದೊರಕಿವೆ. ಅಂದರೆ, ಚಿತ್ರದುರ್ಗ ಪ್ರದೇಶ ಮೊದಲು ಮೌರ್ಯ ಚಕ್ರಾಧಿಪತಿಗಳ ಆಡಳಿತಕ್ಕೆ ಒಳಪಟ್ಟಿತ್ತೆಂದು ಹೇಳಬಹುದು. ಇಲ್ಲಿ ದೊರೆತ ನಾಣ್ಯಗಳ ಸಹಾಯದಿಂದ ಈ ಪ್ರದೇಶ ಒಂದು ಮತ್ತು ಎರಡನೆಯ ಶತಮಾನದಲ್ಲಿ ರೋಂ ಸಾಮ್ರಾಜ್ಯದೊಡನೆ ವ್ಯಾಪಾರ ಸಂಬಂಧಗಳನ್ನಿಟ್ಟುಕೊಂಡಿತ್ತೆಂದು ಧಾರಾಳವಾಗಿ ಹೇಳಬಹುದು.

ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ ಶಾತವಾಹನರ ಆಳ್ವಿಕೆಗೆ ಸಂಬಂಧಪಟ್ಟ ಅನೇಕ ಸೀಸದ ನಾಣ್ಯಗಳನ್ನು ಸಂಶೋಧಿಸಲಾಗಿದೆ.

ಚಿತ್ರದುರ್ಗದ ಸಮೀಪದಲ್ಲಿರುವ ಚಂದ್ರವಳ್ಳಿಯಲ್ಲಿ, ಕದಂಬ ವಂಶದ ಸಂಸ್ಥಾಪಕ ಮಯೂರವರ್ಮನ ಶಾಸನ ದೊರೆತಿದೆ. ಆ ಶಾಸನದ ಮೂಲಕ, ಅವನ ಸಾಮ್ರಾಜ್ಯದ ವಿಸ್ತಾರವನ್ನು ತಿಳಿಯಬಹುದು. ಅಲ್ಲಿ ಮಯೂರವರ್ಮ ಕೆರೆ ಕಟ್ಟಿಸಿದನೆಂದು ಹೇಳಲಾಗಿದೆ.

ಬಾದಾಮಿ ಚಾಲುಕ್ಯರ ಆಳ್ವಿಕೆಗೂ ಕೂಡ ಈ ಪ್ರದೇಶ ಒಳಪಟ್ಟಿತು. ನೊಳಂಬವಾಡಿ 32,000 ಅಂದರೆ ಚಿತ್ರದುರ್ಗದ ಭಾಗವೇ ಆಗಿತ್ತು. ನೊಳಂಬರ ಅಧೀನದಲ್ಲಿ ಈ ಪ್ರದೇಶವಿದ್ದರು ಹಿರೇಮಧುರೆ, ಚಿಕ್ಕಮಧುರೆ ಅವರ ಕಾಲದಲ್ಲಿ ಪ್ರಮುಖ ಸ್ಥಳಗಳಾಗಿದ್ದವು.

ಹೊಯ್ಸಳರ ಆಳ್ವಿಕೆಗೂ ಈ ಪ್ರದೇಶ ಒಳಪಟ್ಟಿತ್ತು. ಹೊಯ್ಸಳ ವಾಸ್ತುಶಿಲ್ಪಕ್ಕೆ ಸಂಬಂಧಪಟ್ಟ ಅನೇಕ ದೇವಾಲಯಗಳಿವೆ. ಉಚ್ಚಂಗಿ ಪಾಂಡ್ಯರು ಈ ಪ್ರದೇಶವನ್ನು ಆಳುತ್ತಿದ್ದರೆಂದು ಶಾಸನಗಳು ಹೇಳುತ್ತವೆ. ಕ್ರಿ.ಶ. 1220ರಲ್ಲಿ ಹೊಯ್ಸಳ ದೊರೆ ಇಮ್ಮಡಿ ಬಲ್ಲಾಳ, ಪಾಂಡ್ಯರನ್ನು ಸೋಲಿಸಿ, ಈ ಪ್ರದೇಶವನ್ನು ವಶಪಡಿಸಿ ಕೊಂಡನು. ದೇವಗಿರಿಯ ಯಾದವರು, ಈ ಪ್ರದೇಶವನ್ನು ಆಳಿದ ಬಗ್ಗೆ ಉಲ್ಲೇಖವಿದೆ. ವಿಜಯನಗರ ಸಾಮ್ರಾಜ್ಯದಲ್ಲಿ ಇದೊಂದು ಅತಿಮುಖ್ಯ ಕೇಂದ್ರವಾಗಿತ್ತು.

ಕಾಮಗೇರಿ ವಂಶಕ್ಕೆ ಸೇರಿದ ಚಿತ್ರದುರ್ಗದ ಪಾಳೇಗಾರರು ಇಲ್ಲಿನ ಪ್ರಖ್ಯಾತ ಆಳರಸರು. ಇವರು ಕ್ರಿ.ಶ. 1564ರಲ್ಲಿ ಸ್ವತಂತ್ರ ಆಳ್ವಿಕೆ ಪ್ರಾರಂಭಿಸಿದರು. ಇವರಲ್ಲಿ ಐದನೆಯ ಮದಕರಿನಾಯಕ, ಕಸ್ತೂರಿ ರಂಗಪ್ಪನಾಯಕ, ಭರಮಪ್ಪನಾಯಕ ಹಾಗು ಕೊನೆಯ ದೊರೆ ರಾಜವೀರ ಮದಕರಿನಾಯಕ ಪ್ರಮುಖ ದೊರೆಗಳು. ಚಿತ್ರದುರ್ಗದ ಪಾಳೇಗಾರರು ಒಂದು ಕಡೆ ಮರಾಠರ ಜೊತೆ ಮತ್ತೊಂದು ಕಡೆ ಮೈಸೂರು ಸಂಸ್ಥಾನದ ಜೊತೆ ಕಾದಾಡಬೇಕಾಯಿತು. ಕ್ರಿ.ಶ. 1778ರಲ್ಲಿ ಹೈದರ್ ಆಲಿ, ರಾಜವೀರ ಮದಕರಿನಾಯಕನನ್ನು ಸೋಲಿಸಿ, ಚಿತ್ರದುರ್ಗವನ್ನು ತನ್ನ ಸಂಸ್ಥಾನಕ್ಕೆ ಸೇರಿಸಿಕೊಂಡನು.

ಟಿಪ್ಪುವಿನ ಪತನಾನಂತರ, ಚಿತ್ರದುರ್ಗ ಬ್ರಿಟಿಷರ ಆಡಳಿತದಲ್ಲಿ ಮೊದಲಿಗೆ ಕಮೀಷನ್‌ರ ಆಳ್ವಿಕೆಗೆ ಒಳಪಟ್ಟಿತು. ಅವರು ಚಿತ್ರದುರ್ಗ ಹಾಗು ತುಮಕೂರು ಜಿಲ್ಲೆಯನ್ನು ಒಳಗೊಂಡಂತೆ ಚಿತ್ರದುರ್ಗ ವಿಭಾಗವನ್ನು ಸೃಷ್ಟಿಸಿದರು. ಇದಕ್ಕೆ ತುಮಕೂರು ಕೇಂದ್ರ ಸ್ಥಾನವಾಗಿತ್ತು. ಕ್ರಿ.ಶ. 1863ರಲ್ಲಿ ಚಿತ್ರದುರ್ಗ ಜಿಲ್ಲೆಯನ್ನು ನಗರ ವಿಭಾಗಕ್ಕೆ ಸೇರಿಸಲಾಯಿತು. ಕ್ರಿ.ಶ. 1882ರಲ್ಲಿ ಚಿತ್ರದುರ್ಗವನ್ನು ತುಮಕೂರು ಜಿಲ್ಲೆಗೆ ಸೇರಿಸಿ ಅದನ್ನು ಉಪವಿಭಾಗವನ್ನಾಗಿ ಮಾಡಲಾಯಿತು. ಕ್ರಿ.ಶ. 1883ರಲ್ಲಿ ಇದನ್ನು ಸ್ವತಂತ್ರ ಜಿಲ್ಲೆಯಾಗಿ ರೂಪಿಸಲಾಯಿತು. ಪಾವಗಡವನ್ನು ತುಮಕೂರು ಜಿಲ್ಲೆಗೆ ಸೇರಿಸಲಾಯಿತು. 1956ರಲ್ಲಿ ಏಕೀಕರಣವಾದ ನಂತರ ಚಿತ್ರದುರ್ಗ ಜಿಲ್ಲೆ ಬೆಂಗಳೂರು ವಿಭಾಗಕ್ಕೆ ಸೇರಿತು.

1999ರಲ್ಲಿ ಜಿಲ್ಲೆಯ ಪುನರ್ ವಿಂಗಡಣೆಯಾದಮೇಲೆ ಚಿತ್ರದುರ್ಗ ಜಿಲ್ಲೆಯಿಂದ ದಾವಣಗೆರೆ, ಹರಿಹರ ಹಾಗು ಜಗಳೂರು ತಾಲ್ಲೂಕುಗಳು ದಾವಣಗೆರೆ ಜಿಲ್ಲೆಗೆ ಸೇರ್ಪಡೆಯಾದವು.

ಚಿತ್ರದುರ್ಗ ಜಿಲ್ಲೆ ಮೊದಲಿನಿಂದಲೂ ಸಾಹಿತ್ಯ-ಕಲೆಗಳ ಬೀಡು. ಜಿಲ್ಲೆಯು ಜಾನಪದದ ತವರೂರು. ಜಗದ್ಗುರು ಮುರುಘರಾಜೇಂದ್ರ ಮಠ ತನ್ನ ಶೈಕ್ಷಣಿಕ ಹಾಗು ಧಾರ್ಮಿಕ ಕಾರ್ಯಗಳಿಂದಾಗಿ ರಾಷ್ಟ್ರೀಯ ಖ್ಯಾತಿ ಪಡೆದಿದೆ. ಸಿರಿಗೆರೆಯ ಬೃಹನ್ಮಠ ಕೂಡಾ, ಜಿಲ್ಲೆಯ ಧಾರ್ಮಿಕ ಕ್ಷೇತ್ರದಲ್ಲಿ ಗಣನೀಯ ಪ್ರಭಾವ ಹೊಂದಿದೆ. ಕೂಡ್ಲಿ ಶೃಂಗೇರಿ ಮಠ, ಮಲ್ಲಾಡಿಹಳ್ಳಿ ರಾಘವೇಂದ್ರಸ್ವಾಮಿ ಸೇವಾಶ್ರಮ ಜಿಲ್ಲೆಯ ಸಾಂಸ್ಕೃತಿಕ ಕ್ಷೇತ್ರಕ್ಕೆ ಗಣನೀಯ ಕಾಣಿಕೆ ನೀಡಿವೆ.

ಚಿತ್ರದುರ್ಗ ಜಿಲ್ಲೆಯ ಉಪ್ಪಾರಹಟ್ಟಿಯಲ್ಲಿ, ಉಪ್ಪಾರ ಸಮುದಾಯದ ಮೂಲ ಮಠವಿದೆ. ಅತ್ಯಂತ ಸುಂದರವಾದ ಚನ್ನಕೇಶವ ವಿಗ್ರಹವಿದೆ. ಹೊಸ ಗರ್ಭಗುಡಿ ನಿರ್ಮಿಸಲು ಪ್ರಕ್ರಿಯೆ ಪ್ರಾರಂಭವಾಗಿದ್ದು, ಚನ್ನಕೇಶವ ಒಂದು ಕೊಠಡಿಯಲ್ಲಿದ್ದು, ಅಲ್ಲೇ ಪೂಜೆ ಸ್ವೀಕರಿಸುತ್ತಿದ್ದಾನೆ. ಉಪ್ಪಾರ ಜನಾಂಗದ ಪ್ರತಿಷ್ಠೆಯ ಸಂಕೇತವಾದ, ಚನ್ನಕೇಶವ ದೇವಸ್ಥಾನವನ್ನು ಪುನರ್ ನಿರ್ಮಾಣ ಮಾಡಬೇಕಾದ ಹೊಣೆ, ಈ ಸಮುದಾಯದ ಮೇಲಿದೆ. ಹೊಸದುರ್ಗ ತಾಲ್ಲೂಕಿನ ಬ್ರಹ್ಮವಿದ್ಯಾನಗರದಲ್ಲಿ ಪೂಜ್ಯ ಲೇಪಾಕ್ಷ ಸ್ವಾಮಿಗಳು ನಿರ್ಮಿಸಿದ ಉಪ್ಪಾರ ಸಮುದಾಯದ ಜಗದ್ಗುರು ಪೀಠವಿದೆ. ಸುಮಾರು ಸಾವಿರಾರು ತೆಂಗಿನ ಮರಗಳನ್ನು 'ಸಹಕಾರಿ ತತ್ವ'ದ ಮೇಲೆ ಬೆಳೆಸಿದ ಕೀರ್ತಿ ಪೂಜ್ಯ ಲೇಪಾಕ್ಷ ಸ್ವಾಮೀಜಿ ಅವರಿಗೆ ಸಲ್ಲುತ್ತದೆ. ಪ್ರಸ್ತುತ ಪೂಜ್ಯಶ್ರೀ ಪುರುಷೋತ್ತಮಾನಂದಪುರಿ ಸ್ವಾಮೀಜಿ ಅವರು ತಮ್ಮ ಗುರುಗಳ ಹೆಜ್ಜೆಯಲ್ಲೇ ಸಾಗಿದ್ದಾರೆ. ಬ್ರಹ್ಮ ವಿದ್ಯಾನಗರದಲ್ಲಿ ಬ್ರ। ಲೇಪಾಕ್ಷ ಸ್ವಾಮಿಗಳ ಗದ್ದುಗೆ ಹಾಗು ಹೊಸ ಮಠ ನಿರ್ಮಾಣ ಹಂತದಲ್ಲಿವೆ.

ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ ದೇವಸ್ಥಾನ ಸಾಕಷ್ಟು ಪ್ರಸಿದ್ಧವಾಗಿದೆ. ಚಿತ್ರದುರ್ಗದ ಬೆಟ್ಟದ ಮೇಲೆ ಸಂಪಿಗೆ ಸಿದ್ದೇಶ್ವರ, ಹಿಡಂಬೇಶ್ವರ (ಏಕನಾಥೇಶ್ವರ) ದೇವಸ್ಥಾನಗಳಿವೆ. ಫಲ್ಗುಣೇಶ್ವರ, ಗೋಪಾಲಕೃಷ್ಣ, ಅಂಜನೇಯ, ಬಸವೇಶ್ವರ ದೇವಾಲಯಗಳಿವೆ.

ಚಿತ್ರದುರ್ಗ ಜಿಲ್ಲೆ ಅನೇಕ ಹಿರಿಯ ರಾಜಕೀಯ ಮುತ್ಸದ್ದಿಗಳನ್ನು ಕೊಟ್ಟ ಕೀರ್ತಿಗೆ ಪಾತ್ರವಾಗಿದೆ. ಸುದೀರ್ಘ ಕಾಲ ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ಎಸ್. ನಿಜಲಿಂಗಪ್ಪ ಅವರು ತಮ್ಮ ಬದುಕಿನ ಕೊನೆಯತನಕ ಚಿತ್ರದುರ್ಗದಲ್ಲೇ ಇದ್ದರು. ಲೋಕಸಭಾ ಸದಸ್ಯರಾಗಿದ್ದ ಕೆಂಚಪ್ಪ ಅವರು ಸ್ಮರಣಾರ್ಹರು. ಭಾರತೀಯ ರೈಲ್ವೆಯಲ್ಲಿ ನೂತನ ಅವಿಷ್ಕಾರ ಮಾಡಿದ ಸಿ.ಕೆ. ಜಾಫರ್ ಷರೀಫ್ ಚಿತ್ರದುರ್ಗ ಜಿಲ್ಲೆಯವರು. ವೀರಭದ್ರಪ್ಪ, ಬಿ. ಮುಸಿಯಪ್ಪ, ಜೆ.ಎಂ. ಇಮಾಂಸಾಹೇಬ್ ಈ ಜಿಲ್ಲೆಯ ರಾಜಕೀಯದಲ್ಲಿದ್ದವರು. ಕೆ.ಹೆಚ್. ರಂಗನಾಥ್ ತಮ್ಮ ಸುದೀರ್ಘ ರಾಜಕೀಯ ಜೀವನವನ್ನು ಈ ಜಿಲ್ಲೆಯಲ್ಲಿ ನಡೆಸಿದ್ದಾರೆ. ಡಿ. ಮಂಜುನಾಥ್, ಹೊ.ಚಿ. ಬೋರಯ್ಯ, ಬಿ.ಎಲ್. ಗೌಡ, ಹೆಚ್. ಏಕಾಂತಯ್ಯ, ಉಮಾಪತಿ, ಕೋದಂಡರಾಮಯ್ಯ, ಕೆ. ಮಲ್ಲಣ್ಣ, ಮೂಡಲಗಿರಿಯಪ್ಪ, ಜಯಣ್ಣ, ತಿಪ್ಪೇಸ್ವಾಮಿ, ಎನ್. ಗೋಪಾಲಕೃಷ್ಣ, ತಿಪ್ಪಾರೆಡ್ಡಿ, ಶಶಿಕುಮಾರ್ ಮೊದಲಾದ ಹತ್ತಾರು ಜನನಾಯಕರುಗಳನ್ನು ನೆನಪಿಸಿಕೊಳ್ಳಬಹುದು.

ಚಿತ್ರದುರ್ಗ ಮೊದಲಿನಿಂದಲೂ ಸಾಹಿತ್ಯ ಸಂಘಟನೆಗೆ ಹೆಸರಿಸಲ್ಪಡುವ ಜಿಲ್ಲೆಯಾಗಿದೆ. 'ಕುಮಾರರಾಮನ ಸಾಂಗತ್ಯ' ರಚಿಸಿದ ನಂಜುಂಡ ಕವಿ ಈ ಜಿಲ್ಲೆಯವನು. ಹೆಳವನಕಟ್ಟೆ ಗಿರಿಯಮ್ಮ, ಭಕ್ತಕವಯಿತ್ರಿ. ಆಧುನಿಕ ಕಾಲದಲ್ಲಿ ಕನ್ನಡ ಸಾಹಿತ್ಯಕ್ಕೆ ಅನನ್ಯ ಸೇವೆ ಸಲ್ಲಿಸಿದ ತಳುಕಿನ ವೆಂಕಣ್ಣಯ್ಯ, ಚಳ್ಳಕೆರೆ ತಾಲ್ಲೂಕಿನ ತಳುಕಿನವರು. ಅತ್ಯುತ್ತಮ ಗದ್ಯ ಲೇಖಕರಾದ ಡಾ॥ ತ.ಸು. ಶಾಮರಾಯರು, ವೆಂಕಣ್ಣಯ್ಯ ಅವರ ತಮ್ಮಂದಿರು. ವೆಂಕಣ್ಣಯ್ಯನವರ ದೊಡ್ಡಪ್ಪನ ಮಗ, ಕರ್ನಾಟಕದ ಪ್ರಸಿದ್ಧ ಕಾದಂಬರಿಕಾರರಾದ ತರಾಸು, ಪ್ರಸಿದ್ಧ ಪ್ರಕಾಶಕರಾದ ಟಿ.ಎಸ್. ಛಾಯಾಪತಿ ಶಾಮರಾಯರ ಮಗ.

ಮತ್ತೊಬ್ಬ ಪ್ರಸಿದ್ಧ ಕಾಂದಬರಿಕಾರರಾದ ಸಿ.ಕೆ. ನಾಗರಾಜರಾವ್, ಖ್ಯಾತ ಸಂಶೋಧಕರಾದ ಹುಲ್ಲೂರು ಶ್ರೀನಿವಾಸಜೋಯಿಸ್, ಹಿರಿಯ ಲೇಖಕರಾದ ಎಂ.ಎಸ್. ಪುಟ್ಟಣ್ಣ, ಗದ್ಯಶಿಲ್ಪಿ ಸಿದ್ಧವನಹಳ್ಳಿ ಕೃಷ್ಣಶರ್ಮ, ಹಿರಿಯರಾದ ಅರಾಸೇ, ಪ್ರಸಿದ್ಧ ಪ್ರಕಾಶಕರಾದ ಪ್ರೊ॥ ಹೆಚ್. ಎಂ. ಶಂಕರನಾರಾಯಣರಾವ್, ಬಿ. ರಾಮರಾವ್, ಬೆಳಗೆರೆ ಕೃಷ್ಣಶಾಸ್ತ್ರೀ, ಪ್ರಸಿದ್ಧ ಜಾನಪದ ವಿದ್ವಾಂಸರಾದ ಕರಾಕೃ, ಪಿ.ಆರ್. ತಿಪ್ಪೇಸ್ವಾಮಿ, ಖ್ಯಾತ ಪತ್ರಕರ್ತರಾದ ಬಿ.ವಿ. ವೈಕುಂಠರಾಜು, ಪತ್ರಕರ್ತರಾದ ಜೆ.ಪಿ. ಬಸವರಾಜ, ರವಿಬೆಳಗೆರೆ, ಸಂಶೋಧಕರಾದ ಪ್ರೊ॥ ಬಿ. ಶ್ರೀಶೈಲಾರಾಧ್ಯ, ಪ್ರೊ॥ ಬಿ. ರಾಜಶೇಖರಪ್ಪ, ಪ್ರೊ॥ ಲಕ್ಷ್ಮಣತೆಲಗಾವಿ, ಹಿರಿಯ ಲೇಖಕರಾದ ಮ. ಶ್ರೀಧರಮೂರ್ತಿ, ಸಂಶೋಧಕರಾದ ಎಂ.ವಿ. ಚಿತ್ರಲಿಂಗಯ್ಯ, ಮಲ್ಲಾಡಿಹಳ್ಳಿ ಸೇವಾಶ್ರಮದ ರಾಘವೇಂದ್ರ ಸ್ವಾಮೀಜಿ ಅರ್ಥಾಥ್ ತಿರುಕ ಮೊದಲಾದವರನ್ನು ಉಲ್ಲೇಖಿಸಬಹುದು.

ಟಿ. ಗಿರಿಜ, ಡಾ॥ ಹೆಚ್. ಗಿರಿಜಮ್ಮ, ಖ್ಯಾತ ಕಾದಂಬರಿಕಾರರಾದ ಬಿ.ಎಲ್. ವೇಣು, ರಾಘವೇಂದ್ರಪಾಟೀಲ, ಬಿ.ಆರ್. ಲಕ್ಷ್ಮಣರಾವ್, ಲೋಕೇಶ್ ಅಗಸನಕಟ್ಟೆ,

ಕೆ. ವೆಂಕಣ್ಣಾಚಾರ್, ಪಾಂಡುರಂಗ ಜೋಯಿಸ್ ಮೊದಲಾದವರ ಹೆಸರನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು.

## ಉಪ್ಪಾರ ಸಮಾಜ

ಚಿತ್ರದುರ್ಗ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯ ಮೊದಲಿನಿಂದಲೂ ಮುಂಚೂಣಿಯಲ್ಲಿದೆ. ಹುಲ್ಲೂರು ಶ್ರೀನಿವಾಸ ಜೋಯಿಸರು ಉಪ್ಪಾರ ತಿಮ್ಮಣ್ಣ ಎಂಬ ಪಾಳೇಗಾರರ ಕಾಲದ ವ್ಯಾಪಾರಿಯೊಬ್ಬನ ಚಿತ್ರಣವನ್ನು ತಮ್ಮ ಗ್ರಂಥದಲ್ಲಿ ಒದಗಿಸಿದ್ದಾರೆ. ಬ್ರಿಟಿಷರು ಭಾರತಕ್ಕೆ ಬರುವ ಮುನ್ನ, ಈ ಜನಾಂಗ ವ್ಯಾಪಕ ವಹಿವಾಟನ್ನಿಟ್ಟುಕೊಂಡಿದ್ದ ಪ್ರಮುಖ ಜನಾಂಗವೆಂದು ಹುಲ್ಲೂರು ಶ್ರೀನಿವಾಸ ಜೋಯಿಸರು ಬರೆಯುತ್ತಾರೆ. ಬ್ರಿಟಿಷರು ಎಲ್ಲ ಗೃಹ ಕೈಗಾರಿಕೆಗಳನ್ನೂ ನಾಶ ಮಾಡಿದಂತೆ, ಉಪ್ಪಿನ ವ್ಯಾಪಾರವನ್ನೂ ಕೊನೆಗಾಣಿಸಿದರು. ಇದರಿಂದ ಉಪ್ಪಾರರು ಅತ್ಯಂತ ದಯನೀಯ ಸ್ಥಿತಿಗೆ ತಳ್ಳಲ್ಪಟ್ಟರು.

ಚಿತ್ರದುರ್ಗ ಜಿಲ್ಲೆ 90,000 ಕ್ಕೂ ಅಧಿಕ ಉಪ್ಪಾರ ಬಂಧುಗಳನ್ನೊಳಗೊಂಡಿದೆ. ಜಿಲ್ಲೆಯಲ್ಲಿ ಸುಮಾರು 18,000 ಕ್ಕೂ ಅಧಿಕ ಉಪ್ಪಾರ ಕುಟುಂಬಗಳಿವೆ. 60,000 ಉಪ್ಪಾರ ಮತದಾರರು ಈ ಜಿಲ್ಲೆಯ ವ್ಯಾಪ್ತಿಗೆ ಬರುತ್ತಾರೆ. ಅವರ ವಿವರಗಳು ಹೀಗಿವೆ :

ಹೊಸದುರ್ಗ ತಾಲ್ಲೂಕಿನ ಎಲ್ಲೆಡೆ ಉಪ್ಪಾರ ಬಂಧುಗಳಿದ್ದಾರೆ. ತಾಲ್ಲೂಕಿನ ಹೊಸದುರ್ಗ ಟೌನ್, ಶ್ರೀರಾಂಪುರ, ಬೆಲಗೂರು, ಕೋಡಿಹಳ್ಳಿ, ಗರಗ, ತಂಡಗ, ಕುರುಬರಹಳ್ಳಿ, ಸೋಮೇನಹಳ್ಳಿ, ಹೆಗ್ಗೆರೆ, ಎಸ್. ನೇರಲೆಕೆರೆ, ಸೋಮಸಂದ್ರ, ದೊಡ್ಡತಲಘಟ್ಟಾ, ಹಳೆಕುಂದೂರು, ಹೊಸಕುಂದೂರು, ಶ್ರೀರಂಗಾಪುರ, ಕೊಂಡಾಪುರ, ಮಂಟೇನಹಳ್ಳಿ, ಐಲಾಪುರ, ಅರಳಹಳ್ಳಿ, ಕಬ್ಬಳ, ಮತ್ತೋಡು, ಅರೇಹಳ್ಳಿ, ಗರೀಂಬೀಳು, ಬ್ರಹ್ಮವಿದ್ಯಾನಗರ, ಮಧುರೆ, ಯಾಲಕ್ಕಪ್ಪನಹಟ್ಟಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ 5000 ಉಪ್ಪಾರ ಕುಟುಂಬಗಳಿದ್ದು, ಸುಮಾರು 24,250 ಉಪ್ಪಾರ ಜನಸಂಖ್ಯೆ ಇದೆ.

ಚಳ್ಳಕೆರೆ ತಾಲ್ಲೂಕಿನ ಚಳ್ಳಕೆರೆ, ಪರಶುರಾಮಪುರ, ದೊಡ್ಡಚೆಲ್ಲೂರು, ಚಿಕ್ಕಚೆಲ್ಲೂರು, ವಿಘ್ನೇಶ್ವರಪುರ, ಮೀರಸಾಬಿಹಳ್ಳಿ, ದುಗ್ಗಾವರ, ಸಿದ್ದಾಪುರ, ಯಲಗಟ್ಟೆ, ಸೂಜಿ ಮಲ್ಲೇಶ್ವರ, ಕಾಮಸಮುದ್ರ, ಗೌರೀಪುರ, ಮಹಾದೇವಪುರ, ಕ್ಯಾದಿಗುಂಟೆ, ಕೊಳಾಳ, ಒಡೇರಹಳ್ಳಿ, ಗೋಸಿಕೆರೆ, ಗೋಪನಹಳ್ಳಿ, ಗೋಂಬೇರಹಳ್ಳಿ, ಮರುಕುಂಟೆ, ಚೌಳೂರು, ಸಾಣೆಕೆರೆ, ಟಿ.ಎನ್. ಕೋಟೆ, ಜೆ.ಎನ್. ಕೋಟೆ, ಗೌರಸಂದ್ರ, ಅಜ್ಜನಹಳ್ಳಿ, ದೇವರಹಳ್ಳಿ, ಗುಟ್ಟಪರ್ತಿ, ಕಡಲುಡವು ಉಪ್ಪರಾಹಟ್ಟಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ 3750 ಉಪ್ಪಾರ ಕುಟುಂಬಗಳಿದ್ದು, 18,500 ಉಪ್ಪಾರ ಜನಸಂಖ್ಯೆ ಇದೆ.

ಹಿರಿಯೂರು, ಬಬ್ಬೂರು, ಆಲೂರು, ರಂಗನಾಥಪುರ, ಲಕ್ಷ್ಮೀಪುರ, ರಂಗನಾಥಪುರದ ಉಪ್ಪಾರಹಟ್ಟಿ, ಹೂವಿನಹೊಳೆ, ಮಸ್ಕಲ್, ಮಲ್ಲೇಣು, ರಾಮಸಾಗರ, ಉಪ್ಪಾರಹಟ್ಟಿ,

ಶಿವಗಂಗೆ, ಮಾರೇನಹಳ್ಳಿ, ಕಂತಕೆರೆ, ಕಲ್ಲಟ್ಟಿ, ಅರಳೀಕೆರೆ, ಧರ್ಮಪುರ, ಪರಮೇನಹಳ್ಳಿ, ಯರದಕಟ್ಟೆ, ಬಿರೇನಹಳ್ಳಿ, ಉಪ್ಪಾರಹಳ್ಳಿ, ಸಲಗಲಹದ್ದಿ, ಹಿಂಡಸಕಟ್ಟೆ, ರಂಗಾಪುರ, ಸೂರಗೊಂಡನಹಳ್ಳಿ, ತವಂದಿ, ಬೆಸಕನಹಳ್ಳಿ, ಕಸವನಹಳ್ಳಿ, ಯಳನಾಡು, ಆಲೂರು, ಬ್ಯಾಡರಹಳ್ಳಿ, ಉಪ್ಪಾರಹಟ್ಟಿ, ಶ್ರವಣಗೆರೆ, ಬೇತೂರು, ಬೇತೂರುಪಾಳ್ಯ, ಖಂಡೇನಹಳ್ಳಿ, ಪಾಳ್ಯ, ರೇಗೇನಹಳ್ಳಿ, ಗುಣಾರಹಳ್ಳಿ, ಯರಬಳ್ಳಿ, ಹರ್ತಿಕೋಟೆ, ಉಪ್ಪಾರ ಕಾಲೋನಿ, ಗಿಡ್ಡೋಬೆನಹಳ್ಳಿ, ಕರಿಯಾಲ, ಜವಗೊಂಡನಹಳ್ಳಿ, ನಾಗೇನಹಳ್ಳಿ, ದಸೂಡಿ, ಕುರುಬರಹಳ್ಳಿ, ಮಾರಿಕಣಿವೆ, ದಿಂಡಾವರ, ಬೆನಕನಹಳ್ಳಿ, ವನಾಳೆ, ಬ್ಯಾಲದಕೆರೆ ಮುಂತಾದ ಗ್ರಾಮಗಳನ್ನೊಳಗೊಂಡಂತೆ ಸುಮಾರು 4500 ಉಪ್ಪಾರ ಕುಟುಂಬಗಳಿದ್ದು, 25,000 ಉಪ್ಪಾರ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ.

ಹೊಳಲ್ಕೆರೆ ತಾಲ್ಲೂಕಿನ ಹೊಳಲ್ಕೆರೆ, ಅಂಗನೂರು, ಬಿ. ದುರ್ಗ, ಕಾಮನಹಳ್ಳಿ, ಉಂಡೇನಮಡು, ಹೊಸೂರು (ಆರ್.ಡಿ. ಕಾವಲು), ಉಪ್ಪಾರಹಟ್ಟಿ (ತಾಳಿಕಟ್ಟೆ), ಬ್ಯಾಲಹಾಳ, ದಾಸೀಕಟ್ಟೆ, ಹೊಸಟ್ಟಿ, ಆಡನೂರು ಮುಂತಾದ ಗ್ರಾಮಗಳನ್ನೊಳಗೊಂಡಂತೆ 920 ಉಪ್ಪಾರ ಕುಟುಂಬಗಳಿದ್ದು 5400 ಉಪ್ಪಾರ ಜನಸಂಖ್ಯೆ ಇದೆ.

ಚಿತ್ರದುರ್ಗ ತಾಲ್ಲೂಕಿನಲ್ಲಿ ಚಿತ್ರದುರ್ಗ, ಮದಹಳ್ಳಿ, ಚಿಕ್ಕಪುರ, ಕ್ಯಾಸಾಪುರ, ಬಳ್ಳೆಕಟ್ಟೆ, ಮುದ್ದಾಪುರ, ಬೊಮ್ಮೇನಹಳ್ಳಿ, ಕೂಗುಂಡೆ, ಕೊಡಗನಳ್ಳಿ, ಹೊಸಳ್ಳಿ, ಉಪ್ಪಾರಹಟ್ಟಿ, ಕಸವನಹಳ್ಳಿ, ಪಲ್ಲೆಗೆರೆ, ಎಣ್ಣೆಗೆರ, ಸಜ್ಜನಕರೆ, ಚಿಪ್ಪಿನಕೆರೆ, ಹೊಸಟ್ಟಿ, ಪಾಮರಹಳ್ಳಿ, ನೆಲ್ಲಿಕಟ್ಟೆ, ಕತ್ತೆ ತಿಮ್ಮನಟ್ಟಿ, ಚೌಲಿಹಳ್ಳಿ, ನಂದಿಹಳ್ಳಿ, ಜೆ.ಎನ್. ಕೋಟೆ, ಗೊಲ್ಲರಹಳ್ಳಿ ಉಪ್ಪಾರಹಟ್ಟಿ, ಗುಡ್ಡದ ರಂಗವ್ವನ ಹಳ್ಳಿ, ಕರುಬನಕಟ್ಟೆ, ಕಡಬನಕಟ್ಟ, ಐಮಂಗಲ, ಕೆಳಕೋಟೆ, ಮುಂತಾದ ಗ್ರಾಮಗಳನ್ನೊಳಗೊಂಡಂತೆ 3000 ಉಪ್ಪಾರ ಕುಟುಂಬಗಳಿದ್ದು, 16,800 ಉಪ್ಪಾರ ಜನಸಂಖ್ಯೆ ಇದೆ.

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಮೊಳಕಾಲ್ಮೂರು, ಮುರಡಿ, ಕರೆಕೊಂಡಾಪುರ, ಊರ್‍ಕಾಳ್, ಮಾಚೇನಹಳ್ಳಿ ಮುಂತಾದವುಗಳನ್ನೊಳಗೊಂಡಂತೆ 135 ಉಪ್ಪಾರ ಕುಟುಂಬಗಳಿದ್ದು, 760 ಉಪ್ಪಾರ ಜನಸಂಖ್ಯೆ ಇದೆ.

ಅವಿಭಾಜ್ಯ ಚಿತ್ರದುರ್ಗ ಜಿಲ್ಲೆಯಲ್ಲಿ 'ಜಿಲ್ಲಾ ಉಪ್ಪಾರ ಸಂಘ' ಅಸ್ಥಿತ್ವದಲ್ಲಿತ್ತು. ಅದರ ಅಧ್ಯಕ್ಷರಾಗಿದ್ದ ಕೈದಾಳ ಮಲ್ಲಪ್ಪನವರು ಹಾಗು ಡಿ.ಎಸ್. ರಾಮಪ್ಪ ಅವರು ಈ ಜನಾಂಗವನ್ನು ಸಂಘಟಿಸಲು ಹಗಲಿರುಳೂ ದುಡಿದಿದ್ದಾರೆ.

ಜಿಲ್ಲೆಯಲ್ಲಿ ಉಪ್ಪಾರ ಧಾರ್ಮಿಕ ಟ್ರಸ್ಟ್ ಅಸ್ತಿತ್ವದಲ್ಲಿದೆ. ಇದರ ಅಧ್ಯಕ್ಷರು ಪ್ರೊ. ಜಿ. ಶರಣಪ್ಪ. ಪ್ರಸ್ತುತ ಜನಾಂಗದ ಗುರುಗಳಾದ ಪೂಜ್ಯ ಶ್ರೀ ಪುರುಷೋತ್ತಮಾನಂದಪುರಿ ಅವರ ಪೀಠಾರೋಹಣ ಸಮಾರಂಭ ವಿಜೃಂಭಣೆಯಿಂದ ಜರುಗಿತು.

ಜಿಲ್ಲೆಯಲ್ಲಿ ಇವರನ್ನು ಉಪ್ಪಾರ ಅಥವಾ ಮೇಲುಸಕ್ಕರೆಯವರೆಂದು ಕರೆಯುತ್ತಾರೆ. ಉಪ್ಪಾರರು ಬಹುತೇಕ ಕನ್ನಡ ಭಾಷೆಯನ್ನೇ ಬಳಸುತ್ತಾರೆ. ಆದರೆ ಸಂದರ್ಭಕ್ಕೆ ಹೊಂದಿಕೊಂಡಂತೆ ಇವರು ತೆಲುಗು ಭಾಷೆಯನ್ನು ಬಳಸುವುದುಂಟು.

ಬ್ರಿಟಿಷ್ ಸರಕಾರ 1874 ರಲ್ಲಿ ಉಪ್ಪಾರರು ಉಪ್ಪು ತಯಾರಿಸುವುದನ್ನು ಮತ್ತು ಮಾರಾಟ ಮಾಡುವುದನ್ನು ನಿಷೇಧಿಸಿ, ಉಪ್ಪಿನ ತಯಾರಿಕೆ ಮತ್ತು ಮಾರಾಟವನ್ನು ಸರಕಾರದ ಗುತ್ತಿಗೆಯಾಗಿ ಮಾಡಿ, ಉಪ್ಪಾರರು ತಮ್ಮ ಉದ್ಯಮಕ್ಕೆ ಎರವಾಗುವಂತೆ ಮಾಡಿತು.

ಉಪ್ಪಿನ ತಯಾರಿಕೆ ಮತ್ತು ಮಾರಾಟ ನಿಷೇಧಿಸುವ ಮುನ್ನ ಉಪ್ಪಾರರು ಸಾಮಾನ್ಯವಾಗಿ ಎರಡು ಬಗೆಯಲ್ಲಿ ಉಪ್ಪನ್ನು ತಯಾರಿಸುತ್ತಿದ್ದರು. ಉಪ್ಪಿನಂಶ ತುಂಬಿರುವ (ಸವಳು) ಮಣ್ಣಿನಿಂದ ತೆಗೆಯುತ್ತಿದ್ದುದು ಒಂದು ಬಗೆಯಾದರೆ, ಉಬ್ಬರ ಕಾಲದ ಸಮುದ್ರ ನೀರಿನಿಂದ ತೆಗೆಯುತ್ತಿದ್ದುದು ಇನ್ನೊಂದು ಬಗೆ. ಈ ಜಿಲ್ಲೆಯಲ್ಲಿ ಉಪ್ಪನ್ನು ಮೊದಲನೆಯ ಬಗೆಯಿಂದ ತಯಾರಿಸುತ್ತಿದ್ದರು. ಹೀಗೆ ತಯಾರಿಸಿದ ಉಪ್ಪು ಆರೋಗ್ಯ ಹಾಗೂ ಅಡಿಗೆಗೆ ತುಂಬಾ ಶ್ರೇಷ್ಠವೆಂಬ ಭಾವನೆ ಇತ್ತು. ಅಲ್ಲದೆ ಮದ್ದುಗುಂಡು ಹಾಗೂ ಔಷಧಿ ತಯಾರಿಕೆಗೆ ಉಪ್ಪಾರ ವೃತ್ತಿ ಸಮಾಜಕ್ಕೆ ಅನಿವಾರ್ಯವಾಗಿತ್ತು. ಉಪ್ಪಿನ ತಯಾರಿಕೆ ನಿಷೇಧವಾದ ಮೇಲೆ ಚಿತ್ರದುರ್ಗ ಜಿಲ್ಲೆಯಲ್ಲಿ ಉಪ್ಪಾರರು ವ್ಯವಸಾಯವನ್ನೇ ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಬೆರಳೆಣಿಕೆಯಷ್ಟು ಜನ ವ್ಯಾಪಾರ ವೃತ್ತಿಯನ್ನು ಅವಲಂಬಿಸಿದ್ದಾರೆ. ವೆಲ್ಡಿಂಗ್ ಶಾಪ್ ಹಾಗೂ ಇಂಜಿನಿಯರಿಂಗ್ ವೃತ್ತಿಗಳಲ್ಲಿ ಉಪ್ಪಾರರನ್ನು ಗುರುತಿಸಲಾಗಿದೆ. ಆದರೆ ಹೆಚ್ಚಿನ ಜನಸಂಖ್ಯೆ ಕೃಷಿ ಕಾರ್ಮಿಕರು. ಬಹುಮಟ್ಟಿನ ಉಪ್ಪಾರರು ಬೇರೆಯವರ ಗದ್ದೆಗಳಲ್ಲಿ ಕಾರ್ಮಿಕರಾಗಿಯೇ ದುಡಿಯುತ್ತಿದ್ದಾರೆ. ಹೀಗಾಗಿ ಅವರ ಜೀವನಮಟ್ಟ ಕೂಡಾ ಅತ್ಯಂತ ಸಾಧಾರಣವಾದುದು.

ಚಿತ್ರದುರ್ಗ ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇಕಡ 64ರಷ್ಟು ಇದ್ದರೆ, ಉಪ್ಪಾರ ಸಮುದಾಯದ ಸಾಕ್ಷರತೆ ಶೇಕಡ 25ರಷ್ಟು ಎಂದು ಹೇಳಬಹುದು. ಅದರಲ್ಲಿ ಗಂಡಸರ ಸಾಕ್ಷರತೆ ಪ್ರಮಾಣ ಸುಮಾರು ಶೇಕಡ 30 ಹೆಂಗಸರ ಸಾಕ್ಷರತೆಯ ಪ್ರಮಾಣ ಸುಮಾರು ಶೇಕಡ 15, ಇದೆ. ಮಕ್ಕಳನ್ನು ಕಡ್ಡಾಯವಾಗಿ ಶಾಲೆಗೆ ಕಳುಹಿಸುವಂತೆ ಉಪ್ಪಾರ ಸಮುದಾಯವನ್ನು ಈ ಸಮಾಜದ ಹಿರಿಯರು ಒತ್ತಾಯ ಮಾಡಬೇಕಿದೆ.

ಉಪ್ಪಾರ ಸಮುದಾಯಕ್ಕೆ ಸೇರಿದ 'ಎ' ಗುಂಪಿನ ಒಬ್ಬ ಅಧಿಕಾರಿ, 10 ಜನ ವೈದ್ಯರು, ಹಾಗು 12 ಜನ ಇಂಜಿನಿಯರ್ ಅವರುಗಳನ್ನು ಗುರುತಿಸಲಾಗಿದೆ.

ಚಿತ್ರದುರ್ಗ ಜಿಲ್ಲಾಪಂಚಾಯತ್‌ನಲ್ಲಿ ಉಪಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿರುವ ಬೆಂಗಳೂರಿನ ಶಿವಶಂಕರ 'ಎ' ಗುಂಪಿನ ಅಧಿಕಾರಿ. ಹೊಸದುರ್ಗದ ಡಾ॥ ಪರಪ್ಪ, ಡಾ॥ ರಂಗನಾಥ, ಹಿರಿಯೂರಿನ ಡಾ॥ ಕೆ. ನಾಗರಾಜ, ಡಾ॥ ಮಲ್ಲೇಶ ಮತ್ತು ಡಾ॥ ವೀರಣ್ಣ ಅವರುಗಳು ಈ ಸಮಾಜದ ಪ್ರಮುಖ ವೈದ್ಯರುಗಳು.

ಚಿತ್ರದುರ್ಗ ತಾಲ್ಲೂಕಿನ ಡಿ. ನಾಗೇಂದ್ರಪ್ಪ, ಪಿ. ನಾಗೇಂದ್ರಪ್ಪ, ಎಂ. ಗಂಗಣ್ಣ, ಶಿವಣ್ಣ, ರಾಮಲಿಂಗಯ್ಯ, ಟಿ. ರಾಮಯ್ಯ ಕಂಟ್ರಾಕ್ಟರ್, ಎಲ್. ಷಣ್ಮುಖಪ್ಪ, ಜಿ. ಶರಣಪ್ಪ, ಕೋಗುಂಡೆ ನರಸಿಂಹಪ್ಪ, ಆರ್. ತಿಪ್ಪೇಸ್ವಾಮಿ, ಜೋಗಣ್ಣ, ಹನಮಜ್ಜ, ಅರೆಹಳ್ಳಿ ಲಕ್ಷ್ಮಣ, ಶ್ರೀರಂಗಪ್ಪ ಮುಂತಾದವರು ಸಮಾಜದ ಪ್ರಮುಖರು ಹಾಗು ಹಿತಚಿಂತಕರು.

ಹಿರಿಮಸ್ಕಲ್ಲಿನ ಆರ್. ಮಂಜುನಾಥ್, ಚಿತ್ರದುರ್ಗದ ನಾಗರಾಜ, ನೀರುಗುಂದದ ಮಂಜುನಾಥ್ ಸಾಣೇಹಳ್ಳಿ, ಶಿವಪುರದ ಕೊಂಡಾಪುರ ಎಂ. ಮಲ್ಲಪ್ಪ ಅವರುಗಳು ಈ ಸಮಾಜಕ್ಕೆ ಸೇರಿದ ವಕೀಲರಾಗಿದ್ದಾರೆ.

ಹಿರಿಯೂರಿನ ನಿವೃತ್ತ ಶಿಕ್ಷಕರಾದ ಕೆ. ಕರಿಯಪ್ಪ, ಆರ್. ಶರಣಪ್ಪ, ಆನಂದಸ್ವಾಮಿ, ವಿ. ಮಸಿಯಪ್ಪ, ಶಿರಸ್ತೇದಾರ ಕೆಂಚಪ್ಪ, ಬಿ. ರಾಮಚಂದ್ರಪ್ಪ, ಎಂ.ಬಿ. ವೀರಪ್ಪ, ತೋಟಗಾರಿಕೆ ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ಎಸ್. ಪಾತಯ್ಯ, ಕೆ.ಎಸ್.ಆರ್.ಟಿ.ಸಿ.ಯಲ್ಲಿ ಕೆಲಸ ಮಾಡುತ್ತಿರುವ ಎನ್. ಕರಿಯಪ್ಪ, ಮುನ್ಸಿಪಲ್ ಕೌನ್ಸಿಲರ್ ಪದ್ಮನಾಭ, ಆರ್. ರಾಮಯ್ಯ, ಶ್ರೀನಿವಾಸ ರೈಲ್ವೆ ಇಲಾಖೆ, ಕೆ. ಕೆಂಚಪ್ಪ, ಪುಟ್ಟಕರಿಯಪ್ಪ, ಯು. ದಾಸಪ್ಪ ಮುಂತಾದವರು ಉಪ್ಪಾರ ಸಮಾಜದ ಹಿತಚಿಂತಕರು.

ಹೊಸದುರ್ಗ ತಾಲ್ಲೂಕಿನ ನೀರುಗುಂದದ ಆರ್.ಎನ್. ಭೈರಪ್ಪ, ಎಸ್. ನಾಗರಾಜ ಸಮಾಜದ ಪ್ರಮುಖರು. ಮಹಾಬಲೇಶ್ವರಪ್ಪ ಪೊಲೀಸ್ ಇಲಾಖೆಯಲ್ಲಿ ಸರ್ಕಲ್ ಇನ್ಸ್‌ಪೆಕ್ಟರ್ ಆಗಿದ್ದಾರೆ.

ಹೊಸದುರ್ಗ ತಾಲ್ಲೂಕಿನ ಹೆಚ್.ಎನ್. ಮೂಡಲಗಿರಿಯಪ್ಪ, ಮಲ್ಲಪ್ಪ ವಕೀಲ, ಓ. ನಾಗೇಂದ್ರಯ್ಯ ಬಸ್ ಮಾಲೀಕರು ಮತ್ತು ವ್ಯಾಪಾರಸ್ಥರು, ಬೇಲೂರಪ್ಪ, ಮಾಜಿ ಜಿಲ್ಲಾ ಪಂಚಾಯ್ತಿ ಸದಸ್ಯರು, ಸಣ್ಣರಂಗಪ್ಪ, ಮಾಜಿ ತಾಲ್ಲೂಕು ಸಂಘದ ಅಧ್ಯಕ್ಷರು, ಸಣ್ಣ ಹನುಮಂತಪ್ಪ, ಕವಿ ಸಾಹಿತಿ ಮೈಲಾರಪ್ಪ, ಎಂ. ಪಿ. ಶಂಕರ, ಶಿವಮೂರ್ತಿ, ತಿಪ್ಪೇಶಪ್ಪ ಟೀಚರ್, ಮುಂತಾದವರು ಸಮಾಜದ ಪ್ರಮುಖರು ಹಾಗು ಹಿತಚಿಂತಕರು.

ಈ ಸಮಾಜಕ್ಕೆ ಸೇರಿದ 20 ಪ್ರಮುಖ ವ್ಯಾಪಾರಸ್ಥರಿದ್ದಾರೆ. ಅವರುಗಳಲ್ಲಿ ಹೊಸದುರ್ಗದ ವೈ.ಹೆಚ್. ಸಿದ್ಧಪ್ಪ, ಓ. ನಾಗೇಂದ್ರಯ್ಯ, ಚಳ್ಳಕೆರೆ ಯಲ್ಲಪ್ಪ, ಡಿ.ಎಂ. ಕೃಷ್ಣಮೂರ್ತಿ ಚಿತ್ರದುರ್ಗದ ನಾಗೇಂದ್ರಪ್ಪ ಪ್ರಮುಖರು. ದಿ। ಮಲ್ಲಪ್ಪ ದುಗ್ಗಾವರ ಹೆಸರಾಂತ ಸಮಾಜ ಸೇವಕರು. ಆಗಿನ ಕಾಲದಲ್ಲಿ ಬಡಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಆಸಕ್ತಿ ವಹಿಸಿ ಊಟ, ವಸತಿ ಕಲ್ಪಿಸಿದ್ದು ಉಲ್ಲೇಖಾರ್ಹ.

ಉಪ್ಪಾರ ಸಮಾಜದಲ್ಲಿ ಇಪ್ಪತ್ತೈದು ಜನ ಉಪನ್ಯಾಸಕರಿದ್ದಾರೆ. ಪ್ರೊ. ಜಿ. ಶರಣಪ್ಪ, ಪ್ರಾಚಾರ್ಯ ಬಿ. ರಾಮಚಂದ್ರಪ್ಪ, ಪುಟ್ಟಕರಿಯಪ್ಪ, ಶ್ರೀನಿವಾಸ, ಹೊಸದುರ್ಗದ ಅಂಜನಪ್ಪ ಪ್ರಮುಖರು. ಉಪ್ಪಾರ ಸಮುದಾಯದವರಿಗೆ ಸೇರಿದ ಐದು ಶಿಕ್ಷಣ ಸಂಸ್ಥೆಗಳು ಈ ಜಿಲ್ಲೆಯಲ್ಲಿವೆ.

ಬ್ರಹ್ಮವಿದ್ಯಾನಗರದ ಉಪವೀರ ಜಗದ್ಗುರು ವಿದ್ಯಾಸಂಸ್ಥೆ, ಮಧುರೆ, ಹಿರಿಯೂರು ತಾಲ್ಲೂಕು, ಧರ್ಮಪುರದ ಶ್ರೀ ಬನಶಂಕರಿ ವಿದ್ಯಾಸಂಸ್ಥೆ, ಶ್ರೀರಂಗಪುರದ ಮಾರುತಿ ವಿದ್ಯಾಸಂಸ್ಥೆ, ಕೊಂಡಾಪುರದ ಅರುಣೋದಯ ವಿದ್ಯಾಸಂಸ್ಥೆ ಮತ್ತು ನೀರುಗುಂದದ ಮಂಜುನಾಥ ವಿದ್ಯಾಸಂಸ್ಥೆಗಳನ್ನು ಹೆಸರಿಸಬಹುದು.

ಉಪ್ಪಾರ ಸಮುದಾಯಕ್ಕೆ ಸೇರಿದ ಎರಡು ವಿದ್ಯಾರ್ಥಿನಿಲಯಗಳು ಈ ಜಿಲ್ಲೆಯಲ್ಲಿವೆ. ಹೊಸದುರ್ಗ ಹಾಗು ಚಳ್ಳಕೆರೆಗಳಲ್ಲಿ ತಲಾ ಒಂದೊಂದು ವಿದ್ಯಾರ್ಥಿನಿಲಯಗಳು ಕೆಲಸ ಮಾಡುತ್ತಿವೆ. ಹಿರಿಯೂರು ತಾಲ್ಲೂಕಿನಲ್ಲಿ ಸಮುದಾಯದವರು ಐದು ಎಕರೆ ಭೂಮಿ ಖರೀದಿಸಿದ್ದು, ಅದರಲ್ಲೂ ವಿದ್ಯಾರ್ಥಿನಿಲಯ, ಐ.ಟಿ.ಐ. ಇತ್ಯಾದಿ ಪ್ರಾರಂಭಿಸಲು ಕ್ರಮ ತೆಗೆದುಕೊಳ್ಳುತ್ತಿದ್ದಾರೆ.

ಶ್ರೀ ಸತ್ಯೋಪಾಸಕ ಸದ್ಗುರು ಶ್ರೀ ಮಲ್ಲಣ್ಣನವರು, ಕಣ್ವೇಶ್ವರ ಸಾಹಿತ್ಯ ಪ್ರಕಾಶನ (ದೊಡ್ಡೇರಿ ಮಠ) ನಡೆಸುತ್ತಿದ್ದಾರೆ. ಶಿಕ್ಷಕರಾದ ಬಿ. ಮೈಲಾರಪ್ಪ, ಸಾಹಿತ್ಯಾಸಕ್ತರು. ಶ್ರೀ ಗುರುಮೂರ್ತಿ ಅವರೂ ಸಹ ಸಾಹಿತ್ಯಕ್ಷೇತ್ರದಲ್ಲಿದ್ದಾರೆ.

ದೊಡ್ಡೇರಿಯಲ್ಲಿ ಕಣ್ವೇಶ್ವರ ಭಜನಾ ಮಂಡಳಿ, ಕಂದಿಕೆರೆ ಸಂಗಡಿಗರು, ವೀರಣ್ಣ ಮತ್ತು ಹೊಸದುರ್ಗದ ಕುಬೇರಪ್ಪ ಮತ್ತು ಸಂಗಡಿಗರು ಈ ಸಮಾಜದ ಪ್ರಮುಖ ಕಲಾವಿದರು.

ಸಮಾಜಸೇವೆ, ಕ್ರೀಡೆ, ರಾಜಕೀಯ ಹಾಗು ಇತರ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಿಗಿಸಿಕೊಂಡು ಉಪ್ಪಾರ ಸಮಾಜಕ್ಕೆ ಹೆಸರು ತಂದ ವ್ಯಕ್ತಿಗಳೆಂದರೆ ಹಿರಿಯೂರು ತಾಲ್ಲೂಕಿನ ಮಸ್ಕಲ್ ಗ್ರಾಮದ ಹೊಸಕೆರಪ್ಪ, ಪಟೇಲ ಎಂ. ಲಿಂಗಣ್ಣ, ಆರ್. ವೀರಣ್ಣ, ಎಸ್. ಭೀಮಣ್ಣ, ಅಂಗಡಿ ರಾಮಜ್ಜ, ಎಂ. ಪಾಪಣ್ಣ, ಪಿ. ಹೆಚ್. ಆನಂದಪ್ಪ, ಎಲ್. ಶ್ರೀಕಂಠಪ್ಪ, ಕೆ. ಮಲ್ಲಪ್ಪ, ಬಿ. ಕೆಂಚಪ್ಪ, ರಂಗನಾಥಪುರ ಟಿ.ಆರ್. ರಾಮಯ್ಯ, ಕಂದಿಕೆರೆಯ ಜೆ. ಲಿಂಗಪ್ಪ, ಕಲ್ಲಹಳ್ಳಿ ರಾಮಚಂದ್ರಪ್ಪ ಹಾಗು ಜಿ. ಶರಣಪ್ಪ ಮುಂತಾದವರು.

ಹೊಳಲ್ಕೆರೆ ತಾಲ್ಲೂಕಿನಲ್ಲಿ ಅಂದನೂರು ನಿವೃತ್ತ ಶಿಕ್ಷಕ ತಿಮ್ಮಪ್ಪ, ಹೊಸೂರು ಕಾವಲ್ ಮಲ್ಲಪ್ಪ, ಎ.ಟಿ. ಶ್ರೀನಿವಾಸ, ಸಿದ್ದಪ್ಪ, ಪಂಚಾಯ್ತಿ ಸದಸ್ಯರು, ಶಾಂತವೀರಪ್ಪ ಎಮ್ಮಿಗನೂರ, ಆಡನೂರ ಪಂಚಾಯ್ತಿ ಮಾಜಿ ಅಧ್ಯಕ್ಷರಾದ ಪಾರ್ವತಮ್ಮ, ಹೊಸಟ್ಟಿ ಗ್ರಾಮದ ಪಂಚಾಯ್ತಿ ಅಧ್ಯಕ್ಷೆ ಜಯಮ್ಮ ಹನಮಂತಪ್ಪ, ನಾಗರಾಜ ಅರಳೀಕೆರೆ, ದೇವೇಂದ್ರಪ್ಪ ಹೊಸೂರು, ಕೇಶವಪ್ಪ, ವೆಲ್ಡಿಂಗ್ ಶಾಪ್ ಮಾಲೀಕರು, ಮುಂತಾದವರು ಸಮಾಜದ ಪ್ರಮುಖರು ಹಾಗು ಹಿತಚಿಂತಕರು.

ಚಳ್ಳಕೆರೆಯ ಸಿ. ಸಣ್ಣಯಲ್ಲಪ್ಪ, ಡಿ.ಎಂ. ಕೃಷ್ಣಮೂರ್ತಿ, ತಾಲ್ಲೂಕು ಉಪ್ಪಾರ ಸಂಘದ ಅಧ್ಯಕ್ಷರಾದ ಯಲ್ಲಪ್ಪ, ಬಿ. ಪಂಚಾಕ್ಷರಪ್ಪ, ರಂಗಸ್ವಾಮಿ ಮುಂತಾದವರು ಸಮಾಜದ ಪ್ರಮುಖರು ಹಾಗು ಹಿತಚಿಂತಕರು.

ಮೊಳಕಾಲ್ಮೂರು ತಾಲ್ಲೂಕಿನ ತಾತಪ್ಪ, ಡಾ|| ನಾಗೇಂದ್ರಕುಮಾರ, ಮಂಜುನಾಥ ಮುಂತಾದವರು ಸಮಾಜದ ಪ್ರಮುಖರು.

ದಿನಾಂಕ 2-5-1989 ರಂದು ಹಿರಿಯೂರು ತಾಲ್ಲೂಕು ಮಸ್ಕಲ್ ಗ್ರಾಮದಲ್ಲಿ ರಾಜ್ಯ ಮಟ್ಟದ ಭಗೀರಥ ಜಯಂತಿಯನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಬ್ರ. ಲೇಪಾಕ್ಷ ಸ್ವಾಮಿಗಳು ಸಾನ್ನಿಧ್ಯ ವಹಿಸಿದ್ದರು. ರಾಜ್ಯ ಸಂಘದ ಅಧ್ಯಕ್ಷರಾಗಿದ್ದ ಡಿ.ಎಸ್. ರಾಮಪ್ಪ ಹಾಗೂ ಇತರೆ ಪದಾಧಿಕಾರಿಗಳು ಹಾಗೂ ರಾಜ್ಯದ ಮೂಲೆ ಮೂಲೆಗಳಿಂದ ಉಪ್ಪಾರ ಜನ ಭಾಹವಹಿಸಿದ್ದಲ್ಲದೆ, ನೆರೆ ರಾಜ್ಯದ ಚಲ್ಲಪಿಳ್ಳೆ ಶ್ರೀ ರಾಮುಲು, ಸಗರ ಶ್ರೀರಾಮುಲು ಮುಂತಾದ ಗಣ್ಯರು ಭಾಗವಹಿಸಿದ್ದರು. ಇದರ ವ್ಯವಸ್ಥೆ ಎಸ್. ಪಾಪಯ್ಯ ಹಾಗೂ ಬೇಲೂರಪ್ಪ ಅಚ್ಚುಕಟ್ಟಾಗಿ ಮಾಡಿದರು.

ಜಿಲ್ಲೆಯಲ್ಲಿ ಉಪ್ಪಾರ ಸಮಾಜಕ್ಕೆ ಆಗಬೇಕಾದ ಅಭಿವೃದ್ಧಿ ಕಾರ್ಯಗಳು ಅನೇಕ. ಮೊದಲಿಗೆ ಉಪ್ಪಾರ ಸಮಾಜದ ಮೂಲದೇವತೆ, ಉಪ್ಪಾರ ಹಟ್ಟಿಯ ಚನ್ನಕೇಶವ ಗುಡಿಯ ಪುನರ್ ನಿರ್ಮಾಣ ಆಗಬೇಕಾಗಿದೆ. ಈ ಜನಾಂಗದ ಮೂಲ ಮಠವಿದ್ದ ಜಾಗವನ್ನು ಸರ್ವ ಜನಾದರಣೀಯವಾಗುವಂತೆ ಮಾಡುವುದು ರಾಜ್ಯದ ಎಲ್ಲ ಉಪ್ಪಾರ ಬಂಧುಗಳ ನೈತಿಕ ಕರ್ತವ್ಯ.

ಉಪ್ಪಾರಹಟ್ಟಿಗೆ ಬೆಳ್ಳಿಬೆಳಕಿನ ಯೋಜನೆಯಡಿಯಲ್ಲಿ ವಿದ್ಯುಚ್ಛಕ್ತಿ ಕಲ್ಪಿಸುವುದು. ರಾಜ್ಯಸರಕಾರದ ಆದೇಶದಂತೆ ಪರಿಶಿಷ್ಟ ಜಾತಿ, ಪಂಗಡಗಳಿಗೆ ಕೊಡುವ ಎಲ್ಲ ಶೈಕ್ಷಣಿಕ ಸೌಲಭ್ಯಗಳನ್ನು ಈ ಜನಾಂಗಕ್ಕೆ ದೊರೆಯುವಂತೆ ಮಾಡುವುದು. ಜಿಲ್ಲಾ ಕೇಂದ್ರದಲ್ಲಿ ಉಪ್ಪಾರ ಬಂಧುಗಳು ತಮ್ಮ ವಿವಾಹ ಮೊದಲಾದ ಧಾರ್ಮಿಕ ಕಾರ್ಯಗಳಿಗೆ ಅನುಕೂಲವಾಗುವಂತೆ ಸಮುದಾಯಭವನ ಹಾಗು ಕಲ್ಯಾಣಭವನ ನಿರ್ಮಿಸಬೇಕು. ತಾಲ್ಲೂಕಿನ ಕೆಲವು ಕಡೆ ವಿದ್ಯಾರ್ಥಿ ನಿಲಯ ಪ್ರಾರಂಭಿಸಬೇಕು.

ರಾಜ್ಯಮಟ್ಟದಲ್ಲಿ ಉಪ್ಪಾರ ಸಮಾಜದವರು ಯಾವುದೇ ಸಂಘಟನೆಯನ್ನು ಕ್ರಿಯಾಶೀಲವನ್ನಾಗಿಟ್ಟುಕೊಂಡಿಲ್ಲ. ಹಿಂದುಳಿದ ಆಯೋಗಕ್ಕೆ ಸಮರ್ಪಕ ಅಂಕಿ ಅಂಶ ಕೊಡದ ಕಾರಣ ಈ ಸಮಾಜಕ್ಕೆ ನ್ಯಾಯೋಚಿತವಾದ ಸೌಲಭ್ಯ ದೊರಕಿಲ್ಲ. ಅದಕ್ಕಾಗಿ ರಾಜ್ಯಮಟ್ಟದಲ್ಲಿ ಅಧ್ಯಯನ ಕೇಂದ್ರ ಬೇಕು. ಒಳಪಂಗಡ ಬೇಧ ಮರೆತು ಎಲ್ಲರೂ ಒಂದಾಗಿ ತಾಲ್ಲೂಕು ಮಟ್ಟದಿಂದ ಸಂಘಟನೆ ಮಾಡಬೇಕು. ರಾಜ್ಯಮಟ್ಟದಲ್ಲಿ ಸಂಘವನ್ನು ಯೋಗ್ಯರ ಕೈಗೆ ಕೊಡಬೇಕು. ಈ ಸಮಾಜದಲ್ಲಿನ ಉತ್ತಮ ಸೇವಕರನ್ನು ಗುರುತಿಸಬೇಕು. ಬ್ರ। ಲೇಪಾಕ್ಷ ಸ್ವಾಮೀಜಿಯವರು ರಚಿಸಿದ 'ಉಪ್ಪಾರ ಚರಿತಾಮೃತ' ಪುರಾಣವನ್ನು ಎಲ್ಲರೂ ಓದಿ ಸತ್ಯ, ಧರ್ಮ, ತ್ಯಾಗಗಳನ್ನು ಅಳವಡಿಸಿಕೊಂಡು, ಉಪ್ಪಾರ ಸಮಾಜದ ಇತರರಿಗೆ ಆದರ್ಶವಾಗಬೇಕು. ವೈಯಕ್ತಿಕ ಪ್ರತಿಷ್ಠೆ, ಕೀಳರಿಮೆ ಹಾಗು ಪರಸ್ಪರ ದ್ವೇಷವನ್ನು ಈ ಸಮಾಜದ ನಾಯಕರು ಬಿಡುವತನಕ ಸಮಾಜ ಉದ್ಧಾರವಾಗುವುದಿಲ್ಲ. ದುಶ್ಚಟಗಳ ದಾಸರಾಗದೆ, ಆತ್ಮವಿಶ್ವಾಸದ ಗಣಿಗಳಾಗಬೇಕು. ಪೂರ್ವಜರ ಪುಣ್ಯದಿಂದ ನಮಗೆ ಅತ್ಯುತ್ತಮ ಗುರುಪೀಠವಿದೆ. ಈ ಪೀಠದಿಂದ ಪ್ರತಿಯೊಬ್ಬ ಸ್ವಾಮೀಜಿ

ಅವರು ತಮ್ಮ ತಪಃಶ್ಶಕ್ತಿಯಿಂದ ಲೋಕಕಲ್ಯಾಣ ಸಾಧಿಸಿದ್ದಾರೆ. ಪೂಜ್ಯ ಶ್ರೀ ಲೇಪಾಕ್ಷ ಸ್ವಾಮೀಜಿಯವರು ರಚಿಸಿರುವ 'ಉಪ್ಪಾರ ಚರಿತಾಮೃತ' ಪುರಾಣಗ್ರಂಥವಂತೂ ಉಪ್ಪಾರ ಸಮಾಜದ ಅಮೂಲ್ಯ ಆಸ್ತಿ. ಅವರ ಕರಕಮಲ ಸಂಜಾತರಾದ ಪೂಜ್ಯ ಶ್ರೀ ಪುರುಷೋತ್ತಮಾನಂದಪುರಿ ಅವರೂ ಸಹ ಶ್ರೇಷ್ಠ ಜೀವನ ಮೌಲ್ಯಗಳನ್ನು ಪ್ರತಿಪಾದಿಸುತ್ತಿದ್ದಾರೆ. ಅದನ್ನು ಅರಿತು ನಡೆಯುವುದು ಎಲ್ಲ ಉಪ್ಪಾರರ ಆದ್ಯಕರ್ತವ್ಯ. ಪಾಪಭೀತಿ, ದೈವಪ್ರೀತಿ ಈ ಸಮಾಜದ ಆದರ್ಶವಾಗಲಿ.

**ಮಾಹಿತಿಸಂಗ್ರಹ : *ಕೆ. ಕರಿಯಪ್ಪ, ಎನ್. ಪಾತಯ್ಯ***

*




# * ತುಮಕೂರು ಜಿಲ್ಲೆ

## ಐತಿಹಾಸಿಕ ಹಿನ್ನೋಟ

ತುಮಕೂರು ಜಿಲ್ಲೆ ಕರ್ನಾಟಕ ರಾಜ್ಯದ ಮಧ್ಯಪೂರ್ವ ಭಾಗದಲ್ಲಿದೆ. ತುಮಕೂರು ಜಿಲ್ಲೆ ಪೂರ್ವ ಪಶ್ಚಿಮವಾಗಿ ಸುಮಾರು 107 ಕಿ.ಮೀ. ಉತ್ತರ ದಕ್ಷಿಣವಾಗಿ ಸುಮಾರು 163 ಕಿ.ಮೀ. ವಿಸ್ತಾರವಾಗಿ ಹರಡಿರುವ ಭೂಪ್ರದೇಶ. ಇದರ ವಿಸ್ತೀರ್ಣ 10,591 ಚ.ಕಿ.ಮೀ. ತುಮಕೂರು ಜಿಲ್ಲೆ ಸಮುದ್ರ ಮಟ್ಟದಿಂದ ಸರಾಸರಿ ಸುಮಾರು 2700 ಅಡಿ ಎತ್ತರದಲ್ಲಿದೆ. ತುಮಕೂರು ಸಮೀಪದಲ್ಲಿರುವ ದೇವರಾಯನದುರ್ಗ ಶಿಖರವೇ ಜಿಲ್ಲೆಯ ಎತ್ತರದ ತಾಣ (1266 ಮೀ). ದೇವರಾಯನದುರ್ಗದಲ್ಲಿ ಹುಟ್ಟುವ ಜಯಮಂಗಲಿ ಮತ್ತು ಇದರ ಉಪನದಿಗಳಾದ ಗರುಡಾಚಲ ಹಾಗು ಸುವರ್ಣಮುಖಿ ಜಿಲ್ಲೆಯ ಪ್ರಮುಖ ನದಿಗಳು. ದೇವರಾಯನದುರ್ಗದಲ್ಲಿ ಶಿಂಷಾನದಿ ಹುಟ್ಟಿ ಕಾವೇರಿ ನದಿಗೆ ಸೇರುತ್ತದೆ. ಉತ್ತರ ಅಕ್ಷಾಂಶ 12°45' ಮತ್ತು 14°20' ಪೂರ್ವ ರೇಖಾಂಶ 76°20' ಮತ್ತು 77°31' ಇವುಗಳ ನಡುವೆ ಈ ಜಿಲ್ಲೆ ಹರಡಿದೆ.

ತುಮಕೂರು ಜಿಲ್ಲೆಯ ಜನಸಂಖ್ಯೆ 2001ರ ಜನಗಣತಿಯ ವರದಿ ಪ್ರಕಾರ 25,79,516 ಅದರಲ್ಲಿ ಪುರುಷರ ಸಂಖ್ಯೆ 13,11,941, ಸ್ತ್ರೀಯರು 12,67,575. ಜಿಲ್ಲೆಯ ಸಾಕ್ಷರತೆಯ ಪ್ರಮಾಣ 67.19.

ರಾಗಿ, ಜಿಲ್ಲೆಯ ಪ್ರಮುಖ ಬೆಳೆ. ಭತ್ತ, ಕಬ್ಬು, ನೆಲಗಡಲೆ ವಿವಿಧ ಕಾಳುಗಳು ಈ ಜಿಲ್ಲೆಯಾದ್ಯಂತ ಬೆಳೆಯುತ್ತವೆ. ತೆಂಗು ಪ್ರಮುಖ ವಾಣಿಜ್ಯ ಬೆಳೆ. ಅಡಿಕೆ ಮತ್ತೊಂದು ಪ್ರಮುಖ ಬೆಳೆ. ಜಿಲ್ಲೆಯ ಸರಾಸರಿ ಮಳೆ 689 ಮಿ.ಮೀ.

ತೇಗ, ಶ್ರೀಗಂಧ, ದಿಂಡಿಗ, ಜಾಪಾರ ಮುಂತಾದವುಗಳು ಈ ಜಿಲ್ಲೆಯ ಪ್ರಮುಖ ವೃಕ್ಷಗಳು. ಈ ಜಿಲ್ಲೆಯ ವಿಶಿಷ್ಟ ವೃಕ್ಷವಾದ ಈಜಿ ದೇವರಾಯನದುರ್ಗದಲ್ಲಿದೆ. ದೇವರಾಯನದುರ್ಗ ಹಾಗೂ ಮಧುಗಿರಿಯ ಆಸುಪಾಸುಗಳಲ್ಲಿ ಅಲ್ಪಸ್ವಲ್ಪ ಕಾಡುಗಳಿವೆ.

ತುಮಕೂರು, ಕುಣಿಗಲ್, ಗುಬ್ಬಿ, ತುರುವೇಕೆರೆ, ತಿಪಟೂರು, ಚಿಕ್ಕನಾಯಕನಹಳ್ಳಿ, ಶಿರಾ, ಕೊರಟಗೆರೆ, ಮಧುಗಿರಿ, ಪಾವಗಡ ಸೇರಿದಂತೆ ಹತ್ತು ತಾಲ್ಲೂಕುಗಳು ತುಮಕೂರು ಜಿಲ್ಲೆಯಲ್ಲಿವೆ.

ತುಮಕೂರು ಜಿಲ್ಲೆಯ ಕಡಬಕ್ಕೆ ಶ್ರೀರಾಮಚಂದ್ರನು ಆಗಮಿಸಿದ್ದನೆಂದು ಐತಿಹ್ಯವಿದೆ. ತುರುವೇಕೆರೆ ಬಳಿಯ ಸಂಪಿಗೆ ಜೈಮಿನಿ ಭಾರತದ ಹಂಸಧ್ವಜನ ಕಾಲದ ರಾಜಧಾನಿಯಾಗಿದ್ದಿತು. ಮಧುಗಿರಿಯ ಬಳಿ ಅಭಿಮನ್ಯುವಿನ ಕೋಟೆಯಿದೆ ಎಂದು ಹೇಳಲಾಗುತ್ತಿದೆ.

ಹಿಂದೆ ತುಮಕೂರು ಕ್ರೀಡಾಪುರದ (ಇಂದಿನ ಕೈದಾಳ) ಅರಸನಿಗೆ ಸೇರಿತ್ತು ಎಂದು ಪ್ರತೀತಿ ಇದೆ. ಕ್ರೀಡಾಪುರದ ರಾಜ ಈ ಊರನ್ನು ಟುಮಕೆ (ತಮಟೆ) ಬಾರಿಸುವವನಿಗೆ ಕೊಟ್ಟಿದ್ದ ಕಾರಣ ಅದಕ್ಕೆ ತುಮಕೂರು ಎಂಬ ಹೆಸರಾಯಿತೆಂದು ಹೇಳಿಕೆ. 10ನೆಯ ಶತಮಾನದ ಶಾಸನವೊಂದರಿಂದ ಈ ಸ್ಥಳಕ್ಕೆ ತುಮೆಗೂರು (ತುಂಬೆ ಊರು) ಎಂಬ ಹೆಸರಿದ್ದಿತೆಂದು ತಿಳಿದುಬರುತ್ತದೆ. ಇದು ತುಮಕೂರು ಹೆಸರಿನ ಪ್ರಾಚೀನ ರೂಪವಿರಬಹುದು.

ತುಮಕೂರು ಜಿಲ್ಲೆಯ ಕಿಬ್ಬನಹಳ್ಳಿ ಬಳಿಯಲ್ಲಿ ಶಿಲಾಯುಗದ ಅವಶೇಷಗಳು ದೊರಕಿವೆ. ಇವು ಪುರಾತನ ಶಿಲಾಯುಗದ ಮಾನವನ ನಿವೇಶನಗಳೆಂದು ಹೇಳಲಾಗಿದೆ.

ಕದಂಬ, ಗಂಗ-ಈ ರಾಜವಂಶಗಳ ಆಳ್ವಿಕೆಯಲ್ಲಿದ್ದ ಜಿಲ್ಲೆಯನ್ನು 9-10ನೆಯ ಶತಮಾನದಲ್ಲಿ ನೊಳಂಬರು ಆಳುತ್ತಿದ್ದರು. ಶಿರಾ ತಾಲ್ಲೂಕಿನ ಉತ್ತರದ ಗಡಿ ಹತ್ತಿರ ಇರುವ ಮಡಕಶಿರ, ಇಂದಿನ ಹೇಮಾವತಿ (ಹೆಂಜೇರು) ಇವರ ರಾಜಧಾನಿಯಾಗಿದ್ದು, ನಿಡುಗಲ್ಲುದುರ್ಗ ಇವರ ರಕ್ಷಣಾ ಸ್ಥಳವಾಗಿತ್ತೆಂದು ತಿಳಿದು ಬರುತ್ತದೆ. ತುಮಕೂರು ಜಿಲ್ಲೆಯ ಪೂರ್ವಭಾಗ ನೊಳಂಬವಾಡಿ 32,000ಕ್ಕೆ ಸೇರಿತ್ತೆಂದು ತಿಳಿದುಬರುವದು. ಹೊಯ್ಸಳರ ಆಡಳಿತಕ್ಕೆ ಮುಂದೆ ಈ ಜಿಲ್ಲೆ ಸೇರಿತ್ತೆಂದೂ ಹೆಂಜೇರು ಮತ್ತು ನಿಡುಗಲ್ಲುಗಳಲ್ಲಿ ಆಳುತ್ತಿದ್ದ ಇರುಂಗೋಳ ಚೋಳನನ್ನು ಹೊಯ್ಸಳರು ಗೆದ್ದರೆಂದೂ ಹೊಯ್ಸಳ ಶಾಸನಗಳಿಂದ ತಿಳಿದುಬರುತ್ತದೆ.

ವಿಜಯನಗರ ಸಾಮ್ರಾಜ್ಯದ ಆಳ್ವಿಕೆಗೆ ಸಂಬಂಧಪಟ್ಟ 136 ಶಾಸನಗಳು ಈ ಜಿಲ್ಲೆಯಲ್ಲಿ ದೊರಕಿವೆ. ವಿಜಯನಗರದ ಅರಸುಗಳ ಸಾಮಂತರಾಗಿ ಅನೇಕ ಪಾಳೇಗಾರರು ಈ ಪ್ರಾಂತ್ಯವನ್ನಾಳಿದರು. ಅವರಲ್ಲಿ ನಿಡುಗಲ್, ಹೊಳವನಹಳ್ಳಿ, ಮಧುಗಿರಿ, ಹಾಗಲವಾಡಿ ಮತ್ತು ಹೆಬ್ಬೂರು ಪಾಳೆಗಾರರು ಮುಖ್ಯರಾದವರು. ಮೈಸೂರು ಒಡೆಯರ ಆಳ್ವಿಕೆಗೆ ಸಂಬಂಧಪಟ್ಟಂತೆ 36 ಶಾಸನಗಳು ಈ ಜಿಲ್ಲೆಯಲ್ಲಿ ಸಿಕ್ಕಿವೆ. ಮೈಸೂರು ಅರಸರ ಆಳ್ವಿಕೆಯ ಕಾಲದಲ್ಲೇ ಅಂದರೆ ಕ್ರಿ.ಶ. 1638ರಲ್ಲಿ ಬಿಜಾಪುರದ ರಣದುಲ್ಲಾಖಾನ್ ಜಿಲ್ಲೆಯ ಉತ್ತರ

ಭಾಗವನ್ನು ಆಕ್ರಮಿಸಿದನು. ಈ ಭಾಗದ ಆಡಳಿತವನ್ನು ಶಿವಾಜಿಯ ತಂದೆ ಷಹಾಜಿಗೆ ವಹಿಸಿಕೊಡಲಾಯಿತು. 1686-87ರಲ್ಲಿ ಔರಂಗಜೇಬ, ಬಿಜಾಪುರ ಮತ್ತು ಗೋಲ್ಕಂಡಗಳನ್ನು ಹಿಡಿದಾಗ ಶಿರಾವನ್ನು ತನ್ನ ಆಡಳಿತ ಕೇಂದ್ರವನ್ನು ಮಾಡಿಕೊಂಡು ಖಾಸಿಂಖಾನನನ್ನು ಸುಬೇದಾರನನ್ನಾಗಿ ನೇಮಿಸಿದನು. ಕ್ರಿ.ಶ. 1757ರಲ್ಲಿ ಶಿರಾವನ್ನು ಮರಾಠರು ಗೆದ್ದರು. ಸಿರಾದಲ್ಲಿ ಮೊಗಲ್ ಚಕ್ರವರ್ತಿ ಔರಂಗಜೇಬನ ಮಗಳ ಸಮಾಧಿ ಇದೆ. 1761ರಲ್ಲಿ ಶಿರಾವನ್ನು ಹೈದರಾಲಿ ವಶಪಡಿಸಿಕೊಂಡನು. 1774ರಲ್ಲಿ ಶಿರಾ ಪ್ರದೇಶ ಟಿಪ್ಪು ಸುಲ್ತಾನನ ವಶದಲ್ಲಿತ್ತು. ಮುಂದೆ ಈ ಜಿಲ್ಲೆ ಮೈಸೂರು ಒಡೆಯರ ಆಡಳಿತಕ್ಕೆ ಸೇರಿತ್ತು. ಪೂರ್ಣಯ್ಯನವರ ಕಾಲದಲ್ಲಿ ಈ ಜಿಲ್ಲೆ ಮಧುಗಿರಿ ಫೌಜದಾರಿಯ ಭಾಗವಾಗಿತ್ತು. ಕಮೀಷನರ್ ಆಡಳಿತದ (1832) ಕಾಲದಲ್ಲಿ ತುಮಕೂರು ವಿಭಾಗವಾಗಿತ್ತು. 1863ರಲ್ಲಿ ಈ ವಿಭಾಗ ರದ್ದಾಗಿ ತುಮಕೂರು ನಂದಿದುರ್ಗ ವಿಭಾಗಕ್ಕೆ ಸೇರಿತು. 1886ರಲ್ಲಿ ಚಿತ್ರದುರ್ಗವನ್ನು ಜಿಲ್ಲೆಯಾಗಿ ಮಾಡಿದಾಗ ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆಗೆ ಸೇರಿತು.

ಎಡೆಯೂರು, ಗುಬ್ಬಿ, ಸೀಬಿ, ಕ್ಯಾಮೇನಹಳ್ಳಿ, ಸಿದ್ದಗಂಗೆ, ದೇವರಾಯನದುರ್ಗ, ಸಿದ್ಧರಬೆಟ್ಟ, ಕೈದಾಳ, ಗೂಳೂರು ಮುಂತಾದವು ಭಾವುಕರಿಗೆ ಪುಣ್ಯಕ್ಷೇತ್ರಗಳಾಗಿವೆ. ಶ್ರೀಕ್ಷೇತ್ರ ಸಿದ್ಧಗಂಗೆಯು ಅನ್ನದಾಸೋಹ ಹಾಗು ಜ್ಞಾನದಾಸೋಹಕ್ಕೆ ವಿಶ್ವಕ್ಕೇ ಮೇಲ್ಪಂಕ್ತಿಯಾಗಿದೆ. ಅರಳುಗುಪ್ಪೆ, ನಾಗಲಾಪುರ, ಕೈದಾಳ, ಸಿರಾ, ಸೀಬಿ, ವಿಘ್ನಸಂತೆ, ದೇವರಾಯನದುರ್ಗ ಮೊದಲಾದ ಕಡೆ ಮನಸೆಳೆಯುವ ವಾಸ್ತುಶಿಲ್ಪ ಕಲೆಯಿದೆ.

ಸಿದ್ದಗಂಗಾ ಮಠದ ಶಿಕ್ಷಣ ಸಂಸ್ಥೆ ಪ್ರಸಿದ್ಧವಾದುದು. ಪೂಜ್ಯ ಡಾ|| ಶಿವಕುಮಾರ ಸ್ವಾಮೀಜಿಯವರು ಅನ್ನದಾಸೋಹ ಹಾಗೂ ಜ್ಞಾನದಾಸೋಹದ ಮೂಲಕ ನಾಡಿನ ಕಣ್ಮಣಿಯಾಗಿದ್ದಾರೆ.ಈ ಜಿಲ್ಲೆಯಲ್ಲಿ ಅನೇಕರು ಉತ್ತಮ ಶಿಕ್ಷಣ ಸಂಸ್ಥೆಗಳನ್ನು ರೂಪಿಸಿದ್ದಾರೆ. ದಿ. ಹೆಚ್.ಎಂ. ಗಂಗಾಧರಯ್ಯ ಅವರ 'ಸಿದ್ಧಾರ್ಥ ಶಿಕ್ಷಣ ಸಂಸ್ಥೆ' ಜಿಲ್ಲೆಯ ಅತಿದೊಡ್ಡ ಶೈಕ್ಷಣಿಕ ಸಂಸ್ಥೆಯಾಗಿದೆ. ದಿವಂಗತ ಎನ್. ಮಲ್ಲಪ್ಪ ಅವರು ಸ್ಥಾಪಿಸಿದ ಶ್ರೀ ಕಾಳಿದಾಸ ವಿದ್ಯಾವರ್ಧಕ ಸಂಸ್ಥೆ, ಡಾ|| ಹುಲಿ ನಾಯ್ಕರ್ ಪ್ರಾರಂಭಿಸಿದ ಶ್ರೀದೇವಿ ವಿದ್ಯಾಸಂಸ್ಥೆ, ದಿವಂಗತ ಶಂಕರ ಅವರ ಸರ್ವೋದಯ ವಿದ್ಯಾಸಂಸ್ಥೆ ಮೊದಲಾದವು ಜಿಲ್ಲೆಯ ಶಿಕ್ಷಣ ಕ್ಷೇತ್ರದಲ್ಲಿ ಗಣನೀಯ ಕೆಲಸ ಮಾಡುತ್ತಿವೆ. ಕುಣಿಗಲ್‌ನ ಸ್ಟಡ್ ಫಾರ್ಮ್‌ಗೆ ನೂರೆಪ್ಪತ್ತು ವರ್ಷಗಳ ಇತಿಹಾಸವಿದೆ.

ಹನ್ನೆರಡನೆಯ ಶತಮಾನದಲ್ಲಿದ್ದ ಗುಬ್ಬಿಯ ಮಲ್ಲಿಕಾರ್ಜುನ ಪ್ರಸಿದ್ಧ ವಚನಕಾರ. ಮಲ್ಲಣಾರ್ಯನು 'ಭಾವಚಿಂತಾರತ್ನ'ವೆಂಬ ಕಾವ್ಯ ರಚಿಸಿದ್ದಾನೆ. ನಿಟ್ಟೂರು ನಂಜಯ್ಯ, ಕೇಶಿರಾಜನ 'ಶಬ್ದಮಣಿದರ್ಪಣ'ಕ್ಕೆ ಟೀಕೆ ಬರೆದಿದ್ದಾನೆ. ಗೂಳೂರಿನ ಸಿದ್ಧವೀರಣ್ಣಾಚಾರ್ಯನ 'ಶೂನ್ಯ ಸಂಪಾದನೆ' ಪ್ರಮುಖ ಕೃತಿ. ಸುಬ್ಬರಾಯದಾಸರು, ತಿಮ್ಮಪ್ಪದಾಸರು ಭಕ್ತಿಯುಗದ ಕವಿಗಳು.

ಬೆಳ್ಳಾವೆ ವೆಂಕಟನಾರಾಯಣಪ್ಪ, ಹೊಸಕೆರೆ ಚಿದಂಬರಯ್ಯ, ಪ್ರೊ. ತೀನಂಶ್ರೀ, ಪ್ರೊ. ಟಿಎಲ್‌ಎಸ್, ಬಿ. ಶಿವಮೂರ್ತಿಶಾಸ್ತ್ರೀ, ಪ್ರೊ. ಕ.ವೆಂ. ರಾಘವಾಚಾರ್ಯ, ಪ್ರೊ. ಕೆ. ವೆಂಕಟರಾಮಪ್ಪ, ಜಿ.ವಿ. ನಾರಾಯಣಮೂರ್ತಿ, ಟಿ. ಸುನಂದಮ್ಮ, ಡಾ. ಎಸ್.ಎಲ್. ಭೈರಪ್ಪ , ಪ್ರೊ. ಹೆಚ್.ಜಿ. ಸಣ್ಣಗುಡ್ಡಯ್ಯ, ಕವಿ ಪ್ರೊ. ಜಿ.ಎಸ್. ಸಿದ್ದಲಿಂಗಯ್ಯ, ಡಾ. ಸಾ.ಶಿ. ಮರುಳಯ್ಯ, ದೊಡ್ಡರಂಗೇಗೌಡ, ಪ್ರೊ. ಹೆಚ್.ಆರ್. ದಾಸೇಗೌಡ, ಹಿರಿಯ ಕವಿ ಪೀಚಿ, ಹಿ.ಚಿ. ಶಾಂತವೀರಯ್ಯ, ಡಾ. ಹೆಚ್.ಎಸ್. ಶಿವಪ್ರಕಾಶ್, ಪ್ರೊ. ಬರಗೂರು ರಾಮಚಂದ್ರಪ್ಪ, ಕಾದಂಬರಿಗಾರ್ತಿ ಸಾಯಿಸುತೆ, ಅನುವಾದಕರಾದ ಎಂ.ವಿ. ನಾಗರಾಜರಾವ್, ಕವಿಗಳಾದ ಪ್ರೊ. ನಾ. ದಯಾನಂದ, ಪ್ರೊ. ಎಸ್.ಜಿ. ಸಿದ್ಧರಾಮಯ್ಯ, ಕೆ.ಬಿ. ಸಿದ್ಧಯ್ಯ, ಕಾದಂಬರಿಕಾರರಾದ ಎಸ್. ವಿ. ಶ್ರೀನಿವಾಸರಾವ್, ಜಾನಪದ ಸಂಶೋಧಕ ಪ್ರೊ. ನಂ. ತಪಸ್ವಿಕುಮಾರ್, ಶಿಶುಸಾಹಿತ್ಯದ ನಾಗರಾಜಶೆಟ್ಟಿ, ಕಾದಂಬರಿಕಾರರಾದ ಆರ್. ಬಸವರಾಜು, ಕವಯಿತ್ರಿ ಬಾ.ಹ. ರಮಾಕುಮಾರಿ ಹಾಗೂ ತುಮಕೂರು ವಾರ್ತೆಯ ರಾಮಣ್ಣ, ಪ್ರಜಾಪ್ರಗತಿಯ ನಾಗಣ್ಣ ಮೊದಲಾದವರು ಈ ಜಿಲ್ಲೆಯ ಪ್ರಮುಖ ಬರಹಗಾರರು.

ಖ್ಯಾತ ಅಣುವಿಜ್ಞಾನಿ ಡಾ. ರಾಜಾರಾಮಣ್ಣ ಹಾಗೂ ಖ್ಯಾತ ಕ್ರಿಕೆಟ್‌ಪಟು ಜಿ.ಆರ್. ವಿಶ್ವನಾಥ್ ಈ ಜಿಲ್ಲೆಯವರು.

ತುಮಕೂರು ಜಿಲ್ಲೆ ಅನೇಕ ರಾಜಕೀಯ ನಾಯಕರನ್ನು ರಾಷ್ಟ್ರ ಹಾಗು ರಾಜ್ಯಕ್ಕೆ ಕೊಟ್ಟಿದೆ. ಅವರಲ್ಲಿ ಪ್ರಮುಖರೆಂದರೆ : ಎಂ.ವಿ. ಕೃಷ್ಣಪ್ಪ, ಅಜಿತ ಪ್ರಸಾದ ಜೈನ್, ನಂಜುಂಡಯ್ಯ, ಕೆ. ಲಕ್ಕಪ್ಪ, ಎಸ್. ಮಲ್ಲಿಕಾರ್ಜುನಯ್ಯ, ಜಿ.ಎಸ್. ಬಸವರಾಜ, ಎಂ.ವಿ. ರಾಮರಾವ್, ಟಿ. ಸುಬ್ರಮಣ್ಯ, ಸುಧಾ ವಿ. ರೆಡ್ಡಿ, ಸಿ.ಜೆ. ಮುಕ್ಕಣ್ಣಪ್ಪ, ಎನ್. ಬಸವಯ್ಯ, ಟಿ.ಎಂ. ಮಂಜುನಾಥ, ಎನ್. ಹುಚ್ಚಮಾಸ್ತಿಗೌಡ, ತಮ್ಮಣ್ಣ, ಆಂದಾನಯ್ಯ, ಸಿ.ಪಿ. ಮೂಡಲಗಿರಿಯಪ್ಪ, ಸಾ. ಲಿಂಗಯ್ಯ, ವೆಂಕಟರಮಣಪ್ಪ, ವೈ.ಕೆ. ರಾಮಯ್ಯ, ಡಾ|| ಜಿ. ಪರಮೇಶ್ವರ್, ಲಕ್ಷ್ಮೀನರಸಿಂಹಯ್ಯ, ಡಿ. ನಾಗರಾಜಯ್ಯ, ಜಿ.ಎಸ್. ಶಿವನಂಜಯ್ಯ, ಆರ್. ನಾರಾಯಣ, ಎಂ.ಡಿ. ಗಂಗಾಧರಯ್ಯ, ಸಿ. ವೀರಣ್ಣ, ಸೋಮ್ಲನಾಯಕ, ಶಫಿ ಅಹಮ್ಮದ್, ಡಿ.ಟಿ. ಮಾಯಣ್ಣ, ಎಸ್. ರೇವಣ್ಣ, ಕೆ.ಹೆಚ್. ರಾಮಕೃಷ್ಣಯ್ಯ, ವಿಧಾನಪರಿಷತ್ ಸದಸ್ಯ ಕೆ.ಎನ್. ರಾಜಣ್ಣ ಹಾಗೂ ಎಸ್. ಚನ್ನಬಸವಯ್ಯ, ತುಮಕೂರು ನಗರದ ಶಾಸಕರಾದ ಎಸ್. ಶಿವಣ್ಣ ಹಾಗು ಮಾಜಿ ಸಂಸದ ಸಿ.ಎಸ್. ಭಾಸ್ಕರಪ್ಪ ಮುಂತಾದವರು. ಎಂ.ವಿ. ಕೃಷ್ಣಪ್ಪ ಕೇಂದ್ರ ಹಾಗು ರಾಜ್ಯ ಸರಕಾರಗಳಲ್ಲಿ ಸಚಿವರಾಗಿದ್ದರು. ಎಂ. ವಿ. ರಾಮರಾವ್ ರಾಜ್ಯದ ಗೃಹಸಚಿವರಾಗಿದ್ದರು. ಎಸ್. ಮಲ್ಲಿಕಾರ್ಜುನಯ್ಯ ವಿಧಾನ ಪರಿಷತ್ ಹಾಗು ಲೋಕಸಭೆಯ ಉಪಸಭಾಪತಿಗಳಾಗಿದ್ದರು. ಡಾ|| ಜಿ. ಪರಮೇಶ್ವರ್ ರಾಜ್ಯದ ಉನ್ನತ ಶಿಕ್ಷಣ ಸಚಿವರಾಗಿದ್ದಾರೆ.

ವೃತ್ತಿರಂಗಭೂಮಿಯಲ್ಲಿ ತುಮಕೂರು ಜಿಲ್ಲೆಯ ಗುಬ್ಬಿ ಕಂಪನಿಯಂತೂ ವಿಶ್ವವಿದ್ಯಾನಿಲಯವೆಂದೇ ಖ್ಯಾತವಾದುದು. ಜಿ.ಹೆಚ್. ವೀರಣ್ಣ, ಭಕ್ತಶಿರೋಮಣಿ ಮಲ್ಲಪ್ಪ, ಚಲನಚಿತ್ರ ನಟರಾದ ಎಂ.ಪಿ. ಈಶ್ವರಪ್ಪ, ಆರ್. ನಾಗೇಂದ್ರರಾವ್, ಕಮಿಡಿಯನ್ ಹಿರಣ್ಣಯ್ಯ, ಮಾಸ್ಟರ್ ಹಿರಣ್ಣಯ್ಯ, ನಟಭಯಂಕರ ಗಂಗಾಧರರಾವ್, ವಾಸುದೇವರಾವ್, ಬಿ. ಜಯಮ್ಮ, ನಿರ್ದೇಶಕರಾದ ಸಿದ್ಧಲಿಂಗಯ್ಯ ಮುಂತಾದ ಕಲಾವಿದರು ಪ್ರಸಿದ್ಧರಾಗಿದ್ದಾರೆ. ಮಧುಗಿರಿ ರಾಮು ಪ್ರಸಿದ್ಧ ಚಿತ್ರಕಲಾವಿದರು.

## ಉಪ್ಪಾರ ಸಮಾಜ

ತುಮಕೂರು ಜಿಲ್ಲೆಯ ಎಲ್ಲ ತಾಲ್ಲೂಕುಗಳಲ್ಲೂ ಉಪ್ಪಾರ ಸಮುದಾಯವನ್ನು ಕಾಣಬಹುದು. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಚಿಕ್ಕನಾಯಕನಹಳ್ಳಿ ಟೌನ್, ಗೋಡೆಕೆರೆ, ಗೂಬಬೆಹಳ್ಳಿ, ಎರೆಕಟ್ಟೆ, ಹೊಸಳ್ಳಿಪಾಳ್ಯ, ಕೋಡಿಹಳ್ಳಿ, ಕಲ್ಲಹಳ್ಳಿ, ಚೌಳಕಟ್ಟೆ, ನಡವನಹಳ್ಳಿ, ಕೆರೆಸೂರಗಾನಹಳ್ಳಿ, ದೊಡ್ಡೆಣ್ಣೆಗೆರೆ, ಚಿಕ್ಕೆಣ್ಣೆಗೆರೆ, ಕೋಳಿಗುಡ್ಡು ಅಣೆಪಾಳ್ಯ, ಉಪ್ಪಿನಕಟ್ಟೆ, ಕುರಿಹಟ್ಟಿ, ಹುಳಿಯಾರು, ತೊರೆಮನೆ, ರಂಗಾಪೂರ, ದೊಡ್ಡಬಿದಿರೆ, ಪೂಚಕಟ್ಟೆ, ಉಪ್ಪಾರಹಳ್ಳಿ (ಕೊ), ತಿಮ್ಮಾಪುರ, ಕಲ್ಲೇನಹಳ್ಳಿ, ಬೇವಿನಹಳ್ಳಿ, ಕಿಡಕನಹಳ್ಳಿ, ರಾಮನಗರ, ಲಕ್ಷ್ಮೀಪುರ, ದಾಸಿಹಳ್ಳಿ, ತೊರೆಸೂರಗೊಂಡನಹಳ್ಳಿ, ಬೆಳ್ಳಿಕಟ್ಟೆ, ನಂದಿಹಳ್ಳಿ, ಹೊಸಹಳ್ಳಿ, ಸಂಗೇನಹಳ್ಳಿ, ಚಿಕ್ಕಬಿದಿರೆ, ಉಪ್ಪಾರಹಳ್ಳಿ, ಸೋಮೇನಹಳ್ಳಿ, ಜೋಡಿಕಲ್ಲೇನಹಳ್ಳಿ, ದುಸೂಡಿ, ಕೆಂಕೆರೆ, ಅಬೂಜಹಳ್ಳಿ, ಗಾರೆಪಾಳ್ಯ, ಅವಳಗೆರೆ, ಚಿಕ್ಕನಪಾಳ್ಯ, ನಿರುವಗಲ್ಲು, ಕೋರಗೆರೆ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 3,000 ಉಪ್ಪಾರ ಕುಟುಂಬಗಳಿದ್ದು 16,500ಕ್ಕಿಂತಲೂ ಅಧಿಕ ಉಪ್ಪಾರ ಜನಸಂಖ್ಯೆ ಇದೆ.

ತಿಪಟೂರು ತಾಲ್ಲೂಕಿನ ತಿಪಟೂರು ಟೌನ್, ಕಿಬ್ಬನಹಳ್ಳಿ, ಹಾಲ್ಕುರಿಕೆ, ಮಂಜುನಾಥಪುರ, ಮೂಗತಿಹಳ್ಳಿ, ಗೌಡನಕಟ್ಟೆ, ಬಿಳಿಗೆರೆ, ಆಲೇನಹಳ್ಳಿ, ಬ್ಯಾಡರಹಳ್ಳಿ, ಹೆಚ್. ಭೈರಾಪುರ, ಸಾರ್ಥಹಳ್ಳಿ, ಲಕ್ಷ್ಮೀಪುರ, ಮಣಕಿಕೆರೆ, ಗಟಕಿನಕೆರೆ, ಕೋಡಿಹುಳ್ಳಿ (ಬಸವಳ್ಳಿ), ಕೋಟನಾಯಕನಹಳ್ಳಿ, ಕೊಂಡ್ಲಘಟ್ಟ, ಚಿಗ್ಗಾವಿ, ಕರೀಕೆರೆ, ಹೊನ್ನವಳ್ಳಿ, ಚಿಕ್ಕಬಿದಿರೆ, ಗುರುಗದಹಳ್ಳಿ, ಬೆಣ್ಣೇನಹಳ್ಳಿ, ಮಾಚಘಟ್ಟ, ರಂಗಾಪುರ, ಬಸ್ತಿಹಳ್ಳಿ, ಎಡೆಹಳ್ಳಿ, ಕೆರೆಬಂಡಿಪಾಳ್ಯ, ನಾಗತಿಹಳ್ಳಿ, ಕರಿಕೆರೆ, ಬೆಲೂರನಹಳ್ಳಿ, ಹೊನ್ನೇಹಳ್ಳಿ, ವಗವನಘಟ್ಟ, ತಡಸೂರು, ಕಳ್ಳಿಪಾಳ್ಯ ಕೊಪ್ಪಲು, ಅಗ್ರಹಾರ, ಹೊಸಪಟ್ಣ, ಮುತ್ತಿಹಳ್ಳಿ, ಶಿವರ, ಕನ್ನೂಘಟ್ಟ, ದಾಸಿಹಳ್ಳಿ, ಲಿಂಗದಹಳ್ಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 2,150 ಉಪ್ಪಾರ ಕುಟುಂಬಗಳಿದ್ದು 11,825 ಉಪ್ಪಾರ ಜನಸಂಖ್ಯೆ ಇದೆ.

ಮಧುಗಿರಿ ತಾಲ್ಲೂಕಿನ ಮಧುಗಿರಿ ಟೌನ್, ಸಂಕಾಪುರ, ಅಡವಿನಾಗೇನಹಳ್ಳಿ, ನಾಡಿಗೇಶಿ, ಕಾಂತನಹಳ್ಳಿ, ವೆಂಗಳಮ್ಮನಹಳ್ಳಿ, ಬೂದೇನಹಳ್ಳಿ, ಬಸವನಹಳ್ಳಿ, ಕಡಗತ್ತೂರು,

ಪುರವರ, ದೊಡ್ಡದಾಳವಾಟ, ನಾರಗಾನಹಳ್ಳಿ, ಯಾಕಾರ್ಲಹಳ್ಳಿ, ಹೊಸಹಳ್ಳಿ, ವೀರ ನಾಗೇನಹಳ್ಳಿ, ಹುಣಸವಾಡಿ, ಚಿಕ್ಕಹೊಸಳ್ಳಿ, ದಾದಗೊಂಡನಹಳ್ಳಿ, ಚೌಳಹಳ್ಳಿ, ಕೃಷ್ಣಯ್ಯನಪಾಳ್ಯ, ಶಿವನಗರೆ, ಮುತ್ತುರಾಯನಹಳ್ಳಿ, ಹೂವಿನಹಳ್ಳಿ, ಐ.ಡಿ. ಹಳ್ಳಿ, ಓಬಳಾಪುರ, ಯರಮ್ಮನಹಳ್ಳಿ, ದೊಡ್ಡಮಾಲೂರು, ಗೋವಿಂದನಹಳ್ಳಿ, ಬಟ್ಟಗರೆ, ದೊಡ್ಡಹೊಸಹಳ್ಳಿ, ತಿಪ್ಪಾಪುರ, ಕಾಮೇಗೌಡನಹಳ್ಳಿ, ಮಲ್ಲೇನಹಳ್ಳಿ (ಕಸಬಾ), ಮಲ್ಲೇನಹಳ್ಳಿ (ದೊಡ್ಡೇರಿ), ಹೊಸಕೋಟೆ, ಚಿಕ್ಕಮಾಲೂರು, ಕೊಡ್ಲಾಪುರ, ಸಿಂಗಾರಗೊಂಡನಹಳ್ಳಿ, ಬಡಕನಹಳ್ಳಿ, ಹೊಸ ಇಜಕಲೋಟೆ, ತಾಡಿ, ಜಕ್ಕೇನಹಳ್ಳಿ, ಗುಟ್ಟೆ, ಬಂಡೇನಹಳ್ಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1,840 ಉಪ್ಪಾರ ಕುಟುಂಬಗಳಿದ್ದು, 10,120 ಉಪ್ಪಾರ ಜನಸಂಖ್ಯೆ ಇದೆ.

ಸಿರಾ ತಾಲ್ಲೂಕಿನ ಸಿರಾ ಟೌನ್, ದೊಡ್ಡುಲಿಕುಂಟೆ, ಚಿಕ್ಕದಾಸೇನಹಳ್ಳಿ, ನಾರಗಾನಹಳ್ಳಿ, ಚಿಕ್ಕದಾಸರಹಳ್ಳಿ, ಎಂ.ಕೆ. ಪಾಳ್ಯ, ಅರೇಹಳ್ಳಿ, ಕಟಾವೀರನಹಳ್ಳಿ, ದೊಡ್ಡಬಾಣಗೆರೆ, ಬಿದರಕೆರೆ, ತಗ್ಗಿಹಳ್ಳಿ, ಲಕ್ಕೇನಹಳ್ಳಿ, ಶೆಟ್ಟಿಗಾನಹಳ್ಳಿ, ಹುಣಸೇಹಳ್ಳಿ, ಕರೇತಿಮ್ಮನಹಳ್ಳಿ, ಚಿಕ್ಕಬಾಣಗೆರೆ, ಮಾದೇನಹಳ್ಳಿ ಗೇಟ್, ತರೂರು, ಮಾಯಸಂದ್ರ, ಜಾನಕಲ್ಲು, ಮಾದೇನಹಳ್ಳಿ, ಗಾಣದುಣಸೆ, ಬೆಟ್ಟನಹಳ್ಳಿ, ತಾಳಗುಂದ, ಗಿಡಗನಪಾಳ್ಯ, ಬೆಜ್ಜಿಹಳ್ಳಿ, ಗಂಡಿಹಳ್ಳಿ, ಕಲ್ಕೋಟೆ, ಎಂಜಲಗೆರೆ, ಬೊಮ್ಮಸಂದ್ರ, ಪಜ್ಜಿಹಳ್ಳಿ, ಪಂಜಿಗಾನಹಳ್ಳಿ, ಮಾಳೆ (ದೇವರಪಟ್ಟಿ), ಎಲಿಜೇನಹಳ್ಳಿ, ಬೆಟ್ಟನಹಳ್ಳಿ, ಹೊಸಪಾಳ್ಯ ಮುಂತಾದ ಗ್ರಾಮಗಳ್ಳೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 1,270 ಉಪ್ಪಾರ ಕುಟುಂಬಗಳಿದ್ದು, 7,250ಕ್ಕೂ ಅಧಿಕ ಉಪ್ಪಾರ ಜನಸಂಖ್ಯೆ ಇದೆ.

ಪಾವಗಡ ತಾಲ್ಲೂಕಿನ ಪಾವಗಡ ಟೌನ್, ಕೋಟೆಬಂಡೆ, ಕಳಾರಾಜನಹಳ್ಳಿ, ಗಂಗಾವರ, ತಪಗಾನದೊಡ್ಡಿ, ಬುಗಡೂರು, ಭೀಮನಕುಂಟೆ, ಗುಡಿಸಲಹೊನ್ನಮ್ಮನಹಳ್ಳಿ, (ಮಾಧವರಾಯನ ಪಾಳ್ಯ), ಕ್ಯಾತಗಾನಕೆರೆಹಳ್ಳಿ, ಕೆಂಡಮಡಗು, ಗುಂಡಲಹಳ್ಳಿ, ಗುಮ್ಮಘಟ್ಟ, ಗಂಗಸಾಗರ, ಬಸವನಹಳ್ಳಿ, ದಾಸಮ್ಮನಹಳ್ಳಿ, ಪೋತಗಾನಹಳ್ಳಿ, ಸುಂಕಾರ್ನಕುಂಟೆ, ರಂಗಯ್ಯನ ಕೊಪ್ಪ, ವೈ.ಎನ್. ಹೊಸಕೋಟೆ, ತೂಮ್‌ಕುಂಟೆ, ವೆಂಕಟಾಪುರ, ಅಕ್ಕಮ್ಮನಹಳ್ಳಿ, ಕನಿಕಲಬಂಡೆ, ನಾಗಲಾಪುರ, ಭೀಮರಾಯನಹಳ್ಳಿ, ಅರಳಿಕುಂಟೆ, ಇಂಟೂರಾಯನಹಳ್ಳಿ, ಕಳಾರಾಜನಹಳ್ಳಿ, ಬೂದಿಬೆಟ್ಟ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1,265 ಉಪ್ಪಾರ ಕುಟುಂಬಗಳಿದ್ದು 6,950ಕ್ಕೂ ಹೆಚ್ಚು ಉಪ್ಪಾರ ಜನಸಂಖ್ಯೆ ಇದೆ.

ತುಮಕೂರು ತಾಲ್ಲೂಕಿನ ತುಮಕೂರು ಟೌನ್, ಮಲ್ಲಸಂದ್ರ, ಗೂಳೂರು, ಅಣ್ಣೇನಹಳ್ಳಿ, ಮುದ್ದೇನಹಳ್ಳಿ, ಕೆರೆಬಂಡಿ ಪಾಳ್ಯ, ಕಳ್ಳಿಪಾಳ್ಯ, ಮುದ್ದನಹಳ್ಳಿ, ಹೀರೆಗುಂಡಗಲ್ಲು, ರಾಮನಹಳ್ಳಿ, ಕಿತ್ತಗಾನಹಳ್ಳಿ, ಬಾಣಾವರ, ಉಪ್ಪಾರಪಾಳ್ಯ, ರಾಗಿಮುದ್ದನಹಳ್ಳಿ, ಮುಳಕುಂಟೆಪಾಳ್ಯ, ಕುಚ್ಚಂಗಿಪಾಳ್ಯ, ಬುಡುಗನಹಳ್ಳಿ, ಕಿಬ್ಬತ್ತನಹಳ್ಳಿ, ಹೆಬ್ಬಾಕ, ಸದಾಶಿವನಗರ, ಬೆಳಗುಂಬ, ಭಾಗ್ಯನಗರ, ಹನುಮಂತಪುರ, ಹಿರೇತೊಟ್ಲುಕೆರೆ, ಮಾವಕೆರೆ, ಕುಂಕುಮನಹಳ್ಳಿ, ಮೆಳೆಕೋಟೆ,

ಮಾಜನಾಥಪುರ, ಹಂಬಿಹಳ್ಳಿ, ಅಜಗೊಂಡನಹಳ್ಳಿ, ಚಿಕ್ಕತೊಟ್ಲುಕೆರೆ, ಬಾಣಾವರ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 2,105 ಉಪ್ಪಾರ ಕುಟುಂಬಗಳಿದ್ದು, 12,500ಕ್ಕೂ ಅಧಿಕ ಉಪ್ಪಾರ ಜನಸಂಖ್ಯೆ ಇದೆ.

ಕೊರಟಗೆರೆ ತಾಲ್ಲೂಕಿನ ಕೊರಟಗೆರೆ ಟೌನ್, ಮಣ್ಣೆವಿನ ಕುರಿಕೆ, ದಾಸಾಲಕುಂಟೆ, ಅಕ್ಕಿರಾಂಪುರ, ಸೂರೇನಹಳ್ಳಿ, ಮುದ್ದೇನಹಳ್ಳಿ, ಬೈಚಾಪುರ, ಜೋನಿಗರಹಳ್ಳಿ, ನೇಗಿಲಾಳ, ಕೊಡ್ಲುಹಳ್ಳಿ, ಕ್ಯಾಶನಾರ, ಜುಂಜೋರಾಮನಹಳ್ಳಿ, ಚನ್ನರಾಯನದುರ್ಗ, ಮಾದತೂರು ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1,045 ಉಪ್ಪಾರ ಕುಟುಂಬಗಳಿದ್ದು, 5,750ಕ್ಕಿಂತಲೂ ಅಧಿಕ ಉಪ್ಪಾರ ಜನಸಂಖ್ಯೆ ಇದೆ.

ತುರುವೇಕೆರೆ ತಾಲ್ಲೂಕಿನ ತುರುವೇಕೆರೆ ಟೌನ್, ವಿಶ್ವನಾಥಪುರ, ವಿಶ್ವನಾಥಪುರ -ಮೋಳೆ, ತೂಬಿನಕಟ್ಟೆ, ತೊರೆಮಾವಿನಹಳ್ಳಿ ಮೋಳೆ, ಗೊಟ್ಟಿಕೆರೆ, ಗೂರ್ಲಮಠ, ದಬ್ಬೆಗಟ್ಟ, ಕಲ್ಲಬೋರ್ನಹಳ್ಳಿ, ಮಾಯಸಂದ್ರ, ಪುಟ್ಟಮಾದಿಹಳ್ಳಿ, ಕುರಿಗೂಡಿನಪಾಳ್ಯ, ಚಿಕ್ಕತುರುವೇಕೆರೆ, ದೊಡ್ಡಗೊರಾಘಟ್ಟ, ವಡಕೇಘಟ್ಟ, ಕೊಪ್ಪ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1,165ಕ್ಕೂ ಹೆಚ್ಚು ಉಪ್ಪಾರ ಕುಟುಂಬಗಳಿದ್ದು, 6,375ಕ್ಕೂ ಅಧಿಕ ಉಪ್ಪಾರ ಜನಸಂಖ್ಯೆ ಇದೆ.

ಗುಬ್ಬಿ ತಾಲ್ಲೂಕಿನ ಗುಬ್ಬಿ ಟೌನ್, ವೆಂಕಟೇಗೌಡನಪಾಳ್ಯ, ನಿಟ್ಟೂರು, ಹೊಸಕೆರೆ, ದೊಡ್ಡಗೋರಾಘಟ್ಟ, ಕಲ್ಕೆರೆ, ಸಣಬನಹಳ್ಳಿ, ಅಂತಾಪುರ ಪಾಳ್ಯ, ಹಿಂಡಿಸ್ಕೆರೆ, ಮಾದಾಪಟ್ನ, ಚೆಂಗಾವಿ, ಬೊಂಬರಸನಹಳ್ಳಿ, ಗುಡ್ಡದಹಳ್ಳಿ, ರಾಯರಪಾಳ್ಯ, ತ್ಯಾಗಟೂರು, ಹೇರೂರು, ಗೌರೀಪುರದಪಾಳ್ಯ, (ಮೇಲುಸಕ್ಕರೆ ಪಾಳ್ಯ), ಇಡಗೂರು, ಗೋರಾಘಟ್ಟ, ಅಳಲಘಟ್ಟ, ಬ್ಯಾಡಗೆರೆ (ಕಸಬಾ), ಕೋಡಿಹಳ್ಳಿ, ಅಮ್ಮನಘಟ್ಟ, ಕಿಟ್ಟದಕುಪ್ಪೆ, ಕೆರೆಬಂಡಿಪಾಳ್ಯ, ಅರಿವೇಸಂದ್ರಪಾಳ್ಯ, ಬೆಲವತ್ತ, ಕಲ್ಲೂರು, ಮಾವಿನಹಳ್ಳಿ, ಮುದಿಗೆರೆಪಾಳ್ಯ, ವದಲೂರು, ಅಂತಾಪುರ, ಕೆ. ಕಲ್ಲಹಳ್ಳಿ, ಹೊಸಪಾಳ್ಯ, ಕಳ್ಳಿಪಾಳ್ಯ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 6,350ಕ್ಕೂ ಹೆಚ್ಚು ಉಪ್ಪಾರ ಕುಟುಂಬಗಳಿದ್ದು, 5,500 ಅಧಿಕ ಉಪ್ಪಾರ ಜನಸಂಖ್ಯೆ ಇದೆ.

ಕುಣಿಗಲ್ ತಾಲೂಕಿನಲ್ಲಿ ಕುಣಿಗಲ್, ಕಂಟನಹಳ್ಳಿ, ಮುತ್ತುಗದಹಳ್ಳಿ, ಯಡಿಯೂರು, ಅಮೃತೂರು, ಮಾರ್ಕೋನಹಳ್ಳಿ, ಹೊಸಳ್ಳಿ, ಬೇಗೂರು, ಹುಲಿಯೂರುದುರ್ಗ, ಕುರುಡಹಳ್ಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 1,150 ಉಪ್ಪಾರ ಕುಟುಂಬಗಳಿದ್ದು 6,350 ಉಪ್ಪಾರ ಜನಸಂಖ್ಯೆ ಇದ.

ಹೀಗೆ ತುಮಕೂರು ಜಿಲ್ಲೆಯಲ್ಲಿ ಸುಮಾರು 15,995 ಉಪ್ಪಾರ ಕುಟುಂಬಗಳಿದ್ದು, ಸುಮಾರು 89,120 ಕ್ಕಿಂತಲೂ ಹೆಚ್ಚು ಉಪ್ಪಾರ ಜನಸಂಖ್ಯೆ ಇದೆ.

ಜಿಲ್ಲೆಯ ಉಪ್ಪಾರರು ಆರ್ಥಿಕವಾಗಿ ಅಷ್ಟೇನೂ ಸಬಲರಲ್ಲ. ಇವರನ್ನು ಕೆಲವೊಮ್ಮೆ

'ಮೇಲು ಸಕ್ಕರೆ ಉಪ್ಪಾರರು' ಎಂದೇ ಸಂಬೋಧಿಸಲಾಗುತ್ತದೆ. ಕೆಲವೊಮ್ಮೆ ವೃತ್ತಿಗನುಗುಣವಾಗಿ ಉಪ್ಪಾರರನ್ನು ಗಾರೆ ಉಪ್ಪಾರರು, ಹುರುಳಿ ಉಪ್ಪಾರರು, ಕಲ್ಲುಕುಟಿಗ ಉಪ್ಪಾರರು, ಕೋಣನ ಉಪ್ಪಾರರು, ಕೊರಬಂಡೆ ಉಪ್ಪಾರರು ಎಂದೆಲ್ಲಾ ಕರೆಯಲಾಗುತ್ತದೆ. ಆರ್ಥಿಕವಾಗಿ ಶೋಚನೀಯ ಸ್ಥಿತಿಯಲ್ಲಿರುವ ಕಾರಣ ಶೇಕಡ 80 ಕ್ಕಿಂತ ಹೆಚ್ಚಿನ ಜನ ಬಡತನದ ರೇಖೆಗಿಂತ ಕೆಳಗಿದ್ದಾರೆ.

ಜಿಲ್ಲೆಯ ಬಹುಮಟ್ಟಿನ ಉಪ್ಪಾರರ ಮನೆಮಾತು ಹಾಗು ವ್ಯವಹಾರ ಭಾಷೆ ಮೂಲತಃ ಕನ್ನಡವೇ ಆಗಿರುತ್ತದೆ. ಪಾವಗಡ ಹಾಗು ಮಧುಗಿರಿ ತಾಲ್ಲೂಕುಗಳಲ್ಲಿ ಉಪ್ಪಾರರು ತೆಲುಗು ಭಾಷೆಯನ್ನು ಬಳಸುತ್ತಾರೆ.

ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಸರಾಸರಿ ಶೇಕಡ 67.19 ರಷ್ಟಿದೆ. ಆದರೆ ಉಪ್ಪಾರರ ಸಾಕ್ಷರತೆಯ ಪ್ರಮಾಣವು ಶೇಕಡ 30ಕ್ಕಿಂತ ಕಡಿಮೆಯಿದೆ. ಅದರಲ್ಲಿ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇಕಡ 15ರಷ್ಟು ಇದೆ ಎಂದು ಹೇಳಬಹುದು.

ಜಿಲ್ಲೆಯಲ್ಲಿ ಒಟ್ಟು ನಾಲ್ಕು ವೈದ್ಯರುಗಳು, ಹನ್ನೆರಡು ಜನ ಇಂಜನಿಯರ್ ಹಾಗು ಮೂರು ಜನ ವಕೀಲರು ಇದ್ದಾರೆ. ಸುಮಾರು 150 ಜನ ಸರ್ಕಾರಿ ನೌಕರರು ಇದ್ದಾರೆ. 200 ರಿಂದ 250 ಜನ ವ್ಯಾಪಾರಸ್ಥರು ಇದ್ದಾರೆ. ಈ ಸಮುದಾಯದವರು ನಡೆಸುವ ವಿದ್ಯಾಸಂಸ್ಥೆ, ಆಸ್ಪತ್ರೆ ಹಾಗು ಕೈಗಾರಿಕೆಗಳು ಇಲ್ಲ. ಈ ಸಮುದಾಯಕ್ಕೆ ಸೇರಿದವರೊಬ್ಬರ ಇಟ್ಟಿಗೆ ಫ್ಯಾಕ್ಟರಿ ಇದೆ.

ಪ್ರಸ್ತುತ ಉಪ್ಪಾರ ಸಂಘದ ಅಧ್ಯಕ್ಷರಾದ ವಿಶ್ವನಾಥ್ ಅವರ ನೇತೃತ್ವದಲ್ಲಿ ಇದೀಗ ವಿದ್ಯಾಸಂಸ್ಥೆಯೊಂದು ಪ್ರಾರಂಭವಾಗಿದೆ. ಉಪ್ಪಾರ ಸಂಘದ ಆಶ್ರಯದಲ್ಲಿ 'ವಿದ್ಯಾರ್ಥಿನಿಲಯ' ನಡೆಯುತ್ತದೆ. ಅದರಲ್ಲಿ 20 ವಿದ್ಯಾರ್ಥಿಗಳು ಪಿಯುಸಿ ಪದವಿ ಹಾಗು ತಾಂತ್ರಿಕ ವಿಷಯಗಳನ್ನು ಅಧ್ಯಯನ ಮಾಡುತ್ತಿದ್ದಾರೆ. ದಿನವೊಂದಕ್ಕೆ 15ರೂ. ಗಳಲ್ಲಿ ಒಂದು ತಿಂಡಿ ಹಾಗು ಎರಡು ಊಟ ವಿದ್ಯಾರ್ಥಿಗಳಿಗೆ ಕೊಡಲಾಗುತ್ತಿದೆ. ಚಿಕ್ಕಮಗಳೂರು, ಆಂಧ್ರ, ಚಿತ್ರದುರ್ಗ ಹಾಗು ತುಮಕೂರು ಜಿಲ್ಲೆಯ ವಿವಿಧ ಭಾಗಗಳಿಂದ ಬಂದ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಸಮುದಾಯಭವನದ ವಿಸ್ತರಣೆಯಿಂದ ಮತ್ತೆ 15 ವಿದ್ಯಾರ್ಥಿಗಳಿಗೆ ಅವಕಾಶವಾಗಿದೆ.

ಉಪ್ಪಾರ ಜನಾಂಗದ ಸರ್ವತೋಮುಖ ಅಭಿವೃದ್ಧಿಗಾಗಿ ಕರ್ನಾಟಕದಲ್ಲೇ ಪ್ರಪ್ರಥಮವಾಗಿ 28 ಜುಲೈ 2000ದಂದು ಐದು ಲಕ್ಷ ಷೇರು ಬಂಡವಾಳದೊಡನೆ 'ಭಗೀರಥ ಪತ್ತಿನ ಸಹಕಾರ ಸಂಘ' ಪ್ರಾರಂಭವಾಗಿದೆ. ಪ್ರಾರಂಭವಾದ ಒಂದೂವರೆ ವರ್ಷದಲ್ಲೇ ಇದರ ವಹಿವಾಟು 50 ಲಕ್ಷ ರೂಪಾಯಿ ದಾಟಿದೆ. ಸಣ್ಣ, ಮಧ್ಯಮ ವರ್ಗದ ಎಲ್ಲ ಜನರಿಗೂ 5,10,20 ಸಾವಿರಗಳ ಜಂಟಿ ಸಾಲ ನೀಡಲಾಗಿದೆ. ಈಗ ನೀಡಿರುವ ಸಾಲದ ಮೊತ್ತ 47 ಲಕ್ಷ ರೂ. ದಾಟಿದೆ. ಈ ಸಹಕಾರ ಸಂಘದ ಅಧ್ಯಕ್ಷರಾಗಿ ಶ್ರೀ ವಿಶ್ವನಾಥ್, ಉಪಾಧ್ಯಕ್ಷರಾಗಿ

ಅಂಜನಪ್ಪ ಇದ್ದಾರೆ. ಏಳು ಜನ ಈ ಸಹಕಾರ ಸಂಘದ ನಿರ್ದೇಶಕರು. ಇದರಲ್ಲಿ ಮೂರು ಜನ ಮಹಿಳೆಯರಿದ್ದಾರೆ. ರೇಣುಕಮ್ಮ, ನಾಗರಾಜ, ಶೋಭಾಭೈರಪ್ಪ, ಎಂ. ಚಂದ್ರಕಲಾ ಅವರು ಮಹಿಳಾ ನಿರ್ದೇಶಕರು. 2001-2002 ನೇ ಸಾಲಿನಲ್ಲಿ ಒಟ್ಟು 3 ಲಕ್ಷ ರೂ.ಗಳ ಲಾಭ ಗಳಿಸಿದ್ದು, ಅದರಲ್ಲಿ 51 ಸಾವಿರ ನಿವ್ವಳ ಲಾಭ ಗಳಿಸಿದೆ. ಸಹಕಾರಿ ಸಂಸ್ಥೆಗಳು ನಷ್ಟ ಅನುಭವಿಸುತ್ತಿರುವ ಸಂದರ್ಭದಲ್ಲಿ ಮೊದಲನೆಯ ವರ್ಷವೇ ಲಾಭ ಗಳಿಸಿದ್ದು ಶ್ಲಾಘನೀಯ.

ಜಿಲ್ಲೆಯ ಉಪ್ಪಾರ ಸಮುದಾಯಕ್ಕೆ ಸೇರಿದ ಮೂವರು ಸಾಹಿತಿಗಳು ಇದ್ದಾರೆ. ಅವರುಗಳೆಂದರೆ ಪಾವಗಡದ ಕೆ.ಎಸ್. ಅಂಜನಪ್ಪ, ಗುಬ್ಬಿ ತಾಲ್ಲೂಕು ಹೊಸಕೆರೆಯ ಸಿದ್ದಗಂಗಮ್ಮ ಹಾಗೂ ತುಮಕೂರಿನ ಮೇಳೆಕೋಟೆಯ ಸಿದ್ದಪ್ಪ. ಚಿಕ್ಕನಾಯನಕಹಳ್ಳಿ ತಾಲ್ಲೂಕಿನ ಚಿಕ್ಕಬಿದರೆಯಲ್ಲಿ ಈ ಸಮುದಾಯಕ್ಕೆ ಸೇರಿದ 'ವೀರಗಾಸೆ' ನೃತ್ಯ ತಂಡವಿದೆ. ಇದರ ನೇತೃತ್ವವನ್ನು ಲಕ್ಷ್ಮಣಯ್ಯ ಹಾಗು ಬಸವರಾಜು ವಹಿಸಿದ್ದಾರೆ.

ಈ ಜಿಲ್ಲೆಯಲ್ಲಿ ಉಪ್ಪಾರರ ರಾಜಕೀಯ ಚಟುವಟಿಕೆ ತುಂಬ ಸೀಮಿತವಾಗಿದೆ. ಸಂಘದ ಅಧ್ಯಕ್ಷರಾದ ವಿಶ್ವನಾಥ್ ಜಾತ್ಯತೀತ ಜನತಾದಳದ ಹಿಂದುಳಿದ ವರ್ಗ ಘಟಕದ ಜಿಲ್ಲಾ ಸಂಚಾಲಕರಾಗಿದ್ದಾರೆ. ತುಮಕೂರು ತಾಲ್ಲೂಕು ಹೀರೆಗುಂಡಗಲ್ಲು ಗ್ರಾಮದ ಪಂಚಾಯಿತಿಯ ಉಪಾಧ್ಯಕ್ಷರಾದ ಶ್ರೀ ಹನುಮಂತಪ್ಪ ಈ ಸಮುದಾಯದವರು. ತುಮಕೂರು ಗೃಹನಿರ್ಮಾಣ ಸಹಕಾರ ಮಂಡಲಿಯ ನಿರ್ದೇಶಕರಾಗಿ ಕೆಂಪನಂಜಯ್ಯನವರು ಇದ್ದಾರೆ. ಕುಣಿಗಲ್ ಪುರಸಭೆಯಲ್ಲಿ ಈ ಸಮುದಾಯಕ್ಕೆ ಸೇರಿದ ಸದಸ್ಯರು ಒಬ್ಬರು ಇದ್ದಾರೆ. ತಾಲ್ಲೂಕು ಪಂಚಾಯಿತಿಗಳಲ್ಲಿ ಈ ಪಂಗಡದ ಇಬ್ಬರು ಸದಸ್ಯರು ಆಯ್ಕೆಯಾಗಿದ್ದಾರೆ. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹುಳಿಯಾರು ಹೋಬಳಿ 'ತೊರೆಮನೆ'ಯ ಶ್ರೀಮತಿ ಲಕ್ಷ್ಮಿ ಜಿಲ್ಲಾಪಂಚಾಯತ್ ಸದಸ್ಯರಾಗಿದ್ದಾರೆ. ತಿಪಟೂರು ತಾಲ್ಲೂಕಿನ ಬಿಳಿಕೆರೆ ಗ್ರಾಮದ ಪಂಚಾಯಿತಿ ಅಧ್ಯಕ್ಷರಾಗಿ ಕಿಬ್ಬನಹಳ್ಳಿ ಗ್ರಾಮದ ಲಿಂಗಪ್ಪ ಅವರು ಆಯ್ಕೆಯಾಗಿದ್ದಾರೆ. ತುಮಕೂರು ಜಿಲ್ಲೆಯಲ್ಲಿ ಈ ಸಮುದಾಯಕ್ಕೆ ಸೇರಿದ ಶಾಸಕ, ವಿಧಾನಪರಿಷತ್ತು ಸದಸ್ಯರು ಹಾಗು ಲೋಕಸಭಾ ಸದಸ್ಯರನ್ನು ಕಾಣಲು ಸಾಧ್ಯವಾಗುತ್ತಿಲ್ಲ. ಒಂದಕ್ಕಿಂತಲೂ ಹೆಚ್ಚು ವಿಧಾನಸಭಾ ಕ್ಷೇತ್ರಗಳಲ್ಲಿ ನಿರ್ಣಾಯಕ ಪಾತ್ರ ವಹಿಸುವ ಶಕ್ತಿ ಈ ಸಮಾಜ ಪಡೆದಿದೆ. ಚಿಕ್ಕನಾಯಕನಹಳ್ಳಿ, ತಿಪಟೂರು, ಮಧುಗಿರಿ, ಸಿರಾ ಮೊದಲಾದ ಕಡೆ ಇವರ ಶಕ್ತಿಯನ್ನು ಕಡೆಗಣಿಸುವಂತಿಲ್ಲ.

ಶ್ರೀರಾಮನಗರದ ಕೆಂಪಣ್ಣ, ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದರು. ಪ್ರಸ್ತುತ ಕೃಷಿ ಇಲಾಖೆಯಲ್ಲಿ ಅಧಿಕಾರಿಯಾಗಿ ನಿವೃತ್ತರಾಗಿರುವ ಶ್ರೀ ವಿಶ್ವನಾಥ್ ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದಾರೆ. ಇವರಿಗಿಂತ ಹಿಂದೆ ನಾಲ್ಕು ವರ್ಷಗಳ ಕಾಲ ಎ.ಆರ್. ಲಿಂಗಣ್ಣ ಅಧ್ಯಕ್ಷರಾಗಿದ್ದರು. ಸಂಘದ ಆಶ್ರಯದಲ್ಲಿ 'ಜಿಲ್ಲಾ ಯುವಕ ಸಂಘ' ರೂಪುಗೊಂಡಿದ್ದು ಅದಕ್ಕಾಗಿ 10 ಗುಂಟೆ ಜಾಗವನ್ನು ಖರೀದಿಸಲಾಗಿದೆ. ಮೆಳೆಕೋಟೆಯ ತ್ಯಾಗರಾಜ ಸ್ವಾಮಿಯವರು ಇದರ ಅಧ್ಯಕ್ಷರಾಗಿದ್ದಾರೆ.

ಕುಣಿಗಲ್ ತಾಲ್ಲೂಕು ಕೇಂದ್ರದಲ್ಲಿ ಸುಸಜ್ಜಿತವಾದ ಕಲ್ಯಾಣಮಂಟಪವಿದೆ. ಈ ಜನಾಂಗಕ್ಕೆ ಸೇರಿದ ಕೊಲ್ಲಾಪುರದಮ್ಮ ದೇವಸ್ಥಾನವಿದೆ. ವರ್ಷಕ್ಕೊಮ್ಮೆ ಅದ್ದೂರಿಯಿಂದ ಜಾತ್ರೆ ನಡೆಯುತ್ತದೆ.

ತಿಪಟೂರು ತಾಲ್ಲೂಕಿನಲ್ಲಿ ಸಂಘಕ್ಕೆ ಒಂದು ನಿವೇಶನವಿದೆ. ಮಧುಗಿರಿಯಲ್ಲಿ ಎರಡು ನಿವೇಶನಗಳು ಇವೆ. ಬೇರೆ ತಾಲೂಕಿನಲ್ಲಿ ಉಪ್ಪಾರ ಸಂಘಕ್ಕೆ ಯಾವುದೇ ಆಸ್ತಿ ಇಲ್ಲ.

ತುಮಕೂರು ಕಸಬಾದ ಮೆಳೆಕೋಟೆಯಲ್ಲಿ ಡಾ. ಅಂಜನಯ್ಯ ಅವರು ತಮ್ಮ ಜಮೀನಿನಲ್ಲಿ ಒಂದು ಮಾರುತಿ ದೇವಸ್ಥಾನ ಕಟ್ಟಿಸಿದ್ದಾರೆ. ಪೂಜೆ ನಡಸುತ್ತಾರೆ. ಹನುಮ ಜಯಂತಿಯನ್ನು ನಡೆಸುತ್ತಾರೆ. ಇಲ್ಲೇ ಅವರು ಕಲ್ಯಾಣಮಂಟಪ ನಿರ್ಮಾಣ ಮಾಡಿರುವುದನ್ನು ಉಲ್ಲೇಖಿಸಬಹುದು.

ಉಪ್ಪಾರ ಸಮಾಜದಲ್ಲಿರುವ ಜಿಲ್ಲೆಯ ಗಣ್ಯ ವ್ಯಕ್ತಿಗಳೆಂದರೆ ಸಂಘದ ಅಧ್ಯಕ್ಷರಾದ ವಿಶ್ವನಾಥ್, ಮಾಜಿ ಅಧ್ಯಕ್ಷರಾದ ಎ.ಆರ್. ಲಿಂಗಪ್ಪ, ಬಿ.ಟಿ. ಕೆಂಪಣ್ಣ, ಬಿ. ರಾಮಚಂದ್ರಯ್ಯ ಹಾಗು ಎಂ.ಬಿ. ಮಲ್ಲಣ್ಣ.

ಕುಣಿಗಲ್ ತಾಲ್ಲೂಕಿನ ಕೆ.ಆರ್. ರಾಮಚಂದ್ರ, ಚನ್ನಬಸವಣ್ಣ, ಚಾಮಯ್ಯ, ತಿಪಟೂರು ತಾಲ್ಲೂಕಿನ ಹೆಚ್. ಲಿಂಗಪ್ಪ, ಸುಂದರಮೂರ್ತಿ, ಸಿದ್ಧಪ್ಪ, ಕೈದಾಳ ಗ್ರಾಮದ ಜಮೀನ್ದಾರ ದಿ|| ಲಿಂಗಣ್ಣವರ ಮಗ ಕೆ.ಎಲ್. ನಾಗರಾಜ, ಕೆ.ಎಂ. ಪುಟ್ಟಣ್ಣ, ಕೆ.ಆರ್. ಪುಟ್ಟಯ್ಯ, ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ದಿ. ಪಟೇಲ್ ಸಿದ್ಧೇಗೌಡ, ದಿ. ವರದಪ್ಪ, ದಿ. ಶಾಮಣ್ಣ ಅವರುಗಳ ಜೊತೆ ಶ್ರೀ ಗುಡ್ಡದ ಮಲ್ಲಪ್ಪ, ಮುದ್ದಪ್ಪ ಸಂಗೇನಹಳ್ಳಿ, ನಿರ್ವಾಣಯ್ಯ, ಕೆಂಚಪ್ಪ, ಶಿವಣ್ಣ ಅವರುಗಳನ್ನು ನೆನೆಯಬೇಕು. ಮಧುಗಿರಿ ತಾಲ್ಲೂಕಿನ ತಿಮ್ಮಯ್ಯ, ಎ. ಗಂಗಪ್ಪ, ದಾಸಪ್ಪ, ಚಿನ್ನಪ್ಪಯ್ಯ, ಶಿರಾ ತಾಲ್ಲೂಕಿನ ಪಾತೇಗೌಡ, ವಿ. ರಂಗನಾಥ್, ಪಾವಗಡ ತಾಲ್ಲೂಕಿನ ಕೋಟೆಬಂಡೆಯ ಕೆ.ಎಸ್. ಅಂಜನಪ್ಪ, ಅಶ್ವತ್ಥಪ್ಪ, ರುದ್ರಪ್ಪ, ಕೊರಟಗೆರೆ ತಾಲ್ಲೂಕಿನ ದಿ. ಪುಟ್ಟಯ್ಯ, ಮದಿಗೆಪ್ಪ, ಗುಬ್ಬಿ ತಾಲ್ಲೂಕಿನ ಅಮ್ಮನಘಟ್ಟದ ರಾಮದಾಸು, ನಟರಾಜ, ತುರುವೆಕೆರೆ ತಾಲ್ಲೂಕಿನ ಡಾ. ನಂಜಪ್ಪ, ಕೃಷ್ಣಪ್ಪ, ಸಿದ್ದಲಿಂಗಪ್ಪ, ಹುಚ್ಚಪ್ಪ ಇವರುಗಳು ತುಮಕೂರು ಜಿಲ್ಲೆಯ ಉಪ್ಪಾರ ಸಮಾಜದಲ್ಲಿ ಗುರುತಿಸಲೇಬೇಕಾದ ವ್ಯಕ್ತಿಗಳು.

ತುಮಕೂರು ಜಿಲ್ಲೆಯ ಉಪ್ಪಾರ ಸಮಾಜದ ಅಭಿವೃದ್ಧಿಗೆ ಆಗಬೇಕಾದ ಕೆಲಸಗಳು ಹೀಗಿವೆ. ನಿರಂತರವಾದ ಆದಾಯಕ್ಕಾಗಿ ಕಲ್ಯಾಣಮಂಟಪ ಹಾಗು ವಾಣಿಜ್ಯ ಮಳಿಗೆಗಳ ನಿರ್ಮಾಣ, ಪ್ರಸ್ತುತ ವಿದ್ಯಾರ್ಥಿನಿಲಯಕ್ಕೆ ಪ್ರತಿ ವರ್ಷ ಒಂದೆರಡು ಕೊಠಡಿಗಳ ಸೇರ್ಪಡೆ, ಶಿಕ್ಷಣ ಸಂಸ್ಥೆ ಹಾಗು ಗ್ರಂಥಾಲಯಗಳ ಪ್ರಾರಂಭ; ಮಹಿಳಾ ಸಮಾಜ ಸ್ಥಾಪನೆ ಮತ್ತು ಸಮಾಜದ ನಿರಂತರ ಜಾಗೃತಿಗೆ ಹತ್ತು ಹಲವು ಚೇತೋಹಾರಿ ಕಾರ್ಯಕ್ರಮಗಳು.

ಉಪ್ಪಾರ ಸಮುದಾಯದ ಸಂಘಟನಗೆ ರಾಜ್ಯಮಟ್ಟದಲ್ಲಿ 'ನೀಲಿನಕಾಶೆ' ತಯಾರಿಸಬೇಕು.

ರಾಜ್ಯದ ಸಂಘಕ್ಕೆ ಹೊಸ ಆಯಾಮ ಕೊಡಬೇಕು. ಜಿಲ್ಲಾಮಟ್ಟದಲ್ಲಿ ಸಂಘಕ್ಕೆ ನಿರಂತರ ಆದಾಯ ಬರುವಂತಾಗಬೇಕು. ಕಲ್ಯಾಣಮಂಟಪ ಹಾಗು ವಾಣಿಜ್ಯ ಮಳಿಗೆಗಳು ನಿರ್ಮಾಣವಾಗಬೇಕು. ಜನಾಂಗದ ಸಹಕಾರ ಬ್ಯಾಂಕ್ ಅಸ್ತಿತ್ವಕ್ಕೆ ಬಂದು ಆ ಮೂಲಕ ವ್ಯಾಪಾರ ವಹಿವಾಟಿಗೆ ಸಾಕಷ್ಟು ಆರ್ಥಿಕ ಸಹಾಯ ದೊರೆಯುವಂತಾಗಬೇಕು. ಜಿಲ್ಲೆಯ ಉಪ್ಪಾರ ಜನಾಂಗದ ಕುಟುಂಬಗಳ ವಿವರಗಳನ್ನು ಸಂಗ್ರಹಿಸಿಡಬೇಕು. ಜಿಲ್ಲಾ ಸಂಘದ ಪದಾಧಿಕಾರಿಗಳು ರಾಜ್ಯಾದ್ಯಂತ ಪ್ರವಾಸ ಮಾಡಿ ಉಪ್ಪಾರ ಬಂಧುಗಳಲ್ಲಿ ಜಾಗೃತಿ ಉಂಟು ಮಾಡಬೇಕು. ಆಯಾ ಜಿಲ್ಲೆಯಲ್ಲಿ ಕ್ರೋಡೀಕರಿಸುವ ಆದಾಯದಲ್ಲಿ ಪ್ರತಿವರ್ಷ ಕನಿಷ್ಠ ಪಕ್ಷ 25% ರಾಜ್ಯ ಸಂಘದ ಅಭಿವೃದ್ಧಿಗೆ ನೀಡುವ ಪೋಷಕರರಾಗಿರಬೇಕು.

ಎಲ್ಲಿಯತನಕ ಸಮಾಜಕ್ಕೆ ಜಾತಿವಾರು ಸೌಲಭ್ಯ ದೊರೆಯುತ್ತದೋ ಅಲ್ಲಿಯತನಕ ಆಯಾಯ ಜಾತಿಯ ಸಂಘಟನೆ ಅಗತ್ಯ. ಅದರಲ್ಲೂ ಹಿಂದುಳಿದ ವರ್ಗಗಳಲ್ಲಿ ನೂರಾರು ಜಾತಿಗಳಿರುವ ಕಾರಣ ಅವುಗಳಲ್ಲೇ ಸದಾ ಪೈಪೋಟಿಯಿರುತ್ತದೆ. ಸರ್ಕಾರಕ್ಕೆ ಸೂಕ್ತ ಅಂಕಿ ಅಂಶಗಳನ್ನು ರಾಜ್ಯಮಟ್ಟದಲ್ಲಿ ಒದಗಿಸುವ ಹೊಣೆಯನ್ನು ಆಯಾಯ ಸಮಾಜದ ಮುಖಂಡರು ಮಾಡಬೇಕಾಗಿದೆ. ವ್ಯಾಪಕವಾದ ಆಡಳಿತಾತ್ಮಕ ಅನುಭವವಿರುವ ಹೆಚ್.ಸಿ. ನೀರಾವರಿ ಅವರಂತಹ ಮುತ್ಸದ್ದಿಗಳು ನಾಯಕತ್ವದ ಮಂಚೂಣಿಗೆ ಬರಬೇಕು. ಆಗ ನಮ್ಮ ಸಮಾಜಕ್ಕೆ ಹೊಸ ಕ್ಷಿತಿಜ ತೋರುವುದರಲ್ಲಿ ಸಂಶಯವಿಲ್ಲ.

**ಮಾಹಿತಿಸಂಗ್ರಹ : ವಿಶ್ವನಾಥ್**

*




# * ಕೋಲಾರ ಜಿಲ್ಲೆ

## ಐತಿಹಾಸಿಕ ಹಿನ್ನೋಟ

ಮೈಸೂರು ಸಂಸ್ಥಾನದ ಮೊದಲ ಮುಖ್ಯಮಂತ್ರಿ ಕೆ.ಸಿ. ರೆಡ್ಡಿ (ಜನನ 4-5 -1902), ವಿಶ್ವದ ಖ್ಯಾತ ಇಂಜಿನಿಯರ್ ಸರ್ ಎಂ. ವಿಶ್ವೇಶ್ವರಯ್ಯ, ಮಂಕುತಿಮ್ಮನ ಕಗ್ಗದ ಖ್ಯಾತಿಯ ಡಿವಿಜಿ, ಕೈವಾರದ ಮಹಾತ್ಮ ಯೋಗಿನಾರಾಣಪ್ಪ, ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರುಗಳಿಗೆ ಜನ್ಮ ಕೊಟ್ಟ ಸ್ಥಳ ಕೋಲಾರ ಜಿಲ್ಲೆ.

ಕೋಲಾರ ಜಿಲ್ಲೆಯ ಪಶ್ಚಿಮದಲ್ಲಿ ಬೆಂಗಳೂರು ಮತ್ತು ತುಮಕೂರು ಜಿಲ್ಲೆಗಳು, ಪೂರ್ವದಲ್ಲಿ ಆಂಧ್ರ ಪ್ರದೇಶದ ಚಿತ್ತೂರು ಜಿಲ್ಲೆ, ಉತ್ತರದಲ್ಲಿ ಆಂಧ್ರಪ್ರದೇಶದ ಅನಂತಪುರ ಜಿಲ್ಲೆ ಮತ್ತು ದಕ್ಷಿಣದಲ್ಲಿ ತಮಿಳುನಾಡಿನ ಉತ್ತರ ಅರ್ಕಾಟ್ ಮತ್ತು ಧರ್ಮಪುರಿ ಜಿಲ್ಲೆಗಳು ಹಬ್ಬಿಕೊಂಡಿವೆ. ಈ ಜಿಲ್ಲೆ 12°46' ಮತ್ತು 13°58' ಡಿಗ್ರಿಗಳ ಉತ್ತರ ಅಕ್ಷಾಂಶ 77°21' ಮತ್ತು 78°35' ಡಿಗ್ರಿಗಳ ಪೂರ್ವ ರೇಖಾಂಶಗಳ ಮಧ್ಯದಲ್ಲಿ ಇದೆ.

ಕೋಲಾರ ಜಿಲ್ಲೆ ಪ್ರಾಚೀನ, ಮಧ್ಯಕಾಲೀನ ಹಾಗು ಆಧುನಿಕ ಕಾಲದ ಭವ್ಯ ಇತಿಹಾಸ ಪರಂಪರೆಯನ್ನು ಹೊಂದಿದೆ. ರಾಮಾಯಣ ಮಹಾಕಾವ್ಯ ರಚಿಸಿದ ಆದಿಕವಿ ವಾಲ್ಮೀಕಿ ಈ ಜಿಲ್ಲೆಯ 'ಆವನಿ'ಯಲ್ಲಿ ವಾಸಿಸುತ್ತಿದ್ದರೆಂಬ ಐತಿಹ್ಯವಿದೆ. ಆವನಿಗೆ ಅವಂತೀಕ್ಷೇತ್ರವೆಂದು ಹೆಸರುಂಟು. ಅವಂತಿಕ್ಷೇತ್ರ ವಾಲ್ಮೀಕಿಗಳ ಆಶ್ರಮವೆಂದೂ, ಸೀತಾದೇವಿ, ಲವಕುಶರನ್ನು ಪ್ರಸವಿಸಿದ್ದು ಇಲ್ಲೇ ಎಂದೂ ಹೇಳುತ್ತಾರೆ.

ಆಕೆ ತನ್ನ ಮಕ್ಕಳ ಕೊಳೆಬಟ್ಟೆಗಳನ್ನು ಒಗೆದ ಕೊಳವೆಂದು ಅಲ್ಲಿರುವ ಬೆಟ್ಟದ ಮೇಲಿನ ಹೊಂಡಗಳನ್ನು ತೋರಿಸುತ್ತಾರೆ. ಬೆಟ್ಟದ ಮೇಲೆ ಸೀತಾದೇವಿಯ ಗುಡಿ ಇದೆ. ಆ ದೇವಿಯನ್ನು ಸೀತಾಲಕ್ಷ್ಮಿ ಎಂದು ಕೆಲವರೂ ಸೀತಾಗೌರಿ ಎಂದೂ ಕೆಲವರೂ ಕರೆಯುತ್ತಾರೆ. ಆವನಿ ಬೆಟ್ಟದಡಿಯಲ್ಲಿ ರಾಮಲಿಂಗೇಶ್ವರ, ಲಕ್ಷ್ಮಣಲಿಂಗೇಶ್ವರ, ಭರತೇಶ್ವರ, ಶತ್ರುಘ್ನೇಶ್ವರ, ಆಂಜನೇಯೇಶ್ವರ-ಈ ಐದು ಶಿವಲಿಂಗಗಳ ಗುಡಿಗಳು ಆಕರ್ಷಕವಾಗಿವೆ. ಇಲ್ಲಿನ ಮಠವನ್ನು ವಿದ್ಯಾರಣ್ಯರು ಸ್ಥಾಪಿಸಿರಬಹುದೆಂದು ಡಾ. ಡಿವಿಜಿಯವರು ಅಭಿಪ್ರಾಯ ಪಡುತ್ತಾರೆ.

ಕೋಲಾರದ ಪಶ್ಚಿಮಕ್ಕಿರುವ ಶತಶೃಂಗಬೆಟ್ಟ ಪರಶುರಾಮನ ಸ್ಥಳವಾಗಿತ್ತಂತೆ ! ಚಿಂತಾಮಣಿ ತಾಲ್ಲೂಕಿನ ಕೈವಾರವೂ ಮಹಾಭಾರತದ ಬಕಾಸುರನ ರಾಜಧಾನಿಯಾಗಿತ್ತೆಂದು ಸ್ಥಳೀಯರು ಹೇಳುತ್ತಾರೆ. ಶಿಡ್ಲಘಟ್ಟದ ಸಾದಲಿ ಎಂಬ ಊರನ್ನು ಸಹದೇವನು ನಿರ್ಮಿಸಿದನೆಂದು ಹೇಳುತ್ತಾರೆ. ಮುಳಬಾಗಲು ತಾಲ್ಲೂಕಿನ ಕುರುಡುಮಲೆಯಲ್ಲಿ, ತ್ರಿಪುರಾಂತಕನ ಮೇಲೆ ಯುದ್ಧಕ್ಕೆ ಹೊರಡುವದಕ್ಕೆ ಮುಂಚೆ ದೇವತೆಗಳೆಲ್ಲರೂ ಒಂದುಗೂಡಿದ್ದರಂತೆ !

ಕೋಲಾರ ಬಹು ಪ್ರಾಚೀನ ಊರು. 'ಕೋಲಾಹಲಪುರ', 'ಕುವಲಾಲ', 'ಕೋಳಾಲ', 'ಕೋಲಾಲ'-ಇವು ಇದರ ಪ್ರಾಚೀನ ಹೆಸರುಗಳು. ಕಾರ್ತವೀರ್ಯಾರ್ಜುನನು ಹಿಂದೆ ಈ ಪ್ರದೇಶದಲ್ಲಿ ದೊರೆಯಾಗಿದ್ದಾಗ ಒಮ್ಮೆ ಜಮದಗ್ನಿಮಹರ್ಷಿ ಅವನನ್ನು 'ಸುರಭಿ' ಎಂಬ ಗೋವಿನ ಸಹಾಯದಿಂದ ಸತ್ಕರಿಸಿದನು. ಕಾರ್ತವೀರ್ಯ ಆ ಗೋವನ್ನು ತನಗೆ ಕೊಡಬೇಕೆಂದು ಜಮದಗ್ನಿಯನ್ನು ಪೀಡಿಸಿದ. ಜಮದಗ್ನಿ ಗೋವನ್ನು ಕೊಡಲು ನಿರಾಕರಿಸಲು, ಅದನ್ನು ಬಲಾತ್ಕಾರವಾಗಿ ಎಳೆದುಕೊಂಡುಹೋಗಲು ಪ್ರಯತ್ನಿಸಿದನು. ಆಗ ಜಮದಗ್ನಿಯ ಮಗ ಪರಶುರಾಮನಿಂದ ಕಾರ್ತವೀರ್ಯಾರ್ಜುನ ಹತನಾದನು. ಅನಂತರ ಕಾರ್ತವೀರ್ಯಾರ್ಜುನನ ಮಕ್ಕಳಿಂದ ಜಮದಗ್ನಿಯ ಹತ್ಯೆ ನಡೆಯಿತು. ಜಮದಗ್ನಿಯ ಪತ್ನಿ ರೇಣುಕೆ ಪತಿಯ ದೇಹದೊಡನೆ ಚಿತೆಯೇರಿದಳು. ಇದರಿಂದ ಕುಪಿತನಾದ ಪರಶುರಾಮನು ಎಲ್ಲ ಕ್ಷತ್ರಿಯರನ್ನು ನಾಶಮಾಡುವುದಾಗಿ ಪಣ ತೊಟ್ಟು ಕಾರ್ತವೀರ್ಯಾರ್ಜುನನ ಎಲ್ಲ ಮಕ್ಕಳನ್ನು ಯುದ್ಧದಲ್ಲಿ ಕೊಂದು ಹಾಕಿದನು. ಆ ಯುದ್ಧಗಳಿಂದ ಉಂಟಾದ ಕೋಲಾಹಲ ಸುತ್ತಲ ಬೆಟ್ಟಗಳಿಂದ ಮಾರ್ದನಿಯಾಗಿ ಆ ಪ್ರದೇಶಕ್ಕೆ 'ಕೋಲಾಹಲ'ವೆಂಬ ಹೆಸರು ಬಂತಂತೆ! ರೇಣುಕೆಯ ನೆನಪಿಗಾಗಿ ಇಲ್ಲಿನ ಕೋಲಾರಮ್ಮನ ದೇವಾಲಯವನ್ನು ಕಟ್ಟಲಾಯಿತು. ಈ ಕಥೆ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಉಪ್ಪಾರ ಜಗದ್ಗುರು ಬ್ರ. ಲೇಪಾಕ್ಷ ಸ್ವಾಮಿಗಳು ತಮ್ಮ 'ಶ್ರೀ ಉಪ್ಪಾರ ಚರಿತಾಮೃತ'ದಲ್ಲಿ ಹೇಳಿದ ಕಥೆಗೆ ಹೋಲುತ್ತದೆ.

ಇನ್ನೊಂದು ಐತಿಹ್ಯದ ಪ್ರಕಾರ ಈಗ ಕೋಲಾರ ಪಟ್ಟಣವಿರುವ ಜಾಗದಲ್ಲಿ ಕೋಲ ಎಂಬ ಗೊಲ್ಲ ನೇಗಿಲಿನಿಂದ ಭೂಮಿಯನ್ನು ಉಳುತ್ತಿರುವಾಗ ಬಚ್ಚಿಟ್ಟ ಹಣ ದೊರಕಿತೆಂದೂ, ಚೋಳ ದೊರೆ ಉತ್ತಮಚೋಳನು ಆ ಗೊಲ್ಲನನ್ನು ಕಂಚಿಗೆ ಬರುವಂತೆ ಹೇಳಿಕಳುಹಿಸಿದನೆಂದೂ, ಆಗ ರೇಣುಕಾದೇವಿ ಕೋಲಾಹಲಮ್ಮನ ರೂಪದಲ್ಲಿ ಕಾಣಿಸಿಕೊಂಡು ಅವನಿಗೆ ಎಚ್ಚರಿಕೆ

ಕೊಟ್ಟಿದ್ದರಿಂದ, ಚೋಳದೊರೆ ಕೋಲಾರಮ್ಮನ ಹೆಸರಿನಲ್ಲಿ ದೇವಾಲಯವನ್ನೂ ಊರನ್ನೂ ಕಟ್ಟಿಸಿದನಂತೆ! ಹೀಗೆ ಕೋಲನ ನೇಗಿಲು (ಹಲ) ಎಂಬುದರಿಂದ ಕೋಲಾಹಲ (ಕೋಲಾರ) ಹೆಸರು ಬಂದಿರಬೇಕೆಂಬ ಊಹೆಯೂ ಇದೆ.

'ಗುಡಿಬಂಡೆ' ಎಂಬ ಹೆಸರು ಬರಲು ಬಂಡೆಯ ಮೇಲಿರುವ ಅಹೋಬಲ ನರಸಿಂಹಸ್ವಾಮಿ ಗುಡಿಯೇ ಕಾರಣ. ಇದೊಂದು ನೈಸರ್ಗಿಕ ಗುಡಿ.

ಕೋಲಾರಜಿಲ್ಲೆಯ ಬಂಗಾರಪೇಟೆಯ ಹುನಗುಂದ, ಬೂದಿಕೋಟೆ ಮತ್ತು ಸೂಲಿಕುಂಟೆ, ಮಾಲೂರು ತಾಲ್ಲೂಕಿನ ಬನಹಳ್ಳಿ ಮತ್ತು ಶಿಡ್ಲಘಟ್ಟ ತಾಲ್ಲೂಕಿನ ತಲಕಾಯಲು ಬೆಟ್ಟ ಪ್ರದೇಶಗಳಲ್ಲಿ ನವಶಿಲಾಯುಗಕ್ಕೆ ಸಂಬಂಧಪಟ್ಟ ಅವಶೇಷಗಳು ದೊರೆಕಿವೆ. ಮಾಲೂರು ತಾಲ್ಲೂಕಿನ ಕಂದನಹಳ್ಳಿ ಮತ್ತು ಗಂಗಸಂದ್ರಗಳಲ್ಲಿ ಹೊಸ ಶಿಲಾಯುಗದ ಆಯುಧಗಳು ದೊರೆಕಿವೆ.

ಕ್ರಿ.ಶ.ದ ಪ್ರಾರಂಭದಲ್ಲಿ ಕೋಲಾರ ಜಿಲ್ಲೆಯನ್ನು ಬಾಣರು ಆಳುತ್ತಿದ್ದರೆಂದು ಚಿಂತಾಮಣಿ ಹಾಗೂ ಬಂಗಾರಪೇಟೆಗಳಲ್ಲಿ ದೊರಕಿದ ಅವಶೇಷಗಳಿಂದ ತಿಳಿಯಬಹುದು. ಕ್ರಿ.ಶ. 1004ರಲ್ಲಿ ತಲಕಾಡಿನ ಗಂಗರು ಈ ಪ್ರಾಂತ್ಯವನ್ನು ಆಳುತ್ತಿದ್ದರು. ಗಂಗವಾಡಿ 1000 ದಲ್ಲಿ ಕೋಲಾರ ಜಿಲ್ಲೆ ಅಂತರ್ಗತವಾಗಿತ್ತು. ಕ್ರಿ.ಶ. 1117ರಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನನು ಚೋಳರನ್ನು ಕರ್ನಾಟಕದಿಂದ ಓಡಿಸಿದನಂತರ ಈ ಪ್ರಾಂತ್ಯ ಪ್ರಾಮುಖ್ಯತೆ ಪಡೆಯಿತು. ಕ್ರಿ.ಶ. 1254 ರಲ್ಲಿ ಸೋಮೇಶ್ವರನು ನಿಧನನಾದ ಮೇಲೆ ಹೊಯ್ಸಳ ಸಾಮ್ರಾಜ್ಯ ವಿಭಜನೆಯಾಯಿತು. ಆಗ ರಾಮನಾಥ ವರ್ಮನ ಪಾಲಿಗೆ ಕೋಲಾರ ಬಂದಿತು. ಮೂರನೆಯ ಬಲ್ಲಾಳ ಮತ್ತೆ ಒಂದುಗೂಡಿಸಿದನು.

ವಿಜಯನಗರ ಸಾಮ್ರಾಜ್ಯದ ಒಂದನೆಯ ದೇವರಾಯನ ಕಾಲದಲ್ಲಿ ಈ ಪ್ರದೇಶ ಸಾಕಷ್ಟು ಪ್ರಾಮುಖ್ಯತೆ ಪಡೆದಿತ್ತು. ಸುಗದೊರೆ ತಿಮ್ಮೇಗೌಡ ವಿಜಯನಗರದವರಿಂದ ಮಾನ್ಯತೆ ಪಡೆದು ಸಾಮ್ರಾಜ್ಯ ವಿಸ್ತರಿಸಿದನು. ಬಿಜಾಪುರ ಸುಲ್ತಾನರಿಂದ ತೊಂದರೆಗೊಳಗಾದ ಬಣಜಿಗ ಲಿಂಗಾಯಿತರು ತಮ್ಮ ಗುರುಗಳ ನೆನಪಿಗಾಗಿ ಕೋಟೆ ಕಟ್ಟಿಸಿದರು. ಅದೇ 'ಜಂಗಮಕೋಟೆ'. ಕ್ರಿ.ಶ. 1639ರಲ್ಲಿ ಬಿಜಾಪುರ ಸೇನೆ ಈ ಪ್ರದೇಶವನ್ನು ವಶಪಡಿಸಿಕೊಂಡು ಅದನ್ನು ಷಹಜಿಗೆ ಕೊಟ್ಟಿತು. 1680ರಲ್ಲಿ ಮರಾಠರು ಚಿಕ್ಕಬಳ್ಳಾಪುರ ಹಾಗು ನಂದಿಯನ್ನು ವಶಪಡಿಸಿಕೊಂಡರು. ಆವಂತಿಯ ದೊರೆ ಬೈರೇಗೌಡನ ಮಲಮಕ್ಕಳು ರೇಚನಹಳ್ಳಿ, ದೊಡ್ಡಬಳ್ಳಾಪುರ ಹಾಗೂ ಬೆಂಗಳೂರು ಪ್ರಾಂತ್ಯಗಳನ್ನು ಆಳುತ್ತಿದ್ದರು.

ಕ್ರಿ.ಶ. 1720ರಲ್ಲಿ ಹೈದರ್‌ಆಲಿಯ ತಂದೆ ಫತ್ತೇಮಹಮ್ಮದ್, ಶಿರಾ ಸುಬೇದಾರನ ಅಧೀನದಲ್ಲಿ ಇದರ ಫೌಜದಾರನಾಗಿದ್ದ. ಅವನ ಮಗ ಟಿಪ್ಪುವಿಗೂ ಕೋಲಾರಕ್ಕೂ ಭಾವನಾತ್ಮಕ ಸಂಬಂಧವಿತ್ತು. ಟಿಪ್ಪುವಿನನಂತರ ಈ ಪ್ರದೇಶ ಮೈಸೂರು ಸಂಸ್ಥಾನಕ್ಕೆ ಸೇರ್ಪಡೆಯಾಯಿತು.

ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕೋಲಾರ ಜಿಲ್ಲೆ ಅನನ್ಯ ಕಾಣಿಕೆ ನೀಡಿದೆ. ಮಂಡ್ಯದ

ಶಿವಪುರ ಸತ್ಯಾಗ್ರಹದಂತೆ ಗೌರಿಬಿದನೂರಿನ ವಿದುರಾಶ್ವತ್ಥ ಪ್ರಕರಣವೂ ಭಾರತೀಯ ಇತಿಹಾಸದಲ್ಲಿ ತುಂಬ ಮಹತ್ವ ಪಡೆದಿದೆ.

1938ರ ಏಪ್ರಿಲ್ 25ರಂದು ವಿದುರಾಶ್ವತ್ಥದಲ್ಲಿ ನಡೆದ ಘಟನೆ ಸ್ವಾತಂತ್ರ್ಯದ ಕಿಚ್ಚು ಹರಡಲು ಸಹಾಯಕವಾಯಿತು. ಜಾತ್ರೆಯ ಸಂದರ್ಭದಲ್ಲಿ ಸ್ವಾತಂತ್ರ್ಯ ಹೋರಾಟಗಾರರು ರಾಷ್ಟ್ರಧ್ವಜ ಹಾರಿಸಲು ಪ್ರಯತ್ನಿಸಿದಾಗ ಪೊಲೀಸರು ಗೋಲಿಬಾರ್ ಮಾಡಿದರು. ಅನೇಕ ನಿರಪರಾಧಿಗಳು ಮಡಿದರು. ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಇದನ್ನು 'ಮಿನಿ ಜಲಿಯನ್ ವಾಲಾಬಾಗ್' ಎಂದು ವರ್ಣಿಸಲಾಯಿತು. ಈ ಘಟನೆಯ ಅಧ್ಯಯನಕ್ಕೆ ಕೇಂದ್ರ ಕಾಂಗ್ರೆಸ್ ಸಮಿತಿ ಆಚಾರ್ಯ ಕೃಪಲಾನಿ ಹಾಗು ಸರ್ದಾರ್ ವಲ್ಲಭಭಾಯಿ ಪಟೇಲ್ ಅವರುಗಳನ್ನು ಕಳುಹಿಸಿತು. ಮಹಾತ್ಮ ಗಾಂಧೀಜಿ ಕೂಡ ಈ ಘಟನೆಯನ್ನು ಖಂಡಿಸಿದರು. ಈ ಘಟನೆಗೆ ಮುನ್ನ 1936 ಮೇ 31ರಂದು ಮಹಾತ್ಮಾಗಾಂಧೀಜಿ ಕೋಲಾರಜಿಲ್ಲೆಗೆ ಭೇಟಿ ಕೊಟ್ಟು ಜನತೆಗೆ ಮಾರ್ಗದರ್ಶನ ನೀಡಿದ್ದರು.

ಕೋಲಾರಜಿಲ್ಲೆಯ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರೆಂದರೆ ಕೆ. ಪಟ್ಟಾಭಿರಾಮನ್, ಕೆ.ಸಿ. ರೆಡ್ಡಿ, ಹೆಚ್.ಸಿ. ಲಿಂಗಾರೆಡ್ಡಿ, ಟಿ. ರಾಮಾಚಾರ್, ಜಿ. ನಾರಾಯಣಗೌಡ, ಎನ್. ಸಿ. ನಾಗಯ್ಯರೆಡ್ಡಿ, ಬಿ. ವೆಂಕಟರಾಯಪ್ಪ, ಜಿ. ಪಾಪಣ್ಣ, ಕೆ. ವೆಂಕಟರಾಯಪ್ಪ, ಎ. ಮುನಿಯಪ್ಪ, ಎಂ.ವಿ. ಕೃಷ್ಣಪ್ಪ, ಎನ್.ಸಿ. ತಿಮ್ಮಾರೆಡ್ಡಿ, ಜಿ.ವಿ. ವೆಂಕಟಸ್ವಾಮಿ, ಕೆ. ಸಂಪಕ್ಕುಮಾರನ್, ಟಿ.ಕೆ. ಗಂಗಿರೆಡ್ಡಿ, ಎಂ.ಸಿ. ಪೆರಮಾಳ್, ಪಿ. ಪುಷ್ಪಂ, ಬಿ.ಜಿ. ಚಿಕ್ಕಸಿದ್ದಪ್ಪ, ಪಿ. ರಾಮೇಗೌಡ, ಹೆಚ್. ಚನ್ನಯ್ಯ, ಬಸವಯ್ಯ, ಎಂ. ಸುಬ್ಬಯ್ಯ, ಡಿ.ಎಸ್. ಮಲ್ಲಪ್ಪ, ರಾಮಪ್ಪ ನಾಯ್ಡು, ಸಂಪನ್ನಗಿರಿ ರಾಮಯ್ಯ, ಡಿ. ಮಾದಪ್ಪ, ಹೆಬ್ಬಗೆ ನಾಗಪ್ಪ, ಎಂ. ದೊರೆಸ್ವಾಮಿ, ಪಿ. ನಾರಾಯಣ ರೆಡ್ಡಿ ಮೊದಲಾದವರು. ಇದೇ ಜಿಲ್ಲೆಯವರಾದ ಕೆ.ಸಿ. ರೆಡ್ಡಿಯವರು 27-10-1947ರಂದು ಮೈಸೂರು ರಾಜ್ಯದ ಪ್ರಪ್ರಥಮ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು.

ಕೋಲಾರ ಜಿಲ್ಲೆಯಲ್ಲಿ ಕೋಲಾರ, ಬಂಗಾರಪೇಟೆ, ಮಾಲೂರು, ಮುಳಬಾಗಿಲು, ಶ್ರೀನಿವಾಸಪುರ, ಚಿಕ್ಕಬಳ್ಳಾಪುರ, ಗೌರಿಬಿದನೂರು, ಗುಡಿಬಂಡೆ, ಬಾಗೇಪಲ್ಲಿ, ಶಿಡ್ಲಘಟ್ಟ ಮತ್ತು ಚಿಂತಾಮಣಿ ಎಂಬ ಹನ್ನೊಂದು ತಾಲ್ಲೂಕುಗಳು, 53 ಹೋಬಳಿಗಳು ಹಾಗು 3227 ಹಳ್ಳಿಗಳಿವೆ. ಕ್ರಿ.ಶ. 2001ರ ಜನಗಣತಿ ಪ್ರಕಾರ ಕೋಲಾರ ಜಿಲ್ಲೆಯ ಜನಸಂಖ್ಯೆ 25, 23,406. ಅದರಲ್ಲಿ ಪುರುಷರು 12,81,153, ಮಹಿಳೆಯರು 12,42,253. ಜಿಲ್ಲೆಯ ಇಂದಿನ ಸಾಕ್ಷರತೆ ಪ್ರಮಾಣ ಶೇ. 63.14. ಜಿಲ್ಲೆಯ ವಿಸ್ತೀರ್ಣ 82.40 ಚ.ಕಿ.ಮೀ. ಜಿಲ್ಲೆಯಲ್ಲಿ 700 ದೊಡ್ಡ ಕೆರೆಗಳು ಹಾಗು 3,000 ಸಣ್ಣ ಕೆರೆಗಳಿವೆ. ಜಿಲ್ಲೆಯಲ್ಲಿ 70,324 ಹೆ. ಅರಣ್ಯ ಪ್ರದೇಶವಿದೆ. 4,15,689 ಹೆ. ವ್ಯವಸಾಯಯೋಗ್ಯವಾದ ಭೂಮಿಯಿದೆ. ಪಾಲಾರ್ ಹಾಗು ಪಿನಾಕಿನಿ ಜಿಲ್ಲೆಯ ಮುಖ್ಯ ನದಿಗಳು. ಜಿಲ್ಲೆಗೆ ಹನ್ನೊಂದು ವಿಧಾನಸಭಾ ಸದಸ್ಯರು ಇಬ್ಬರು ಲೋಕಸಭಾ

ಸದಸ್ಯರು ಇರುತ್ತಾರೆ. ಎರಡು ಇಂಜಿನಿಯರಿಂಗ್ ಕಾಲೇಜುಗಳು ಆರ್.ಎಲ್. ಜಾಲಪ್ಪ ಅವರ ನೇತೃತ್ವದಲ್ಲಿ ಪ್ರಾರಂಭಗೊಂಡಿವೆ. ಡಿ. ದೇವರಾಜ ಅರಸು ವೈದ್ಯಕೀಯ ಕಾಲೇಜನ್ನು ಆರ್.ಎಲ್. ಜಾಲಪ್ಪನವರೇ ಪ್ರಾರಂಭಿಸಿದ್ದಾರೆ.

ಮೈಕೆಲ್ ಎಫ್. ಲಾವೆಲ್ ಎಂಬಾತ ಕ್ರಿ.ಶ. 1875ರಲ್ಲಿ ಈ ಪ್ರದೇಶದಿಂದ ಚಿನ್ನ ಪಡೆಯುವ ಹಕ್ಕು ಪಡೆದುಕೊಂಡ. 1885ರಲ್ಲಿ ಅದು ಪೂರ್ಣ ಪ್ರಮಾಣದಲ್ಲಿ ಪ್ರಬುದ್ಧಮಾನಕ್ಕೆ ಬಂದಿತು. 1956 ರಲ್ಲಿ ಮೈಸೂರು ಸರ್ಕಾರ ಇದನ್ನು ವಹಿಸಿಕೊಂಡಿತು. 1972ರ ಹೊತ್ತಿಗೆ ಕೆ.ಜಿ.ಎಮ್.ಯು ಸಂಸ್ಥೆಯು "ಭಾರತ್ ಗೋಲ್ಡ್ ಮೈನ್ಸ್ ಪ್ರೈವೇಟ್ ಲಿಮಿಟೆಡ್"ಆಗಿ ಪರಿವರ್ತಿತವಾಯಿತು. ಈಗ ಇದು ಶಾಶ್ವತವಾಗಿ ಮುಚ್ಚುವ ಹಂತದಲ್ಲಿದೆ.

ಗೌರಿಬಿದನೂರಿನಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಯಿದೆ. ಕೆ.ಜಿ.ಎಫ್.ನಲ್ಲಿ 'ಭಾರತ್ ಅರ್ತ್ ಮೂವರ್ಸ್' ಕಾರ್ಖಾನೆಯಿದೆ. ಶಿಡ್ಲಘಟ್ಟ ಹಾಗು ಮಾಲೂರುಗಳಲ್ಲಿ ರೇಷ್ಮೆ ನೇಕಾರಿಕೆಯಿದೆ.

ಕೋಲಾರ ಜಿಲ್ಲೆಯಲ್ಲಿ ರಾಗಿ, ಅವರೆ, ತೊಗರಿ, ಜೋಳ, ದ್ವಿದಳಧಾನ್ಯಗಳು, ಹುರುಳಿ, ರೇಷ್ಮೆ, ಮಾವಿನಹಣ್ಣು, ಗೋವಿನಜೋಳ, ಕಬ್ಬು, ತರಕಾರಿ ಮುಖ್ಯ ಬೆಳೆಗಳು. ಆಲೂಗಡ್ಡೆ, ಮೆಣಸಿನಕಾಯಿ ಹಾಗು ಈರುಳ್ಳಿಗಳನ್ನು ಆಂಧ್ರಪ್ರದೇಶ ಮತ್ತು ಶ್ರೀಲಂಕಾಗಳಿಗೆ ರಫ್ತು ಮಾಡಲಾಗುತ್ತಿದೆ. ಬೆಂಗಳೂರು ಮಹಾನಗರಕ್ಕೆ ಪ್ರತಿನಿತ್ಯ ನಾಲ್ಕು ಲಕ್ಷ ಲೀಟರ್ ಹಾಲು ಸರಬರಾಜು ಮಾಡುವ ಕೋಲಾರ ಹಾಲು ಉತ್ಪಾದನಾ ಕೇಂದ್ರ ರಾಜ್ಯದಲ್ಲೇ ಮೊದಲ ಸ್ಥಾನದಲ್ಲಿದೆ.

ಕೋಲಾರ ಜಿಲ್ಲೆಯಲ್ಲಿ ಬೇವು, ಹುಣಸೆ, ಗಂಧ, ಹೊಂಗೆ, ಕರಿಜಾಲಿ, ಬಿಳಿಜಾಲಿ, ಕಗ್ಗಲಿ, ಬನ್ನಿ, ಗುಜ್ಜಲು, ಬಿಲ್ವಾರ, ದಿಂಡಿಗ, ನೇರಳೆ, ಚೆನ್ನಂಗಿ, ಆಲ, ಮುತ್ತುಗ ಮೊದಲಾದ ಮರಗಳು ಬೆಳೆಯುತ್ತವೆ.

ಕೋಲಾರ ಜಿಲ್ಲೆಯು ಸಾಂಸ್ಕೃತಿಕ ಪರಂಪರೆಯಲ್ಲಿ ತುಂಬ ಮುಂದಾಗಿದೆ. ಸಾಹಿತ್ಯ, ಸಂಗೀತ, ಆಧ್ಯಾತ್ಮ ಸಮಾಜಸೇವೆ, ಕ್ರೀಡೆ, ಜಾನಪದ ಹಾಗು ಆಡಳಿತ ಮುಂತಾದ ಯಾವುದೇ ಕ್ಷೇತ್ರ ತೆಗೆದುಕೊಂಡರೂ ಕೋಲಾರ ಜಿಲ್ಲೆ ಸಮೃದ್ಧವೆಂದು ಧಾರಾಳವಾಗಿ ಹೇಳಬಹುದು.

ಕೈವಾರದ ನಾರಣಪ್ಪ (1730-1840) ಪ್ರಸಿದ್ಧ ಚಿಂತಕರು, ಧಾರ್ಮಿಕ ಪುರುಷರು. ಇವರ ಕೃತಿಗಳೆಂದರೆ ವೇದಾಂತ ಸಾರಾವಳಿ, ನಾರೇಯಣ ಕಲಿಶತಕ, ಭೀಮಲಿಂಗ ಶತಕ, ತಾರಕ ಬ್ರಹ್ಮಾನಂದ ಶತಕ, ಶ್ರೀಕೃಷ್ಣ ಚರಿತಾಮೃತ ಹಾಗು ಕಾಲಜ್ಞಾನ ಇತ್ಯಾದಿಗಳು.

ಮುಳಬಾಗಿಲು ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ಆಚಾರ್ಯ ಸ್ಥಾನ ಪಡೆದಿದೆ. ಮುಳಬಾಗಿಲಿನ ಶ್ರೀಪಾದರಾಯರು ಕನ್ನಡದಲ್ಲಿ ಹರಿದಾಸ ಪರಂಪರೆಯನ್ನು ಪ್ರಾರಂಭಿಸಿದ ಅಗ್ರಗಣ್ಯರು. ಅವರು ಹಾಕಿದ ಪರಂಪರೆಯನ್ನೇ ಶ್ರೀವ್ಯಾಸರಾಯರು ಅನಂತರ ಅವರ ಶಿಷ್ಯರು ಮುಂದುವರಿಸಿದರು.

ಕುಮುದೇಂದುವಿನ 'ಸಿರಿಭೂವಲಯ', ಗಂಗಾದೇವಿಯ 'ನಂದಿ ಮಾಹಾತ್ಮ್ಯಂ', ಗೋವಿಂದಕವಿಯ 'ಪಾರಿಜಾತಾಪಹರಣಂ' ಹಾಗು ನಂದಿತಿಮ್ಮನ 'ವೇದಾಂತಂ ರಾಘವಾಚಾರ್ಯಸ್ವಾಮಿ' ಈ ಜಿಲ್ಲೆಯ ಪ್ರಾಚೀನ ಸಾಹಿತ್ಯ ಕೃತಿಗಳು.

ಪ್ರೊ. ಎಂ.ಪಿ.ಎಲ್. ಶಾಸ್ತ್ರೀ, ಎಂ.ಜಿ. ನಂಜುಂಡಾರಾಧ್ಯ, ವಿದ್ವಾನ್ ನರಹರಿಶಾಸ್ತ್ರೀ, ವಿದ್ವಾನ್ ವಿ. ಲಕ್ಷ್ಮೀಪತಿ ಶಾಸ್ತ್ರಿಗಳು ಹಾಗು ಶತವಧಾನಿ ಆರ್. ಗಣೇಶ್, ಪ್ರೊ. ಎಸ್.ಆರ್. ಮೀರಾ ಈ ಜಿಲ್ಲೆಯ ಸಂಸ್ಕೃತಸಾಹಿತ್ಯದಲ್ಲಿ ಕೃಷಿ ಮಾಡಿದ ಗಣ್ಯರು.

ಆಧುನಿಕ ಯುಗದಲ್ಲಿ 'ಮಂಕುತಿಮ್ಮನ ಕಗ್ಗ'ದ ಕರ್ತೃ ಡಾ॥ ಡಿ.ವಿಜಿ., ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪಂಪ ಪ್ರಶಸ್ತಿ ವಿಜೇತರಾದ ಪ್ರೊ. ಎಲ್. ಬಸವರಾಜು, ಪಟ್ಟಮಹಿಷಿ ಶಾಂತಲಾದೇವಿ ಕೃತಿಗೆ ಮೂರ್ತಿದೇವಿ ಪ್ರಶಸ್ತಿ ಪಡೆದ. ಸಿ.ಕೆ. ನಾಗರಾಜರಾವ್, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಡಾ॥ ಹಂಪ ನಾಗರಾಜಯ್ಯ ಹಾಗೂ ಪ್ರೊ॥ ಎನ್. ಬಸವಾರಾಧ್ಯ, 'ಶಾಂತಲ' ಕಾದಂಬರಿ ರಚನಾಕಾರರಾದ ಕೆ.ವಿ. ಅಯ್ಯರ್, ಆಧುನಿಕ ವಚನಕಾರರಾದ ಜಗದ್ಗುರು ನಿಡುಮಾಮಿಡಿ ಪೀಠದ ಅಧಿಕಾರಿಗಳಾಗಿದ್ದ ಡಾ॥ ಜಚನಿ, ಪತ್ರಿಕೋದ್ಯಮಿ ತಿ.ತಾ. ಶರ್ಮ, ಖ್ಯಾತ ಇತಿಹಾಸಕಾರರಾದ ಪ್ರೊ॥ ಬಾ.ರಾ. ಗೋಪಾಲ್, ನಾಟಕಕಾರ ಕೆ. ಗುಂಡಣ್ಣ, ಕೈವಾರ ರಾಜಾರಾವ್, ಚಿ. ಶ್ರೀನಿವಾಸರಾಜು, ರಘುಸುತ, ಯಶಸ್ವಿ ಧಾರಾವಾಹಿಗಳ ನಿರ್ದೇಶಕರಾದ ಟಿ.ಎನ್. ಸೀತಾರಾಂ, ಲಕ್ಷ್ಮೀಪತಿ ಕೋಲಾರ, ಬರುಡಗಂಟಿ ಶ್ರೀನಿವಾಸಾಚಾರ್ಯ, ಡಾ॥ ವಿ. ಗೋಪಾಲಕೃಷ್ಣ ಮತ್ತು ಡಾ॥ ಆರ್. ಶೇಷಗಿರಿ, ಕಾವ್ಯಕ್ಷೇತ್ರದಲ್ಲಿ ದುಡಿಯುತ್ತಿರುವ ಬಿ.ಆರ್. ಲಕ್ಷ್ಮಣರಾವ್, ಸ. ರಘುನಾಥ್, ಗುಡಿಬಂಡೆ ಪೂರ್ಣಿಮಾ, ಶ್ರೀಮತಿ ತಿರುಮಲೆ ರಾಜಮ್ಮ, ಉತ್ತನೂರು ರಾಜಮ್ಮ, ವಿ. ಶೆಟ್ಟಿ, ರಂಗಾರೆಡ್ಡಿ ಕೋಡಿರಾಂಪುರ, ಬಿ.ಜಿ. ಸತ್ಯಮೂರ್ತಿ ಮೊದಲಾದವರನ್ನು ನೆನಪಿಸಿಕೊಳ್ಳಬೇಕು.

ಕಾದಂಬರಿಕಾರರಾದ ಸರಿತ ಜ್ಞಾನಾನಂದ, ಹೆಚ್.ಜಿ. ರಾಧಾದೇವಿ, ಸಾಯಿಸುತೆ, ರಾಜಾ ಚೆಂಡೂರು, ಕೆ.ವಿ. ರಾಜೇಶ್ವರಿ ಮುಂತಾದವರನ್ನು ಉಲ್ಲೇಖಿಸಬಹುದು.

ಹಾಸ್ಯ ಸಾಹಿತಿಯಾದ ಎಂ.ಎಸ್. ನರಸಿಂಹಮೂರ್ತಿ, ಪತ್ರಕರ್ತ ಸಿ.ಎಸ್. ದ್ವಾರಕಾನಾಥ್, ಹಿರಿಯ ಪತ್ರಕರ್ತ ನಾರಾಯಣಸ್ವಾಮಿ, ಕೋಲಾರವಾಣಿ ಸಂಪಾದಕರಾದ ಬಿ.ವಿ. ನರಸಿಂಹಮೂರ್ತಿ, 'ವೀಕ್' ಪತ್ರಿಕೆಯ ಸಂಪಾದಕರಾದ ಸಚ್ಚಿದಾನಂದಮೂರ್ತಿ, ಕನ್ನಡಪ್ರಭ ವರದಿಗಾರರಾದ ಟಿ.ಜಿ. ಅಶ್ವತ್ಥನಾರಾಯಣ, ಆಕಾಶವಾಣಿ ಸುದ್ದಿ ಸಂಪಾದಕರಾದ ಸೂರ್ಯನಾರಾಯಣ, ಪತ್ರಿಕಾ ಅಕಾಡೆಮಿಯ ಅಧ್ಯಕ್ಷರಾದ ಎನ್. ಅರ್ಜುನ್‌ದೇವ ಹಾಗು ಜಾನಪದ ಸಾಹಿತಿ ಕೋಟಗಾನಹಳ್ಳಿ ರಾಮಯ್ಯ ಮುಂತಾದವರು ಈ ಜಿಲ್ಲೆಗೆ ಸೇರಿದವರಾಗಿದ್ದಾರೆ.

ಅಂತರರಾಷ್ಟ್ರೀಯ ಖ್ಯಾತ ಯೋಗಪಟು ಪದ್ಮವಿಭೂಷಣ ಪ್ರಶಸ್ತಿ ವಿಜೇತರಾದ ಬಿ.ಎಸ್.ಕೆ. ಅಯ್ಯಂಗಾರ್ ಈ ಜಿಲ್ಲೆಯ ಬೆಳ್ಳೂರಿನವರು. ಖ್ಯಾತ ಶಿಕ್ಷಣತಜ್ಞರಾದ ಹೆಚ್. ನರಸಿಂಹಯ್ಯ ಅವರು ಗೌರಿಬಿದನೂರಿನ ಹೊಸೂರಿನವರು.

ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಅಪೂರ್ವ ಸಾಧನೆ ಮಾಡಿರುವ ಎನ್.ಆರ್. ನಾರಾಯಣಮೂರ್ತಿ ಶಿಡ್ಲಘಟ್ಟದವರು. ಖ್ಯಾತ ವಿಜ್ಞಾನಿ ಡಾ|| ಸಿ.ಎನ್.ಆರ್. ರಾವ್ ಚಿಂತಾಮಣಿಯವರು.

ಸುಪ್ರೀಂ ಕೋರ್ಟ್‌ನ ನ್ಯಾಯಾಧೀಶರಾಗಿರುವ ನ್ಯಾಯಮೂರ್ತಿ ರಾಜೇಂದ್ರ ಬಾಬು ಹಾಗೂ ಮಾಜಿ ಸುಪ್ರೀಂ ಕೋರ್ಟ್ ನ್ಯಾಯಾಧೀಶರು ಹಾಗೂ ಹಾಲಿ ಲೋಕಾಯುಕ್ತರಾದ ನ್ಯಾಯಮೂರ್ತಿ ಎನ್. ವೆಂಕಟಾಚಲ ಅವರು ಈ ಜಿಲ್ಲೆಯವರು.

ಕೃಷಿ ವಿಜ್ಞಾನಿಗಳಾದ ಚಿಂತಾಮಣಿಯ ಡಾ|| ಸಿ.ಆರ್. ದ್ವಾರಕೀನಾಥ್ ಹಾಗು ಚಿಕ್ಕಬಳ್ಳಾಪುರದ ಕೆ.ವಿ. ದೇವರಾಜ್ ಅವರು ಕೃಷಿ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದರು. ಅವರು ಕೃಷಿ ವಿಜ್ಞಾನದಲ್ಲಿ ಅಂತರರಾಷ್ಟ್ರೀಯ ಖ್ಯಾತಿ ಗಳಿಸಿದ್ದಾರೆ.

ಕೊಳಗೇರಿ ಅಭಿವೃದ್ಧಿ ಮ್ಯಾಗ್‌ಸೆಸೆ ಪ್ರಶಸ್ತಿ ಪಡೆದ ಜೋಕಿನ್ ಅರ್ಬುದಾ, ಪ್ರಖ್ಯಾತ ತೆಲುಗುಕವಿ ವೇದಾಂತಂ ವೆಂಕಟರೆಡ್ಡಿ, ದಾಖಲೆ ಓಟಗಾರ ಅಥ್ಲೆಟಿಕ್ ಪಟು ಕೆನೆತ್ ಪೊವೆಲ್, ಮಹಾದಾನಿ ಹಾಜಿ ಮುಸ್ತಫಾಫಾಟ್, ಶಿಕ್ಷಣಸಂಸ್ಥೆಗಳ ಸ್ಥಾಪಕರಾದ ಸಿ.ವಿ. ವೆಂಕಟರಾಯಪ್ಪ, ಸೇವಾ ಮನೋಭಾವದ ಹಿಂದೂಸೇವಾಪ್ರತಿಷ್ಠಾನದ ಜನಕರಾದ ಅಜಿತ್‌ಕುಮಾರ್, ರಾಜ್ಯದ ಪ್ರಸಿದ್ಧ ಗಮಕಿ ಗುಡಿಬಂಡೆ ರಾಮಾಚಾರ್, ನಾದಸ್ವರ ವಾದಕ ಮುನಿಶಾಮಪ್ಪ, ಕೇಂದ್ರ ಲೋಕಸೇವಾ ಆಯೋಗದ ಸದಸ್ಯರಾಗಿದ್ದ ಡಾ|| ಸೆಲ್ವಿದಾಸ್, ಜಯದೇವ ಹೃದ್ರೋಗ ಆಸ್ಪತ್ರೆಯ ನಿರ್ದೇಶಕರಾದ ಡಾ|| ಪ್ರಭುದೇವ, ಸಾರ್ವಜನಿಕ ಸಂಪರ್ಕ ಕ್ಷೇತ್ರದಲ್ಲಿ ಮಹತ್ವದ ಹೆಸರು ಪಡೆದ ಎ.ಪಿ. ಚೌಡಪ್ಪ, ಗಮಕ ಪರಿಷತ್ತಿನ ಜಿ.ವಿ. ಶ್ರೀನಾಥಶಾಸ್ತ್ರೀ, ಉದ್ಯಮಿ ಎಸ್. ಷಡಕ್ಷರಿ, ವೈಚಾರಿಕ ಪ್ರಜ್ಞೆಯುಳ್ಳ ಜಾತ್ಯತೀತ ತತ್ವದ ಪ್ರತಿಪಾದಕರಾದ ನಿಡುಮಾಮಿಡಿ ಸಂಸ್ಥಾನದ ಚನ್ನಮಲ್ಲದೇಶೀಕೇಂದ್ರ ಸ್ವಾಮೀಜಿ ಮೊದಲಾದವರು ಈ ಜಿಲ್ಲೆಯವರು.

ಭಾರತದಲ್ಲೇ ಪ್ರಥಮ ಗ್ರಾಮೀಣ ಅಂಚೆಚೀಟಿ ಸಂಗ್ರಾಹಕರ ಸಂಘ 1978ರಲ್ಲಿ ವೇಲೂರಿನಲ್ಲಿ ಪ್ರಾರಂಭವಾಯಿತು. ತಮಟೆ ವಾದಕ ತುಡುಮ ಮುನಿವೆಂಕಟಪ್ಪ ಅವರಿಗೆ 'ರಾಜ್ಯೋತ್ಸವ' ಪ್ರಶಸ್ತಿ ದೊರಕಿರುವುದಲ್ಲದೆ ತಮಟೆ ವಾದ್ಯಕ್ಕಾಗಿ ಅವರು ದೇಶ ವಿದೇಶಗಳಲ್ಲಿ ಪ್ರಸಿದ್ಧರಾಗಿದ್ದಾರೆ. ಕರಗ ಶಕ್ತಿ ಉತ್ಸವ ಬೆಂಗಳೂರಿನಲ್ಲಿ ಹೇಗೋ ಹಾಗೆ ಹಾಗೂ ಕೋಲಾರದಲ್ಲಿಯೂ ಒಂದು ಧಾರ್ಮಿಕ ಉತ್ಸವ. ನೇಮನಿಷ್ಠೆಗಳಿಂದ ಈ ಉತ್ಸವ ವಹ್ನಿಕುಲಸ್ಥರ ನೇತೃತ್ವದಲ್ಲಿ ಜರುಗುತ್ತದೆ. ಕರ್ನಾಟಕದ ಏಕೈಕ ಭೂಕಂಪನಮಾಪನ ಕೇಂದ್ರವು ಕೋಲಾರ ಜಿಲ್ಲೆಯ ಗೌರಿಬಿದನೂರಿನಲ್ಲಿದೆ.

ಕೋಲಾರ ಜಿಲ್ಲೆ ಅನೇಕ ಹಿರಿಯ ಅಧಿಕಾರಿಗಳನ್ನು ರಾಜ್ಯಕ್ಕೆ ನೀಡಿದೆ. ಜಿ.ವಿ.ಕೆ. ರಾವ್, ಕೆ. ನಾರಾಯಣಸ್ವಾಮಿ, ದಿವಂಗತ ಸಿ. ಮುನಿಸ್ವಾಮಿ, ಎಂ.ಆರ್. ಶ್ರೀನಿವಾಸಮೂರ್ತಿ, ಪಿ.ಎನ್. ಶ್ರೀನಿವಾಸಾಚಾರಿ, ಸಿ.ಎಸ್. ಕೇದಾರ್, ಡಿ.ಎಸ್. ಅಶ್ವತ್ಥ್, ಜಿ.ಹೆಚ್. ಆದಿರಾಜಯ್ಯ, ಎನ್.ಸಿ. ಮುನಿಯಪ್ಪ, ಕೆ.ಎಂ. ನಾರಾಯಣಸ್ವಾಮಿ-ಹೀಗೆ ಈ ಪಟ್ಟಿಯನ್ನು ಬೆಳೆಸುತ್ತಾ ಹೋಗಬಹುದು.

ಕೋಲಾರಜಿಲ್ಲೆ ರಾಜ್ಯಕ್ಕೆ ಅನೇಕ ಹಿರಿಯ ನಾಯಕರನ್ನು ಕೊಟ್ಟ ಕೀರ್ತಿ ಪಡೆದಿದೆ. ಮೈಸೂರು ಪ್ರಥಮ ಮುಖ್ಯಮಂತ್ರಿ ಕೆ.ಸಿ. ರೆಡ್ಡಿ, ಕೆ. ಪಟ್ಟಾಭಿರಾಮನ್, ಪಿ.ಎಂ. ಸ್ವಾಮಿದೊರೈ, ಕೆ.ಎಸ್. ವಾಸನ್, ಎಂ.ಸಿ. ಆಂಜನೇಯರೆಡ್ಡಿ, ಬಿ.ವಿ. ನಾರಾಯಣರೆಡ್ಡಿ, ಹೆಚ್.ಸಿ. ಲಿಂಗಾರೆಡ್ಡಿ, ಜಿ. ಪಾಪಣ್ಣ, ಎ. ಮುನಿಯಪ್ಪ, ಎನ್.ಸಿ. ನಾಗಯ್ಯರೆಡ್ಡಿ, ಜಿ. ನಾರಾಯಣಗೌಡ, ಟಿ. ಚನ್ನಯ್ಯ, ಎಂ.ವಿ. ಕೃಷ್ಣಪ್ಪ, ದೊಡ್ಡ ತಿಮ್ಮಯ್ಯ, ಚೌಡಾರೆಡ್ಡಿ, ಆರ್.ಎನ್. ಲಕ್ಷ್ಮೀಪತಿ, ಸಿ.ಎಂ. ಆರ್ಮುಗಂ, ಎಂ.ಸಿ. ಪೆರುಮಾಳ್, ಕೆ.ಎಂ. ಕೃಷ್ಣಾರೆಡ್ಡಿ, ಸಿ. ಬೈರೇಗೌಡ, ಕೆ.ಎಂ. ಮುನಿಯಪ್ಪ, ರೇಣುಕಾ ರಾಜೇಂದ್ರನ್, ಮುಖ್ಯಮಂತ್ರಿ ಚಂದ್ರು, ಜಿ. ವೆಂಕಟಪ್ಪ, ಬಿ.ಎನ್. ಪಾಪಯ್ಯ, ಎಸ್. ಮುನಿರಾಜು, ಪಿ.ಎನ್. ರೆಡ್ಡಿ, ವಿ. ಕೃಷ್ಣರಾವ್, ಪಿ. ಮುನಿಯಪ್ಪ, ಕೆ.ಎ. ನಿಸಾರ್ ಅಹಮ್ಮದ್, ಜಿ.ವೈ. ಕೃಷ್ಣನ್, ಆರ್.ಎಲ್. ಜಾಲಪ್ಪ, ಕೆ.ಹೆಚ್. ಮುನಿಯಪ್ಪ, ಎಂ.ವಿ. ವೆಂಕಟಪ್ಪ, ಡಾ॥ ವೆಂಕಟೇಶ್, ರಮೇಶ್‌ಕುಮಾರ್, ಹೆಚ್.ವಿ. ದ್ಯಾವರಪ್ಪ, ವಿ. ಮುನಿಯಪ್ಪ, ಶ್ರೀರಾಮರೆಡ್ಡಿ, ಆರ್. ವೆಂಕಟರಾಮಯ್ಯ, ಪಿ.ಎಸ್. ಪೆನ್ನಾಲಾಲ್, ಎಂ. ಭಕ್ತವತ್ಸಲಂ, ಎ. ನಾಗರಾಜು, ವಿ.ಆರ್. ಸುದರ್ಶನ್, ರಾಜೇಂದ್ರನ್, ಜ್ಯೋತಿರೆಡ್ಡಿ, ಶಿವಶಂಕರರೆಡ್ಡಿ, ಜಿ.ಕೆ. ವೆಂಕಟಶಿವರೆಡ್ಡಿ, ಶ್ರೀನಿವಾಸಗೌಡ, ಎನ್. ಸಂಪಂಗಿ ಮೊದಲಾದವರನ್ನು ನೆನಪಿಸಿಕೊಳ್ಳಬಹುದು.

ಸ್ಥಳೀಯ ಸಂಸ್ಥೆಗಳಲ್ಲಿ ಅಧಿಕಾರ ಪಡೆದ ಬಿ.ಎಂ. ಕೃಷ್ಣಪ್ಪ, ಜಿ. ಮಂಗಮ್ಮ ಮುನಿಸ್ವಾಮಿ, ಮುನಿನಾರಾಯಣಪ್ಪ, ದುರ್ಗಮ್ಮ ಶ್ರೀನಿವಾಸಗೌಡ ಹಾಗು ಪ್ರಸ್ತುತ ಜಿಲ್ಲಾಪಂಚಾಯತ್ ಅಧ್ಯಕ್ಷರಾದ ಅಶೋಕ ಕೃಷ್ಣಪ್ಪ ಅವರುಗಳು ಉಲ್ಲೇಖಾರ್ಹರಾದ ವ್ಯಕ್ತಿಗಳು.

## ಉಪ್ಪಾರ ಸಮಾಜ

ಕೋಲಾರ ಜಿಲ್ಲೆಯಲ್ಲಿ ಎಲ್ಲ ಸಮುದಾಯದವರೂ ಇದ್ದಾರೆ. ವಿಶೇಷವಾಗಿ ಹಿಂದುಳಿದ ಕೋಲಾರ ಜಿಲ್ಲೆ ಆರ್ಥಿಕವಾಗಿ ತುಂಬ ಶೋಚನೀಯ ಸ್ಥಿತಿಯಲ್ಲಿದೆ. ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ವಿಶ್ವಬ್ಯಾಂಕ್ ನೆರವಿನಿಂದ ಈ ಜಿಲ್ಲೆಯಲ್ಲಿ ಅನುಷ್ಠಾನಗೊಂಡಿದ್ದುದು ಸರಿಯಷ್ಟೆ. ಆಗ ನಡೆಸಿದ ಸಮೀಕ್ಷೆ ಪ್ರಕಾರ ಶಾಲೆ ಬಿಟ್ಟ ಮಕ್ಕಳ ಸಂಖ್ಯೆ ಇತರ ಜಿಲ್ಲೆಗಿಂತ ಹೆಚ್ಚಾಗಿತ್ತು. ಅನಂತರ ಹಳ್ಳಿಗಳಿಗೆ ಹೋಗಿ ವಾಸ್ತವಿಕ ಸ್ಥಿತಿ ಅಧ್ಯಯನ ಮಾಡಿದಾಗ ಪ್ರತಿಯೊಂದು ಕುಟುಂಬದಲ್ಲಿ ಬೆಳೆಯುವ ಮಗು ಎಮ್ಮೆ ಮೇಯಿಸಲು ಹೋಗಿರುವ ಸಂಗತಿ ಅಧ್ಯಯನ

ತಂಡಕ್ಕೆ ಮನವರಿಕೆಯಾಗಿದೆ. ಹಾಲು ಉತ್ಪಾದನೆಯಲ್ಲಿ ಮೊದಲ ಸ್ಥಾನ ಪಡೆದ ಕೋಲಾರ ಕಡ್ಡಾಯ ಪ್ರಾಥಮಿಕ ಶಿಕ್ಷಣ ಯೋಜನೆಯಲ್ಲಿ ಅತ್ಯಂತ ಹಿಂದುಳಿದಿದೆ.

ಕೋಲಾರ ಜಿಲ್ಲೆಯಲ್ಲಿ 59,750 ಉಪ್ಪಾರ ಜನಾಂಗದವರಿದ್ದಾರೆ. ಸುಮಾರು 9,895ಕುಟುಂಬಗಳನ್ನು ಈ ಜಿಲ್ಲೆಯಲ್ಲಿ ಗುರುತಿಸಲಾಗಿದೆ. ಕೋಲಾರ ಜಿಲ್ಲೆಯ ಉಪ್ಪಾರರು ಹೆಚ್ಚಿನವರು ಬೆಂಗಳೂರುಜಿಲ್ಲೆಗೆ ವಲಸೆ ಬಂದಿದ್ದಾರೆ. ಖೇದದ ವಿಷಯವೆಂದರೆ ಹಲವು ಉಪ್ಪಾರರು ತಾವು ಬಲಿಜರೆಂದು ಹೇಳಿಕೊಂಡು ಅವರೊಡನೆ ಸಂಬಂಧ ಬೆಳೆಸಿರುವ ಸನ್ನಿವೇಶಗಳು ಅನೇಕ. ಶಾಲಾ ಸರ್ಟಿಫಿಕೇಟುಗಳಲ್ಲಿ ಕೂಡ ಬಲಜಿಗರೆಂದು ಬರೆಸಲಾಗಿದೆ ಕೋಲಾರದಲ್ಲಿ ಬಲಿಜ ಜನಾಂಗ ಸಾಮಾಜಿಕ ಹಾಗು ರಾಜಕೀಯವಾಗಿ ಪ್ರಬಲವಾದ ಜನಾಂಗ. ಜಾತಿ ಶ್ರೇಣಿಯಲ್ಲಿ ಕೊನೆಯ ಹಂತದಲ್ಲಿರುವವರು ಮಾನಸಿಕವಾಗಿ ಮೇಲ್ವರ್ಗದವರ ಜೊತೆ ಸಮೀಕರಿಸಿಕೊಳ್ಳುವುದನ್ನು ಗಮನಿಸಬಹುದು. ಆದರೆ ಇಲ್ಲಿ ಜನಾಂಗವೊಂದು ಉದ್ದೇಶಪೂರ್ವಕವಾಗಿ ಹೀಗೆ ಬದಲಾವಣೆಯಾಗಿರುವುದು ಆಶ್ಚರ್ಯಕರ ವಿಷಯ.

ಚಿಂತಾಮಣಿ, ಬಂಗಾರಪೇಟೆ, ಚಿಕ್ಕಬಳ್ಳಾಪುರ, ಕೋಲಾರ, ಕೆ.ಜಿ.ಎಫ್., ಶಿಡ್ಲಘಟ್ಟ, ಗೌರಿಬಿದನೂರು, ಬಾಗೇಪಲ್ಲಿ ಮುಂತಾದ ತಾಲ್ಲೂಕುಗಳಲ್ಲಿ ಉಪ್ಪಾರರು ಇದ್ದಾರೆ ಎಂದು ತಿಳಿದುಬಂದಿದೆ.

ಶಿಡ್ಲಘಟ್ಟದಲ್ಲಿರುವ ಪ್ರಮುಖ ಉಪ್ಪಾರ ಕುಟಂಬಗಳೆಂದರೆ ನರಸಪ್ಪ, ಆರ್. ನಾರಾಯಣ, ಮುನಿಸ್ವಾಮಿ, ಬಿ. ನಾರಾಯಣಪ್ಪ, ರಾಮಚಂದ್ರಪ್ಪ, ಕಿಟ್ಟಪ್ಪ, ಮುನಿವೆಂಕಟಸ್ವಾಮಿ, ಮುನಿಶಾಮಪ್ಪ, ಸಿ. ನಾರಾಯಣಪ್ಪ, ದುಗ್ಗಪ್ಪ, ರಾಮಚಂದ್ರ, ವೆಂಕಟೇಶ್, ಎ. ನಾರಾಯಣಪ್ಪ, ವೆಂಕಟೇಶಪ್ಪ, ಚಿಕ್ಕನಾರಾಯಣಪ್ಪ, ಸಿ. ವೆಂಕಟರಮಣಪ್ಪ, ತಿಮ್ಮರಾಜು, ಪಿ. ಪಾಪಯ್ಯ ಮುಂತಾದವರು.

ಕೋಲಾರದಲ್ಲಿರುವ ಪ್ರಮುಖ ಉಪ್ಪಾರ ಕುಟುಂಬಗಳೆಂದರೆ ಗುಡ್ಡಣ್ಣ, ಮುನಿಯಪ್ಪ, ಮುನಿಸ್ವಾಮಿ, ಕೃಷ್ಣ, ರಾಮಚಂದ್ರಪ್ಪ, ವೆಂಕಟಮ್ಮ, ಮೂರ್ತಿ, ವಾಸು, ಬೇಬಿ, ಪಿಳ್ಳೆ, ಕೆ.ಎನ್. ಮುನಿಕೃಷ್ಣಮೂರ್ತಿ, ಎನ್. ಶ್ರೀನಿವಾಸ್, ರುಕ್ಕಮ್ಮ, ಸಿ. ನಾರಾಯಣಪ್ಪ, ಪಾಪಣ್ಣ, ಬಿ.ಎನ್. ನಾರಾಯಣಪ್ಪ, ನಾಗರಾಜ, ಗಾದಿನಾರಾಯಣಪ್ಪ, ಶ್ರೀನಿವಾಸ, ರಾಮಕೃಷ್ಣ, ಜಯರಾಂ, ಮುನಿಪಾಪಯ್ಯ, ಚಿಕ್ಕಪ್ಪಯ್ಯ, ಬಿ. ಮುನಿವೆಂಕಟಸ್ವಾಮಿ, ರಾಜಣ್ಣ, ಪ್ರಸಾದ್, ಶ್ರೀನಿವಾಸ, ಮುನಿಸ್ವಾಮಿ ಮುಂತಾದವರು.

ಗೌರಿಬಿದನೂರಿನ ಮೇಸ್ತ್ರಿ ಮುದ್ದಣ್ಣ, ಕೆ. ಗಂಗಪ್ಪ, ಬಾದಿಮರಳೂರಿನ ಎನ್. ನರಸಿಂಹಯ್ಯ, ಸಾಗಾನಹಳ್ಳಿಯ ಅಶ್ವತ್ಥನಾರಾಯಣಪ್ಪ, ದೇವಗಾನಹಳ್ಳಿಯ ಬಾಬಣ್ಣ, ಸಾದಾರಹಳ್ಳಿಯ ಅಂಜನಪ್ಪ, ಪೆದ್ದನಹಳ್ಳಿಯ ಸಂಜೀವಪ್ಪ, ಗಂಗಸಂದ್ರದ ಅಂಜಿನಪ್ಪ, ಉಡಮಲ್ಲೋಡದ ಸಿದ್ದಪ್ಪ ಮುಂತಾದವರು ಉಪ್ಪಾರ ಸಮಾಜದ ತಾಲ್ಲೂಕಿನ ಪ್ರಮುಖರು ಹಾಗು ಹಿತಚಿಂತಕರು.

ಗೌರಿಬಿದನೂರು ತಾಲ್ಲೂಕಿನ ಗೌರಿಬಿದನೂರು ಟೌನ್, ಕೆರೆಕಲ್ಲಳ್ಳಿ, ಬಾದಿ ಮರಳೂರು, ದೇವಗಾನಹಳ್ಳಿ, ಕೋನಾಪುರ, ಮೇಳ್ಯ, ಜನರೆಡ್ಡಿಹಳ್ಳಿ, ಎಂ. ಗೊಲ್ಲಳ್ಳಿ, ಸಾದರ್ಲಹಳ್ಳಿ, ಸಾಗಾನಹಳ್ಳಿ, ಗಂಗಸಂದ್ರ, ಚಿಗಟಗೇರಿ, ಸಕ್ಕರೆಗೊಲ್ಲಳ್ಳಿ, ತಿಮ್ಮಘಟ್ಟಿಹಳ್ಳಿ, ಕುರುಗೋಡು ತಿಮ್ಮನಹಳ್ಳಿ, ತರಿಹಾಳು, ಅಂದವಾಡಿ, ಭೀಮನಳ್ಳಿ, ಬಳಗೇರಿ, ಜಾಲಹಳ್ಳಿ (ಇಡಗೂರು), ಜಾಲಹಳ್ಳಿ (ಹಂಪಸಂದ್ರ), ದೊಡ್ಡಕುರುಗೂಡು, ಚಿಕ್ಕಕುರುಗೂಡು, ಹಾಲಗರ್ಾಳ್ಳಿ, ಗುರುಪನಳ್ಳಿ, ಹೊಸೂರು, ಕಾದಲವೇಣಿ, ವೃಚಕೂರಹಳ್ಳಿ, ಗೆದರೆ ಮೊದಲಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 1,500 ಉಪ್ಪಾರ ಕುಟುಂಬಗಳಿವೆ.

ಬಾಗೇಪಲ್ಲಿತಾಲ್ಲೂಕಿನಲ್ಲಿ 500 ಉಪ್ಪಾರ ಕುಟುಂಬಗಳಿವೆ. ಈ ತಾಲ್ಲೂಕಿನ ಕೆಲವು ಹಳ್ಳಿಗಳಲ್ಲಿರುವ ಉಪ್ಪಾರರನ್ನು 'ಉಪ್ಪಾರ ಬಲಿಜ' ಎಂದು ಗುರುತಿಸಲಾಗುತ್ತದೆ.

ಗೌರಿಬಿದನೂರು ತಾಲ್ಲೂಕಿನಲ್ಲಿ ಶ್ರೀಮತಿ ಪಾರ್ವತಮ್ಮ, ಎ. ಕದರಪ್ಪ ಮಾಜಿ ಪಂಚಾಯತ್ ಸದಸ್ಯರು, ಅಂಜನಪ್ಪ ಅವರು ಸಾದರ್ಲಹಳ್ಳಿಯ ಮಾಜಿ ಅಧ್ಯಕ್ಷರು.

ಬಂಗಾರಪೇಟೆಯಲ್ಲಿರುವ ಉಪ್ಪಾರ ಕುಟುಂಬಗಳೆಂದರೆ ಎಸ್. ಸೀನಪ್ಪ ಹಾಗು ಇತರರು.

ಮರಗೆಲಸ, ಹಾಲು ಮಾರಾಟ, ಕೃಷಿ ಕಾರ್ಮಿಕ, ಸುಣ್ಣದ ವ್ಯಾಪಾರ, ಗಾರೆಕೆಲಸ, ತರಕಾರಿ ವ್ಯಾಪಾರ, ರೇಷ್ಮೆ ಬೇಸಾಯ ಇವರ ಪ್ರಮುಖ ಕಾಯಕವಾಗಿರುತ್ತದೆ.

ಆರ್ಥಿಕವಾಗಿ ಉಪ್ಪಾರರು ಅತ್ಯಂತ ದುರ್ಬಲರು. ಕೋಲಾರ ನಗರದಲ್ಲಿ 12 ಉಪ್ಪಾರ ಕುಟುಂಬಗಳು ಸಣ್ಣ ಪುಟ್ಟ ವ್ಯಾಪಾರ ಮಾಡಿಕೊಂಡು ಜೀವನ ನಿರ್ವಹಣೆ ಮಾಡುತ್ತಿವೆ. ಈ ಜನಾಂಗಕ್ಕೆ ಸೇರಿದ ಒಂದು ಆಟೋಮೊಬೈಲ್ ಅಂಗಡಿಯಿದೆ. ದೊಡ್ಡ ಪ್ರಮಾಣದಲ್ಲಿ ಮರಗೆಲಸ ಮಾಡುವ ಅಂಗಡಿ ಇದೆ. ರೇಡಿಯೋ ಅಂಗಡಿ ಇಟ್ಟುಕೊಂಡಿರುವ ಕುಟುಂಬಗಳು ಇವೆ.

ಗಾರೆಕೆಲಸದಲ್ಲಿ ಉಪ್ಪಾರ ಜನಾಂಗ ಹೆಚ್ಚಾಗಿ ತಮ್ಮನ್ನು ತೊಡಗಿಸಿಕೊಂಡಿದೆ. ಗ್ರಾಮೀಣ ಪ್ರದೇಶದಲ್ಲಿ ಜಮೀನುರಹಿತ ಉಪ್ಪಾರರು ಹೆಚ್ಚಾಗಿದ್ದಾರೆ. ಬಹುಮಟ್ಟಿಗೆ ಅವರು ಕೂಲಿಕಾರ್ಮಿಕರೆಂದೇ ಹೇಳಬೇಕು. ದನ, ಎಮ್ಮೆ ಸಾಕಿ ಹಾಲನ್ನು ಡೈರಿಗೆ ತುಂಬಿಸುವ ಕುಟುಂಬಗಳನ್ನು ಕಾಣಬಹುದು. ಮರಗೆಲಸದಲ್ಲು ಜನಾಂಗ ತಮ್ಮನ್ನು ತೊಡಗಿಸಿಕೊಂಡಿದೆ.

ಮೇಲುಸಕ್ಕರೆ, ಉಪ್ಪಾರ ಬಲಿಜ ಎಂಬ ಹೆಸರುಗಳಿಂದ ಇವರನ್ನು ಕರೆಯಲಾಗುತ್ತದೆ. ಸಾಮಾನ್ಯವಾಗಿ ಕನ್ನಡವನ್ನೇ ಹೆಚ್ಚಾಗಿ ಬಳಸುತ್ತಾರೆ. ತೆಲುಗು ಭಾಷೆಯಲ್ಲೂ ಇವರಿಗೆ ಆಸಕ್ತಿಯಿದೆ.

ಈ ಜನಾಂಗದಲ್ಲಿ ಸರಾಸರಿ ಶೇ. 40ರಷ್ಟು ಸಾಕ್ಷರಸ್ಥರನ್ನು ಗುರುತಿಸಬಹುದು. ಮಹಿಳೆಯರಲ್ಲಿ ಶೇ. 25ರಷ್ಟು ಅಕ್ಷರಸ್ಥರಿದ್ದಾರೆ.

ಕೋಲಾರ ಜಿಲ್ಲೆಯ ಹಾಲಿ ಏಕೈಕ ಗ್ರಾಮಪಂಚಾಯತ್ ಸದಸ್ಯರೆಂದರೆ ರಾಮಮೂರ್ತಿ. ಕ್ರೀಡೆ, ವಯಸ್ಕರ ಶಿಕ್ಷಣ ಹಾಗು ಸಮಾಜಸೇವೆಯಲ್ಲಿ ಎಸ್. ಸೀನಪ್ಪ ಅವರು ಆಸಕ್ತಿ ಹೊಂದಿದ್ದಾರೆ.

ಬಂಗಾರಪೇಟೆಯಲ್ಲಿ ಜಿಲ್ಲಾ ಉಪ್ಪಾರ ಸಂಘ ಅಸ್ಥಿತ್ವದಲ್ಲಿದೆ. ಇದರ ಅಧ್ಯಕ್ಷರು ಶ್ರೀರಾಮಕೃಷ್ಣ ಕೆ.ಜಿ.ಎಫ್.ನ ಎಸ್. ಎಸ್. ಶೀನಪ್ಪ ಸ್ವಾತಂತ್ರ್ಯ ಹೋರಾಟಗಾರರು, ರಾಜ್ಯ ಪುಟ್‌ಬಾಲ್ ಟ್ರಸ್ಟಿನ ಪೆನ್ಷಿನ್ ಹೋಲ್ಡರ್. ಚಿಕ್ಕಬಳ್ಳಾಪುರದ ಪುಟ್ಟಯ್ಯ ಮತ್ತು ಕೃಷ್ಣಪ್ಪ, ಬೆಂಗಳೂರಿನ ರಾಮಸ್ವಾಮಿ, ಗೋವಿಂದಸ್ವಾಮಿ, ಕೆಜಿಎಫ್‌ನ ಎಸ್. ಸೀನಪ್ಪ ಮೊದಲಾದವರು ಉಪ್ಪಾರ ಜನಾಂಗದಲ್ಲಿ ಜಾಗೃತಿ ಮೂಡಿಸಲು ದುಡಿಯುತ್ತಿದ್ದಾರೆ.

ಉಪ್ಪಾರರು ವೆಂಕಟೇಶ್ವರ, ಮುನೀಶ್ವರ, ಆಂಜನೇಯ, ವೀರಭದ್ರ ಹಾಗು ಅಲ್ಲಲ್ಲಿನ ಗ್ರಾಮದೇವತೆಯ ಭಕ್ತರಾಗಿದ್ದಾರೆ. ಎಲ್ಲಿ ಸತ್ಯವಿದೆಯೋ ಅಲ್ಲಿ ಅಡ್ಡಬೀಳುತ್ತಾರೆ. ಆದರೆ ಅವರ ಕುಲದೇವರು ತಿರುಪತಿ ವೆಂಕಟೇಶ್ವರ.

ಕೋಲಾರ ಜಿಲ್ಲೆಯ ಉಪ್ಪಾರರನ್ನು ಸ್ವಾಭಿಮಾನಿಗಳನ್ನಾಗಿ ಮಾಡಬೇಕು. ತಮ್ಮ ಸಮಾಜದ ಬಗ್ಗೆ ಅವರಲ್ಲಿ ಅಭಿಮಾನ ಮೂಡುವಂತೆ ಕಾರ್ಯಕ್ರಮ ರೂಪಿಸಬೇಕು. ಕೋಲಾರ ಜಿಲ್ಲೆಯಲ್ಲಿ ಹಿಂದುಳಿದ ಹಾಗು ದಲಿತ ಚಳವಳಿ ಕೆಳಹಂತದಿಂದ ಪ್ರಾರಂಭವಾಗಬೇಕು.

ಅನೇಕ ಹೋರಾಟಗಳಿಗೆ ಆಶ್ರಯ ತಾಣ ಈ ಜಿಲ್ಲೆ. ಇಡೀ ರಾಜ್ಯದ ಉಪ್ಪಾರರ ಬದುಕಿಗೆ ಕಾಯಕಲ್ಪ ಯೋಜನೆ ರೂಪಿಸುವ ಸಾಮರ್ಥ್ಯ ಇಲ್ಲಿನ ಉಪ್ಪಾರ ಬಂಧುಗಳಿಗಿದೆ.

ತಾಲ್ಲೂಕುಗಳಲ್ಲಿ ಉಪ್ಪಾರ ಸಂಘ ಅಥವಾ ಸಮುದಾಯದ ಬಗ್ಗೆ ಆಸಕ್ತಿಯಿರುವ ವ್ಯಕ್ತಿಗಳ ಅಭಾವ ಎದ್ದುಕಾಣುತ್ತಿದೆ. ಕೇವಲ ಮೂರ್‍ನಾಲ್ಕು ತಾಲ್ಲೂಕುಗಳಲ್ಲಿ ಈ ಸಮುದಾಯವನ್ನು ಹೆಚ್ಚು ಗುರುತಿಸಲು ಸಾಧ್ಯವಾಗಿದೆ. ಉಳಿದ ತಾಲ್ಲೂಕುಗಳಲ್ಲಿ ಇವರ ಸ್ಥಿತಿಗತಿಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿಲ್ಲ. ಅಂದರೆ 'ಸರ್ವೆ'ಯಂತಹ ಪ್ರಾಥಮಿಕ ಕಾರ್ಯ ಕೋಲಾರ ಜಿಲ್ಲೆಯಲ್ಲಿ ಇದೀಗ ಪ್ರಾರಂಭವಾಗಬೇಕಾಗಿದೆ.

ರಾಜಧಾನಿಗೆ ಹತ್ತಿರವಿರುವ ಜಿಲ್ಲೆಯ ಉಪ್ಪಾರರ ಏಳಿಗೆಗೆ ಕ್ರಿಯಾ ಯೋಜನೆ ರೂಪಿಸುವ ಅಗತ್ಯವಿದೆ.

**ಮಾಹಿತಿಸಂಗ್ರಹ : *ಎಸ್. ಸೀನಪ್ಪ, ಎನ್.ಸಿ. ನರಸಿಂಹಯ್ಯ***

*




# * ಬೆಂಗಳೂರು ನಗರ ಮತ್ತು ಗ್ರಾಮಾಂತರ

## ಐತಿಹಾಸಿಕ ಹಿನ್ನೋಟ

ಭಾರತದ ಮಹತ್ವದ ನಗರಗಳಲ್ಲಿ 'ಬೆಂಗಳೂರು' ಒಂದೆಂದು ಪ್ರಸಿದ್ಧವಾಗಿದೆ. 1980 ರಿಂದ 2000ದವರೆಗೆ ಅತಿವೇಗದಲ್ಲಿ ಬೆಳೆದ ನಗರಗಳಲ್ಲಿ ಇಡೀ ಏಷ್ಯಾದಲ್ಲೇ ಬೆಂಗಳೂರು ಮೊದಲ ಸ್ಥಾನದಲ್ಲಿದೆ.

ಬೆಂಗಳೂರನ್ನು ಏಷ್ಯಾದ 'ಸಿಲಿಕಾನ್ ಸಿಟಿ' ಎಂದು ಕರೆಯುತ್ತಾರೆ. ಭಾರತಕ್ಕೆ ಭೇಟಿ ಕೊಟ್ಟ ವಿದೇಶಿ ಅತಿಗಣ್ಯ ವ್ಯಕ್ತಿಗಳು ದೆಹಲಿಯ ನಂತರ ಭೇಟಿ ಕೊಡುವ ಸ್ಥಳ ಬೆಂಗಳೂರು. ಮೊದಲು ಬೆಂಗಳೂರಿಗೆ ಭೇಟಿ ಕೊಟ್ಟು ಅನಂತರ ರಾಷ್ಟ್ರದ ರಾಜಧಾನಿಗೆ ಹೋದರೆ ಆಶ್ಚರ್ಯವೇನಿಲ್ಲ. ಇದಕ್ಕೆ ಕಾರಣ ಮಾಹಿತಿ ತಂತ್ರಜ್ಞಾನದ ಕ್ಷೇತ್ರದಲ್ಲಿ ಬೆಂಗಳೂರು ನಗರದ ಸಾಧನೆ ಅಷ್ಟು ಮಹತ್ವ ಪಡೆದಿದೆ.

ಬೆಂಗಳೂರು 'ಎಲೆಕ್ಟ್ರಾನಿಕ್ ಸಿಟಿ'ಯೆಂದು ವಿಶ್ವ ಪ್ರಸಿದ್ಧ ಪಡೆದಿದೆ. ಇನ್‌ಫೋಸಿಸ್, ವಿಪ್ರೋ, ಟಯೋಟಾ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಕನ್ನಡ ಸಾಹಿತ್ಯ ಪರಿಷತ್ತು, ವಿಶ್ವೇಶ್ವರಯ್ಯ ಮ್ಯೂಸಿಯಂ, ವೆಂಕಟಪ್ಪ ಆರ್ಟ್ ಗ್ಯಾಲರಿ, ಬೆಂಗಳೂರು ವಿಶ್ವವಿದ್ಯಾಲಯ, ರಾಜೀವಗಾಂಧಿ ಆರೋಗ್ಯ ವಿಶ್ವವಿದ್ಯಾಲಯ, ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರ, ಕೃಷಿ ವಿಶ್ವವಿದ್ಯಾಲಯ, ಭಾರತ ಕ್ರೀಡಾ ಪ್ರಾಧಿಕಾರ, ಮಿಥಿಕ್ ಸೊಸೈಟಿ, ರಾಷ್ಟ್ರೀಯ ಕಾನೂನು ಶಾಲೆ, ಹಿಂದೂಸ್ಥಾನ್ ವಿಮಾನ ಕಾರ್ಖಾನೆ, ಏರೋ ಎಂಜಿನ್ ಕಾರ್ಖಾನೆ, ಹಿಂದೂಸ್ಥಾನ್ ಮೆಷಿನ್ ಟೂಲ್ಸ್, ಟೆಲಿಫೋನ್ ಕಾರ್ಖಾನೆ, ಭಾರತ್ ಎಲೆಕ್ಟ್ರಾನಿಕ್ಸ್, ಕರ್ನಾಟಕ

ಗಂಧದೆಣ್ಣೆ ಹಾಗು ಸಾಬೂನು ಕಾರ್ಖಾನೆ, ನಿಮ್ಹಾನ್ಸ್, ಪೀಣ್ಯದ ಕೈಗಾರಿಕಾ ಕೇಂದ್ರ, ಚಿತ್ರಕಲಾ ಪರಿಷತ್ತು, ವಿಧಾನಸೌಧ, ಲಾಲ್‌ಬಾಗ್ ಹಾಗು ಕಬ್ಬನ್‌ಪಾರ್ಕ್ ಹೀಗೆ ಬೆಂಗಳೂರು ಸರ್ವಜನರ ಆಕರ್ಷಣೆಯ ಕೇಂದ್ರವಾಗಿದೆ. ದೇಶದ ಜನ ಒಂದಲ್ಲ ಒಂದು ಕಾರಣಕ್ಕೆ ಬೆಂಗಳೂರಿನತ್ತ ತಿರುಗಿ ನೋಡುವಂತಾಗಿದೆ. ಬೆಂಗಳೂರು "ಉದ್ಯಾನಗಳ ನಗರ" ಎಂದೂ ಖ್ಯಾತವಾಗಿದೆ.

ಬೆಂಗಳೂರು ರಾಜ್ಯದ ಆಗ್ನೇಯ ಭಾಗದಲ್ಲಿದೆ. ಜಿಲ್ಲೆಯ ಒಟ್ಟು ವಿಸ್ತೀರ್ಣ 3,081 ಚ.ಮೈ. ಸಮುದ್ರಮಟ್ಟದಿಂದ ಬೆಂಗಳೂರು 3,000 ಅಡಿ ಎತ್ತರದಲ್ಲಿದೆ. ಉತ್ತರ ಅಕ್ಷಾಂಶ $12^0$-4' ಮತ್ತು $13^0$-31' ಹಾಗು ಪೂರ್ವರೇಖಾಂಶ $70° - 7'$ ಮತ್ತು $78° - 4'$ ಗಳ ನಡುವೆ ಬೆಂಗಳೂರಿದೆ. ಬೆಂಗಳೂರನ್ನು ಹಿಂದೆ ಅರ್ಕಾವತಿ ನದಿ ಕಣಿವೆ ಪ್ರದೇಶವೆಂದು ಹೇಳಲಾಗುತ್ತಿತ್ತು. ಇಡೀ ರಾಷ್ಟ್ರದಲ್ಲೇ ಬೆಂಗಳೂರು ಹಿತಕರವಾದ ಹವಾಗುಣವನ್ನು ಹೊಂದಿದೆ. ಬೆಂಗಳೂರು ಜಿಲ್ಲೆಯಲ್ಲಿ ಒಟ್ಟು 2,774 ಹಳ್ಳಿಗಳಿವೆ. ಹಿಂದೆ ಹೆಚ್ಚಿನ ಕೆರೆ ಪಡೆದ ಜಿಲ್ಲೆಗಳಲ್ಲಿ ಬೆಂಗಳೂರಿಗೆ ಹಿರಿದಾದ ಸ್ಥಾನವಿತ್ತು. ಇಂದು ಬೆಂಗಳೂರಿನ ಬಹುಮಟ್ಟಿನ ಕೆರೆಗಳು ಜನವಸತಿ ಪ್ರದೇಶವಾಗಿದ್ದು, ಅದರ ದುಷ್ಪರಿಣಾಮ ಜನತೆಯ ಬದುಕಿನ ಮೇಲಾಗುತ್ತಿದೆ.

ಕ್ರಿ.ಶ. 1891ರಲ್ಲಿ ಬೆಂಗಳೂರಿನ ಜನಸಂಖ್ಯೆ 8,02,994 ಎಂದು ಹೇಳಲಾಗಿದೆ. 2001ರ ಜನಗಣತಿಯ ಪ್ರಕಾರ, ಬೆಂಗಳೂರು ನಗರದ ಜನಸಂಖ್ಯೆ 65,23,110. ಆದರಲ್ಲಿ ಪುರುಷರು 34,23,797, ಸ್ತ್ರೀಯರು 31,00,313 ಇದ್ದಾರೆ. ಅದೇ ರೀತಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜನಸಂಖ್ಯೆ 18,77,416. ಅದರಲ್ಲಿ ಪುರುಷರ ಪಾಲು 9,61, 335, ಮಹಿಳೆಯರದು 9,16,081 ಇದೆ. ನೂರಾಹತ್ತು ವರ್ಷದಲ್ಲಿ ಬೆಂಗಳೂರು ಜನಸಂಖ್ಯೆ ಎಂಬತ್ತು ಪಟ್ಟು ಹೆಚ್ಚಾಗಿರುವುದನ್ನು ಗಮನಿಸಬಹುದು.

ಬೆಂಗಳೂರುನಗರದ ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. 83.91. ಪುರುಷರು ಶೇ. 88.36ರಷ್ಟು ಸಾಕ್ಷರರಾಗಿದ್ದರೆ ಸ್ತ್ರೀಯರು 78.98ರಷ್ಟಿದ್ದಾರೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಾಕ್ಷರತೆ ಪ್ರಮಾಣ ಶೇ. 65. ಅದರಲ್ಲಿ ಪುರುಷರ ಸಾಕ್ಷರತೆ ಶೇ. 74.73, ಸ್ತ್ರೀಯರದು ಶೇ. 53.12.

ಬೆಂಗಳೂರುನಗರದ ಜಿಲ್ಲೆಯನ್ನು ದಕ್ಷಿಣ ಹಾಗು ಉತ್ತರ ಎಂದು ವಿಭಾಗಿಸಲಾಗಿದೆ. ಆನೇಕಲ್ಲು ಬೆಂಗಳೂರುನಗರ ಜಿಲ್ಲೆಗೆ ಸೇರ್ಪಡೆಯಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕನಕಪುರ, ಚನ್ನಪಟ್ಟಣ, ರಾಮನಗರ, ದೇವನಹಳ್ಳಿ, ಹೊಸಕೋಟೆ, ಮಾಗಡಿ ಹಾಗು ದೊಡ್ಡಬಳ್ಳಾಪುರ ತಾಲ್ಲೂಕುಗಳಿವೆ.

ಬೆಂಗಳೂರು ಜಿಲ್ಲೆಗೆ ಪೌರಾಣಿಕ ಹಾಗು ಐತಿಹಾಸಿಕ ಹಿನ್ನೆಲೆಯಿದೆ. ಬೇಗೂರಿನಲ್ಲಿ ದೊರೆತ ಶಾಸನವೊಂದರಿಂದಲೇ ಕ್ರಿ.ಶ. 900ರಲ್ಲಿ ಬೆಂಗಳೂರು ದೊಡ್ಡ ನಗರವಾಗಿತ್ತೆಂದು

ಹೇಳಲಾಗಿದೆ. ಹೊಯ್ಸಳದೊರೆ ಇಮ್ಮಡಿ ಬಲ್ಲಾಳನ ಕಾಲದಲ್ಲಿ ನಡೆಯಿತೆಂಬ 'ಬೆಂದಕಾಳೂರು' ಎಂಬ ಕತೆ ಪ್ರಚಲಿತದಲ್ಲಿದೆ. 'ಬೆಂಗೂ' ಅಂದರೆ ರಕ್ತಹೊನ್ನೆ ಮರದಿಂದ 'ಬೆಂಗಳೂರು' ಎಂಬ ಹೆಸರು ಬಂತೆಂದು ಬೆಂಗಳೂರು ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ಹೇಳಲಾಗಿದೆ. ತಲಕಾಡಿನ ಗಂಗರ ಕಾಲದಲ್ಲಿ ಬೆಂಗಳೂರು ಪುಟ್ಟ ಗ್ರಾಮವಾಗಿತ್ತು. ಈಗ ಅದನ್ನು ಕೊಡಗೇನಹಳ್ಳಿ ಹೋಬಳಿಯ 'ಹಳೇ ಬೆಂಗಳೂರು' ಎಂದು ಕರೆಯಲಾಗುತ್ತಿದೆ.

ಬೆಂಗಳೂರು ಪ್ರಾಚೀನ ಕಾಲದಿಂದಲೂ ಜನವಸತಿಯ ಸ್ಥಳವಾಗಿತ್ತೆಂಬುದಕ್ಕೆ ಅನೇಕ ಪೌರಾಣಿಕ ಕತೆಗಳನ್ನು ಹೇಳಲಾಗಿದೆ. ಶ್ರೀರಾಮಚಂದ್ರನು ಅರಣ್ಯವಾಸ ಮುಗಿಸಿ ಹಿಂದಿರುಗುವಾಗ ತನ್ನ ನೆನಪಿಗಾಗಿ ತನ್ನ ವಿಗ್ರಹವನ್ನು ಸುಗ್ರೀವನಿಗೆ ಕೊಟ್ಟನಂತೆ! ಅದು ಇಂದಿಗೂ ರಾಮನಗರದಲ್ಲಿರುವ ಬೆಟ್ಟದಲ್ಲಿದೆಯಂತೆ! ಶ್ರೀರಾಮಚಂದ್ರ ಕಾಕಾಸುರನ ಮೇಲೆ ದರ್ಬಾಸ್ತ್ರ ಪ್ರಯೋಗಿಸಿದ ಕಾರಣಕ್ಕಾಗಿ ಇಲ್ಲಿ ಕಾಗೆಗಳು ಸುಳಿಯುವುದಿಲ್ಲವೆಂಬ ಐತಿಹ್ಯವಿದೆ. ಇಲ್ಲಿನ ಕೊಳದಲ್ಲಿ ಸೀತಾದೇವಿ ಸ್ನಾನ ಮಾಡಿದಳಂತೆ!

ಮಾಗಡಿ ತಾಲ್ಲೂಕಿನ ಹೆಗ್ಗುಂಡ ಎಂಬ ಊರಿನ ಬಳಿ ಶ್ರೀರಾಮಚಂದ್ರನು ಯಜ್ಞಾಶ್ವ ಕಟ್ಟಿದನೆಂದು ಪ್ರತೀತಿಯಿದೆ. ಇಲ್ಲಿಗೆ ಸಮೀಪದ ಬೆಟ್ಟದಲ್ಲಿ ಶ್ರೀರಾಮಚಂದ್ರನ ಪಾದಸ್ಪರ್ಶದಿಂದ ಅಹಲ್ಯೆಯ ಶಾಪ ವಿಮೋಚನೆಯಾಯಿತೆಂದು ಹೇಳಲಾಗಿದೆ. ಇದೇ ತಾಲ್ಲೂಕಿನ 'ಮಾಕಳಿ'ಯಲ್ಲಿ ಭೀಮನು ಸ್ಥಾಪಿಸಿದನೆಂದು ಹೇಳಲಾದ ಭೀಮೇಶ್ವರ ದೇವಾಲಯವಿದೆ. ಇಲ್ಲಿನ ಒಂದು ಬಂಡೆಯ ಮೇಲೆ ಭೀಮನ ಎಡಪಾದವಿದೆ. ಬಲಪಾದ ಕನಕಪುರ ಬಳಿಯಿದೆಯಂತೆ!

ಆಯಿಗಂಡಪುರದಲ್ಲಿ ಪಂಚಪಾಂಡವರು ಸ್ಥಾಪಿಸಿದರೆಂದು ಹೇಳಲಾದ ದೇವಾಲಯವಿದೆ. ಹೊಸಕೋಟೆ ತಾಲ್ಲೂಕಿನ ನಂದಗುಡಿ ಹಾಗು ಚನ್ನಪಟ್ಟಣ ತಾಲ್ಲೂಕಿನ 'ಮಾಕುಂದ' ಪಟ್ಟಣಗಳಿಗೆ ಪ್ರಾಚೀನ ಇತಿಹಾಸವಿದೆ. ನಂದಗುಡಿ ಉತ್ತುಂಗ ಭುಜಂಗರಾಜನ ರಾಜಧಾನಿಯಾಗಿತ್ತು. ಚಾಣಕ್ಯನ ನೆರವಿನಿಂದ ಅದನ್ನು ಬಿಡುಗಡೆಗೊಳಿಸಿದನೆಂದು ಹೇಳಲಾಗಿದೆ.

ಚನ್ನಪಟ್ಟಣ ತಾಲ್ಲೂಕಿನ 'ಮಳೂರು'ನ ಕತೆ ಹೀಗಿದೆ. ಸಾರಂಗಧರನಿಗೆ ತುಂಡಾದ ಕೈಗಳು ಮೊಳೆತ ಸ್ಥಳ 'ಮೊಳತೂರು' ಈಗ 'ಮಳೂರು' ಆಗಿದೆ. ಅಲ್ಲಿ ಅಪ್ರಮೇಯಸ್ವಾಮಿ ದೇವಾಲಯವಿದೆ. ನೆಲಮಂಗಲದ ಅಡಕೆಯ ಆಂಜನೇಯ ದೇವಾಲಯವನ್ನು ಜನಮೇಯರಾಯ ಕಟ್ಟಿಸಿದನೆಂದು ಹೇಳಲಾಗಿದೆ.

ಬೆಂಗಳೂರು ಜಿಲ್ಲೆಗೆ ಪ್ರಾಗೈತಿಹಾಸಿಕ ಹಿನ್ನೆಲೆಯಿದೆ. ಕ್ರಿ.ಪೂ. 1000ದಷ್ಟು ಹಿಂದಿನ ಕಾಲದಿಂದಲೂ ಇದು ಪ್ರಸಿದ್ಧಿಯಾಗಿದೆ. ನವಶಿಲಾಯುಗದ ಕಾಲಕ್ಕೆ ಸಂಬಂಧಪಟ್ಟ ಅನೇಕ ಸಣ್ಣ ಕಲ್ಲಿನ ಆಯುಧಗಳು ಈ ಜಿಲ್ಲೆಯಲ್ಲಿ ದೊರಕಿವೆ. ಬೆಂಗಳೂರಿನಲ್ಲಿ ರೋಮ್ ದೊರೆಗಳಾದ ಅಗಸ್ಟಸ್, ಟೈಬೇರಿಯಸ್, ಕ್ಲಾಡಿಯಸ್ ಮೊದಲಾದವರ ನಾಣ್ಯಗಳು ಯಶವಂತಪುರ ಮತ್ತು ಹಿಂದುಸ್ತಾನ್ ವಿಮಾನ ಕಾರ್ಖಾನೆಯ ಪ್ರದೇಶದಲ್ಲಿ ದೊರಕಿವೆ.

ತಲಕಾಡಿನ ಗಂಗರ ಗಂಗವಾಡಿ 96,000 ಪ್ರಾಂತ್ಯಕ್ಕೆ ಬೆಂಗಳೂರು ಜಿಲ್ಲೆ ಸೇರ್ಪಡೆಯಾಗಿತ್ತು. ಏಳನೆಯ ಶತಮಾನದ ಗಂಗವಂಶದ ಭೂವಿಕ್ರಮ ಹಾಗು ಶಿವಮಾರ ಎಂಬುವವರು ತಮ್ಮ ರಾಜಧಾನಿಯನ್ನು ತಲಕಾಡಿನಿಂದ ಚನ್ನಪಟ್ಟಣದ ಮಾಕುಂದಕ್ಕೆ ಬದಲಾಯಿಸಿದರೆಂದು ಹೇಳಲಾಗಿದೆ.

ಕ್ರಿ.ಶ. 797ರ ಮಣ್ಣೆ ಶಾಸನವು ಈ ಪ್ರದೇಶದ ಮಹತ್ವವನ್ನು ಹೇಳುತ್ತದೆ. ನೆಲಮಂಗಲ ತಾಲ್ಲೂಕಿನ ಮಣ್ಣೆ ಹಿಂದೆ ತಲಕಾಡು ಗಂಗರ ಕಾಲದಲ್ಲಿ 'ಮಾನ್ಯಪುರ' ಎಂದು ಖ್ಯಾತವಾಗಿತ್ತು. ಗಂಗದೊರೆ ಶ್ರೀ ಪುರುಷನ ಕಾಲದಲ್ಲಿ ಇದು ಗಂಗರ ಉಪರಾಜಧಾನಿಯಾಗಿತ್ತು. 11ನೆಯ ಶತಮಾನದಲ್ಲಿ ಚೋಳರ ದಾಳಿಗೆ ಸಿಕ್ಕಿ ಈ ಊರು ಹಾಳಾಯಿತು. ಇಂದಿಗೂ ಇಲ್ಲಿನ ಸೋಮೇಶ್ವರ ಹಾಗು ಕಪಿಲೇಶ್ವರ ದೇವಾಲಯಗಳು ಆ ಪರಂಪರೆಯನ್ನು ಒತ್ತಿ ಹೇಳುತ್ತವೆ.

ಹೊಸಕೋಟೆ ಹಾಗು ದೇವನಹಳ್ಳಿಯಲ್ಲಿ ದೊರೆತ ಶಾಸನಗಳಿಂದಾಗಿ ಈ ಪ್ರದೇಶವನ್ನು ಪಲ್ಲವ ಮತ್ತು ನೊಳಂಬ ದೊರೆಗಳು ಆಳುತ್ತಿದ್ದರೆಂದು ಹೇಳಲಾಗಿದೆ. ಮಹೇಂದ್ರ ಅಯ್ಯಪ್ಪದೇವ, ಬೀರನೊಳಂಬ ಹಾಗು ಇರವನೊಳಂಬ ಎಂಬುವವರ ಹೆಸರನ್ನು ಇಲ್ಲಿನ ಶಾಸನಗಳು ಪ್ರಸ್ತಾಪಿಸುತ್ತವೆ. ಕ್ರಿ.ಶ. 997ರ ಹೊಸಕೋಟೆಯಲ್ಲಿನ ರಾಜರಾಜ ಚೋಳನ ಶಾಸನವೇ ಚೋಳರ ಅತ್ಯಂತ ಪ್ರಾಚೀನ ಶಾಸನವಾಗಿದೆ. ರಾಷ್ಟ್ರಕೂಟ ಅಮೋಘವರ್ಷನ ಕಾಲಕ್ಕೆ ಸೇರಿದ ಶಾಸನಗಳು ಹೊಸಕೋಟೆ ಹಾಗು ದೇವನಹಳ್ಳಿಯಲ್ಲಿ ದೊರಕಿವೆ.

ಹೊಯ್ಸಳರ ದೊರೆ ವೀರಬಲ್ಲಾಳನ (ಕ್ರಿ.ಶ. 1172-1279) ಕಾಲದಲ್ಲಿ ಈ ಜಿಲ್ಲೆಯ ಹೆಸರಿಗೆ ಸಂಬಂಧಪಟ್ಟಂತೆ 'ಬೆಂದಕಾಳೂರಿ'ನ ಕತೆ ಪ್ರಚಲಿತವಿರುವುದನ್ನು ಗಮನಿಸಬಹುದು. ವಿಷ್ಣುವರ್ಧನನ ಮಡದಿ ನಾಟ್ಯರಾಣಿ ಶಾಂತಲಾದೇವಿ ಶಿವಗಂಗೆಯಲ್ಲಿ ನಿಧನಳಾದಳೆಂದು ಹೇಳಲಾಗಿದೆ.

ಕ್ರಿ.ಶ. 13ನೆಯ ಶತಮಾನದಲ್ಲಿ ಹೊಯ್ಸಳ ಸಾಮ್ರಾಜ್ಯ ಒಡೆದಾಗ ನರಸಿಂಹನ ತಮ್ಮನಾದ ರಾಮನಾಥ, ಬೆಂಗಳೂರು ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿನ ಕುಂದಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಕ್ರಿ.ಶ. 1265ರ ಕಾನಕಾನಹಳ್ಳಿ ಶಾಸನವೊಂದರಲ್ಲಿ 'ಹೊಂಗನೂರು'ನಲ್ಲಿ ಹೊಯ್ಸಳ ರಾಜಪಾಲನಿದ್ದನು.

ಹೊಯ್ಸಳರ ಸಮಕಾಲೀನರಾದ ದೇವಗಿರಿಯ ಸೇವುಣರು ಅಥವಾ ಯಾದವರು ನೆಲಮಂಗಲ ತಾಲ್ಲೂಕಿನ 'ಭಿನ್ನಮಂಗಲ'ದಲ್ಲಿ ಅಧಿಕಾರ ನಡೆಸುತ್ತಿದ್ದರೆಂದು ಹೇಳಲಾಗಿದೆ.

ವಿಜಯನಗರ ಸಾಮ್ರಾಜ್ಯದ ಅರಸನಾದ ಅಚ್ಯುತದೇವರಾಯನ ಕಾಲದಲ್ಲಿ ಅಂದರೆ ಕ್ರಿ.ಶ. 1533ರಲ್ಲಿ ಯಲಹಂಕ ನಾಡಿನ ಶಿವನಸಮುದ್ರ ಅಥವಾ ಅಗ್ರಹಾರ ಹೆಸರುಘಟ್ಟದ ಅರ್ಕಾವತಿ ನದಿಗೆ ದೊಡ್ಡಕೆರೆ ಕಟ್ಟಲಾಯಿತು.

ಬೆಂಗಳೂರಿನ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿದ ಆವಂತಿನಾಡ ಪ್ರಭುಗಳು ಕಂಚಿಯಿಂದ ಬಂದವರು. ಈ ವಂಶದ ಮೂಲಪುರುಷ ರಣಭೈರೇಗೌಡ. ಈತ ದೇವನಹಳ್ಳಿ

ಬಳಿಯೇ ಉಳಿದ. ಇವನ ಏಳು ಜನ ಸೋದರರು ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಹೊಳವನಹಳ್ಳಿ (ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕು) ಕೋಲಾರ, ಹೊಸಕೋಟೆ ಹಾಗು ಯಲಹಂಕಗಳಲ್ಲಿ ಪಾಳೇಪಟ್ಟು ಸ್ಥಾಪಿಸಿದರು.

ಯಲಹಂಕದಲ್ಲಿ ನೆಲಸಿದ್ದ ಜಯಗೌಡ (1418-1433) ಯಲಹಂಕ ಪ್ರಭುಗಳ ಮೂಲಪುರುಷ. ಈತನ ವಂಶಸ್ಥನೇ ಕೆಂಪೇಗೌಡ. ಕ್ರಿ.ಶ. 1537ರಲ್ಲಿ ಯಲಹಂಕ ಸಮೀಪದ ಹಳೆಯ ಬೆಂಗಳೂರಿನಲ್ಲಿ ಕೋಟೆ ಕಟ್ಟಿಸಿದ. ವಿಜಯನಗರ ಸಾಮ್ರಾಜ್ಯದ ಅಚ್ಯುತದೇವರಾಯನಿಗೆ ಇದು ತಿಳಿದು ಸಂತೃಪ್ತನಾಗಿ 30,000 ಪಗೋಡ ಆದಾಯ ಬರುವ ಬೆಂಗಳೂರು ಸುತ್ತಲಿನ ಹನ್ನೆರಡು ಹಳ್ಳಿಗಳನ್ನು ಕೆಂಪೇಗೌಡನಿಗೆ ಜಹಗೀರು ಕೊಟ್ಟನು. ಉತ್ಸಾಹಭರಿತನಾದ ಕೆಂಪೇಗೌಡ ಅದನ್ನು ಇಂದಿನ ಬೆಂಗಳೂರಾಗಿ ಅಭಿವೃದ್ಧಿಗೊಳಿಸಿದನು. ಇಲ್ಲಿ 'ಕೆಂಪಾಂಬುಧಿ' ಸೇರಿದಂತೆ ಅನೇಕ ಕೆರೆಗಳನ್ನು ಕಟ್ಟಿಸಿದನು. ವಿದೇಶಿಯರು ಇಲ್ಲಿ ನೆಲೆಸುವಂತೆ ಮಾಡಿದನು. ತನ್ನದೇ ಆದ ಟಂಕಸಾಲೆಯನ್ನು ಸ್ಥಾಪಿಸಿ 'ಭೈರವನಾಣ್ಯ' ಎಂಬ ಸ್ವತಂತ್ರ ನಾಣ್ಯವನ್ನು ಚಲಾವಣೆಗೆ ತಂದನು. ಇದರಿಂದ ಕೋಪಗೊಂಡ ವಿಜಯನಗರ ಸಾಮ್ರಾಜ್ಯದ ಅಳಿಯ ರಾಮರಾಯನು ಕೆಂಪೇಗೌಡನನ್ನು ಐದು ವರುಷಗಳ ಕಾಲ ಆನೆಗೊಂದಿ ಸೆರೆಮನೆಯಲ್ಲಿಟ್ಟನು. ಈ ಸಂದರ್ಭದಲ್ಲಿ ಚನ್ನಪಟ್ಟಣದ ಜಗದೇವರಾಯ ಈ ಪ್ರದೇಶವನ್ನು ಆಳುತ್ತಿದ್ದನು.

ಕ್ರಿ.ಶ. 1638ರಲ್ಲಿ ಬಿಜಾಪುರ ಸೇನಾನಿ ರಣದುಲ್ಲಾಖಾನ್ ಬೆಂಗಳೂರನ್ನು ವಶಪಡಿಸಿಕೊಂಡನು. ಅನಂತರ ಆತ ತನ್ನ ದಂಡನಾಯಕನಾದ ಷಹಜಿಗೆ ಬೆಂಗಳೂರನ್ನು ಜಹಗೀರರಾಗಿ ನೀಡಿದನು. ಶಿವಾಜಿಯ ವಿವಾಹ ಬೆಂಗಳೂರಿನಲ್ಲೇ ನಡೆಯಿತು. ಷಹಜಿಯ ಮತ್ತೊಬ್ಬ ಮಗ ಏಕೋಜಿಯ ವಶದಲ್ಲಿ ಬೆಂಗಳೂರಿತ್ತು. ಈ ಮಧ್ಯೆ ಮೊಘಲ್ ಸೇನಾನಿ ಖಾಸಿಂಖಾನ್ ಕ್ರಿ.ಶ. 1687ರಲ್ಲಿ ಬೆಂಗಳೂರನ್ನು ವಶಪಡಿಸಿಕೊಂಡು ಇದನ್ನು ಮೂರು ಲಕ್ಷ ರೂ.ಗಳಿಗೆ ಮೈಸೂರು ಸಂಸ್ಥಾನದ ಚಿಕ್ಕದೇವರಾಜ ಒಡೆಯರಿಗೆ ಮಾರಿಬಿಟ್ಟ.

ಕ್ರಿ.ಶ. 1791ರಲ್ಲಿ ಮೂರನೆ ಆಂಗ್ಲ-ಮೈಸೂರು ಯುದ್ಧದಲ್ಲಿ ಲಾರ್ಡ್ ಕಾರ್ನ್‌ವಾಲೀಸ್ ಟಿಪ್ಪುವಿನಿಂದ ಬೆಂಗಳೂರನ್ನು ಗೆದ್ದನು. 1831ರಿಂದ 1881ರವರೆಗೆ ಕಮೀಷನರ್ ಆಳ್ವಿಕೆಯ ಕಾಲದಲ್ಲಿ ಬೆಂಗಳೂರು ಮೈಸೂರು ಸಂಸ್ಥಾನದ ಆಡಳಿತ ಕೇಂದ್ರವಾಯಿತು. ಮೈಸೂರು ಒಡೆಯರ ಸಂತತಿಯವರಿದ್ದರೂ ಬೆಂಗಳೂರಿನ ಪ್ರಾಮುಖ್ಯತೆ ಕಡಿಮೆಯಾಗಲಿಲ್ಲ. 1947ರ ನಂತರ ಅಂದರೆ ಸ್ವಾತಂತ್ರ್ಯಾನಂತರ ಬೆಂಗಳೂರು, ಮೈಸೂರು ರಾಜ್ಯದ 'ರಾಜಧಾನಿ' ಆಯಿತು.

ಬೆಂಗಳೂರು ಜಿಲ್ಲೆಯ ಎಲ್ಲ ತಾಲ್ಲೂಕು ಹಾಗು ಹೋಬಳಿ ಕೇಂದ್ರಗಳು ಐತಿಹಾಸಿಕ ಪ್ರಾಮುಖ್ಯತೆ ಪಡೆದಿವೆ. ಅದರಲ್ಲಿ ಕೆಲವನ್ನು ಇಲ್ಲಿ ಪರಿಶೀಲಿಸಬಹುದು :

'ಕನಕಪುರ'ಕ್ಕೆ 13ನೆಯ ಶತಮಾನದಲ್ಲಿ 'ಕಾಣಕಾರನಹಳ್ಳಿ' ಎಂಬ ಹೆಸರಿತ್ತು. ಕಾನಕಾನ ಎಂಬುವವನಿಂದ ಕಾನಕಾನಹಳ್ಳಿ ಎಂದಾಯಿತು. ಅವನು ಇಲ್ಲಿ ಒಂದು ಕೋಟೆ ಕಟ್ಟಿಸಿದನು.

ಚನ್ನಪಟ್ಟಣದ ಜಗದೇವರಾಯ ಈ ಕೋಟೆ ಕೆಡವಿಸಿ ಇಲ್ಲಿ ಹೊಸದಾಗಿ ಮತ್ತೊಂದು ಕೋಟೆ ಕಟ್ಟಿಸಿದನು. ಅನಂತರ 1947 ರಲ್ಲಿ ಇದಕ್ಕೆ 'ಕನಕಪುರ' ಎಂಬ ಹೆಸರು ಬಂತು. ಕನಕಪುರ ಕೋಟೆಯಲ್ಲಿ ಹಳೆಯದಾದ ಶ್ರೀನಿವಾಸ ದೇವಾಲಯವಿದೆ. ಗಾಂಧಿವಾದಿ ಪೂಜ್ಯ ಕರಿಯಪ್ಪ ಗೌಡರು ಸ್ಥಾಪಿಸಿದ ಶಿಕ್ಷಣ ಸಂಸ್ಥೆ ಈ ಭಾಗದ ಯುವಕರ ವಿದ್ಯಾಭ್ಯಾಸಕ್ಕೆ ತುಂಬ ಅನುಕೂಲವಾಗಿದೆ. ಕಾವೇರಿ, ಅರ್ಕಾವತಿ ನದಿಗಳ ಸಂಗಮ ಸ್ಥಳದಲ್ಲಿರುವ 'ಮೇಕೇದಾಟು' ಪ್ರವಾಸಿಗರ ಆಕರ್ಷಣೆಯ ಕೇಂದ್ರವಾಗಿದೆ. ಸಾತನೂರಿನಲ್ಲಿ 32 ಅಡಿ ಎತ್ತರದ ಎರಡೂ ಕೈಗಳನ್ನು ಸೊಂಟದ ಮೇಲಿಟ್ಟುಕೊಂಡಿರುವ ವಿಠ್ಠಲನ ವಿಗ್ರಹ ಅತ್ಯಂತ ಆಕರ್ಷಕವಾಗಿದೆ.

ತಲಕಾಡಿನ ಗಂಗರ ಕಾಲದಿಂದಲೂ 'ಚನ್ನಪಟ್ಟಣ' ಪ್ರಖ್ಯಾತವಾದ ಸ್ಥಳ. 'ಮಾಕುಂದ' ಆ ಕಾಲದಿಂದಲೂ ಪ್ರಸಿದ್ಧಿಯಾದ ಕೇಂದ್ರ. ಕ್ರಿ.ಶ. 1580ರಲ್ಲಿ ಆಳುತ್ತಿದ್ದ ಜಗದೇವರಾಯ ಚನ್ನಪಟ್ಟಣದಲ್ಲಿ ಕೋಟೆ ಕಟ್ಟಿಸಿದನು. 'ಚಂದಪಟ್ಟಣ' ಎಂಬ ಶಬ್ದದಿಂದ 'ಚನ್ನಪಟ್ಟಣ' ಎಂಬ ಹೆಸರು ಬಂದಿದೆ. ಈ ತಾಲ್ಲೂಕಿನ 'ಅಬ್ಬೂರು' ಮಾಧ್ವ ಸಂಪ್ರದಾಯದ ಯತಿ ಬ್ರಹ್ಮಣ್ಯತೀರ್ಥರ ಪುಣ್ಯಸ್ಥಳ. ಅವರ ಬೃಂದಾವನ ಇಲ್ಲಿದೆ. ಶ್ರೀಪಾದರಾಯರು ಹಾಗು ವ್ಯಾಸರಾಯರು ಬ್ರಹ್ಮಣ್ಯತೀರ್ಥರ ಬಳಿ ವ್ಯಾಸಂಗ ಮಾಡಿದರೆಂದು ಹೇಳಲಾಗಿದೆ. ಇದೊಂದು ಪ್ರಮುಖ ಘಟಿಕಾಸ್ಥಾನ.

ಚನ್ನಪಟ್ಟಣದ ಗೊಂಬೆಗಳು ನಾನಾ ದೇಶಕ್ಕೆ ರಫ್ತಾಗುತ್ತವೆ. ಕಣ್ವ ಜಲಾಶಯದಿಂದ ಈ ತಾಲ್ಲೂಕಿನ 3,200 ಎಕರೆ ಜಮೀನಿಗೆ ನೀರಾವರಿ ಸೌಲಭ್ಯವಿದೆ.

'ರಾಮನಗರ'ಕ್ಕೆ ಹಿಂದೆ 'ಕ್ಲೋಸ್‌ಪೇಟೆ' ಎಂಬ ಹೆಸರಿತ್ತು. ಮೈಸೂರಿನ ಬ್ರಿಟಿಷ್ ಅಧಿಕಾರಿ 'ಸರ್ ಬ್ಯಾರಿಕ್ಲೋಸ್' ಎಂಬುವನ ಗೌರವಾರ್ಥ ಈ ಹೆಸರು ಇಡಲಾಗಿತ್ತು. 'ರಾಮಗಿರಿ'ಯಿಂದ ಈ ಊರಿಗೆ 'ರಾಮನಗರ' ಎಂದು ಹೆಸರು ಬಂದಿದೆ. ಈ ಊರಿನಲ್ಲಿ ಏಳುಸುತ್ತಿನ ಬೆಟ್ಟವಿದೆ. ಇಲ್ಲಿನ ಬೆಟ್ಟಗಳೇ ಆಕರ್ಷಕವಾಗಿವೆ. ವಿವಿಧ ಕಲ್ಪನೆಗಳಿಗೆ ಜೀವ ಕೊಡುತ್ತವೆ. ಚನ್ನಪಟ್ಟಣ-ರಾಮನಗರ ನಡುವೆ ಡಾ|| ಹೆಚ್.ಎಲ್. ನಾಗೇಗೌಡ ಅವರು ಸ್ಥಾಪಿಸಿದ 'ಜಾನಪದ ಲೋಕ' ಜಾನಪದ ಪ್ರೇಮಿಗಳ ಯಾತ್ರಾಸ್ಥಳವಾಗಿದೆ.

'ಮಾಗಡಿ' ಪ್ರಸಿದ್ಧ ಐತಿಹಾಸಿಕ ಸ್ಥಳ. ಮಾಗಡಿಯ ತಿರುಮಲ ರಂಗನಾಥ ದೇವಾಲಯ ಸಾಕಷ್ಟು ಪ್ರಸಿದ್ಧಿ ಪಡೆದಿದೆ. ಇಲ್ಲಿಂದ ಏಳು ಮೈಲಿ ದೂರದಲ್ಲಿರುವ 'ಸಾವನದುರ್ಗ' ಕರ್ನಾಟಕದ ಪ್ರಸಿದ್ಧ ಬೆಟ್ಟಗಳಲ್ಲಿ ಒಂದು. ಕ್ರಿ.ಶ. 1543ರಲ್ಲಿ ವಿಜಯನಗರದ ಸಾಮ್ರಾಟ ಅಚ್ಯುತದೇವರಾಯನ ಅಧಿಕಾರಿ ಸಾಮಂತರಾಯ ಇಲ್ಲಿ ಕೋಟೆ ಕಟ್ಟಿಸಿದನು. 1791ರಲ್ಲಿ ಬ್ರಿಟಿಷ್ ಸೈನ್ಯಾಧಿಕಾರಿ ಕಾರನ್‌ವಾಲೀಸ್ ಇದನ್ನು ವಶಪಡಿಸಿಕೊಂಡನು. ಇಲ್ಲಿ ವೀರಭದ್ರ ಹಾಗು ನರಸಿಂಹ ದೇವರ ದೇವಸ್ಥಾನಗಳಿವೆ.

ಮಾಗಡಿ ತಾಲ್ಲೂಕಿನ ಮತ್ತೊಂದು ಪ್ರಸಿದ್ಧ ಸ್ಥಳ ಕಲ್ಯ. ಶಾಸನಗಳಲ್ಲಿ ಇದನ್ನು 'ಕಲ್ಲೆಹ' ಎಂದು ವರ್ಣಿಸಲಾಗಿದೆ. ಇಲ್ಲಿನ ಕ್ರಿ.ಶ. 1368ರ ಶಾಸನದಲ್ಲಿ ಒಂದನೆಯ ಬುಕ್ಕರಾಯ

ವೈಷ್ಣವ ಹಾಗು ಜೈನರಿಗೆ ಶಾಂತಿಸಂಧಾನ ಮಾಡಿಸಿದ ಪ್ರಸ್ತಾಪವಿದೆ. 'ಸೋಮೇಶ್ವರ ಶತಕವನ್ನು' ರಚಿಸಿದ ಪಾಲ್ಕುರಿಕೆ ಸೋಮನಾಥ ದೇಹತ್ಯಾಗ ಮಾಡಿದ್ದು ಇಲ್ಲಿಯೇ ! ಬೌದ್ಧ, ವೈಷ್ಣವ ಹಾಗು ವೀರಶೈವ ಧರ್ಮದ ಕುರುಹುಗಳು ಇಲ್ಲಿವೆ. ಸುಗ್ಗನಹಳ್ಳಿಯಲ್ಲಿ ದ್ರಾವಿಡ ಶೈಲಿಯ ನರಸಿಂಹ ದೇವಾಲಯವಿದೆ.

ನೆಲಮಂಗಲ ತಾಲ್ಲೂಕಿನ 'ನಿಜಗಲ್' ಹಿಂದೂ ಮುಸ್ಲಿಂರಿಗೆ ಪವಿತ್ರವಾದ ಸ್ಥಳ. ಸಿದ್ಧರದೊಣೆ ಮುಸ್ಲಿಂರಿಗೆ ಪವಿತ್ರ ಸ್ಥಳ. ಇಲ್ಲಿ ಹನ್ನೆರಡು ಅಡಿ ಎತ್ತರದ ವೀರಭದ್ರನ ವಿಗ್ರಹವಿದೆ. ಡಾ|| ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಅವರ 'ನಿಜಗಲ್ಲಿನ ರಾಣಿ' ಎಂಬ ನೀಳ್ಗತೆ ಹಾಗು ಆರ್. ಬಸವರಾಜ್ ಅವರ 'ಆತ್ಮಾಹುತಿ' ಎಂಬ ಕೃತಿಗಳು ಇಲ್ಲಿನ ಕಿರಿಯ ರಾಣಿಯ ತ್ಯಾಗಮಯ ಜೀವನವನ್ನು ಕುರಿತಂತಿವೆ. 'ದಕ್ಷಿಣ ಕಾಶಿ' ಎಂದು ಖ್ಯಾತವಾಗಿರುವ 'ಶಿವಗಂಗೆ'ಯಲ್ಲಿ ಎಂಟು ತೀರ್ಥಗಳಿದ್ದು ಅದರಲ್ಲಿ 'ಪಾತಾಳಗಂಗೆ' ಪ್ರಮುಖವಾದುದು. ಇಲ್ಲಿನ ದೇವಸ್ಥಾನಗಳಲ್ಲಿ ಗಂಗಾಧರೇಶ್ವರ ಹಾಗು ಹೊನ್ನಾದೇವಿ ದೇವಾಲಯಗಳು ಪ್ರಮುಖವಾದವು.

ಹುತ್ತದಲ್ಲಿದ್ದ ಆದಿನಾರಾಯಣಸ್ವಾಮಿಗೆ ಪ್ರತಿನಿತ್ಯ ಹಸುವೊಂದು 'ದೊಡ್ಡ ಬಳ್ಳದಷ್ಟು' ಹಾಲನ್ನು ಸುರಿಯುತ್ತಿತ್ತಂತೆ! ಆದ್ದರಿಂದ ಈ ಊರಿಗೆ 'ದೊಡ್ಡಬಳ್ಳಾಪುರ' ಎಂಬ ಹೆಸರು ಬಂತೆಂದು ದಂತಕತೆಯಿದೆ. ಕರ್ನಾಟಕದ ಮ್ಯಾಂಚೆಸ್ಟರ್ ಎಂದು ಹೆಸರಾಗಿರುವ ದೊಡ್ಡಬಳ್ಳಾಪುರದಲ್ಲಿ 'ನೇಯ್ಗೆ' ಮುಖ್ಯ ಕಸುಬು. ಇಲ್ಲಿ ಉತ್ಪಾದನೆಯಾಗುವ ಹತ್ತಿ ಮತ್ತು ರೇಷ್ಮೆ ಸೀರೆಗಳು ವಿದೇಶಕ್ಕೆ ರಫ್ತಾಗುತ್ತವೆ. ಸಾಹಿತಿಗಳಾದ ಪ್ರೊ|| ದೇನಾಶ್ರೀ, ಡಾ|| ಅರಳು ಮಲ್ಲಿಗೆ ಪಾರ್ಥಸಾರಥಿ ಈ ತಾಲ್ಲೂಕಿನವರು.

ದೇವನಹಳ್ಳಿಯಲ್ಲಿ ದ್ರಾವಿಡ ಶೈಲಿಯ ವೇಣುಗೋಪಾಲಸ್ವಾಮಿ ದೇವಸ್ಥಾನವಿದೆ. ಇದರ ಜೊತೆ ನಂಜುಂಡೇಶ್ವರ ಮತ್ತು ಸಿದ್ದೇಶ್ವರ ದೇವಾಲಯಗಳಿವೆ. ಮೈಸೂರು ಹುಲಿ ಟಿಪ್ಪು ಸುಲ್ತಾನ ಹುಟ್ಟಿದ್ದು ಇಲ್ಲಿಯೇ! ರೇಷ್ಮೆ ಇಲ್ಲಿನ ಪ್ರಮುಖ ಕೃಷಿ. ಅತ್ಯುತ್ತಮ ಚಕ್ಕೋತಹಣ್ಣು ಇಲ್ಲಿ ಬೆಳೆಯುತ್ತದೆ.

ವಿಜಯಪುರದಲ್ಲಿ ಕಂಚಿಶೈಲಿಯ ನಗರೇಶ್ವರ ಹಾಗು ಕೇಶವೇಶ್ವರ ದೇವಾಲಯಗಳಿವೆ.

ಕ್ರಿ.ಶ. 1595ರಲ್ಲಿ ತಮ್ಮೇಗೌಡ ಎಂಬ ಪಾಳೇಗಾರ ಇಲ್ಲಿ ಹೊಸದಾಗಿ ಕೋಟೆ ಹಾಗು ಕೆರೆ ಕಟ್ಟಿಸಿದ ಕಾರಣ ಇದಕ್ಕೆ 'ಹೊಸಕೋಟೆ' ಎಂಬ ಹೆಸರು ಬಂತೆಂದು ಹೇಳಲಾಗಿದೆ. ದ್ರಾವಿಡ ಶೈಲಿಯ 'ಆದಿ ಮುಕ್ತೇಶ್ವರ' ದೇವಾಲಯವಿದೆ. ಹೊಸಕೋಟೆ ಬಳಿ ಆಕಾಶವಾಣಿ ಪ್ರಸಾರ ಗೋಪುರವಿದೆ.

ಬೇತೂರಿನಲ್ಲಿ ದ್ರಾವಿಡ ಶೈಲಿಯ ಪುರಾತನ ನಾಗೇಶ್ವರ ದೇವಾಲಯವಿದೆ. ಅದರಲ್ಲಿ ನಾಗೇಶ್ವರ, ನಗರೇಶ್ವರ, ಚೋಳೇಶ್ವರ, ಕರ್ಣೇಶ್ವರ ಮತ್ತು ಕಮತೇಶ್ವರ ಎಂಬ ಐದು ಲಿಂಗಗಳಿವೆ.

ಯಲಹಂಕವನ್ನು ಚೋಳರ ಕಾಲದಲ್ಲಿ 'ಇಳೈಪಾಕ್ಕ' ಎಂದೂ, ಹೊಯ್ಸಳರ ಕಾಲದಲ್ಲಿ 'ಎಲಹಂಕ' ಎಂದೂ ಕರೆಯಲಾಗುತ್ತಿತ್ತು. ಕೆಂಪೇಗೌಡನ ವಂಶಸ್ಥನಾದ ಜಯಗೌಡ ಕ್ರಿ.ಶ. 1430ರಲ್ಲಿ ಇಲ್ಲಿಗೆ ಆಗಮಿಸಿದನು. ಈತನ ಸಂತತಿಯವರು 230 ವರ್ಷಗಳ ಕಾಲ ಇಲ್ಲಿ ಆಳಿದರು. ಇಲ್ಲಿ ವೇಣುಗೋಪಾಲಸ್ವಾಮಿ ದೇವಾಲಯವಿದೆ. 'ರಾಗಿಕಣಜ' ಎಂದು ಖ್ಯಾತವಾಗಿದ್ದ 'ಆನೇಕಲ್ಲ'ನ್ನು ಕ್ರಿ.ಶ. 1603ರಲ್ಲಿ ಸಗಟೂರು ವಂಶದ ಚಿಕ್ಕತಿಮ್ಮೇಗೌಡ ಸ್ಥಾಪಿಸಿದನು. ಇಲ್ಲಿನ ಚನ್ನಕೇಶವ ದೇವಾಲಯ ಅತ್ಯಂತ ಪ್ರಾಚೀನವಾದುದು.

18ನೆಯ ಶತಮಾನದಲ್ಲಿ ಹಾರಗದ್ದೆಯಲ್ಲಿದ್ದ ಕವಿಲಕ್ಷ್ಯ 'ಭಾರತ ರುಕ್ಮಾಂಗದ ಚರಿತ್ರೆ' ಎಂಬ ಕಾವ್ಯ ರಚಿಸಿದನು. ಬೆಂಗಳೂರಿಗೆ 16 ಮೈಲಿ ದೂರದಲ್ಲಿರುವ ರಾಮೋಹಳ್ಳಿಯಲ್ಲಿ ನಾಲ್ಕು ಶತಮಾನದಷ್ಟು ಹಳೆಯದಾದ ಆಲದ ಮರವಿದೆ. ಬನ್ನೇರುಘಟ್ಟದಲ್ಲಿರುವ 'ರಾಷ್ಟ್ರೀಯ ಅಭಯಾರಣ್ಯ' ಪ್ರವಾಸಿಗರ ಆಕರ್ಷಣೆಯ ಕೇಂದ್ರವಾಗಿದೆ.

ಬೆಂಗಳೂರು ನಗರ ಅನೇಕ ಸ್ಮಾರಕಗಳಿಗೆ ಕೇಂದ್ರಸ್ಥಾನವಾಗಿದೆ. ಹನುಮಂತನಗರದಲ್ಲಿನ ಗವಿಗಂಗಾಧರೇಶ್ವರ ದೇವಸ್ಥಾನ, ರಾಮ-ಹನುಮಂತರ ಮಿಲನವಿರುವ ಗುಡಿ, ಬಸವನಗುಡಿಯಲ್ಲಿರುವ ದೊಡ್ಡಬಸವಣ್ಣನ ವಿಗ್ರಹ ಹಾಗು ದೊಡ್ಡ ಗಣಪತಿ, ದೊಮ್ಮಲೂರಿನ ಚೋಳರ ಕಾಲದ ಲೋಕನಾಥ ದೇವಸ್ಥಾನ, ಅಲಸೂರು ಸೋಮೇಶ್ವರ ದೇವಸ್ಥಾನ ಮತ್ತು ಸುಬ್ರಹ್ಮಣ್ಯ ದೇವಸ್ಥಾನ, ಮಲ್ಲೇಶ್ವರಂನಲ್ಲಿರುವ ಕಾಡುಮಲ್ಲೇಶ್ವರ, ಕೆಂಪೇಗೌಡನಗರದ ರಂಗನಾಥಸ್ವಾಮಿ ದೇವಸ್ಥಾನ, ಮಾರ್ಕೆಟ್ ಹತ್ತಿರವಿರುವ ಕೋಟೆ ವೆಂಕಟರಮಣ ಹಾಗು ಆಂಜನೇಯ, ಅಲ್ಲೇ ಇರುವ ಟಿಪ್ಪು ಪ್ಯಾಲೇಸ್, ಧರ್ಮರಾಯನ ದೇವಸ್ಥಾನ, ಬಳೇಪೇಟೆಯ ಕಾಶಿ ವಿಶ್ವೇಶ್ವರ ದೇವಸ್ಥಾನ, ಕನಕಪುರ ರಸ್ತೆ ಬನಶಂಕರಿ ದೇವಾಲಯ, ರಾಗಿಗುಡ್ಡದ ಆಂಜನೇಯ, ಬ್ಯಾಟರಾಯನಪುರದ ಗಾಳಿ ಆಂಜನೇಯ, ಸಜ್ಜನ್‌ರಾವ್ ಸರ್ಕಲ್‌ನ ಸುಬ್ರಹ್ಮಣ್ಯ ದೇವಾಲಯ, ಮಹಾಲಕ್ಷ್ಮಿ ಲೇಔಟ್‌ನ ಇಸ್ಕಾನ್ ದೇವಾಲಯ-ಇವುಗಳು ಬೆಂಗಳೂರಿನ ಕೀರ್ತಿಯನ್ನು ಹೆಚ್ಚಿಸಿವೆ.

ಬೆಂಗಳೂರು ನಗರವೊಂದರಲ್ಲೇ ಸುಮಾರು ಒಂದುನೂರು ಚರ್ಚ್‌ಗಳಿವೆ. ಶಿವಾಜಿನಗರದಲ್ಲಿರುವ ಸೇಂಟ್ ಮೇರಿ ಬಾಸಿಲಿಕಾ ಚರ್ಚ್ ತುಂಬ ಪುರಾತನ ಹಾಗು ಸುಂದರ. ಸೇಂಟ್ ಫ್ರಾನ್ಸಿಸ್ ಕ್ಯಾಥಡ್ರಲ್ ಬೆಂಗಳೂರಿನ ಅತ್ಯಂತ ಪ್ರಾಚೀನ ಕ್ಯಾಥೋಲಿಕ್ ಚರ್ಚ್. ಅದನ್ನು 1850ರಲ್ಲಿ ಕಟ್ಟಲಾಯಿತು. ಅನಂತರ 1911ರಲ್ಲಿ ವಿಸ್ತರಿಸಲಾಯಿತು. ಚಾಮರಾಜಪೇಟೆಯಲ್ಲಿರುವ ಸೇಂಟ್ ಜೋಸೆಫ್ ಚರ್ಚನ್ನು 1857ರಲ್ಲಿ ಕಟ್ಟಲಾಗಿದೆ. 1969ರಲ್ಲಿ ಅದನ್ನು ನವೀಕರಿಸಲಾಗಿದೆ. 1908ರಲ್ಲಿ ಮಹಾತ್ಮಾಗಾಂಧಿ ರಸ್ತೆಯಲ್ಲಿ ಆಂಗ್ಲಿಕನ್‌ರಿಂದ ಕಟ್ಟಲಾಗಿರುವ ಪ್ರೊಟೆಸ್ಟೆಂಟರ್ ಪವಿತ್ರ ಟ್ರನಿಟಿ ಚರ್ಚ್, ಮಹಾನಗರಪಾಲಿಕೆಯ ಹತ್ತಿರ ಲಂಡನ್ ಮಿಷನ್‌ನವರಿಂದ 1904ರಲ್ಲಿ ಕಟ್ಟಲಾದ ಹಡ್ಸನ್ ಸ್ಮಾರಕ ಚರ್ಚ್, ಪ್ರೊಟೆಸ್ಟೆಂಟರ್ ಸೇಂಟ್ ಎಂಡ್ರ್ಯೂ ಚರ್ಚ್ ಮುಂತಾದವುಗಳು ಪುರಾತನ ಹಾಗು ಸುಂದರ ಚರ್ಚ್‌ಗಳಾಗಿವೆ.

ಬೆಂಗಳೂರು ನಗರವೊಂದರಲ್ಲೇ ನಾಲ್ಕುನೂರಕ್ಕೂ ಅಧಿಕ ಮಸೀದಿಗಳನ್ನು ಕಾಣಬಹುದು. ಕ್ರಿ.ಶ. 1687ರಲ್ಲಿ ಮೊಗಲರ ಕಾಲದಲ್ಲಿ ನಿರ್ಮಾಣವಾದ ಜಾಮಿಯಾ ಮಸೀದಿ ಅತ್ಯಂತ ಹಳೆಯದಾದ ಮಸೀದಿಗಳಲ್ಲಿ ಒಂದಾಗಿದೆ. ಮೊಗಲರ ಕಿಲ್ಲೇದಾರ ಇದನ್ನು ಕಟ್ಟಿಸಿದ. ಶಿವಾಜಿನಗರದಲ್ಲಿರುವ ಜುಮ್ಮಾಮಸೀದಿ ಕಂಟೋನ್‌ಮೆಂಟ್ ಏರಿಯಾದಲ್ಲಿ ಅತೀ ಪುರಾತನ ಮಸೀದಿ ಎಂದು ಹೇಳಲಾಗುತ್ತಿದೆ. ಕುಂಬಾರಪೇಟೆಯಲ್ಲಿರುವ ಇಬ್ರಾಹಿಂ ಶಹಾ ಸಹೆಲಾ ಮಸೀದಿಯನ್ನು 1761ರಲ್ಲಿ ಕಟ್ಟಲಾಗಿದೆ. ಸಿಟಿಮಾರ್ಕೆಟ್ ಹತ್ತಿರ ಇರುವ ಜಾಮಿಯಾ ಮಸೀದಿ ಗಾತ್ರದಲ್ಲಿ ಎಲ್ಲ ಮಸೀದಿಗಳನ್ನು ಮೀರಿಸುತ್ತದೆ. ಇದನ್ನು ಹೈದರಾಬಾದಿನ ಶಿಲ್ಪಿ ಪಯ್ಯಾಜ ಆಸಿಪುದ್ದೀನ್ ನಿರ್ಮಿಸಿದ್ದು, ಪ್ರಾರ್ಥನೆಗೆ ಐದು ಸಾವಿರ ಜನ ಒಟ್ಟಿಗೆ ಕುಳಿತುಕೊಳ್ಳುವ ಸ್ಥಳಾವಕಾಶವಿದೆ. 1940ರಲ್ಲಿ ದಿವಾನ್ ಮಿರ್ಜಾ ಇಸ್ಮಾಯಿಲ್ ಮಾರ್ಕೆಟ್ ಬಳಿ ಇರುವ ಮಸೀದಿ ನಿರ್ಮಾಣಕ್ಕೆ ಶಂಕುಸ್ಥಾಪನೆ ಮಾಡಿದ್ದರು.

ಚಿಕ್ಕಪೇಟೆಯ 'ದರ್ಗಾ' ಟಿಪ್ಪು ಸುಲ್ತಾನನ ಕಾಲದ್ದು. ಕಾಟನ್‌ಪೇಟೆಯಲ್ಲಿರುವ 'ದರ್ಗಾ' ಇಸ್ಲಾಂ ದೃಷ್ಟಿಯಿಂದ ಅತ್ಯಂತ ಪ್ರಾಮುಖ್ಯತೆ ಪಡೆದ ಸ್ಥಳವಾಗಿದೆ.

ಬೆಂಗಳೂರಿನಲ್ಲಿ ಹಲವಾರು ಸುಂದರ ಜೈನ ಮಂದಿರಗಳು ಇವೆ. ಜಯನಗರದ ಜೈನ ಮಂದಿರ ತುಂಬ ಸುಂದರವಾದದ್ದು.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಬೆಂಗಳೂರು ಜಿಲ್ಲೆ ಗಣನೀಯ ಕೊಡುಗೆ ಕೊಟ್ಟಿದೆ. 1913ರಲ್ಲಿ ಡಿ.ವಿ.ಜಿ. ಅವರು *'The Karnataka'* ಎಂಬ ದ್ವೈಮಾಸಿಕ ಆಂಗ್ಲಪತ್ರಿಕೆ ಹೊರತಂದು ಸ್ವಾತಂತ್ರ್ಯದ ಬಗ್ಗೆ ಜಾಗೃತಿ ಮೂಡಿಸಿದರು. 1915ರ ಫೆಬ್ರವರಿಯಲ್ಲಿ ಬೆಂಗಳೂರಿನಲ್ಲಿ ಗೋಪಾಲಕೃಷ್ಣ ಗೋಖಲೆ ಅವರ ನಿಧನಕ್ಕೆ ಏರ್ಪಡಿಸಿದ್ದ ಶ್ರದ್ಧಾಂಜಲಿ ಸಭೆಗೆ ಮಹಾತ್ಮಾಗಾಂಧೀಜಿ ಅವರು ಬಂದಿದ್ದರು. 1921ರಲ್ಲಿ ಮತ್ತೆ ಗಾಂಧೀಜಿ ಬೆಂಗಳೂರಿಗೆ ಭೇಟಿ ಕೊಟ್ಟಿದ್ದರು. ಪ್ರಖ್ಯಾತ ವಕೀಲರಾದ ಎಸ್.ಎಸ್. ಸೆಟ್ಲರ್ ಮೈಸೂರು ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. 1927ರ ಮಾರ್ಚ್‌ನಲ್ಲಿ ಮಹಾತ್ಮಗಾಂಧೀಜಿ ಅವರು ವಿಶ್ರಾಂತಿಗಾಗಿ ನಂದಿಬೆಟ್ಟಕ್ಕೆ ಆಗಮಿಸಿದ್ದರು. ಸುಮಾರು ನಾಲ್ಕೂವರೆ ತಿಂಗಳು ಮಹಾತ್ಮಗಾಂಧೀಜಿ ಅವರು ಮೈಸೂರು ಸಂಸ್ಥಾನದಲ್ಲಿದ್ದರು. ಪಾನನಿರೋಧ, ಅಸ್ಪೃಶ್ಯತಾ ನಿವಾರಣೆ ಹಾಗು ಖಾದಿ ಉದ್ಯಮಗಳಿಗೆ ಆ ಕಾಲದಲ್ಲಿ ಚಾಲನೆ ದೊರೆಯಿತು. 1934ರ ಜನವರಿಯಲ್ಲಿ ಗಾಂಧೀಜಿ ಅವರು ಹರಿಜನ ಕಲ್ಯಾಣಕ್ಕಾಗಿ ಮೈಸೂರು ಸಂಸ್ಥಾನಕ್ಕೆ ಭೇಟಿ ಕೊಟ್ಟಿದ್ದರು.

1938ರ ಶಿವಪುರದಲ್ಲಿ ನಡೆದ ಧ್ವಜ ಸತ್ಯಾಗ್ರಹ ಹಾಗು ಅದೇ ವರ್ಷ ನಡೆದ ಗೌರಿಬಿದನೂರಿನ ಬಳಿಯ ವಿದುರಾಶ್ವತ್ಥ ದುರ್ಘಟನೆ ಬೆಂಗಳೂರಿನಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಗೆ ಸ್ಫೂರ್ತಿ ನೀಡಿದವು.

1929ರಲ್ಲಿ ಬೆಂಗಳೂರಿನಲ್ಲಿ ನಡೆದ ಕೋಮುಗಲಭೆಯನ್ನು ವಿಚಾರಣೆ ಮಾಡಲು ನೇಮಿಸಿದ್ದ ಎಂ. ವಿಶ್ವೇಶ್ವರಯ್ಯ ಸಮಿತಿ ಇಂತಹ ಗಲಭೆ ನಡೆಯಲು ಜನಪ್ರತಿನಿಧಿಗಳು

ಹಾಗು ಸ್ಥಳೀಯರು ಆಡಳಿತದಲ್ಲಿ ಭಾಗವಹಿಸದಿರುವುದೇ ಕಾರಣವೆಂದು ಅಭಿಪ್ರಾಯಪಟ್ಟಿತು. 1930ರ ಸವಿನಯ ಶಾಸನ ಭಂಗ ಚಳವಳಿ ಹಾಗು 1942ರ "ಬ್ರಿಟೀಷರೇ ಭಾರತ ಬಿಟ್ಟು ತೊಲಗಿ" ಚಳವಳಿಯಲ್ಲಿ ಬೆಂಗಳೂರಿನ ನೂರಾರು ಯುವಕರು ಶಾಲಾಕಾಲೇಜು ಹಾಗು ಮನೆ ಮಠಗಳನ್ನು ತೊರೆದು ಧುಮುಕಿದರು.

1947ರ ಆಗಸ್ಟ್ 15ರಂದು ಭಾರತಕ್ಕೆ ಸ್ವಾತಂತ್ರ್ಯ ದೊರೆಯಿತು. ಆದರೂ ಮೈಸೂರು ಸಂಸ್ಥಾನದ ಅರಸರು ಭಾರತದ ಒಕ್ಕೂಟಕ್ಕೆ ಸೇರಿಕೊಳ್ಳಲು ಸಮ್ಮತಿಸಲಿಲ್ಲ. ಆಗ 'ಮೈಸೂರು ಚಲೋ' ಚಳವಳಿ ಕಾರಣವಾಗಿ 27-10-1947ರಲ್ಲಿ ಒಡೆಯರ ಆಳ್ವಿಕೆ ಅಂತಿಮಗೊಂಡು ಪ್ರಜಾಪ್ರಭುತ್ವ ಸರ್ಕಾರ ಮೊದಲಾಯಿತು. ಕೆ.ಸಿ. ರೆಡ್ಡಿ ರಾಜ್ಯದ ಮೊದಲ ಮುಖ್ಯಮಂತ್ರಿಗಳಾದರು.

ಬೆಂಗಳೂರು ಜಿಲ್ಲೆಯಲ್ಲಿ ಅನೇಕ ಸ್ವಾತಂತ್ರ್ಯ ಹೋರಾಟಗಾರರನ್ನು ಗುರುತಿಸಬಹುದು. ಇಡೀ ರಾಜ್ಯದ ಪ್ರಮುಖ ನಾಯಕರುಗಳು ಬೆಂಗಳೂರನ್ನೇ ಕೇಂದ್ರವಾಗಿಟ್ಟುಕೊಂಡು ತಮ್ಮ ಹೋರಾಟ ನಡೆಸಿದ ಪ್ರಸಂಗವಿದೆ. ಅಷ್ಟೇ ಅಲ್ಲ, ರಾಷ್ಟ್ರಮಟ್ಟದ ನಾಯಕರುಗಳಾದ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ, ಜವಹರಲಾಲ ನೆಹರು, ರಾಜಾಜಿ, ಕೆ. ಪಟ್ಟಾಭಿರಾಮಯ್ಯ, ಜಯಪ್ರಕಾಶ ನಾರಾಯಣ್, ಜೆ.ಬಿ. ಕೃಪಲಾನಿ ಮೊದಲಾದವರು ಬೆಂಗಳೂರಿಗೆ ಬಂದು ಜನಜಾಗೃತಿಯುಂಟು ಮಾಡಿದ್ದಾರೆ.

ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರೆಂದರೆ ಷಾ ಜಲೀಲ್‌ಚಂದ್, ಲಕ್ಷ್ಮೀಪತಿ ನಾಯಿಡು, ಸೀತಾಪತಿನಾಯಿಡು, ಕದರಿ ಗುಂಡೂರಾವ್, ವೆಂಕಟವರದಅಯ್ಯಂಗಾರ್, ಜಮಖಂಡಿ ಭೀಮರಾವ್, ಕೆ.ಜಿ. ಪುಷ್ಪವತಿ ಅಯ್ಯರ್, ರಾಮರಾವ್ ತಿವಾರಿ, ಹೆಚ್.ವಿ. ಸುಬ್ರಹ್ಮಣ್ಯಂ, ಸಂಪಂಗಿ ವೆಂಕಟಪತಯ್ಯ, ಎಂ.ಪಿ. ಸೋಮಶೇಖರರಾವ್, ಕೆ.ಟಿ. ಭಾಷ್ಯಂ, ಕೆ. ಶಾಮಣ್ಣ, ಎನ್. ವೆಂಕಟಾಚಲ ಅಯ್ಯಂಗಾರ್, ಎಲ್.ಎಸ್. ರಾಜು, ಹೆಚ್.ಕೆ. ವೀರಣ್ಣಗೌಡ, ತಿ.ತಾ. ಶರ್ಮ, ವಿ.ಎಸ್. ಸಂಜೀವರಾವ್, ಟಿ. ಸಿದ್ಧಲಿಂಗಯ್ಯ, ಬಿ.ಎಸ್. ರಾಮಸ್ವಾಮಿ, ಕೆ. ರಾಮರಾಜ ಅಯ್ಯಂಗಾರ್, ವಿ.ಎಸ್. ನಾರಾಯಣರಾವ್, ವಿ. ವೆಂಕಟಪ್ಪ, ನರಸಿಂಹಸ್ವಾಮಿ ಮೊದಲಿಯಾರ್, ಕೆ. ಹನುಮಂತಯ್ಯ, ರುಮಾಲೆ ಚನ್ನಬಸಪ್ಪ, ಎಸ್. ಸುಂದರ ಅಯ್ಯರ್, ಕೆ.ವಿ. ವೆಂಕಟರಾಮಯ್ಯ, ಪಿ. ನರಸಿಂಹರಾವ್ ನಾಯಿಡು, ಆರ್. ಕೃಷ್ಣಅಯ್ಯರ್, ವಿ.ಎಸ್. ಅರುಣಾಚಲಂ ಮೊದಲಿಯಾರ್, ಪಾಮಡಿ ಸುಬ್ರಹ್ಮಣ್ಯಶೆಟ್ಟಿ, ಹೆಚ್.ವಿ. ಸೂರ್ಯನಾರಾಯಣರಾವ್, ಎನ್.ಡಿ. ಶಂಕರ್, ಕೆ. ರಾಮಸ್ವಾಮಿ, ಕೆ.ವಿ. ವಸಂತಯ್ಯ, ದೀನದಯಾಳುನಾಯಿಡು, ಮಹಾದೇವಶಾಸ್ತ್ರಿ, ಎನ್.ಸಿ. ತಿಮ್ಮರೆಡ್ಡಿ, ತಾಳಿಕೆರೆ ಸುಬ್ರಹ್ಮಣ್ಯಂ, ಮಳವಳ್ಳಿ ವೀರಪ್ಪ, ಹೆಚ್.ಎಸ್. ದೊರೆಸ್ವಾಮಿ, ವೈ. ರಾಮಚಂದ್ರ, ಕೆ. ದೇವಯ್ಯ, ಪ್ರೇಮಚಂದ್ರ, ಎಂ.ಹೆಚ್. ಷಾ ಹಾಗು ಎಂ.ಸಿ. ವೇಣುಗೋಪಾಲ್ ಮುಂತಾದವರು.

ಬೆಂಗಳೂರು ಅನೇಕ ರಾಜಕೀಯ ಮುತ್ಸದ್ದಿಗಳನ್ನು ರಾಷ್ಟ್ರಕ್ಕೆ ಕೊಟ್ಟಿದೆ. ಅವರುಗಳಲ್ಲಿ ಜನಪ್ರತಿನಿಧಿಗಳಾಗಿದ್ದ ಕೆಲವರನ್ನು ನೆನಪಿಸಿಕೊಳ್ಳಬಹುದು. ಎನ್. ಕೇಶವ ಅಯ್ಯಂಗಾರ್, ಟಿ. ಮಾದಯ್ಯಗೌಡ, ಹೆಚ್.ಸಿ. ದಾಸಪ್ಪ, ಕೆಂಗಲ್ ಹನುಮಂತಯ್ಯ, ಕೆ.ಎಸ್. ಹೆಗಡೆ, ಎಂ.ವಿ. ರಾಜಶೇಖರನ್, ಟಿ.ಆರ್. ಶಾಮಣ್ಣ, ಕರಿಯಪ್ಪಗೌಡ, ವಿ.ಎಸ್. ಕೃಷ್ಣಯ್ಯರ್, ಡಾ॥ ಕೆ. ವೆಂಕಟಗಿರಿಗೌಡ, ಆರ್. ಗುಂಡೂರಾವ್, ಅನಂತಕುಮಾರ್, ಸಿ.ಕೆ. ಜಾಫರ್‌ಷರೀಫ್, ಆರ್.ಎಲ್. ಜಾಲಪ್ಪ, ಎಂ.ವಿ. ಚಂದ್ರಶೇಖರಮೂರ್ತಿ, ರಾಮಕೃಷ್ಣ ಹೆಗಡೆ, ಹೆಚ್.ಡಿ. ದೇವೇಗೌಡ, ಆರ್. ಅನಂತರಾಮನ್, ಪಿ.ಆರ್. ರಾಮಯ್ಯ, ಬಿ.ಎಂ. ಸೀನಪ್ಪ, ಎಂ. ಪಳನಿಯಪ್ಪ, ಕೆ.ಬಿ. ಭೈರೇಗೌಡ, ಡಿ.ಎಂ. ಗೋವಿಂದರಾಜು, ಎ.ಬಿ. ಹನುಮಂತರಾಯ, ಎಸ್. ಸಿದ್ಧಪ್ಪ, ಎ.ಟಿ. ನರಸಿಂಹರೆಡ್ಡಿ, ವಾಟಾಳ್ ನಾಗರಾಜ್, ಬಿ.ಟಿ. ಕೆಂಪರಾಜ್, ಲಕ್ಷ್ಮೀದೇವಿ ರಾಮಣ್ಣ, ಹೆಚ್.ಟಿ. ಪುಟ್ಟಪ್ಪ, ಕೆ.ಜಿ. ತಿಮ್ಮೇಗೌಡ, ಎಸ್. ಕರಿಯಪ್ಪ, ವಿ. ವೆಂಕಟಪ್ಪ, ಟಿ. ಪಾರ್ಥಸಾರಥಿ, ಶ್ರೀಮತಿ ನಾಗರತ್ನಮ್ಮ ಹಿರೇಮಠ, ಜಿ.ಇ. ಹೂಗಾರ್, ಪ್ರಭಾಕರರೆಡ್ಡಿ, ಎಲ್.ಎಸ್. ವೆಂಕಟಾಜಿರಾವ್, ವಿ.ಪಿ. ದಯಾನಂದ ನಾಯಿಡು, ಜಿ. ಅಪ್ಪಾಜಿ, ಶ್ರೀಮತಿ ಗ್ರೇಸಿ ಟಕ್ಕರ್, ಮಹಮ್ಮದ್ ಷರೀಫ್, ಬಿ. ಚನ್ನಭೈರೇಗೌಡ, ಎಸ್.ಆರ್. ರಾಮಯ್ಯ, ರುಕ್ಮಿಣಿಯಮ್ಮ, ಆಲೂರು ಹನುಮಂತಪ್ಪ, ಎಲ್.ಎಂ. ಹನುಮಂತಯ್ಯ, ಬಿ. ಪುಟ್ಟಸ್ವಾಮಯ್ಯ, ಬಿ. ಸಿಂಗಾರಿಗೌಡ, ಬಿ.ಕೆ. ಪುಟ್ಟರಾಮಯ್ಯ, ಕೆ.ಎಂ. ನಾಗಣ್ಣ, ಎಂ. ಲಿಂಗೇಗೌಡ, ಬಿ. ಬಸವಲಿಂಗಪ್ಪ, ಕೆ. ಪ್ರಭಾಕರ, ಜೆ.ಟಿ. ರಾಮಸ್ವಾಮಿರೆಡ್ಡಿ, ಟಿ.ಡಿ. ಮಾರಣ್ಣ, ಕೆ. ದೇವಯ್ಯ, ಕೆ. ಶ್ರೀರಾಮುಲು, ಎಸ್. ಚಿಕ್ಕೇಗೌಡ, ಪ್ರೊ॥ ಎ. ಲಕ್ಷ್ಮೀಸಾಗರ್, ಡಾ॥ ಜೀವರಾಜಆಳ್ವ, ಅಂಜನಮೂರ್ತಿ, ಬಿ.ಎನ್. ಬಚ್ಚೇಗೌಡ, ಸಿ.ಆರ್. ರಂಗೇಗೌಡ, ಎಂ.ಎಸ್. ಕೃಷ್ಣನ್, ಮಳ್ಳೂರು ಆನಂದರಾವ್, ಎ.ಕೆ. ಅಬ್ದುಲ್ ಸಮದ್, ಶ್ರೀಮತಿ ಪದ್ಮಾವತಿ ವಿಠಲರಾವ್, ವೈ. ರಾಮಕೃಷ್ಣ, ಆರ್. ರಘುಪತಿ, ಪಿ.ಜಿ.ಆರ್. ಸಿಂಧ್ಯಾ, ಜಿ. ರಾಮೇಗೌಡ, ಎಂ. ಕೃಷ್ಣಪ್ಪ, ಪಿ. ರಾಮದೇವ್, ಎಂ. ಚಂದ್ರಶೇಖರ್, ಹೆಚ್.ಜಿ. ಚನ್ನಪ್ಪ, ಎಸ್.ಎಂ. ಯಹ್ಯಾ, ಸಿ. ಬೋರಯ್ಯ, ಜಯಪ್ರಕಾಶ ನಾರಾಯಣ, ಡಿ.ಕೆ. ಶಿವಕುಮಾರ್, ಎಸ್. ರಮೇಶ್, ಮೈಕಲ್ ಫರ್ನಾಂಡಿಸ್, ಆರ್.ಎಲ್. ಜಾಲಪ್ಪ, ಕೆ.ಜಿ. ಶ್ರೀನಿವಾಸಮೂರ್ತಿ, ರೋಷನ್‌ಬೇಗ್, ಡಿ. ಕೋಸಲಿಂಗಂ, ಹೆಚ್.ಡಿ. ರೇವಣ್ಣ, ರಾಮಲಿಂಗಾರೆಡ್ಡಿ, ಎಂ.ಆರ್. ಜಯರಾಮ್, ಕೆ.ಎಲ್. ಶಿವಲಿಂಗೇಗೌಡ, ಆರ್.ಕೆ. ಪ್ರಸಾದ್, ಎನ್. ಸುರೇಶ್‌ಕುಮಾರ್, ಹೆಚ್.ಎನ್. ನಂಜೇಗೌಡ, ಅಶ್ವತ್ಥನಾರಾಯಣರೆಡ್ಡಿ, ಸಿ.ಎಂ. ಲಿಂಗಪ್ಪ, ವಿ. ಕೃಷ್ಣಪ್ಪ, ಎ.ಕೆ. ಅನಂತಕೃಷ್ಣನ್, ಬಿ.ಎಸ್. ಬಚ್ಚೇಗೌಡ, ರಾಜಣ್ಣ, ಡಾ. ಶಂಕರನಾಯಕ್, ಪ್ರಮೀಳನೇಸರ್ಗಿ, ಆರ್.ವಿ. ದೇವರಾಜ್, ಮುನಿನರಸಿಂಹಯ್ಯ, ಓಬಣ್ಣರಾಜು, ವಿ. ಸೋಮಣ್ಣ, ಎ. ಕೃಷ್ಣಪ್ಪ, ದಿನೇಶ್‌ಗುಂಡೂರಾವ್, ಸುಬ್ಬಾರೆಡ್ಡಿ ಮುಂತಾದವರು.

ಬೆಂಗಳೂರು ಕರ್ನಾಟಕದ ಸಾಂಸ್ಕೃತಿಕ ರಾಜಧಾನಿಯೆಂದೇ ಪ್ರಸಿದ್ಧವಾಗಿದೆ. ಕಳೆದ ಐದು ದಶಕಗಳಿಂದ ರಾಮೋತ್ಸವ ಸಂದರ್ಭಗಳಲ್ಲಿ ನಡೆಯುವ ಸಂಗೀತೋತ್ಸವಕ್ಕೆ ರಾಷ್ಟ್ರದ ಪ್ರಖ್ಯಾತ ಸಂಗೀತ ವಿದ್ವಾಂಸರು ಆಗಮಿಸುತ್ತಾರೆ. ಸರ್. ಪುಟ್ಟಣ್ಣಚೆಟ್ಟಿ ಅವರ ಹೆಸರಿನ ಪುರಭವನ, ರವೀಂದ್ರ ಕಲಾಕ್ಷೇತ್ರ, ಯವನಿಕಾ, ಗುರುನಾನಕ್ ಭವನ, ಗಾಯನಸಮಾಜ, ಗುಬ್ಬಿವೀರಣ್ಣ ಕಲಾಮಂದಿರ, ಚೌಡಯ್ಯ ಸ್ಮಾರಕ ಕಲಾಭವನ, ಡಾ॥ ಹೆಚ್. ನರಸಿಂಹಯ್ಯ ಕಲಾಭವನ, ಅಂಬೇಡ್ಕರ್ ಭವನ, ಎಡಿಎ ರಂಗಮಂದಿರ-ಇವುಗಳು ಬೆಂಗಳೂರು ನಗರದ ಸಾಂಸ್ಕೃತಿಕ ಕೇಂದ್ರಗಳಾಗಿವೆ. ಇದರ ಹಿನ್ನಲೆಯಲ್ಲಿ ಬೆಂಗಳೂರು ಜಿಲ್ಲೆಯ ಸಾಂಸ್ಕೃತಿಕ ಪರಂಪರೆಯನ್ನು ಪರಿಶೀಲಿಸಬಹುದು.

ಕ್ರಿ.ಶ. 1570ರ ಗುರು ನಂಜೇಶನ 'ಕೆಂಪೇಗೌಡ ಜಯಶ್ರುತಿ' ಕಾವ್ಯ ಪ್ರಮುಖವಾದುದು. 1961ರಲ್ಲಿ ಇದನ್ನು ಕರಮಂಗಲ ಶ್ರೀಕಂಠಯ್ಯ ಅವರು 'ಕೆಂಪೇಗೌಡ ಪ್ರಶಸ್ತಿ' ಎಂಬ ಹೆಸರಿನಲ್ಲಿ ಸಂಪಾದಿಸಿದ್ದಾರೆ. ಷಹಜಿಯ ಆಶ್ರಯದಾತ ಕವಿ ಜಯರಾಮ ಪಿಂಡಾ ಸಂಸ್ಕೃತದಲ್ಲಿ 'ರಾಧಾಮಾಧವ ವಿಲಾಸಂ' ಎಂಬ ಚಂಪೂಕಾವ್ಯ ರಚಿಸಿದ್ದಾನೆ. ಕ್ರಿ.ಶ. 1871ರಲ್ಲಿ ಆನೇಕಲ್ ತಾಲ್ಲೂಕು ಜಿಗಣಿ ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳು ನಿಜಗುಣ ಶಿವಯೋಗಿ ಅವರ 'ವಿವೇಕ ಚಿಂತಾಮಣಿ' ಎಂಬ ಗ್ರಂಥ ಪ್ರಕಟಿಸಿದ್ದರು.

19ನೆಯ ಶತಮಾನದ ಪ್ರಾರಂಭದಲ್ಲಿ ಬೆಂಗಳೂರಿನಲ್ಲಿದ್ದ ವೀರಶೈವ ಮಠಗಳು ಶೈಕ್ಷಣಿಕ ಮತ್ತು ಸಾಹಿತ್ಯಿಕ ಕೈಂಕರ್ಯ ಕೈಗೊಂಡಿವೆ. ಪಂಡಿತ ಬಿ. ಶಿವಮೂರ್ತಿಶಾಸ್ತ್ರಿ ಈ ದಿಸೆಯಲ್ಲಿ ಅಮೂಲ್ಯ ಕೆಲಸ ಮಾಡಿದ್ದಾರೆ.

ಕ್ರಿ.ಶ. 1900ರಲ್ಲಿ ತುಮಕೂರು ಜಿಲ್ಲೆಯ ದೇವರಾಯನದುರ್ಗದಲ್ಲಿ ದಾಸಕೂಟ ಸಭಾ ಪ್ರಾರಂಭಿಸಿದ 'ಮುದ್ದು ಮೋಹನ ವಿಠಲ' ಅಂಕಿತದ ನರಸೀಪುರದ ಸುಬ್ಬರಾವ್ 1912ರಲ್ಲಿ ಬೆಂಗಳೂರಿಗೆ ಆಗಮಿಸಿ ದಾಸಸಾಹಿತ್ಯದ ಪ್ರಸಿದ್ಧಿಗೆ ಕಾರಣರಾದರು. ಡಾ॥ ಎನ್.ಎಸ್. ಅನಂತರಂಗಾಚಾರ್ ಪ್ರಸಿದ್ಧ ಸಂಸ್ಕೃತ ವಿದ್ವಾಂಸರು. ಡಾ॥ ಬಿ.ಎಲ್. ಕೃಷ್ಣಮೂರ್ತಿ, ಡಾ॥ ಸಿ.ಎಲ್. ಪ್ರಭಾಕರ, ಪ್ರೊ॥ ಎಂ.ಕೆ. ನಾರಾಯಣರಾವ್, ಪ್ರೊ॥ ಎಸ್.ಕೆ. ರಾಮಚಂದ್ರರಾವ್, ಡಾ॥ ಕೆ.ಟಿ. ಪಾಂಡುರಂಗಿ, ಡಾ॥ ಪ್ರಭಂಜನಾಚಾರ್ಯ, ಡಾ॥ ಕೆ. ರಾಜಗೋಪಾಲಾಚಾರ್, ಕೆ. ಕೃಷ್ಣಜೋಯಿಸ್ ಮೊದಲಾದ ಸಂಸ್ಕೃತ ವಿದ್ವಾಂಸರು ಬೆಂಗಳೂರಿನಲ್ಲಿ ನೆಲಸಿದ್ದಾರೆ.

ಕ್ರಿ.ಶ. 1840ರಲ್ಲಿ ಜಾನ್ ಹ್ಯಾರೆಟ್ ಎಂಬಾತ ಬೆಂಗಳೂರಿನಲ್ಲಿ ನೆಲೆಸಿ ಈ ಮಣ್ಣಿನ ಸಾಹಿತ್ಯ ಸಂಸ್ಕೃತಿಗಳ ಪುರೋಭಿವೃದ್ಧಿಗೆ ಉತ್ತಮ ಕೆಲಸ ಮಾಡಿದ್ದಲ್ಲದೆ ಮುದ್ರಣಾಲಯವನ್ನು ತೆರೆದನು. ಬಿ.ಎಲ್. ರೈಸ್ ಕನ್ನಡ ನಾಡಿನ ಪ್ರಾತಃಸ್ಮರಣೀಯರು. ಕನ್ನಡ ನಾಡಿನ ಸಾಹಿತ್ಯ, ಶಾಸನ, ಇತಿಹಾಸ ಹಾಗು ಗ್ಯಾಸೆಟಿಯರ್ ರಚನೆಗೆ ಅವರು ಕೊಟ್ಟ ಕೊಡುಗೆ ಅನನ್ಯವಾದುದು. 1915ರಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರ ಮಾರ್ಗದರ್ಶನದಲ್ಲಿ 'ಬೆಂಗಳೂರು ಮುದ್ರಣಾಲಯ' ಪ್ರಾರಂಭವಾಯಿತು.

ಬೆಂಗಳೂರು ನಗರ ಹಾಗೂ ಗ್ರಾಮಾಂತರ ಪ್ರದೇಶಗಳಿಂದ ಅನೇಕ ಸಾಹಿತಿಗಳು ಹೊರಬಂದಿದ್ದಾರೆ. ಪ್ರೊ. ವಿ.ಸೀ., ಡಾ. ಸಿ.ಕೆ. ವೆಂಕಟರಾಮಯ್ಯ, ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿಗಳಾದ ಡಾ. ದೇ. ಜವರೇಗೌಡ, ಪ್ರೊ. ಎಲ್. ಎಸ್. ಶೇಷಗಿರಿರಾವ್, ಪ್ರಸಿದ್ಧ ಸಂಶೋಧಕರಾದ ಟಿ.ವಿ. ವೆಂಕಟಾಚಲಶಾಸ್ತ್ರೀ, ಪ್ರೊ. ಕಾಳೇಗೌಡನಾಗವಾರ, ಪ್ರೊ. ಕೆ.ಎಸ್. ನಿಸಾರ್ ಅಹಮದ್, ಡಾ. ಟಿ.ಆರ್. ನಾಗರಾಜ್, ದಲಿತ ಕವಿ ಡಾ. ಸಿದ್ಧಲಿಂಗಯ್ಯ, ಚಕ್ಕೆರೆ ಶಿವಶಂಕರ್, ಕಾದಂಬರಿಕಾರರಾದ ಟಿ.ಕೆ. ರಾಮರಾವ್ ಮೊದಲಾದವರ ಹೆಸರನ್ನು ಉಲ್ಲೇಖಿಸಬಹುದು.

ಬೆಂಗಳೂರಿನಲ್ಲಿ ನೆಲೆಸಿದ ಹಿರಿಯ ಸಾಹಿತಿಗಳೆಂದರೆ : ಡಾ|| ಡಿವಿಜಿ, ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್, ಹೆಚ್.ವಿ. ನಂಜುಂಡಯ್ಯ, ಎಂ.ಆರ್. ಶ್ರೀನಿವಾಸಮೂರ್ತಿ, ಡಾ|| ತಿ.ತಾ. ಶರ್ಮ, ಸಿ. ಹಯವನದರಾವ್, ಡಿ.ಕೆ. ಭಾರದ್ವಾಜ್, ಡಾ|| ಅನಕೃ, ಡಾ|| ಎ.ಆರ್. ಕೃಷ್ಣಶಾಸ್ತ್ರೀ, ಡಾ|| ಎ.ಎಸ್. ಮೂರ್ತಿರಾವ್, ಸಿದ್ಧವನಳ್ಳಿ ಕೃಷ್ಣಶರ್ಮ, ನಿರಂಜನ, ವೀರಕೇಸರಿ ಸೀತಾರಾಮಶಾಸ್ತ್ರಿ, ಬೀಚಿ, ಎಂ. ರಾಮಮೂರ್ತಿ, ಕೆ.ಎಸ್. ನರಸಿಂಹಸ್ವಾಮಿ, ಪ್ರೊ|| ತೀನಂಶ್ರೀ, ಎಂ.ಕೆ. ಇಂದಿರಾ, ಡಾ|| ಎಂ. ಗೋಪಾಲಕೃಷ್ಣ ಅಡಿಗ, ಡಾ|| ಗೊರೂರು ರಾಮಸ್ವಾಮಿ ಅಯ್ಯಂಗಾರ್, ಡಾ|| ಹಂಪನಾ ದಂಪತಿಗಳು ಡಾ|| ವಿ.ಕೃ. ಗೋಕಾಕ್, ಡಾ|| ಯು.ಆರ್. ಅನಂತಮೂರ್ತಿ, ಪಿ. ಲಂಕೇಶ್, ಡಾ|| ಗಿರೀಶ್ ಕಾರ್ನಾಡ್, ಪ್ರೊ|| ಬಿ.ಸಿ. ರಾಮಚಂದ್ರಶರ್ಮ, ಪರ್ವತವಾಣಿ, ಜಿ. ನಾರಾಯಣ್, ಎನ್. ಬಸವಾರಾಧ್ಯ, ಡಾ|| ಹೆಚ್.ಕೆ. ರಂಗನಾಥ್, ನಿಟ್ಟೂರು ಶ್ರೀನಿವಾಸರಾವ್, ಡಾ|| ಹೆಚ್. ಎಲ್. ನಾಗೇಗೌಡ, ಪ್ರೊ|| ಎಂ.ವಿ. ಸೀತಾರಾಮಯ್ಯ, ಟಿ.ಎಸ್. ರಾಮಚಂದ್ರರಾವ್, ಖಾದ್ರಿಶಾಮಣ್ಣ, ಶ್ರೀಮತಿ ಉಷಾನವರತ್ನರಾಮ್, ಪ್ರೊ|| ಚಂದ್ರಶೇಖರ ಪಾಟೀಲ, ಪ್ರೊ|| ಜಿ.ಎಸ್. ಅಮೂರ, ಶ್ರೀಮತಿ ಅನುಪಮನಿರಂಜನ, ಪ್ರೊ|| ಎಂ.ಹೆಚ್. ಕೃಷ್ಣಯ್ಯ, ಪ್ರೊ|| ಅ.ರಾ. ಮಿತ್ರ, ಡಾ|| ಪಿ.ಎಸ್. ರಾಮಾನುಜಂ, ಡಾ|| ಸೂರ್ಯನಾಥ ಕಾಮತ್, ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯಂ, ಶೂದ್ರಶ್ರೀನಿವಾಸ, ಬಿ.ವಿ. ವೈಕುಂಠರಾಜು, ಪ್ರೊ|| ಬರಗೂರು ರಾಮಚಂದ್ರಪ್ಪ, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಡಾ|| ಹೆಚ್.ಎಸ್. ವೆಂಕಟೇಶಮೂರ್ತಿ, ಡಾ|| ಸುಮತೀಂದ್ರನಾಡಿಗ, ಡಾ|| ನಿರುಪಮಾ, ಎಸ್.ವಿ. ಶ್ರೀನಿವಾಸರಾವ್, ಕಲಾವಿದ ಕಮಲೇಶ್, ಚಂದ್ರನಾಥ ಆಚಾರ್ಯ, ಶ್ರೀಪಾದ ಹೀಗೆ ಅನೇಕ ಸೃಜನಶೀಲ ಪ್ರತಿಭಾವಂತರನ್ನು ಕಾಣಬಹುದು.

ಕನ್ನಡದ ಮೇರುನಟ ಡಾ|| ರಾಜಕುಮಾರ್ ಇಲ್ಲಿಯೇ ನೆಲೆಸಿದ್ದಾರೆ. ಪ್ರಸಿದ್ಧ ರಂಗಕರ್ಮಿಗಳಾದ ಪ್ರಸನ್ನ, ಮಾಸ್ಟರ್ ಹಿರಣ್ಣಯ್ಯ, ಸಿಜಿಕೆ, ಆರ್. ನಾಗೇಶ್, ಎ.ಎಸ್. ಮೂರ್ತಿ, ಬಿ.ವಿ. ಕಾರಂತ, ಟಿ.ಎನ್. ಸೀತಾರಾಂ, ಡಾ|| ವಿಜಯಾ, ರಾಜ್ಯದ ತೋಟಗಾರಿಕೆ

ಇಲಾಖೆಯ ರೂವಾರಿ ದಿವಂಗತ ಡಾ|| ಎಂ.ಹೆಚ್. ಮರಿಗೌಡ, ಕೃಷಿವಿಜ್ಞಾನಿ ಆರ್. ದ್ವಾರಕೀನಾಥ್, ಡಾ|| ಜಿ.ಕೆ. ವೀರೇಶ್, ಅರ್ಥಶಾಸ್ತ್ರಜ್ಞರಾದ ಡಾ|| ಡಿ.ಎಂ. ನಂಜುಂಡಪ್ಪ ಮೊದಲಾದವರು ಇಲ್ಲಿ ನೆಲೆಸಿದ್ದಾರೆ.

ಕನ್ನಡದ ಪ್ರಸಿದ್ಧ ಕ್ರೀಡಾಪಟುಗಳಾದ ಪ್ರಸನ್ನ, ಚಂದ್ರಶೇಖರ್, ಜೆ.ಆರ್. ವಿಶ್ವನಾಥ್, ಬ್ರಿಜೇಶ್ ಪಟೇಲ್, ಸುಧಾಕರರಾವ್, ಜಯಪ್ರಕಾಶ್, ಕಿರ್ಮಾನಿ, ರೋಜರ್ ಬಿನ್ನಿ, ಅನಿಲ್‌ಕುಂಬ್ಳೆ, ವೆಂಕಟೇಶ ಪ್ರಸಾದ್, ರಾಹುಲ್ ದ್ರಾವಿಡ್, ವಿಜಯಭಾರದ್ವಾಜ್, ಬ್ಯಾಂಟ್‌ಮಿಟನ್ ಪಟು ಪ್ರಕಾಶ್ ಪಡುಕೋಣೆ, ಅಥ್ಲೆಟಿಕ್‌ಗಳಾದ ರೀತ್ ಅಬ್ರಹಾಂ, ಅಶ್ವಿನಿ ನಾಚಪ್ಪ, ಅಂತರರಾಷ್ಟ್ರೀಯ ಮಟ್ಟದ ಹಾಕಿ ಪಟು ಕೆ. ಗಣೇಶ್, ಅರ್ಜುನ ಪ್ರಶಸ್ತಿ ವಿಜೇತೆ ಅಂಗವಿಕಲ ಕ್ರೀಡಾಪಟು ಮಾಲತಿಹೊಳ್ಳ ಮೊದಲಾದವರು ಬೆಂಗಳೂರಿನ ಕೀರ್ತಿಯನ್ನು ಹೆಚ್ಚಿಸಿದ್ದಾರೆ.

ಬೆಂಗಳೂರಿನ ಅಂತರರಾಷ್ಟ್ರೀಯ ವಿದ್ವಾಂಸರಾದ ಪಿ. ಕೋದಂಡರಾವ್, ಎಸ್.ಎನ್. ಸೆಟ್ಲರ್, ಪ್ರೊ|| ಓ.ಕೆ. ನಂಬಿಯಾರ್, ಡಾ|| ಆರ್.ಆರ್. ದಿವಾಕರ್, ಪ್ರೊ|| ವಿ.ಕೆ.ಆರ್.ವಿ. ರಾವ್, ಡಾ|| ಪಿ.ಆರ್. ಬ್ರಹ್ಮಾನಂದ, ಡಾ|| ವೆಂಕಟಗಿರಿಗೌಡ, ಡಾ|| ಜಿ. ತಿಮ್ಮಯ್ಯ, ಡಾ|| ಎಂ.ವಿ. ನಾಡಕರ್ಣಿ, ಡಾ|| ರಾಜಾರಾಮಣ್ಣ, ಸಮಾಜಶಾಸ್ತ್ರಜ್ಞರಾದ ಡಾ|| ಎಂ.ಎನ್. ಶ್ರೀನಿವಾಸ್, ಡಾ|. ಯು. ಆರ್. ರಾವ್, ಸುಪ್ರೀಂಕೋರ್ಟ್‌ನ ಮುಖ್ಯ ನ್ಯಾಯಾಧೀಶರಾದ ಇ.ಎಸ್. ವೆಂಕಟರಾಮಯ್ಯ, ಪ್ರೊ|| ಸಿ.ಎನ್.ಆರ್. ರಾವ್, ಪ್ರೊ|| ಎಂ. ಬಷೀರ್ ಹುಸೇನ್, ರಾಷ್ಟ್ರದ ಮುಖ್ಯ ಚುನಾವಣಾಧಿಕಾರಿಯಾಗಿದ್ದ ಟಿ.ಎನ್. ಶೇಷನ್, ಇನ್‌ಫೋಸಿಸ್‌ನ ನಾರಾಯಣಮೂರ್ತಿ ಹಾಗೂ ಡಾ|| ಸುಧಾನಾರಾಯಣಮೂರ್ತಿ, ಶಕುಂತಲಾ ನರಸಿಂಹನ್, ಶಶಿ ದೇಶಪಾಂಡೆ, ದೇವಿಕಾರಾಣಿ ಮುಂತಾದವರು ಬೆಂಗಳೂರಿನಲ್ಲೇ ವಾಸಮಾಡಲು ನಿರ್ಧರಿಸಿದ್ದಾರೆ.

ರಾಜ್ಯದ ಹಿರಿಯ ರಾಜಕಾರಣಿ, ಮಾಜಿ ಮುಖ್ಯಮಂತ್ರಿ ರಾಮಕೃಷ್ಣಹೆಗಡೆ, ಮಹಾಕವಿ ಮತ್ತು ಮಾಜಿ ಮುಖ್ಯಮಂತ್ರಿ ಎಂ. ವೀರಪ್ಪ ಮೊಯ್ಲಿ, ಮಾಜಿ ಮುಖ್ಯಮಂತ್ರಿ ಎಸ್.ಆರ್. ಬೊಮ್ಮಾಯಿ, ಮಾಜಿ ಪ್ರಧಾನಿ ಹೆಚ್.ಡಿ. ದೇವೇಗೌಡ ಮುಂತಾದ ಮಹನೀಯರು ಬೆಂಗಳೂರಿನಲ್ಲಿಯೇ ನೆಲೆಸಿದ್ದಾರೆ.

ಮಾಜಿ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿ, ಮಾಜಿ ಉಪರಾಷ್ಟ್ರಪತಿ ಬಿ.ಡಿ. ಜತ್ತಿಯವರು ಕೂಡ ಬೆಂಗಳೂರಿನಲ್ಲಿಯೇ ನೆಲೆಸಿದ್ದರು.

ಭಾರತದ ಅನೇಕ ಮಹತ್ವದ ಘಟನೆಗಳಿಗೆ ಬೆಂಗಳೂರು ಸಾಕ್ಷಿಯಾಗಿರುವುದು ಅದರ ಮಹತ್ವ ಸಾರುತ್ತದೆ. ಅರವತ್ತರ ದಶಕದಲ್ಲಿ ದಕ್ಷಿಣ ಭಾರತ ಎಂದರೆ ಕೇವಲ 'ಮದ್ರಾಸ್' ಎಂಬ ಭಾವನೆಯಿತ್ತು. ಆದರೆ ಕನ್ನಡಿಗರು ತಮ್ಮ ಸಹಜ ವಿನಯ, ಸೌಜನ್ಯ ಹಾಗು

ಬುದ್ಧಿಶಕ್ತಿಗಳಿಂದ ರಾಷ್ಟ್ರದ ಗಮನ ಸೆಳೆದಿದ್ದಾರೆ. ಸಾಹಿತ್ಯ, ಸಂಸ್ಕೃತಿ, ಸಂಗೀತ, ಕ್ರೀಡೆ ಮೊದಲಾದ ವಿಚಾರಗಳಲ್ಲಿ ಬೆಂಗಳೂರಿನ ಸಾಧನೆ ಗಣನೀಯವಾದುದು. ಮಾಹಿತಿ ತಂತ್ರಜ್ಞಾನದಿಂದ ಹಿಡಿದು ರಾಜಕಾರಣದವರೆಗೆ ಬೆಂಗಳೂರು ದೇಶದಲ್ಲೇ ಗುರುತಿಸಬೇಕಾದ ಕೇಂದ್ರ ಸ್ಥಳವಾಗಿದೆ. ಭಾರತದ ನಾಳಿನ ಸಮಾಜ ಚಿಂತಿಸುವ ವಿಚಾರ ಮೊದಲು ಬೆಂಗಳೂರಿನ ಸಮಾಜದಲ್ಲಿ ಅರಳುತ್ತದೆಂಬ ಭಾವನೆ ರಾಷ್ಟ್ರದ ಬುದ್ಧಿಜೀವಿಗಳಲ್ಲಿ ಬೇರೂರಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯವರಾದ ದಕ್ಷಿಣ ಬೆಂಗಳೂರು ಲೋಕಸಭಾ ಕ್ಷೇತ್ರದಿಂದ ವಿಜಯಶಾಲಿಯಾಗುತ್ತಿದ್ದ ಕೆಂಗಲ್ ಹನುಮಂತಯ್ಯ ಅವರು ಲೋಕನಾಯಕ ಜಯಪ್ರಕಾಶ್ ನಾರಾಯಣ್ ಅವರಿಂದಲೇ 'ದಕ್ಷ ರೈಲ್ವೆ ಮಂತ್ರಿ' ಎನಿಸಿಕೊಂಡವರು.

ಏಕೀಕರಣದ ಶಿಲ್ಪಿ ಮಾಜಿ ಮುಖ್ಯಮಂತ್ರಿ ಸಿದ್ಧವನಹಳ್ಳಿ ನಿಜಲಿಂಗಪ್ಪ ಅವರು ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರಾಗಿದ್ದಾಗಲೇ ಕಾಂಗ್ರೆಸ್ ಅಧ್ಯಕ್ಷರಿಗೆ ಹಾಗೂ ಪ್ರಧಾನಿ ಇಂದಿರಾಗಾಂಧಿ ಅವರಿಗೆ ವೈಮನಸ್ಸುಂಟಾಯಿತು. ಆಗ ಪ್ರಧಾನಿ ಇಂದಿರಾಗಾಂಧಿ ಅವರು ಲಾಲ್‌ಬಾಗ್‌ನ ಗಾಜಿನಮನೆಯಲ್ಲಿ ಕಾಂಗ್ರೆಸ್ ಸಮ್ಮೇಳನ ನಡೆಸಿದರು. ಇದೇ ಕಾಂಗ್ರೆಸ್ ವಿಭಜನೆಯ ಕೇಂದ್ರಸ್ಥಳವಾಯಿತು. ಮೈಸೂರು ರಾಜ್ಯದ ರಾಜ್ಯಪಾಲರಾದ ವಿ.ವಿ. ಗಿರಿಯವರನ್ನು ರಾಷ್ಟ್ರಪತಿ ಸ್ಥಾನಕ್ಕೆ ಸ್ವತಂತ್ರ ಅಭ್ಯರ್ಥಿಯನ್ನಾಗಿಸಿ ನಿಲ್ಲಿಸಿ, ಆರಿಸಿ ತಂದ ಕೀರ್ತಿ ಅಂದಿನ ಪ್ರಧಾನಿ ಅವರಿಗೆ ಸಲ್ಲುತ್ತದೆ.

ಸುಪ್ರೀಂಕೋರ್ಟ್‌ನ ನ್ಯಾಯಾಧೀಶರಾಗಿದ್ದ ಕೆ.ಎಸ್. ಹೆಗಡೆ ಅವರನ್ನು ಜನತಾಪಕ್ಷದಿಂದ ಲೋಕಸಭೆಗೆ ಕಳುಹಿಸಿದ ಕೀರ್ತಿ ಬೆಂಗಳೂರು ದಕ್ಷಿಣ ಲೋಕಸಭಾ ಕ್ಷೇತ್ರದವರದು.

1977ರ ಲೋಕಸಭೆಯ ಸಾರ್ವತ್ರಿಕ ಚುನಾವಣೆಯಲ್ಲಿ ಉತ್ತರ ಪ್ರದೇಶದ 'ರಾಯ್ ಬರೇಲಿ'ಯಲ್ಲಿ ಇಂದಿರಾಗಾಂಧಿ ಅವರು ಸೋತಾಗ ಕರ್ನಾಟಕದ ಅಂದಿನ ಮುಖ್ಯಮಂತ್ರಿ ಡಿ. ದೇವರಾಜ ಅರಸು ಅವರು ಇಂದಿರಾಗಾಂಧಿ ಅವರಿಗೆ ರಾಜಕೀಯ ಪುನರ್‌ಜನ್ಮ ನೀಡಿದರು. ಆ ಸಮಯದಲ್ಲಿ ಇಂದಿರಾಗಾಂಧಿ ಅವರು ಸ್ವಲ್ಪಕಾಲ ದೊಡ್ಡಬಳ್ಳಾಪುರದಲ್ಲಿ ತಂಗಿದ್ದರು.

1980ರಲ್ಲಿ ಡಿ. ದೇವರಾಜ ಅರಸು ಅವರು ಇಂದಿರಾ ಕಾಂಗ್ರೆಸ್‌ನಿಂದ ಹೊರಬಂದು ಬೆಂಗಳೂರಿನಲ್ಲಿ ಬೃಹತ್ ರಾಜಕೀಯ ಸಮಾವೇಶ ನಡೆಸಿ ರೈತನಾಯಕರಾದ ಪ್ರಧಾನಿ ಚರಣ್ ಸಿಂಗ್ ಅವರ ಗಮನ ಸೆಳೆದಿದ್ದರು.

1986ರಲ್ಲಿ ಜನತಾದಳ ರಾಷ್ಟ್ರೀಯ ಬೃಹತ್ ಸಮಾವೇಶವನ್ನು ಬೆಂಗಳೂರಿನ ಅರಮನೆ ಮೈದಾನದಲ್ಲಿ ನಡೆಸಿದ ರಾಮಕೃಷ್ಣಹೆಗಡೆ, ವಿ.ಪಿ. ಸಿಂಗ್ ಅವರು ಪ್ರಧಾನಿಯಾಗಲು ವೇದಿಕೆ ಸಿದ್ಧಪಡಿಸಿದರು.

1995ರಲ್ಲಿ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಹೆಚ್.ಡಿ. ದೇವೇಗೌಡ ಅವರು ರಾಜ್ಯದಲ್ಲಿ ಹೆಚ್ಚು ಲೋಕಸಭಾ ಸ್ಥಾನಗಳನ್ನು ಗೆಲ್ಲಿಸಿ ರಾಷ್ಟ್ರದ ಅತ್ಯುನ್ನತ ಹುದ್ದೆಯಾದ ಪ್ರಧಾನಿ ಪಟ್ಟಕ್ಕೇರಿದರು.

2000ದಲ್ಲಿ ಪ್ರಸ್ತುತ ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಅವರು ಬೆಂಗಳೂರಿನಲ್ಲಿ 81ನೆಯ ಕಾಂಗ್ರೆಸ್ ಮಹಾಧಿವೇಶನವನ್ನು ನಡೆಸುವುದರ ಮೂಲಕ ರಾಷ್ಟ್ರೀಯ ನಾಯಕರೆಲ್ಲರೂ ಕರ್ನಾಟಕದತ್ತ ನೋಡುವಂತೆ ಮಾಡಿದರು.

## ಉಪ್ಪಾರ ಸಮಾಜ

ಬೆಂಗಳೂರಿನಲ್ಲಿ ಜರುಗಿದ ಇಲ್ಲವೇ ಜರುಗುತ್ತಿರುವ ರಾಷ್ಟ್ರೀಯ ಹಾಗು ಅಂತರ ರಾಷ್ಟ್ರೀಯ ಸಮ್ಮೇಳನಗಳಿಗೆ ಲೆಕ್ಕವೇ ಇಲ್ಲ. ಒಟ್ಟಾರೆ ಬೆಂಗಳೂರು ಕರ್ನಾಟಕದ ಹೃದಯವಿದ್ದಂತೆ. ಭಾರತದ ಕಣ್ಣು ಕೂಡ ಆಗಿದೆ ಎಂದು ಹೇಳಬಹುದು.

ಬೆಂಗಳೂರು ಗ್ರಾಮಾಂತರ ಹಾಗು ನಗರ ಜಿಲ್ಲೆಗಳಲ್ಲಿ ಉಪ್ಪಾರ ಸಮುದಾಯವನ್ನು ದೊಡ್ಡ ಪ್ರಮಾಣದಲ್ಲಿ ಗುರುತಿಸಬಹುದು. ಇತರ ಹಿಂದುಳಿದ ಜಾತಿಗಳು ಬೇಗ ಅರಿವು ಪಡೆದುಕೊಂಡು ಸಂಘಟನೆಗೆ ಮುಂದಾಗಿದ್ದರೆ ಉಪ್ಪಾರ ಸಮಾಜ ಇದೀಗ ಕಣ್ಣು ತೆರೆಯುತ್ತಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕಿನ ವಳಗೆರೆಪಾಳ್ಯ, ಹರ್ತಿ, ಮಾಗಡಿ ಮತ್ತು ಕಲ್ಯಾ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ 332 ಉಪ್ಪಾರ ಕುಟುಂಬಗಳಿವೆ, ಅವುಗಳಲ್ಲಿ 2,158 ಜನರಿದ್ದಾರೆ. ವಳಗೆರೆ ಪಾಳ್ಯದಲ್ಲಿ ಅತಿ ಹೆಚ್ಚಿನ ಉಪ್ಪಾರ ಬಂಧುಗಳಿದ್ದಾರೆ. ಅವರಲ್ಲಿ ಪ್ರಮುಖರೆಂದರೆ : ತಮ್ಮಣ್ಣ, ನಾರಾಯಣ, ಶಿವರಾಮಯ್ಯ, ಶಿವಮ್ಮ, ನರಸಿಂಹಮೂರ್ತಿ, ರೇವಣ್ಣ, ರಾಮಯ್ಯ, ರಂಗಸ್ವಾಮಯ್ಯ, ಪುಟ್ಟೆಲ್ಲಮ್ಮ, ಕೊಲ್ಲಯ್ಯ, ನಾಗರಾಜ, ಕೃಷ್ಣ, ನಟರಾಜ, ಬೇಟರಾಜ, ವೆಂಕಟೇಶ್, ಚಿಕ್ಕಣ್ಣ, ರಂಗಪ್ಪ, ರಾಜಕ್ಕ ಹಾಗು ಮಹದೇವ. ಮಾಗಡಿ ನಗರದಲ್ಲಿರುವ ಪ್ರಮುಖ ಕುಟುಂಬಗಳೆಂದರೆ ಟಿ. ಶಿವರಾಮಯ್ಯ, ಕೃಷ್ಣಪ್ಪ, ಸಿದ್ಧಪ್ಪ, ಸರೋಜಮ್ಮ, ಶಿವಮ್ಮ ಹಾಗು ಸುರೇಶ್ ಮತ್ತು ಇತರರು. ಹರ್ತಿ ಗ್ರಾಮದಲ್ಲಿನ ಪ್ರಮುಖರೆಂದರೆ : ದೊಡ್ಡ ನರಸಿಂಹಯ್ಯ, ನರಸಿಂಹಯ್ಯ, ರೇವಣಸಿದ್ಧಯ್ಯ, ರೇಣುಕಯ್ಯ, ರೇವಕ್ಕ, ಹೆಚ್.ಆರ್. ನರಸಿಂಹಯ್ಯ, ಯಲ್ಲಮ್ಮ ಹಾಗು ಪುಟ್ಟಯ್ಯ. ಶಿವಮ್ಮ ಅವರು ಪಟ್ಟಣ ಪಂಚಾಯ್ತಿಯ ಸದಸ್ಯರು.

'ಕಲ್ಯಾ'ದ ರೇವಣಸಿದ್ಧಯ್ಯ ಹಾಗು ಕೂಡ್ಲೂರು ಕುಟುಂಬಗಳು ಪ್ರಮುಖವಾದವು. ಇವರನ್ನು 'ಉಪ್ಪಾರ' ಅಥವಾ 'ಮೇಲುಸಕ್ಕರೆ'ಯವರು ಎಂದು ಕರೆಯುತ್ತಾರೆ. ಉಪ್ಪಾರ ಸಮಾಜದವರು ಹೆಚ್ಚಾಗಿ ವ್ಯವಸಾಯ ವೃತ್ತಿಯನ್ನು ಅವಲಂಬಿಸಿರುತ್ತಾರೆ. ಬಹುತೇಕ ಉಪ್ಪಾರ ಕುಟುಂಬಗಳವರು ಕೂಲಿ ಕಾರ್ಮಿಕರು.

ವಳಗೆರೆ ಪಾಳ್ಯದ ಸಾವಿತ್ರಮ್ಮ ರಂಗಸ್ವಾಮಯ್ಯ ಅವರು ಗ್ರಾಮಪಂಚಾಯತ್‌ನ

ಅಧ್ಯಕ್ಷರಾಗಿದ್ದಾರೆ. ತಾಲ್ಲೂಕಿನಲ್ಲಿ ಉಪ್ಪಾರ ಸಮಾಜಕ್ಕೆ ಸಂಬಂಧಪಟ್ಟ ವಿದ್ಯಾರ್ಥಿನಿಲಯಗಳಿಲ್ಲ. ಯಾವುದೇ ಕೈಗಾರಿಕೆ ಅಥವಾ ವ್ಯಾಪಾರವನ್ನು ಈ ಸಮುದಾಯ ದೊಡ್ಡ ಪ್ರಮಾಣದಲ್ಲಿ ಹೊಂದಿಲ್ಲ. ಟಿ. ಶಿವರಾಮಯ್ಯ ಅವರು ಮಾಗಡಿ ಟೌನ್‌ನಲ್ಲಿದ್ದು ಸಹಕಾರಿ ಇಲಾಖೆ ಹುದ್ದೆಯಿಂದ ನಿವೃತ್ತರಾಗಿದ್ದಾರೆ. ಅವರಿಗೆ ಸಮಾಜಸೇವೆ ಹಾಗು ಸಂಘಟನೆಗಳಲ್ಲಿ ವಿಶೇಷ ಆಸಕ್ತಿಯಿದೆ.

ಡಾ|| ಎಸ್. ಗಂಗಾಧರ ಅವರು ಸಿವಿಲ್ ಇಂಜಿನಿಯರಿಂಗ್ ವಿಷಯದಲ್ಲಿ ಸ್ನಾತಕೋತ್ತರ ಪದವಿ ಮತ್ತು ಪಿಹೆಚ್‌ಡಿ ಪಡೆದಿದ್ದಾರೆ. ಬೆಂಗಳೂರು ವಿಶ್ವವಿದ್ಯಾನಿಲಯದ ಇಂಜಿನಿಯರಿಂಗ್ ಕಾಲೇಜೊಂದರಲ್ಲಿ ಪ್ರಾಧ್ಯಾಪಕರಾಗಿದ್ದಾರೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ 9075 ಉಪ್ಪಾರರಿದ್ದಾರೆಂದು ಹೇಳಲಾಗಿದೆ. ತಾಲ್ಲೂಕಿನಲ್ಲಿ 1650 ಉಪ್ಪಾರ ಕುಟುಂಬಗಳಿವೆ. ದೊಡ್ಡಬಳ್ಳಾಪುರ, ಪಾಲನಜೋಗಹಳ್ಳಿ, ಆವಲಹಳ್ಳಿ, ಕಂಚಿಗನಾಳ, ಘಂಟಿಗಾನಹಳ್ಳಿ, ತಿರುಮಗೊಂಡನಹಳ್ಳಿ, ರಾಜಘಟ್ಟ, ಕೊಣಗಟ್ಟ, ಪಿಂಡಕೂರುತಿಮ್ಮನಹಳ್ಳಿ, ಗಾಡಹಳ್ಳಿ ಹಾಗು ಅರಳುಮಲ್ಲಿಗೆ ಮೊದಲಾದ ಕಡೆ ಉಪ್ಪಾರ ಸಮುದಾಯ ಹೆಚ್ಚಿನ ಪ್ರಮಾಣದಲ್ಲಿದೆ.

ದೊಡ್ಡಬಳ್ಳಾಪುರ ತಾಲ್ಲೂಕಿನ ಉಪ್ಪಾರರು ಹೆಚ್ಚಿನ ಪ್ರಮಾಣದಲ್ಲಿ ಕನ್ನಡ ಹಾಗು ಕಿರು ಪ್ರಮಾಣದಲ್ಲಿ ತೆಲುಗು ಭಾಷೆಯನ್ನು ಬಳಸುತ್ತಾರೆ. ಮೂಲತಃ ಹೆಚ್ಚಿನ ಪ್ರಮಾಣದಲ್ಲಿನ ಉಪ್ಪಾರರು ವ್ಯವಸಾಯವನ್ನು ಅವಲಂಬಿಸಿದ್ದಾರೆ. ರೇಷ್ಮೆಬಟ್ಟೆ ನೇಯ್ಗೆಯನ್ನು ಕೆಲವು ಕುಟುಂಬಗಳು ಮಾಡುತ್ತವೆ. ರೇಷ್ಮೆ ಕೃಷಿ ಸಹ ಇವರ ವೃತ್ತಿಯಾಗಿದೆ. ಗ್ರಾಮೀಣ ಪ್ರದೇಶದ ಉಪ್ಪಾರರು ಕೂಲಿ ಕಾರ್ಮಿಕರು. ಸಣ್ಣ ಪ್ರಮಾಣದ ಕಂಟ್ರಾಕ್ಟರ್ ವೃತ್ತಿಯನ್ನು ಕೂಡ ಅವಲಂಬಿಸಿರುತ್ತಾರೆ. ಅನೇಕ ಸಣ್ಣಪುಟ್ಟ ವ್ಯಾಪಾರ ವಹಿವಾಟುಗಳನ್ನು ಹೊಂದಿರುವ ಉಪ್ಪಾರ ಸಮಾಜದವರನ್ನ ಕಾಣಬಹುದು. ಆರ್ಥಿಕವಾಗಿ ಅತ್ಯಂತ ಹಿಂದುಳಿದ ಸಮಾಜಗಳಲ್ಲಿ ಉಪ್ಪಾರರದೂ ಒಂದು. ಈ ಸಮಾಜದಲ್ಲಿ ಶೇ. 80ರಷ್ಟು ಜನ ಬಡತನದ ರೇಖೆಗಿಂತ ಕೆಳಗಿದ್ದಾರೆ. ಸಾಕ್ಷರತೆಯಲ್ಲಿ ಈ ಸಮುದಾಯ ಕೊನೆಯ ಸ್ಥಾನದಲ್ಲಿದೆ.

ತಾಲ್ಲೂಕಿನಲ್ಲಿ ಒಬ್ಬ ಲೇಬರ್ ಇನ್ಸ್‌ಪೆಕ್ಟರ್, ಒಬ್ಬ ಇಂಜಿನಿಯರ್ ಹಾಗು ನಾಲ್ಕು ಜನ ವ್ಯಾಪಾರಸ್ಥರು ಉಪ್ಪಾರ ಸಮಾಜಕ್ಕೆ ಸೇರಿದ್ದಾರೆ. ಉಪ್ಪಾರ ಸಮಾಜಕ್ಕೆ ಸೇರಿದ ಯಾವುದೇ ವಿದ್ಯಾಸಂಸ್ಥೆ, ಆಸ್ಪತ್ರೆ ಅಥವಾ ಕೈಗಾರಿಕೆಗಳಿಲ್ಲ. ಈ ಸಮುದಾಯದ ದೊಡ್ಡಬಳ್ಳಾಪುರ ಟೌನ್ ನಿವಾಸಿ ಆರ್. ಜಯರಾಮ ಸೃಜನಶೀಲ ಪ್ರತಿಭಾವಂತರು. ಅವರು ರಾಜ್ಯ ಸಂಘದ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಘಾಟಿ ಸುಬ್ರಹ್ಮಣ್ಯ ದೇವಸ್ಥಾನದ ಟ್ರಸ್ಟಿ ಹಾಗು ನಗರಾಭಿವೃದ್ಧಿ ಸಮಿತಿಯ ಉಪಾಧ್ಯಕ್ಷರು ಆಗಿ ಸೇವೆ ಸಲ್ಲಿಸಿದ್ದಾರೆ. ಪ್ರಸ್ತುತ ಆ ದೇವಸ್ಥಾನದ ಅನ್ನದಾನ ಸಮಿತಿಯ ಸದಸ್ಯರಾಗಿದ್ದಾರೆ. ಈ ಹಿಂದೆ ಅವರು ದೊಡ್ಡಬಳ್ಳಾಪುರ ತಾಲ್ಲೂಕಿನ ಭೂ ಮಂಜೂರಾತಿ ಸಮಿತಿ ಹಾಗು 20 ಅಂಶಗಳ ಕಾರ್ಯಕ್ರಮಗಳ ಅನುಷ್ಠಾನ ಸಮಿತಿಯ

ಸದಸ್ಯರೂ ಆಗಿ ಸೇವೆ ಸಲ್ಲಿಸಿದ್ದಾರೆ.

ಇದೇ ಟೌನಿನ ಈ ಸಮುದಾಯದ ಎ. ಗೋವಿಂದಸ್ವಾಮಿ ಪುರಸಭಾ ಉಪಾಧ್ಯಕ್ಷರಾಗಿದ್ದರು. ಸೆಂಟ್ರಲ್ ಸಿಲ್ಕ್ ಬೋರ್ಡಿನ ನಿರ್ದೇಶಕರಾಗಿದ್ದರು. ಸ್ಥಳೀಯ ಕೊಂಗಾಡಿಯಪ್ಪ ವಿದ್ಯಾಸಂಸ್ಥೆಯ ಸಂಸ್ಥಾಪಕ ಸದಸ್ಯರಾಗಿ, ಅದರ ಬೆಳವಣಿಗೆಯಲ್ಲಿ ಗಣನೀಯ ಸೇವೆ ಸಲ್ಲಿಸಿದ್ದಾರೆ. ಅವರು ಜಮೀನ್ದಾರರಾಗಿದ್ದು, ಅರ್ಕಾವತಿ ಸೀಡ್ಸ್ ಹೆಸರಿನಲ್ಲಿ ರಾಗಿ, ಜೋಳ, ತರಕಾರಿ ಇತ್ಯಾದಿಗಳ ಗುಣಮಟ್ಟದ ಬೀಜ ತಯಾರಿಸಿ, ಆ ಭಾಗದ ರೈತರಿಗೆ ಒದಗಿಸಿ ವ್ಯವಸಾಯದಲ್ಲಿ ಸಾಕಷ್ಟು ಅನುಕೂಲ ಮಾಡಿಕೊಟ್ಟಿದ್ದಾರೆ.

ಮೇಸ್ತ್ರಿ ವೆಂಕಟಪ್ಪ ಗಾರೆಮನೆ ಅವರೂ ಕೂಡ ಇದೇ ಟೌನಿನವರು. ಅವರೂ ಕೂಡ ಕೊಂಗಾಡಿಯಪ್ಪ ವಿದ್ಯಾಸಂಸ್ಥೆಯ ಬೆಳವಣಿಗೆಯ ಸದಸ್ಯರು ಹಾಗು ಕಂಟ್ರಾಕ್ಟರ್ ಆಗಿ ಉತ್ತಮ ಸೇವೆ ಸಲ್ಲಿಸಿದ್ದಾರೆ.

ದೊಡ್ಡವೆಂಕಟರಾಮಪ್ಪ ಕೂಡ ಇದೇ ಟೌನಿನ ನಿವಾಸಿಗಳಾಗಿದ್ದು, ಅವರು ಜಮೀನ್ದಾರರೂ ಹಾಗು ವರಲಕ್ಷ್ಮಿ ಸಾ ಮಿಲ್ ಮಾಲೀಕ ಆಗಿದ್ದರು. ಮೊದಲಿಗೆ ಅವರು ಕಾರ್ಪೆಂಟರಿ ಕೆಲಸ ಕೂಡ ಮಾಡುತ್ತಿದ್ದರು.

ಟಿ. ಮುನಿವೆಂಕಟಸ್ವಾಮಿ ಕೂಡ ದೊಡ್ಡಬಳ್ಳಾಪುರದವರು. ಪಿ.ಡಬ್ಲ್ಯು.ಡಿ.ಯಲ್ಲಿ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿ, ನಿವೃತ್ತಿಯ ನಂತರ ಬೆಂಗಳೂರಿನಲ್ಲಿ ನೆಲೆಸಿ, ಬೆಂಗಳೂರು ಉಪ್ಪಾರ ಜಿಲ್ಲಾ ಸಂಘದ ಅಧ್ಯಕ್ಷರಾಗಿ ಸಮಾಜಕ್ಕೆ ಉತ್ತಮ ಸೇವೆ ಸಲ್ಲಿಸಿದ್ದಾರೆ.

ಟಿ. ರಂಗಪ್ಪ ಕೂಡ ಇದೇ ಟೌನಿನವರಾಗಿದ್ದು, ಅವರೂ ಕೂಡ ಪಿ.ಡಬ್ಲ್ಯು.ಡಿ.ಯಲ್ಲಿ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿ, ನಿವೃತ್ತಿ ನಂತರ ಬೆಂಗಳೂರಿನಲ್ಲಿ ನೆಲೆಸಿದ್ದು, ರಾಜ್ಯ ಸಂಘದ ಸದಸ್ಯರಾಗಿದ್ದರು.

ಜಿ. ಪಾರ್ಥಸಾರಥಿ ರೇಷ್ಮೆ ಮಗ್ಗ ಇಟ್ಟಿದ್ದರಲ್ಲದೆ, ರೇಷ್ಮೆ ವ್ಯಾಪಾರಿಗಳಾಗಿದ್ದರು. ಗೋವಿಂದಸ್ವಾಮಿ ಆದಿಯಾಗಿ ಪಾರ್ಥಸಾರಥಿವರೆಗಿನ ಈ ಮಹನೀಯರು ಈಗ ನಮ್ಮ ಮಧ್ಯೆ ಇಲ್ಲ.

ಎಲೆಪೇಟೆ ರಾಮಯ್ಯ ಟೌನಿನ ರೇಷ್ಮೆ ತಯಾರಕರು ಹಾಗು ವ್ಯಾಪಾರಿಗಳು.

ಶ್ರೀನಿವಾಸಮೂರ್ತಿ, ಮುನಿರಾಜು, ಹೆಚ್. ಕೃಷ್ಣಪ್ಪ, ಚಿನ್ನಪ್ಪ, ಚಿಕ್ಕ ಅಂಜನಪ್ಪ, ನಾಗರಾಜ, ರವಿಕುಮಾರ, ರಾಜಣ್ಣ, ಮುನಿವೆಂಕಟಪ್ಪ ಹಾಗು ಶ್ರೀಮತಿ ಗೌರಮ್ಮ ಹನುಮಂತಪ್ಪ ಮೊದಲಾದವರು ಗ್ರಾಮಪಂಚಾಯತ್‌ನ ಸದಸ್ಯರು.

ಈ ಸಮುದಾಯಕ್ಕೆ ಸೇರಿದ ಯಾವುದೇ ಜಿಲ್ಲಾಪಂಚಾಯತ್ ಸದಸ್ಯರು ಇಲ್ಲ. ಎ.ಜಿ. ಲಕ್ಷ್ಮೀನಾರಾಯಣ, ಎ.ಜಿ. ಶ್ರೀನಿವಾಸಮೂರ್ತಿ ಮತ್ತು ಎ.ಜಿ. ವಿಜಯಕುಮಾರ್ ಉದ್ದಿಮೆದಾರರು. ಮರದ ವ್ಯಾಪಾರಿ ವೆಂಕಟೇಶ ಮೂರ್ತಿ. ಮೇಲೆ ನಮೂದಿಸಿದ ಎಲ್ಲ ವ್ಯಕ್ತಿಗಳು ಸಮಾಜ ಗುರುತಿಸಲೇಬೇಕಾದವರು.

1977ರಿಂದಲೂ ಇಲ್ಲಿ ಉಪ್ಪಾರ ಸಂಘಟನೆ ಇದ್ದು ಆರ್. ಜಯರಾಮ್ ಸಂಘದ ಸಂಸ್ಥಾಪಕರು. ಹಿಂದೆ ಪಟೇಲ್ ಮುನಿಸ್ವಾಮಪ್ಪ ಇದರ ಅಧ್ಯಕ್ಷರಾಗಿದ್ದರು. ಈಗ ಹೆಚ್. ಕೃಷ್ಣಪ್ಪ ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದಾರೆ. 1978ರಲ್ಲಿ ಇಂದಿರಾಗಾಂಧಿ ಅವರು ಸ್ವಲ್ಪ ಕಾಲ ದೊಡ್ಡಬಳ್ಳಾಪುರದಲ್ಲಿ ತಂಗಿದ್ದಾಗ ಉಪ್ಪಾರ ಸಂಘದ ಪದಾಧಿಕಾರಿಗಳು ಅವರನ್ನು ಭೇಟಿ ಮಾಡಿದಾಗ 'ಉಪ್ಪಾರ ಸಮುದಾಯಕ್ಕೆ ಶುಭಾಶಯ' ಎಂದು ಹೇಳಿ ಕನ್ನಡದಲ್ಲಿ ಸಹಿ ಮಾಡಿದ್ದಾರೆ. 2001ರ ಆಗಸ್ಟ್ ತಿಂಗಳಿನ 'ಭಗೀರಥ ಸಂಕಲ್ಪ' ಮಾಸಪತ್ರಿಕೆಯಲ್ಲಿ ಅದರ ಪ್ರಧಾನ ಸಂಪಾದಕರಾದ ಹೆಚ್. ಸಿ. ನೀರಾವರಿಯವರು ಇದನ್ನು ಯಥಾವತ್ತಾಗಿ ಪ್ರಕಟಸಿದ್ದನ್ನು ಇಲ್ಲಿ ಸ್ಮರಿಸಬಹುದು.

ಹೊಸಕೋಟೆ ತಾಲ್ಲೂಕಿನ ಉಪ್ಪಾರಹಳ್ಳಿ, ಬೂದಿಗೆರೆ ಗ್ರಾಮಗಳಲ್ಲಿ 780 ಉಪ್ಪಾರ ಕುಟುಂಬಗಳಿದ್ದು ಸುಮಾರು 4680 ಜನರಿದ್ದಾರೆ.

ಆನೇಕಲ್ ತಾಲ್ಲೂಕಿನ ಚಂದಾಪುರ, ಜಿಗಣಿ ಹೋಬಳಿ, ಇಂಡಸ್ಟ್ರಿಯಲ್ ಏರಿಯಾ, ಹೆಬ್ಬಗೋಡಿ ಮತ್ತು ಆನೇಕಲ್ ಸೇರಿದಂತೆ 550 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ 3300 ಜನರಿದ್ದಾರೆ. ಆಶ್ಚರ್ಯದ ಸಂಗತಿ ಏನೆಂದರೆ ಈ ಭಾಗದ ಹಲವು ಉಪ್ಪಾರ ಕುಟುಂಬಗಳು, ಜಾತಿ ತೊರೆದು ಬಲಿಜಿಗ ಇತ್ಯಾದಿ ಅನ್ಯಜಾತಿಗಳಿಗ ವಲಸೆ ಹೋಗಿದ್ದಾರೆ ಎಂದು ಹೇಳಲಾಗುತ್ತಿದೆ.

ನೆಲಮಂಗಲ ತಾಲ್ಲೂಕು ಮಣ್ಣೆ ಗ್ರಾಮ ಸೇರಿದಂತೆ ತಾಲ್ಲೂಕಿನಲ್ಲಿ 500 ಉಪ್ಪಾರ ಕುಟುಂಬಗಳಿವೆ. ಅದರಲ್ಲಿ 3000 ಜನರಿದ್ದಾರೆ. ಕನಕಪುರ ತಾಲ್ಲೂಕಿನ ಹಾರೋಹಳ್ಳಿ, ಕನಕಪುರ, ತಾಮಸಂದ್ರ ಹಾಗು ತಾಲ್ಲೂಕಿನ ಇತರ ಕಡೆಗಳಲ್ಲಿ ಸುಮಾರು 575 ಉಪ್ಪಾರ ಕುಟುಂಬಗಳಿದ್ದು, ಸುಮಾರು 3450 ಜನಸಂಖ್ಯೆ ಇದೆ. ಕನಕಪುರ ತಾಲ್ಲೂಕಿನ ಕರಿಕಲ್ ದೊಡ್ಡಿಯ ದೇವರಾಜು ಅವರು ಗ್ರಾಮಪಂಚಾಯಿತಿಯ ಉಪಾಧ್ಯಕ್ಷರು.

ಚನ್ನಪಟ್ಟಣ ತಾಲ್ಲೂಕಿನ ಚನ್ನಪಟ್ಟಣ ಟೌನಿನ ಮಂಗಳವಾರಪೇಟೆ, ಬಂಡೂರಿನ ವಡಗೆರೆಪಾಳ್ಯ, ಮಸಿಗೌಡನದೊಡ್ಡಿ, ಸಾದಾರಹಳ್ಳಿ ಮುಂತಾದ ಗ್ರಾಮಗಳನ್ನೊಳಗೊಂಡಂತೆ ತಾಲ್ಲೂಕಿನಲ್ಲಿ ಸುಮಾರು 765 ಉಪ್ಪಾರ ಕುಟುಂಬಗಳಿದ್ದು, 4050 ಕ್ಕೂ ಅಧಿಕ ಉಪ್ಪಾರ ಜನಸಂಖ್ಯೆ ಇದೆ. ಇಲ್ಲಿ ಮೇಲುಸಕ್ಕರೆ ಉಪ್ಪಾರ ಯುವಕ ಸಂಘ ಇದ್ದು, ಅದರ ಹಾಲಿ ಅಧ್ಯಕ್ಷರು ರಂಗಪ್ಪನವರ ಮಗ ಆರ್. ತಮ್ಮಣ್ಣ. ಇವರು ಸಂಗೀತ ಮಾಸ್ಟರ್ ಹಾಗು ನಾಟಕ ಕಲಾವಿದರು. ಇವರು ಸರಿಸುಮಾರು 20 ವರ್ಷಗಳಿಂದ ಅಧ್ಯಕ್ಷರಾಗಿ ತಮ್ಮ ಶಕ್ತಿಮೀರಿ ಸಂಘಟನೆ ಮಾಡಲು ತನು-ಮನ-ಧನ ಅರ್ಪಿಸಿ ಶ್ರಮಿಸುತ್ತಿದ್ದಾರೆ. ತಾಲ್ಲೂಕಿನ ಉಪ್ಪಾರರು ಗಾರೆಕೆಲಸ, ಕಾರ್ಪೆಂಟರ್ ಕೆಲಸ ಹಾಗು ಕೂಲಿ ಕೆಲಸ ಮಾಡುತ್ತಾರೆ. ಇವರ ಮಾತೃಭಾಷೆ ಕನ್ನಡ. ಅದರ ಹೊರತಾಗಿ ಅದರ ಬೇರೆ ಯಾವ ಭಾಷೆಯೂ ಗೊತ್ತಿಲ್ಲ. ಮೇಲುಸಕ್ಕರೆ ಉಪ್ಪಾರರು ಎಂಬುದು ಒಂದೇ ತಾಲ್ಲೂಕಿನಲ್ಲಿ ಬಳಕೆಯಲ್ಲಿರುವುದು. ಉಪ್ಪಾರರ ಆರ್ಥಿಕ

ಪರಿಸ್ಥಿತಿ ತಾಲ್ಲೂಕಿನಲ್ಲಿ ಕ್ಷೀಣವಾಗಿದೆ. ಈ ಸಮುದಾಯದವರು ತಾಲ್ಲೂಕಿನಲ್ಲಿ ಯಾವುದೇ ಆಸ್ಪತ್ರೆ, ಕೈಗಾರಿಕೆ, ವಿದ್ಯಾಸಂಸ್ಥೆ ನಡೆಸುತ್ತಿಲ್ಲ, ವಿದ್ಯಾರ್ಥಿನಿಲಯವೂ ಇಲ್ಲ.

ಆರ್. ತಮ್ಮಣ್ಣ ಪ್ರಸಿದ್ಧ ಕಲಾವಿದ. ಕಳೆದ 40 ವರ್ಷಗಳಿಂದ ನಾಟಕ, ಭಜನೆ, ಸಂಗೀತದ ಪಾಠ ಪ್ರವಚನಗಳನ್ನು ಸಮಾಜ ಬಾಂಧವರಿಗ ಹೇಳಿಕೊಡುತ್ತ ಹೆಸರುವಾಸಿಯಾದ ನಾಟಕಗಳನ್ನು ಕಲಿಸಿ, ಆಡಿಸುತ್ತಿದ್ದಾರೆ. ಸಮುದಾಯದಲ್ಲಿ ರಾಜಕಾರಣಿಯಾಗಲಿ, ಗ್ರಾಮಪಂಚಾಯ್ತಿ, ಜಿಲ್ಲಾಪಂಚಾಯ್ತಿ ಇತ್ಯಾದಿಗಳ ಚುನಾಯಿತ ಸದಸ್ಯರಾಗಲಿ ಇಲ್ಲ.

ಎಂ.ವಿ. ನಾರಾಯಣಸ್ವಾಮಿಯವರು ನಿವೃತ್ತ ಉಪಾಧ್ಯಾಯರು. ಮೈಸೂರು ವಾಲಿಬಾಲ್ ಅಸೋಸಿಯೇಶನ್ನಿನ ಸದಸ್ಯರು ಹಾಗು ಹೆಸರಾಂತ ಆಟಗಾರರು. ಆರ್. ತಮ್ಮಣ್ಣ ಸಮಾಜಸೇವಕರೂ ಹೌದು. ಸಮಾಜ ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಜನಪ್ರತಿನಿಧಿಗಳ ಗಮನ ಸೆಳೆದು ಪರಿಹಾರೋಪಾಯಕ್ಕೆ ಪ್ರಯತ್ನಿಸುತ್ತಿದ್ದಾರೆ.

ಆರ್ಥಿಕ ಸ್ಥಿತಿಯಿಂದ ಕೆಳಮಟ್ಟದಲ್ಲಿರುವ ಉಪ್ಪಾರ ಬಾಂಧವರಿಗೆ ನಿವೇಶನ, ಆಶ್ರಯ ಮನೆಗಳು, ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲತೆ, ಉದ್ಯೋಗ-ಇವು ಸಮಾಜಕ್ಕೆ ಆಗಬೇಕಾದ ಕೆಲಸಕಾರ್ಯಗಳು.

ಆರ್. ತಮ್ಮಣ್ಣ, ನಂಜುಂಡಪ್ಪ ಬಿನ್ ದೇವಯ್ಯ, ನಾಗಣ್ಣ ಕಂಟ್ರಾಕ್ಟರ್, ಎಂ.ವಿ. ನಾರಾಯಣಸ್ವಾಮಿ, ಪೂಜಾರಿ ದೇವಯ್ಯ, ಸಂಜೀವಯ್ಯ ಬಿನ್ ಪುಟ್ಟಪ್ಪ, ಯಲ್ಲಪ್ಪ ಕಂಟ್ರಾಕ್ಟರ್, ಜಯರಾಮಚಂದ್ರಮೂರ್ತಿ, ಕೃಷ್ಣಪ್ಪ ಬಿನ್ ನರಸಿಂಹಪ್ಪ, ನಾರಾಯಣ ಬಿನ್ ಪುಟ್ಟಸ್ವಾಮಿ, ಸೋಮಶೇಖರ ಬಿನ್ ಗಂಗಾಧರಯ್ಯ, ಅಣ್ಣಯ್ಯ ಬಿನ್ ಪೋತಪ್ಪ, ಅಕ್ಕಿತಿಮ್ಮಯ್ಯ ಬಿನ್ ಕಿವುಡ ಕಾಳಯ್ಯ, ಭಾಗ್ಯಮ್ಮ ಕೋಂ ಚಂದ್ರಪ್ಪ, ಗೌರಮ್ಮ ಕೋಂ ತಮ್ಮಣ್ಣ, ಲಕ್ಷ್ಮಮ್ಮ ಕೋಂ ಯಲ್ಲಪ್ಪ, ಗೋಪಿ ಬಿನ್ ಪೋತಯ್ಯ, ಚಿಕ್ಕಣ್ಣ ಬಿನ್ ಮೂಗಪ್ಪ, ಗೋಪಾಲಕೃಷ್ಣ ಬಿನ್ ಮಾಗಪ್ಪ, ರಾಮಲಿಂಗು ಬಿನ್ ಪೋತರಾಜಯ್ಯ, ವೆಂಕಟೇಶ ಬಿನ್ ಶೇಷಣ್ಣ ಕಂಟ್ರಾಕ್ಟರ್, ಸಿದ್ದಪ್ಪ ಬಿನ್ ಮೋಟಪ್ಪ, ಅಂದಾನಪ್ಪ ಕಂಟ್ರಾಕ್ಟರ್, ವೆಂಕಟಪ್ಪ, ಕೃಷ್ಣ ಮುಂತಾದವರು ಉಪ್ಪಾರ ಸಮಾಜದ ಪ್ರಮುಖರು ಹಾಗು ಹಿತಚಿಂತಕರು.

ರಾಮನಗರಂ ತಾಲ್ಲೂಕಿನಲ್ಲಿ ಸುಮಾರು 650 ಉಪ್ಪಾರ ಕುಟುಂಬಗಳಿದ್ದು ಅದರಲ್ಲಿ ಹೆಚ್ಚಿನವರು ಮೈಸೂರು ಮತ್ತು ಚಾಮರಾಜನಗರದ ಜಿಲ್ಲೆಗಳಿಂದ ರೇಷ್ಮೆ ಉದ್ಯೋಗಕ್ಕಾಗಿ ವಲಸೆ ಬಂದವರೆಂದು ತಿಳಿದು ಬಂದಿದೆ. ಈ ತಾಲ್ಲೂಕಿನಲ್ಲಿ 3,900 ಉಪ್ಪಾರ ಜನಸಂಖ್ಯೆ ಇದೆ. ಇವರಲ್ಲಿ ಹೆಚ್ಚಿನವರು ಅವಿದ್ಯಾವಂತರು ಹಾಗು ಬಡ ಕೂಲಿಕಾರರು. ಎಂ.ಡಿ. ನಂಜುಂಡಪ್ಪ ತಾಲ್ಲೂಕು ಉಪ್ಪಾರ ಸಂಘದ ಅಧ್ಯಕ್ಷರು.

ದೇವನಹಳ್ಳಿ ತಾಲ್ಲೂಕಿನಲ್ಲಿ 375 ಉಪ್ಪಾರ ಕುಟುಂಬಗಳಿವೆ. ಇಲ್ಲಿಂದ ಸರಿಯಾದ ಮಾಹಿತಿ ಕೂಡ ತರಿಸುವುದು ಸಾಧ್ಯವಾಗಿಲ್ಲ. ಸುಮಾರು 2,250 ಉಪ್ಪಾರ ಜನಸಂಖ್ಯೆ ಇದೆ ಎಂದು ಅಂದಾಜು ಮಾಡಲಾಗಿದೆ.

ಹೀಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸುಮಾರು 6,705ಕ್ಕೂ ಅಧಿಕ ಉಪ್ಪಾರ ಕುಟುಂಬಗಳಿದ್ದು, 38,900 ಅಧಿಕ ಉಪ್ಪಾರ ಜನಸಂಖ್ಯೆ ಇದೆ.

ಬೆಂಗಳೂರು ನಗರದ ಎಲ್ಲ ಬಡಾವಣೆಗಳಲ್ಲಿ ಉಪ್ಪಾರ ಕುಟುಂಬಗಳಿವೆ ಎಂದು ಸಮೀಕ್ಷೆಯಿಂದ ತಿಳಿದುಬಂದಿದೆ. ಕರ್ನಾಟಕದ ಎಲ್ಲ ಜಿಲ್ಲೆಗಳ ಉಪ್ಪಾರರು ಕಾರ್ಯಾರ್ಥ ಬೆಂಗಳೂರಿಗೆ ಬಂದು ಇಲ್ಲಿಯೇ ನೆಲೆಸಿದ್ದಾರೆ. ಮೊದಲಿನಿಂದಲೇ ಬೆಂಗಳೂರು ನಗರದಲ್ಲಿ ಉಪ್ಪಾರ ವಸತಿಗಳಿದ್ದವೆಂದು ಆಯಾ ಸ್ಥಳಗಳ ಹೆಸರುಗಳಿಂದಲೇ ಸ್ಪಷ್ಟವಾಗುತ್ತದೆ. ಉಪ್ಪಾರಪೇಟೆ ಪೊಲೀಸ್ ಸ್ಟೇಶನ್, ಜಂಗಮ ಮೇಸ್ತ್ರಿ ಲೇನ್, ವಸಂತನಗರದಲ್ಲಿ ಉಪ್ಪಾರಹಳ್ಳಿ, ಲಾಲ್‌ಬಾಗ್ ಹತ್ತಿರ ಉಪ್ಪಾರಹಳ್ಳಿ, ಮುನಿರೆಡ್ಡಿಪಾಳ್ಯದ ಉಪ್ಪಾರ ಬೀದಿ ಇತ್ಯಾದಿಗಳು. ಬೆಂಗಳೂರಿನ ಸುತ್ತಮುತ್ತ ಅನೇಕ ಕೆರೆಕುಂಟೆಗಳಿದ್ದು ಹೆಚ್ಚಿನ ಕೆರೆಕುಂಟೆಗಳನ್ನು ಉಪ್ಪಾರರೇ ನಿರ್ಮಿಸಿದ್ದಾರೆ. ಪ್ರಸ್ತುತ ಬೆಂಗಳೂರು ನಗರದಲ್ಲಿ ಉಪ್ಪಾರರು ವಾಸಿಸುವ ಸ್ಥಳಗಳೆಂದರೆ ರಾಜಾಜಿನಗರ 1, 2 ಮತ್ತು 4ನೇ ಬ್ಲಾಕ್, ವಿಜಯನಗರ, ಮಹಾಲಕ್ಷ್ಮಿ ಲೇಔಟ್, ನಂದಿನಿ ಲೇಔಟ್, ನಾಗಪ್ಪ ಬ್ಲಾಕ್, ಶ್ರೀರಾಂಪುರ, ಮಲ್ಲೇಶ್ವರಂ, ಶೇಷಾದ್ರಿಪುರಂ, ಮೆಜೆಸ್ಟಿಕ್, ಮೂಡಲಪಾಳ್ಯ, ಸ್ವಿಮ್ಮಿಂಗ್ ಪೂಲ್, ಯಶವಂತಪುರ, ಹೆಚ್.ಎಂ.ಟಿ. ಕಾಲೋನಿ, ಪೀಣ್ಯ, ದೇವಸಂದ್ರ, ಬೊಮ್ಮಸಂದ್ರ, ಆರ್.ಟಿ. ನಗರ, ಹೆಬ್ಬಾಳ, ಯಲಹಂಕ, ಸ್ವತಂತ್ರಪಾಳ್ಯ, ಕೊಡಿಗೆಹಳ್ಳಿ, ಮಾಗಡಿರೋಡ್, ಬಸವನಗುಡಿ, ವನಾವಳ್ಳಿ, ಆಡುಗೋಡಿ, ಶಾಂತಿನಗರ, ಚನ್ನಮ್ಮನಕೆರೆ ಅಚ್ಚುಕಟ್ಟು, ಬಳೇಪೇಟೆ, ಬೈರಾಪುರ, ಬಸವೇಶ್ವರನಗರ, ಕಾಮಾಕ್ಷಿಪಾಳ್ಯ, ಸುಂಕದಕಟ್ಟೆ, ಬ್ಯಾಟರಾಯನಪುರ, (ಯಲಹಂಕ), ಕೋರಮಂಗಲ, ಆಡುಗೋಡಿ, ಹೆಚ್.ಎಸ್.ಆರ್. ಲೇಔಟ್, ಜೆ.ಪಿ. ನಗರ, ಪುಟ್ಟೇನಹಳ್ಳಿ, ಯಲಚೇನಹಳ್ಳಿ, (ಬಸವೇಶ್ವರನಗರ) ಜಯನಗರ, ಬಿ.ಟಿ.ಎಂ. ಲೇಔಟ್, ಪದ್ಮನಾಭನಗರ, ಬನಶಂಕರಿ 1, 2 ಮತ್ತು 3 ನೆಯ ಹಂತ, ಮಾರೇನಹಳ್ಳಿ, ಶ್ರೀನಗರ, ರಾಜೇಶ್ವರಿನಗರ, ಇಂದಿರಾನಗರ, ಜೀವನಭೀಮಾನಗರ, ವಸಂತನಗರ, ಸದಾಶಿವನಗರ, ರಾಜಮಹಲ್ ವಿಲಾಸ, ಕೆಂಗೇರಿ ಉಪನಗರ, ಕೊಂಘಟ್ಟ, ಬೊಮ್ಮಸಂದ್ರ, ಕೈಗಾರಿಕಾನಗರ, ಎಲೆಕ್ಟ್ರಾನಿಕ್ ಸಿಟಿ, ಮಹದೇವಪುರ ಲೇಔಟ್, ಕೈಗಾರಿಕಾನಗರ, ಎನ್.ಜಿ.ಇ.ಎಫ್. ಕಾಲೋನಿ, ಹೆಚ್.ಬಿ.ಆರ್. ಬಾಣಸವಾಡಿ, ನಾಗರಭಾವಿ, ಕಾವಲ್‌ಭೈರಸಂದ್ರ, ಕುಮಾರಪಾರ್ಕ್, ಗುಟ್ಟಳ್ಳಿ, ಕೆ.ಆರ್. ಪುರಂ, ಆವಲಹಳ್ಳಿ, ಕಂಠೀರವನಗರ, (ಪೀಣ್ಯ) ರೂಪೇನಅಗ್ರಹಾರ, ಲಗ್ಗೆರೆ ಮುಂತಾದ ಬಡಾವಣೆಗಳು. ಬೆಂಗಳೂರು ನಗರದ ಬಡಾವಣೆಗಳಲ್ಲಿ ಸುಮಾರು 3,750 ಉಪ್ಪಾರ ಕುಟುಂಬಗಳಿದ್ದು 22,500 ಉಪ್ಪಾರ ಜನಸಂಖ್ಯೆ ಇದೆ.

ಬೆಂಗಳೂರು ನಗರದಲ್ಲಿ ಉಪ್ಪಾರ ಸಮಾಜದ ಹಲವಾರು ಪ್ರಮುಖ ವ್ಯಕ್ತಿಗಳು ವಾಸಿಸುತ್ತಿದ್ದಾರೆ.

ಬಳೇಪೇಟೆಯಲ್ಲಿ ಉಪ್ಪಾರ ಸಮಾಜದ ಹಿರಿಯರು ಪ್ರತಿಷ್ಠಾಪನೆ ಮಾಡಿ ಕಟ್ಟಿಸಿದ ಶ್ರೀ ಸುಗ್ರೀವ ವೆಂಕಟರಮಣಸ್ವಾಮಿ ದೇವಸ್ಥಾನವಿದೆ. ಈ ದೇವಸ್ಥಾನದ ಪೂಜಾಕೈಂಕರ್ಯಗಳು

ಉಪ್ಪಾರ ಸಮಾಜದ ಮುಖಂಡರ ಮೂಲಕ ಇತ್ತೀಚಿನವರೆಗೆ ಜರುಗುತ್ತಿದ್ದವು. ಈ ದೇವಸ್ಥಾನದ ಹೆಚ್ಚಿನ ಭಕ್ತಾದಿಗಳು ಉಪ್ಪಾರರೇ ಆಗಿದ್ದಾರೆ. ಈಗ ಅದು ಮುಜರಾಯಿ ಇಲಾಖೆಗೆ ಸೇರಿದೆ.

ಬೆಂಗಳೂರಿನಲ್ಲಿ ಉಪ್ಪಾರಪೇಟೆ ಪೊಲೀಸ್ ಸ್ಟೇಶನ್, ನಗರದ ಬಹುಮುಖ್ಯವಾದ ಸ್ಥಳದಲ್ಲಿದೆ. ಹಿಂದೆ ಬಳೆಪೇಟೆ ಹಾಗು ಪೊಲೀಸ್ ಸ್ಟೇಶನ್ ಇರುವ ಸ್ಥಳಗಳು ಉಪ್ಪಾರರಿಗೆ ಸೇರಿದ್ದ ಸ್ಥಳಗಳಾಗಿದ್ದುವೆಂದು ತಿಳಿದುಬರುತ್ತದೆ. ಮಾವಳ್ಳಿ, ಯಡಿಯೂರು, ಇಂದಿರಾನಗರ, ವಸಂತನಗರಗಳಲ್ಲಿ ಇಂದಿಗೂ ಉಪ್ಪಾರಹಳ್ಳಿ ಎಂಬ ಸ್ಥಳಗಳಿವೆ. ವಸಂತನಗರದಲ್ಲಿರುವ ಸರ್ಕಾರಿ ಪ್ರಾಥಮಿಕ ಶಾಲೆ ಉಪ್ಪಾರಹಳ್ಳಿಯಲ್ಲಿದೆ. ಮಾವಳ್ಳಿಯ ಲಾಲ್‌ಬಾಗ್ ಉಪ್ಪಾರಹಳ್ಳಿಯಲ್ಲಿ ಹಿಂದೆ ಉಪ್ಪಾರ ಯಜಮಾನರು ಕಟ್ಟಿಸಿದ ಮಾರಮ್ಮನ ದೇವಸ್ಥಾನವಿದೆ. ಮುನಿರೆಡ್ಡಿಪಾಳ್ಯ(ಜೆ.ಸಿ. ನಗರ)ದಲ್ಲಿ ಉಪ್ಪಾರ ಬೀದಿ ಇದೆ. ಹಿಂದೆ ಮಹಾರಾಜರು ಬನ್ನಿ ಮೆರವಣಿಗೆಗೆ ಹೋಗುವಾಗ ಇದರ ಮುಖಾಂತರವೇ ಹೋಗುತ್ತಿದ್ದರೆಂದು ಪ್ರತೀತಿಯಿದೆ. ಇದು ಅರಮನೆಯ ಈಶಾನ್ಯ ಭಾಗದಲ್ಲಿದೆ. ಬೆಂಗಳೂರು ಸುತ್ತಮುತ್ತಲಿನ ಕೆರೆಕುಂಟೆಗಳನ್ನು ನಿರ್ಮಿಸುವಲ್ಲಿ ಉಪ್ಪಾರರ ಪಾತ್ರ ಹಿರಿದಾದುದೆಂದು ನಗರದ ಉಪ್ಪಾರ ಹಿರಿಯ ಮುಖಂಡರು ಹೇಳುತ್ತಿದ್ದರು.

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದವರು ಈ ಸಮಾಜದ ಉಪಯೋಗಕ್ಕಾಗಿ ಬನಶಂಕರಿ ಬಡಾವಣೆಯಲ್ಲಿ 160′×100′ ಹಾಗು 70′×60′ ವಿಸ್ತೀರ್ಣವುಳ್ಳ ನಿವೇಶನವೊಂದನ್ನು ಮಂಜೂರು ಮಾಡಿದ್ದು, ಈಗ ಅದರಲ್ಲಿ ಹದಿನಾರು ಕೊಠಡಿಗಳ ವಿದ್ಯಾರ್ಥಿನಿಲಯವನ್ನು ನಿರ್ಮಿಸಲಾಗಿದೆ. ಅಲ್ಲದೆ ಸದರಿ ನಿವೇಶನ ಪಡೆಯುವುದಕ್ಕೆ ಡಾ|| ಎಸ್. ರಾಮಪ್ಪ, ಡಿ.ಎಸ್. ರಾಮಪ್ಪ, ಬಿ.ಎಂ. ರಾಮಯ್ಯ, ಪ್ರಾ. ಮುನಿಯಪ್ಪ, ಅಹಲ್ಯ ವಿಜಯಸಾರಥಿ, ಎನ್. ಪಾತಯ್ಯ ಗಿರಿಜಾಂಬ ಮುಂತಾದವರು ಉದಾರವಾದ ಆರ್ಥಿಕ ಸಹಾಯ ನೀಡಿದ್ದಾರೆ.

ಆ ನಿವೇಶನದಲ್ಲಿ ಜಗದ್ಗುರುಗಳ ವಾಸಕ್ಕಾಗಿ ಒಂದು ಆಶ್ರಮ ಹಾಗು ಭೋಜನಶಾಲೆಗೆ ಬುನಾದಿ ಹಾಕಲಾಗಿದೆ. ಜಗದ್ಗುರುಗಳು ಬಂದಾಗ ಅವರ ವಾಸಕ್ಕಾಗಿ ಹಾಗು ಸಭೆ ಸಮಾರಂಭಕ್ಕಾಗಿ ತಾತ್ಕಾಲಿಕ ಕಟ್ಟಡ ಕಟ್ಟಿಸಲಾಗಿದೆ. ಈ ನಿವೇಶನದಲ್ಲಿ ಅತ್ಯುತ್ತಮ ಸೌಲಭ್ಯಗಳನ್ನೊಳಗೊಂಡ ಕಲ್ಯಾಣಮಂಟಪವನ್ನು ಕಟ್ಟಿಸಲು ಬೆಂಗಳೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ಲೈಸೆನ್ಸ್ ಇತ್ಯಾದಿ ಪಡೆಯಲಾಗಿದೆ. ಇದು ಸಮಾಜದ ಗಣ್ಯ ವ್ಯಕ್ತಿಗಳಾದ ಹೆಚ್.ಸಿ. ನೀರಾವರಿ, ಡಿ.ಎಸ್. ರಾಮಪ್ಪ, ಎಂ. ಹನುಮಯ್ಯ ಇವರ ಪ್ರಯತ್ನದಿಂದ ಹಾಗು ನೀರಾವರಿ ಸಹೋದರರು, ಡಾ|| ಎಸ್. ರಾಮಪ್ಪ, ಡಾ|| ಮುನಿವೆಂಕಟಸ್ವಾಮಿ, ಎಂ. ಹನುಮಯ್ಯ, ಯು. ದಾಸಪ್ಪ, ಶ್ರೀಮತಿ ರೇಣುಕಮ್ಮ ಲಕ್ಷ್ಮೀನಾರಾಯಣ್, ಹನುಮಂತಪ್ಪಚಿಣಿ ಮುಶಿಗೇರಿ, ಮಲ್ಲಪ್ಪ ಕೈದಾಳು ಮುಂತಾದ ಮಹನೀಯರ ಉದಾರ

ಸಹಾಯದಿಂದ ವಿದ್ಯಾರ್ಥಿನಿಲಯ ಎದ್ದು ನಿಂತಿದೆ. ಸಮಾಜದ ಉದಾತ್ತ ಕೆಲಸಕಾರ್ಯಗಳಿಗೆ ಉಪ್ಪಾರ ಬಂಧುಗಳು ಕೊಡುಗೈ ದಾನಿಗಳಾಗಿದ್ದಾರೆ. ಉದ್ದೇಶಿತ ಕಲ್ಯಾಣಮಂಟಪ ಹಾಗು ವಾಣಿಜ್ಯ ಸಂಕೀರ್ಣ ತಲೆಯೆತ್ತಿ ಅದರಿಂದ ಬರಬಹುದಾದ ಆದಾಯದಿಂದ ರಾಜ್ಯದ ಕೆಲವು ಸ್ಥಳಗಳಲ್ಲಾದರೂ ವಿದ್ಯಾರ್ಥಿನಿಲಯ, ಭಗೀರಥ ಭವನ ನಿರ್ಮಿಸುವ ಆಶಯ ಅವರೆಲ್ಲರದು.

ರಾಜ್ಯದ ಹೃದಯಭಾಗವಾದ ಬೆಂಗಳೂರಿನಲ್ಲಿ ಹೆಚ್ಚು ಕಡಿಮೆ ಎಲ್ಲ ಸಮುದಾಯದವರ ವಿದ್ಯಾಸಂಸ್ಥೆಗಳು ಇದ್ದು, ಉಪ್ಪಾರ ಸಮುದಾಯಕ್ಕೆ ಸೇರಿದ ವಿದ್ಯಾಸಂಸ್ಥೆಗಳು ಇಲ್ಲದಿರುವುದು ಈ ಸಮುದಾಯ ರಾಜಕೀಯವಾಗಿ ಹಾಗು ಶೈಕ್ಷಣಿಕವಾಗಿ ಎಷ್ಟರ ಮಟ್ಟಿಗೆ ಹಿಂದುಳಿದಿದೆ ಎಂಬುದನ್ನು ಯೋಚಿಸಬಹುದಾಗಿದೆ. ಡಿ.ಎಸ್. ರಾಮಪ್ಪ ಅವರು 1984ರಿಂದ ಸುಮಾರು ಹನ್ನೊಂದು ವರ್ಷಗಳ ಕಾಲ ಸತತವಾಗಿ ರಾಜ್ಯ ಸಂಘದ ಅಧ್ಯಕ್ಷರಾಗಿದ್ದು ಸಮಾಜದ ಪ್ರಗತಿಗೆ ಅಮೋಘ ಸೇವೆ ಸಲ್ಲಿಸಿದ್ದಾರೆ. ಅದೇ ಸಮುದಾಯದ ಲೋಕಸೇವಾ ಆಯೋಗದ ನಿವೃತ್ತ ಸದಸ್ಯರಾಗಿದ್ದ ಹೆಚ್. ಸಿ. ನೀರಾವರಿ ಅವರು ಸಮಾಜಕ್ಕೆ ಬೆಂಗಳೂರಿನಲ್ಲಿ ಬೆಲೆ ಬಾಳುವ ನಿವೇಶನ ದೊರಕುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ತಮ್ಮ ಸ್ವಂತ ತಾಲ್ಲೂಕಾದ ಕುಷ್ಟಗಿಯಲ್ಲಿನ ಸಮಾಜ ಬಾಂಧವರಿಂದ ಸುಮಾರು 75000 ರೂ.ಗಳನ್ನು ಟ್ರಸ್ಟಿಗೆ ಕೊಡಿಸಿದ್ದಾರೆ. ಆ ಹಣವನ್ನು ರಾಜ್ಯದ ಇಡೀ ಸಮಾಜದ ಬಾಂಧವರಿಗೆ ಅನುಕೂಲವಾಗುವ ರೀತಿಯಲ್ಲಿ ಟ್ರಸ್ಟ್ ನಿವೇಶನದಲ್ಲಿ ಸಭಾಂಗಣ ಇತ್ಯಾದಿ ನಿರ್ಮಿಸಲು ಉಪಯೋಗಿಸಲಾಗಿದೆ. ಶ್ರೀಯುತ ಎಚ್.ಸಿ. ನೀರಾವರಿಯವರು ಉಪ್ಪಾರ ಸಮಾಜವು ಶೈಕ್ಷಣಿಕವಾಗಿ ಹಾಗು ಆರ್ಥಿಕವಾಗಿ ಹಿಂದುಳಿದಿದ್ದು, ಅದನ್ನು ಪ್ರವರ್ಗ ಒಂದಕ್ಕೆ ಸೇರಿಸುವಲ್ಲಿ ತಮ್ಮ ಪ್ರಭಾವ ಬೀರಿದ್ದಾರೆ.

ಎಂ. ಹನುಮಯ್ಯ ಸಹಕಾರಿ ಇಲಾಖೆಯ ನಿವೃತ್ತ ಹಿರಿಯ ಅಧಿಕಾರಿಗಳಾಗಿದ್ದು 1984ರಿಂದ ರಾಜ್ಯ ಸಂಘದ ಪ್ರಧಾನ ಕಾರ್ಯದರ್ಶಿ ಹಾಗು ಭಗೀರಥ ಧಾರ್ಮಿಕ ಟ್ರಸ್ಟ್‌ನ ವ್ಯವಸ್ಥಾಪಕ ಟ್ರಸ್ಟಿಗಳಾಗಿ ಸಮಾಜಕ್ಕೆ ಸೇವೆ ಸಲ್ಲಿಸಿದ್ದಾರೆ.

ಜ್ಞಾನವೃದ್ಧರೂ ಹಾಗು ವಯೋವೃದ್ಧರೂ ಆಗಿದ್ದ ದಿ|| ಡಾ|| ಮುನಿವೆಂಕಟಸ್ವಾಮಿಯವರು ಒಂದು ಕೊಠಡಿಯನ್ನು ಕಟ್ಟಿಸಿಕೊಟ್ಟಿದ್ದಲ್ಲದೆ, ನಿವೇಶನಕ್ಕೆ ಬೇಕಾದ ಹಣವನ್ನು ಉದಾರವಾಗಿ ದಾನ ಮಾಡಿದ್ದಾರೆ. ಅವರು ರಾಜ್ಯ ಸಂಘದ ಖಜಾಂಚಿಯಾಗಿ ಅನುಪಮ ಸೇವೆ ಸಲ್ಲಿಸಿದ್ದಾರೆ. ತಮ್ಮ ಕೊನೆ ಉಸಿರಿರುವತನಕ ಬಡವ ಬಲ್ಲಿದರೆನ್ನದೆ ಬಾಲಾಜಿ ಕ್ಲಿನಿಕ್‌ನಲ್ಲಿ ರೋಗಿಗಳ ಶುಶ್ರೂಷೆ ನೀಡಿದ್ದಾರೆ.

ಬಿ.ಎಂ. ರಾಮಯ್ಯನವರು ರಾಜ್ಯಸಂಘದ ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಂಘದ ಚಟುವಟಿಕೆಗಾಗಿ ಉದಾರ ಕೊಡುಗೆ ಕೊಟ್ಟಿದ್ದಾರೆ. ಅವರು ರಾಜ್ಯ ಸಂಘದ ಪದಾಧಿಕಾರಿಗಳಾಗಿಯೂ ಸೇವೆ ಸಲ್ಲಿಸಿದ್ದಾರೆ.

ಡಾ|| ಎಸ್. ಭೀಮಪ್ಪ ಅವರು ರಾಜ್ಯ ಸಂಘದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಸರ್ಜರಿಯ ಪ್ರೊಫೆಸರ್ ಆಗಿದ್ದ ಅವರು ತಮ್ಮದೇ ಆದ ಹಿಲ್‌ಸೈಡ್ ಮತ್ತು ಭೀಮಚಂದ್ರ ಎಂಬ ನರ್ಸಿಂಗ್ ಹೋಂಗಳನ್ನು ನಡೆಸುತ್ತಿದ್ದಾರೆ.

ಕೀರಳಾಪುರದ ಡಾ. ಎಸ್. ರಾಮಪ್ಪನವರು 1960ರಿಂದ ಸುಮಾರು 40 ವರ್ಷಗಳ ಕಾಲ ಬೆಂಗಳೂರಿನ ರಾಜಾಜಿನಗರದ ಒಂದನೆಯ ಬ್ಲಾಕ್‌ನಲ್ಲಿ ವಿಕ್ಟರಿ ಕ್ಲಿನಿಕ್ ಹಾಗು ಅನಂತರ ಅದೇ ಬಡಾವಣೆಯ 3ನೇ ಬ್ಲಾಕ್‌ನಲ್ಲಿ ವಿಕ್ಟರಿ ನರ್ಸಿಂಗ್ ಹೋಂ ಸ್ಥಾಪಿಸಿ, ತನ್ಮೂಲಕ ಶ್ರದ್ಧೆಯಿಂದ ಸಹಸ್ರಾರು ರೋಗಿಗಳಿಗೆ ಶುಶ್ರೂಷೆ ಮಾಡಿದ್ದಾರೆ. ಆ ಭಾಗದಲ್ಲಿ ಶ್ರೀಯುತರು ಅತ್ಯಂತ ಜನಾನುರಾಗಿ ವೈದ್ಯರು.

ತುಮಕೂರಿನ ಮೆಳೆಕೋಟೆಯ ಡಾ. ಅಂಜನಯ್ಯ ಹೆಸರಾಂತ ಸರ್ಜನ್. ಇಪ್ಪತ್ನಾಲ್ಕು ವರ್ಷದ ಸುದೀರ್ಘ ಸರಕಾರಿ ಸೇವೆ ಮಾಡಿ, ಡೆಪ್ಯುಟಿ ಸರ್ಜನ್ ಹುದ್ದೆಯಿಂದ ಸ್ವಯಂ ನಿವೃತ್ತಿ ಹೊಂದಿ, ಬೆಂಗಳೂರಿನ ಶೇಷಾದ್ರಿಪುರಂನ ಲಿಂಕ್ ರಸ್ತೆಯಲ್ಲಿ ತಮ್ಮದೇ ಆದ ಏಕಾಗ್ರತಿ ನರ್ಸಿಂಗ್ ಹೋಂ ಸ್ಥಾಪಿಸಿ, ಸಹಸ್ರಾರು ರೋಗಿಗಳಿಗೆ ಚಿಕಿತ್ಸೆ ನೀಡುತ್ತಿದ್ದಾರೆ. ಇವರ ಸೇವೆಯನ್ನು ಪರಿಗಣಿಸಿ ಕರ್ನಾಟಕ ಮೆಡಿಕಲ್ ಅಸೋಸಿಯೇಷನ್, ಬೆಂಗಳೂರು ಶಾಖೆ ಇವರಿಗೆ ಸನ್ಮಾನಿಸಿದ್ದು ಸಮಾಜಕ್ಕೆ ಹೆಮ್ಮೆಯ ವಿಷಯ. ಇವರು ತಮ್ಮ ಹುಟ್ಟೂರಾದ ಮೆಳೆಕೋಟೆಯಲ್ಲಿ ಅಭಯ ಆಂಜನೇಯ ದೇವಸ್ಥಾನ ಕಟ್ಟಿಸಿದ್ದು, ಸ್ವಂತ ಆಸಕ್ತಿ ವಹಿಸಿ ಪಬ್ಲಿಕ್ ಟ್ರಸ್ಟ್ ಒಂದನ್ನು ರಿಜಿಸ್ಟರ್ ಮಾಡಿ, ತನ್ಮೂಲಕ ಅದೇ ಪರಿಸರದಲ್ಲಿ ಕಲ್ಯಾಣಮಂಟಪ ಕಟ್ಟಿಸಿದ್ದಾರೆ ಹಾಗು ಅದರಿಂದ ಬರುತ್ತಿರುವ ಯಾವತ್ತೂ ಉತ್ಪನ್ನವನ್ನು ಸಾರ್ವಜನಿಕ ಕೆಲಸಕಾರ್ಯಗಳಿಗೆ ವಿನಿಯೋಗಿಸುತ್ತಾರೆ.

ಶಿವಣ್ಣ ನೀರಾವರಿ ಅವರು ಸರಕಾರದ ಉನ್ನತ ಹುದ್ದೆಯಲ್ಲಿದ್ದುಕೊಂಡು (ಡೆಪ್ಯುಟಿ ಕಮಿಷನರ್, ವಾಣಿಜ್ಯ ತೆರಿಗೆ) ಸಮಾಜದ ಚಟುವಟಿಕೆಗಳಲ್ಲಿ ಸಕ್ರಿಯ ಭಾಗವಹಿಸುತ್ತಿದ್ದಾರೆ. ರಾಜ್ಯ ಸಂಘದ ನೌಕರರ ವಿಭಾಗದ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಯು. ಭೂಪತಿ ಅವರು ಉಪ್ಪಾರ ಸಮಾಜದ ಗಣ್ಯವ್ಯಕ್ತಿಗಳಾಗಿದ್ದು ಸಂಡೂರು ವಿಧಾನಸಭಾ ಕ್ಷೇತ್ರದಿಂದ ರಾಜ್ಯದ ವಿಧಾನಸಭೆಗೆ ಆಯ್ಕೆಯಾಗಿದ್ದರು. ಇವರು ಸಮಾಜದ ಆಗು-ಹೋಗುಗಳ ಬಗ್ಗೆ ತುಂಬ ಆಸಕ್ತಿಯುಳ್ಳವರಾಗಿದ್ದಾರೆ. ಪ್ರಸ್ತುತ ರಾಜ್ಯದ ಹಿಂದುಳಿದ ಆಯೋಗದ ಸದಸ್ಯರಾಗಿದ್ದಾರೆ.

ಯು. ಶಿವಣ್ಣನವರು ಸಮಾಜದ ಗಣ್ಯ ವ್ಯಕ್ತಿಗಳಲ್ಲಿ ಒಬ್ಬರು. ಸಕ್ರಿಯ ರಾಜಕಾರಣಿಗಳು ಇವರು ಬ್ಯಾಪ್ಕೋ ಸಂಸ್ಥೆಯ ಅಧ್ಯಕ್ಷರಾಗಿದ್ದರು. ನಿವೃತ್ತ ಕಾರ್ಮಿಕ ಅಧಿಕಾರಿ ಗೋವಿಂದಪ್ಪ ರಾಜ್ಯ ಸಂಘದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. ಡಾ|| ಲಕ್ಷ್ಮೀನರಸಯ್ಯ, ಡಾ|| ಬಿ.ಎಸ್. ಸೂರ್ಯನಾರಾಯಣ್, ಡಾ|| ವಿಜಯಲಕ್ಷ್ಮೀ, ಡಾ|| ಕೆ.ಎಸ್. ರವೀಂದ್ರನಾಥ್, ಡಾ|| ಶಾರದಾ ರವೀಂದ್ರನಾಥ್, ಡಾ|| ಆಶಾಲತಶ್ರೀನಿವಾಸ, ಡಾ|| ಎನ್. ಎಂ. ಶ್ರೀನಿವಾಸ,

ಡಾ॥ ವೆಂಕಟೇಶ್, ಡಾ॥ ದಿ॥ ಎಂ.ಜಿ. ತಿಮ್ಮಯ್ಯ, ಡಾ॥ ರಾಮಯ್ಯ, ಡಾ॥ ವೇಣು ಗೋಪಾಲ್, ಡಾ॥ ಶಂಕರಗೋಖಲೆ, ಡಾ॥ ಬಿ.ಎಂ. ಪ್ರಸಾದ್, ಡಾ॥ ಸರಳಾದೇವಿ, ಡಾ॥ ಶಶಿ, ಡಾ॥ ಶೈಲಜ, ಡಾ॥ ಯು. ಮಂಜುಳಾ ಮುಂತಾದವರು ಸಮಾಜದ ತಜ್ಞ ವೈದ್ಯರುಗಳಾಗಿದ್ದಾರೆ.

ಹೆಚ್. ಬಿಲ್ಲಪ್ಪ, ಎಸ್.ಎಂ. ಲಾತೂರ್, ಆರ್. ಕವಿತಾ, ರಾಜೇಶ್ವರಿ ಮುಂತಾದವರು ಕ್ರಿಯಾಶೀಲ ವಕೀಲರು. ಎಸ್.ಎಂ. ಲಾತೂರ ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದರು. ಡಿ.ಎಸ್. ಚಂದ್ರಕಾಂತ ನೋಟರಿ ಆಗಿದ್ದರು.

ಎಸ್. ಹಳದಪ್ಪ, ನಿವೃತ್ತ ಸರ್ಕಾರದ ಮುಖ್ಯ ಇಂಜಿನಿಯರ್. ಸಿ.ಹೆಚ್. ವೆಂಕಟದಾಸಪ್ಪ ಕಾರ್ಯನಿರ್ವಾಹಕ ನಿವೃತ್ತ ಇಂಜಿನಿಯರ್. ಬಿ.ಎಂ. ರಾಮಯ್ಯ ಕೆಇಬಿ ನಿವೃತ್ತ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್. ಸ್ವಾಮಿನಾಥನ್ ಕೆಇಬಿ ಎಲೆಕ್ಟ್ರಿಕಲ್ ಇಂಜಿನಿಯರ್. ಡಿ.ಆರ್. ಯೋಗೀಂದ್ರ ರಕ್ಷಣಾ ಇಲಾಖೆಯಲ್ಲಿ ಹಿರಿಯ ವಿಜ್ಞಾನಿ. ದಿ॥ ಟಿ. ರಂಗಪ್ಪ ನಿವೃತ್ತ ಎಕ್ಸಿಕ್ಯೂಟಿವ್ ಇಂಜಿನಿಯರ್. ದಿವಂಗತ ಟಿ. ಮುನಿವೆಂಕಟಸ್ವಾಮಿ, ನಿವೃತ್ತ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್. ಸೇಜಪ್ಪ, ನಿವೃತ್ತ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್. ಜಿಲ್ಲಾಪಂಚಾಯಿತಿ ನಿವೃತ್ತ ಉಪಕಾರ್ಯದರ್ಶಿ ಕೆ.ಆರ್. ನಂಜಯ್ಯ. ಹೆಚ್.ಎಂ.ಟಿ.ಯ ನಿವೃತ್ತ ಉದ್ಯೋಗಿ ಹೆಚ್. ದೇವುಗಪ್ಪ. ವಿದ್ಯಾಇಲಾಖೆಯ ಉದ್ಯೋಗಿ ಎ.ವ್ವಿ. ಲೋಕೇಶ. ಬಿ.ಹೆಚ್.ಇ.ಎಲ್.ನ ನಿವೃತ್ತ ಉದ್ಯೋಗಿ ಜಿ. ನೀಲಪ್ಪ, ನಿವೃತ್ತ ಇಂಜಿನಿಯರ್ ಶಿವಯೋಗಿ ಮುಂತಾದವರು. ಸಮಾಜದ ಬಗ್ಗೆ ಅಪಾರ ಅಭಿಮಾನವುಳ್ಳವರಾಗಿದ್ದಾರೆ.

ಹೆಚ್. ಹನುಮಂತರಾಯ, ಆರ್. ರಂಗಪ್ಪ, ಟಿ. ಪ್ರಕಾಶ್ ಇವರುಗಳು ಶಿಕ್ಷಣ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದಾರೆ. ಡಾ॥ ಪಿ. ನಾಗರಾಜ್, ವೈ.ಬಿ. ಮರಳುಬಾವಿ, ಮುನಿಯಪ್ಪ, ಶ್ರೀನಿವಾಸ್ ಕಾಲೇಜಿನಲ್ಲಿ ಹೆಸರಾಂತ ಅಧ್ಯಾಪಕರಾಗಿದ್ದಾರೆ. ಡಾ. ವಿಜಯಕುಮಾರ ತೋರಗಲ್, ಸಿದ್ದಣ್ಣ ಹನುಮಸಾಗರ, ಸದಾಶಿವ ಕೊಳವಿ, ಹನುಮಂತರಾಯಪ್ಪ, ನಾಗೇಂದ್ರಪ್ಪ ಮೊದಲಾದವರು ಸರ್ಕಾರದ ಉನ್ನತ ಹುದ್ದೆಗಳಲ್ಲಿದ್ದಾರೆ.

ಎಸ್. ಪಾತಯ್ಯ ತೋಟಗಾರಿಕೆ ಇಲಾಖೆಯ ನೌಕರರು ಮತ್ತು ಸಮಾಜದ ಸಕ್ರಿಯ ಕಾರ್ಯಕರ್ತರಾಗಿದ್ದಾರೆ. ಓಂಕಾರ್ ನರ್ಸರಿ ಅಂಡ್ ಗಾರ್ಡನ್ಸ್, ತರಕಾರಿ, ಡೆಕೋರೇಷನ್ ಇತ್ಯಾದಿಗಳಲ್ಲಿ ಅತ್ಯುತ್ತಮ ಸೇವೆ ಸಲ್ಲಿಸುತ್ತಿದ್ದಾರೆ. ಎಸ್. ನಾಗರಾಜ್, ರಮೇಶಮೇಟಿ, ಆದಿಯಪ್ಪ, ಬಿ.ಕೆ. ರಾಜು, ಅಶೋಕ್ ಮೊದಲಾದವರು ಪೊಲೀಸ್ ಇಲಾಖೆಯಲ್ಲಿ ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಜಿ. ಗೋವಿಂದಪ್ಪನವರು ಬಂದೀಖಾನೆ ಇಲಾಖೆಯಲ್ಲಿ ಉನ್ನತ ಅಧಿಕಾರಿಯಾಗಿದ್ದಾರೆ. ಹರಿಬಾಬು ಚಿತ್ರ ನಿರ್ಮಾಪಕ. ಎಂ. ಪ್ರಕಾಶ, ಬಿ.ವಿ. ಸುರೇಶ, ಬಿ.ವಿ. ಸುನೀತಾ, ಸಾಫ್ಟ್‌ವೇರ್ ಇಂಜಿನಿಯರ್‌ಗಳು ಪರದೇಶದಲ್ಲಿದ್ದಾರೆ.

ಡಾ।। ಹೆಚ್.ಕೆ. ಕಾಳಪ್ಪ ಸೆಂಟ್ರಲ್ ಸಿಲ್ಕ್ ಬೋರ್ಡ್‌ನಲ್ಲಿ ಜಂಟಿ ನಿರ್ದೇಶಕರಾಗಿದ್ದಾರೆ. ಅದೇ ಇಲಾಖೆಯಲ್ಲಿ ಟಿ. ಪ್ರಕಾಶ್ ಅವರು ಅರ್ಥಶಾಸ್ತ್ರ ವಿಭಾಗದ ಸಹಾಯಕ ನಿರ್ದೇಶಕರಾಗಿದ್ದಾರೆ.

ಬಿ. ರಾಮಯ್ಯ, ಜಿ.ಡಿ. ಬೈರಲಿಂಗಯ್ಯ ಅವರು ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಉನ್ನತ ಅಧಿಕಾರಿಗಳಾಗಿ ನಿವೃತ್ತಿ ಹೊಂದಿದ್ದಾರೆ. ಡಿ. ಮಹೇಶ್, ಬಿ.ವಿ. ಸುರೇಶ್, ಬಿ.ಸಿ. ವೆಂಕಟೇಶಮೂರ್ತಿ, ಬಿ.ವಿ. ಜಗದೀಶ್ ಮುಂತಾದವರು ಕಲಾವಿದರು. ಶಿವಣ್ಣನವರು ಬೆಂಗಳೂರು ಡೈರಿಯಲ್ಲಿ ಎಕ್ಸ್‌ಟೆನ್‌ಶನ್ ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಬಿ.ಆರ್. ಜೈರಾಮ್ ಫಾರೆನ್ಸಿಕ್ ವಿಜ್ಞಾನದ ತಜ್ಞರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಪಿ. ಕೇಶವ ಪೆರುಮಾಳ್ ಇಂಡಿಯನ್ ಸ್ಟಾಟಿಸ್ಟಿಕಲ್ ಇನ್ಸ್‌ಸ್ಟಿಟ್ಯೂಟ್ ಆಫ್ ಬೆಂಗಳೂರು ಇಲ್ಲಿ ಪ್ರೊಫೆಸರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಜಗನ್ನಾಥ್‌ರವರು ಜಾಗನಿಕ್ಸ್ ಇಂಡಸ್ಟ್ರೀಸ್, ಎಂ.ಎಸ್. ಲೋಕೇಶ್ ಎಲೆಕ್ಟ್ರಾನಿಕ್ ಇಂಡಸ್ಟ್ರೀಸ್, ಎ.ಸಿ. ನರಸಿಂಹಗೌಡ ಎಲೆಕ್ಟ್ರೋಪ್ಲೇಟಿಂಗ್ ಇಂಡಸ್ಟ್ರೀಸ್, ಶಶಿಧರ್ ಪ್ಯಾಬ್ರಿಕೇಷನ್ ಇಂಜಿನಿಯರ್ ವರ್ಕ್‌ಶಾಪ್, ವೇಣುಗೋಪಾಲ್ ವೆಂಕಟೇಶ್ವರ ಇಂಜಿನಿಯರಿಂಗ್ ವರ್ಕ್ಸ್, ಸಿ. ಕೃಷ್ಣಪ್ಪ ಸಪ್ತಗಿರಿ ಪೇಂಟ್ಸ್ ಅಂಡ್ ವಾರ್ನಿಷ್ ಬಣ್ಣದ ತಯಾರಕರು. ಹೀಗೆ ಇವರೆಲ್ಲ ಬೇರೆ ಬೇರೆ ಉದ್ದಿಮೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಇತ್ತೀಚೆಗೆ ಹಲವಾರು ಪ್ರತಿಭಾವಂತ ಯುವಕರು ಇಂಜಿನಿಯರಿಂಗ್ ಮತ್ತು ಡಾಕ್ಟರ್ ಕೋರ್ಸ್‌ಗಳನ್ನು ಮುಗಿಸಿ ಸ್ಪರ್ಧಾಲೋಕಕ್ಕೆ ಇಳಿದಿದ್ದಾರೆ. ಶ್ರೀ ವೀರಪ್ಪ ಮೊಯಿಲಿ ಅವರ ಸರ್ಕಾರದ ಕೃಪೆಯಿಂದ ಈ ಸಮಾಜವನ್ನು ಪ್ರವರ್ಗ Iಕ್ಕೆ ಸೇರಿಸಿದ್ದರಿಂದ ಸಮಾಜದ ಯುವ ಪ್ರತಿಭೆಗೆ ಶಿಕ್ಷಣ ಹಾಗು ಉದ್ಯೋಗಗಳಲ್ಲಿ ಸ್ವಲ್ಪ ಮಟ್ಟಿಗೆ ಅವಕಾಶಗಳು ಲಭ್ಯವಾಗತೊಡಗಿವೆ.

ಬೆಂಗಳೂರು ನಗರ ಜಿಲ್ಲೆಯಲ್ಲಿ ಉಪ್ಪಾರರ ಆರ್ಥಿಕ ಪರಿಸ್ಥಿತಿ ತುಂಬ ಅನುಕೂಲಕರವಲ್ಲದಿದ್ದರೂ, ಸ್ವಲ್ಪಮಟ್ಟಿಗೆ ಸಮಾಧಾನಕರವಾಗಿದೆ. ಹೆಚ್ಚಿನ ಉಪ್ಪಾರ ಕುಟುಂಬಗಳು ಮಧ್ಯಮ ವರ್ಗಕ್ಕೆ ಸೇರಿವೆ. ನಗರ ಪ್ರದೇಶದಲ್ಲಿ ಸಾಕ್ಷರತೆ ಪ್ರಮಾಣ ಕೂಡ ತಕ್ಕಮಟ್ಟಿಗೆ ಉತ್ತೇಜನಕಾರಿಯಾಗಿದೆ. ನಗರದ ವಿದ್ಯಾವಂತ ಉಪ್ಪಾರ ಜನಾಂಗ ಮಾನಸಿಕವಾಗಿ ಮೊದಲು ಒಗ್ಗೂಡಬೇಕು. ಅಂದಾಗ ಮಾತ್ರ ಗ್ರಾಮಾಂತರ ಪ್ರದೇಶದಲ್ಲಿ ಬಡತನ, ನಿರಕ್ಷರತೆಗಳಿಂದ ನರಳುತ್ತಿರುವ ಸಮಾಜ ಬಾಂಧವರಿಗೆ ಮಾರ್ಗದರ್ಶನ ಹಾಗು ಸಹಾಯಹಸ್ತ ಚಾಚಬಹುದಾಗಿದೆ.

**ಮಾಹಿತಿಸಂಗ್ರಹ** : *ಬಿ.ಎಂ. ರಾಮಯ್ಯ, ಎನ್. ಪಾತಯ್ಯ, ಪ್ರಕಾಶ್, ಆರ್. ಜಯರಾಮ, ಎಂ.ಡಿ. ನಂಜುಂಡಪ್ಪ, ಆರ್. ತಮ್ಮಣ್ಣ, ಟಿ. ಶಿವರಾಮಯ್ಯ*

*

# * ಉಪ್ಪಾರ ಸಮಾಜ : ಒಂದು ಅಧ್ಯಯನ

- ಡಾ. ಎಂ.ಬಿ. ರಾಜಾಮಣಿ
ನಿವೃತ್ತ ಪ್ರಾಧ್ಯಾಪಕರು, ಸಮಾಜಶಾಸ್ತ್ರ,
ಮತ್ತು ಯು.ಜಿ.ಸಿ. ಎಮಿರಿಟಸ್ ಫೆಲೋ
ಮೈಸೂರು.

**ದಂಪತಿಗಳ ಹರಕೆ ಇರಲಿ!**

ಸೋದರ ಶ್ರೀ ಕೆ.ಆರ್. ಕಮಲೇಶ್ ಹಾಗೂ ಅವರ ಪತ್ನಿ ಶ್ರೀಮತಿ ಎನ್. ಭಾರತಿ ಅವರು ಈ ವರ್ಷದ ಫೆಬ್ರವರಿ ತಿಂಗಳಲ್ಲಿ ಒಮ್ಮೆ ದೂರವಾಣಿ ಮಾಡಿ "ಮೇಡಂ, ಕುಷ್ಟಗಿ ತಾಲ್ಲೂಕು ಹನುಮನಾಳ್‌ನಲ್ಲಿ 'ಭಗೀರಥ ಸಂಕಲ್ಪ' ಪತ್ರಿಕೆಯ ಬಿಡುಗಡೆ ಇಟ್ಟುಕೊಂಡಿದ್ದೇವೆ. ನೀವು ಮತ್ತು ನಿಮ್ಮ ಸೋದರಿ ಡಾ|| ಪದ್ಮ ಅವರು ಬರಬೇಕು" ಎಂದರು. ಶ್ರೀ ಕಮಲೇಶ್ ದಂಪತಿಗಳ ಒತ್ತಾಯದ ಮೇಲೆ ನಾವು ಅಲ್ಲಿಗೆ ಹೋದಾಗ ಪತ್ರಿಕೆಯ ಪ್ರಧಾನ ಸಂಪಾದಕರಾದ ಶ್ರೀ ಹೆಚ್.ಸಿ. ನೀರಾವರಿ ಅವರ ಪರಿಚಯ ವಾಯಿತು. ಕುಷ್ಟಗಿಯಲ್ಲಿರುವ ಶ್ರೀ ನೀರಾವರಿಯವರ ಸೋದರಿಯ ರೆಲ್ಲಾ ತುಂಬಾ ಮುಗ್ಧರು ಹಾಗೂ ಅತಿಥಿ ಸತ್ಕಾರಕ್ಕೆ ಹೆಸರಾದವರು. ಶ್ರೀ ಹೆಚ್.ಸಿ. ನೀರಾವರಿಯವರು ವಿಶೇಷವಾಗಿ ದುರ್ಬಲ ವರ್ಗದವರ ಬಗ್ಗೆ ಕಾಳಜಿ ಉಳ್ಳವರು. ಈ ಸಮಾರಂಭದ ಅಧ್ಯಕ್ಷತೆ ಯನ್ನು ಶ್ರೀ ಡಿ.ಎಸ್. ರಾಮಪ್ಪ ವಹಿಸಿದ್ದರು. ಶ್ರೀ ನೀರಾವರಿಯವರು ನಮ್ಮ ಅಧ್ಯಕ್ಷರಿಗೆ ಎಪ್ಪತ್ತೈದು ವರ್ಷಗಳು ಎಂದಾಗ ನನಗೆ ನಂಬಲಿಕ್ಕೆ ಆಗಲಿಲ್ಲ. ಐವತ್ತರ ಹರೆಯದಂತೆ ಶ್ರೀ ರಾಮಪ್ಪನವರು ಸದಾ ಚಟುವಟಿಕೆಯಿಂದಿದ್ದರು. ಮಾತಿನ ನಡುವೆ ಅವರ ಜೀವನದ ಪರಿಚಯವಾಯಿತು. ಐದು ವರ್ಷದವರಾಗಿದ್ದಾಗ ತಾಯಿಯನ್ನೂ ಎಂಟು ವರ್ಷದವರಾಗಿದ್ದಾಗ ತಂದೆಯನ್ನೂ ಕಳೆದುಕೊಂಡ ಶ್ರೀ ರಾಮಪ್ಪ ಸ್ವಸಾಮರ್ಥ್ಯದಿಂದ ಮೇಲೆ ಬಂದಿದ್ದಾರೆ. ಸ್ವಾಮಿ

ವಿವೇಕಾನಂದರು ಹೇಳುವಂತೆ ಅವರು ಜೀವನದಲ್ಲಿ ಗುರು ಮತ್ತು ಗುರಿಯನ್ನು ಬಹು ಬೇಗ ಕಂಡುಕೊಂಡಿದ್ದಾರೆ. ಐವತ್ತರ ದಶಕದಲ್ಲಿ ಸಿವಿಲ್ ಇಂಜಿನಿಯರ್ ಆಗಿ ನಿಷ್ಠೆಯಿಂದ ಸರ್ಕಾರಿ ಸೇವೆ ಸಲ್ಲಿಸಿ ಒಳ್ಳೆಯ ಹೆಸರಿನೊಡನೆ ನಿವೃತ್ತರಾಗಿದ್ದಾರೆ. ಅವರು ಉಪ್ಪಾರ ಸಮಾಜಕ್ಕೆ ಮಾಡಿರುವ ಸೇವೆ ಎಲ್ಲರಿಗೂ ಸ್ಫೂರ್ತಿ ನೀಡುವಂತಹದು. ಅವರ ಈ ಸಮಾಜಸೇವೆಯಲ್ಲಿ ಅವರ ಧರ್ಮಪತ್ನಿ ಶ್ರೀಮತಿ ಸಣ್ಣಮ್ಮ ರಾಮಪ್ಪ ಅವರ ತ್ಯಾಗ ದೊಡ್ಡದು. ಈ ದಂಪತಿಗಳಿಬ್ಬರ ಹರಕೆ-ಹಾರೈಕೆ ಉಪ್ಪಾರ ಸಮುದಾಯಕ್ಕೆ ಸದಾ ಇರಲಿ.

**ಬಹುಸಂಸ್ಕೃತಿಯ ಭಾರತೀಯ ಸಮಾಜ**

ಭಾರತೀಯ ಸಮಾಜ ಸಾವಿರಾರು ವರ್ಷಗಳವರೆಗೆ ಹಬ್ಬಿ ಬೆಳೆದಿರುವ ಸುದೀರ್ಘ ಇತಿಹಾಸವನ್ನು ಮತ್ತು ಅವಿಚ್ಛಿನ್ನ ಧಾರೆಯಂತಹ ಭವ್ಯ ಪರಂಪರೆಯನ್ನು ಹೊಂದಿದೆ. ಸಿಂಧೂನದಿ ಕಣಿವೆ ಸಂಸ್ಕೃತಿಯ ಕಾಲದಿಂದ ಅಥವಾ ಅದಕ್ಕೂ ಹಿಂದಿನಿಂದ ಈ ಸಮಾಜದ ಜೀವನಕ್ರಮ ಹಾಗೂ ಸಂಸ್ಕೃತಿಯಲ್ಲಿ ಒಂದು ಗಮನಾರ್ಹವಾದ ನಿರಂತರತೆ ಕಂಡುಬರುತ್ತಿದೆ. ಇದರಲ್ಲಿ 'ಮಾಧುರ್ಯ ಮತ್ತು ಸುಜ್ಞಾನ'ದ ಸ್ಪಷ್ಟ ಪ್ರತಿಬಿಂಬವನ್ನು ಕಾಣಬಹುದು. ಇದು ಸತ್ಯ, ಅಹಿಂಸೆ, ದಯೆ, ವಿಶ್ವಪ್ರೇಮ, ಹೃದಯ ವೈಶಾಲ್ಯ, ಔದಾರ್ಯ, ವಿಶಾಲ ಮನೋಭಾವ ಹಾಗೂ ವಿಶ್ವಾಸಪೂರ್ಣ ಆತಿಥ್ಯ ಮುಂತಾದ ಜೀವನೋದ್ಧಾರಕ ಮೂಲಭೂತ ಮೌಲ್ಯಗಳ ಸುಮಧುರ ಸವಿಯೂ, ತಿರುಳೂ ಆಗಿದೆ ಮತ್ತು ರಚನಾತ್ಮಕ ಸಮಗ್ರ ಅರಿವು ಹಾಗೂ ಆಧ್ಯಾತ್ಮಿಕ ಜ್ಞಾನ ಜ್ಯೋತಿಯ ಪ್ರತಿಫಲವೂ ಆಗಿದೆ. ಇದು ಇತರ ಸಮಾಜ ಹಾಗೂ ಸಂಸ್ಕೃತಿಗಳೊಂದಿಗೆ ಸಂಪರ್ಕಗಳನ್ನು ಬೆಳೆಸಿಕೊಳ್ಳುತ್ತಾ ಬಂದಿದೆ. ಈ ಕಾರಣದಿಂದ ಇದು ಗತಿಶೀಲವಾಗಿ ಅಭಿವೃದ್ಧಿಶೀಲವಾಗಿ ಸಂಪದ್ಯುಕ್ತವಾಗಿದೆ. ವಿಭಿನ್ನ ಜನಾಂಗ, ಸಾಮಾಜಿಕ-ಸಾಂಸ್ಕೃತಿಕ ವ್ಯವಸ್ಥೆಗಳು ಈ ನಾಡಿಗೆ ಬಂದವು. ಹೆಚ್ಚು-ಕಡಿಮೆ ಅವುಗಳೆಲ್ಲವೂ ಈ ಬೃಹತ್ ಸಾಮಾಜಿಕ-ಸಾಂಸ್ಕೃತಿಕ ಪ್ರಯೋಗಶಾಲೆಯಲ್ಲಿ ಬದಲಾವಣೆಗೆ ಒಳಗಾದವು ಹಾಗೂ ಈ ಸಮಾಜ-ಸಂಸ್ಕೃತಿಗೆ ತಮ್ಮ ಕೊಡುಗೆಗಳನ್ನು ಕೊಟ್ಟವು.

ಭಾರತ ಸಮಾಜವು ಈ ಎಲ್ಲಾ ಸಾಮಾಜಿಕ-ಸಾಂಸ್ಕೃತಿಕ ವಾಹಿನಿಗಳನ್ನು ಸ್ವಾಗತಿಸಿ, ಅವುಗಳ ಸಾರವನ್ನೆಲ್ಲಾ ಹೀರಿಕೊಳ್ಳಲು ಶಕ್ತವಾದಂತಹ ಒಂದು ಸರೋವರದಂತಿದೆ. ಸರೋವರವು ಮೋಡಗಳು ನೀಡುವ ಜಲಕಾಣಿಕೆಗಳನ್ನು ಸ್ವೀಕರಿಸಿ ಹಿಡಿದಿಟ್ಟುಕೊಳ್ಳುತ್ತದೆ. ಆದರೆ ತನ್ನ ಅಂತರಾಳದಲ್ಲಿ ತನ್ನತನವನ್ನು ಕಾಪಾಡಿಕೊಂಡಿರುತ್ತದೆ. ಅದೇ ರೀತಿ ಭಾರತ ಸಮಾಜವು ತೆರೆದ ಹೃದಯದಿಂದ ಇತರ ಸಮಾಜ-ಸಂಸ್ಕೃತಿಗಳ ಉತ್ತಮ ಅಂಶಗಳನ್ನು ಗೌರವಿಸಿ, ತನ್ನ ಹಿತಕ್ಕೆ ಆವಶ್ಯಕ ಹಾಗೂ ಅಮೂಲ್ಯವಾದುವೆಂಬುದಾಗಿ ಕಂಡುಬಂದ ಅಂಶಗಳನ್ನು ಸೇರಿಸಿಕೊಂಡು ಸಂಯೋಜಿಸಿಕೊಂಡಿದೆ. ಹೀಗೆ ತನ್ನ ಮಡಿಲಿನಲ್ಲಿ ಅನೇಕ ಕಾಣಿಕೆಗಳನ್ನು

ತುಂಬಿಸಿಟ್ಟುಕೊಂಡಿದೆ. ಅದೇ ಸಮಯದಲ್ಲಿ ಇದು ತನ್ನ ಮಣ್ಣಿನಲ್ಲಿ ತಲೆದೋರಿ ಬೆಳೆದುಬಂದಿರುವ ಹಾಗೂ ಇಂದೂ ಸಹ ಸಮರ್ಪಕವಾದುವು ಎಂಬುದಾಗಿ ಒಪ್ಪಲಾಗಿರುವ ಮೂಲಾದರ್ಶಗಳ ಮೇಲೆ ಆಧಾರಿತವಾಗಿರುವುದರಿಂದ ತನ್ನತನವನ್ನು ಕಳೆದುಕೊಳ್ಳದೆ ಭಾರತೀಯವಾಗಿಯೇ ಉಳಿದು ಮುಂದುವರಿದುಕೊಂಡು ಬರುತ್ತಿದೆ. ತನ್ನ ಮಣ್ಣಿನಲ್ಲೇ ಬಲವಾಗಿ ಬೇರೂರಿ, ಇತರ ನಾಡುಗಳ ಸಾಂಸ್ಕೃತಿಕ ನದಿಗಳ ನೀರಿನಿಂದ ಪೋಷಿಸಲ್ಪಟ್ಟಿರುವ ಈ ಸಾಮಾಜಿಕ ಜೀವನಕ್ರಮ ಪ್ರಶಂಸಾರ್ಹವಾದುದೇ.

ಭಾರತೀಯ ಸಾಮಾಜಿಕ ರಚನೆ ಗತಿಶೀಲವಾದುದು. ಪರಕೀಯ ಜನಾಂಗ ಹಾಗೂ ಸಂಸ್ಕೃತಿಗಳ ದಾಳಿಗಳು ಸತತವಾಗಿ ನಡೆಯುತ್ತಿದ್ದರೂ, ಅನ್ಯ ಸಂಸ್ಕೃತಿಗಳ ಅಪಾಯಕಾರಿ ಆಕ್ರಮಣಗಳಿಗೆ ತುತ್ತಾಗಿದ್ದರೂ ಈ ಸಾಮಾಜಿಕ- ಸಾಂಸ್ಕೃತಿಕ ವ್ಯವಸ್ಥೆ ಅಳಿಯದೆ ಉಳಿದು ಮುಂದುವರಿದುಕೊಂಡು ಬಂದಿದೆ ಎಂಬುದು ಮನುಕುಲದ ಚರಿತ್ರೆಯ ಆಶ್ಚರ್ಯಕರ ವಿಷಯಗಳಲ್ಲಿ ಒಂದಾಗಿದೆ. ಇದಕ್ಕೆ ಕಾರಣ ಇದರ ಮೂಲಭಾವನೆಗಳು. ಆದರ್ಶಗಳು ಹಾಗೂ ಮೌಲ್ಯಗಳು.

ವೈವಿಧ್ಯದಲ್ಲಿ ಏಕತೆ ಈ ಸಮಾಜದ ಅತಿ ಮುಖ್ಯವಾದ ಮೂಲಭಾವನೆ. ಇದು ಏಕತೆ, ಬಾಳು-ಬಾಳಗೊಡು, ಕೊಟ್ಟು - ತೆಗೆದುಕೊ ಮುಂತಾದ ಆರೋಗ್ಯಕರ ತತ್ತ್ವಗಳನ್ನು ಅನುಸರಿಸಿ, ತನ್ನ ಅನುಪಮ ಔದಾರ್ಯಕ್ಕೆ ಪ್ರತೀಕವಾದ ಭವನದಲ್ಲಿ ಎಲ್ಲಾ ಮತಧರ್ಮ, ತತ್ತ್ವ, ಸಿದ್ಧಾಂತ ಇತ್ಯಾದಿಗಳಿಂದ ಕೂಡಿರುವ ಹಾಗೂ ವಿಕಾಸದ ವಿಭಿನ್ನ ಹಂತಗಳಲ್ಲಿದ್ದ ಎಲ್ಲಾ ಸಮೂಹಗಳ ಸದಸ್ಯರಿಗೂ ಸ್ಥಳವನ್ನು ನೀಡಿದೆ. ದಿಗ್ಭ್ರಮೆ ಹಿಡಿಸುವಂತಹ ಕುಲ, ಜಾತಿ, ವಂಶ, ಬಣ್ಣ, ಭಾಷೆ, ಉಡಿಗೆ-ತೊಡಿಗೆ, ನಡವಳಿಕೆ, ಮತಧರ್ಮ, ಆಚಾರ ಪದ್ಧತಿ ಇತ್ಯಾದಿಗಳಿಗೆ ಸಂಬಂಧಿಸಿರುವ ವೈವಿಧ್ಯಗಳನ್ನು ಮೀರಿಸುವ, ಆಳವಾಗಿ ಬೇರೂರಿರುವ ಮೂಲಭೂತ ಏಕತೆಯನ್ನು ಕಾಣಬಹುದು. ಈ ವೈವಿಧ್ಯದ ಕಾರಣ ಈ ಸಮಾಜವನ್ನು ಜಗತ್ತಿನ ಸೂಕ್ಷ್ಮರೂಪವೆಂಬುದಾಗಿ ಎಣಿಸಲಾಗಿದೆ. ಈ ಮೂಲಭೂತ ಏಕತೆಯ ಕಾರಣ ಇದು ವೈವಿಧ್ಯಮಯವಾದ ಹಾಗೂ ಏಕತೆಯುಳ್ಳ ಒಂದು ವ್ಯಾಪಕ ಉದ್ಯಾನವಾಗಿದೆ.

ಜೀವಾತ್ಮನಿಗೂ ಪರಮಾತ್ಮನಿಗೂ ಇರುವ ಬೇರ್ಪಡಿಸಲಾಗದ ಸಂಬಂಧ, ಎಲ್ಲವೂ ಭಗವಂತನಿಂದ ಉದ್ಭವಿಸಿ ಅವನಲ್ಲೇ ಲೀನವಾಗುತ್ತದೆಂಬ ನಂಬಿಕೆ. ಆಳವಾದ ತತ್ತ್ವಜ್ಞಾನದ ನೆಲಗಟ್ಟು. ಆಧ್ಯಾತ್ಮಿಕತೆಯನ್ನು ಎತ್ತಿಹಿಡಿಯುವ ದಾರ್ಶನಿಕ ದೃಷ್ಟಿ ಇದರ ಇನ್ನೊಂದು ಮೂಲ ಭಾವನೆ.

ಸಹಿಷ್ಣುತಾ ಸಂಪ್ರದಾಯ ಇದರ ಇನ್ನೊಂದು ಗಮನಾರ್ಹವಾದ ಮೂಲ ವಿಷಯ. ಅಂದರೆ, ಇತರರ ನಂಬಿಕೆ, ಭಾವನೆಗಳೂ ಸರಿಯಾಗಿರಬಹುದು, ಅವರ ಜೀವನ ಕ್ರಮಗಳಲ್ಲೂ ಸರ್ವರ ಹಿತಕ್ಕಾಗಿ ವಿಶಿಷ್ಟ ಕೊಡುಗೆಗಳನ್ನು ನೀಡಬಲ್ಲ ಶಕ್ತಿ ಇರಬಹುದು ಎಂಬ ಭಾವನೆ; ಇತರರ ಸಂಪ್ರದಾಯ ಹಾಗೂ ಗುಣಗಳನ್ನು ಗೌರವಿಸುವುದು ಮತ್ತು ಜೀವನದ ಬಗ್ಗೆ ಅವರಿಗಿರುವ

ದೃಷ್ಟಿಕೋನವನ್ನು ಅರ್ಥ ಮಾಡಿಕೊಳ್ಳುವ ಔದಾರ್ಯ ಪೂರ್ಣ ಮನೋಭಾವ ಎಂದರ್ಥ. ಈ ಸಮಾಜ-ಸಂಸ್ಕೃತಿಗೆ ಒಬ್ಬ ಮೂಲಸ್ಥಾಪಕನಾಗಲಿ ಒಂದೇ ಸೂತ್ರವಾಗಲಿ ಇಲ್ಲ. ಅದು ತನ್ನ ಧರ್ಮವೇ ಮುಕ್ತಿ ಮಾರ್ಗವನ್ನು ತೋರುವ ಏಕಮಾತ್ರ ಕೈಗಂಬವಾಗಿದೆ ಮತ್ತು ಗಣ್ಯರು ಮಾತ್ರ ಆ ಹಾದಿಯ ಮೂಲಕ ಹಾದು ಗುರಿ ತಲುಪಬೇಕು ಎಂದು ಹೇಳುವುದಿಲ್ಲ. ಈ ಮೂಲ ಭಾವನೆಯೂ ಇಲ್ಲಿ ಸಾಮರಸ್ಯವನ್ನುಂಟುಮಾಡಿ ಈ ರಚನೆಯ ಸಿರಿತನವನ್ನು ಹೆಚ್ಚಿಸಿದೆ.

ವಿಶ್ವಮನೋಭಾವ ಹಾಗೂ ಸಂಶ್ಲೇಷಣೆ ಇದರ ಇತರ ಮೂಲಭಾವನೆಗಳು. ಇದರ ಸರ್ವೋದಯಕ್ಕೆ ಸಂಗತವಾದಂತಹ ಸತ್ಯಗಳನ್ನು ಎತ್ತಿ ಹಿಡಿಯುತ್ತದೆ. ಈ ವಿಶ್ವಮನೋಭಾವದ ಕಾರಣ ಇಡೀ ವಿಶ್ವವನ್ನು ಒಂದು ಕುಟುಂಬವಾಗಿ ಎಣಿಸಲು ಹಾಗೂ ಇತರ ವ್ಯವಸ್ಥೆಗಳಲ್ಲಿರುವ ಉತ್ತಮಾಂಶಗಳನ್ನೆಲ್ಲಾ ಸಮೀಕರಿಸಿಕೊಳ್ಳಲು ಶಕ್ತವಾಗಿದೆ.

ಸಕಲರ ಆಧ್ಯಾತ್ಮಿಕ ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇದರ ಇನ್ನೊಂದು ಮೂಲಭಾವನೆ. ಇದು ಪ್ರತಿಯೊಬ್ಬನನ್ನೂ ಭಗವಂತನ ಕಿಡಿ ಎಂಬುದಾಗಿ ಎಣಿಸಿ, ಮಾನವ ವ್ಯಕ್ತಿತ್ವದ ಬೆಲೆ, ಪ್ರತಿಷ್ಠೆ-ಗೌರವ ಹಾಗೂ ಪವಿತ್ರತೆಯಲ್ಲಿ ಮೂಲಭೂತ ನಂಬಿಕೆಯನ್ನು ಇಟ್ಟುಕೊಂಡಿದೆ.

ಕರ್ಮ ಹಾಗೂ ಪುನರ್ಜನ್ಮ ಸಿದ್ಧಾಂತದಲ್ಲಿ ನಂಬಿಕೆ ಇದಕ್ಕೆ ನಿಕಟವಾದ ಇನ್ನೊಂದು ಮೂಲಭಾವನೆ. ಭೌತಿಕ ಜಗತ್ತಿನಲ್ಲಿ ಕಾರಣ ಹಾಗೂ ಪರಿಣಾಮದ ನಿಯಮ ಇರುವಂತೆ ನೈತಿಕ ಪ್ರಪಂಚದಲ್ಲಿ ಕರ್ಮ ಸಿದ್ಧಾಂತ ಕೆಲಸ ಮಾಡುತ್ತದೆ. ಬೆಂಕಿ ಮುಟ್ಟಿದರೆ ಬೆರಳುಗಳು ಸುಟ್ಟು ಹೋಗುತ್ತವೆ. ಅದೇ ರೀತಿ ನಾವು ಒಳ್ಳೆಯ ಕಾರ್ಯ ಮಾಡಿದರೆ ನಮ್ಮ ನೈತಿಕ ಸ್ವಭಾವ ಉತ್ತಮವಾಗುತ್ತದೆ. ಕೆಟ್ಟದ್ದನ್ನು ಎಸಗಿದರೆ ನಮ್ಮ ಪತನವಾಗುತ್ತದೆ. ನಾವು ಇಂದು ಏನಾಗಿದ್ದೇವೆಯೋ ಅದು ನಮ್ಮ ಹಿಂದಿನ ಜೀವನದ ಯೋಜನೆ ಕಾರ್ಯಗಳ ಫಲ. ಬಿತ್ತಿದಂತೆ ಬೆಳೆ. ನಾವು ನಮ್ಮ ಕರ್ಮಗಳ ಸಿಹಿ-ಕಹಿ ಫಲಗಳನ್ನು ಅನುಭವಿಸಲೇಬೇಕು. ಅದು ಒಂದೇ ಜನ್ಮದಲ್ಲಿ ಸಾಧ್ಯವಾಗದಿರುವುದರಿಂದ ಹಲವಾರು ಜನ್ಮಗಳನ್ನು ಎತ್ತಬೇಕು. ಇದೇ ಪುನರ್ಜನ್ಮ ಸಿದ್ಧಾಂತ. ಮೋಕ್ಷ ಸಾಧನೆಯಾದಾಗ ಇದು ಕೊನೆಗೊಳ್ಳುತ್ತದೆ.

ಬಾಳುತ್ತಿರುವ ಎಲ್ಲಾ ಜೀವಿಗಳ ಏಕತೆಯಲ್ಲಿ ನಂಬಿಕೆ ಈ ಸಮಾಜ ವ್ಯವಸ್ಥೆಯ ಇನ್ನೊಂದು ಮೂಲಭಾವನೆ, ಅಂದರೆ ಇದು ಪ್ರಕೃತಿಯೊಂದಿಗೆ ಒಂದು ಸಾಮರಸ್ಯಪೂರ್ಣ ಸಂಬಂಧವನ್ನು ಬೆಳಸಿಕೊಂಡಿದೆ. ಪ್ರಕೃತಿಯು ಪವಿತ್ರ ಎಂಬುದಾಗಿ ಎಣಿಸುತ್ತದೆ. ಆ ಕಾರಣ ಪ್ರತಿ ದೇವರಿಗೂ ಯಾವುದಾದರೂ ಮರ, ಪ್ರಾಣಿಯ ಸಂಬಂಧ ಕಲ್ಪಿಸಲಾಗಿದೆ. ವಿಷ್ಣುವಿಗೆ ಗರುಡ ಹಾಗೂ ಆದಿಶೇಷ ಕ್ರಮವಾಗಿ ವಾಹನ ಹಾಗೂ ಸುಪ್ಪತ್ತಿಗೆ. ಇಲಿಗೆ ಆಶ್ರಯದಾತ ಗಣಪತಿ, ಶಿವನು ಪಶುಪತಿ, ಎಲ್ಲಾ ಪರ್ವತಗಳು ನದಿ ಕೊಳಗಳು ಪೂಜ್ಯವಾದವು. ಈ ಸಮರಸಪೂರ್ಣ ಪವಿತ್ರ ಸಂಬಂಧ ಬಹು ಮುಖ್ಯವಾದವು.

ಇನ್ನೊಂದು ಪ್ರಾಥಮಿಕ ಭಾವನೆ ಪುರುಷಾರ್ಥ. ಸರ್ವೋದಯಕ್ಕೆ ಅಗತ್ಯವಾದ ಪ್ರತಿ ವಿಷಯವೂ ಧರ್ಮ; ಉಪಯುಕ್ತ ವೃತ್ತಿ, ಸಂತಾನಾಭಿವೃದ್ಧಿ ಹಾಗೂ ಸಾಮಾಜಿಕ ಕಲ್ಯಾಣ ಎಂಬ ಅರ್ಥಗಳನ್ನು ಹೊಂದಿರುವ ಅರ್ಥ; ಇಂದ್ರಿಯ ಜೀವನ, ಶಾರೀರಿಕ ಹಾಗೂ ಕಲಾತ್ಮಕ ಅನುಭೋಗ ಎಂಬ ಅರ್ಥವುಳ್ಳ ಕಾಮ ಮತ್ತು ಭವಬಂಧ ವಿಮೋಚನೆ ಎಂಬ ಅರ್ಥದಿಂದ ಕೂಡಿರುವ ಮೋಕ್ಷ ಎಂಬುದೇ ನಾಲ್ಕು ಪುರುಷಾರ್ಥಗಳು. ಇಹ ಪರಗಳ ಸಾಮರಸ್ಯವನ್ನು ಎತ್ತಿಹಿಡಿಯುವ ಈ ಪರಮ ಧ್ಯೇಯಗಳನ್ನು ಸಾಧಿಸಿ ಸಾರ್ಥಕತೆಯನ್ನು ಪಡೆಯಬೇಕು.

ಇವುಗಳಲ್ಲದೆ ವೇದ, ಉಪನಿಷತ್ತು, ಮಹಾಕಾವ್ಯಗಳು, ಪುರಾಣಗಳು ಮುಂತಾದ ಸಾಮಾನ್ಯ ಪವಿತ್ರ ಗ್ರಂಥಗಳು, ದೇವನೊಬ್ಬನೇ, ಋಷಿಗಳು ಅವನನ್ನು ವಿವಿಧ ರೀತಿಯಲ್ಲಿ ಬಣ್ಣಿಸುತ್ತಾರೆ ಎಂಬುದಾಗಿ ಎಣಿಸಿ ಏಕೇಶ್ವರ ವಾದವನ್ನು ಎತ್ತಿ ಹಿಡಿಯುವ ಕ್ರಮ; ವಿಷ್ಣು, ಶಿವ, ಶಕ್ತಿ ಮೊದಲಾದ ಸಾಮಾನ್ಯ ದೇವರುಗಳ ಆರಾಧನೆ; ಪವಿತ್ರ ಸ್ಥಳಗಳಿಗೆ ತೀರ್ಥಯಾತ್ರೆ ಕೈಗೊಳ್ಳುವುದು; ಪವಿತ್ರ ನದಿ, ಸರೋವರ ಕೊಳಗಳಲ್ಲಿ ಸ್ನಾನ ಮಾಡುವುದರ ಮೂಲಕ ಆತ್ಮದ ಶುದ್ಧೀಕರಣ ಮಾಡಿಕೊಳ್ಳಬೇಕೆಂಬ ಸೂಚನೆ; ಕರ್ಮ, ಜ್ಞಾನ, ಭಕ್ತಿ ಯೋಗಗಳಲ್ಲಿ ಅಚಲವಾದ ನಂಬಿಕೆ; ಅನ್ವೇಷಣಶೀಲತೆ ಹಾಗೂ ಆಶಾವಾದದಲ್ಲಿ ಬಲವಾದ ನಂಬಿಕೆ, ತಂದೆ-ತಾಯಿ, ಗುರುಹಿರಿಯರಲ್ಲಿ ಭಕ್ತಿಯುತವಾದ ಪ್ರೇಮಾದರ, ಅಪರಿಚಿತರ ಬಗ್ಗೆ ಸೌಜನ್ಯಯುತ ನಡವಳಿಕೆ, ಸ್ತ್ರೀಯರ ಬಗ್ಗೆ ಮರ್ಯಾದೆ, ಮಕ್ಕಳಲ್ಲಿ ಮಮತೆ, ಅತಿಥಿ ಸತ್ಕಾರ ಇತ್ಯಾದಿ ಪ್ರಶಂಸಾರ್ಹ ಸದ್ಗುಣ ಹಾಗೂ ವರ್ತನಾ ಮಾದರಿಗಳು ಮುಂತಾದ ಮೂಲಭೂತ ಅಂಶಗಳು ಈ ಸಮಾಜದಲ್ಲಿ ಎದ್ದು ಕಾಣುವಂತಿರುತ್ತವೆ.

**ಜಾತಿಪದ್ಧತಿಯ ಉಗಮ ಹಾಗೂ ವಿಕಾಸ**

ಮೊದಲಿನಿಂದಲೂ ಭಾರತೀಯ ಸಮಾಜದ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ವೈಶಿಷ್ಟ್ಯತೆಯನ್ನು ಕುರಿತಂತೆ ಅಧ್ಯಯನಗಳನ್ನು ನಡೆಸಿಕೊಂಡು ಬರಲಾಗುತ್ತಿದೆ. ವೇದ, ಉಪನಿಷತ್ತು, ಮಹಾಕಾವ್ಯ, ಪುರಾಣ, ಧರ್ಮಶಾಸ್ತ್ರಗಳಲ್ಲಿ ಆಯಾಯ ಕಾಲದ ಸಮಾಜದ ಸ್ಥಿತಿಗತಿಗಳ ಚಿತ್ರಣವನ್ನು ನೋಡಬಹುದು. ಎಲ್ಲಾ ಸಮಾಜಶಾಸ್ತ್ರಜ್ಞರೂ, ಮಾನವಿಕ ವಿಜ್ಞಾನಿಗಳು ಈ ಸಮಾಜದ ಅಧ್ಯಯನದಲ್ಲಿ ಆಸಕ್ತಿ ತೋರುತ್ತಾ ಬಂದಿದ್ದಾರೆ. ಹೆಚ್ಚು-ಕಡಿಮೆ ಎಲ್ಲರೂ ಗ್ರಾಮ ಸಮುದಾಯ, ಅವಿಭಕ್ತ ಕುಟುಂಬ, ಆಶ್ರಮ ಹಾಗೂ ವರ್ಣವ್ಯವಸ್ಥೆ ಇದರ ಮೂಲಸ್ತಂಭಗಳೆಂಬುದಾಗಿ ಎಣಿಸಿದ್ದಾರೆ. ಗ್ರಾಮಸಮುದಾಯ ಸರ್ವ ವಿಧದಲ್ಲೂ ಸ್ವಯಂಪೂರ್ಣವಾಗಿದ್ದ ವ್ಯವಸ್ಥೆ. ಸುಮಾರು 3-4 ತಲೆಮಾರುಗಳ ರಕ್ತ ಹಾಗೂ ವೈವಾಹಿಕ ಸಂಬಂಧಿಗಳನ್ನು ಹೊಂದಿದ್ದ ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಹಿರಿಯರಿಗೆ ಹೆಚ್ಚಿನ ಜವಾಬ್ದಾರಿ, ಕಿರಿಯರಿಗೆ ಒಳ್ಳೆಯ ರಕ್ಷಣೆ, ಆರೋಗ್ಯಕರ ಶ್ರಮವಿಭಜನೆ ಇರುತ್ತಿದ್ದಿತು. ಈಗ ಆಧುನಿಕ ಶಕ್ತಿಗಳ ಕಾರಣ ಈ ಎರಡು ರಚನೆಗಳು ತೀವ್ರ ಬದಲಾವಣೆಗಳಿಗೆ ಒಳಗಾಗಿವೆ. ಆಶ್ರಮ

ಧರ್ಮದ ಪ್ರಕಾರ, ಒಬ್ಬ ವ್ಯಕ್ತಿಯ ಆದರ್ಶ ಜೀವನವನ್ನು ಬ್ರಹ್ಮಚರ್ಯ (ವಿದ್ಯಾರ್ಥಿ), ಗೃಹಸ್ಥ, ವಿರಕ್ತ ಏಕಾಂತವಾಸಿ (ವಾನಪ್ರಸ್ಥ) ಮತ್ತು ಸನ್ಯಾಸಿ ಎಂಬ ನಾಲ್ಕು ಅನುಕ್ರಮವಾದ ಹಂತಗಳಾಗಿ ವಿಭಾಗಿಸಲಾಗಿದೆ. ಈ ಹಂತಗಳು ವ್ಯಕ್ತಿಯ ಆದರ್ಶಾತ್ಮಕ ಜೀವನದ ಪ್ರಗತಿಪಥವನ್ನು ಸೂಚಿಸುತ್ತವೆ. ವರ್ಣ ಎಂದರೆ ಬಣ್ಣ (ವ್ಯಕ್ತಿತ್ವದ ಬಣ್ಣವೇ ಹೊರತು ಚರ್ಮದ ಬಣ್ಣವಲ್ಲ) ಎಂದೂ, ಮತ್ತೆ ಧರ್ಮ ಎಂದರೆ ವ್ಯಕ್ತಿಗೆ ಹುಟ್ಟಿನಿಂದ ಬಂದಿರುವ ವಿಶಿಷ್ಟ ಯೋಗ್ಯತೆ (ಗುಣ) ಹಾಗೂ ಅದಕ್ಕೆ ಅನುಗುಣವಾದ ಕರ್ತವ್ಯ ಎಂದೂ ಅರ್ಥೈಸಲಾಗಿದೆ. ಹೀಗೆ ವರ್ಣವ್ಯವಸ್ಥೆ ವ್ಯಕ್ತಿಯ ಸಂಸ್ಕಾರ, ಸ್ವಭಾವ, ಸಹಜ ಸಾಮರ್ಥ್ಯ, ಅಭಿರುಚಿಗಳಿಗೆ ಸಂಬಂಧಪಟ್ಟಿದೆ.

ಆದರೆ ಐತಿಹಾಸಿಕ ಮತ್ತಿತರ ಕಾರಣಗಳಿಂದಾಗಿ ಈ ಆರೋಗ್ಯಕರ, ಪ್ರಗತಿಪರ ವರ್ಣವ್ಯವಸ್ಥೆಯು ಏಕತೆ ಹಾಗೂ ಸಮರಸ ಜೀವನಕ್ಕೆ ಮಾರಕವಾದ ಜಾತಿ ಪದ್ಧತಿಯಾಗಿ ಮಾರ್ಪಟ್ಟಿತು. ಜಾತಿ ಸಾಮಾಜಿಕ ಸ್ತರ ವಿನ್ಯಾಸದ ಒಂದು ರೂಪ. ಯಾವ ಸಮಾಜದಲ್ಲೂ ಎಂದಿಗೂ ಎಲ್ಲಾ ಸದಸ್ಯರು ಸರ್ವ ವಿಧದಲ್ಲೂ ಸಮಾನರಾಗಿರುವುದು ಸಾಧ್ಯವಿಲ್ಲ. ಲಿಂಗ, ವಯಸ್ಸು, ವೈಯಕ್ತಿಕ ಶಕ್ತಿ-ಸಾಮರ್ಥ್ಯ, ವೃತ್ತಿ ಇತ್ಯಾದಿಗಳ ಅನ್ವಯ ಸಮಾಜದ ಸದಸ್ಯರಿಗೆ ಬೇರೆ ಬೇರೆ ಅಂತಸ್ತುಗಳನ್ನು ನೀಡಿ, ವಿಭಿನ್ನ ಪಾತ್ರಗಳನ್ನು ನಿರ್ವಹಿಸುವಂತೆ ಮಾಡಿ ಅವರನ್ನು ವಿವಿಧ ಸ್ತರಗಳನ್ನಾಗಿ ವರ್ಗೀಕರಿಸುವ ವ್ಯವಸ್ಥೆಯನ್ನು ಸಾಮಾಜಿಕ ಸ್ತರ ವಿನ್ಯಾಸ ಎಂಬುದಾಗಿ ಕರೆಯಲಾಗುತ್ತದೆ. ಸ್ತರ ವ್ಯವಸ್ಥೆಯೇ ಇಲ್ಲದ ಸಮಾಜವು ಕೇವಲ ಮಿಥ್ಯೆ ಎಂಬುದಾಗಿ ಪ್ರಸಿದ್ಧ ಸಮಾಜ ಶಾಸ್ತ್ರಜ್ಞ ಸೋರೋಕಿನ್ ಹೇಳಿರುವುದು ಬಹು ಸರಿಯಾಗಿದೆ. ವರ್ಣ, ಎಸ್ಟೇಟ್, ಜಾತಿ, ವರ್ಗ ಈ ಸ್ತರ ವಿನ್ಯಾಸದ ಮುಖ್ಯ ಬಗೆಗಳು. ಇವುಗಳಲ್ಲಿ ವರ್ಣ ಹಾಗೂ ಎಸ್ಟೇಟ್ ಬಗೆಗಳು ಕಣ್ಮರೆಯಾಗಿ ಹೋಗಿವೆ. ವಿಶಿಷ್ಟ ಲಕ್ಷಣಗಳನ್ನುಳ್ಳ ಜಾತಿ ವ್ಯವಸ್ಥೆಯನ್ನು ಭಾರತ ಸಮಾಜದಲ್ಲಿ ಮತ್ತು ಸಾರ್ವತ್ರಿಕ ಸ್ವರೂಪದ ವರ್ಗ ವ್ಯವಸ್ಥೆಯನ್ನು ಪಾಶ್ಚಿಮಾತ್ಯ ಸಮಾಜಗಳಲ್ಲಿ ಹಾಗೂ ಇನ್ನಿತರ ಕೈಗಾರಿಕಾ ಆಧುನಿಕ ಸಮಾಜಗಳಲ್ಲಿ ಕಾಣಬಹುದಾಗಿದೆ.

ಜಾತಿ ಎಂಬ ಅರ್ಥವನ್ನು ಹೊಂದಿರುವ ಕಾಸ್ಟ್ ಎಂಬ ಇಂಗ್ಲಿಷ್ ಪದಕ್ಕೆ ಜನಾಂಗ, ತಳಿ, ಅನುವಂಶೀಯತೆ ಮುಂತಾದ ಅರ್ಥವುಳ್ಳ ಕಾಸ್ಟಾ ಎಂಬ ಸ್ಪಾನಿಷ್ (ಪೋರ್ಚುಗೀಸ್) ಶಬ್ದವು ಮೂಲವಾಗಿದೆ. ಇದು ಶುದ್ಧ ಎಂಬ ಅರ್ಥದಿಂದ ಕೂಡಿರುವ ಕಾಸ್ಟ್ಯಸ್ ಎಂಬ ಲ್ಯಾಟಿನ್ ಶಬ್ದದಿಂದ ಉತ್ಪತ್ತಿಯಾಗಿದೆ ಎಂದೂ ಹೇಳಲಾಗುತ್ತದೆ. 15ನೆಯ ಶತಮಾನದಲ್ಲಿ ಭಾರತಕ್ಕೆ ಬಂದ ಪೋರ್ಚುಗೀಸರು ಜಾತಿಗಳನ್ನು ಸೂಚಿಸಲು ಕಾಸ್ಟ ಎಂಬ ಪದವನ್ನು ಬಳಸಿದರು. ಅದು ಇಂಗ್ಲಿಷ್ ಭಾಷೆಯಲ್ಲಿ ಕಾಸ್ಟ್ ಆಯಿತು.

ತನ್ನೆಲ್ಲಾ ವಿಶಿಷ್ಟ ಲಕ್ಷಣಗಳಿಂದ ಕೂಡಿರುವ ಜಾತಿ ಪದ್ಧತಿಯು ಭಾರತಕ್ಕೆ ಹೆಚ್ಚು ಸೀಮಿತವಾಗಿದೆ ಮತ್ತು ಇದು ಸಂಕೀರ್ಣವಾದ ಸಂಸ್ಥೆಯಾಗಿರುವುದರಿಂದ ಇದಕ್ಕೆ ಖಚಿತವಾದ ವ್ಯಾಖ್ಯೆಯನ್ನು ನೀಡುವುದು ಕಷ್ಟಸಾಧ್ಯ ಎಂಬುದು ಹಲವಾರು ವಿದ್ವಾಂಸರ ಅಭಿಪ್ರಾಯವಾಗಿದೆ.



ಸರ್. ಹರ್ಬರ್ಟ್ ರಿಸ್ಲಿಯವರ ಮಾತಿನಲ್ಲಿ ಜಾತಿಯನ್ನು ಒಂದೇ ಸಾಮಾನ್ಯ ಹೆಸರನ್ನುಳ್ಳ ಒಬ್ಬನೇ ಮಾನವ ಅಥವಾ ದೈವಿಕ ಮೂಲ ಪುರುಷನ ಸಂತತಿ ಎಂದು ಹೇಳಿಕೊಳ್ಳುವ ವಂಶಾನುಗತವಾಗಿ ಬಂದ ಒಂದೇ ವೃತ್ತಿಯನ್ನು ಅವಲಂಬಿಸಿರುವ ಮತ್ತು ಒಂದು ಸಮೈಕ್ಯ ಸಮುದಾಯ ಎಂಬುದಾಗಿ ಭಾವಿಸಲಾಗಿರುವ ಕುಟುಂಬಗಳ ಸಮಷ್ಟಿ ಎಂಬುದಾಗಿ ವಿವರಿಸಬಹುದು.

ಈ.ಎ.ಹೆಚ್. ಬ್ಲಂಟರ್ ಅವರ ಪ್ರಕಾರ, ಜಾತಿ ಒಂದೇ ಸಾಮಾನ್ಯ ನಾಮಾಂಕಿತವನ್ನು ಹಾಗೂ ಅನುವಂಶಿಕ ಸದಸ್ಯತ್ವವನ್ನು ಹೊಂದಿರುವ ಸಾಮಾಜಿಕ ಸಂಸರ್ಗದ ವಿಷಯದಲ್ಲಿ ತನ್ನ ಸದಸ್ಯರ ಮೇಲೆ ಕೆಲವು ನಿರ್ಬಂಧಗಳನ್ನು ಹೇರುವ, ಪರಂಪರೆಯಾಗಿ ಬಂದ ಒಂದೇ ಕುಲಕಸಬನ್ನು ಅನುಸರಿಸುವ, ಒಂದೇ ಮೂಲ ತನ್ನದೆಂದು ಹೇಳಿಕೊಳ್ಳುವ, ಸಾಧಾರಣವಾಗಿ ಒಂದೇ ಸಮೈಕ್ಯವಾದ ಸಮುದಾಯ ಎಂಬುದಾಗಿ ಪರಿಗಣಿಸಲಾಗುವ ಹಾಗೂ ಒಳವಿವಾಹ ನಿಯಮ ಹಾಗೂ ಬಾಂಧವ್ಯವುಳ್ಳ ಸಮೂಹಗಳ ಸಮಷ್ಟಿಯಾಗಿದೆ.

ಒಂದು ಜಾತಿಯಲ್ಲಿ ಹುಟ್ಟಿದವರಿಗೆ ಮಾತ್ರ ಅದರ ಸದಸ್ಯತ್ವ ಸೀಮಿತವಾಗಿರುತ್ತದೆ ಮತ್ತು ಒಂದು ನಿಷ್ಠುರವಾದ ಸಾಮಾಜಿಕ ಕಾನೂನು ವ್ಯಕ್ತಿಗಳು ತಮ್ಮ ಸಮೂಹದ ಹೊರಗೆ ಮದುವೆಯಾಗುವುದನ್ನು ಬಹಿಷ್ಕರಿಸುತ್ತದೆ ಎಂಬುದಾಗಿ ಕೇಟ್ಕರ್ ಹೇಳುತ್ತಾರೆ.

ಡಿ.ಎನ್. ಮಜುಂದಾರ್ ಹಾಗೂ ಟಿ.ಎನ್. ಮದನ್‌ರವರ ದೃಷ್ಟಿಯಲ್ಲಿ ಜಾತಿ ಒಂದು ಮುಚ್ಚಿದ ಸಮೂಹವಾಗಿದೆ.

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಹಾಸುಹೊಕ್ಕಾಗಿರುವ ಈ ಸಂಕೀರ್ಣ ಸಂಸ್ಥೆಯ ವಿಲಕ್ಷಣ ಅಂಶಗಳನ್ನೆಲ್ಲಾ ಒಂದೇ ವ್ಯಾಖ್ಯೆಯಲ್ಲಿ ಸ್ಪಷ್ಟಪಡಿಸುವುದು ಅಸಾಧ್ಯ, ಅದರ ಲಕ್ಷಣಗಳನ್ನು ವಿವರಿಸಬಹುದೇ ಹೊರತು ನಿರ್ದಿಷ್ಟ ವ್ಯಾಖ್ಯೆಯನ್ನು ನೀಡುವುದು ಸಾಧ್ಯವಿಲ್ಲ ಎಂಬುದಾಗಿ ಎನ್.ಕೆ. ದತ್, ಹಟನ್ ಮೊದಲಾದವರು ಅಭಿಪ್ರಾಯಪಡುತ್ತಾರೆ.

ಕಟ್ಟುನಿಟ್ಟಾದ ವಿಭಾಗಗಳು, ಕ್ರಮಬದ್ಧವಾದ ಏಣಿ-ಶ್ರೇಣಿ, ಊಟ, ಪಾನೀಯ, ಇತರ ಸಾಮಾಜಿಕ ಸಂಪರ್ಕಗಳ ಮೇಲೆ ನಿರ್ಬಂಧ, ವಿವಾಹದ ಮೇಲೆ ಹತೋಟಿ, ಕೆಲವು ಜಾತಿಗಳಿಗೆ ಮಾತ್ರ ವಿಶೇಷಾಧಿಕಾರಗಳು ಹಾಗೂ ಇನ್ನು ಕೆಲವು ಜಾತಿಗಳಿಗೆ ಕೊರತೆಗಳು ಜಾತಿಯ ವಿಶಿಷ್ಟ ಲಕ್ಷಣಗಳೆಂಬುದಾಗಿ ಸುಪ್ರಸಿದ್ಧ ಸಮಾಜ ವಿಜ್ಞಾನಿ ಡಾ. ಘುರಿಯೆ ವಿವರಿಸಿದ್ದಾರೆ.

1. ಭಾರತ ಸಮಾಜ ವಿವಿಧ ಜಾತಿಗಳಾಗಿ ವಿಭಾಗಿಸಲ್ಪಟ್ಟಿದೆ. ಪ್ರತಿ ಜಾತಿಗೂ ತನ್ನದೇ ಆದ ನಿಯಮ, ಅಂತಸ್ತು, ನಿರ್ದಿಷ್ಟ ಜೀವನಕ್ರಮಗಳಿವೆ. ಈ ಜಾತಿಗಳು ಭಾರತ ಸಮಾಜವೆಂಬ ಸಮುದ್ರದಲ್ಲಿ ಪ್ರತ್ಯೇಕವಾಗಿ ಇರುವ ದ್ವೀಪಗಳಂತಿವೆ.

2. ಈ ಜಾತಿಗಳ ಕ್ರಮದಲ್ಲಿ ಒಂದು ಚೆನ್ನಾಗಿ ವ್ಯವಸ್ಥಿತಗೊಳಿಸಲಾದ ಸ್ತರವಿನ್ಯಾಸವಿದೆ. ಅಂದರೆ ಈ ಜಾತಿ ವ್ಯವಸ್ಥೆಯ ಮುಖ್ಯ ಲಕ್ಷಣ ಕ್ರಮಬದ್ಧ ಏಣಿ, ಶ್ರೇಣಿ, ಏಣಿಯಲ್ಲಿರುವ

ಮೆಟ್ಟಲುಗಳು ನಿರ್ದಿಷ್ಟ ಅಂತರದಲ್ಲಿ ಒಂದರ ಮೇಲೊಂದರಂತೆ ಇರುತ್ತವೆ. ಅದೇ ರೀತಿ ಜಾತಿಗಳು ಸಾಮಾಜಿಕ ಏಣಿಯಲ್ಲಿ ವಿವಿಧ ಶ್ರೇಣಿಗಳಲ್ಲಿರುತ್ತವೆ. ಈ ಶ್ರೇಣಿಗಳು ಜಾತಿಗಳ ಸ್ಥಾನಗಳನ್ನು ಸೂಚಿಸುತ್ತದೆ. ಇದರ ಪ್ರಕಾರ, ಬ್ರಾಹ್ಮಣ ಜಾತಿ ಮೇಲ್ಮಟ್ಟದಲ್ಲಿ, ಶೂದ್ರ ಜಾತಿ ಕೆಳಮಟ್ಟದಲ್ಲಿರುತ್ತವೆ. ಒಬ್ಬ ವ್ಯಕ್ತಿ ಒಂದು ಜಾತಿಯಲ್ಲಿ ಹುಟ್ಟಿ, ಬಾಳಿ, ಅಲ್ಲೇ ಸಾಯುತ್ತಾನೆ. ಅವನ ಮಕ್ಕಳು ಅದರ ಸದಸ್ಯರಾಗಿರುತ್ತಾರೆ. ಹೀಗೆ ಸದಸ್ಯತ್ವವು ವಂಶಾನುಗತವಾಗಿರುತ್ತದೆ. ಒಬ್ಬ ವ್ಯಕ್ತಿಯ ಸ್ಥಾನ ಅವನ ಜಾತಿಯ ಪ್ರಾಮುಖ್ಯತೆಯ ಮೇಲೆ ಆಧಾರಿತವಾಗಿರುತ್ತದೆಯೇ ವಿನಹ, ಅವನ ಯೋಗ್ಯತೆಯ ಮೇಲಲ್ಲ. ಹೀಗೆ ಹುಟ್ಟಿನಿಂದ ಅವನ ಅಂತಸ್ತನ್ನು ನಿರ್ಧರಿಸಲಾಗುತ್ತದೆ. ಇದೇ ಆರೋಪಿತ ಅಂತಸ್ತು.

3. ಈ ಜಾತಿ ಪದ್ಧತಿಯಲ್ಲಿ ಬ್ರಾಹ್ಮಣ ಜಾತಿಗೆ ಪರಮಾಧಿಕಾರ, ಹೆಚ್ಚಾದ ಸಾಮಾಜಿಕ, ಧಾರ್ಮಿಕ ಹಕ್ಕು ಬಾಧ್ಯತೆಗಳಿರುತ್ತವೆ. ಶೂದ್ರರಿಗೆ ಅಧೀನತೆಯ ಸ್ಥಾನ, ಹಲವಾರು ಕುಂದುಕೊರತೆಗಳಿರುತ್ತವೆ. ಅಸ್ಪೃಶ್ಯ ಜಾತಿಗೆ ಯಾವುದೇ ರೀತಿಯ ಹಕ್ಕು, ಅಧಿಕಾರ ಇಲ್ಲ.

4. ಊಟ, ವಿವಾಹ, ಸಾಮಾಜಿಕ ಸಂಪರ್ಕ ಹಾಗೂ ವಸತಿಯ ಬಗ್ಗೆ ಇರುವ ನಿರ್ಬಂಧ-ನಿಯಮಗಳು ಜಾತಿ ವ್ಯವಸ್ಥೆಯ ಇತರ ಪ್ರಮುಖ ಲಕ್ಷಣಗಳು. ಬ್ರಾಹ್ಮಣನು ಕ್ಷತ್ರಿಯನಿಂದ ಪಕ್ಕಾ ಆಹಾರ ಅಂದರೆ ತುಪ್ಪ, ಹಾಲಿನಲ್ಲಿ ಬೇಯಿಸಿದ ಆಹಾರವನ್ನು ಸ್ವೀಕರಿಸಬಹುದು. ಆದರೆ ನೀರಿನಲ್ಲಿ ಬೇಯಿಸಲಾಗುವ ಕಚ್ಚಾ ಆಹಾರವನ್ನು ಯಾರಿಂದಲೂ ತೆಗೆದುಕೊಳ್ಳಕೂಡದು. ಜಾತಿಗಳು ಒಳವಿವಾಹ ಪಂಗಡಗಳು ಅಂದರೆ ವ್ಯಕ್ತಿಗಳು ತಮ್ಮ ಜಾತಿ ಅಥವಾ ಉಪಜಾತಿಗಳಿಗೆ ಸೇರಿರುವವರನ್ನೇ ವಿವಾಹವಾಗಬೇಕು. ಆದರೆ ಪ್ರತಿ ಜಾತಿ-ಉಪಜಾತಿಯು ಸಪಿಂಡ ಅಥವಾ ಸಗೋತ್ರ ವಿವಾಹ ನಿಷೇಧ ಎಂಬ ನಿಯಮವನ್ನು ಅನುಸರಿಸುತ್ತದೆ. ಅಂದರೆ ಒಂದೇ ಮೂಲ ಪುರುಷನ ವಂಶಸ್ಥರು ಮದುವೆಯಾಗಬಾರದು. ಇದು ಹೊರವಿವಾಹ ನಿಯಮ, ಮಡಿ, ಮೈಲಿಗೆಯ ಭಾವನೆಗಳು ಸಾಮಾಜಿಕ ಸಂಪರ್ಕಗಳನ್ನು ಬಹು ಕಟ್ಟುನಿಟ್ಟಾಗಿ ನಿರ್ಬಂಧಿಸುತ್ತವೆ. ಒಬ್ಬ ಶೂದ್ರ ಮುಟ್ಟಿದರೆ, ಒಬ್ಬ ಅಸ್ಪೃಶ್ಯನನ್ನು ನೋಡಿಬಿಟ್ಟರೆ ಬ್ರಾಹ್ಮಣನಿಗೆ ಮೈಲಿಗೆಯಾಗುತ್ತದೆ ಎಂಬ ಅತ್ಯಂತ ಸಂಕುಚಿತ ಭಾವನೆ ಹಿಂದೆ ಈ ಜಾತಿ ವ್ಯವಸ್ಥೆಯಲ್ಲಿ ಮುಖ್ಯವಾಗಿದ್ದಿತು. ಜಾತಿ ಬಾಂಧವರು ಹಿಂದೆ ಪ್ರತ್ಯೇಕ ಕೇರಿಗಳಲ್ಲಿ ವಾಸಿಸುತ್ತಿದ್ದರು ಮತ್ತು ಅಸ್ಪೃಶ್ಯರು ಊರು ಅಥವಾ ಗ್ರಾಮಗಳ ಎಲ್ಲೆಗಳ ಹೊರಗೆ ಇರಬೇಕಾಗುತ್ತಿದ್ದಿತು.

5. ಪ್ರತಿಯೊಂದು ಜಾತಿಯೂ ಒಂದು ಪರಂಪರಾಗತವಾದ ಕಸಬನ್ನು ಹೊಂದಿರುತ್ತದೆ. ಅದು ಇತರ ಜಾತಿಯವರು ತನ್ನ ವೃತ್ತಿಯನ್ನು ಕೈಗೊಳ್ಳುವುದನ್ನು ಹಾಗೂ ತನ್ನ ಸದಸ್ಯರು ಬೇರೆ ಕಸಬನ್ನು ಅನುಸರಿಸುವುದನ್ನು ನಿಷೇಧಿಸುತ್ತದೆ.

6. ಜಾತಿ ವ್ಯವಸ್ಥೆಯಲ್ಲಿ ಸದಸ್ಯರುಗಳು ವಿಧೇಯತೆಯಿಂದ ಇದ್ದು ನಿಯಮ ಹಾಗೂ ನಿರ್ಬಂಧಗಳನ್ನು ಚಾಚೂತಪ್ಪದಂತೆ ಅನುಸರಿಸುವಂತೆ ಒತ್ತಾಯಿಸುವ ಒಂದು ಅಧಿಕಾರ ಅಂಗವಿರುತ್ತದೆ. ಜಾತಿ ಪಂಚಾಯಿತಿಗಳು ಅನೇಕ ಸಂದರ್ಭಗಳಲ್ಲಿ ನಿಯಂತ್ರಿಸುವ ಅಭಿಕರಣವಾಗಿ ಕೆಲಸ ಮಾಡುತ್ತದೆ.

ಜಾತಿಯ ಈ ಗುಣಲಕ್ಷಣಗಳು ಪ್ರಜಾಪ್ರಭುತ್ವದ ಭಾವನೆಗಳು, ಕೈಗಾರೀಕರಣ, ನಗರೀಕರಣ, ಪಾಶ್ಚಾತ್ಯೀಕರಣ, ಸಾರಿಗೆ ಸಂಪರ್ಕ ಮಾಧ್ಯಮಗಳ ಬೆಳವಣಿಗೆ ನೂತನ ಕಾನೂನುಗಳು ಮುಂತಾದ ಆಧುನಿಕ ಶಕ್ತಿಗಳ ಪ್ರಭಾವ ಉಂಟಾಗುವುದಕ್ಕೆ ಮೊದಲಿದ್ದ ಸಾಂಪ್ರದಾಯಿಕ ವೈಶಿಷ್ಟ್ಯಗಳಾಗಿದ್ದವು. ಇಂದು ಜಾತಿ ಪದ್ಧತಿ ಈ ಎಲ್ಲಾ ನೂತನ ಶಕ್ತಿಗಳ ಕಾರಣ ತೀವ್ರವಾದ ಪರಿವರ್ತನೆಗೊಳಗಾಗಿದೆ. ಅದರ ಅನೇಕ ನಿಯಮ, ನಿರ್ಬಂಧಗಳು ಸಡಿಲವಾಗಿವೆ. ಅಮುಖ್ಯವಾಗಿ ಬಿಟ್ಟಿವೆ. ಜಾತಿ ಪದ್ಧತಿಯನ್ನು ಅಳಿಸಿಹಾಕಲು ಹಲವಾರು ಆಂದೋಲನಗಳು ನಡೆದುವು. ಅನೇಕ ಮಹಾಪುರುಷರು, ಸಂಘ-ಸಂಸ್ಥೆಗಳು ಇದನ್ನು ತೊಡೆದುಹಾಕಲು ಯತ್ನಿಸಿದರಾದರೂ ಇದು ಕಣ್ಮರೆಯಾಗಿ ಹೋಗದೆ, ಹೊಸ ಪರಿಸರಗಳಿಗೆ ತಕ್ಕಂತೆ ಹೊಂದಿಕೊಂಡು ಪ್ರಭಾವೀ ಸಂಸ್ಥೆಯಾಗಿಯೇ ಮುಂದುವರಿದುಕೊಂಡು ಬರುತ್ತಿದೆ. ಜಾತಿಗಳು ಸಂಘಟಿತವಾಗುತ್ತಿವೆ. ಜಾತಿಯ ಬದಲಾದ ಪಾತ್ರಗಳು ರಾಜಕೀಯ ಕ್ಷೇತ್ರದಲ್ಲಿ ಎದ್ದುಕಾಣುವಂತಿವೆ. ಚುನಾವಣಾ ನಿಯಮ ಹಾಗೂ ಪ್ರಕ್ರಿಯೆಗಳು ಇದರ ಬಲವನ್ನು ಇನ್ನೂ ಹೆಚ್ಚಿಸುತ್ತಿವೆ. ನಿಮ್ನ ಜಾತಿಗಳಿಗೆ ಹಾಗೂ ಹಿಂದುಳಿದ ವರ್ಗಗಳಿಗೆ ನೀಡಲಾಗುತ್ತಿರುವ ವಿಶೇಷ ರಕ್ಷಣೆ, ಮೀಸಲಾತಿ ಸೌಲಭ್ಯಗಳ ಕಾರಣ ಜಾತೀಯತೆ, ಜಾತಿನಿಷ್ಠೆ ಹೆಚ್ಚುತ್ತಿದೆ. ಜಾತಿ ಪ್ರಜ್ಞೆ ಪ್ರಬಲವಾಗುತ್ತಿದೆ. ಹಿಂದೆ ಇದ್ದ ಪರಸ್ಪರಾವಲಂಬನ ಸ್ಥಿತಿಯಿಂದ ಈಗಿನ ತೀವ್ರ ಸ್ಪರ್ಧಾಸ್ಥಿತಿಗೆ ಎಲ್ಲಾ ಜಾತಿಗಳು ಬದಲಾಗುತ್ತಿವೆ. ಜಾತಿಗಳು ಸಮಾನತೆ ಎಂಬ ಆದರ್ಶವನ್ನು ಒಪ್ಪಿಕೊಂಡರೂ, ಪ್ರತಿ ಜಾತಿಯೂ ಇನ್ನೊಂದು ಜಾತಿಗೆ ತೀವ್ರವಾದ ಸ್ಪರ್ಧೆಯನ್ನು ಒಡ್ಡುತ್ತದೆ ಮತ್ತು ವಿರೋಧವನ್ನು ತೋರುತ್ತದೆ.

ಸಾಮಾಜಿಕ ಸ್ತರ ವಿನ್ಯಾಸದ ಇನ್ನೊಂದು ಬಗೆ ವರ್ಗ ವ್ಯವಸ್ಥೆ. ಇದು ಕೂಡ ಶ್ರೇಣಿಗಳುಳ್ಳ ರಚನೆ.

ಆಗ್‌ಬರ್ನ್ ಹಾಗೂ ನಿಮ್‌ಕಾಫ್‌ರವರ ಪ್ರಕಾರ, ಒಂದು ನಿರ್ದಿಷ್ಟ ಸಮಾಜದಲ್ಲಿ ಒಂದೇ ವಿಧವಾದ ಸಾಮಾಜಿಕ ಸ್ಥಾನಮಾನವನ್ನು ಆವಶ್ಯಕವಾಗಿ ಹೊಂದಿರುವ ವ್ಯಕ್ತಿಗಳ ಸಮಷ್ಟಿಯೇ ಒಂದು ಸಾಮಾಜಿಕ ವರ್ಗ.

ಒಂದೇ ವಿಧದಿಂದ ಜೀವನಮಟ್ಟ ಹಾಗೂ ಚರಸ್ವತ್ತುಗಳನ್ನು ಸಂಪಾದಿಸಲು ಒಂದೇ ತರಹದ ಅವಕಾಶಗಳನ್ನು ಹೊಂದಿರುವ ವ್ಯಕ್ತಿಗಳ ಸಮೂಹಗಳೇ ಸಾಮಾಜಿಕ ವರ್ಗ ಎಂಬುದು ಮ್ಯಾಕ್ಸ್‌ವೇಬರ್ ಅವರ ಅಭಿಪ್ರಾಯ.

ಲಾಪಿಯರ್, ಒಂದು ಸಮಾಜದಲ್ಲಿ ಒಂದು ವಿಶಿಷ್ಟವಾದ ಅಂತಸ್ತನ್ನು ಹೊಂದಿರುವ ಹಾಗೂ ಸಾಂಸ್ಕೃತಿಕವಾಗಿ ವಿವರಿಸಲಾಗಿರುವ ಸಮೂಹವೇ ಒಂದು ಸಾಮಾಜಿಕ ವರ್ಗ ಎಂದು ಹೇಳುತ್ತಾರೆ.

ಈ ವ್ಯಾಖ್ಯೆಗಳಿಂದ ನಿರ್ದಿಷ್ಟ ಸಾಮಾಜಿಕ ಸ್ಥಾನಮಾನ ಹಾಗೂ ಒಂದು ವಿಶಿಷ್ಟ ಸಂಸ್ಕೃತಿ ಸಾಮಾಜಿಕ ವರ್ಗದ ಲಕ್ಷಣವಾಗಿರುತ್ತದೆ ಎಂಬುದು ತಿಳಿದುಬರುತ್ತದೆ.

ಒಂದು ಸಾಮಾಜಿಕ ವರ್ಗದಲ್ಲಿ ಸಾಧನೆಗಳ ಮೂಲಕ ಒಬ್ಬ ಸದಸ್ಯ ತನ್ನ ಸ್ಥಾನವನ್ನು ಬದಲಾಯಿಸಿಕೊಳ್ಳಬಲ್ಲ, ಉತ್ತಮಪಡಿಸಿಕೊಳ್ಳಬಲ್ಲ. ಹೀಗೆ ಇಲ್ಲಿ ಅಂತಸ್ತು ಆರೋಪಿತವಾದುದಲ್ಲ. ಹುಟ್ಟಿನಿಂದ ನಿರ್ಧರಿತವಾದುದಲ್ಲ, ಸಾಧಿತವಾದದು. ಆದಾಯ, ಉದ್ಯೋಗ, ಶಿಕ್ಷಣ, ಜೀವನಮಟ್ಟ ಇತ್ಯಾದಿಗಳು ಒಬ್ಬ ವ್ಯಕ್ತಿಯ ಸ್ಥಾನಮಾನಗಳನ್ನು ನಿರ್ಧರಿಸುವ ಪ್ರಮಾಣಗಳು. ಇದರಿಂದ ವರ್ಗಯುಕ್ತ ವ್ಯವಸ್ಥೆಯಾಗಿರುತ್ತದೆ ಎನ್ನಬಹುದು. ಇಲ್ಲಿ ಸಾಮಾಜಿಕ ಏಣಿಯಲ್ಲಿ ವ್ಯಕ್ತಿ ತನ್ನ ಶಕ್ತಿ-ಸಾಮರ್ಥ್ಯಗಳಿಂದ ಮೇಲಕ್ಕೇರಬಲ್ಲ.

ಸಾಮಾಜಿಕ ವ್ಯವಸ್ಥೆಯಲ್ಲಿ ವರ್ಗಕ್ಕಿರುವ ಸ್ಥಾನ ಅದರ ಸಾಮಾಜಿಕ ಪ್ರತಿಷ್ಠೆಯ ಮಟ್ಟವನ್ನು ಅವಲಂಬಿಸಿರುತ್ತದೆ. ವರ್ಗಗಳಲ್ಲಿ ಸಮಾನತೆಯ ಭಾವನೆಯಲ್ಲದೆ, ಮೇಲರಿಮೆ ಹಾಗೂ ಕೀಳರಿಮೆಗಳೂ ಇರುತ್ತದೆ. ಈ ಕಾರಣ ವರ್ಗಪ್ರಜ್ಞೆ ಪ್ರತಿ ವರ್ಗದ ಮುಖ್ಯ ಲಕ್ಷಣವಾಗಿರುತ್ತದೆ.

ಪ್ರತಿ ವರ್ಗವೂ ತನ್ನದೇ ಆದ ಜೀವನ ವಿಧಾನ ಹಾಗೂ ಮಟ್ಟವನ್ನು ಹೊಂದಿರುತ್ತದೆ. ವರ್ಗದ ಸದಸ್ಯರಲ್ಲಿ ಉಡುಪು, ಭಾಷೆ, ವಾಸಸ್ಥಳ ಮುಂತಾದ ಬಾಹ್ಯ ಅಂಶಗಳಲ್ಲಿ ಮತ್ತು ವಿಚಾರಗಳು, ಅಭಿಪ್ರಾಯಗಳು, ನಂಬಿಕೆ, ನಡೆವಳಿಕೆ ಇತ್ಯಾದಿ ಆಂತರಿಕ ಅಂಶಗಳಲ್ಲಿ ಒಂದು ಸ್ವಾಮ್ಯ, ಒಂದು ಅನುರೂಪತೆ ಇರುತ್ತದೆ.

ಸಾಮಾನ್ಯವಾಗಿ ವರ್ಗವ್ಯವಸ್ಥೆಯಲ್ಲಿ ಮೇಲಿನ ವರ್ಗ, ಮಧ್ಯಮವರ್ಗ ಹಾಗೂ ಕೆಳಗಿನವರ್ಗ ಎಂಬ ಮೂರು ವಿಭಾಗಗಳಿರುತ್ತವೆ.

ಈ ವರ್ಗ ವ್ಯವಸ್ಥೆಯು ಪಾಶ್ಚಾತ್ಯ ಸಮಾಜಗಳಲ್ಲಿ ಹಾಗೂ ಇಂದಿನ ಆಧುನಿಕ ಸಮಾಜಗಳಲ್ಲಿ ಪ್ರಧಾನವಾಗಿದೆ. ಇಲ್ಲಿ ವಿವಾಹ, ಊಟ, ಸಾಮಾಜಿಕ ಸಂಪರ್ಕ ಹಾಗೂ ವೃತ್ತಿಗಳ ವಿಚಾರದಲ್ಲಿ ವ್ಯಕ್ತಿಗೆ ಸ್ವಾತಂತ್ರ್ಯವಿರುತ್ತದೆ ಎಂದು ಹೇಳಿದರೂ ಆಯಾಯ ವರ್ಗಗಳು ಹಲವಾರು ನಿರ್ಬಂಧಗಳನ್ನು ವಿಧಿಸುತ್ತದೆ.

ಎಲ್ಲಾ ಸಮಾಜಗಳಲ್ಲಿ ಜಾತಿ ಹಾಗೂ ವರ್ಗ ವ್ಯವಸ್ಥೆಗಳ ಅಂಶಗಳು ವಿಭಿನ್ನ ಪ್ರಮಾಣಗಳಲ್ಲಿರುತ್ತದೆ. ಭಾರತದಲ್ಲಿ ನಿಗದಿಪಡಿಸಲಾದ ಸ್ಥಿರವಾದ ಸ್ಥಾನಮಾನಗಳಿದ್ದರೂ ಸಾಮಾಜಿಕ ಚಲನೆಗೆ ಅವಕಾಶವಿದೆ. ಅಮೆರಿಕಾ ಸಮಾಜದಲ್ಲಿ ಸಮಾನತೆ ಹಾಗೂ ಸಮಾನಾವಕಾಶಗಳಿದ್ದರೂ ಬಿಳಿಯರ ಹಾಗೂ ನೀಗ್ರೋಗಳ ಸ್ಥಾನಮಾನಗಳ ವಿಷಯದಲ್ಲಿ ವಂಶಾನುಗತವಾದ ಅಸಮಾನತೆ ಎಂಬ ತತ್ತ್ವವನ್ನು ಪಾಲಿಸಲಾಗುತ್ತದೆ. ಹೀಗೆ ಜಾತಿ ಹಾಗೂ ವರ್ಗವ್ಯವಸ್ಥೆಗಳು ಎರಡು ಧ್ರುವಗಳನ್ನು ಪ್ರತಿನಿಧಿಸುತ್ತವೆ.

**ಹಿಂದುಳಿದ ವರ್ಗಗಳಲ್ಲಿ ಜಾಗೃತಿ ಹಾಗೂ ಅದರ ಫಲಶೃತಿ**

ಆಧುನಿಕ ಕಾಲದಲ್ಲಿ ಭಾರತ ಸಮಾಜದಲ್ಲಿ ಬ್ರಿಟಿಷರ ಆಳ್ವಿಕೆ, ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ, ಕೈಗಾರೀಕರಣ, ನಗರೀಕರಣ, ಪಾಶ್ಚಾತ್ತೀಕರಣ ಮುಂತಾದ ಪ್ರಕ್ರಿಯೆಗಳು, ಆಧುನಿಕ ಶಿಕ್ಷಣ, ಸಾರಿಗೆ-ಸಂಪರ್ಕ ಮಾಧ್ಯಮಗಳ ಬೆಳವಣಿಗೆ, ಇತ್ಯಾದಿ, ನೂತನ ಶಕ್ತಿಗಳ ಕಾರಣ ಹಿಂದುಳಿದಿದ್ದ ವರ್ಗಗಳ ಸದಸ್ಯರಲ್ಲಿ ತಾವು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಹಾಗೂ ಧಾರ್ಮಿಕ ಸೌಲಭ್ಯಗಳಿಂದ ವಂಚಿತರಾಗಿರುವುದು ಮತ್ತು ಅವುಗಳು ಮೇಲ್ಜಾತಿ ಜನರ, ಮುಖ್ಯವಾಗಿ ಬ್ರಾಹ್ಮಣರ ಏಕಸ್ವಾಮ್ಯಕ್ಕೆ ಒಳಗಾಗಿರುವ ವಿಷಯ ಸ್ಪಷ್ಟವಾಗಿ ತಾವು ವಂಚಿತರಾಗಿದ್ದೇವೆ ಎಂಬ ಜಾಗೃತಿ ಮೂಡಿಬಂದಿತು. ತಮಗೆ ನ್ಯಾಯವಾಗಿ ಸಿಗಬೇಕಾದುದನ್ನು ಪಡೆಯಲು ಅವರು ಸಂಘಟಿತರಾಗಲು ನಿರ್ಧರಿಸಿದರು. ಈ ಕಾರಣ ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ಹಲವೆಡೆ ಮುಖ್ಯವಾಗಿ ಮಹಾರಾಷ್ಟ್ರ, ತಮಿಳುನಾಡು, ಮೈಸೂರು ಸಂಸ್ಥಾನದಲ್ಲಿ ಮೇಲ್ಜಾತಿ ವಿರೋಧಿ, ಪ್ರಧಾನವಾಗಿ ಬ್ರಾಹ್ಮಣ ವಿರೋಧಿ ಚಳವಳಿಗಳು ತಲೆದೋರಿದವು.

ಮೈಸೂರು ಸಂಸ್ಥಾನದಲ್ಲಿ ಎಲ್ಲಾ ಸರ್ಕಾರಿ ಹುದ್ದೆಗಳು ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ ಮೇಲ್ಮಟ್ಟದಲ್ಲಿದ್ದ ಬ್ರಾಹ್ಮಣರ ಏಕಸ್ವಾಮ್ಯಕ್ಕೆ ಒಳಗಾಗಿದ್ದವು. ಮೂಲಶಿಕ್ಷಣವೇ ಇಲ್ಲದಿದ್ದ ಹಿಂದುಳಿದಿದ್ದ ಪಂಗಡಗಳವರಿಗೆ ಸರ್ಕಾರಿ ಉದ್ಯೋಗ ಕನಸಿನ ಗಂಟಾಗಿದ್ದಿತು. ಬ್ರಿಟಿಷ್ ಕಮೀಷನರುಗಳ ಆಳ್ವಿಕೆಯಲ್ಲಿ ಮೈಸೂರು ಸಂಸ್ಥಾನದಲ್ಲಿ 1851 ರಿಂದ 1881 ರ ಅವಧಿಯಲ್ಲಿ ಹಿಂದುಳಿದ ವರ್ಗದವರಿಗೆ ಮೀಸಲಾತಿ ಕಲ್ಪಿಸಲಾಗಿತ್ತು. ಆದರೆ ಅವರ ಉದ್ಯೋಗದ ಪರಿಸ್ಥಿತಿಯಲ್ಲಿ ಬದಲಾವಣೆ ಆಗಲಿಲ್ಲ. 1914 ರಲ್ಲಿ ಮೈಸೂರು ಸಂಸ್ಥಾನವು, ಹಿಂದುಳಿದ ವಿದ್ಯಾವಂತ ಯುವಕರನ್ನು ನೇರವಾಗಿ ಅಸಿಸ್ಟೆಂಟ್ ಕಮೀಷನರ್ ಹುದ್ದೆಗೆ ನಾಮಕರಣ ಮಾಡಿಕೊಳ್ಳುವಂತೆ ಆದೇಶಿಸಿತು. ಅದರ ನಂತರ ಕೂಡಾ ಪರಿಸ್ಥಿತಿಯಲ್ಲಿ ಸುಧಾರಣೆ ಕಂಡು ಬರಲಿಲ್ಲ. ದಿವಾನ್ ಮಾಧವರಾವ್ ಅವರ ಕಾಲದಲ್ಲಿ ಒಕ್ಕಲಿಗ, ಲಿಂಗಾಯತ ಹಾಗೂ ಇತರ ವರ್ಗದವರಿಗೆ ಶಾಲೆ ಹಾಗೂ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಲು ಸಾಕಷ್ಟು ಪ್ರೋತ್ಸಾಹವನ್ನು ಕೊಡಲಾಯಿತು. 1907ರಲ್ಲಿ ಒಕ್ಕಲಿಗ ಸಂಘ ಮತ್ತು 1909ರಲ್ಲಿ ವೀರಶೈವ ಸಭಾ ಹಾಗೂ ಸೆಂಟ್ರಲ್ ಮಹಮ್ಮಡನ್ ಅಸೋಸಿಯೇಷನ್ ತಲೆದೋರಿ ಹಿಂದುಳಿದಿದ್ದ ವರ್ಗಗಳ ಚಟುವಟಿಕೆಗಳಿಗೆ ವೇದಿಕೆಯನ್ನು ಸಿದ್ಧಪಡಿಸಿಕೊಟ್ಟವು. ಶಾಸನಸಭೆಯ ಸದಸ್ಯರಾಗಿದ್ದ ಎಂ. ಬಸವಯ್ಯ ಹಿಂದುಳಿದ ವರ್ಗಗಳ ನಾಯಕರಾಗಿ ಹಿಂದುಳಿದ ವರ್ಗಗಳ ಜನರಿಗೆ ವಿದ್ಯಾರ್ಥಿವೇತನ ಹಾಗೂ ಉದ್ಯೋಗಗಳನ್ನು ನೀಡಬೇಕೆಂದು ಒತ್ತಾಯಪಡಿಸಿದರು. ಯುವರಾಜ ನರಸಿಂಹರಾಜ ಒಡೆಯರ ಹಾಗೂ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ ಅವರು ಈ ಬೇಡಿಕೆಗಳನ್ನು ಸಹಾನುಭೂತಿಯಿಂದ ಆಲಿಸಿ ಬೆಂಬಲ ತೋರಿದರು. ಇದರಿಂದ 1917ರಲ್ಲಿ ಬೆಂಗಳೂರಿನಲ್ಲಿ ಹಿಂದುಳಿದ ವರ್ಗಗಳ ಸಭೆ ನಡೆದು 3000ಕ್ಕೂ ಹೆಚ್ಚು ಜನ ಭಾಗವಹಿಸಿದರು.

ಎಲ್ಲಾ ಉದ್ಯೋಗಗಳಲ್ಲೂ ಬ್ರಾಹ್ಮಣರಿಗಿದ್ದ ಏಕಸ್ವಾಮ್ಯ ವಿರೋಧಿಸಿ ಎಂ. ಬಸವಯ್ಯ ಈ ಎಲ್ಲಾ ರಂಗಗಳಲ್ಲಿ ಎಲ್ಲಾ ವರ್ಗಗಳಿಗೆ ಸಮಾನ ಪ್ರಾತಿನಿಧ್ಯವನ್ನು ನೀಡಬೇಕೆಂದು, ಎಂ. ಸುಬ್ಬಯ್ಯ ಸ್ಥಳೀಯ ಸಂಸ್ಥೆಗಳಲ್ಲಿ ಸಮಾನತೆಯ ಆಧಾರದ ಮೇಲೆ ಪ್ರಾತಿನಿಧ್ಯವನ್ನು ಕೊಡಲೇಬೇಕೆಂದು ಮತ್ತು ಹೆಚ್. ಚನ್ನಯ್ಯ ಸರ್ಕಾರದ ಶಾಸಕಾಂಗ ಹಾಗೂ ಕಾರ್ಯಾಂಗಗಳಲ್ಲಿ ಎಲ್ಲಾ ಸಮುದಾಯದವರಿಗೂ ಸಮಾನ ಪ್ರಾತಿನಿಧ್ಯವಿರಬೇಕೆಂದು ವಾದಿಸಿದರು.

1917ರಲ್ಲಿ ಹಿಂದುಳಿದ ವರ್ಗಗಳು ಬೆಂಗಳೂರಿನಲ್ಲಿ ಪ್ರಜಾಮಿತ್ರ ಮಂಡಲಿಯನ್ನು ಸ್ಥಾಪಿಸಿದವು. 1918ರಲ್ಲಿ ಅದರ ಘಟಕವೊಂದನ್ನು ಮೈಸೂರಿನಲ್ಲಿ ತೆರೆಯಲಾಯಿತು. ಆ ಮಂಡಳಿಯು ಎಲ್ಲಾ ಹಿಂದುಳಿದ ವರ್ಗಗಳಿಗೆ ಸಮಾನ ಉದ್ಯೋಗಗಳನ್ನು ಮತ್ತು ಸರ್ಕಾರಿ ಇಲಾಖೆಗಳಲ್ಲಿ ಸಮಾನ ಪ್ರಾತಿನಿಧ್ಯವನ್ನು ಕೊಡಬೇಕೆಂಬ ಮನವಿಯನ್ನು ಮಹಾರಾಜರಿಗೆ ಸಲ್ಲಿಸಿತು. ಮಹಾರಾಜರು ಹಿಂದುಳಿದಿದ್ದ ವರ್ಗಗಳ ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯಿತಿ, ವಿದ್ಯಾರ್ಥಿ ವೇತನಗಳನ್ನು ನೀಡಿದರಲ್ಲದೆ ನೇಮಕಾತಿಯಲ್ಲೂ ಹಿಂದುಳಿದ ವರ್ಗಗಳಿಗೆ ಆದ್ಯತೆ ಕೊಟ್ಟರು. ದಿವಾನರಾಗಿದ್ದ ವಿಶ್ವೇಶ್ವರಯ್ಯನವರು ಈ ವರ್ಗಗಳ ಶೈಕ್ಷಣಿಕ ಪ್ರಗತಿಗಾಗಿ ಶಾಲೆಗಳನ್ನು ತೆರೆದರಲ್ಲದೆ ಕ್ಷೇಮಾಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ತಯಾರಿಸಿದರು. ಆದರೆ ಅವರು ಯಾವುದೇ ವರ್ಗದವರಾಗಿದ್ದರೂ ಅರ್ಹತೆ ಇರುವ ವ್ಯಕ್ತಿಗಳಿಗೆ ಮಾತ್ರ ಸರ್ಕಾರದ ಉನ್ನತ ಹುದ್ದೆಗಳನ್ನು ನೀಡಬೇಕೆಂದು ವಾದಿಸಿದ್ದರಿಂದ ಅವರಿಗೂ ಮಹಾರಾಜರಿಗೂ ನಡುವೆ ಭಿನ್ನಾಭಿಪ್ರಾಯಗಳ ಮಂಜು ಮುಸುಕಿದ್ದರಿಂದ ದಿವಾನರು ರಾಜೀನಾಮೆ ನೀಡಿದರು.

ಈ ಬೆಳವಣಿಗೆಯ ಹಿನ್ನೆಲೆಯಲ್ಲಿ ಮೈಸೂರು ಸರ್ಕಾರವು 1918ರಲ್ಲಿ ನ್ಯಾಯಾಧಿಪತಿ ಮಿಲ್ಲರ್‌ರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿ ಹಿಂದುಳಿದ ವರ್ಗಗಳ ಏಳಿಗೆಗಾಗಿ ಸೂಕ್ತ ಸಲಹೆಗಳನ್ನು ನೀಡುವಂತೆ ಸೂಚಿಸಿತು. ಆ ಸಮಿತಿಯು 1919ರಲ್ಲಿ ಒಂದು ವರದಿಯನ್ನು ಸಲ್ಲಿಸಿತು. ಅದು 1911ರ ಜನಗಣತಿಯನ್ನು ಆಧಾರವಾಗಿಟ್ಟುಕೊಂಡು ಶೇ. 5ಕ್ಕಿಂತ ಕಡಿಮೆ ಸಾಕ್ಷರತಾ ಪ್ರಮಾಣವನ್ನು ಹೊಂದಿದ್ದ ಜಾತಿಗಳನ್ನು ಹಿಂದುಳಿದಿದ್ದ ಸಮೂಹಗಳೆಂಬುದಾಗಿ ಗುರುತಿಸಿ ಬ್ರಾಹ್ಮಣರು ಹಾಗೂ ಇತರರು ಎಂಬುದಾಗಿ ವಿಂಗಡಿಸಿ ಬ್ರಾಹ್ಮಣ, ಆಂಗ್ಲೋ ಇಂಡಿಯನ್ ಹಾಗೂ ಕ್ರಿಶ್ಚಿಯನ್ನರನ್ನು ಬಿಟ್ಟು ಇತರರನ್ನು ಹಿಂದುಳಿದ ವರ್ಗಗಳೆಂಬುದಾಗಿ ವರ್ಗೀಕರಿಸಿತು ಮತ್ತು ಶೇ. 50ರಷ್ಟು ಹುದ್ದೆಗಳನ್ನು ಏಳು ವರ್ಷದ ಒಳಗೆ ಹಿಂದುಳಿದ ವರ್ಗಗಳಿಗೆ ನೀಡಬೇಕು, ವಿದ್ಯಾರ್ಥಿ ವೇತನಗಳನ್ನು ಕೊಡಬೇಕು ಮುಂತಾದ ಶಿಫಾರಸ್ಸುಗಳನ್ನು ಮಾಡಿತು. ವಿಶ್ವೇಶ್ವರಯ್ಯನವರ ಅನಂತರ ಬಂದ ದಿವಾನ್ ಕಾಂತರಾಜ್ ಅರಸು ಈ ಶಿಫಾರಸ್ಸುಗಳನ್ನು ಜಾರಿಗೆ ತರುವುದರಲ್ಲಿ ತುಂಬಾ ಉತ್ಸಾಹ ತೋರಿದರು.

ಸ್ವಾತಂತ್ರ್ಯಾ ನಂತರ ಸಂವಿಧಾನದಲ್ಲಿ ಪರಿಶಿಷ್ಟ ಜಾತಿಯವರಿಗೆ ಪರಿಚ್ಛೇದ 341ರ ಮೂಲಕವೂ, ಪರಿಶಿಷ್ಟ ಪಂಗಡಕ್ಕೆ ಪರಿಚ್ಛೇದ 342ರ ಮೂಲಕವೂ ಮೀಸಲಾತಿಯನ್ನು

ಒದಗಿಸಿ, ಆಯಾ ಪರಿಚ್ಛೇದದಲ್ಲಿ ಬರುವ ಜಾತಿಗಳನ್ನು ಅನುಸೂಚಿಯಲ್ಲಿ ನಮೂದಿಸಿ. ಮೀಸಲಾತಿಗೆ ಸಂಪೂರ್ಣ ರಕ್ಷಣೆಯನ್ನು ಒದಗಿಸಲಾಗಿದೆ. ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದಂತೆ ಪರಿಚ್ಛೇದ 340ರ ಅನ್ವಯ ಕೇಂದ್ರ ಮತ್ತು ರಾಜ್ಯ ಸರಕಾರಗಳು ಆಯೋಗಗಳನ್ನು ನೇಮಿಸಿ, ಅವುಗಳ ಮೂಲಕ ಹಿಂದುಳಿದ ವರ್ಗಗಳ ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳ ಅಧ್ಯಯನ ಮಾಡಿಸಿ, ಅದರ ಸುಧಾರಣೆಗೆ ಕ್ರಮ ತೆಗೆದುಕೊಳ್ಳತಕ್ಕದ್ದು. ಅದರಂತೆ ಕೇಂದ್ರ ಸರಕಾರವು ಕಾಕಾ ಕಾಲೇಲ್‌ಕರ್ ಅವರ ನೇತೃತ್ವದಲ್ಲಿ 1953ರಲ್ಲಿ ಮೊದಲನೆಯ ಆಯೋಗ ನೇಮಿಸಿತು. ಅದರೆ ಕೇಂದ್ರ ಸರ್ಕಾರ ವರದಿಯನ್ನು ಜಾರಿಮಾಡಲಿಲ್ಲ.

1977ರಲ್ಲಿ ಅಧಿಕಾರಕ್ಕೆ ಬಂದ ಜನತಾ ಸರಕಾರವು ಕಾಕಾ ಕಾಲೇಲ್‌ಕರ್ ಆಯೋಗದ ವರದಿಯನ್ನು ಆಧಾರವಾಗಿಟ್ಟು ಶೇ. 30ರಷ್ಟು ಸರ್ಕಾರಿ ಹುದ್ದೆಗಳ ಮೀಸಲಾತಿಯನ್ನು ಅನುಷ್ಠಾನಗೊಳಿಸುವುದಾಗಿ ತನ್ನ ಚುನಾವಣಾ ಪ್ರಣಾಳಿಕೆಯಲ್ಲಿ ಘೋಷಿಸಿಕೊಂಡಿತು. ಹಾಗೆ ಮಾಡದೆ ಜನತಾ ಪಕ್ಷದ ಸರ್ಕಾರ 1978ರಲ್ಲಿ ಮಂಡಲ ಆಯೋಗವನ್ನು ನೇಮಿಸಿತು. ಆ ಆಯೋಗ 1980ರ ಡಿಸೆಂಬರ್‌ನಲ್ಲಿ ತನ್ನ ವರದಿಯನ್ನು ಸಲ್ಲಿಸಿದರೂ, ಏಪ್ರಿಲ್ 1982ರ ವರೆಗೆ ಅದನ್ನು ಸಂಸತ್ತಿನಲ್ಲಿ ಮಂಡಿಸಲಿಲ್ಲ. ಶೇ. 27ರಷ್ಟು ಹುದ್ದೆಗಳ ಮೀಸಲಾತಿಯನ್ನು ಅನುಷ್ಠಾನಗೊಳಿಸುವ ಬಗ್ಗೆ ಸರ್ಕಾರಿ ಆದೇಶ ಜಾರಿಗೆ ತಂದಾಗ ವಿ.ಪಿ. ಸಿಂಗ್ ಸರಕಾರವು ಪತನ ಹೊಂದಿತು.

ರಾಜ್ಯದಲ್ಲಿಯೂ ಮೀಸಲಾತಿಯ ಅನುಷ್ಠಾನ ಅಸಮರ್ಪಕವಾಗಿ ಕಂಡು ಬರುತ್ತದೆ. ಸ್ವಾತಂತ್ರ್ಯಾನಂತರ ರಾಜ್ಯಸರಕಾರವು ಸಂವಿಧಾನದ ಪರಿಚ್ಛೇದ 340ರ ಅನ್ವಯ ಆಯೋಗವನ್ನು ನೇಮಿಸಲಿಲ್ಲ. ಬದಲಾಗಿ ಹಿಂದಿನ ಮೀಸಲಾತಿಯನ್ನೇ ಮುಂದುವರೆಸಿಕೊಂಡು ಹೋಯಿತು. ಮೈಸೂರು ರಾಜ್ಯದಲ್ಲಿ 1956ರಲ್ಲಿ ಹೈದರಾಬಾದ್, ಮದ್ರಾಸ್, ಮುಂಬೈ, ಕೊಡಗು ಹಾಗೂ ಇತರ ಪ್ರದೇಶಗಳು ಸೇರಿದವು. ಆದ ಕಾರಣ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಗೊಂದಲ ಉಂಟಾಯಿತು. ಕಾರಣ ಒಂದು ಕಡೆ ಪರಿಶಿಷ್ಟ ಜಾತಿ ಎಂಬುದಾಗಿ ಗುರುತಿಸಲಾಗಿದ್ದ ಸಮೂಹವನ್ನು ಮತ್ತೊಂದೆಡೆ ಹಿಂದುಳಿದ ವರ್ಗ ಎಂಬುದಾಗಿ ಎಣಿಸಲಾಗಿದ್ದಿತು. ಆದ್ದರಿಂದ ಹಿಂದಿನ ಮಿಲ್ಲರ್ ಸಮಿತಿಯ ಶಿಫಾರಸ್ಸಿನಂತೆ ಬ್ರಾಹ್ಮಣರನ್ನು ಹೊರತುಪಡಿಸಿ ಇತರ ಎಲ್ಲಾ ಜಾತಿಗಳನ್ನು ಹಿಂದುಳಿದ ಸಮೂಹಗಳೆಂಬುದಾಗಿ ಪರಿಗಣಿಸಬೇಕೆಂಬುದಾಗಿ 1958ರಲ್ಲಿ ಸರ್ಕಾರ ಒಂದು ಆದೇಶವನ್ನು ಅನಂತರ ಏಕಪ್ರಕಾರವಾದ ಪಟ್ಟಿಯನ್ನು ತಯಾರಿಸುವುದಕ್ಕಾಗಿ ನೇಮಿಸಲಾಗಿದ್ದ ಅಧಿಕಾರಿಗಳ ಸಮಿತಿಯ ಶಿಫಾರಸ್ಸಿನ ಮೇರೆಗೆ 1959ರಲ್ಲಿ ಮತ್ತೊಂದು ಆದೇಶವನ್ನು ಹೊರಡಿಸಿತು. ಆದರೆ ಮೈಸೂರು ಶ್ರೇಷ್ಠ ನ್ಯಾಯಾಲಯವು ಇವನ್ನು ರದ್ದುಪಡಿಸಿದ್ದರಿಂದ 1960ರಲ್ಲಿ ಸರ್ಕಾರವು ನಾಗನಗೌಡ ಸಮಿತಿಯನ್ನು ನೇಮಿಸಿತು. ಅದು ಜಾತಿ ಹಾಗೂ ಸಾಕ್ಷರತಾ ಪ್ರಮಾಣದ ಆಧಾರದ ಮೇಲೆ ಹಿಂದುಳಿದ ವರ್ಗಗಳ ಪಟ್ಟಿ

ಮಾಡಿ ಶೇ. 36ರಷ್ಟು ಮೀಸಲಾತಿ ಕೊಡಬೇಕೆಂದು ಶಿಫಾರಸ್ಸು ಮಾಡಿತು. ಲಿಂಗಾಯತರನ್ನು ಈ ಪಟ್ಟಿಯಲ್ಲಿ ಸೇರಿಸಲಿಲ್ಲ. ಆದ್ದರಿಂದ ಅಸಮಾಧಾನಗೊಂಡಿದ್ದ ಈ ವರ್ಗವನ್ನು ತೃಪ್ತಿಪಡಿಸಲು ಅನಂತರ ಅದನ್ನು ಈ ಪಟ್ಟಿಗೆ ಸೇರಿಸಿ ಶೇ. 25ರಷ್ಟು ಮೀಸಲಾತಿ ಒದಗಿಸಲಾಯಿತು. ಆದರೆ 1963ರಲ್ಲಿ ನ್ಯಾಯಾಲಯವು ಈ ಆದೇಶವನ್ನು ರದ್ದುಪಡಿಸಿತು. ಅನಂತರ 1972ರಲ್ಲಿ ಮುಖ್ಯಮಂತ್ರಿ ದೇವರಾಜ ಅರಸು ಅವರ ಇನ್ನೊಂದು ಸಮಿತಿಯನ್ನು ಎಲ್.ಜಿ. ಹಾವನೂರ್ ಅಧ್ಯಕ್ಷತೆಯಲ್ಲಿ ರಚಿಸಿ ಈ ಸಮಸ್ಯೆಗೆ ತಕ್ಕ ಪರಿಹಾರವನ್ನು ಸೂಚಿಸಲು ನಿರ್ದೇಶಿಸಿದರು. ಈ ಆಯೋಗವು ಶೈಕ್ಷಣಿಕ ಮಟ್ಟವನ್ನು ಪ್ರಮಾಣವಾಗಿಟ್ಟುಕೊಂಡು ಹಿಂದುಳಿದ ಸಮುದಾಯ, ಹಿಂದುಳಿದ ಜಾತಿ ಹಾಗೂ ಹಿಂದುಳಿದ ಪರಿಶಿಷ್ಟ ವರ್ಗ ಎಂಬುದಾಗಿ ಮೂರು ವಿಭಾಗಗಳನ್ನು ಮಾಡಿ ಶೇ. 63ರಷ್ಟು ಮೀಸಲಾತಿಯನ್ನು ನೀಡಬೇಕೆಂಬುದಾಗಿ ಶಿಫಾರಸ್ಸು ಮಾಡಿತು. ಈ ಆಯೋಗದ ವರದಿಯ ಆಧಾರದ ಮೇಲೆ ಹೊರಡಿಸಲಾಗಿದ್ದ ಸರ್ಕಾರದ ಆದೇಶಗಳ ವಿರುದ್ಧ 1977ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆಗಳನ್ನು ಹೂಡಲಾಯಿತು. 1985ರಲ್ಲಿ ಸರ್ವೋಚ್ಚ ನ್ಯಾಯಾಲಯವು ಶಿಕ್ಷಣ ಹಾಗೂ ಉದ್ಯೋಗ ರಂಗಗಳಲ್ಲಿ ಮೀಸಲಾತಿಯ ಪ್ರಶ್ನೆಯನ್ನು ಸಮಗ್ರವಾಗಿ ನಿರ್ಧರಿಸುವಂತೆ ಆದೇಶ ನೀಡಿದಾಗ ನಿವೃತ್ತ ನ್ಯಾಯಾಧೀಶರಾದ ಟಿ. ವೆಂಕಟಸ್ವಾಮಿ ಆಯೋಗವನ್ನು ಸರ್ಕಾರ ನೇಮಿಸಿ ಹಿಂದುಳಿದ ವರ್ಗಗಳ ಏಳಿಗೆಗಾಗಿ ಸೂಕ್ತ ಕ್ರಮಗಳನ್ನು ಸೂಚಿಸುವಂತೆ ಆದೇಶಿಸಿತು. ಅದು ಶೈಕ್ಷಣಿಕವಾಗಿ ಹಿಂದುಳಿದಿರುವಿಕೆಯನ್ನು ಗುರುತಿಸಿ ಎ.ಬಿ.ಸಿ.ಡಿ. ಎಂಬುದಾಗಿ ನಾಲ್ಕು ಹಿಂದುಳಿದ ವರ್ಗಗಳನ್ನು ವರ್ಗೀಕರಿಸಿ ರಾಜ್ಯದ ಜನಸಂಖ್ಯೆಯ ಶೇ. 33ರಷ್ಟು ಸಂಖ್ಯೆಯನ್ನು ಹಿಂದುಳಿದ ವರ್ಗಗಳೆಂಬುದಾಗಿ ಗುರುತಿಸಿ ಶೇ. 49 ರಷ್ಟು ಮೀಸಲಾತಿ ಇರಬೇಕೇಂಬುದಾಗಿ ಸಲಹೆ ಮಾಡಿತು. ರಾಜಕೀಯ ಹಾಗೂ ಆರ್ಥಿಕವಾಗಿ ಪ್ರಬಲರಾಗಿದ್ದ ಒಕ್ಕಲಿಗರನ್ನು ಈ ಪಟ್ಟಿಯಿಂದ ತೆಗೆದುಹಾಕಿದ್ದರಿಂದ ಆ ವರ್ಗ ಪ್ರತಿಭಟಿಸಿ ಸರ್ಕಾರವು ಈ ವರದಿಯನ್ನು ತಿರಸ್ಕರಿಸುವಂತೆ ಒತ್ತಾಯಿಸಿತು. ಸರ್ಕಾರ ಆ ಒತ್ತಾಯಕ್ಕೆ ಮಣಿದು ಒಂದು ನೀತಿಯನ್ನು ರೂಪಿಸಿ ಹಿಂದುಳಿದ ವರ್ಗಗಳನ್ನು ಐದು ವಿಭಾಗಗಳಾಗಿ ಮಾಡಿ ರಾಜ್ಯದ ಜನಸಂಖ್ಯೆಯ ಶೇ. 73.5ರಷ್ಟು ಜನರಿಗೆ ಶೇ. 50ರಷ್ಟು ಮೀಸಲಾತಿಯನ್ನು ನೀಡಿತು. ಅನಂತರ 1990ರಲ್ಲಿ ನೇಮಕಗೊಂಡ ಚಿನ್ನಪ್ಪರೆಡ್ಡಿ ಆಯೋಗವು ಸರ್ವೋಚ್ಚ ನ್ಯಾಯಾಲಯವು ವಿಧಿಸಿದ ಸೂತ್ರಗಳ ಪ್ರಕಾರ ವರದಿಯನ್ನು ಸಿದ್ಧಪಡಿಸಿತು. ಅದು ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿದ್ದಂತೆ ಕಂಡುಬಂದ ಜಾತಿಗಳನ್ನು ಮೂರು ಪ್ರವರ್ಗಗಳಾಗಿ ವರ್ಗೀಕರಿಸಿ ಕೃಷಿ ಕಾರ್ಮಿಕ, ಬಡಗಿ, ಚಾಲಕ ಮುಂತಾದ ಕೂಲಿಕಾರರನ್ನು ಹಿಂದುಳಿದವರೆಂಬುದಾಗಿ ಗುರುತಿಸಿ ಶೇ. 38ರಷ್ಟು ಮೀಸಲಾತಿ ಇರಬೇಕೆಂಬುದಾಗಿ ಸಲಹೆ ಮಾಡಿತು ಮತ್ತು ಉನ್ನತ ಸರ್ಕಾರಿ ಹುದ್ದೆಯಲ್ಲಿರುವವರು, ವೈದ್ಯ, ವಕೀಲ ಮೊದಲಾದ ಹೆಚ್ಚಿನ ಆದಾಯವುಳ್ಳವರು, ಆದಾಯ ತೆರಿಗೆದಾರರು-ಈ ಮೊದಲಾದವರಿಗೆ ಮೀಸಲಾತಿ ಸೌಲಭ್ಯಗಳನ್ನು ನೀಡಬಾರದು ಎಂಬ ಸೂಚನೆಯನ್ನು ನೀಡಿತು.

ಸರ್ಕಾರವು ಈ ವರದಿಯನ್ನು ಅನುಮೋದಿಸಿ ಜಾರಿಗೆ ತರುವ ಹಂತದಲ್ಲಿ 1992ರಲ್ಲಿ ಸರ್ವೋಚ್ಚ ನ್ಯಾಯಾಲಯವು ಮಂಡಲ್ ವರದಿಯನ್ನು ಜಾರಿಗೊಳಿಸುವ ಬಗ್ಗೆ ತೀರ್ಪನ್ನು ನೀಡಿತು. 1978ರಲ್ಲಿ ಕೇಂದ್ರದಲ್ಲಿದ್ದ ಜನತಾ ಪಕ್ಷದ ಸರ್ಕಾರವು ನೇಮಿಸಿದ್ದ ಈ ಆಯೋಗವು ಸಾಮಾಜಿಕ, ಶೈಕ್ಷಣಿಕ ಹಾಗೂ ಆರ್ಥಿಕ ಪ್ರಮಾಣಗಳನ್ನು ಇಟ್ಟುಕೊಂಡು 1931ರ ಜನಗಣತಿ ದಾಖಲೆಯ ಪ್ರಕಾರ ಹಿಂದುಳಿದವರ ಸಂಖ್ಯೆ ಶೇ. 52ರಷ್ಟೆಂಬುದಾಗಿ ನಿರ್ಧರಿಸಿ ಶೇ. 27ರಷ್ಟು ಮೀಸಲಾತಿ ಇರಬೇಕೆಂಬುದಾಗಿ ಸೂಚಿಸಿ ಒಂದು ವರದಿಯನ್ನು ಸಲ್ಲಿಸಿತು. ಅದನ್ನು 1990ರಲ್ಲಿ ವಿ.ಪಿ. ಸಿಂಗ್‌ರವರ ಜನತಾದಳ ಸರ್ಕಾರ ಜಾರಿಗೆ ತಂದಾಗ ಮೀಸಲಾತಿ ವಿರೋಧಿ ಚಳವಳಿ ನಡೆಯಿತು. ಸರ್ವೋಚ್ಚ ನ್ಯಾಯಾಲಯವು ಈ ವರದಿ ಸಂವಿಧಾನಾತ್ಮಕವಾದುದು ಎಂದು ತೀರ್ಪಿತ್ತಾಗ, ಅದು 1993ರಲ್ಲಿ ಜಾರಿಗೆ ಬಂದಿತು. ಸರ್ವೋಚ್ಚ ನ್ಯಾಯಸ್ಥಾನವು ಕ್ರೀಮಿ ಲೇಯರ್ ಎಂಬ ಹಿಂದುಳಿದವರಲ್ಲಿ ಮುಂದುವರಿದ ಜನರಿಗೆ ಮೀಸಲಾತಿ ನೀಡಬಾರದು ಎಂಬ ನಿಯಮವನ್ನು ಅನುಸರಿಸಬೇಕೆಂಬುದಾಗಿ ನಿರ್ದೇಶಿಸಿತು. ಅದರಂತೆ ಹಿಂದುಳಿದ ವರ್ಗಗಳ ಆಯೋಗದ ವರದಿಯ ಪ್ರಕಾರ ಮೀಸಲಾತಿ ನಿಯಮಗಳ ಅನ್ವಯ 1994ರಲ್ಲಿ ಆದೇಶವೊಂದನ್ನು ಪ್ರಕಟಿಸಿತು. ಹಲವಾರು ವ್ಯಕ್ತಿಗಳು ಮತ್ತು ಸಂಘ-ಸಂಸ್ಥೆಗಳು ಸರ್ಕಾರಕ್ಕೆ ಮನವಿಗಳನ್ನು ಸಲ್ಲಿಸಿದರು. ಸರ್ಕಾರವು ಈ ಕೋರಿಕೆಗಳನ್ನು ಮರುಪರಿಶೀಲಿಸಿ 1994ರಲ್ಲಿ ಮೀಸಲಾತಿಯನ್ನು ಶೇ. 57ಕ್ಕೆ ನಂತರ ಶೇ. 73ಕ್ಕೆ ಹೆಚ್ಚಿಸಿತು. ಮೀಸಲಾತಿ ಶೇ. 50ಕ್ಕಿಂತ ಹೆಚ್ಚಿರಬಾರದೆಂಬ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದ ಪ್ರಕಾರ ಈಗ ರಾಜ್ಯದಲ್ಲಿ ಶೇ. 50ರಷ್ಟು ಮೀಸಲಾತಿ ಜಾರಿಯಲ್ಲಿದೆ.

ಹೀಗೆ ಐತಿಹಾಸಿಕ ಕಾರಣಗಳಿಂದ ಸಾಮಾಜಿಕ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ಸ್ಥಿತಿಗತಿಗಳನ್ನು ಸುಧಾರಿಸುವ ಘನ ಉದ್ದೇಶದಿಂದ ಮಾಡಿದ ಹೋರಾಟ ಹಾಗೂ ಪ್ರಯತ್ನಗಳು ಸಂಪೂರ್ಣ ಸಫಲತೆ ಪಡೆಯಲಿಲ್ಲ. ದೇಶಕ್ಕೆ ಸ್ವಾತಂತ್ರ್ಯ ಬಂದು 55 ವರ್ಷಗಳೇ ಕಳೆದಿದ್ದರೂ ರಾಜ್ಯದ ಸಾಕ್ಷರತೆ ಶೇ. 67.04 ರಷ್ಟಿದ್ದರೆ, ಶೇ. 60 ಕ್ಕೂ ಹೆಚ್ಚು ಹಿಂದುಳಿದ ಜನ ಬಡತನ ರೇಖೆಗಿಂತ ಕೆಳಗಿದ್ದಾರೆ.

ಹಿಂದುಳಿದ ವರ್ಗಗಳಲ್ಲಿ ಜಾಗೃತಿ ಮೂಡಿಸುವಲ್ಲಿ ದೇವರಾಜ ಅರಸು ಅವರು ಮಾಡಿದ ಪ್ರಯತ್ನ ಗಮನಾರ್ಹ. ಶ್ರೀ ವೀರಪ್ಪಮೊಯಿಲಿ ಸರಕಾರ ಚಿನ್ನಪ್ಪರೆಡ್ಡಿ ಆಯೋಗದ ವರದಿಯ ಅನುಷ್ಠಾನದ ಮೂಲಕ ತಂದ ರಾಜಕೀಯ ಮೀಸಲಾತಿ ಇಡೀ ರಾಷ್ಟ್ರದಲ್ಲೇ ಪ್ರಪ್ರಥಮವಾದುದು ಎನ್ನಬಹುದು. ಇದರಿಂದ ಹಿಂದುಳಿದವರ ರಾಜಕೀಯ ಏಳಿಗೆಗೆ ಸಹಾಯವಾಗಿದೆ. ಹಿಂದುಳಿದ ವರ್ಗಗಳ ಮಹಿಳೆಯರಿಗೂ ರಾಜಕೀಯ ಸ್ಥಾನಮಾನಗಳು ಲಭ್ಯವಾಗಿ, ಅವರಿಗೂ ಜನಪರ ಚಟುವಟಿಕೆಗಳನ್ನು ಕೈಗೊಳ್ಳಲು ಮುಕ್ತ ಅವಕಾಶ ದೊರಕಿದೆ. ನಾಯಕತ್ವ ಬೆಳೆಯಲು ಸೂಕ್ತ ಪರಿಸರ ಹಾಗೂ ಪ್ರೇರಣೆ ಲಭ್ಯವಾಗಿದೆ. ಈ ಆಯೋಗಗಳು

ಹಿಂದುಳಿದ ವರ್ಗಗಳಲ್ಲಿ ರಾಜಕೀಯ, ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ ಜಾಗೃತಿ ಮೂಡಿಸುವುದಕ್ಕೆ ಸಹಾಯಕವಾಗಿದೆ. ಆದರೆ ಈ ಎಲ್ಲಾ ಸವಲತ್ತುಗಳು ಸರಿಸಮವಾಗಿ ನಿಜವಾಗಿ ಹಿಂದುಳಿದಿರುವ ಜನರಿಗೆ ತಲುಪಿಲ್ಲ, ತಲುಪುತ್ತಿಲ್ಲ. ನಿರೀಕ್ಷಿತ ಮಟ್ಟದಲ್ಲಿ ಎದುರು ನೋಡಿದ್ದ ಪರಿಣಾಮ ಉಂಟಾಗಿಲ್ಲ. ಹಿಂದುಳಿದ ವರ್ಗಗಳಲ್ಲಿ ಸವಲತ್ತುಗಳನ್ನು ಪಡೆದು ಮೇಲೇರಿದವರು, ಕೆಳಮಟ್ಟದಲ್ಲಿ ಇರುವವರನ್ನು ಮರೆತಿದ್ದಾರೆ. ಅವಶ್ಯಕತೆಯಿಲ್ಲದಿದ್ದರೂ ಈ ಸವಲತ್ತುಗಳನ್ನು ಪಡೆಯುತ್ತಿದ್ದಾರೆ. ಇದರಿಂದ ಅವರ ವರ್ಗಗಳಲ್ಲಿ ನಿಜವಾಗಿ ಮೀಸಲಾತಿಗೆ ಅರ್ಹರಾಗಿರುವವರಿಗೆ ಯಾವ ಸೌಲಭ್ಯವೂ ಸಿಗದಾಗಿದೆ. ಈ ದಿಸೆಯಲ್ಲಿ ಆಯೋಗಗಳ ರಚನೆಯ ಉದ್ದೇಶ ಪೂರ್ತಿಯಾಗಿ ಈಡೇರಿಲ್ಲ ಮತ್ತು ಈ ದಿಕ್ಕಿನಲ್ಲಿ ಮಾಡಬೇಕಾದ ಕಾರ್ಯಗಳು ಬೆಟ್ಟದಷ್ಟಿದೆ ಎಂದರೆ ಅದು ತಪ್ಪಾಗಲಾರದು.

**ಉಪ್ಪಾರ ಸಮುದಾಯ**

ಕರ್ನಾಟಕದ ಹಿಂದುಳಿದ ವರ್ಗಗಳಲ್ಲಿ ಉಪ್ಪಾರರ ವರ್ಗವೂ ಒಂದು. ಉಪ್ಪಾರ ಸಮುದಾಯವನ್ನು ಚಿನ್ನಪ್ಪರೆಡ್ಡಿ ಆಯೋಗದಲ್ಲಿ 'ಪ್ರವರ್ಗ ಒಂದಕ್ಕೆ' ಸೇರಿಸಲಾಗಿದೆ. ಕರ್ನಾಟಕ ರಾಜ್ಯಾದ್ಯಂತ ಎಲ್ಲಾ ಪ್ರದೇಶಗಳಲ್ಲಿ ಉಪ್ಪಾರ ಜನಾಂಗ ಹರಡಿಕೊಂಡಿರುವುದನ್ನು ನೋಡಬಹುದು. ಉಪ್ಪು ತಯಾರಿಕೆ ಇವರ ಮೂಲ ಕಸಬಾಗಿದ್ದರಿಂದ ಇವರಿಗೆ ಉಪ್ಪಾರರು ಎಂಬ ಹೆಸರು ಉಂಟಾಯಿತು. ಕರ್ನಾಟಕದಲ್ಲಿ ಚೌಳು ಮಣ್ಣಿನ ಗುಡ್ಡೆಗಳಿದ್ದ ಸ್ಥಳಗಳಲ್ಲಿ ಹೆಚ್ಚಾಗಿ ಉಪ್ಪಾರರ ವಸತಿಗಳು ಕಾಣಬರುತ್ತವೆ. ಉಪ್ಪಿನಂಶ ತುಂಬಿದ್ದ ಸವಳು ಅಥವಾ ಚೌಳು ಮಣ್ಣನ್ನು ಬಳಸಿ ಅದರಿಂದ ಉಪ್ಪನ್ನು ತಯಾರಿಸುತ್ತಿದ್ದರು. ಇದು ಮಣ್ಣುಪ್ಪು. ಇದು ಐತಿಹಾಸಿಕವಾಗಿ ಸಾವಿರಾರು ವರ್ಷಗಳಿಂದ ಇವರ ಕಸಬಾಗಿದ್ದಿತು. ಆ ಕಾರಣ ಇವರನ್ನು ಉಪ್ಪಾರರು ಎಂಬುದಾಗಿ ಗುರುತಿಸಲಾಗುತ್ತಿದ್ದಿತು. ಚೌಳು ಮಣ್ಣಿನ ಮೂಲೆಗಳಲ್ಲಿ ಉಪ್ಪು ತಯಾರಿಕೆ ಕೆಲಸ ಮಾಡುತ್ತಿದ್ದ ಇವರು ತಮ್ಮನ್ನು ಮೇಲುಸಕ್ಕರೆಯವರು ಎಂಬುದಾಗಿ ಕರೆದುಕೊಳ್ಳುವುದೂ ಉಂಟು. ಉಪ್ಪನ್ನು ಹೆಸರಿಸಿ ಕರೆದರೆ ಅದರ ಗುಣ, ರುಚಿ ಹಾಳಾಗುತ್ತದೆ ಎಂಬ ಒಂದು ನಂಬಿಕೆಯಿಂದ ಉಪ್ಪನ್ನು ಇವರು ಮೇಲು ಸಕ್ಕರೆ ಎಂಬುದಾಗಿ ಕರೆಯುತ್ತಿದ್ದ ಕಾರಣ ಉಪ್ಪಾರರಿಗೆ ಮೇಲುಸಕ್ಕರೆಯವರು ಎಂಬ ಹೆಸರು ಉಂಟಾಯಿತು. ಉಬ್ಬರ ಕಾಲದಲ್ಲಿ ಸಮುದ್ರದ ನೀರಿನಲ್ಲಿರುವ ಉಪ್ಪನ್ನು ಬೇರ್ಪಡಿಸಿ ಉಪ್ಪು ತಯಾರಿಕೆಯ ಕಸಬನ್ನು ಮಾಡುತ್ತಿದ್ದವರಿಗೆ ಸಮುದ್ರದ ಉಪ್ಪಾರರು ಎಂಬ ಹೆಸರು ಇದ್ದಿತು. ಇದು ಸಮುದ್ರದ ಉಪ್ಪು ಅಥವಾ ಕಲ್ಲುಪ್ಪು. ಬ್ರಿಟಿಷರ ಆಳ್ವಿಕೆಯಲ್ಲಿ ಉಪ್ಪು-ತಯಾರಿಕೆಯನ್ನು ಸರ್ಕಾರದ ಏಕಸ್ವಾಮ್ಯಕ್ಕೆ ಒಳಪಡಿಸಿದಾಗ, ಅದನ್ನು ಮಹಾತ್ಮಗಾಂಧಿಯವರು ವಿರೋಧಿಸಿ ನಡೆಸಿದ ಉಪ್ಪು ಸತ್ಯಾಗ್ರಹ, ಕೈಗೊಂಡ ದಂಡಿಯಾತ್ರೆ ಇತಿಹಾಸ ಸುಪ್ರಸಿದ್ಧ ಘಟನೆ. ಈ ಕಾರಣದಿಂದ ಉಪ್ಪಾರರು ತಮ್ಮ

ಪರಂಪರಾಗತ ವೃತ್ತಿಯನ್ನು ಅನಿವಾರ್ಯವಾಗಿ ಬಿಟ್ಟು ಬೇರೆ ಬೇರೆ ಕಸಬುಗಳನ್ನು ಆರಿಸಿಕೊಳ್ಳಬೇಕಾಯಿತು. ಹೀಗೆ ಅವರಿಗೆ ಕಸಬಾಧಾರಿತವಾದ ಹೊಸ ಹೊಸ ಹೆಸರುಗಳು ಉಂಟಾದುವು. ಉದಾಹರಣೆಗೆ ಸುಣ್ಣಉಪ್ಪಾರರು, ಕಲ್ಲುಕುಟಿಗ ಉಪ್ಪಾರರು, ಗಾರೆ ಉಪ್ಪಾರರು, ಮೇಲುಸಕ್ಕರೆ ಉಪ್ಪಾರರು ಇತ್ಯಾದಿ.

ಕರ್ನಾಟಕ ರಾಜ್ಯದ ಎರಡನೆಯ ಹಿಂದುಳಿದ ವರ್ಗಗಳ ಆಯೋಗದ ಪ್ರಕಾರ, ಈ ರಾಜ್ಯದಲ್ಲಿ ಇವರ ಜನಸಂಖ್ಯೆಯು 4.72,968 ಎಂಬುದಾಗಿ ಅಂದಾಜು ಮಾಡಲಾಗಿದ್ದಿತು. ಇತ್ತೀಚೆಗೆ ರಾಜಋಷಿ ಭಗೀರಥ ಟ್ರಸ್ಟ್ ವತಿಯಿಂದ ರಾಜ್ಯದ 25 ಜಿಲ್ಲೆಗಳಲ್ಲಿರುವ ಕೈಗೊಳ್ಳಲಾಗಿರುವ ಉಪ್ಪಾರರ ಸಮೀಕ್ಷೆಯಿಂದ ಇವರ ಜನಸಂಖ್ಯೆ ಸುಮಾರು 17,52,688. ಪ್ರಸ್ತುತ ಅವರ ಜನಸಂಖ್ಯೆ 25 ಲಕ್ಷ ದಾಟಿದೆ ಎಂಬುದಾಗಿ ಈ ಹಿಂದೆ ಹೊರಬಂದ ಭಗೀರಥ ಸಂಕಲ್ಪ ಸ್ಮರಣೆ ಸಂಚಿಕೆ ಹೇಳುತ್ತದೆ. ಅಂದರೆ ಇನ್ನೂ ಗ್ರಾಮೀಣ ಪ್ರದೇಶಗಳಲ್ಲಿ ವ್ಯಾಪಕ ಸರ್ವೇ ಕಾರ್ಯ ನಡೆಯಬೇಕಾಗಿದೆ.

ಉಪ್ಪಲಿಗ, ಉಪವೀರ, ಉಪ್ಪಾರಸೆಟ್ಟರು, ಉಪ್ಪಲಿಗಶೆಟ್ಟಿ, ಸಗರ ವಂಶಸ್ಥರು, ಸಗರ ವಂಶದವರು, ಭಗೀರಥ ವಂಶಜರು, ಉಪ್ಪಲಿಗಕಿಟ್ಟ, ಮೇಲುಸಕ್ಕರೆ, ಮೇಲುಸಕ್ಕರೆ ಶೆಟ್ಟಿ, ಗದಾರ, ಜೋಕೂರ, ಸಾಗರ, ಮಾಸವಟ್ಟಿ, ನೇಗಿ ಸಗರ ಉಪ್ಪಾರ, ಉಪ್ಪಲಿಗಸೆಟ್ಟಿ, ಮೇಟಿ, ಸುರಪುರು, ಲಾತೂರ, ಚೂರಿ, ಮಂತ್ರಿ, ಗಿಂಡೆ, ರಾಣಗಟ್ಟಿ, ಭೂಪಾಳಿ, ಚಾಂಡಗೆ, ಭಂಡಾರಕರ್, ಬಂಡಿ, ಮಸಾಳೆ, ನರಲಿ, ಗುಗ್ಗರಿ, ಖೋತ, ಕಿಲಾರಿ, ಲೋಣಾರಿ, ಮೋಪಗಾರ, ಮರತ್ಯಾಳ, ಗೋಗಿ, ಯಾಡವಿ, ಚಿಮ್ಮಲಗಿ, ಕರಂಡಿ, ಮದಭಾವಿ, ದಳವಿ, ಕಟ್ಟೀಮನಿ, ಮಸರಕಲ್, ಸಾಂಗ್ಲೀಕರ್, ಮದಿಹಳ್ಳಿ, ಶಿರಕೋಳ್, ಬಡಕಲಿ, ತೋರಗಲ್, ಮುಂಡರಗಿ, ರಾಣೆಬೆನ್ನೂರು, ಬಣಕಾರ, ಕಲ್‌ಕುಟರ್, ಆಗೇರಾ, ಖಾರ್ವಿ, ಉಪ್ಪಾರ್, ಉಪ್ಪರಿಗೆ ಕಿಟ್ಟ, ಉಪ್ಪಾರ, ಉಪ್ಪಾರಗೌಡ, ಕೊರೆಬಂಡೆ ಉಪ್ಪಾರ, ಹುರುಳಿ ಉಪ್ಪಾರ, ಬಲಿಜಗಉಪ್ಪಾರ ಮುಂತಾದ ಉಪನಾಮಗಳಿಂದ ಉಪ್ಪಾರರನ್ನು ಸಂಬೋಧಿಸಲಾಗುತ್ತಿದೆ.

### ಪೌರಾಣಿಕ ಹಾಗೂ ಐತಿಹಾಸಿಕ ಹಿನ್ನೆಲೆ

ಮೂಲತಃ ಉಪ್ಪಾರರು ಕ್ಷತ್ರಿಯ ಕುಲದವರು, ಬಾದಾಮಿ ಚಾಲುಕ್ಯರು ಮೂಲತಃ ಉಪ್ಪಾರರೇ ಆಗಿರಬೇಕು. ಕಾರಣ ಚಾಲುಕ್ಯ ಚಕ್ರವರ್ತಿ ಮಂಗಳೇಶ ಸ್ವತಃ ದೇವಾಲಯ ನಿರ್ಮಾಣ ಕಾರ್ಯದಲ್ಲಿ ಪ್ರವೀಣನಾಗಿದ್ದನು. ಬಪೆರ್ಟ್ ಭಾರತದ ಮೂಲನಿವಾಸಿಗಳು ಎಂಬ ತನ್ನ ಪುಸ್ತಕದಲ್ಲಿ ವರಾಹ ಉಪ್ಪಾರ ಲಾಂಛನ ಎಂದು ಹೇಳಿದ್ದಾನೆ. 'ವರಾಹ' ಬಾದಾಮಿ ಚಾಲುಕ್ಯರ ಲಾಂಛನವೂ ಆಗಿದ್ದಿತು ಎಂಬುದು ಗಮನಿಸಬೇಕಾದ ವಿಷಯ. ಬೆಂಗಳೂರಿನ ಸುಗ್ರೀವ ವೆಂಕಟರಮಣ ದೇವಸ್ಥಾನದಲ್ಲಿ ಇರುವ 1830ರ ಶಾಸನದಲ್ಲಿ ಈ ದೇವರು ಮೇಲುಸಕ್ಕರೆ ವಂಶದ ಕ್ಷತ್ರಿಯರ ಕುಲದೇವರೆಂದು ವಿವರಿಸಿ ಪ್ರತಿ ಮನೆಯವರು ಈ ದೇಗುಲಕ್ಕೆ ಕೊಡಬೇಕಾದ

ವಾರ್ಷಿಕ ಕಾಣಿಕೆಗಳ ವಿವರಗಳನ್ನು ನೀಡಲಾಗಿದೆ. ದೇವಸ್ಥಾನಕ್ಕೆ ಕಾಣಿಕೆ ಕೊಡಲು ಅಂಗೀಕರಿಸಿದ್ದ 39 ಬೆಡಗಿನ 180 ವ್ಯಕ್ತಿಗಳ ಹೆಸರುಗಳನ್ನು ಉಲ್ಲೇಖಿಸಲಾಗಿದೆ.

ಇವರು ಸಗರ ವಂಶದವರು, ಕಪಿಲ ಮಹರ್ಷಿಯ ಶಾಪದಿಂದ ಭಸ್ಮವಾಗಿ ಹೋಗಿದ್ದ ಸಗರ ಚಕ್ರವರ್ತಿಯ 60,000 ಮಕ್ಕಳು. ಭಗೀರಥನು ತನ್ನ ಬಹು ಸ್ತುತ್ಯರ್ಹವಾದ ಪ್ರಯತ್ನದಿಂದ ದೇವಲೋಕದಿಂದ ಪವಿತ್ರ ಗಂಗೆಯನ್ನು ಹರಿಯುವಂತೆ ಮಾಡಿ ಆ ಪುಣ್ಯ ಜಲವನ್ನು ಅವರ ಮೇಲೆ ಹರಿಸಿದಾಗ ಅವರಿಗೆಲ್ಲಾ ಮುಕ್ತಿ ದೊರೆಯಿತು. ಆ ವಂಶದವರೇ ಉಪ್ಪಾರರು ಎಂದೂ ವಿವರಿಸಲಾಗಿದೆ. ಭಗೀರಥ ದೇವಗಂಗೆಯನ್ನು ತನ್ನ ಅದ್ಭುತ ತಪಶ್ಶಕ್ತಿಯಿಂದ ಭೂಲೋಕ ಮುಖ್ಯವಾಗಿ ಭಾರತದಲ್ಲಿ ಹಾಗೂ ಪಾತಾಳಲೋಕದಲ್ಲಿ ಹರಿಯುವಂತೆ ಮಾಡಿದ. ಹೀಗೆ ಜೀವಕೋಟಿಗಳಿಗೆ ಪವಿತ್ರ ಜೀವಜಲವನ್ನು ಒದಗಿಸಿದ ಭಗೀರಥನ ವಂಶಸ್ಥರು ಎಂಬುದಾಗಿ ಸಹ ವರ್ಣಿಸಲಾಗುತ್ತದೆ.

ಉಪ್ಪಾರ ಚರಿತಾಮೃತದಲ್ಲಿ ಉಪವೀರ ಎಂಬ ಶಬ್ದಕ್ಕೆ ವೇದಾಂತದ ಹಿನ್ನೆಲೆಯಲ್ಲಿ ಕರಣವಿಜಯ ಸಾಧಿಸಿದವ, ಜೀವನ್ಮುಕ್ತ ಎಂಬ ಅರ್ಥಗಳನ್ನು ನೀಡಲಾಗಿದೆ. ಆ ಗ್ರಂಥದಲ್ಲಿ ಹೇಳಲಾದ ವಿಚಾರಗಳು ಹೀಗಿವೆ : ಉಪವೀರರ ನಡೆ, ನುಡಿಯು ಸತ್ಯ ಸ್ವರೂಪರಿಂದ ಒಂದೇ ರೀತಿ ಇರುತ್ತದೆ. ಬುದ್ಧಿಯು ಪರಿಶುದ್ಧವಾಗಿಯೂ ಗಮನವು ಸನ್ಮಾರ್ಗದ ಕಡೆಗೂ ಇರುತ್ತದೆ. ಇವರಿಗೆ ದುಃಖಿಗಳನ್ನು ರಕ್ಷಿಸುವುದರಲ್ಲಿ ಆಸಕ್ತಿ ಇರುತ್ತದೆ. ಅವರು ಶೌರ್ಯ, ಸಾಹಸ, ಪರೋಪಕಾರ, ಆತ್ಮೀಯತೆ ಮುಂತಾದ ಶ್ರೇಷ್ಠ ಗುಣಗಳನ್ನು ಹೊಂದಿರುತ್ತಾರೆ. ಸಗರ ಕುಲಸ್ಥರಾಗಿದ್ದ ಉಪವೀರರು ಪುರಾಣ ಕಾಲದಲ್ಲಿ ಕಾಶ್ಮೀರದ ಆಳುವ ಪ್ರಭುಗಳಾಗಿದ್ದರು.

ತಮಿಳುನಾಡಿನಲ್ಲಿ ಇವರಿಗೆ ಉಪ್ಪಾರಕಾರನ್, ಉಪ್ಪರವನ್ ಹಾಗೂ ಉಪ್ಪಲಿಯನ್ ಮತ್ತು ಆಂಧ್ರಪ್ರದೇಶದಲ್ಲಿ ಉಪ್ಪರ ಎಂದು ಕರೆಯುತ್ತಾರೆ. ಪ್ರಾಚೀನ ಶಾಸನ ಹಾಗೂ ಗ್ರಂಥಗಳಲ್ಲಿ ಕಂಡುಬರುವ ಉಪಲಿಕ, ಉಪ್ಪಲಿಗ, ಉಪ್ಪಲಿಕ, ಉಪ್ಪಲೀಕ, ಉಪ್ಪಿಲಿಕ, ಉಪ್ಪಿಗ, ಉಪ್ಪಾಲಿ, ಲವಣಕಾರ, ಕ್ಷಾರಕಾರ ಮತ್ತು ಉಪ್ಪು ತಯಾರಿಸುತ್ತಿದ್ದ ಉಪ್ಪಲಿಗರು ಎಂದು ಹೇಳಲಾಗಿದೆ. ಗಂಗರ ಶಾಸನದಲ್ಲಿ ಉಲ್ಲೇಖದ ಪ್ರಕಾರ ಚಿಕ್ಕಮಗಳೂರಿನ ಬಳಿಯ 'ಉಪ್ಪಳ್ಳಿ' (ಉಪ್ಪವಳಿ ಎಂಬ ಊರು) ಉತ್ಪಾದನೆಯ ಮುಖ್ಯ ಕೇಂದ್ರವಾಗಿತ್ತು. ಕನ್ನಡ ಕರಾವಳಿಯಲ್ಲಿ ಉಪ್ಪಿನ ಉತ್ಪಾದನೆ ಹಾಗೂ ವ್ಯವಹಾರ ನಡೆಯುತ್ತಿದ್ದಿತು ಎಂಬುದಕ್ಕೆ ಸಾಕ್ಷಿಯಂತಿರುವ ಉಪ್ಪಳ, ಉಪ್ಪರು, ಉಪ್ಪೋಣಿ, ಉಪ್ಪಿನಕುದುರು, ಉಪ್ಪಿನಂಗಡಿ, ಉಪ್ಪಿನ ಪಂಗಡ ಮುಂತಾದ ಹೆಸರುಗಳು ಉಪ್ಪು ತಯಾರಿಕೆ ಇವರಿಗೆ ವಂಶಪಾರಂಪರ್ಯವಾದ ವೃತ್ತಿಯಾಗಿತ್ತು. ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಪೌರಾಣಿಕ ಕಥೆಯ ಪ್ರಕಾರ ಒಂದು ಸಲ ಪಾರ್ವತಿ ದೇವಿಯು ಶಿವನೊಡನೆ ತಾನು ಸೇವಿಸುವ ಆಹಾರದಲ್ಲಿ ರುಚಿಯೇ ಇಲ್ಲ ಎಂದು ಹೇಳಿದಾಗ, ಪರಶಿವನು ತನ್ನ ಬೆವರಿನಿಂದ

ಒಬ್ಬ ಮನುಷ್ಯನನ್ನು ಸೃಷ್ಟಿಸಿ ಅವನಿಗೆ ಆಹಾರಕ್ಕೆ ರುಚಿಯನ್ನು ನೀಡುವಂತಹ ಒಂದು ಲವಣವನ್ನು ಸಿದ್ಧಪಡಿಸುವಂತೆ ಆದೇಶಿಸಿದನು. ಅದರಂತೆ ಆ ಮನುಷ್ಯನು ಭೂತಾಯಿಯ ಮಡಿಲಿನಿಂದ ಉಪ್ಪನ್ನು ತಯಾರಿಸಿ ಅದರಿಂದ ಆಹಾರಕ್ಕೆ ಅಮಿತವಾದ ರುಚಿಯನ್ನು ಒದಗಿಸಿದನು. ಇದರಿಂದ ಸುಪ್ರೀತನಾದ ಪಾರ್ವತಿವಲ್ಲಭನು ಆ ಮನುಷ್ಯನ ವಂಶಕ್ಕೆ ಸೇರಿದವರಿಗೆ ಉಪ್ಪನ್ನು ತಯಾರಿಸುವ ಕಾಯಕವನ್ನು ನೀಡಿ ಮನುಜಕುಲಕ್ಕೆ ನೆರವಾಗುವಂತೆ ಮಾಡಿದನು. ಅಂದಿನಿಂದ ಉಪ್ಪನ್ನು ತಯಾರಿಸುವ ಕುಲದವರನ್ನು ಉಪ್ಪಾರರೆಂಬುದಾಗಿ ಹೆಸರಿಸಿ ಗುರುತಿಸಲಾಯಿತು. ಈ ಪೌರಾಣಿಕ ವಿವರಣೆ ಏನೇ ಇದ್ದರೂ ಉಪ್ಪಾರರು ಉಪ್ಪಿನಂಶವಿದ್ದ ಸವಳು ಅಥವಾ ಚೌಳುಮಣ್ಣಿನಿಂದ ಉಬ್ಬರ ಕಾಲದಲ್ಲಿ ಸಮುದ್ರದ ನೀರಿನಿಂದ ಮತ್ತು ಒಳನಾಡಿನಲ್ಲಿ ಗಣಿಯಿಂದ ಉಪ್ಪನ್ನು ತೆಗೆದು ಉತ್ಪಾದಿಸುತ್ತಿದ್ದರು, ಜೊತೆಗೆ ಸೋರುಪ್ಪು (ಪೆಟ್ಲುಪ್ಪು) ಕೂಡ ತಯಾರಿಸುತ್ತಿದ್ದರು. ಅದನ್ನು ಸಿಡಿಮದ್ದಿನ ಉತ್ಪಾದನೆಗಾಗಿ ಬಳಸಲಾಗುತ್ತಿದ್ದಿತು ಎಂಬುದಕ್ಕೆ ಆಧಾರಗಳಿವೆ.

**ಸಾಮಾಜಿಕ ಪದ್ಧತಿ**

ಉಪ್ಪಾರ ಸಮಾಜದಲ್ಲೂ ಅವಿಭಕ್ತ ಕುಟುಂಬ ಹಾಗೂ ವಿಭಕ್ತ ಕುಟುಂಬಗಳ ಬಗೆಗಳಿವೆ. ಹಿಂದೆ ಅವಿಭಕ್ತ ಕುಟುಂಬಗಳು ಪ್ರಮುಖವಾಗಿದ್ದುವು. ಇತ್ತೀಚೆಗೆ ಜನಸಂಖ್ಯಾ ಬಾಹುಳ್ಯ, ಉದ್ಯೋಗ, ಇನ್ನಿತರ ಆರ್ಥಿಕ-ವೈವಾಹಿಕ ಕಾರಣಗಳಿಂದಾಗಿ ಅವಿಭಕ್ತ ಕುಟುಂಬ ಸದಸ್ಯರು ಬೇರೆ ಸ್ಥಳಗಳಿಗೆ ಹೋಗಬೇಕಾದ ಒತ್ತಡ ಇರುವುದರಿಂದ ವಿಭಕ್ತ ಕುಟುಂಬಗಳು ಹೆಚ್ಚಾಗುತ್ತಿವೆ. ಆದರೂ ಇಂದೂ ಸಹ 15 ರಿಂದ 20 ಮಂದಿ ಸದಸ್ಯರಿಂದ ಕೂಡಿರುವ ಅವಿಭಕ್ತ ಕುಟುಂಬಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಕಾಣಬಹುದು.

ಅನ್ಯವಂಶದ ಗೋತ್ರಗಳನ್ನು ಕುಲ ಅಥವಾ ಬೆಡಗುಗಳೆನ್ನುತ್ತಾರೆ. ಒಂದೇ ಬೆಡಗಿನವರೊಂದಿಗೆ ಪರಸ್ಪರ ವಿವಾಹ ಜರುಗುವುದಿಲ್ಲ. ಒಂದು ವೇಳೆ ಹಾಗೇನಾದರೂ ಸಂಪರ್ಕವೆಸಗಿದರೆ, ಮಾತೃ-ಸೊಸೆಯೊಂದಿಗೆ ನಡೆಸಿದ ಸಂಭೋಗವೆಂದು ತೀರ್ಮಾನಿಸಿ, ಜಾತಿಯಿಂದ ಬಹಿಷ್ಕರಿಸುವರು. ಬೆಡಗುಗಳ ಹೆಸರುಗಳು ಸಾಮಾನ್ಯವಾಗಿ ಸಸ್ಯ, ಪ್ರಾಣಿ ಅಥವಾ ವಸ್ತುಗಳು ವಿವಿಧ ವಂಶಾವಳಿಯ ಗೋತ್ರಗಳ ಬೆಡಗುಗಳನ್ನು ಗಂಡು ಸಂಬಂಧಕ್ಕೆ ಅನುಗುಣವಾಗಿ ರಚಿತವಾಗಿವೆ. ಉಪ್ಪಾರರಲ್ಲಿ ಅಡವೆ, ಅರಗಿ, ಅಡಕೆ, ಅಟ್‌ಪಡೆ, ಅಮ್ಮಸ, ಅಗಿಲು, ಅಂದಳ, ಅರಸಿನ, ಅರಸು, ಆಕಳೆ, ಆಲೆ, ಆನೆ, ಉಗ್ನೆ, ಉಡುವೆ, ಉಪ್ಪಿನೋರು, ಎಮ್ಮೆ, ಎತ್ತು, ಎಣ್ಣೆ, ಏಳುಮೂಳೆ, ಒಳಕಲು, ಓಲೆನ, ಕಗಲ, ಕಸ್ತೂರಿ, ಕಗ್ಗಲ್ಲು, ಕಲಗ, ಕರಗ, ಕಠಾರಿ, ಕಲ್‌ಬುರ್ಗೆ, ಕರೆನಾಲಿಗೆ, ಕರಂಡಿ, ಕಳಸ, ಕಲ್ಲುಮುಡಿ, ಕರಬಾನ, ಕಗ್ಗದ, ಕಡಗರ, ಕರಾಡೆ, ಕತ್ತೆ, ಕರಡೆ, ಕುದುರೆ, ಕುಮಚೆ, ಕುಕ್ಕಲಿ, ಕುಳ್ಳೆ, ಕುಟಾರೆ, ಕಿಲ್ಲೆದ, ಕಿಕರೆ, ಕಿಲಾರೆ, ಕೆಂಡ, ಕೊತ್ತಂಬರಿ, ಕೊಸರಿನ, ಕೊಡ್ಲೆ, ಕೊಂಡ್ಲಿ, ಕೊಪ್ಲ, ಕೋರಾವರ್ಕ್, ಕೋಟೆಲೂರು, ಕೊಳಗದ, ಕೋಣ, ಕಾಲೆದ, ಕಾನೆಯ, ಕುಮಚೆ, ಕ್ಯಾದಿಗೆ, ಕಾರ್ವೆ, ಕಾಂಡೇಕರ್,

ಕನ್ನಾನ, ಕಾಶ್ಯಪ, ಕಾಮಲೆ, ಕಾಲ್ಸ, ಕಠಾರಿತಾವರೆ, ಗರುಡಸ್ಥಂಭ, ಗಂಗಾ, ಗರಿಸಿ, ಗೋಸಿಕೆರೆ, ಗಾದಿಲೋರು, ಗಂಗನಮಲೆ, ಗಡಿಗೆ, ಗಂತ್ಲನ, ಗಂಟೆ, ಗನಗಪ್ರಾಯ, ಗರ್ಲೇರು, ಗಂಟೆಲ, ಗದ್ದಿಗೆ, ಗಸ್ಸ್ಲಿ, ಗುಡತಿ, ಗುಂತುಕಲ್ಲಿ, ಗುಗರೆ, ಗಾಡ್‌ವಾಟಿ, ಗೌಡ, ಗೌಡಲ, ಗಿತ್ತೆ, ಗಿಲ್ಲರ, ಗೋಣೆ, ಗೋಡ್‌ಸೇ, ಗೋಡಸ್‌ವರ್ಕ್, ಗೊಂಡಿ, ಗೂಡ್ಸ, ಗರೆಸ, ಗೊಲ್ಲ, ಗೋಡೆ, ಚಂದ್ರ, ಚಪ್ಪರ ತಾವರೆ, ಚ್ಯಾಮಿಡಿ, ಚ್ಯಾವಡಿ, ಚಾಪೆ, ಚಾರೆಕರ್, ಚೌರೆ, ಚಲ್ಮೇರ, ಚಿಲುಮ, ಚೀಳಿನ, ಚೆಂಡುಹೂವು, ಛತ್ರಿ, ಜಗತಾಪ್ ಜಾನಕಲ್ಲು, ಜೋಗುಳ, ಜೋಗಿ ತಾವರೆ, ಟೊಣ್ಣೆಣ್ಣ, ಡನ್ನಾನ, ಡುಕರೆ, ತೋಳನ, ತಲಗ, ತುಪ್ಪ, ತುಂಬ್ಲೋರು, ತಾಳೆದ, ತುಂಗಲ, ತಾಗಡೇ, ತುರುಬೆಬೇನ್ನ, ತಂಬಾಕೆ, ತುಮಾರೆ, ತೇಜಿ, ದಡಗಲೋರು, ದುರ್ಗದ, ದೊಡ್ಡಮೀಸೆ, ದ್ಯಾಪನ, ದೊಡ್ಡಿ, ದೊಳೆಯ, ದಿದ್ದೆಲ, ದತ್‌ಕಾಳೆ, ದಬ್ಬಳಶಾಲೆ, ದಳವಾಯಿ, ನರಿ, ನಾರ್ನೆ, ನಾಗ, ನಾಗರ, ನೇರಳೆ, ನಾಚಲ, ನಕ್ಕಲು, ನೀತಲ, ನಿಳುವೆ, ನಠಳೆ, ನೂಲ್ಕೆ, ಪವಾರ್, ಪಾಂಡರೇ, ಪಾಂಡೆ, ಪಲ್ಲಗಿರಿ, ಬಗರೆ, ಬವನಾಶಿ, ಬಾಂಬ್ರೇಕರ್, ಬಾಜಬಳ್ಕರ್, ಬೀಗ, ಬಿಡಿಯಾ, ಬೇಲದ, ಬಾಳೆಲ, ಬಳ್ಳಾರಿ, ಬ್ಯಾಡಗಿ, ಬಟ್ಲದ, ಬಲದ್ದಲ, ಬ್ರಹ್ಮದಂಡೆ, ಬೆಣ್ಣೆ, ಬಳಿಯ, ಬಾಲೆನ, ಬೀಸಕಲ್ಲ, ಬಳ್ಳಾರಿತಾವರೆ, ಬುದ್ದಲ, ಭಂಡಾರೆ, ಭಾಮಿಡಿ, ಭೂದಾಳ, ಭಂಡಿ, ಮಜ್ಜನ, ಮಾವದೆ, ಮುತ್ತುಮುಚ್ಚಳ, ಮಹಾದೆಸೆ, ಮತ್ಸಗಾಂಧಿ, ಮಾಳಸೆಟ್ಟಿ, ಮೇಳದಾಸೆ, ಮಾಸಳೇನ, ಮೀಸಾಳೇನ, ಮುಂಜೆ, ಮಸುಕ, ಮಲ್ಲೂರು, ಮದರಸ, ಮಲ್ಲಿಗೆ, ಯಲಪ, ಯಕರೆಯಾಸದ, ಯಸಗಿ, ರತ್ನ, ರಾಜಣ, ರಾಣಗಂಟೆ, ರಂಗಡೇ, ಲಾನಿಯಾ, ಲಾಮ್ಯನ, ಲಾಭದ, ಪಟ್ಲಲ, ವಾಳ್ವೇಕರ್, ವಾಳ್ಗುಂಡ, ವಾಲೆನ್ನ, ಸಕ್ಕರೆ, ಸಣ್ಣಕ್ಕಿ, ಸಣ್ಣತಟ್ಟೆ, ಸಂಪತ್ತು, ಸರ್ವೆ, ಸಸಣ್ಣ, ಸರಗಳ್ಳಿ, ಸಂಪಿಗೆ, ಸಗರ, ಸರಗಂಟೆ, ಸಣ್ಣಬುದ್ಧಿ, ಸಂಘಲ, ಸಬ್ಬರದ, ಸಮಾಸೆ, ಸಾಂಗೂಲ್ಕರ್, ಸುರ್ವೇಸ, ಸರಡೇ, ಸಾರೆ, ಸಿಮ್ಮಾ, ಸಾವಂತಿಗೆ, ಸೋಮೆಲ, ಸಲ್ಲಿಕೆ, ಸೀರಣಗೆ, ಸಾಕೆಲ, ಸುಂಕದವರು, ಸೆಟ್ಟಿ, ಸಾಲಂಕೆ, ಸೇಜಿ, ಶೀಲವಂತರು, ಶೆಳ್ಕೇಕರ್, ಹರಿವಾಣ, ಹಾಲೆದ, ಹುಳಿಸೊಪ್ಪು, ಹಾವಿನ, ಹೊನ್ನೆಲ್ಲ, ಹಾಸಾದಿ, ಹಿವರೇ, ಹಳವೆ, ಹೋಳ್ಕರ್, ಹಾಲು, ಹೊತಿ, ಹೊಂಗೆ, ಹೊನ್ನು, ಹುಲಿವಾನ, ಹೊನ್ನಗೊಂಗೆ, ಶಿಂಗ್ರಿ, ನ್ಯಾಥೋಟ್ಟ, ಭಾಮಿಡಿ, ಬೆಳ್ಳಿ, ಜೋಗುಳ, ಮಜ್ಜಿನ, ಗುಜ್ಜಲವರ, ಬೆಣ್ಣೆಲ್ಲವರ, ಕರಡಲ್ಲವರ, ಶೆಟ್ಟಲ್ಲವರ, ಮಹಾದಕ್ಷರ್, ಪಲ್ಲಕ್ಕೀರು, ಸಣ್ಣಕ್ಕೀರು, ಸಾಗರ್, ಸಕ್ಕರೆಹಾಲು, ಬೆಲ್ಲದೋರು, ಬೂದಿಹಾಳ ಇತ್ಯಾದಿ ಬೆಡಗುಗಳಿವೆ.

ಉಪ್ಪಾರ ಸಮಾಜದಲ್ಲಿ ಹುಟ್ಟು, ವಿವಾಹ, ಮರಣ ಮುಂತಾದ ಸಹಜ ಸಂದರ್ಭಗಳಲ್ಲಿ ಧಾರ್ಮಿಕಾಚರಣೆಗಳನ್ನು ನಡೆಸುವುದು ಸಾಮಾನ್ಯವಾಗಿದೆ. ಈ ಆಚರಣಗಳಲ್ಲಿ ಬೇರೆ ಬೇರೆ ಜಿಲ್ಲೆಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿರಬಹುದು.

ಮಗುವಿನ ಜನನಕ್ಕೆ ಮೊದಲು ಗರ್ಭಿಣಿಗೆ ಮೂರನೆಯ ತಿಂಗಳಲ್ಲಿ ಗಂಡನ ಮನೆ

ಹಾಗೂ ತವರುಮನೆಯವರು ಬಯಕೆ ಊಟವನ್ನು ಅಂದರೆ ವಿವಿಧ ಬಗೆಯ ಖಾದ್ಯಗಳನ್ನು ನೀಡುತ್ತಾರೆ. ಹಾಗೂ ಮಲ್ಲಿಗೆ ಹೂದಂಡೆಗಳನ್ನು ಅವಳಿಗೆ ಕೊಡಲಾಗುತ್ತದೆ. ಐದನೆಯ ಅಥವಾ ಏಳನೆಯ ತಿಂಗಳಲ್ಲಿ ಕುಬುಸ ಅಥವಾ ಕುಪ್ಪಸ ಶಾಸ್ತ್ರ ಮಾಡುತ್ತಾರೆ. ಆಗ ಗರ್ಭಿಣಿಗೆ ಹಸಿರು ಸೀರೆ, ಕುಬುಸ, ಬಳೆಗಳನ್ನು ಉಡುಗೊರೆಯಾಗಿ ನೀಡಿ ಸಾಧ್ಯವಾದರೆ ಚಿನ್ನಾಭರಣಗಳನ್ನು ಮಾಡಿಸಿ ಕೊಟ್ಟು ಆರತಿ ಮಾಡುತ್ತಾರೆ. ಅನಂತರ ಇದೇ ಸೀಮಂತ ಕಾರ್ಯಕ್ರಮವನ್ನು ಅವಳ ಪತಿಯ ಮನೆಯವರು ನಡೆಸಿ, ಅವಳನ್ನು ಬಾಣಂತನಕ್ಕಾಗಿ ಅವಳ ತವರುಮನೆಗೆ ಕಳುಹಿಸುತ್ತಾರೆ. ಇದನ್ನು ಮೈಸೂರು ಜಿಲ್ಲೆಯಲ್ಲಿ ಹೊಸ ಹೊಸಗೆ ಎಂದು ಕರೆಯುತ್ತಾರೆ.

ಮಗುವಿನ ಜನನವಾದ ಮೇಲೆ ಮೂರು ಅಥವಾ ಐದು ಅಥವಾ ಹನ್ನೊಂದು ದಿನಗಳವರೆಗೆ ಮೈಲಿಗೆಯನ್ನಾಗಿ ಎಣಿಸಿ ಶುಭ ಕಾರ್ಯಗಳನ್ನು ಮಾಡುವುದಿಲ್ಲ. ಬಾಣಂತಿಗೆ ನಿಯಮ ಬದ್ಧವಾದ ಆಹಾರವನ್ನು ನೀಡಲಾಗುತ್ತದೆ. ಮನೆಯನ್ನು ಶುದ್ಧಿ ಮಾಡಲಾಗುತ್ತದೆ. ಇದಕ್ಕೆ 'ಐದಿಸೆ' ಎನ್ನಲಾಗುತ್ತದೆ. ಮಗುವು ಹುಟ್ಟಿದ 11 ಅಥವಾ 12ನೆಯ ದಿನ ನಾಮಕರಣ ಮಾಡಲಾಗುತ್ತದೆ. ತೊಟ್ಟಲಿಗೆ ಹಾಕುವ ಕಾರ್ಯಕ್ರಮವಿರುತ್ತದೆ. ಹೆಣ್ಣು ಮಗುವಿನ ಜನನವಾದರೆ ಬಿದಿರಿನ ತಟ್ಟೆಯನ್ನು, ಗಂಡು ಮಗು ಹುಟ್ಟಿದರೆ ಜಾಗಟೆ ಅಥವಾ ಗಂಗಾಳ ಬಾರಿಸಿ ಬಾಂಧವರಿಗೆ ವಿಷಯವನ್ನು ತಿಳಿಸಲಾಗುತ್ತದೆ. ಸಾಧಾರಣವಾಗಿ ಮನೆ ಅಥವಾ ಗ್ರಾಮ ದೇವರು ಅಥವಾ ಹಿರಿಯರ ಹೆಸರುಗಳನ್ನು ಮಗುವಿಗೆ ಇಡಲಾಗುತ್ತದೆ. ಮೊದಲನೆಯ ಮಗು ಗಂಡಾದರೆ ರಂಗನಾಥ, ಹೆಣ್ಣಾದರೆ ಲಕ್ಷ್ಮಿ ಎಂಬ ಹೆಸರನ್ನಿಡುವುದು ಸಾಮಾನ್ಯ ವಾಡಿಕೆ. ಸೋದರತ್ತೆ/ ಸೋದರಮಾವ ಮಗುವಿನ ಹೆಸರನ್ನು ಐದು ಸಲ ಹೇಳುವರು. ಕೆಲವು ಕಡೆ ಅವರು ಮಗುವಿನ ಬಲಗಿವಿಯಲ್ಲಿ ಆ ಹೆಸರನ್ನು ಐದು ಬಾರಿ ಉಚ್ಚರಿಸುವರು.

ದೇವರ ಹರಕೆ ಇದ್ದರೆ ಮಗು ಹೆಣ್ಣಾಗಲಿ, ಗಂಡಾಗಲಿ, ಕಿವಿ ಚುಚ್ಚಿಸಿ, ಕೂದಲು ತೆಗೆಸುವ ಪದ್ಧತಿ ಇದೆ. ಗಂಡು ಮಗುವಿಗೆ ಚೌಲವನ್ನು ಅದರ ಐದು ಅಥವಾ ಹನ್ನೊಂದನೆಯ ತಿಂಗಳು ಅಥವಾ ಮೂರನೆಯ ವರ್ಷದಲ್ಲಿ ಆಚರಿಸಲಾಗುತ್ತದೆ. ಇದನ್ನು ಮುಡಿ ತೆಗೆಸುವುದು/ ಕೊಡುವುದು ಎಂದೂ ಕರೆಯಲಾಗುತ್ತದೆ.

ಹೆಣ್ಣು ಪುಷ್ಪವತಿಯಾದಾಗ ಹಿಂದೆ 15 ದಿನಗಳವರೆಗೆ ದೊಡ್ಡ ಕಾರ್ಯಕ್ರಮವನ್ನು ಅದ್ದೂರಿಯಾಗಿ ನಡೆಸಲಾಗುತ್ತಿದ್ದಿತು. ಈಗ ಐದು ದಿನಗಳು ಹುಡುಗಿಗೆ ದಿನಾ ಅಲಂಕಾರ ಮಾಡಿ ಆರತಿ ಎತ್ತಿ ದೃಷ್ಟಿ ನಿವಾಳಿಸಿ ತೆಗೆದುಹಾಕಲಾಗುತ್ತದೆ. ವಿಜಾಪುರದ ಸೀಮೆಯಲ್ಲಿರುವ ಜನಿವಾರ ಉಪ್ಪಾರರಲ್ಲಿ ಹುಡುಗನಿಗೆ ಜನಿವಾರ ಹಾಕುವ ಪದ್ಧತಿ ಇದೆ. ಆದರೆ ದಕ್ಷಿಣ ಕರ್ನಾಟಕದ ಉಪ್ಪಾರರಲ್ಲಿ ಈ ಮುಂಜಿ ಪದ್ಧತಿ ಕಂಡುಬರುವುದಿಲ್ಲ.

ಉಪ್ಪಾರರಲ್ಲೂ ಮದುವೆ ಇತರರ ವಿವಾಹ ಸಂಪ್ರದಾಯದಂತಿರುತ್ತದೆ. ಸಾಧಾರಣವಾಗಿ ಗಂಡಿನ ಮನೆಯವರು ಹುಡುಗಿಯನ್ನು ಕೋರಿ ಮನೆಯ ಯಜಮಾನರನ್ನು

ಭೇಟಿ ಮಾಡುತ್ತಾರೆ. ಇದೇ ಹೆಣ್ಣು ನೋಡುವ ಶಾಸ್ತ್ರ. ಒಂದೇ ಬೆಡಗಿಗೆ (ಗೋತ್ರಕ್ಕೆ) ಸೇರಿರುವ ಹೆಣ್ಣು-ಗಂಡುಗಳು ಮದುವೆಯಾಗುವಂತಿಲ್ಲ. ಪರಸ್ಪರ ಒಪ್ಪಿಗೆಯಾದರೆ, ವೀಳ್ಯೆಯ ಶಾಸ್ತ್ರ ಮಾಡಿ ಪರಸ್ಪರ ತಾಂಬೂಲವನ್ನು ಯಜಮಾನರು ವಿನಿಮಯ ಮಾಡಿಕೊಳ್ಳುತ್ತಾರೆ. ಹಿಂದೆ ಹುಡುಗಿಗೆ ತೆರ ಕೊಡುವ ಪದ್ಧತಿ ಇದ್ದಿತು. ಇತ್ತೀಚೆಗೆ ವರದಕ್ಷಿಣೆಯನ್ನು ಕೊಡುವುದು ವಾಡಿಕೆಯಾಗುತ್ತಿದೆ. ಯಜಮಾನ ಅಥವಾ ಮದುವೆ ಮಧ್ಯಸ್ಥಗಾರ ಬೀಣಗ್ಯಾ ಎಲ್ಲಾ ಬಾಂಧವರನ್ನು ವಿವಾಹಕ್ಕೆ ಆಹ್ವಾನಿಸುತ್ತಾರೆ. ಹಿಂದೆ ಮದುವೆಯನ್ನು ಐದು ದಿನಗಳವರೆಗೆ ನಡೆಸಲಾಗುತ್ತಿದ್ದಿತು. ಈಗ ಎರಡು ಅಥವಾ ಮೂರು ದಿನಗಳವರೆಗೆ ಕಾಲಗಳ ಮದುವೆ. ಗಂಡಸರ ಕೆಲಸಗಳನ್ನು ಗೌಡರು ಹಾಗೂ ಸಂಪ್ರದಾಯದ ಕೆಲಸಗಳನ್ನು ಮುತ್ತೈದೆಯರು ನಿರ್ವಹಿಸುತ್ತಾರೆ. ಮೊದಲನೆಯ ದಿನ ಚಪ್ಪರ ಹಾಕುವುದು, ವಧು-ವರರು ಕುಳಿತುಕೊಳ್ಳುವುದಕ್ಕೆ ಶಶಿಕಟ್ಟೆ ಸಿದ್ಧಪಡಿಸುವುದು, ಎರಡನೆಯ ದಿನ ಲಕ್ಷ್ಮೀಪೂಜೆ ಇತ್ಯಾದಿ ಕಾರ್ಯಕ್ರಮ, ಮೂರನೆಯ ದಿನ ಲಗ್ನದ ಮುಹೂರ್ತ, ವಧುವಿನ ಕುತ್ತಿಗೆಗೆ ಪವಿತ್ರ ಸರ ಹಾಕಿ ಪಾಣಿಗ್ರಹಣ ನೆರವೇರಿಸುವುದು, ಅಕ್ಷತೆ ಹಾಕಿ ಆಶೀರ್ವದಿಸಿ ಉಡುಗೊರೆಗಳನ್ನು ಕೊಡುವುದು, ನಂತರ ವಿವಾಹ ಭೋಜನ ಇತ್ಯಾದಿ ಚಟುವಟಿಕೆಗಳನ್ನು ಉಪ್ಪಾರರ ವಿವಾಹ ಪದ್ಧತಿಯಲ್ಲಿ ಕಾಣಬಹುದು. ಉತ್ತರ ಕರ್ನಾಟಕದಲ್ಲಿ ಮೊದಲು ಮದುವೆ ಮೂರು ದಿನಗಳವರೆಗೆ ನಡೆಯುತ್ತಿತ್ತು. ಈಗ ಅಲ್ಲಿ ಮದುವೆ ಒಂದೇ ದಿನದಲ್ಲಿ ಮುಗಿದುಹೋಗುತ್ತದೆ. ಮದುವೆ ಹಾಗೂ ಇತರ ವಿಶೇಷ ಸಂದರ್ಭಗಳಲ್ಲಿ ಕಡಲೆಹುಳಿ ತಿನಸನ್ನು ವಿಶೇಷವಾಗಿ ತಯಾರಿಸಲಾಗುತ್ತದೆ. ಇತ್ತೀಚೆಗೆ ಉಪ್ಪಾರರ ಪಥ್ಯ ವಿಧಿಗಳಲ್ಲೂ ವೈವಿಧ್ಯತೆ ಕಂಡುಬರುತ್ತಿದೆ. ಮೈಸೂರು ಜಿಲ್ಲೆಯ ಕೆಲವು ಸ್ಥಳಗಳಲ್ಲಿ ಧಾರೆಯನ್ನು ಎರಡನೆಯ ದಿನ ಸಂಜೆ ನಡೆಸಲಾಗುತ್ತದೆ. ಹಳೆಯ ಮೈಸೂರು ಪ್ರಾಂತ್ಯದಲ್ಲಿ ಬ್ರಾಹ್ಮಣಪುರೋಹಿತರು, ಉತ್ತರ ಕರ್ನಾಟಕದಲ್ಲಿ ಜಂಗಮ ಸ್ವಾಮಿಗಳು ವಿವಾಹ ವಿಧಿಗಳನ್ನು ನೆರವೇರಿಸಿಕೊಡುತ್ತಾರೆ. ವಿವಾಹ ಸಂದರ್ಭದಲ್ಲಿ ಕೆಲವೆಡೆ ವರನಿಗೆ ಜನಿವಾರವನ್ನು ತೊಡಿಸಲಾಗುತ್ತದೆ. ಇತರ ಅನೇಕ ಜಾತಿಗಳಲ್ಲಿ ಇರುವಂತೆ ಉಪ್ಪಾರರಲ್ಲೂ ಸೋದರಮಾವನ/ ಸೋದರತ್ತೆಯ ಮಗ/ಮಗಳು ಹಾಗೂ ಅಕ್ಕನ ಮಗಳನ್ನು ಮದುವೆಯಾಗುವ ಪದ್ಧತಿ ಇದೆ. ಅಕ್ಕ-ತಂಗಿಯರನ್ನು ಅಣ್ಣ-ತಮ್ಮಂದಿರಿಗೆ ಕೊಟ್ಟು ವಿವಾಹವನ್ನು ಮಾಡುವ ವಾಡಿಕೆಯೂ ಇದೆ.

ಹಿಂದಿನಿಂದಲೂ ವಿಧವಾ ವಿವಾಹವನ್ನು ಒಪ್ಪಿದ ಜಾತಿಗಳಲ್ಲಿ ಉಪ್ಪಾರ ಜಾತಿಯು ಒಂದು. ವಿಧವಾ ವಿವಾಹವನ್ನು ಸಿರಿ ಉಡಿಕೆ, ಸೀರುಡುಕೆ ಎಂದು ಕರೆಯಲಾಗುತ್ತದೆ. ಇದನ್ನು ರಾತ್ರಿಯ ಹೊತ್ತು ವರನ ಸ್ವಗೃಹದಲ್ಲಿ ಕೇವಲ ವಿಧವೆಯರು, ಗಂಡ ಬಿಟ್ಟವರು, ಸೀರುಡಿಕೆ ಮಾಡಿಕೊಂಡ ಹೆಂಗಸರು ನೆರವೇರಿಸುತ್ತಾರೆ. ಸಾಧಾರಣವಾಗಿ ವಿಧುರ-ವಿಧವೆಯರ ಮದುವೆಗಳು ನಡೆಯುತ್ತವೆ. ಸ್ತ್ರೀಗೆ ಮರುಜೀವನ ನೀಡುವ ಈ ಪದ್ಧತಿ ಮೆಚ್ಚುಗೆಗೆ ಪಾತ್ರವಾದರೂ

ಈ ರೀತಿಯ ವಿವಾಹದಿಂದ ಹುಟ್ಟಿದ ಮಕ್ಕಳನ್ನು ಇತರ ಸಂಸಾರಸ್ಥರ ಮನೆಯವರು ಮದುವೆಯಾಗುತ್ತಿರಲಿಲ್ಲವಾದ ಕಾರಣ ಇಂತಹ ಸೀರುಡಿಕೆ ಮಾಡಿಕೊಂಡವರ ಕುಟುಂಬಗಳು ಉಪ್ಪಾರ ಸಮಾಜದ ಮುಖ್ಯವಾಹಿನಿಯಿಂದ ಪ್ರತ್ಯೇಕಿಸಲ್ಪಟ್ಟಿದ್ದಿತು. ಇತ್ತೀಚೆಗೆ ವಿಧವಾ ವಿವಾಹಕ್ಕೆ ಮಾನ್ಯತೆ ನೀಡಿ ಯಾವ ದೋಷಾರೋಪಣೆಗಳನ್ನು ಮಾಡಕೂಡದೆಂಬುದಾಗಿ ತೆಗೆದುಕೊಂಡಿರುವ ತೀರ್ಮಾನ ಸ್ತುತ್ಯರ್ಹವಾದುದು. ಈ ಸಮಾಜದಲ್ಲಿ ವಿವಾಹ ವಿಚ್ಛೇದಕ್ಕೆ ಸಮ್ಮತಿ ಇದ್ದರೂ ಅದು ಸ್ವಲ್ಪ ಅಪರೂಪ ಎನ್ನಲಾಗುತ್ತದೆ. ಇದಕ್ಕೆ ಕಾರಣ ಕುಲಪಂಚಾಯಿತಿಯ ನಿಯಂತ್ರಣಾಧಿಕಾರ ಎಂದು ಹೇಳಲಾಗುತ್ತದೆ. ಆದರೆ ಬೀಣಗ್ಯಾನ ಮಧ್ಯಸ್ಥಿಕೆಯಿಂದ ನಡೆದ ವಿವಾಹಗಳಲ್ಲಿ ಪತಿ-ಪತ್ನಿಯರಲ್ಲಿ ಹೊಂದಾಣಿಕೆ ಇರದೆ ಅನಿವಾರ್ಯವಾದಾಗ ವಿಚ್ಛೇದ ವಿಷಯವಾಗಿ ಜನಾಂಗದ ಪಂಚಾಯಿತಿ ಅಥವಾ ಬೀಣಗ್ಯಾನ ಮುಂದೆ ನ್ಯಾಯ ತೀರ್ಮಾನವಾಗುತ್ತಿದ್ದಿತು.

ಉಪ್ಪಾರರು ತಮ್ಮ ಹತ್ತಿರದ ನೆಂಟರು ಮೃತಪಟ್ಟರೆ 10 ದಿನಗಳ ಮೈಲಿಗೆಯನ್ನು ಆಚರಿಸುತ್ತಾರೆ. ಗಂಡ ಅಥವಾ ಹೆಂಡತಿ ಸತ್ತರೆ ಹೆಣ್ಣಿನ ತಾಯಿಯ ಮನೆಯವರು ಹೊಸ ಬಟ್ಟೆಗಳನ್ನು ತರಬೇಕು. ಸತ್ತ 11, 13 ಅಥವಾ ತಿಂಗಳ ಒಳಗೆ ವೈಕುಂಠ ಸಮಾರಾಧನೆ ಮಾಡಿ ಬಂಧುಗಳಿಗೆ, ಇಷ್ಟಮಿತ್ರರಿಗೆ ಊಟವನ್ನು ಕೊಡುತ್ತಾರೆ. ಉತ್ತರ ಕರ್ನಾಟಕದ ವೈಷ್ಣವ ಉಪ್ಪಾರರಲ್ಲಿ ಶವವನ್ನು ಸುಡುವ ಪದ್ಧತಿ ಇದೆ. ಕೆಲವು ಶೈವ ಸಂಪ್ರದಾಯದ ಉಪ್ಪಾರರು ಶವವನ್ನು ಹೂಳುತ್ತಾರೆ. ಮೋಳೆ ಉಪ್ಪಾರರು ಸಹ ಹೆಣವನ್ನು ಹೂತು, ಸಮಾಧಿಗಳನ್ನು ಕಟ್ಟುತ್ತಾರೆ. ಜಂಗಮ ಪೂಜಾರಿಯ ನೇತೃತ್ವದಲ್ಲಿ ಈ ಶವಸಂಸ್ಕಾರ ನಡೆಯುತ್ತದೆ. ಶವ ಸುಡುವ ಪದ್ಧತಿ ಇರುವ ಉಪ್ಪಾರರು ಚಿತಾಭಸ್ಮವನ್ನು ಮಡಿಕೆಯಲ್ಲಿಟ್ಟು ನದಿಗೋ, ಹೊಳೆಗೋ ಬಿಟ್ಟುಬಿಡುತ್ತಾರೆ. ಸತ್ತ ವ್ಯಕ್ತಿಗೆ, ಪೂರ್ವಜರಿಗೆ ಎಡೆ ಕೊಡುವುದು, ಬಂಧುಗಳಿಗೆ ಸಿಹಿಯೂಟ ನೀಡಿ ಸೂತಕ ಕಳೆದುಕೊಳ್ಳುವುದು, ಸತ್ತ ವ್ಯಕ್ತಿಯ, ಮುಖಪಟವನ್ನು ಬೆಳ್ಳಿಯಿಂದ ಮಾಡಿಸಿ ಪೂಜಿಸುವುದು ಮುಂತಾದ ಇನ್ನಿತರ ವಿಧಿ-ವಿಧಾನಗಳೂ ಇವೆ. ಸತ್ತ ವ್ಯಕ್ತಿಗೆ ಸಾಧಾರಣವಾಗಿ ಪ್ರತ್ಯೇಕ ವಾರ್ಷಿಕ ತಿಥಿ ಅಥವಾ ಶ್ರಾದ್ಧ ಮಾಡುವ ಪದ್ಧತಿ ಇಲ್ಲ. ಮಹಾಲಯ ಅಮಾವಾಸ್ಯೆಯ ದಿನ, ಪಕ್ಷ ಮಾಸದಲ್ಲಿ ಅಥವಾ ಕಾರ್ತೀಕ ತಿಂಗಳ ಒಂದು ಶುಕ್ರವಾರದಂದು ಹಿರಿಯರ ಹಬ್ಬವನ್ನು ಆಚರಿಸಲಾಗುತ್ತದೆ. ಇತ್ತೀಚೆಗೆ ಅನೇಕ ಸ್ಥಿತಿವಂತರ ಮನೆಗಳಲ್ಲಿ ಶ್ರಾದ್ಧವನ್ನು ಆಚರಿಸುವ ಪದ್ಧತಿ ಕಂಡುಬರುತ್ತಿದೆ. ಹೀಗೆ ಬದುಕಿಗೆ ಸಂಬಂಧಪಟ್ಟಿರುವ ಹುಟ್ಟು, ವಿವಾಹ, ಸಾವು ಇತ್ಯಾದಿಗಳಿಗೆ ಅನ್ವಯವಾಗುವ ವಿಧಿ, ಆಚಾರ-ವಿಚಾರಗಳಲ್ಲಿ ಉಪ್ಪಾರರಲ್ಲಿ ಭಿನ್ನತೆಗಳಿವೆ ಹಾಗೂ ಹಲವಾರು ಗಣನೀಯ ಪರಿವರ್ತನೆಗಳು ಕಂಡುಬರುತ್ತಿವೆ. ಹಲವೆಡೆ ಉಪ್ಪಾರ ಕುಟುಂಬಗಳು ಇನ್ನಿತರ ಮೇಲ್ಜಾತಿ ಎನ್ನಿಸಿಕೊಂಡ ಕುಟುಂಬಗಳಲ್ಲಿನ ಆಚಾರ ಪದ್ಧತಿಗಳನ್ನು ಅನುಕರಿಸುತ್ತಿರುವಂತೆ ತೋರುತ್ತಿದೆ. ಇದು ಸಂಸ್ಕೃತೀಕರಣದ ಪ್ರಕ್ರಿಯೆ.

ಉಪ್ಪಾರರು ಹೆಚ್ಚಾಗಿ ಬಳಸುವ ಭಾಷೆ ಕನ್ನಡ. ಆದರೂ ಅವರು ವಾಸ ಮಾಡುವ

ಸ್ಥಳಗಳಿಗೆ ಅನುಸಾರವಾಗಿ ತಮಿಳು, ತೆಲುಗು, ಮರಾಠಿ, ಹಿಂದಿ, ಉರ್ದು ಭಾಷೆಗಳ ಬಳಕೆಯನ್ನು ಅವರ ಸಮಾಜದಲ್ಲಿ ಕಾಣಬಹುದಾಗಿದೆ.

### ವಿಶಿಷ್ಟವಾದ ನ್ಯಾಯಪದ್ಧತಿ

ಉಪ್ಪಾರರ ಸಮಾಜದಲ್ಲಿ ರಾಜಕೀಯ ಅಂಶಗಳನ್ನು ಗುರುತಿಸಲು ಇಚ್ಛಿಸುವ ಸಂಶೋಧಕನನ್ನು ಮೊಟ್ಟ ಮೊದಲಿಗೆ ಆಕರ್ಷಿಸುವ ವಿಷಯವೆಂದರೆ ಚಾಮರಾಜನಗರ ಹಾಗೂ ಮೈಸೂರು ಜಿಲ್ಲೆಗಳಲ್ಲಿ ಇರುವ ಉಪ್ಪಾರ ನ್ಯಾಯ ವಿತರಣೆ ಪದ್ಧತಿ. ಅದು ಪ್ರಾಚೀನ ಜಗತ್ತಿನ ಸುಪ್ರಸಿದ್ಧ ನ್ಯಾಯ ನಿಷ್ಣಾತ ಹಮ್ಮುರಬಿಯ ನ್ಯಾಯಪದ್ಧತಿಯನ್ನು ಜ್ಞಾಪಕಕ್ಕೆ ತರುತ್ತದೆ. ಪ್ರತಿ ಗ್ರಾಮಕ್ಕೂ ಒಬ್ಬ ಯಜಮಾನ ಇರುತ್ತಾನೆ. ಐದು ಗ್ರಾಮಗಳ ಒಕ್ಕೂಟ ಒಂದು ಜಾತೀಯ ಕೂಟವಾಗುತ್ತದೆ. ಈ ಐದು ಗ್ರಾಮಗಳ ದೊಡ್ಡ ಯಜಮಾನನ ಮನೆಯೇ ಕಟ್ಟೆಮನೆ, ಅಲ್ಲಿ ಅವನು ನ್ಯಾಯಕಟ್ಟುಗಳ ತೀರ್ಮಾನ ಮಾಡುತ್ತಾನೆ. ಅದಕ್ಕೆ ಹಗಲು ಕೂಟ ಅಥವಾ ರಾತ್ರಿ ಕೂಟ ಎನ್ನಲಾಗುತ್ತದೆ. ಹೆಸರೇ ಸೂಚಿಸುವಂತೆ ನ್ಯಾಯತೀರ್ಮಾನ ಕಾರ್ಯಕ್ಕಾಗಿ ಸೇರುವ ಸಮಯದ ಮೇರೆಗೆ ಈ ನ್ಯಾಯಸಭೆಗಳನ್ನು ಹಗಲು ಅಥವಾ ರಾತ್ರಿಕೂಟ ಎನ್ನಲಾಗುತ್ತದೆ. ಪಾಲಿಸಬೇಕಾದ ನಿಯಮಾವಳಿಗಳು ಲಿಖಿತ ರೂಪದಲ್ಲಿರುತ್ತವೆ. ಕಟ್ಟೆಮನೆಯಲ್ಲಿ ತೀರ್ಮಾನವಾಗದ ವ್ಯಾಜ್ಯಗಳು ಮೂವತ್ತೆರಡು ಹಳ್ಳಿಗಳು ಸೇರಿ ಅಥವಾ 5000ಕ್ಕೂ ಹೆಚ್ಚು ಜನಸಂಖ್ಯೆ ಇರುವ ಪ್ರದೇಶ ಗಡಿಮನೆಯ ವ್ಯಾಪ್ತಿಗೆ ಬರುತ್ತವೆ. ಸಾಧಾರಣವಾಗಿ ಗಡಿಮನೆಯ ತೀರ್ಮಾನಗಳು ಅಂತಿಮವಾಗಿರುತ್ತವೆ. ಒಂದು ವೇಳೆ ಈ ತೀರ್ಮಾನಗಳಿಂದ ತೃಪ್ತಿಯಾಗದಿದ್ದರೆ 80 ಗ್ರಾಮಗಳು ಸೇರಿ ಆಗುವ ಮಂಗಲಮನೆಯಲ್ಲಿ ಕೂಟ ಸೇರಿ ತೀರ್ಮಾನ ನೀಡಲಾಗುತ್ತದೆ. ಅದು ಪ್ರಶ್ನಾತೀತವಾಗಿರುತ್ತದೆ. ಅದು ಒಂದು ರೀತಿಯಲ್ಲಿ ಸರ್ವೋಚ್ಚ ನ್ಯಾಯಾಲಯ ಇರುವಹಾಗೆ. ಈ ಕಟ್ಟುಪಾಡನ್ನು ಪ್ರತಿ ಉಪ್ಪಾರರು ಚಾಚುತಪ್ಪದಂತೆ ಪಾಲಿಸುತ್ತಾರೆ. ಹೀಗೆ ನೀಡಲಾಗುತ್ತಾ ಬಂದಿರುವ ತೀರ್ಪುಗಳನ್ನು ದಾಖಲಿಸಿಡುವ ಇವರ ಪದ್ಧತಿ ಅತ್ಯಂತ ಪ್ರಶಂಸನೀಯವಾದುದು. ಈ ನ್ಯಾಯ ತೀರ್ಮಾನದಲ್ಲಿ ವಿಧವೆ, ಅನಾಥ, ಹಿರಿಯರಿಗೆ ಆದ್ಯತೆ ಇರುವುದು ಮತ್ತೊಂದು ಸ್ತುತ್ಯಾರ್ಹವಾದ ಅಂಶ.

### ಧಾರ್ಮಿಕ ಆಚರಣೆ

ಉಪ್ಪಾರರ ಧಾರ್ಮಿಕ ಜೀವನವೂ ವೈವಿಧ್ಯಮಯವಾಗಿದೆ. ಅವರು ಸರ್ವ-ದೇವೋಪಾಸಕರು. ಅವರು ತಮ್ಮ ತಮ್ಮ ಕ್ಷೇತ್ರಗಳ ಗ್ರಾಮದೇವತೆಗಳು, ಶಿವ, ವಿಷ್ಣು, ಶ್ರೀರಾಮ, ವೆಂಕಟರಮಣ, ಚನ್ನಕೇಶವ, ಮಾರುತಿ, ಆಂಜನೇಯ, ಮಂಜುನಾಥಸ್ವಾಮಿ, ಭೈರವೇಶ್ವರ, ಮಲೆಮಹದೇಶ್ವರ, ನಂಜುಂಡೇಶ್ವರ, ಬಿಳಿಗಿರಿ ರಂಗಸ್ವಾಮಿ, ಹನುಮಂತ, ಮಂಟೇಸ್ವಾಮಿ, ತಿರುಪತಿ ತಿಮ್ಮಪ್ಪ, ಹುಲಿರಾಯ, ಮೈಲಾರೇಶ್ವರ, ಕನಕರಾಯ, ಹುಲಿದೇವ,

ಮುಷ್ಟಿ ಜಡ್ಡಿಗ, ಹರುಕತೇಶ್ವ ಮೊದಲಾದ ದೇವರುಗಳನ್ನು, ಯಲ್ಲಮ್ಮ, ಹುಲಿಗೆಮ್ಮ, ಅಂತರಗಟ್ಟಮ್ಮ, ದುರ್ಗಮ್ಮ, ಕಕ್ಕುವಾಡದಮ್ಮ, ಕರಿಯಮ್ಮ, ಮಸಿಯಮ್ಮ, ಮುರಮ್ಮ, ದುರ್ಗೇಶ್ವರಿ, ದೊಡ್ಡ ತಾಯಮ್ಮ, ಚಲ್ಲಡವಾಡಿ ಲಕ್ಷ್ಮಮ್ಮ, ದುರ್ಗವ್ವ, ದ್ಯಾಯವ್ವ, ಸುಂಕಾಲಮ್ಮ, ಅಂಬಾಭವಾನಿ, ಕುಳಜಿಭವಾನಿ, ಚೌಡಿ, ದುರ್ಗೆ, ಅಂಕಮ್ಮ, ಸುಂಕಮ್ಮ, ಜಂಬುಲ್‌ದಮ್ಮ ಮೊದಲಾದ ಸ್ತ್ರೀ ದೇವತೆಗಳನ್ನು ಆಯಾಯ ಸ್ಥಳಗಳ ಸಂಪ್ರದಾಯಕ್ಕನುಸಾರವಾಗಿ ಆರಾಧಿಸುತ್ತಾರೆ. ವಾರಭಜನೆ, ಉಪವಾಸ ಇತ್ಯಾದಿಗಳನ್ನು ಶ್ರದ್ಧೆಯಿಂದ ಆಚರಿಸುತ್ತಾರೆ. ತಿರುಪತಿ, ಕದರಿ, ನಂಜನಗೂಡು, ಗೋಕರ್ಣ, ಮಹಾಕೂಟ, ಬಿಳಿಗಿರಿರಂಗನಬೆಟ್ಟ, ಬನಶಂಕರಿ, ತುಳಜಾಪುರ ಮುಂತಾದ ಪವಿತ್ರ ಸ್ಥಳಗಳಿಗೆ ತೀರ್ಥಯಾತ್ರೆ ಕೈಗೊಳ್ಳುತ್ತಾರೆ. ಗ್ರಾಮದಲ್ಲಿ ಅಂಟುಜಾಡ್ಯಗಳು ಹರಡಿದಾಗ ಊರಿಗೆ ಮಾರಿ ಹೊಕ್ಕಿದೆ ಎಂದು ನಂಬಿ ಗ್ರಾಮದೇವರನ್ನು ಉತ್ಸವದಲ್ಲಿ ಭಾಜಬಜಂತ್ರಿ, ಜಾನಪದ ಹಾಡು ನೃತ್ಯಗಳೊಡನೆ ಊರೆಲ್ಲಾ ಕೊಂಡೊಯ್ಯುವ ಪದ್ಧತಿ ಇದೆ. ಕಾಮನ ಹುಣ್ಣಿಮೆ ಆದ ಎರಡು ದಿನಗಳ ನಂತರ ದೊಡ್ಡ ತಾಯಮ್ಮನ ಜಾತ್ರೆ ನಡೆಯುತ್ತದೆ. ಆಗ ಕೊಂಡ ಕಾರ್ಯಕ್ರಮವಿರುತ್ತದೆ. ನಿಗಿನಿಗಿಯಾಗಿ ಉರಿಯುವ ಕೆಂಡವನ್ನು ನೇಮನಿಷ್ಠೆಗಳಿಂದ ಹಾದುಬರುತ್ತಾರೆ.ತಮ್ಮಡಿಪ್ಪ ಚಿಕ್ಕತಮ್ಮಡಿಪ್ಪನೊಂದಿಗೆ ದೊಡ್ಡ ಸತ್ತಿಗೆ, ಚಿಕ್ಕಸತ್ತಿಗೆ, ಸೂರಿಪಾನಿ ಹಿಡಿದ ದೇವರಗುಡ್ಡಗಳು ಕೊಂಡ ಹಾದು ಬರುತ್ತಾರೆ. ಕೆಂಡ ಹಾಯುವವರಿಗೆ ಒಂದಿಷ್ಟು ಅಗ್ನಿಸ್ಪರ್ಶವಾಗಿರುವುದಿಲ್ಲ ಎಂಬುದು ಸೋಜಿಗದ ಸಂಗತಿ. ಉಪ್ಪಾರ ಸಮಾಜದಲ್ಲಿ ಶೈವ, ವೀರಶೈವ ಹಾಗೂ ವೈಷ್ಣವ ಉಪ್ಪಾರರು ಇದ್ದಾರೆ. ವೈಷ್ಣವ ಪಂಥಾನುಯಾಯಿಗಳಾಗಿರುವ ನಾಮ ಉಪ್ಪಾರರು ಶ್ರಾವಣ ತಿಂಗಳಲ್ಲಿ ಬಗೆ ಬಗೆಯ ಸಿಹಿ ತಿಂಡಿಗಳನ್ನು ತಯಾರಿಸಿ ವೈಷ್ಣವದಾಸರಿಗೆ ಅರ್ಪಿಸುತ್ತಾರೆ. ಇದನ್ನು 'ಜೋಪಾಳ ಬುಟ್ಟಿ ತುಂಬಿಸುವುದು' ಎಂಬುದಾಗಿ ವಿವರಿಸಲಾಗಿದೆ. ಇವರಿಗೆ ತಿರುಮಲೆಯ ವೆಂಕಟೇಶ್ವರ ಪ್ರಿಯನಾದ ಕುಲದೈವ. ತಮಿಳುನಾಡಿನ ತಂಜಾವೂರು ಜಿಲ್ಲೆಯ ಕುಂಭಕೋಣಂನ ಸಮೀಪದಲ್ಲಿ 'ಉಪ್ಪುಲಿಯಪ್ಪನ' ದೇವಾಲಯವಿದೆ. ಅಲ್ಲಿನ ಮೂಲದೇವರು ತಿರುಪತಿ ತಿಮ್ಮಪ್ಪನಂತೆ ಇದ್ದಾನೆ. ಮೊದಲನೆಯ ರಾಜೇಂದ್ರ ಚೋಳನ ಆಳ್ವಿಕೆಗೆ ಸಂಬಂಧಪಟ್ಟಿರುವ ಒಂದು ಶಿಲಾಶಾಸನ ಈ ದೇವರನ್ನು ತಿರುವಿನ್ನಾಗರ್ ಅಥವಾ ಉಪ್ಪಲಿಯಪ್ಪನ್ ಎಂಬುದಾಗಿ ಹೆಸರಿಸಿದೆ. ಅಲ್ಲಿ ಈಗಲೂ ದೇವರಿಗೆ ಉಪ್ಪಿಲ್ಲದ ನೈವೇದ್ಯವನ್ನು ಅರ್ಪಿಸುವ ವಾಡಿಕೆ ಇದೆ. ಒಂದು ಧಾರ್ಮಿಕ ವಿವರಣೆಯ ಪ್ರಕಾರ "ದೇವರಿಗೆ ಬೇಕಾದ ಸ್ವಾದ ಉಪ್ಪನ್ನು ತಯಾರಿಸಲು ಆ ವಂಶದ ಮೂಲಪುರುಷನೆಂಬುದಾಗಿ ನಂಬಲಾಗಿದ್ದ ಒಬ್ಬನು ದೇವತೆಗಳಿಂದ ಅನುಗ್ರಹ ಪಡೆದು ಭೂಲೋಕಕ್ಕೆ ಬಂದನು. ಒಮ್ಮೆ ಇವನ ಪತ್ನಿಯು ಯಾರೋ ಉಪ್ಪು ಕೇಳಿದ್ದಕ್ಕೆ ಗಾಜಿನ ಬಳೆಗಳನ್ನು ವಿನಿಮಯವಾಗಿ ಪಡೆದು ಉಪ್ಪು ನೀಡಿದಳು. ಈ ವಿಷಯ ತಿಳಿದ ಅವಳ ಪತಿ ಕುಪಿತನಾಗಿ ಅವಳನ್ನು ಕಾದ ಹೆಂಚಿನ ಮೇಲೆ ಹಾಕಿ ಕೊಲ್ಲಲು ಪ್ರಯತ್ನಿಸಿದಾಗ ಅವಳು ಆ

ಕಾದ ಪಂಜಿನ ಮಧ್ಯಭಾಗದಲ್ಲಿ ರಂಧ್ರ ಮಾಡಿಕೊಂಡು ತಪ್ಪಿಸಿಕೊಂಡಳಂತೆ." ಈ ನಂಬಿಕೆಯನ್ನು ಇಟ್ಟುಕೊಂಡಿರುವ ಉಪ್ಪಲಿಯನ್ಸರ ಸ್ತ್ರೀಯರು ಇತ್ತೀಚಿನವರೆಗೆ ಗಾಜಿನ ಬಳೆಗಳನ್ನೇ ಹಾಕಿಕೊಳ್ಳುತ್ತಿರಲಿಲ್ಲವಂತೆ!

ಉಪ್ಪಾರರು ಸಂಕ್ರಾಂತಿ, ಉಗಾದಿ, ಅಕ್ಷಯ ತೃತೀಯ, ಬಸವಣ್ಣನ ಜನ್ಮದಿನ, ಕಾರು ಹುಣ್ಣಿಮೆ, ಮಣ್ಣೆತ್ತಿನ ಅಮಾವಾಸ್ಯೆ, ನಾಗರಪಂಚಮಿ, ಶ್ರಾವಣಮಾಸದ ಪ್ರತಿ ಸೋಮವಾರ, ಗಣೇಶ ಚತುರ್ಥಿ, ಗೌರಿಹಬ್ಬ, ಮಹಾನವಮಿ, ಬನ್ನಿ ಮುಡಿಯುವ ವಿಜಯದಶಮಿ, ಸೀಗೆಹುಣ್ಣಿಮೆ, ಗೌರಿಹುಣ್ಣಿಮೆ, ಲಕ್ಷ್ಮೀಪೂಜೆ, ಕಾರ್ತೀಕೋತ್ಸವ, ಮಾರ್ಗಶಿರ ಎಳ್ಳು ಅಮಾವಾಸ್ಯೆ ಪ್ರತಿ ಹುಣ್ಣಿಮೆ ಹಾಗೂ ಅಮಾವಾಸ್ಯೆಗಳು ಇತ್ಯಾದಿ ಹಬ್ಬಗಳನ್ನು ಬಹು ನಿಷ್ಠೆ-ನೇಮಗಳಿಂದ ಆಚರಿಸುತ್ತಾರೆ.

ಉಪ್ಪಾರರ ಸಮಾಜದಲ್ಲಿ ಅಪರೂಪದ ಕಲೆಗಾರರೂ ಇದ್ದಾರೆ. ಸುಗ್ಗಿ ಕುಣಿತ, ಜಾನಪದ ಹಾಡುಗಳು-ನೃತ್ಯಗಳು, ಮಂಟೇಸ್ವಾಮಿ ಮೊದಲಾದವರ ಕಥಾ ಪ್ರವಚನ, ಡೊಳ್ಳು, ಕರಡಿ ಮಜಲು, ನಾಟಕ ಭಜನೆ, ಸಂಗೀತ ಮುಂತಾಗಿ ಎಲ್ಲಾ ಕಲಾಕ್ಷೇತ್ರಗಳಲ್ಲಿ ಉಪ್ಪಾರರು ಸಾಧನೆ ತೋರುತ್ತಾ ಬಂದಿದ್ದಾರೆ.

ಕರ್ನಾಟಕದಲ್ಲಿ ಬ್ರಾಹ್ಮಣರು ಹಾಗೂ ಲಿಂಗಾಯತರನ್ನು ಹೊರತುಪಡಿಸಿದರೆ ಬಹು ಹಿಂದಿನಿಂದಲೇ ಧಾರ್ಮಿಕ ಮಠ ಹೊಂದಿದ್ದ ಹಿಂದುಳಿದ ಜನಾಂಗಗಳಲ್ಲಿ ಉಪ್ಪಾರರು ಪ್ರಥಮರು. ಚಿತ್ರದುರ್ಗ ಜಿಲ್ಲೆಯ ಉಪ್ಪಾರಹಟ್ಟಿ ಗ್ರಾಮದಲ್ಲಿರುವ ಉಪ್ಪಾರರ ಮಠ ಎಂಟುನೂರು ವರ್ಷಗಳ ಚರಿತ್ರೆ ಇರುವ ಶ್ರೀಮಠ. ಈ ಮಠದಲ್ಲಿ ಹನ್ನೆರಡು ಜನ ಜಗದ್ಗುರುಗಳು ಬಂದು ಮಾರ್ಗದರ್ಶನ ನೀಡಿ ಕಣ್ಮರೆಯಾಗಿ ಹೋಗಿದ್ದಾರೆ. ಈ ಮಠದ ಜಗದ್ಗುರು ದಿವಂಗತ ಪೂಜ್ಯ ಲೇಪಾಕ್ಷ ಸ್ವಾಮಿಗಳು ಬರೆದಿರುವ 'ಶ್ರೀ ಉಪ್ಪಾರ ಚರಿತಾಮೃತ' ಒಂದು ಉತ್ತಮ ಆಧಾರ ಧಾರ್ಮಿಕ ಗ್ರಂಥವಾಗಿದೆ.

**ಆರ್ಥಿಕ ಸ್ಥಿತಿ**

ಉಪ್ಪಾರರ ಆರ್ಥಿಕ ಚಟುವಟಿಕೆಗಳೂ ವೈವಿಧ್ಯಮಯವಾಗಿವೆ. ಆದರೂ ಅವರ ಆರ್ಥಿಕ ಸ್ಥಿತಿ ಬಹು ಶೋಚನೀಯವಾಗಿದೆ. ಬ್ರಿಟಿಷರ ಆಳ್ವಿಕೆ ಪ್ರಾರಂಭವಾದ ಮೇಲೆ ಅವರ ಅತ್ಯಂತ ಖಂಡನಾರ್ಹವಾಗಿದ್ದ ಅನ್ಯಾಯಕರ ಆರ್ಥಿಕ ನೀತಿಯ ಕಾರಣ ಉಪ್ಪಿನ ಕೈಗಾರಿಕೆಗೆ ಭಾರೀ ಏಟು ಬಿದ್ದು, ಲಕ್ಷಾಂತರ ಉಪ್ಪಾರರು ನಿರುದ್ಯೋಗಿಗಳಾಗಿ ನಿರ್ಗತಿಕರಾದರು. ಪರಿಸ್ಥಿತಿಗಳ ಒತ್ತಡದ ಕಾರಣ ಅವರು ವಿವಿಧ ಕಾರ್ಯಗಳನ್ನು ಕೈಗೊಳ್ಳಬೇಕಾಯಿತು. ಅಲ್ಲಿ ರಾಜ್ಯಾದ್ಯಾಂತ ಉಪ್ಪಾರರು ಕೃಷಿಕರು, ಕೃಷಿ ಕಾರ್ಮಿಕರು ಅಲ್ಲದೆ ಅವರು ಇಂದು ಕಟ್ಟಡ ನಿರ್ಮಾಣ, ಗಾರೆಕೆಲಸ, ಕಲ್ಲಿನ ಗಣಿಗಾರಿಕೆ, ಪಾಲಿಷಿಂಗ್ ಉದ್ದಿಮೆ, ಹೂವು, ತರಾಕರಿ, ವೀಳ್ಯದೆಲೆ ಮಾರುವುದು, ಮೀನುಗಾರಿಕೆ, ಕುರಿಸಾಕಾಣಿಕೆ, ಸೌದೆ ಮಾರುವುದು, ಸುಣ್ಣ-ಇಟ್ಟಿಗೆ ತಯಾರಿಕೆ,

ರಸ್ತೆ ಕೆಲಸ, ಶಿಲ್ಪ ಹಾಗೂ ವಾಸ್ತುಶಿಲ್ಪಕಲೆ, ಸುಣ್ಣ ಭಟ್ಟಿ ಕೆಲಸ, ತೋಟಗಾರಿಕೆ, ನೇಕಾರಿಕೆ, ಬೆಲ್ಲ ಹಾಗೂ ಇದ್ದಲು ವ್ಯಾಪಾರ, ರಸ್ತೆ ಡಾಂಬರೀಕರಣ, ಮರಗೆಲಸ, ಹಾಲು ಮಾರಾಟ, ರೇಷ್ಮೆ ಬೇಸಾಯ, ವ್ಯಾಪಾರವೃತ್ತಿ, ಸ್ವಲ್ಪ ಚಿನ್ನ-ಬೆಳ್ಳಿ ವ್ಯಾಪಾರ, ಟೈಲರಿಂಗ್, ಸಂಗೀತ ಪಾಠ ಹೇಳಿಕೊಡುವುದೇ ಮುಂತಾದ ಹಲವಾರು ವಿವಿಧ ಕೆಲಸಗಳಿಂದ ಬಹು ಕಷ್ಟದಿಂದ ಜೀವನವನ್ನು ನಡೆಸುತ್ತಿದ್ದಾರೆ. ಉಪ್ಪಾರರಲ್ಲಿ ಬಡತನದ ರೇಖೆಗೆ ಕೆಳಗಿರುವವರ ಸಂಖ್ಯೆ ರಾಜ್ಯದ ಶೇಕಡವಾರುಗಿಂತ ಹೆಚ್ಚಾಗಿದೆ. ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ ಹಾಗೂ ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಪುರಾಣಗಳು ವಿವಿಧ ಕಾಯಕಯೋಗಿಗಳ ನಡುವೆ ಉಪ್ಪಾರರೂ ಇದ್ದರೆಂಬುದಾಗಿ ಉಲ್ಲೇಖಿಸುತ್ತವೆ. ಆದ್ದರಿಂದ ಅವರು ಜೀವನೋಪಾಯಕ್ಕಾಗಿ ವಿವಿಧ ಕಾಯಕಗಳನ್ನು ಎಸಗುತ್ತಾ ಬಂದಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

**ಶೈಕ್ಷಣಿಕ ಸ್ಥಿತಿ**

ಉಪ್ಪಾರರ ಸಮಾಜದಲ್ಲಿ ಇನ್ನೊಂದು ದುಃಖಾರ್ತವಾದ ವಿಷಯವೆಂದರೆ ಸಾಕ್ಷರತೆಯ ಮಟ್ಟ. ಅವರಲ್ಲಿ ಬಹುಮಟ್ಟಿನ ಜನ ಅನಕ್ಷರಸ್ಥರು. ಮಹಿಳೆಯರಲ್ಲಿರುವ ಅತ್ಯಂತ ಕಡಮೆ ಸಾಕ್ಷರತಾ ಪ್ರಮಾಣವು ದಿಗಿಲು ಹುಟ್ಟಿಸುವಂತಿದೆ. ಇತ್ತೀಚೆಗೆ ನಡೆಸಲಾದ ಈ ರಾಜ್ಯದ 25 ಜಿಲ್ಲೆಗಳ ಸಮೀಕ್ಷೆಯಿಂದ ರಾಜ್ಯದ ಸಾಕ್ಷರತಾ ಪ್ರಮಾಣಕ್ಕಿಂತ ಉಪ್ಪಾರರ ಸಾಕ್ಷರತಾ ಪ್ರಮಾಣ ಬಹು ಕಡಮೆ ಇದೆ. ಆಧುನಿಕ ಕಾಲದಲ್ಲೂ ಅವರಲ್ಲಿ ಶೇ. 15ಕ್ಕೂ ಕಡಮೆಯಿರುವ ಸಾಕ್ಷರತಾ ಜಿಲ್ಲೆಗಳಿವೆ. ಉತ್ತರ ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಶೇ. 80ರಷ್ಟು ಉಪ್ಪಾರರು ಅನಕ್ಷರಸ್ಥರು ಎಂಬುದು ಸಮೀಕ್ಷೆಯೊಂದರಲ್ಲಿ ಪ್ರಸ್ತಾಪಿಸಲಾಗಿದೆ.

**ಗುಣಸ್ವಭಾವ ಹಾಗೂ ಸಾಂಸ್ಕೃತಿಕ ಸಂಗತಿ**

ಸ್ನೇಹಶೀಲತೆ, ಮುಗ್ಧತೆ, ಕಷ್ಟಕರ ಕುಡಿಮೆ, ಪರೋಪಕಾರತೆ, ಸಾಹಸ, ಸಹಬಾಳ್ವೆ, ಶಿಸ್ತು, ಗುರುಹಿರಿಯರಿಗೆ ಗೌರವ ತೋರುವುದು, ನ್ಯಾಯಶೀಲತೆ ಇತ್ಯಾದಿ ಸ್ತುತ್ಯರ್ಹ ಗುಣಗಳಿಂದ ಕೂಡಿರುವ ಉಪ್ಪಾರರು ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕವಾಗಿ ನಿಜವಾಗಲೂ ಹಿಂದುಳಿದಿದ್ದಾರೆ. ಅವರಲ್ಲೂ ಗ್ರಾಮಪಂಚಾಯಿತಿ, ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತಿಗಳ ಸದಸ್ಯರಿದ್ದಾರೆ. ಅಧ್ಯಕ್ಷರು, ಉಪಾಧ್ಯಕ್ಷರು ಆಗಿದ್ದಾರೆ. ಬೆರಳೆಣಿಕೆಯಷ್ಟು ಇಲ್ಲದ ಜನ ವಿಧಾನಸಭೆ-ವಿಧಾನಪರಿಷತ್ತಗಳನ್ನು ಪ್ರವೇಶಿಸಿದ್ದಾರೆ.

ಸಾಹಿತಿಗಳು, ಅಭಿಯಂತರರು, ವೈದ್ಯರು, ವಕೀಲರು, ಉಪನ್ಯಾಸಕರು, ಸರ್ಕಾರಿ ನೌಕರರು ಈ ಸಮುದಾಯದಲ್ಲಿ ಅಲ್ಲಲ್ಲಿ ಕಾಣಬರುತ್ತಾರೆ. ಡಾ॥ ಸರಸ್ವತಿ ಚಿಮ್ಮಲಗಿಯಂತಹ ಕವಯತ್ರಿ, ಹನುಮಾಕ್ಷಿ ಗೋಗಿಯಂತಹ ಖ್ಯಾತ ಸಾಹಿತಿ, ಗಂಗಮ್ಮ ಗಂಗಪ್ಪ ಉಪ್ಪಾರ ಅಂತಹ ಪ್ರಸಿದ್ಧಿ ಸೋಬಾನೆ ಹಾಡುಗಾರ್ತಿ, ಮಹಾನ್ ಶರಣೆ ಹುಮನಾಬಾದ್ ತಾಲ್ಲೂಕಿನ ಎಂಕಮ್ಮ ಉಪ್ಪಾರ ಮೊದಲಾದ ಸ್ತ್ರೀಯರು ಈ ಸಮುದಾಯದವರಾಗಿದ್ದಾರೆ. ನಾಲ್ಕಾರು

ಪತ್ರಿಕೆಗಳನ್ನು ಇವರು ನಡೆಸುತ್ತಾರೆ. ಆದರೆ ಇಡೀ ರಾಜ್ಯದಲ್ಲಿರುವ ಉಪ್ಪಾರರ ಜನಸಂಖ್ಯೆಯನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ ಈ ಸಂಖ್ಯೆ ಅತ್ಯಂತ ಕಡಿಮೆ, ಮಹಾನ್ ಆಕಾಶದಲ್ಲಿ ಅಲ್ಲೊಂದು ಇಲ್ಲೊಂದು ನಕ್ಷತ್ರ ಇದ್ದಹಾಗೆ. ಈ ಸಮಾಜದಲ್ಲಿ ಜ್ವಲಂತ ಸಮಸ್ಯೆಗಳಿವೆ. ವಿವಿಧ ಕಸಬುಗಳನ್ನು ಅನುಸರಿಸುತ್ತಿದ್ದ ಕಾರಣವೋ ಅಥವಾ ಇನ್ನಾವುದೋ ಸಾಮಾಜಿಕ ಕಾರಣದಿಂದಲೋ ಅವರಲ್ಲೂ ಹಲವಾರು ಹೊರ ಜಾತಿ, ಒಳ ಜಾತಿ, ಒಳ ಪಂಗಡಗಳು ತಲೆದೋರಿ, ಜಿಲ್ಲೆಯಿಂದ ಜಿಲ್ಲೆಗೆ ಪ್ರತ್ಯೇಕತೆ ಉಂಟಾಗಿದೆ. ಇದು ಸಂಘಟನೆಗೆ ದೊಡ್ಡ ತೊಂದರೆಯಾಗಿದೆ. ಅಸ್ಪೃಶ್ಯತೆಯ ಕರಾಳ ಹಸ್ತಕ್ಕೆ ಅವರು ತುತ್ತಾಗಿಲ್ಲ ನಿಜ. ಆದರೂ ಅವರ ಸಾಮಾಜಿಕ ಸ್ಥಾನಮಾನ ಅಷ್ಟೇನು ಉತ್ತಮವಾಗಿಲ್ಲ. ಅವರಲ್ಲಿರುವ ಇನ್ನೊಂದು ದೊಡ್ಡ ಸಮಸ್ಯೆ ಎಂದರೆ ಅಸಂಘಟನೆ. ಈ ಕಾರಣ ತಮ್ಮಗಳ ಬಗ್ಗೆ ಅರಿವಾಗಲಿ, ಅವುಗಳನ್ನು ಒಟ್ಟಾಗಿ ಸೇರಿ ಪರಿಹರಿಸಿಕೊಂಡು ಸಮಾಜದಲ್ಲಿ ಉನ್ನತ ಮಟ್ಟಕ್ಕೇರಬೇಕೆಂಬ ಒಂದು ದೂರದೃಷ್ಟಿಯಾಗಲಿ, ಮಹತ್ವಾಕಾಂಕ್ಷೆಯಾಗಲಿ ಇವರಲ್ಲಿ ಕಾಣಬರುತ್ತಿಲ್ಲ. ಅವರ ಶೈಕ್ಷಣಿಕಮಟ್ಟ ಯಾರಿಗಾದರೂ ಬಹು ಗಾಬರಿಯನ್ನುಂಟು ಮಾಡುತ್ತದೆ. ಆರ್ಥಿಕ ಸ್ಥಿತಿ ಅತ್ಯಂತ ಶೋಚನೀಯವಾಗಿದೆ. ಉಪ್ಪಾರ ಸಮುದಾಯ ಬಡತನ, ಅನಕ್ಷರತೆ ಎಂಬ ಎರಡು ಪೆಡಂಭೂತಗಳ ಬಿಗಿಮುಷ್ಠಿಗೆ ಸಿಕ್ಕಿಹಾಕಿಕೊಂಡಿದ್ದಾರೆ. ರಾಜಕೀಯ ಕ್ಷೇತ್ರದಲ್ಲಿ ಅವರ ಇರುವಿಕೆಯೇ ಇಲ್ಲವೆನಿಸುತ್ತದೆ. ಇವರು ನಿರ್ಣಾಯಕ ಮತದಾರರಾಗಿದ್ದರೂ, ರಾಜಕೀಯ ಜಾಗೃತಿಯ ಅಭಾವದ ಕಾರಣ ಊಟದಲ್ಲಿ ಕರಿಬೇವನ್ನು ಬಿಸುಡುವಂತೆ ಅವರನ್ನು ರಾಜಕಾರಣಿಗಳು ಬಳಸಿಕೊಂಡು ಅನಂತರ ಮರೆತುಬಿಡುತ್ತಾರೆ. ಇಷ್ಟು ಜನಸಂಖ್ಯೆ ಇರುವ ಈ ಸಮಾಜದಲ್ಲಿ ಒಬ್ಬ ಪ್ರಬಲ ರಾಜಕಾರಣಿಯಾಗಲಿ, ಮಂತ್ರಿಯಾಗಲಿ, ಶಾಸನಸಭೆ ಹಾಗೂ ಲೋಕಸಭೆಗಳ ಸದಸ್ಯರಾಗಲಿ ಇಲ್ಲ ಎನ್ನುವುದು ಸೋಜಿಗದ ಸಂಗತಿ. ಬಹು ಉಪ್ಪಾರರಿರುವ ಚಾಮರಾಜನಗದಂತಹ ಜಿಲ್ಲೆಯಲ್ಲಿ ಅವರು ಮತದಾರರಾಗಿರುವರೇ ಹೊರತು ಚುನಾವಣೆಯಲ್ಲಿ ಸ್ಪರ್ಧಿಸುವವರಲ್ಲ. ಒಂದು ಪಕ್ಷ ಸ್ಪರ್ಧಿಸಿದರೂ ಸಂಘಟನೆಯಿಲ್ಲದ ಕಾರಣ ಇವರಿಗೆ ಜಯ ಲಭಿಸುವುದಿಲ್ಲ.

ಹಲವಾರು ಪ್ರಶಂಸಾರ್ಹ ಗುಣಗಳಿಂದ ಕೂಡಿರುವ ಉಪ್ಪಾರರ ಸಮುದಾಯ ಎಲ್ಲಾ ತರಹದ ಪ್ರೋತ್ಸಾಹಕ್ಕೆ ಅರ್ಹವಾಗಿದೆ. ಇತ್ತೀಚಿನ ವರ್ಷಗಳಲ್ಲಿ ಅವರಲ್ಲಿ ಸಾಮಾಜಿಕ ಹಾಗೂ ಶೈಕ್ಷಣಿಕ ಜಾಗೃತಿ ಮೂಡಿ ಬರುತ್ತಿರುವುದು ಸಂತೋಷದಾಯಕವಾದುದು.

**ಸಮುದಾಯದ ಅಭಿವೃದ್ಧಿಗೆ ಆಗಬೇಕಾದ ಕೆಲಸಗಳು**

ಈ ದಿಸೆಯಲ್ಲಿ ಮಾಡಬೇಕಾದ ಕೆಲಸ ಹಿಮಾಲಯ ಪರ್ವತದಷ್ಟಿದೆ. ಉಪ್ಪಾರರನ್ನೆಲ್ಲಾ ಒಂದಾಗಿ ಸಂಘಟಿಸುವ ಕೆಲಸ ಮೊದಲು ಮಾಡಬೇಕು. ಇತ್ತೀಚೆಗೆ ಪ್ರತಿ ವರ್ಷವೂ ವಿವಿಧ

ಜಿಲ್ಲೆಗಳಲ್ಲಿ ಭಗೀರಥ ಜಯಂತಿಯ ಕಾರ್ಯಕ್ರಮವನ್ನು ನಡೆಸಲಾಗುತ್ತಿದೆ. ಇದು ಸುತ್ಯರ್ಹವಾದುದೇ. ಇದಕ್ಕೆ ಕಾರಣರಾಗಿರುವ ಉಪ್ಪಾರ ನಾಯಕರು ಅಭಿನಂದನಾರ್ಹರು. ಆದರೆ ಈ ಕಾರ್ಯಕ್ರಮದಲ್ಲಿ ಉಪ್ಪಾರರೆಲ್ಲಾ ಉತ್ಸಾಹದಿಂದ ಸಕ್ರಿಯವಾಗಿ ಭಾಗವಹಿಸಬೇಕು. ಅದಕ್ಕಾಗಿ ಪ್ರತಿ ಗ್ರಾಮ, ತಾಲ್ಲೂಕು, ಜಿಲ್ಲೆಗಳಲ್ಲಿ ಉಪ್ಪಾರರ ಬಗ್ಗೆ ನಂಬಲರ್ಹವಾದ ಮಾಹಿತಿಗಳನ್ನು ಸಂಗ್ರಹಿಸಬೇಕು. ಈ ನಿಟ್ಟಿನಲ್ಲಿ ಈಗ ಮಾಡಲಾಗಿರುವ ಸಮೀಕ್ಷೆ ಅಷ್ಟೇನು ತೃಪ್ತಿಕರವಾಗಿಲ್ಲದಿದ್ದರೂ ಇದು ಪ್ರಪ್ರಥಮ ಹೆಜ್ಜೆಯಾಗಿರುವುದರಿಂದ ಇದನ್ನು ಮೆಚ್ಚಬೇಕಾಗಿದೆ. ಈ ಸಮೀಕ್ಷೆಯನ್ನು ತರಾತುರಿಯಲ್ಲಿ ಮಾಡಲಾಗಿದೆ ಎನ್ನಿಸುತ್ತದೆ. ಕೆಲವು ಜಿಲ್ಲೆಯಲ್ಲಿ ಉಪ್ಪಾರರ ಸಾಕ್ಷರತಾ ಪ್ರಮಾಣದ ಬಗ್ಗೆ ವಿವರಗಳಿಲ್ಲ. ಉಪ್ಪಾರ ಮಹಿಳೆಯರ ಬಗ್ಗೆ ಏನೇನು ಮಾಹಿತಿಗಳಿಲ್ಲ. ಅವರು ಅನಕ್ಷರಸ್ಥರು. ನಿಜ. ಆದರೆ ಜೀವನದ ವಿಶ್ವವಿದ್ಯಾನಿಲಯದಲ್ಲಿ ಅನುಭವ ಎಂಬ ವಿಷಯದಲ್ಲಿ ಪದವೀಧರರಾಗಿದ್ದಾರೆ. ಆದ್ದರಿಂದ ಅವರನ್ನೆಲ್ಲಾ ಮುಖತಃ ಭೇಟಿ ಮಾಡಿ, ಸಂದರ್ಶನ ನಡೆಸಿ, ವಿವರಗಳನ್ನು ಸಂಗ್ರಹಿಸಿ, ಸಿದ್ಧಪಡಿಸಿರುವ ಸಂದರ್ಶನ ಷೆಡ್ಯೂಲ್‌ಗಳಲ್ಲಿ ದಾಖಲಿಸಬೇಕು. ಭಗೀರಥ ಜಯಂತಿ ಆಚರಿಸುವುದಕ್ಕೆ ಮೊದಲು ಪ್ರತಿ ಸ್ಥಳದಲ್ಲಿರುವ ಉಪ್ಪಾರರ ಬಗ್ಗೆ ಸಾಧ್ಯವಾದಷ್ಟು ಸವಿಸ್ತರವಾಗಿ ಮಾಹಿತಿಗಳನ್ನು ಸಂಗ್ರಹಿಸಿದರೆ ಅದು ಉಪಯೋಗ ವಾಗುತ್ತದೆ. ಅವರು ಈ ತರಹದ ಸಮಾರಂಭಗಳಲ್ಲಿ ಉತ್ಸಾಹದಿಂದ ಭಾಗವಹಿಸುವಂತೆ ಮಾಡಬೇಕು. ತಮ್ಮ ಸಮಸ್ಯೆಗಳನ್ನು ವಿವರಿಸುವಂತೆ ಪ್ರೋತ್ಸಾಹಿಸಬೇಕು. ಚರ್ಚೆ ಪರಸ್ಪರ ವಿಚಾರ-ವಿನಿಮಯಗಳಿಗೆ ಹೆಚ್ಚಿನ ಅವಕಾಶಗಳನ್ನು ಉಂಟು ಮಾಡಿಕೊಡಬೇಕು.

### ಧರ್ಮಗುರುಗಳ ಆಶೀರ್ವಾದ ಬೇಕು

ಒಂದು ಸಮುದಾಯದ ಸಂಘಟನೆಯಾಗಿ ಏಳಿಗೆಯಾಗಬೇಕಾದರೆ ಧಾರ್ಮಿಕ ಮಠಗಳ ಪಾತ್ರ ಮುಖ್ಯವಾಗುತ್ತದೆ. ಹಾಗೆಯೇ ರಾಜಕೀಯ ಅಧಿಕಾರವೂ ಬೇಕು. ಈಗಿರುವ ಉಪ್ಪಾರರ ಧಾರ್ಮಿಕ ಗುರುಗಳ ಜವಾಬ್ದಾರಿ ಹೆಚ್ಚು ಎನ್ನಿಸುತ್ತದೆ. ಹಿಂದಿನ ಗುರುಗಳು ಸಂಘಟನಾ ಕಾರ್ಯವನ್ನು ಆರಂಭಿಸಿದ್ದರು. ಉಪ್ಪಾರರ ಮಾನಸಿಕ ಸಂಘಟನೆಯಾಗಬೇಕಾದುದು ಅತ್ಯಗತ್ಯ. ಅದನ್ನು ಇನ್ನೂ ಮುಂದುವರಿಸಿ ಬಲಗೊಳಿಸಬೇಕು. ರಾಜಕೀಯ ದೃಷ್ಟಿಯಿಂದ ಮುಖ್ಯಮಂತ್ರಿ ಗಳಾಗಿದ್ದ ಸನ್ಮಾನ್ಯ ಕಡಿದಾಳು ಮಂಜಪ್ಪ, ದೇವರಾಜ ಅರಸು ಹಾಗೂ ವೀರಪ್ಪ ಮೊಯಿಲಿ, ಸಚಿವರಾದ ನರಸಿಂಹಮೂರ್ತಿ ಅವರಿಂದ ಈ ಸಮುದಾಯಕ್ಕೆ ಬಹಳ ಉಪಕಾರವಾಗಿದೆ. ಚಿನ್ನಪ್ಪರೆಡ್ಡಿ ಹಿಂದುಳಿದ ವರ್ಗಗಳ ಆಯೋಗದ ಅನುಷ್ಠಾನದಿಂದ ಉಪ್ಪಾರರಿಗೆ ಒಂದು ದೊಡ್ಡ ವರವೇ ಲಭ್ಯವಾಗಿದೆ. ಇಂದು ಉಪ್ಪಾರರಲ್ಲಿ ವಿದ್ಯೆ, ಉದ್ಯೋಗ ಇತ್ಯಾದಿ ದೃಷ್ಟಿಯಿಂದ ಮೇಲಕ್ಕೇರಿರುವವರು ಹಿಂದುಳಿದಿರುವ ತಮ್ಮ ಉಪ್ಪಾರ ಬಂಧುಗಳೆಲ್ಲರನ್ನೂ ಮೇಲಕ್ಕೆ ತರುವ ಪವಿತ್ರ ಜವಾಬ್ದಾರಿಯನ್ನು ಹೊರಬೇಕು. ಇಂದು ಉಪ್ಪಾರರಿಗೆ ನಿಸ್ವಾರ್ಥ, ಆಕರ್ಷಕ ರಾಜಕೀಯ ನಾಯಕರ ಮಾರ್ಗದರ್ಶನ ಅತ್ಯಾವಶ್ಯಕವಾಗಿದೆ. ಯಾವುದೇ ಸಮುದಾಯ ಮುಂದೆ ಬರಬೇಕಾದರೆ

ಅದಕ್ಕೆ ರಾಜಕೀಯ ಶಕ್ತಿ ಬೇಕು. ಈಗಿರುವ ಪರಿಸ್ಥಿತಿಯಲ್ಲಿ ಉಪ್ಪಾರ ಸಮುದಾಯ ರಾಜಕೀಯ ಶಕ್ತಿ ಪಡೆಯವುದು ಸುಲಭದ ಮಾತೇನಲ್ಲ. ಆದುದರಿಂದ ಉಪ್ಪಾರರಿಗೆ ಮೀಸಲಾತಿಯನ್ನು ರಾಜಕೀಯ ರಂಗದಲ್ಲಿ ಅಂದರೆ ವಿಧಾನಸಭೆ ಹಾಗೂ ಲೋಕಸಭಾ ಕ್ಷೇತ್ರಗಳಿಗೂ ವಿಸ್ತರಿಸಬೇಕು. ಆರ್ಥಿಕವಾಗಿ, ಶೈಕ್ಷಣಿಕವಾಗಿ ಸಬಲರಾಗಿರುವ ಉಪ್ಪಾರರು ಸರ್ಕಾರದ ಯೋಜನೆಗಳು ಹೆಚ್ಚು-ಕಡಮೆಯಾಗದಂತೆ ತಮ್ಮವರಿಗೆ ತಲುಪವಂತ ನೋಡಿಕೊಳ್ಳಬೇಕು. ಅವರು ಸಂಸ್ಕೃತೀಕರಣ ಪ್ರಕ್ರಿಯೆಗೆ ಒಳಗಾಗಿ ಸಮಾಜದ ಮೇಲ್ಜಾತಿಗಳನ್ನು ಅನುಕರಿಸುತ್ತಾ ತಮ್ಮ ಬಾಂಧವರನ್ನು ಮರೆತುಬಿಡಬಾರದು. ಸವಲತ್ತುಗಳನ್ನು ಪಡೆದು ಮೇಲಕ್ಕೆ ಬಂದಿರುವ ಉಪ್ಪಾರರು ತಮ್ಮಲ್ಲೇ ಹಿಂದುಳಿದಿರುವವರ ಬಗ್ಗೆ ಸವಿಸ್ತಾರವಾದ ಹಾಗೂ ಆಳವಾದ ಸಮೀಕ್ಷೆ ನಡೆಸಿ ಸರ್ಕಾರ, ಮಠ ಹಾಗೂ ಸಂಘ-ಸಂಸ್ಥೆಗಳಿಗೆ ಅದನ್ನು ಮುಟ್ಟಿಸಿ ಅವರುಗಳನ್ನು ಪ್ರಗತಿಯ ಮುಖ್ಯವಾಹಿನಿಗೆ ತರುವ ಮನಸ್ಸು ಮಾಡಬೇಕು. ಇದೇ ಅವರು ಈ ಸಮುದಾಯದಲ್ಲಿ ಹುಟ್ಟಿದ್ದಕ್ಕೆ ಸಲ್ಲಿಸುವ ಕಿರುಕಾಣಿಕೆಯಾಗಿದೆ.

**ಸಂಕಲ್ಪ ತೊಡಬೇಕು**

ಭಗೀರಥನ ವಂಶಜರ ಏಳಿಗೆಗಾಗಿ ಭಗೀರಥನಂತೆ ಸಂಕಲ್ಪಿಸಿ, ಭಗೀರಥ ಪ್ರಯತ್ನವನ್ನು ಮಾಡಬೇಕು. ಹಿಂದೆ ಭಗೀರಥ ಏಕಾಂಗಿಯಾಗಿ ಹೋರಾಡಿದಂತೆ ಈಗಿನ ಉಪ್ಪಾರ ಸಮುದಾಯ ಅಭಿವೃದ್ಧಿಗೆ ಸಂಘಟಿತರಾಗಿ ಏಕಧ್ವನಿಯಲ್ಲಿ ತಮ್ಮ ಬೇಡಿಕೆಗಳನ್ನು ಮಂಡಿಸಬೇಕು. ಛಲ ಹಾಗೂ ಧೃಡ ಹೋರಾಟ ಅವರ ಅಸ್ತ್ರಗಳಾಗಬೇಕು. ಮಹಾತ್ಮ ಗಾಂಧೀಜಿಯವರ ತತ್ವಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಸಮುದಾಯದ ನಾಯಕರು ನಿಸ್ವಾರ್ಥತತೆಯಿಂದ ದುಡಿಯಬೇಕು. ಆಗ ಮಾತ್ರ ರಾಜಋಷಿ ಭಗೀರಥನ ಕನಸು ನನಸಾಗುತ್ತದೆ.

*

# ಉಪ್ಪಾರ ಹಣತೆ : ಒಂದು ಪಕ್ಷಿನೋಟ

- ಡಾ. ಕೆ. ಅನಂತರಾಮು
ಮೈಸೂರು

'ಅಭಿನವ ಭಗೀರಥ'ರೆನಿಸಿದ ಶ್ರೀಮಾನ್ ಡಿ.ಎಸ್. ರಾಮಪ್ಪನವರಿಗೆ ಸಮರ್ಪಿತವಾಗಿರುವ 'ಉಪ್ಪಾರ ಹಣತೆ'ಯೆಂಬೀ ಅಭಿನಂದನ ಗ್ರಂಥಕ್ಕೆ ಹಿನ್ನುಡಿಯ ರೂಪದಲ್ಲಿ ಕೆಲವು ಮಾತುಗಳನ್ನು ಬರೆಯುವುದು ನನಗೆ ಸಂತೋಷವನ್ನುಂಟು ಮಾಡಿದೆ.

**ಸಿವಿಲ್ ಇಂಜಿನಿಯರ್** : ಡಿ.ಎಸ್. ರಾಮಪ್ಪನವರು (1928) ಕನ್ನಡಾಂಬೆಯ ಸತ್ಪುತ್ರರಲ್ಲೊಬ್ಬರು. ಬಡತನದಲ್ಲಿ ಹುಟ್ಟಿ, ಬಾಲ್ಯದಲ್ಲಿಯೇ ತಂದೆ ತಾಯಿಗಳನ್ನು ಕಳೆದುಕೊಂಡು, ಎಲ್ಲೋ ಅಜ್ಞಾತವಾಗಿ ಬಾಳ್ವೆ ನಡೆಸಬೇಕಾಗಿದ್ದ ಜೀವವೊಂದು, ಸ್ವಪ್ರಯತ್ನದಿಂದ ಮೇಲೇರಿ ಬಂದ ರೋಮಾಂಚಕಾರಿ ಜೀವನಗಾಥೆ ಅವರದು. ತಮ್ಮನ್ನು ಸಹಾನುಭೂತಿಯಿಂದ ಕಂಡ ತಮ್ಮ ಸಮುದಾಯದ ಹಾಗೂ ಅನ್ಯ ಸಮುದಾಯಗಳ ಪುಣ್ಯಜೀವಿಗಳ ನೆರವಿನಿಂದ ವಿದ್ಯಾಭ್ಯಾಸ ಮಾಡಿ ರಾಮಪ್ಪನವರು ಸಿವಿಲ್ ಇಂಜಿನಿಯರಿಂಗ್ ಬಿ.ಇ. ಪದವಿ ಗಳಿಸಿಕೊಂಡರೆಂದರ (1953) ಅದೊಂದು ಅಸಾಧಾರಣ ಸಾಧನೆಯೇ ಸರಿ. ಮೇಲೇರುವ ಹಂಬಲ ಹೃದಯವನ್ನು ತುಂಬಿಕೊಂಡರೆ ಎಂತಹ ವಿದ್ಯಾಸಾಧನೆ ಮಾಡಬಹುದು ಎಂಬುದಕ್ಕೆ ರಾಮಪ್ಪನವರು ಶ್ರೇಷ್ಠ ಮಾದರಿಯಾಗಿದ್ದಾರೆ.

**ಸ್ವಾತಂತ್ರ್ಯ ಯೋಧ** : ರಾಮಪ್ಪನವರು ಅಪ್ರತಿಮ ದೇಶಭಕ್ತರು. ವಿದ್ಯಾರ್ಥಿದೆಸೆಯಲ್ಲಿಯೇ ಸ್ವಾತಂತ್ರ್ಯ ಸಂಗ್ರಾಮದ ಅಗ್ನಿಕುಂಡದಲ್ಲಿ ಧುಮುಕಿ ಪೊಲೀಸರ ಹಿಂಸೆಗೆ, ಸೆರೆಮನೆವಾಸಕ್ಕೆ ಗುರಿಯಾದರು.

ಸ್ವಾತಂತ್ರ್ಯ ಬಂದ ಮೇಲೆ ಮತ್ತೆ ತಮ್ಮ ವಿದ್ಯಾಭ್ಯಾಸವನ್ನು ಮುಂದು ವರಿಸಿ ಬಿ.ಇ. ಪದವೀಧರರಾದರು. ವಿದ್ಯಾಸಾಧನೆಗೆ ಮಾತ್ರವಲ್ಲದೆ ಅನನ್ಯ ದೇಶಪ್ರೇಮಕ್ಕೂ ರಾಮಪ್ಪನವರು ಸರ್ವರಿಗೂ ಆದರ್ಶಪ್ರಾಯರಾಗಿದ್ದಾರೆ.

**ನಿಷ್ಕಳಂಕ ಸರ್ಕಾರಿ ಸೇವೆ :** ತಮ್ಮ ವಿದ್ಯಾಭ್ಯಾಸ ಮುಗಿದ ಬಳಿಕ ರಾಮಪ್ಪನವರು ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆಯಲ್ಲಿ ಸುಮಾರು ಮೂವತ್ತು ವರ್ಷಗಳ ದೀರ್ಘಕಾಲ ನಿಷ್ಕಳಂಕ ಸೇವೆ ಸಲ್ಲಿಸಿದರು. ಶಿವಮೊಗ್ಗ, ಕೊಪ್ಪಳ, ಚಿಕ್ಕಮಗಳೂರು, ಬಳ್ಳಾರಿ, ಉತ್ತರ ಕನ್ನಡ, ಕೊಡಗು ಮುಂತಾದ ಜಿಲ್ಲೆಗಳಲ್ಲಿ ಇಂಜಿನಿಯರ್ ಆಗಿ, ಗಾಂಧೀಮಾರ್ಗದಲ್ಲಿ ಸಾಗುತ್ತ ಅತ್ಯಂತ ಪ್ರಾಮಾಣಿಕವಾಗಿ ದುಡಿದರು. 'ಕಟ್ಟುವುದು' ಎಂಬ ಗುಣ ಉಪ್ಪಾರ ಜನಾಂಗಕ್ಕೆ ರಕ್ತಗತವಾಗಿ ಬಂದಿದೆ. ಸರ್ಕಾರದ ಕಡೆಯಿಂದ ಜನಹಿತಕ್ಕಾಗಿ ತಮ್ಮ ಕಾರ್ಯವ್ಯಾಪ್ತಿಯಲ್ಲಿ ಮಂಜೂರಾದ ಎಲ್ಲ ಯೋಜನೆಗಳನ್ನೂ ಕಾಯಕಯೋಗಿ ರಾಮಪ್ಪನವರು ದೋಷರಹಿತವಾಗಿ ಪೂರ್ಣಗೊಳ್ಳುವಂತೆ ಮಾಡಿದರು. ತಮ್ಮ ದಕ್ಷತೆ, ಪ್ರಾಮಾಣಿಕತೆ ಮತ್ತು ಕಾರ್ಯಕೌಶಲಗಳಿಂದ ಅವರು ಸರ್ವಜನಾದರಣೀಯರಾದರು. ಸರ್ಕಾರದ ಕೆಲಸವೆಂದರೆ ಅದು ದೇವರ ಕೆಲಸ ಎಂಬ ಪೂಜ್ಯ ಭಾವನೆಯಿಂದ ಕಾರ್ಯಪ್ರವೃತ್ತರಾದ ರಾಮಪ್ಪನವರು ಇಂದು ಸರ್ಕಾರದ ಎಲ್ಲ ಅಧಿಕಾರಿಗಳಿಗೂ ಅನುಕರಣೀಯರಾಗಿದ್ದಾರೆ.

**ಸುಖದುಃಖಗಳಲ್ಲಿ ಪಾಲುಗಾರ :** ಸರ್ಕಾರದ ಉದ್ಯೋಗದಲ್ಲಿದ್ದಾಗಲೇ ರಾಮಪ್ಪನವರು ತಾವು ಮೇಲೆ ಬರಲು ಸಹಾಯ ಮಾಡಿದ ತಮ್ಮ ಉಪ್ಪಾರ ಕುಲದೊಂದಿಗೆ ಅನನ್ಯವಾದ ಸ್ನೇಹ ಸಂಬಂಧಗಳನ್ನು ಸ್ಥಾಪಿಸಿಕೊಂಡರು. ಬಿಡುವಿನ ವೇಳೆಯಲ್ಲಿ ತಮ್ಮ ಸುತ್ತಮುತ್ತಲಿನ ಉಪ್ಪಾರ ಕುಟುಂಬಗಳನ್ನು ಬಡವ ಬಲ್ಲಿದರೆನ್ನದೆ ತಾವೇ ಸಂಧಿಸಿ, ಅವರ ಸುಖದುಃಖಗಳಲ್ಲಿ ಪಾಲ್ಗೊಂಡರು. ಹಲವು ಕಡೆಗಳಲ್ಲಿ ಉಪ್ಪಾರ ಜನಾಂಗವು ದಯನೀಯ ಸ್ಥಿತಿಯಲ್ಲಿ ದಿನಗಳೆಯುತ್ತಿರುವುದನ್ನು ಕಂಡು ಮರುಗಿದರು. ಆ ಜನಾಂಗವನ್ನು ವಿವಿಧ ಹಂತಗಳಲ್ಲಿ ಸಂಘಟಿಸಿ, ಅವರ ಬದುಕನ್ನು ಬಂಗಾರವಾಗಿಸಬೇಕೆಂಬ ಸಂಕಲ್ಪವನ್ನು ಆಗಲೇ ದೃಢಪಡಿಸಿಕೊಂಡರು. ತಮ್ಮ ಜನಾಂಗಕ್ಕೊಂದು ಪ್ರಾಚೀನ ಗುರುಪೀಠವಿದೆ ಎಂಬುದೇ ಎಷ್ಟೋ ಮಂದಿಗೆ ತಿಳಿದಿರಲಿಲ್ಲ. ರಾಮಪ್ಪನವರು ಅದನ್ನೆಲ್ಲ ಪ್ರಚಾರಕ್ಕೆ ತಂದರು. ತನ್ನ ಕರ್ತವ್ಯಕ್ಕೆ ಚ್ಯುತಿ ಬಾರದಂತೆ ಸೇವಾಯೋಗಿಯೊಬ್ಬರು ಹೇಗೆ ಕಾರ್ಯಪ್ರವೃತ್ತನಾಗಬಹುದು ಎಂಬುದಕ್ಕೆ ರಾಮಪ್ಪನವರೊಂದು ಅನುಕರಣೀಯ ಮಾದರಿಯಾಗಿದ್ದಾರೆ.

**ಹೃದಯವಂತಿಕೆಯಲ್ಲಿ ದೊಡ್ಡಮ್ಮ :** ರಾಮಪ್ಪನವರ ಮಡದಿ ಸನ್ಮಾನ್ಯೆ ಸಣ್ಣಮ್ಮನವರು ನಿಜವಾದ ಅರ್ಥದಲ್ಲಿ ಅರ್ಧಾಂಗಿ. ಅವರು ಹೆಸರಿಂದ ಸಣ್ಣಮ್ಮನವರಾದರೂ ಹೃದಯವಂತಿಕೆ

ಯಲ್ಲಿ ದೊಡ್ಡಮ್ಮನವರು. ರಾಮಪ್ಪನವರ ಸತ್ಕಾರ್ಯಗಳನ್ನೆಲ್ಲ ಅನುಮೋದಿಸಿ, ಅವರನ್ನು ಮುನ್ನಡೆಸಿದ ಕೀರ್ತಿ ಆ ಪುಣ್ಯಶೀಲೆಗೆ ಸಲ್ಲುತ್ತದೆ. "ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂಬ ದೇವರದಾಸಿಮಯ್ಯನ ವಚನದಂತೆ ಆ ಪುಣ್ಯ ದಂಪತಿಗಳ ಏಕಾಗ್ರಮನದ ದುಡಿಮೆಯೇ ಉಪ್ಪಾರ ಜನಾಂಗದ ಏಳಿಗೆಗೆ ತವನಿಧಿಯಾಯಿತು. ಸತಿಪತಿಗಳು ಸಮಾನ ಮನಸ್ಕರಾಗಿ ದುಡಿದರೆ ಮಾತ್ರವೇ ಮಹತ್ಕಾರ್ಯಗಳನ್ನು ಸಾಧಿಸುವುದು ಸಾಧ್ಯವೆಂಬುದಕ್ಕೆ ಆ ಪುಣ್ಯ ದಂಪತಿಗಳೊಂದು ಆದರ್ಶವಾಗಿದ್ದಾರೆ.

**ವಿದ್ಯೆಗೆ ಕೇಡಿಲ್ಲ** : ಮಾವನವರ ಕಡೆಯಿಂದ ತಮ್ಮ ವಿದ್ಯಾಭ್ಯಾಸಕ್ಕೆ ಸಹಾಯ ಒದಗಿಬರುತ್ತದೆಂಬ ಕಾರಣದಿಂದ ರಾಮಪ್ಪನವರು ಬಿ.ಇ. ಓದುತ್ತಿರುವಾಗಲೇ (1950) ಶ್ರೀಮತಿ ಸಣ್ಣಮ್ಮನವರ ಕೈಹಿಡಿದರು. 'ವಿವಾಹದಿಂದ ವಿದ್ಯೆಗೆ ಕೇಡಾಗುತ್ತದೆ' ಎಂಬ ಅನುಭವವಾಣಿ ಸುಳ್ಳಲ್ಲವಾದರೂ ರಾಮಪ್ಪನವರು ಅದನ್ನು ಸುಳ್ಳಾಗಿಸಿ ಪೂರ್ಣವಿದ್ಯಾವಂತರಾದರು. ಲೋಕದ ಕೆಲವು ಸಾಮಾನ್ಯ ಗ್ರಹಿಕೆಗಳನ್ನು ಸಿದ್ಧಪುರುಷರು ಮೀರಿ ಬೆಳೆಯುತ್ತಾರೆಂಬುದಕ್ಕೂ ರಾಮಪ್ಪನವರು ಸಾಕ್ಷಿಯಾಗಿದ್ದಾರೆ.

**ಸತ್ಕಾರ್ಯ ಪ್ರವರ್ತಕ** : ನಿವೃತ್ತರಾದ ಮೇಲಂತೂ (1983) ರಾಮಪ್ಪನವರು ಸಂಪೂರ್ಣವಾಗಿ ತಮ್ಮನ್ನು ಉಪ್ಪಾರ ಸಮಾಜದ ಸುಧಾರಣೆಗಾಗಿಯೇ ಸಮರ್ಪಿಸಿಕೊಂಡರು. ಮರುವರ್ಷವೇ ಕರ್ನಾಟಕ ರಾಜ್ಯ ಉಪ್ಪಾರಸಂಘದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿ ಚಿರಸ್ಮರಣೀಯವಾದ ಹತ್ತಾರು ಸತ್ಕಾರ್ಯಗಳನ್ನು ಸಂಪನ್ನಗೊಳಿಸಿದರು. ಭಗೀರಥ ಧಾರ್ಮಿಕ ಟ್ರಸ್ಟನ್ನು ಸ್ಥಾಪಿಸಿದರು. ಬೆಂಗಳೂರು, ದಾವಣಗೆರೆ, ಶಿವಮೊಗ್ಗ ಮುಂತಾದ ಮಹಾನಗರಗಳಲ್ಲಿ ವಿದ್ಯಾರ್ಥಿನಿಲಯಗಳು ಸ್ಥಾಪನೆಯಾಗಲು ಸಹಾಯಹಸ್ತ ನೀಡಿದರು. ದಾವಣಗೆರೆಯಲ್ಲಿ ಶಾಖಾಮಠವು ಆಯಿತು. ಭಗೀರಥ ಜಯಂತಿ ಮತ್ತು ಉಪ್ಪಾರ ಸಮ್ಮೇಳನಗಳನ್ನು ಅದ್ದೂರಿಯಾಗಿ ಸಂಘಟಿಸಿ ಆ ಸಮುದಾಯದಲ್ಲಿ ನವಚೈತನ್ಯವನ್ನುಂಟು ಮಾಡಿದರು. ಜಯಂತಿ ಮತ್ತು ಸಮ್ಮೇಳನಗಳು ಹಲವೆಡೆ ನೆರವೇರುವಂತಾಗಲು ಪ್ರೇರಣೆ ನೀಡಿದರು. ಹತ್ತಾರು ವರ್ಷಗಳ ಕಾಲ ಕನ್ನಡನಾಡನ್ನೆಲ್ಲ ಎಡೆಬಿಡದೆ ಸಂಚರಿಸಿ, ಉಪ್ಪಾರ ಜನಾಂಗಕ್ಕೆ ಸಂಬಂಧಿಸಿದಂತೆ ಉಪಯುಕ್ತ ಮಾಹಿತಿಗಳನ್ನು ತಮ್ಮ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದರು. ಸಂಘಟನೆಯ ಕಾರ್ಯವು ಅವರ ನಾಯಕತ್ವದಲ್ಲಿ ಮಂಗಳಕರವಾಗಿ ನಡೆಯಿತು. ನಿವೃತ್ತ ಜೀವನಾವಧಿಯನ್ನು ಸಮಾಜ ಸೇವೆಗಾಗಿ ಸಮರ್ಪಿಸಿ, ಕೃತಕೃತ್ಯತೆಯನ್ನು ಪಡೆದುಕೊಳ್ಳುವುದು ಹೇಗೆ ಎಂಬುದಕ್ಕೆ ರಾಮಪ್ಪನವರೊಂದು ದಾರಿದೀಪವಾಗಿದ್ದಾರೆ.

**ಪ್ರವೃತ್ತಿಯಿಂದ ನಿವೃತ್ತಿಯಿಲ್ಲ** : ಎಪ್ಪತ್ತೈದು ವಸಂತಗಳನ್ನು ಕಂಡ ರಾಮಪ್ಪನವರು ಸಂಘದ ಅಧ್ಯಕ್ಷ ಪದವಿಯಿದ ನಿವೃತ್ತರಾದ ಮೇಲೆ (1995) ದಾವಣಗೆರೆಯಲ್ಲಿ ತಮ್ಮ ಸೇವಾಕಾರ್ಯವನ್ನು ಮುಂದುವರಿಸಿದ್ದಾರೆ. ಪದವಿಯಿಂದ ನಿವೃತ್ತರಾದರೂ ತಮ್ಮ ಸೇವಾಪ್ರವೃತ್ತಿಯಿಂದ ಅವರು

ನಿವೃತ್ತರಾಗಿಲ್ಲ. ದಾವಣಗೆರೆಯ ವಿದ್ಯಾರ್ಥಿನಿಲಯ ಹಾಗೂ ಶಾಖಾಮಠದ ಸಂರಕ್ಷಣೆಗಾಗಿ ದುಡಿಯುತ್ತಲೇ ಇದ್ದಾರೆ. ಅಧ್ಯಕ್ಷ ಪದವಿಯಲ್ಲಿ ಕಾರ್ಯನಿರ್ವಹಿಸುವಾಗ, ಸಮಾಜವನ್ನು ಒಗ್ಗೂಡಿಸುವಾಗ, ಪದವಿಯಿಂದ ನಿವೃತ್ತರಾಗುವಾಗ-ಹೀಗೆ ವಿವಿಧ ಸನ್ನಿವೇಶಗಳಲ್ಲಿ ಉಂಟಾದ ನೋವು ನಿಂದೆಗಳನ್ನೆಲ್ಲ ಶಾಂತಮನಸ್ಕರಾಗಿ ನುಂಗಿಕೊಂಡಿದ್ದಾರೆ. ಸಮುದ್ರ ಮಥನದಲ್ಲಿ ಉಕ್ಕಿಬಂದ ವಿಷವನ್ನುಂಡು ಲೋಕವನ್ನು ಕಾಪಾಡಿದ ಶಿವನಂತೆ ಅವರು ಸ್ಥಿತಪ್ರಜ್ಞರಾಗಿ ಬಾಳುತ್ತಿದ್ದಾರೆ. ಸಮಾಜ ಸೇವೆಯಲ್ಲಿ ತೊಡಗಿದಾಗ ಕೊಂಡಾಡುವರಂತೆಯೇ ನಿಂದಿಸುವವರೂ ಇರುತ್ತಾರೆ, ಸತ್ಕಾರ್ಯ ವಿಘ್ನ ಸಂತೋಷಿಗಳೂ ಇರುತ್ತಾರೆ. ಆದರೆ ಅದನ್ನೆಲ್ಲ ಮೀರಿ ಬೆಳೆಯಬೇಕು, ನಾವು ಮಾಡಬೇಕಾದ್ದನ್ನು ನಿರ್ಮಲವಾದ ಮನಸ್ಸಿನಿಂದ ಮಾಡಬೇಕು ಎಂಬುದಕ್ಕೆಲ್ಲ ರಾಮಪ್ಪನವರೊಂದು ಅಪೂರ್ವ ಮೇಲ್ಪಂಕ್ತಿಯಾಗಿದ್ದಾರೆ.

**ಯೋಗಕ್ಷೇಮಂ ವಹಾಮ್ಯಹಂ** : ಸಮಾಜಸೇವೆಯಲ್ಲಿ ಮುಳುಗುವ ವ್ಯಕ್ತಿಗಳ ಸಾಂಸಾರಿಕ ಜೀವನ ಅಸ್ತವ್ಯಸ್ತವಾಗುತ್ತದೆಂದು ಕೆಲವರು ಭಾವಿಸುವುದುಂಟು. ಆದರೆ ರಾಮಪ್ಪನವರ ಬದುಕಿನಲ್ಲಿ ಹಾಗೇನೂ ಆಗಿಲ್ಲ. ಅವರಿಗೆ ಇಬ್ಬರು ಹೆಣ್ಣುಮಕ್ಕಳು, ಇಬ್ಬರು ಗಂಡುಮಕ್ಕಳು. ಎಲ್ಲರೂ ವಿದ್ಯಾವಂತರಾಗಿ, ಗೃಹಸ್ಥರಾಗಿ ಸುಸಂಸ್ಕೃತ ಜೀವನ ನಡೆಸುತ್ತಿದ್ದಾರೆ. ಸಮಾಜದ ಸೇವೆಯೆಂದರೆ ಅದು ಪರಮಾತ್ಮನ ಸೇವೆ ಎಂದು ಭಾವಿಸುವ ಕಾಯಕಯೋಗಿಗಳ ಕುಟುಂಬಗಳ ಸಂರಕ್ಷಣೆಯ ಭಾರವನ್ನು 'ಯೋಗಕ್ಷೇಮಂ ವಹಾಮ್ಯಹಂ' ಎಂಬ ಮಾತಿನಂತೆ, ಪರಮಾತ್ಮನು ತಾನೇ ಹೊತ್ತುಕೊಳ್ಳುತ್ತಾನೆ ಎಂಬ ತತ್ತ್ವಕ್ಕೆ ರಾಮಪ್ಪನವರು ನಮ್ಮೆಲ್ಲರ ಕಣ್ಣಮುಂದೆಯೇ ನಡೆದಾಡುತ್ತಿರುವ ಶ್ರೇಷ್ಠ ಉದಾಹರಣೆಯಾಗಿದ್ದಾರೆ. ಇಷ್ಟೆಲ್ಲ ಸಾಧನೆ ಮಾಡಿದರೂ 'ನಾನು ಮಾಡಿದ್ದೇನೆ' ಎಂಬ ಅಹಂಭಾವ ಅವರಿಗಿಲ್ಲ. "ಕಾಲದೇಶಗಳು ಹಾಗೆ ಕೂಡಿಬಂದುವು, ನಾನು ನಿಮಿತ್ತಮಾತ್ರನಾದೆ. ಹಲವಾರು ಸಜ್ಜನರು ನನ್ನೊಡನೆ ಸರಿದೊರೆಯಾಗಿ ದುಡಿದರು. ಅದರ ಫಲವೇ ನಾವಿಂದು ಕಾಣುತ್ತಿರುವ ಪ್ರಗತಿ" ಎಂಬ ನಿರಹಂಕಾರಿತೆ ಅವರಲ್ಲಿ ತುಂಬಿ ತುಳುಕುತ್ತಿದೆ. ಮಾಡಿಯೂ ಮಾಡಿಲ್ಲದಂತಹ ಕರ್ಮಯೋಗಿತ್ವಕ್ಕೊಂದು ಮೇಲ್ಪಂಕ್ತಿ ಅವರು.

**ಉಪ್ಪಾರ ಹಣತೆ** : ಇಂತಹ ಸೇವಾ ಯೋಗಿಗೆ 'ಉಪ್ಪಾರ ಹಣತೆ' ಯೆಂಬ ಈ ಅಭಿನಂದನಗ್ರಂಥವು ಅರ್ಪಿತವಾಗುತ್ತಿರುವುದು ಅತ್ಯಂತ ಸಾರ್ಥಕವೂ ಸಮಯೋಚಿತವೂ ಆಗಿದೆ. ಸಮಾಜಹಿತಕ್ಕಾಗಿ ತನ್ನ ಬದುಕನ್ನೇ ಶ್ರೀಗಂಧದಂತೆ ತೇಯ್ದುಕೊಂಡ ಚೇತನವೊಂದನ್ನು ಸನ್ಮಾನಿಸುವುದು, ಸತ್ಕರಿಸುವುದು ನಮ್ಮ ಸಂಸ್ಕೃತಿಗೆ ಅನುಗುಣವಾಗಿಯೇ ಇದೆ. ಈ ಸನ್ಮಾನ, ಈ ಸತ್ಕಾರ ಚಿರಸ್ಥಾಯಿಯಾಗಿ ಉಳಿಯುವಂತೆ ಮಾಡಿದೆ ಈ ಸಂಭವನಾಗ್ರಂಥ. ಅದಕ್ಕಾಗಿ ಸಂಪಾದಕ ವರ್ಗದವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

**ಅಪೂರ್ವ ಸಂಯೋಜನೆ** : ಈ ಸಂಭಾವನಾ ಗ್ರಂಥದ ವಸ್ತುಸಂಯೋಜನೆ ಅಪೂರ್ವವಾಗಿದೆ.

ಇಲ್ಲಿ ಪ್ರಧಾನವಾಗಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ವಿವಿಧ ಲೇಖಕರು ಡಿ.ಎಸ್. ರಾಮಪ್ಪನವರ ಜೀವನದ ಮಹತ್ವದ ಘಟನೆಗಳನ್ನೂ ಅವರು ಉಪ್ಪಾರ ಜನಾಂಗದ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಿದ ಪರಿಯನ್ನೂ ಹೃದ್ಯವಾಗಿ ಹೇಳಿದ್ದಾರೆ. ರಾಮಪ್ಪನವರ ಪ್ರಾಮಾಣಿಕತೆ, ಕಾರ್ಯದಕ್ಷತೆ, ನಿಸ್ಪೃಹತೆ, ಸರಳತೆ, ನಿರಾಡಂಬರತೆ, ತ್ಯಾಗಶೀಲತೆ, ವಿನಯವಂತಿಕೆ, ಕೃತಜ್ಞತೆ, ಪರೋಪಕಾರಿತೆ ಮೊದಲಾದ ಸದ್ಗುಣಗಳು ಅಲ್ಲಿ ಅನಾವರಣ ಗೊಂಡಿವೆ. ಉಪ್ಪಾರಮಠ ಪರಂಪರೆಯನ್ನು ಕುರಿತಂತಿರುವ ಲೇಖನವೂ ಬಹಳ ಉಪಯುಕ್ತ ವಾಗಿದೆ; ಗ್ರಂಥದ ದೃಷ್ಟಿಕೋನಕ್ಕೆ ಪೂರಕವಾಗಿದೆ. ರಾಮಪ್ಪನವರೊಂದಿಗೆ ನಡೆಸಿದ ಸಂದರ್ಶನದ ವಿವರಗಳನ್ನೊಳಗೊಂಡ ಬರಹವೊಂದು ಈ ಕೃತಿಯ ಅಧಿಕೃತತೆಯನ್ನೂ ಉಪಯುಕ್ತತೆಯನ್ನೂ ವೃದ್ಧಿಗೊಳಿಸಿದೆ. ಅವರನ್ನು ಕೊಂಡಾಡುವ ಎರಡು ಕವಿತೆಗಳೂ ಇಲ್ಲಿವೆ.

**ಉಪ್ಪಾರರ ವಿಶ್ವಕೋಶ** : ಈ ಅಭಿನಂದನ ಗ್ರಂಥದ ಎರಡನೆಯ ಭಾಗದಲ್ಲಿ ಉಪ್ಪಾರ ಜನಾಂಗವನ್ನು ಕುರಿತಂತೆ ಜಿಲ್ಲಾವಾರು ಲೇಖನಗಳಿವೆ. ಆ ಎಲ್ಲ ಲೇಖನಗಳೂ ಅಂಕಿಅಂಶಗಳ ಸಹಿತವಾಗಿ ಆ ಜನಾಂಗಕ್ಕೆ ಸಂಬಂಧಿಸಿದಂತೆ ಉಪಯುಕ್ತ ಮಾಹಿತಿಗಳನ್ನು ಒಳಗೊಂಡಿವೆ. ಒಂದೊಂದೂ ಜಿಲ್ಲೆಯಲ್ಲಿರುವ ಗ್ರಾಮವಾರು ಉಪ್ಪಾರರ ಜನಸಂಖ್ಯೆ, ಅವರ ಸಾಕ್ಷರತೆಯ ಪ್ರಮಾಣ, ಇಂದು ಅವರು ಕೈಗೊಂಡಿರುವ ವಿವಿಧ ವೃತ್ತಿಗಳು, ಅವರು ಕಟ್ಟಿಕೊಂಡಿರುವ ಸಂಘ ಸಂಸ್ಥೆಗಳು, ಅವರಾಡುವ ಭಾಷೆಗಳು, ಅವರ ಒಲವು ನಿಲುವುಗಳು ಉಪ್ಪಾರರ ಹಿತಕ್ಕಾಗಿ ದುಡಿಯುತ್ತಿರುವ ಮಹನೀಯರು, ಸರ್ಕಾರದ ಉದ್ಯೋಗಗಳಲ್ಲಿರುವವರ ವಿವರಗಳು, ರಾಜಕಾರಣದ ಕ್ಷೇತ್ರದಲ್ಲಿ ಗಳಿಸಿಕೊಂಡಿರುವ ಸ್ಥಾನಮಾನಗಳು, ಗಣ್ಯ ರಾಜಕೀಯ ಶಕ್ತಿಯಾಗಿ ಅವರು ಬೆಳೆಯಲಿರುವ ಅವಕಾಶಗಳು-ಮುಂತಾದ ವಿವರಗಳು ಅಲ್ಲಿವೆ. ವಿವಿಧ ಸಾಂಸ್ಕೃತಿಕ ರಂಗಗಳಲ್ಲಿರುವ ಪ್ರತಿಭಾವಂತರನ್ನೂ ಗುರುತಿಸಲಾಗಿದೆ. ಒಟ್ಟು ಸಮಾಜದ ಆರ್ಥಿಕ-ಸಾಮಾಜಿಕ ಸ್ಥಿತಿಗತಿಗಳು, ಸ್ತ್ರೀಯರ ಸ್ಥಾನಮಾನಗಳು ಮೊದಲಾದ ವಿವರಗಳೂ ಇವೆ. ಆ ಸಮಾಜದ ಇಂದಿನ ಸಮಸ್ಯೆಗಳೇನು, ಅರೆಕೊರೆಗಳೇನು, ಲೋಪದೋಷಗಳೇನು, ಅವುಗಳಿಗೆ ಪರಿಹಾರೋಪಾಯಗಳೇನು-ಎಂಬುದರ ಮೇಲೂ ಅಲ್ಲಿ ಬೆಳಕು ಚೆಲ್ಲಲಾಗಿದೆ. ಈ ದೃಷ್ಟಿಯಿಂದ ಅಲ್ಲಿರುವ ವಿವಿಧ ಲೇಖನಗಳ ಒಕ್ಕೂಟವು ಉಪ್ಪಾರ ಜನಾಂಗದ ವಿಶ್ವಕೋಶವಾಗಿ ಪರಿಣಮಿಸಿದೆ.

**ನಾಡ ಹಣತೆ** : ಉಪ್ಪಾರ ಜನಾಂಗವೆಂದರೆ ಅದೊಂದು ಏಕಾಂತ ದ್ವೀಪವಲ್ಲ. ತನ್ನ ಸುತ್ತಮುತ್ತಲಿರುವ ಅನ್ಯಸಮುದಾಯಗಳೊಡನೆ ಕೂಡಿ ಬಾಳುತ್ತಾ, ಸಹಾಯ ನೀಡಿ ಸಹಕಾರ ಪಡೆಯುತ್ತ, ಸಹಾಯ ಪಡೆದು ಸಹಕಾರ ನೀಡುತ್ತ ಬಾಳುತ್ತಿರುವ ಶಾಂತಿಪ್ರಿಯ ಸಮಾಜ. ಈ ಸಂಗತಿಗೆ ಹಿನ್ನೆಲೆಯಾಗಿ ಈ ದ್ವಿತೀಯ ಭಾಗದ ಪ್ರತಿಲೇಖನಗಳ ಆರಂಭದಲ್ಲಿ ಆಯಾ

ಜಿಲ್ಲೆಯ ಭೌಗೋಳಿಕ, ಐತಿಹಾಸಿಕ, ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳ ಸಿಂಹಾವಲೋಕನ ವೊಂದನ್ನು ಒದಗಿಸಿಕೊಟ್ಟಿದ್ದಾರೆ. ಆಯಾ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು, ಸ್ಥಳನಾಮಗಳು, ಐತಿಹ್ಯಗಳು, ಸಾಹಿತಿಗಳು, ಕಲಾವಿದರು, ಪತ್ರಿಕೋದ್ಯಮ, ಸಮಾಜಸೇವಕರು, ಸ್ವಾತಂತ್ರ್ಯ ಹೋರಾಟಗಾರರು, ರಾಜಕಾರಣ ಬೆಳೆದು ಬಂದ ಬಗೆ, ಉಪ್ಪಾರರ ಸುತ್ತ ವಾಸಮಾಡುತ್ತಿರುವ ಅನ್ಯ ಜಾತಿಪಂಡಗಡಗಳು-ಮುಂತಾದ ಕುತೂಹಲಕಾರಿಯಾದ ವಿವರಗಳನ್ನು ಒದಗಿಸಿ ಕೊಟ್ಟಿದ್ದಾರೆ. ಹೀಗೆ ಈ ಗ್ರಂಥವು ಉಪ್ಪಾರ ಜನಾಂಗಕ್ಕೊಂದು ಹಣತೆಯಾಗಿರುವುದಲ್ಲದೆ, ಇಡೀ ಕನ್ನಡನಾಡನ್ನು ತಿಳಿಯಲು ಅನುಕೂಲ ಮಾಡಿಕೊಟ್ಟಿರುವ ಹಣತೆಯೂ ಆಗಿ ಪರಿಣಮಿಸಿದೆ.

**ಸಜ್ಜನರು ನೀಡಿರುವ ಸಲಹೆಗಳು** : ಉಪ್ಪಾರ ಜನಾಂಗವು ಮೇಲೆ ಬರಲು ಆ ಸಮಾಜದ ಮುಂದಾಳುಗಳು, ಪ್ರಜ್ಞಾವಂತರು, ವಿದ್ಯಾವಂತರು, ಸಮಾಜಸೇವಕರು ಏನೇನು ಕಾರ್ಯಕ್ರಮ ಗಳನ್ನು ಕೈಗೊಳ್ಳಬಹುದು ಎಂಬುದನ್ನು ವಿವಿಧ ಲೇಖಕರು ಜಿಲ್ಲಾವಾರು ಲೇಖನಗಳಲ್ಲಿ ಅಲ್ಲಲ್ಲಿ ಸೂಚಿಸಿದ್ದಾರೆ. ರಾಮಪ್ಪನವರು ನೀಡಿರುವ ಸಂದರ್ಶನದಲ್ಲೂ ಕೆಲವು ಸಲಹೆಗಳಿವೆ. ಅವರೆಲ್ಲರ ಸಲಹೆ ಸೂಚನೆಗಳನ್ನು ಈ ಮುಂದೆ ಕಂಡಂತೆ ಕ್ರೋಢೀಕರಿಸಿ ಚಿಂತನೆ ಮಾಡಬಹುದು :

1) ಚಾಮರಾಜನಗರ ಜಿಲ್ಲೆಯಿಂದ ಹಿಡಿದು ಬೀದರ್ ಜಿಲ್ಲೆಯವರೆಗೆ ಕರ್ನಾಟಕದ ಪ್ರತಿಯೊಂದು ಜಿಲ್ಲೆಯಲ್ಲಿಯೂ ಉಪ್ಪಾರರು ವಾಸಮಾಡುತ್ತಿದ್ದಾರೆ. ನಮ್ಮ ನಾಡಿನ ಎಲ್ಲ ಜನಾಂಗಗಳಲ್ಲೂ ಇರುವಂತೆ ಉಪ್ಪಾರರಲ್ಲಿಯೂ ಹತ್ತಾರು ಒಳಪಂಗಡಗಳಿವೆ; ಆ ಒಳಪಂಗಡಗಳಲ್ಲಿ 'ಇವರು ಅವರಿಗಿಂತ ಮೇಲು, ಅವರು ಇವರಿಗಿಂತ ಕಡಿಮೆ' ಎಂಬ ತಾರತಮ್ಯದ ಭಾವಗಳಿವೆ. ಆ ಭೇದಭಾವಗಳೆಲ್ಲ ಅಳಿಸಿ, "ಉಪ್ಪಾರರೆಂದರೆ ನಾವೆಲ್ಲ ಒಂದೇ ಕುಲ, ರಾಜರ್ಷಿ ಭಗೀರಥ ಮಹಾರಾಜನ ಕುಲ, ಚಿನ್ಮೂಲಾದ್ರಿ ಶಿಲಾಪುರಿ ಸಂಸ್ಥಾನಮಠದ ಶಿಷ್ಯಕುಲ" ಎಂಬ ವಿಶಾಲವಾದ ಮನೋಭಾವ ಭದ್ರಗೊಳ್ಳಬೇಕು.

2) ಪ್ರಯತ್ನಶೀಲತೆ, ಕಾರ್ಯತತ್ಪರತೆಗಳನ್ನು ಉಜ್ವಲಗೊಳಿಸುವ ಹಿನ್ನೆಲೆಯಲ್ಲಿ ರಾಜರ್ಷಿ ಭಗೀರಥನೇ ತಮ್ಮ ಜನಾಂಗದ ಮೂಲಪುರುಷನೆಂದೂ, ಅವನೇ ತಮ್ಮ ಆರಾಧ್ಯದೈವವೆಂದೂ ಉಪ್ಪಾರರೆಲ್ಲ ನಂಬಿ ನಡೆಯಬೇಕು. ಪ್ರತಿ ವರ್ಷವೂ ತಪ್ಪದೆ ಶ್ರದ್ಧಾಭಕ್ತಿಗಳಿಂದ ಪ್ರತಿ ಜಿಲ್ಲೆಯಲ್ಲಿ ಹಾಗೂ ಸೌಕರ್ಯವಿರುವ ವಿವಿಧ ತಾಣಗಳಲ್ಲಿ ಭಗೀರಥ ಜಯಂತಿಯನ್ನು ಆಚರಿಸಬೇಕು. ಆಗ ಸಾಧ್ಯವಿದ್ದಷ್ಟು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

3) ಭಗೀರಥ ಜಯಂತಿ ಮಾತ್ರವಲ್ಲದೆ ವರ್ಷಂಪ್ರತಿ ಉಪ್ಪಾರ ಸಮ್ಮೇಳನಗಳನ್ನು ಜಿಲ್ಲಾ ಕೇಂದ್ರಗಳಲ್ಲಿ ಸಂಘಟಿಸಬೇಕು. ಆ ಸಂದರ್ಭದಲ್ಲಿ ಉಪ್ಪಾರ ಜನಾಂಗವ ಪ್ರಾಚೀನ ಪರಂಪರೆ, ಗುರುಪೀಠದ ಪರಂಪರೆ, ನಾಡಿನ ವಿವಿಧ ಭಾಗಗಳಲ್ಲಿ ಆ ಜನಾಂಗವು ಕಟ್ಟಿರುವ

ಸಂಘ ಸಂಸ್ಥೆಗಳು, ತೆರೆದಿರುವ ಶಾಲಾ ಕಾಲೇಜುಗಳು, ನಡೆಸುತ್ತಿರುವ ವಿದ್ಯಾರ್ಥಿನಿಲಯಗಳು ಮುಂತಾದವುಗಳನ್ನು ಎತ್ತಿಹಿಡಿದು ಕೊಂಡಾಡಬೇಕು. ಉಪ್ಪಾರ ಜನಾಂಗವು ಪ್ರಗತಿ ಪಥದಲ್ಲಿ ಸಾಗಲು ಏನೇನು ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬಹುದು ಎಂಬುದರ ಚಿಂತನ ಮಂಥನವನ್ನೂ ನಡೆಸಬೇಕು. ಜಯಂತಿ, ಸಮ್ಮೇಳನಗಳ ಮೂಲಕ ಉಪ್ಪಾರರಲ್ಲಿರುವ ಒಳಪಂಗಡಗಳನ್ನು ಬೆಸೆಯುವ ಕಾರ್ಯವೂ ನಡೆಯಬೇಕು.

4) ಕರ್ನಾಟಕದ ಒಂದೊಂದು ಜಿಲ್ಲೆಯಲ್ಲಿಯೂ ಉಪ್ಪಾರರು ವಾಸ ಮಾಡುತ್ತಿರುವ ಗ್ರಾಮಗಳು ಯಾವುವು, ಎಷ್ಟು ಕುಟುಂಬಗಳಿವೆ, ಅವರ ಪ್ರಜಾಸಂಖ್ಯೆ ಎಷ್ಟಿದೆ, ಅವರ ಜೀವನೋಪಾಯದ ಮಾರ್ಗಗಳೇನು, ಆರ್ಥಿಕ-ಸಾಮಾಜಿಕ-ಶೈಕ್ಷಣಿಕ ಸ್ಥಿತಿಗತಿಗಳೇನು, ವಿವಿಧ ಸರ್ಕಾರಿ, ಅರೆಸರ್ಕಾರಿ ಮತ್ತು ಖಾಸಗಿ ವಲಯಗಳಲ್ಲಿ ಎಷ್ಟೆಷ್ಟು ಮಂದಿ ಉದ್ಯೋಗಸ್ಥರಾಗಿದ್ದಾರೆ, ಸ್ತ್ರೀಯರು ಸಾಧಿಸಿರುವ ಪ್ರಗತಿಯ ಸ್ವರೂಪವೇನು, ವಿವಿಧ ಸಾಂಸ್ಕೃತಿಕ ರಂಗಗಳಲ್ಲಿ ಪ್ರತಿಭಾವಂತ ಉಪ್ಪಾರರು ಏನೇನು ಸಾಧನೆ ಮಾಡುತ್ತಿದ್ದಾರೆ - ಮುಂತಾದ ವಿವರಗಳನ್ನೆಲ್ಲ ಕಾಲದಿಂದ ಕಾಲಕ್ಕೆ ಸೂಕ್ತವಾದ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಬೇಕು.

5) ಉಪ್ಪಾರರು ಬಹು ಮುಖ್ಯವಾಗಿ ರಾಜಕಾರಣದ ಕ್ಷೇತ್ರದಲ್ಲಿ ಒಂದು ಗಣ್ಯಶಕ್ತಿಯಾಗಿ ಬೆಳೆಯಬೇಕು. ಗ್ರಾಮಪಂಚಾಯ್ತಿಯಿಂದ ತೊಡಗಿ ವಿಧಾನಸಭೆಯವರೆಗೆ ವಿವಿಧ ಆಡಳಿತ ರಂಗಗಳಲ್ಲಿ ಅವರು ತಮ್ಮ ಸಂಖ್ಯಾಬಲದಿಂದ, ಸಂಘಟನೆಯ ಬಲದಿಂದ, ಸಮಾಜ ಸೇವಾ ಬಲದಿಂದ ಅಧಿಕಾರದ ಸೂತ್ರಗಳನ್ನು ಹಿಡಿಯಬೇಕು. ಆ ಅಧಿಕಾರದ ಬಲದಿಂದ ವಿವಿಧ ಜನಾಂಗಗಳ ಜೊತೆಗೆ ಉಪ್ಪಾರ ಜನಾಂಗದ ಹಿತವನ್ನೂ ಕಾಪಾಡಬೇಕು. 'ಏನೇ ಬರಲಿ ಒಗ್ಗಟ್ಟಿರಲಿ' ಎಂಬ ಘೋಷಣೆ ಸ್ವಾತಂತ್ರ್ಯ ಪೂರ್ವದಲ್ಲಿ ಮೊಳಗುತ್ತಿತ್ತು ; 'ಕಲಿಯುಗದಲ್ಲಿ ಶಕ್ತಿಯಿರುವುದು ಸಂಘದಲ್ಲೇ' ಎಂಬೊಂದು ಉಕ್ತಿಯು ಇದೆ. ಈ ಮಾತುಗಳ ಹಿನ್ನೆಲೆಯಲ್ಲಿ ಉಪ್ಪಾರ ಜನಾಂಗವು ಸುಸಂಘಟಿತವಾಗಿ ಬೆಳೆಯಬೇಕಾಗಿದೆ.

6) ಹಲವು ಹಿಂದುಳಿದ ಜನಾಂಗಗಳಿಗೆ ನೀಡಿರುವಂತೆಯೇ ಸರ್ಕಾರವು ಉಪ್ಪಾರ ಜನಾಂಗಕ್ಕೂ ವಿಶೇಷ ಸವಲತ್ತುಗಳನ್ನು ನೀಡಿದೆ. ಪ್ರವರ್ಗ-1 ರಲ್ಲಿ ಸೇರಿಸಿ, ಪರಿಶಿಷ್ಟ ಜಾತಿಗೆ ಸಲ್ಲುವ ಎಲ್ಲ ಶೈಕ್ಷಣಿಕ ಸೌಲಭ್ಯಗಳನ್ನೂ ವಿಸ್ತರಿಸಿದೆ, ಗೃಹನಿರ್ಮಾಣ ಯೋಜನೆಗಳನ್ನು ರೂಪಿಸಿದೆ. ಏನೇನು ಸವಲತ್ತುಗಳು ತಮಗೆ ಲಭಿಸಬಲ್ಲವು, ಅವುಗಳನ್ನು ಪಡೆದುಕೊಳ್ಳುವುದು ಹೇಗೆ, ಸದುಪಯೋಗಪಡಿಸಿಕೊಳ್ಳುವುದು ಹೇಗೆ ಎಂಬ ವಿಷಯಗಳನ್ನು ರಾಜಕೀಯ ಮುಖಂಡರು, ಉಪ್ಪಾರ ಸಂಘಗಳ ಪದಾಧಿಕಾರಿಗಳು, ವಿದ್ಯಾವಂತರು, ಸಮಾಜದ ಹಿತಚಿಂತಕರು ತಾವು ಅಧ್ಯಯನ ಮಾಡಿ ತಿಳಿದುಕೊಂಡು ತರುವಾಯ ಜನಸಾಮಾನ್ಯರಿಗೆ ತಿಳಿಸಿಕೊಡಬೇಕು.

7) ಅನಕ್ಷರತೆ, ವಿದ್ಯಾಹೀನತೆಗಳು ಉಪ್ಪಾರ ಜನಾಂಗವನ್ನು ಪೀಡಿಸುತ್ತಿವೆ. ಕುಟುಂಬದ ಹಿರಿಯರು ವಿದ್ಯೆಯ ಮಹಿಮೆಯನ್ನು ಮನವರಿಕೆ ಮಾಡಿಕೊಂಡು ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಬೇಕು. ಅದಕ್ಕಾಗಿ ಕಷ್ಟ ಬೀಳಬೇಕು, ತ್ಯಾಗ ಮಾಡಬೇಕು. ಸಂಬಳದ ಉದ್ಯೋಗ ಸಿಗಲಿ, ಬಿಡಲಿ; ವಿದ್ಯವಂತರಾಗಬೇಕಾದುದು ನಮ್ಮ ಬದುಕಿನ ಪರಮ ಪ್ರಯೋಜನಗಳಲ್ಲೊಂದು ಎಂಬ ಭಾವನೆ ಬಲಿಯಬೇಕು.

8) ವಿದ್ಯೆಯ ವಿಷಯದಲ್ಲಿ ಉಪ್ಪಾರ ಜನಾಂಗದ ಹೆಣ್ಣುಮಕ್ಕಳಂತೂ ಬಹಳ ಅವಜ್ಞೆಗೆ ತುತ್ತಾಗಿದ್ದಾರೆ. ತಮ್ಮ ಜಡತ್ವವನ್ನು ಕೊಡವಿಕೊಂಡು ಅವರು ಮೇಲೆದ್ದು ಬರಬೇಕು. ತಮ್ಮ ಹಕ್ಕುಬಾಧ್ಯತೆಗಳನ್ನು ಸ್ಥಾಪಿಸಿಕೊಳ್ಳಬೇಕು. ತಾವು ವಿದ್ಯಾವತಿಯರಾಗಿ, ಮುಂದೆ ತಮ್ಮ ಕುಟುಂಬಗಳು ವಿದ್ಯೆಯ ಬೆಳಕಿನಲ್ಲಿ ಸಾಗುವಂತೆ ಮಾಡಬೇಕು.

9) ಉಪ್ಪಾರ ಜನಾಂಗದವರು ತಾವೇ ಸ್ವತಂತ್ರವಾಗಿ ಅಲ್ಲಲ್ಲಿ ವಿದ್ಯಾಸಂಸ್ಥೆಗಳನ್ನು ಕಟ್ಟಬೇಕು. ಯುವಕ ಯುವತಿಯರನ್ನು ಸ್ವಾವಲಂಬಿಗಳನ್ನಾಗಿ ಮಾಡುವಂತಹ ವೃತ್ತಿಶಿಕ್ಷಣ ಶಾಲೆಗಳನ್ನು ತೆರೆಯಬೇಕು. ಗ್ರಾಮೀಣ, ಬಡವಿದ್ಯಾರ್ಥಿಗಳ ಸಲುವಾಗಿ ಸೂಕ್ತವಾದ ಸ್ಥಾನಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಬೇಕು. ಅಲ್ಲಿ ಗ್ರಂಥಾಲಯಗಳನ್ನು ತೆರೆಯಬೇಕು. ವಿದ್ಯಾರ್ಥಿ ವೇತನಗಳನ್ನು ಅರ್ಹರೂ ಪ್ರತಿಭಾವಂತರೂ ಆದ ವಿದ್ಯಾರ್ಥಿಗಳಿಗೆ ನೀಡಬೇಕು. ಉತ್ತಮ ಶ್ರೇಣಿಗಳಲ್ಲಿ ಪಾಸಾದವರಿಗೆ ಬಹುಮಾನಗಳನ್ನು ಪ್ರಕಟಿಸಬೇಕು, ಸನ್ಮಾನಗಳನ್ನು ಯೋಜಿಸಬೇಕು. ವಿದ್ಯಾಭಿವೃದ್ಧಿಗೆ ಪೋಷಕವಾಗುವ ಹೊಸ ಹೊಸ ಕಾರ್ಯಕ್ರಮಗಳನ್ನು ಸಾರೋದ್ಧಾರವಾಗಿ ಸಂಯೋಜಿಸುತ್ತಲೇ ಇರಬೇಕು.

10) ವಿದ್ಯಾವಂತರಾದ ಎಲ್ಲರಿಗೂ ಇಂದು ಸರ್ಕಾರವು ಉದ್ಯೋಗಗಳನ್ನು ನೀಡುವುದು ಸಾಧ್ಯವಿಲ್ಲ. ಉಪ್ಪಾರರು ವಿದ್ಯೆಯಲ್ಲಿ ಹಿಂದುಳಿದಿರುವುದು ಒಂದು ಕಡೆಯಾದರೆ ಮತ್ತೊಂದು ಕಡೆ ಅನೇಕರು ವಿದ್ಯಾವಂತರಾಗಿ, ಪದವೀಧರರಾಗಿ ನಿರುದ್ಯೋಗಕ್ಕೆ ಗುರಿಯಾಗಿ ನಿರಾಶರಾಗಿದ್ದಾರೆ. ಅಂತಹವರು ಸ್ವಾವಲಂಬಿಗಳಾಗುವಂತೆ ಮಾಡುವ ಯಾವುದಾದರೂ ಯೋಜನೆಗಳನ್ನು ಉಪ್ಪಾರ ಸಂಘವು ಕೈಗೆತ್ತಿಕೊಳ್ಳಬೇಕು. ಗ್ರಾಮಾಂತರ ಪ್ರದೇಶಗಳಲ್ಲಿರುವ ಅಸಹಾಯಕ ವೃದ್ಧ ವೃದ್ಧೆಯರಿಗೆ, ವಿಧವೆಯವರಿಗೆ, ಉಪವಾಸ ಬಿದ್ದು ನರಳುತ್ತಿರುವವರಿಗೆ ಸಂಘವು ಏನಾದರೂ ಸಹಾಯ ಒದಗಿಸಿ ಕೊಡಬೇಕು.

11) ಸಂಘಟನೆಗೆ, ಸಮಾಜ ಸೇವೆಗೆ, ಸಮುದಾಯದ ಅಭಿವೃದ್ಧಿಗೆ ಪೋಷಕವಾಗುವಂತೆ ನಾಡಿನ ಎಲ್ಲ ಜಿಲ್ಲಾ ಕೇಂದ್ರಗಳಲ್ಲಿ ಉಪ್ಪಾರ ಜನಾಂಗವು ನಿಬಿಡವಾಗಿರುವ ತಾಲ್ಲೂಕು ಕೇಂದ್ರಗಳಲ್ಲಿ ಮತ್ತು ದೊಡ್ಡ ದೊಡ್ಡ ಗ್ರಾಮಗಳಲ್ಲಿ ಉಪ್ಪಾರ ಸಂಘಗಳನ್ನು ಸ್ಥಾಪಿಸಜೇಕು.

ರಾಜ್ಯಮಟ್ಟದ ಕೇಂದ್ರ ಉಪ್ಪಾರ ಸಂಘವು ಮಿಕ್ಕ ಸಂಘಗಳನ್ನೆಲ್ಲ ಪ್ರೋತ್ಸಾಹಿಸುತ್ತ ಸೂಕ್ತವಾದ ಮಾರ್ಗದರ್ಶನ ನೀಡಬೇಕು. ಸಾಧ್ಯವಾದರೆ ಒಂದಿಷ್ಟು ಆರ್ಥಿಕ ಸಹಾಯವನ್ನೂ ನೀಡಬೇಕು.

12) ತಾವು ಕೈಗೊಳ್ಳಲು ಬಯಸಿರುವ ವಿವಿಧ ಯೋಜನೆಗಳಿಗೆ ಬೇಕಾದ ದ್ರವ್ಯಬಲವನ್ನು ಉಪ್ಪಾರ ಸಂಘಗಳು ಉದಾರಿಗಳಿಂದ ಸಂಗ್ರಹಿಸಿಕೊಳ್ಳಬೇಕು. ಧನಿಕರಾದ ಉಪ್ಪಾರರು ತಮ್ಮ ಆದಾಯದ ಕೊಂಚ ಭಾಗವನ್ನು ಸಮಾಜದ ಅಭಿವೃದ್ಧಿಗಾಗಿ ಎತ್ತಿಟ್ಟು, ಮುಕ್ತ ಹಸ್ತದಿಂದ ನೀಡಬೇಕು. ಅಷ್ಟು ಮಾತ್ರವಲ್ಲದೆ ಉಪ್ಪಾರ ಸಂಘಗಳು, ಕಲ್ಯಾಣ ಮಂಟಪಗಳು, ವ್ಯಾಪಾರ ಮಳಿಗೆಗಳು, ಸಮುದಾಯ ಭವನಗಳು, ದೇವಾಲಯಗಳು, ಶಾಖಾಮಠಗಳು, ಬ್ಯಾಂಕುಗಳು, ಸಹಕಾರ ಸಂಘಗಳು ಮುಂತಾದುವನ್ನು ಸ್ಥಾಪಿಸಿಕೊಂಡು ಅವುಗಳ ಮೂಲಕವೂ ದ್ರವ್ಯ ಸಂಪದವನ್ನು ರೂಢಿಸಿಕೊಳ್ಳಬೇಕು.

13) ಉಪ್ಪಾರ ಜನಾಂಗದಲ್ಲಿ ನಾಟಕಕಲೆ, ಚಿತ್ರರಂಗ, ಸಂಗೀತ, ಸುಗಮಸಂಗೀತ, ಹರಿಕಥೆ, ಚಿತ್ರಕಲೆ, ಶಿಲ್ಪಕಲೆ, ಜನಪದ ಕಲೆಗಳು, ಕ್ರೀಡೆಗಳು ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಬೇಕಾದಷ್ಟು ಸುಪ್ತ ಪ್ರತಿಭೆಗಳಿವೆ. ಅರಳುತ್ತಿರುವ ಪ್ರತಿಭೆಗಳಿಗೆ ಉಪ್ಪಾರ ಸಂಘಸಂಸ್ಥೆಗಳು ಸೂಕ್ತವಾದ ವಾತಾವರಣವನ್ನು ಕಲ್ಪಿಸಬೇಕು. ಸ್ಪರ್ಧೆಗಳನ್ನೇರ್ಪಡಿಸಿ ಬಹುಮಾನಗಳನ್ನು ನೀಡುತ್ತ, ಹಿರಿಯ ಪ್ರತಿಭೆಗಳಿಗೆ ಸನ್ಮಾನಗಳನ್ನು ಮಾಡುತ್ತ ಅವರನ್ನೆಲ್ಲ ಹುರಿದುಂಬಿಸಬೇಕು.

14) ಹೆಚ್ಚಿನ ಸಾಮಾಜಿಕ ಗಣ್ಯತೆ ಸಿಗುತ್ತದೆಂದೋ ಅಥವಾ ಮತ್ತಾವುದೋ ಆಸೆ ಆಮಿಷಗಳಿಗೆ ಬಲಿಯಾಗಿಯೋ ಉಪ್ಪಾರರು ಮತಾಂತರಗೊಳ್ಳುವುದನ್ನಾಗಲಿ, ಹಿಂದೂ ಸಮಾಜದಲ್ಲಿಯೇ ಉಪ್ಪಾರ ಎಂದು ಹೇಳದೆ ಬೇರೊಂದು ಜನಾಂಗದೊಡನೆ ತಮ್ಮನ್ನು ಗುರುತಿಸಿಕೊಳ್ಳುವುದನ್ನಾಗಲಿ ತೊರೆಯಬೇಕು.

15) ಉಪ್ಪಾರ ಜನಾಂಗದ ಯುವಕ ಯುವತಿಯಲ್ಲಿರುವ ಸೋಮಾರಿತನ, ಅಸಹಾಯಕತೆ, ಕೀಳರಿಮೆಗಳನ್ನು ಕಳೆದುಹಾಕಿ ಅವರಲ್ಲಿ ಆತ್ಮವಿಶ್ವಾಸವನ್ನು ತುಂಬಬೇಕು. ಆತ್ಮಹಿತ ಸಾಧನೆಯೊಂದಿಗೆ ಸಮಾಜ ಹಿತಸಾಧನೆಯತ್ತ ಅವರ ಮನಸ್ಸು ಒಲಿಯುವಂತೆ ಮಾಡಬೇಕು. ಅವರು ದುಶ್ಚಟಗಳಿಗೆ ಬಲಿಯಾಗದಂತೆ ಎಚ್ಚರವಹಿಸಬೇಕು. ಇಂದಿನ ಯುವಪೀಳಿಗೆಯು ತಮ್ಮ ಜನಾಂಗದ ಪೂರ್ವಿಕರ ಕಷ್ಟಸಹಿಷ್ಣುತೆ ಹಾಗೂ ಶ್ರಮಜೀವನಗಳನ್ನು ತಮ್ಮದಾಗಿಸಿಕೊಳ್ಳಬೇಕು. ಯುವಕ ಸಂಘ, ಯುವತಿ ಸಂಘ, ಮಹಿಳಾ ಮಂಡಲಿಗಳನ್ನು ಸ್ಥಾಪಿಸಿಕೊಂಡು ತನ್ಮೂಲಕ ನಾಯಕತ್ವದ ಗುಣಗಳನ್ನು ಬೆಳೆಸಿಕೊಳ್ಳಬೇಕು. ಆ ಸಂಘಗಳ ಮೂಲಕ ಜನಜಾಗೃತಿಯುಂಟಾಗಬೇಕು; ಸುಪ್ತ ಪ್ರತಿಭೆಗಳಿಗೆ ಪ್ರೋತ್ಸಾಹ ಲಭಿಸಬೇಕು.

16) ಉಪ್ಪಾರ ಪರಂಪರೆಗೆ ಸೇರಿದ ಸ್ವತಂತ್ರವಾದ ಗುರುಮಠವಿದೆ, ಪ್ರತ್ಯೇಕ ಜಗದ್ಗುರುಗಳಿದ್ದಾರೆ. ಮಿಕ್ಕ ಜನಾಂಗಗಳು ಹೇಗೆ ತಂತಮ್ಮ ಗುರುಗಳನ್ನು ಉತ್ಸವಮೂರ್ತಿಗಳಾಗಿ ಮುಂದಿಟ್ಟುಕೊಂಡು ವಿವಿಧ ದಿಕ್ಕುಗಳಲ್ಲಿ ಪ್ರಗತಿ ಸಾಧಿಸುತ್ತಿವೆಯೋ ಹಾಗೆಯೇ ಉಪ್ಪಾರ ಪ್ರಜೆಗಳೂ ತಮ್ಮ ಜಗದ್ಗುರುಗಳಲ್ಲಿ ಭಕ್ತಿಗೌರವಗಳನ್ನಿಟ್ಟು, ಅವರ ಮಾರ್ಗದರ್ಶನದಲ್ಲಿ ಮುಂದುವರಿಯಬೇಕು. ಈ ಹಿಂದೆ ಬ್ರಹ್ಮೀಭೂತಾರದ ಪೂಜ್ಯ ಲೇಪಾಕ್ಷ ಮಹಾಸ್ವಾಮಿಗಳು ತಮ್ಮ ಜನಾಂಗವನ್ನು ಉದ್ಧರಿಸಲು, ಒಗ್ಗೂಡಿಸಲು ಅಹರ್ನಿಶಿ ಶ್ರಮಿಸಿದರು. ಈಗ ಆ ಪೀಠದಲ್ಲಿರುವ ಸ್ವಾಮಿ ಪುರುಷೋತ್ತಮಾನಂದಪುರಿ ಮಹಾರಾಜರು ಕ್ರಿಯಾಶೀಲ ಚೇತನರಾಗಿದ್ದು, ಆ ಸಮಾಜವನ್ನು ಮುನ್ನಡೆಸಲು ಸಮರ್ಥರಾಗಿದ್ದಾರೆ. ಅವರ ಮಾರ್ಗದರ್ಶನದಲ್ಲಿ ಸಾಗಬೇಕೆಂಬ ಶ್ರದ್ಧೆ ಆ ಸಮಾಜದಲ್ಲಿ ಪಸರಿಸಬೇಕಾಗಿದೆ. ಗುರುಗಳಿಂದ ಲಭ್ಯವಾಗುವ ಉಪದೇಶದಿಂದ ಆ ಜನಾಂಗವು ಹೆಚ್ಚು ಹೆಚ್ಚು ಸುಸಂಸ್ಕೃತವಾಗಬೇಕಾಗಿದೆ.

17) ಉಪ್ಪಾರ ಜನಾಂಗದ ಆಚರಣೆಗಳು, ನಂಬಿಕೆಗಳು, ನಡೆವಳಿಕೆಗಳು, ಹಬ್ಬ ಹರಿದಿನಗಳು-ಮುಂತಾದ ವಿಚಾರಗಳನ್ನು ಕ್ಷೇತ್ರಕಾರ್ಯದ ಮೂಲಕ ಅಧ್ಯಯನ ಮಾಡಿ ಒಂದೆರಡು ಡಾಕ್ಟರೇಟ್ ಪ್ರಬಂಧಗಳನ್ನು ಮಂಡಿಸಬಹುದಾದ ಅವಕಾಶಗಳಿವೆ.

18) ಉಪ್ಪಾರ ಜನಾಂಗದ ಮೂಲಸ್ಥಾನವು ಮಠ, ದೇವಾಲಯಗಳ ಸಹಿತವಾಗಿ ಚಿತ್ರದುರ್ಗ ಜಿಲ್ಲೆಯ ಅದೇ ತಾಲ್ಲೂಕಿನ ಕರ್ಲಹಟ್ಟಿ ಎಂಬ ಗ್ರಾಮದಲ್ಲಿದೆ. ಆದರೆ ಅಲ್ಲಿರುವ ಶ್ರೀ ಚನ್ನಕೇಶವ ದೇವಾಲಯ, ಗುರುಮನೆ, ಗದ್ದುಗೆಗಳು ಬಹಳ ಶಿಥಿಲವಾಗಿಬಿಟ್ಟಿವೆ. ಅವುಗಳ ಪುನರುಜ್ಜೀವನ ಕಾರ್ಯವು ಆದಷ್ಟು ಬೇಗ ಸಂಪನ್ನಗೊಳ್ಳಬೇಕಾಗಿದೆ. ಅದು ಉಪ್ಪಾರ ಜನಾಂಗದ ಪುಣ್ಯಕ್ಷೇತ್ರವಾಗುವಂತೆ ರೂಪುಗೊಳ್ಳಬೇಕಾದ ಅಗತ್ಯವಿದೆ; ಅದು ಆ ಜನಾಂಗದ ಸಂಘಟನೆಗೆ ಕೇಂದ್ರಬಿಂದುವೂ ಆಗಬೇಕಾಗಿದೆ.

19) ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ಮಧುರೆ ಗ್ರಾಮದ ಬಳಿ ಬ್ರಹ್ಮೀಭೂತ ಲೇಪಾಕ್ಷ ಮಹಾಸ್ವಾಮಿಗಳು, ಬ್ರಹ್ಮವಿದ್ಯಾನಗರವೆಂಬ ಹೆಸರಿನಲ್ಲಿ ಪುಣ್ಯಕ್ಷೇತ್ರವೊಂದನ್ನು ಸ್ಥಾಪಿಸಿದ್ದಾರೆ. ಅದೊಂದು ಶಾಖಾಮಠದಂತಿದೆ. ಅದರ ಅಭಿವೃದ್ಧಿಯಾಗಬೇಕು. ಈಗಾಗಲೇ ಸ್ಥಾಪನೆಗೊಂಡಿರುವ ಶಾಖಾಮಠಗಳಿಗೆ ಸದ್ಗುರುಗಳನ್ನು ನೇಮಿಸಿಕೊಳ್ಳಬೇಕು ; ಅದು ನೆರವೇರುವವರೆಗೆ ಬ್ರಹ್ಮಚಾರಿಗಳನ್ನಾದರೂ ಮುಂದಿಟ್ಟುಕೊಂಡು ಅವುಗಳನ್ನು ಸಂರಕ್ಷಿಸಬೇಕು.

20) ಉಪ್ಪಾರರು ತಾವು ಬೆಳೆಯಬೇಕೆಂಬ ಹಂಬಲವನ್ನು ಹೊತ್ತು ಸಾಗುವಾಗ, ತಮ್ಮ ಸುತ್ತಮುತ್ತ ಬದುಕಿಬಾಳುತ್ತಿರುವ ಅನ್ಯಸಮುದಾಯಗಳ ಸಹಕಾರವನ್ನು ಕ್ರೋಡೀಕರಿಸಿ

ಕೊಳ್ಳಬೇಕು. ಸಮರಸವೇ ಜೀವನವೆಂಬ ಆದರ್ಶವನ್ನು ಮುಂದಿಟ್ಟುಕೊಂಡು ಎಲ್ಲರೊಡನೆ ಮಿಳಿತವಾಗಿ ಬಾಳಬೇಕು. ಸದವಕಾಶಗಳು ಒದಗಿಬಂದಾಗ ಮುಕ್ತ ಮನಸ್ಸಿನಿಂದ ಅನ್ಯ ಸಮುದಾಯಗಳಿಗೆ ಸಹಾಯಹಸ್ತವನ್ನು ಚಾಚಬೇಕು. ಉಪ್ಪಾರರ ಬೆಳವಣಿಗೆ ಇತರರಿಗೆ ಕಣ್ಣೆಸುರಾಗದಂತೆ ಎಚ್ಚರದಿಂದ ನಡೆಯಬೇಕು. ಉಪ್ಪಾರ ಸಮಾಜಾಭಿವೃದ್ಧಿಗೆ ಸಹಾಯ ಮಾಡಿದ ಅನ್ಯ ಸಮಾಜಗಳ ಮಹನೀಯರನ್ನು ಉಪ್ಪಾರ ಸಭೆ ಸಮಾರಂಭಗಳಲ್ಲಿ ಮುಕ್ತ ಕಂಠದಿಂದ ಪ್ರಶಂಸಿಸಬೇಕು.

**ಪ್ರಗತಿ ಕಿರಿದಲ್ಲ** : ಇತ್ತೀಚಿನ ದಶಕಗಳಲ್ಲಿ ಉಪ್ಪಾರ ಸಮಾಜವು ಸಾಧಿಸಿರುವ ಪ್ರಗತಿ ಕಿರಿದಾದುದೇನೂ ಅಲ್ಲ. ಚಿನ್ನಪ್ಪರೆಡ್ಡಿ ಆಯೋಗದಿಂದ ಮತ್ತು ಆ ಜನಾಂಗವು ಪ್ರವರ್ಗ 1ಕ್ಕೆ ಸೇರ್ಪಡೆಯಾಗಿರುವುದರಿಂದ ಅನೇಕ ಲಾಭಗಳು ದೊರೆತಿವೆ. ವೈದ್ಯರು, ವಿಜ್ಞಾನಿಗಳು, ಸಂಶೋಧಕರು, ಇಂಜಿನಿಯರ್‌ಗಳು, ಬ್ಯಾಂಕ್ ನೌಕರರು, ವಕೀಲರು, ಪ್ರಾಧ್ಯಾಪಕರು, ಡಾಕ್ಟರೇಟ್ ಪದವೀಧರರು ಮತ್ತು ಸರ್ಕಾರದ ವಿವಿಧ ಹುದ್ದೆಗಳನ್ನು ಅಲಂಕರಿಸಿರುವವರು- ಎಂಬಂತೆ ಸಾವಿರಾರು ಮಂದಿ ಮೇಲೇರಿ ಬಂದಿದ್ದಾರೆ. ಪ್ರಗತಿಪರ ರೈತರಾಗಿ, ಕಂಟ್ರಾಕ್ಟರ್‌ಗಳಾಗಿ, ಕೈಗಾರಿಕೋದ್ಯಮಿಗಳಾಗಿ, ಸಗಟು ವ್ಯಾಪಾರಗಾರರಾಗಿ ಅದೆಷ್ಟೋ ಮಂದಿ ಸಿರಿವಂತಿಕೆಯನ್ನು ಸಂಪಾದಿಸಿಕೊಂಡಿದ್ದಾರೆ. ರಾಜಕೀಯ ಕ್ಷೇತ್ರದ ಸ್ಥಾನಮಾನಗಳಲ್ಲೂ ಅವರು ವಿರಾಜಮಾನರಾಗಿದ್ದಾರೆ. ಅಲ್ಲಲ್ಲಿ ವಿದ್ಯಾಸಂಸ್ಥೆಗಳನ್ನು ನಡೆಸುತ್ತ, ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುತ್ತ, ಸಮುದಾಯಭವನ, ಕಲ್ಯಾಣಮಂಟಪ, ದೇವಮಂದಿರಗಳನ್ನು ನಿರ್ಮಿಸುತ್ತ ಮುಂದಡಿಯಿಡುತ್ತಿದ್ದಾರೆ. ವಿವಿಧ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಪ್ರತಿಭಾವಿಶೇಷಗಳನ್ನು ಮೆರೆಯುತ್ತಿದ್ದಾರೆ.

**ಉಪದೇಶಾಮೃತ ಬೇಕು** : ಆದರೆ ಆ ಜನಾಂಗದ ಪ್ರಜಾಬಾಹುಳ್ಯಕ್ಕೆ ಹೋಲಿಸಿದಾಗ ಈವರೆಗೆ ಸಾಧಿಸಿರುವ ಪ್ರಗತಿ ಸಾಲದೆಂಬ ಕೊರಗು ಆ ಸಮಾಜದ ಮುಖಂಡರನ್ನು ಬಾಧಿಸುತ್ತಿದೆ. ವ್ಯವಸಾಯ, ಪಶುಪಾಲನೆ, ತೋಟಗಾರಿಕೆ, ಮರಗೆಲಸ, ಕಟ್ಟಡ ನಿರ್ಮಾಣ, ರಸ್ತೆ ನಿರ್ಮಾಣ, ಗಾರೆ ಕೆಲಸ, ನೇಕಾರಿಕೆ, ಸುಣ್ಣ ತಯಾರಿಕೆ, ಇದ್ದಿಲು ತಯಾರಿಕೆ, ಇಟ್ಟಿಗೆ ತಯಾರಿಕೆ, ಕಲ್ಲು ಗಣಿಗಾರಿಕೆ, ಜಮೀನುಗಳಲ್ಲಿ ಕೂಲಿಗಾರರಾಗಿ ದುಡಿಯುವುದು- ಈ ಮುಂತಾದ ವೃತ್ತಿಗಳನ್ನು ಅವಲಂಬಿಸಿರುವವರೇ ಹೆಚ್ಚು. ಹೀಗೆ ಬೇರೆ ವೃತ್ತಿಗಳನ್ನು ಅವಲಂಬಿಸಬಾರದೆಂದಲ್ಲ, ಆದರೆ ಅದರಲ್ಲಿ ಅವರ ಬದುಕು ಹಸನಾಗಿ ಸಾಗುವಂತಾಗಬೇಕು ಎಂಬುದು ಮುಖಂಡರ ಕಳಕಳಿ. ತಮಗೆ ಸಿಗುವ ಆದಾಯವನ್ನು ದುಶ್ಚಟಗಳಿಗ ತೆತ್ತು ಹಾಳುಮಾಡದೆ, ಕುಟುಂಬ ಪೋಷಣೆಗೇ ಬಳಸಿಕೊಂಡು ಮಕ್ಕಳನ್ನು ವಿದ್ಯಾವಂತರಾಗುವಂತೆ ಮೇಲೆ ತರಬೇಕು, ಅದಕ್ಕಾಗಿ ಸಮಾಜದ ಸದ್ಗುರುಗಳ ಬೋಧನೆ ಉಪದೇಶಗಳು ಅವರಿಗೆ ಸಿಗುವಂತಾಗಬೇಕು ಎಂಬುದೇ ಸಮಾಜದ

ಹಿರಿಯರ ಬಯಕೆ. ಈ ಎಲ್ಲ ವಿಚಾರಧಾರೆಯೇ ಎರಡನೆಯ ಭಾಗದ ಲೇಖನಗಳಲ್ಲಿ ಅರಳಿಕೊಂಡಿದೆ.

**ಭವಿಷ್ಯಕ್ಕೊಂದು ಆಲೋಕ** : ಉಪ್ಪಾರ ಜನಾಂಗದಲ್ಲಿ ನಾಯಕತ್ವಕ್ಕೆ ಕೊರತೆಯೇನಿಲ್ಲ. ನಾಯಕತ್ವವನ್ನು ವಹಿಸಿಕೊಂಡು ಮುಂದೆ ಬಂದವರನ್ನು ನಿರಾಸೆಗೊಳಿಸದೆ ಅವರ ಸೇವಾಲಾಭವನ್ನು ಸಮಾಜವು ಪಡೆದುಕೊಳ್ಳುವುದು ಇಂದಿನ ಆದ್ಯ ಅಗತ್ಯವಾಗಿದೆ. ಶ್ರೀಮಾನ್ ಹೆಚ್.ಸಿ. ನೀರಾವರಿಯವರು, ರಾಮಪ್ಪನವರ ಉತ್ತರಾಧಿಕಾರಿಗಳಾಗಿ ಆ ಸಮಾಜದ ಕಣ್ಮಣಿಯಾಗಿದ್ದಾರೆ, ಆ ಸಮಾಜದ ಆಲೋಕಸ್ತಂಭವಾಗಿದ್ದಾರೆ. ಶ್ರೀಮಾನ್ ರಾಮಪ್ಪನವರಲ್ಲಿರುವ ಎಲ್ಲ ಸದ್ಗುಣಗಳನ್ನೂ ಮೈಗೂಡಿಸಿಕೊಂಡಿದ್ದಾರೆ; ಸಂಘಟನೆಯಲ್ಲಿ ಅವರೊಡನೆ ಪಾಲ್ಗೊಂಡು ನುರಿತಿದ್ದಾರೆ; 'ಭಗೀರಥ ಸಂಕಲ್ಪ'ವೆಂಬ ಮಾಸಪತ್ರಿಕೆಯ ಮೂಲಕ ಸಮಾಜದ ಸಂಘಟನೆ ಮಾಡುತ್ತಿದ್ದಾರೆ. ಇದೀಗ ಕರ್ನಾಟಕ ಉಪ್ಪಾರ ಸಂಘದ ಅಧ್ಯಕ್ಷರೂ ಆಗಿದ್ದಾರೆ. ಅಂತಹ ನಿಷ್ಕಾಮ ಕರ್ಮಯೋಗಿಗಳ ನೇತೃತ್ವದಲ್ಲಿ ಉಪ್ಪಾರ ಸಮಾಜವು ಸರ್ವತೋಮುಖ ಪ್ರಗತಿಯನ್ನು ಸಾಧಿಸಲೆಂದು ಕುಲದೈವ ಶ್ರೀ ಚನ್ನಕೇಶವಸ್ವಾಮಿಯನ್ನು ಪ್ರಾರ್ಥಿಸುತ್ತೇನೆ.



ಅನುಬಂಧ-1

# ಶ್ರೀ ಡಿ. ಎಸ್. ರಾಮಪ್ಪ ಸನ್ಮಾನ ಸಮಿತಿ

ನಂ. 13, 15ನೆಯ ತಿರುವು, 4ನೆಯ ಹಂತ
ಜೆ.ಪಿ. ನಗರ, ಬೆಂಗಳೂರು - 560 078

## ಸನ್ಮಾನಪತ್ರ

**ದಿನಾಂಕ** :28-09-2002
**ಸ್ಥಳ** : **ದಾವಣಗೆರೆ**

ಸನ್ಮಾನ್ಯರೇ

ಓಂಕಾರ ಮಹಾಸಂಸ್ಥಾನದ ಪೂಜ್ಯ ಶ್ರೀ ಶ್ರೀ ಶಿವಪುರಿ ಮಹಾಸ್ವಾಮೀಜಿ ಅವರ ಸಮ್ಮುಖದಲ್ಲಿ, ಭಗೀರಥ ಪೀಠದ ಉಪ್ಪಾರ ಜಗದ್ಗುರು ಪೂಜ್ಯ ಶ್ರೀ ಶ್ರೀ ಪುರುಷೋತ್ತಮಾನಂದಪುರಿ ಸ್ವಾಮೀಜಿ ಅವರ ಸಾನಿಧ್ಯದಲ್ಲಿ, ದಾವಣಗೆರೆ ಉಪ್ಪಾರ ಜನಾಂಗದ ಶಾಖಾ ಮಠದ ಪೂಜ್ಯ ಶ್ರೀ ಶ್ರೀ ಸಿದ್ಧರಾಮ ಸ್ವಾಮೀಜಿ ಅವರ ಶುಭ ಹಾರೈಕೆಗಳೊಂದಿಗೆ ;

ಮಾಜಿ ಮುಖ್ಯಮಂತ್ರಿಗಳು, ತೆರಿಗೆ ಸುಧಾರಣಾ ಆಯೋಗದ ಅಧ್ಯಕ್ಷರೂ, ಹಿಂದುಳಿದ ವರ್ಗಗಳ ಮಹಾನ್ ನಾಯಕರೂ ಮತ್ತು ಮಹಾಕವಿಗಳೂ ಆದ ಶ್ರೀ ಎಂ. ವೀರಪ್ಪ ಮೊಯಿಲಿ ಅವರ ;

ಕರ್ನಾಟಕ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವಾರ್ತಾ ಸಚಿವರೂ, ಹಿಂದುಳಿದ ವರ್ಗಗಳ ಹಿತರಕ್ಷಕರೂ ಆದ ಶ್ರೀ ಕಾಗೋಡು ತಿಮ್ಮಪ್ಪ ಅವರ ;

ಕರ್ನಾಟಕ ಸರ್ಕಾರದ ಸಹಕಾರ ಸಚಿವರೂ, ಹಿಂದುಳಿದ ವರ್ಗಗಳ ಮಹಾನ್ ನಾಯಕ ಶಿರೋಮಣಿಗಳೂ ವಿಚಾರವಂತರೂ ಆದ ಶ್ರೀ ಹೆಚ್. ವಿಶ್ವನಾಥ್ ಅವರ ;

ಕರ್ನಾಟಕ ಸರ್ಕಾರದ ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವರೂ ಹಾಗೂ ದಾವಣಗೆರೆ ಜಿಲ್ಲೆಯ ಉಸ್ತುವಾರಿ ಸಚಿವರೂ, ಯುವಶಕ್ತಿಯ ಪ್ರತೀಕರೂ ಆದ ಶ್ರೀ ಎಸ್. ಎಸ್. ಮಲ್ಲಿಕಾರ್ಜುನ ಅವರ ಹಾಗೂ ರಾಜ್ಯದ ಮೂಲೆ ಮೂಲೆಗಳಿಂದ ಆಗಮಿಸಿರುವ ಉಪ್ಪಾರ ಬಂಧುಗಳ ಸಮಕ್ಷಮದಲ್ಲಿ, ದಾವಣಗೆರೆ ಜಿಲ್ಲೆಯ ಎಲ್ಲ ನಾಗರಿಕರೂ, ನಿಮ್ಮ ಅಭಿಮಾನಿಗಳೂ, ಹಿರಿಯರೂ, ಕಿರಿಯರೂ, ಅಪಾರ ಬಂಧು-ಮಿತ್ರರು ತಮಗೆ ಹೆಮ್ಮೆ ಹಾಗೂ ಸಂತೋಷದಿಂದ ಅರ್ಪಿಸುತ್ತಿರುವ ಸನ್ಮಾನ ಪತ್ರವಿದು.

ದಿನಾಂಕ 8-9-2002ರಂದು ಅಂದರೆ ಇಂದು ಉಪ್ಪಾರ ಸಮುದಾಯದಲ್ಲೇ ನೆನಪಿಡಬೇಕಾದ ಅಮೃತಘಳಿಗೆಯಾಗಿದೆ. ಕರ್ನಾಟಕದ ರಾಜ್ಯದಲ್ಲಿರುವ ಇಪ್ಪತ್ತೈದು ಲಕ್ಷ ಜನರ ಪ್ರತಿನಿಧಿಗಳಾಗಿ, ಅವರ ಆಸೆ-ಅನಿಸಿಕೆಗಳ ಪ್ರತಿರೂಪವಾಗಿ- ನಾವುಗಳು ತಮಗೆ ಈ ಸನ್ಮಾನವನ್ನು ಮಾಡುತ್ತಿದ್ದೇವೆ. ಸಾವಿರಾರು ವರ್ಷಗಳಿಂದ ಮಾತು ಕಳೆದುಕೊಂಡು ಮೂಕವಾಗಿದ್ದ ನಮ್ಮ ಸಮಾಜಕ್ಕೆ ತಾವು ದೈವಸ್ವರೂಪಿಗಳಾಗಿದ್ದೀರಿ. ತಮ್ಮ ಪ್ರಾಮಾಣಿಕ ದುಡಿಮೆ ಹಾಗೂ ಕರ್ತವ್ಯ ನಿಷ್ಠೆಯಿಂದಾಗಿ ಇಂದು ಇತರ ಎಲ್ಲಾ ಸಮಾಜಗಳ ಮುಂದೆ ನಾವು ತಲೆಯೆತ್ತಿ ನಿಂತಿದ್ದೇವೆ. ಅದಕ್ಕಾಗಿ ನಾವುಗಳು ತಮಗೆ ಚಿರಋಣಿಗಳು.

ಸನ್ಮಾನ್ಯ ಶ್ರೀ ಡಿ. ಎಸ್. ರಾಮಪ್ಪ ಅವರೇ, ನಿಮ್ಮ ಬದುಕೊಂದು ಮಹಾಕಾವ್ಯದಂತೆ. ಸದೊಂಬತ್ತು ಕಾಲ ನಮ್ಮ ಯುವಜನಾಂಗದ ಮೇಲೆ ಪ್ರಭಾವ ಬೀರಬಲ್ಲಷ್ಟು ಶಕ್ತಿಯುತವಾದುದು.

ದಿನಾಂಕ 28-6-1928ರಂದು ಈಗಿನ ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕು ದೇವರಹಳ್ಳಿಯಲ್ಲಿ ಸಿಕ್ಕುಡಿಯಪ್ಪ -ಕರಿಯಮ್ಮ ದಂಪತಿಗಳಿಗೆ ಪ್ರಥಮ ಪುತ್ರರತ್ನರಾಗಿ ತಾವು ಜನಿಸಿದಿರಿ. ಐದು ವರುಷದವರಿದ್ದಾಗಲೇ ತಾಯಿಯನ್ನು, ಎಂಟು ವರುಷದವರಿದ್ದಾಗ ತಂದೆಯನ್ನು ಕಳೆದುಕೊಂಡು ಅನಾಥರಾಗಿದಿರಿ. ಸೋದರಮಾವ ನೀಲಪ್ಪನವರ ಹರಕೆಯಿಂದ ಕುಳೇನೂರಿನಲ್ಲಿ ಪ್ರಾಥಮಿಕ, ಕುಳೇನೂರು ಶಾನುಭೋಗ್ ಸುಬ್ಬರಾಯರ ಪ್ರೋತ್ಸಾಹದಿಂದ ಸಂತೇಬೆನ್ನೂರಿನಲ್ಲಿ ಮಾಧ್ಯಮಿಕ ಹಾಗೂ ಶಿವಮೊಗ್ಗದಲ್ಲಿ ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಿದಿರಿ. ಬಡತನ ನಿಮ್ಮನ್ನು ನಿರುತ್ಸಾಹಿಗಳನ್ನಾಗಿಸಲಿಲ್ಲ. ಅದು ಸರ್ ಎಂ. ವಿಶ್ವೇಶ್ವರಯ್ಯನವರಂತೆ ತಮಗೆ ಛಲ ಹಾಗೂ ಕಷ್ಟ ಸಹಿಷ್ಣುತೆಗಳನ್ನು ಕಲಿಯುವಂತೆ ಮಾಡಿತು. ಅತ್ಯುತ್ತಮ ರೀತಿಯಲ್ಲಿ ಎಸ್.ಎಸ್.ಎಲ್.ಸಿ. ಪಾಸು ಮಾಡಿದನಂತರ ತಾವು ಶಿವಮೊಗ್ಗ ಇಂಟರ್‌ಮೀಡಿಯೆಟ್ ಕಾಲೇಜಿಗೆ ಸೇರಿದಿರಿ. 1947ರ ಮೈಸೂರು ಚಲೋ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ, ಪೋಲಿಸರಿಂದ ಲಾಠಿ ಏಟು ತಿಂದು ಹದಿನಾಲ್ಕು ದಿನಗಳ ಸೆರೆಮನೆವಾಸವನ್ನು ಅನುಭವಿಸಿದಿರಿ. ಯೌವನ ದಲ್ಲೇ ತಾವು ಸ್ವಾತಂತ್ರ್ಯ ಹೋರಾಟಗಾರರಾಗಿ ರೂಪುಗೊಂಡು ಮಹಾತ್ಮ ಗಾಂಧೀಜಿಯವರ ಆದರ್ಶಗಳನ್ನು ಪಾಲಿಸಲು ನಿರ್ಧರಿಸಿದುದು ನಮಗೆಲ್ಲಾ ಹೆಮ್ಮೆಯೆನಿಸಿದೆ.

ಇಂಟರ್‌ಮೀಡಿಯಟ್ ಶಿಕ್ಷಣದನಂತರ ಹಿತೈಷಿಗಳ ಸಲಹೆಯ ಮೇರೆಗೆ ಕುಂಸಿ ಗ್ರಾಮದ ಶ್ರೀ ಬಾಬು ಹುಚ್ಚಣ್ಣನವರ ನಾಲ್ಕನೆಯ ಮಗಳು ಸಣ್ಣಮ್ಮನವರೊಡನೆ ತಮ್ಮ ವಿವಾಹ ಜರುಗಿತು. ಆ ತನಕ ಗಾಳಿಗೊಡ್ಡಿದ ಸೊಡರಿನಂತಿದ್ದ ತಮ್ಮ ಬದುಕಿಗೆ ಮಹತ್ವದ ಆಸರೆ ದೊರೆಯಿತು. ತಾವು ಯಾವ ಕಾರಣಕ್ಕೂ ಅಲ್ಪತೃಪ್ತರಾಗದೆ ಬೆಂಗಳೂರು ವಿಶ್ವೇಶ್ವರಯ್ಯ ತಾಂತ್ರಿಕ ಕಾಲೇಜಿನಲ್ಲಿ ಬಿ.ಇ., ವ್ಯಾಸಂಗಕ್ಕೆ ಸೇರಿದಿರಿ. 'ವಿವಾಹವು ವಿದ್ಯೆಗೆ ಶತ್ರು' ಎಂಬ ಮಾತನ್ನು ಸುಳ್ಳಾಗಿಸಿದಿರಿ. ಇಬ್ಬರು ಮಕ್ಕಳ ತಂದೆಯಾದರೂ ವ್ಯಾಸಂಗಕ್ಕೆ ಚ್ಯುತಿ ಬಾರದಂತೆ ಶ್ರದ್ಧೆವಹಿಸಿ ಬಿ.ಇ., ಪದವಿ ಪಡೆದಿದ್ದು ವಿಶೇಷವಾಗಿ

ದಾಖಲಿಸಬೇಕಾದ ಅಂಶ. ಉಪ್ಪಾರ ಸಮುದಾಯದಲ್ಲಿ ಬಿ.ಇ., ಪದವಿ ಪಡೆದವರಲ್ಲಿ ತಾವು ದ್ವಿತೀಯರೆಂಬುದನ್ನು ನಾವು ಮರೆಯುವಂತಿಲ್ಲ.

1954ರಲ್ಲಿ ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆಯಲ್ಲಿ ಸೂಪರ್ ವೈಸರಾಗಿ ಕೆಲಸಕ್ಕೆ ಸೇರಿ ಅದೇ ಇಲಾಖೆಯಲ್ಲಿ ಕಾರ್ಯಪಾಲಕ ಇಂಜನಿಯರ್ ಆಗಿ ನಿವೃತ್ತ ರಾಗಿರುವಿರಿ. ತೀರ್ಥಹಳ್ಳಿ, ನರಸಿಂಹರಾಜಪುರ, ವಿರಾಜಪೇಟೆ, ಸಿರಸಿ, ಸಿದ್ದಾಪುರ, ಮುಂಡಗೋಡು, ಕುಷ್ಟಗಿ, ಹೊಸಪೇಟೆ, ಹೂವಿನ ಹಡಗಲಿ, ಹಾಗೂ ಸಾಗರ ಮೊದಲಾದೆಡೆ ಸರ್ಕಾರಿ ನೌಕರರಾಗಿ ತಾವು ಸಲ್ಲಿಸಿದ ಅನುಪಮ ಸೇವೆ ಇಂದಿಗೂ ಆ ಜನತೆಯ ಸ್ಮೃತಿ ಪಟಲದಲ್ಲಿದೆ. ಪ್ರಾಮಾಣಿಕತೆ, ನಿಸ್ಪೃಹತೆ, ಕರ್ತವ್ಯನಿಷ್ಠೆ, ಜನಪರ ಕಾಳಜಿಗಳು ತಮ್ಮ ಸರ್ಕಾರಿ ಸೇವೆಯ ವಿಶಿಷ್ಟ ಲಕ್ಷಣಗಳಾಗಿದ್ದುವು.

ಉಪ್ಪಾರ ಸಮುದಾಯದಲ್ಲಿ ತಾವು ಉಂಟು ಮಾಡಿದ ಚೈತನ್ಯದಿಂದಾಗಿ ಸದಾಕಾಲ ನಮ್ಮೆಲ್ಲರಿಗೆ ಪ್ರಿಯರಾಗಿದ್ದೀರಿ. ಸರ್ಕಾರಿಸೇವೆಯಲ್ಲಿದ್ದಾಗಲೂ ತಾವೇ ಹಳ್ಳಿಯ ಬಡ ಉಪ್ಪಾರರನ್ನು ಹುಡುಕಿಕೊಂಡು ಹೋಗುತ್ತಿದ್ದಿರಿ. ತಮ್ಮ ಸಂಪರ್ಕಕ್ಕೆ ಬಂದ ವಿದ್ಯಾರ್ಥಿಗಳಿಗೆ ಹತ್ತಾರು ರೀತಿ ಸಹಾಯ ಮಾಡುತ್ತಿದ್ದಿರಿ.

1983ರಲ್ಲಿ ಸಾಗರದಲ್ಲಿ ಲೋಕೋಪಯೋಗಿ ಇಲಾಖೆಯಿಂದ ತಾವು ನಿವೃತ್ತರಾದ ನಂತರ ತಮ್ಮನ್ನು ಪೂರ್ಣವಾಗಿ ನಮ್ಮ ಸಮಾಜಕ್ಕೆ ತೆತ್ತುಕೊಂಡುದು ನಮ್ಮಗಳ ಮಹಾಭಾಗ್ಯ. ತಾವು ಶಿವಮೊಗ್ಗ ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದಾಗ ಒಂದು ಲಕ್ಷ ರೂಪಾಯಿ ವೆಚ್ಚದೊಡನೆ ಅಲ್ಲಿನ ವಿದ್ಯಾರ್ಥಿ ನಿಲಯಕ್ಕೆ, ಭೋಜನ ಶಾಲೆ ಹಾಗೂ ಶೌಚಾಲಯ ವ್ಯವಸ್ಥೆ ಮಾಡಿರುವುದನ್ನು ಮರೆಯುವಂತಿಲ್ಲ.

1984ರಿಂದ 1995ರವರೆಗೆ ತಾವು ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷರಾಗಿದ್ದುದು ಈ ಸಮಾಜದ ಮಹಾಪುಣ್ಯ. ಉಪ್ಪಾರ ಸಮುದಾಯದ ಜಗದ್ಗುರು ಪೂಜ್ಯ ಶ್ರೀ ಶ್ರೀ ಶ್ರೀ ಬ್ರ. ಲೇಪಾಕ್ಷ ಮಹಾಸ್ವಾಮೀಜಿಗಳ ದಿವ್ಯ ಮಾರ್ಗದರ್ಶನದಲ್ಲಿ ಆ ಹನ್ನೊಂದು ವರ್ಷಗಳ ಕಾಲ ನಡೆದ ಕೆಲಸಗಳ ಪಟ್ಟಿ ಮಾಡುತ್ತಾ ಹೋದರೆ ಅದೊಂದು ದೊಡ್ಡ ಗ್ರಂಥವೇ ಆಗುತ್ತದೆ. ಬೆಂಗಳೂರು ನಗರದಲ್ಲಿ ಉಪ್ಪಾರ ಸಂಘದ ಕಚೇರಿ ಪ್ರಾರಂಭ, ರಾಜ್ಯದ ತೊಂಬತ್ತಾರು ತಾಲ್ಲೂಕುಗಳಲ್ಲಿರುವ ಉಪ್ಪಾರ ಜನಾಂಗದ ಬಗ್ಗೆ ವೈಜ್ಞಾನಿಕ ಮಾಹಿತಿ ಸಂಗ್ರಹ, ಭಗೀರಥ ಉಪ್ಪಾರ ಧಾರ್ಮಿಕ ಟ್ರಸ್ಟ್ ಸ್ಥಾಪನೆ, ಉಪ್ಪಾರ ಸಂಘಕ್ಕೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಮೂಲಕ ಅರ್ಧ ಎಕರೆ ಜಮೀನು ಮಂಜೂರಾತಿ, ಮಂಜೂರಾದ ನಿವೇಶನದಲ್ಲಿ ವಿದ್ಯಾರ್ಥಿನಿಲಯ ಹಾಗೂ ಪೂಜ್ಯಶ್ರೀಗಳವರ ವಾಸ್ತವ್ಯಕ್ಕೆ ಬೇಕಾದ ಕಟ್ಟಡ - ಹೀಗೆ ನೂರಾರು ವರ್ಷಗಳಿಂದ ನಮ್ಮ ಜನ ಬಯಸುತ್ತಿದ್ದುದನ್ನೆಲ್ಲಾ ತಾವು ಪೂರ್ಣಗೊಳಿಸಿಕೊಟ್ಟುದು, ನಮ್ಮ ಭಾಗ್ಯ ವಿಶೇಷವೇ ಸರಿ.

ಪೂಜ್ಯ ಶ್ರೀ ಶ್ರೀ ಶ್ರೀ ಬ್ರ. ಲೇಪಾಕ್ಷ ಸ್ವಾಮೀಜಿ ಅವರ ಆಶೀರ್ವಾದದೊಂದಿಗೆ ದಾವಣಗೆರೆಯಲ್ಲಿ ಶಾಖಾಮಠ ಪ್ರಾರಂಭಿಸಿದ ಕೀರ್ತಿಗೆ ತಾವು ಭಾಜನರಾಗಿದ್ದೀರಿ. ಅಲ್ಲಿ ಸುಸಜ್ಜಿತವಾದ ವಿದ್ಯಾರ್ಥಿನಿಲಯವಿದ್ದು ನೂರಾರು ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ದಾವಣಗೆರೆಯಲ್ಲಿ ಉಪ್ಪಾರ ಧಾರ್ಮಿಕ ಟ್ರಸ್ಟ್‌ಗೆ ಆಸ್ತಿ ಕೂಡಿಸಿದ ಕೀರ್ತಿ ತಮ್ಮದು. ನಮ್ಮ ಸಮಾಜದ ಜಗದ್ಗುರುಗಳಾದ ಭಗೀರಥ ಪೀಠದ ಪೂಜ್ಯ ಶ್ರೀ ಶ್ರೀ ಪುರುಷೋತ್ತಮಾ ನಂದಪುರಿ ಸ್ವಾಮೀಜಿ ಅವರ ಪಟ್ಟಾಭಿಷೇಕವೂ ಅದ್ದೂರಿಯಿಂದ ಜರುಗಲು ತಾವು ಪ್ರೇರಕ ಶಕ್ತಿಯಾಗಿದಿರಿ.

ಕೊಪ್ಪಳ ಜಿಲ್ಲೆ ಕುಷ್ಟಗಿಯಲ್ಲಿ ನಡೆದ ರಾಜ್ಯಮಟ್ಟದ ಭಗೀರಥ ಜಯಂತಿಯಲ್ಲಿ ತಮ್ಮ ದುಡಿಮೆ ಅನನ್ಯವಾದುದು.

ವಿಶ್ರಾಂತ ಜೀವನವನ್ನು ದಾವಣಗೆರೆಯಲ್ಲಿ ಕಳೆಯುತ್ತಿರುವ ತಮಗೆ ಕರ್ತವ್ಯಕ್ಕಿಂತ ದೊಡ್ಡ ದೇವರಿಲ್ಲ. ತಮ್ಮ ಬದುಕು ತೆರೆದ ಪುಸ್ತಕವಿದ್ದಂತೆ. ಆ ಪುಸ್ತಕದಲ್ಲಿ ಎಲ್ಲೂ ಕಪ್ಪು ಚುಕ್ಕೆಗಳಿಲ್ಲ. ಜಗತ್ತಿನ ಮಹಾಪುರುಷರ ಜೀವನದಂತೆ ಅಲ್ಲಿರುವುದೆಲ್ಲಾ ಬೋಧಪ್ರದವಾದ ವಿಚಾರಗಳು. ವ್ಯಕ್ತಿಯು ಸ್ವಂತ ಪ್ರಯತ್ನದಿಂದ ಹೇಗೆ ಮೇಲೇರಬಹುದು, ಹಾಗೆ ಮೇಲೇರಿದ ವ್ಯಕ್ತಿ ಸ್ವಾರ್ಥಿಯಾಗದೆ, ಸಿನಿಕನಾಗದೆ ತಾನು ಹುಟ್ಟಿದ ಸಮಾಜದ ಋಣ ತೀರಿಸಲು ಹೇಗೆ ದುಡಿಯಬಹುದು ಎಂಬುದಕ್ಕೆ ತಾವೊಂದು ಶ್ರೇಷ್ಠ ಮಾದರಿಯಾಗಿದ್ದೀರಿ.

ಎಪ್ಪತ್ತೈದು ವರ್ಷಗಳ ಈ ಸುದೀರ್ಘ ಜೀವನದಲ್ಲಿ ತಮ್ಮ ಬಾಳ ಸಂಗಾತಿಯಾಗಿ ಐದು ದಶಕಗಳನ್ನು ಕಳೆದಿರುವ ಶ್ರೀಮತಿ ಸಣ್ಣಮ್ಮನವರನ್ನು ನಾವೆಲ್ಲರೂ ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ. ಇಡೀ ಸಂಸಾರದ ಹೊಣೆಯನ್ನು ತಾವೊಬ್ಬರೆ ಹೊತ್ತುಕೊಂಡು ತಮ್ಮನ್ನು ಸಮಾಜಸೇವೆಗೆ ಅರ್ಪಿಸಿದ ಮಹಾತ್ಯಾಗಿ ಅವರು.

ಸನ್ಮಾನ್ಯರೇ, ತಮ್ಮ ಕನಸು ಬಹು ದೊಡ್ಡದು, ಉಪ್ಪಾರ ಸಮುದಾಯಕ್ಕೆ ಆಗಬೇಕಾದ ಕೆಲಸಗಳು ನೂರಾರು. ಗ್ರಾಮೀಣ ಪ್ರದೇಶದ ಉಪ್ಪಾರರು ಇನ್ನೂ ಅಸಂಘಟಿತರಾಗಿದ್ದಾರೆ, ಅವರಿಗೆ ಯಾವುದೇ ಸೌಲಭ್ಯ ದೊರೆಯುತ್ತಿಲ್ಲ, ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರಗಳಲ್ಲಿ ಈ ಜನಾಂಗಕ್ಕೆ ಸಕಾಲಿಕ ಸವಲತ್ತು ದೊರೆಯುತ್ತಿಲ್ಲ, ಜನಸಂಖ್ಯಾ ಬಾಹುಳ್ಯವಿದ್ದಾಗಿಯೂ ರಾಜಕೀಯ ಕ್ಷೇತ್ರದಲ್ಲಿ ನ್ಯಾಯೋಚಿತವಾದ ಸ್ಥಾನಮಾನ ದೊರಕಿಲ್ಲ ಎಂಬ ಕೊರಗು ನಿಮ್ಮನ್ನು ಬಾಧಿಸುತ್ತಿದೆ. ತಾವು ಹಾಕಿಕೊಟ್ಟ ಮಾರ್ಗದಲ್ಲಿ ಕಾಯೇನವಾಚಾಮನಸಾ ದುಡಿದು ನಿಮ್ಮ ಕನಸುಗಳನ್ನು ಪೂರ್ಣಗೊಳಿಸುತ್ತೇವೆ ಎಂದು ಈ ಶುಭಸಂದರ್ಭದಲ್ಲಿ ರಾಜ್ಯದ ಸಮಸ್ತ ಉಪ್ಪಾರ ಸಮುದಾಯದ ಪರವಾಗಿ ಅರಿಕೆ ಮಾಡಿಕೊಳ್ಳುತ್ತೇವೆ.

ಮಾನ್ಯರೇ, ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ತಾವು ಮಾಡಿದ ಸೇವೆಗೆ ನಾವು ಏನು ತಾನೇ ಕೊಡಲು ಸಾಧ್ಯ! ನಿಮ್ಮ ಆದರ್ಶಗಳೇ ನಮ್ಮ ಗುರಿಗಳು. ನಿಮ್ಮ ಹೆಜ್ಜೆ ಗುರುತುಗಳಲ್ಲಿಯೇ ನಾವು ಅಡಿಯಿಡುತ್ತ ನಮ್ಮ ಜನಾಂಗದ ಸರ್ವತೋಮುಖ ಏಳಿಗೆಗೆ ಶ್ರಮಿಸುತ್ತೇವೆ. ತಮ್ಮ ಕುಟುಂಬಕ್ಕೆ ಪರಮಾತ್ಮ ಆಯುರಾರೋಗ್ಯ, ಸಂಪತ್ತುಗಳನ್ನು ಕೊಡಲಿ, ತಾವು ದಂಪತಿಗಳು ಶತಾಯುಷಿಗಳಾಗಲಿ ಎಂದು ದೇವರಲ್ಲಿ ಪ್ರಾರ್ಥಿಸಿ, ಈ ಸನ್ಮಾನ ಪತ್ರವನ್ನು ತಮಗೆ ಸಮರ್ಪಿಸುತ್ತಿದ್ದೇವೆ.

**ವಿಶ್ವನಾಥ್**

**ಹೆಚ್. ಸಿ. ನೀರಾವರಿ**

ಕಾರ್ಯದರ್ಶಿ

ಅಧ್ಯಕ್ಷರು

ಅನುಬಂಧ-2

# ಜೀವನದ ಮುಖ್ಯಘಟನೆಗಳು

| | | |
|---|---|---|
| ಹೆಸರು | : | ಡಿ.ಎಸ್. ರಾಮಪ್ಪ |
| ಜನನ | : | 28-6-1928 |
| ಜನ್ಮಸ್ಥಳ | : | ದೇವರಹಳ್ಳಿ, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ |
| ತಂದೆ | : | ದೇವರಹಳ್ಳಿ ಸಿಕ್ಕುಡಿಯಪ್ಪ |
| ತಾಯಿ | : | ಕರಿಯಮ್ಮ |
| ಪ್ರಾಥಮಿಕ ವಿದ್ಯಾಭ್ಯಾಸ | : | ಕುಳೇನೂರು, ಚನ್ನಗಿರಿ ತಾಲ್ಲೂಕು, 1935 |
| ಪ್ರೌಢಶಾಲೆ | : | ಶಿವಮೊಗ್ಗ, 1946 |
| ಇಂಟರ್‌ಮಿಡಿಯಟ್ | : | ಸಹ್ಯಾದ್ರಿ ಕಾಲೇಜು, ಶಿವಮೊಗ್ಗ : 1948 |
| ಸ್ವಾತಂತ್ರ್ಯ ಚಳವಳಿ | : | 'ಮೈಸೂರು ಚಲೋ ಚಳವಳಿ'ಯಲ್ಲಿ ಸಕ್ರಿಯ ಪಾಲು; ಹದಿನಾಲ್ಕು ದಿನಗಳ ಸೆರೆವಾಸ, 1947 |
| ಉನ್ನತ ಶಿಕ್ಷಣ | : | ಬೆಂಗಳೂರು ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜಿನಲ್ಲಿ ಬಿ.ಇ. (ಸಿವಿಲ್) ವ್ಯಾಸಂಗಕ್ಕೆ ಸೇರ್ಪಡೆ : 1949 |
| ವಿವಾಹ | : | ಶಿವಮೊಗ್ಗ ತಾಲ್ಲೂಕಿನ ಕುಂಸಿ ಗ್ರಾಮದ ಶ್ರೀ ಬಾಬು ಹುಚ್ಚಣ್ಣನವರ ಮಗಳು ಸಣ್ಣಮ್ಮನವರೊಡನೆ ವಿವಾಹ : ಮೇ 1950 |
| ಮಕ್ಕಳು | : | ಡಿ.ಆರ್. ಯೋಗೇಂದ್ರ : 31-1-1954<br>ವಿಜಯಲಕ್ಷ್ಮಿ : 14-10-1957<br>ಉಷಾದೇವಿ : 8-7-1959<br>ಕೇಶವಮೂರ್ತಿ : 2-10-1961 |
| ಪದವಿಗಳಿಕೆ | : | ಉಪ್ಪಾರ ಸಮುದಾಯದಲ್ಲಿ ಬಿ.ಇ. ಪದವಿ ಪಡೆದವರಲ್ಲಿ ದ್ವಿತೀಯರೆಂಬ ಹಿರಿಮೆ : 1953 |

## ಸರ್ಕಾರಿ ಸೇವೆ

- ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆಯ ಮೂಲಕ ತೀರ್ಥಹಳ್ಳಿಯಲ್ಲಿ ಸೂಪರ್‌ವೈಸರ್ ಆಗಿ ಕೆಲಸಕ್ಕೆ ಸೇರ್ಪಡೆ: 29-1-1954
- ತೀರ್ಥಹಳ್ಳಿಯಿಂದ ನರಸಿಂಹರಾಜ ಪುರಕ್ಕೆ ವರ್ಗಾವಣೆ : ಜೂನ್ 1957
- ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಬಡ್ತಿ : ಫೆಬ್ರವರಿ 1960
- ವಿರಾಜಪೇಟೆಗೆ ವರ್ಗ : ಜೂನ್ 1965
- ಕುಮುಟಾದ ರಾಷ್ಟ್ರೀಯ ಹೆದ್ದಾರಿ ವಿಭಾಗಕ್ಕೆ ವರ್ಗ : ಮೇ 1968
- ಕುಮುಟಾದಿಂದ ಮುಂಡಗೋಡು ವಿಭಾಗಕ್ಕೆ ವರ್ಗ : ಅಕ್ಟೋಬರ್ 1968
- ರಾಯಚೂರು ಜಿಲ್ಲೆ ಕುಷ್ಟಗಿಯಲ್ಲಿ ಸೇವೆ : ಜೂನ್ 1972
- ಹೊಸಪೇಟೆಯಲ್ಲಿ ಸೇವೆ : ಜೂನ್ 1975
- ಹೂವಿನ ಹಡಗಲಿಯಲ್ಲಿ ಸೇವೆ : 1978
- ಹೂವಿನ ಹಡಗಲಿಯಿಂದ ಶಿವಮೊಗ್ಗಕ್ಕೆ ಕಾರ್ಯಪಾಲಕ ಇಂಜಿನಿಯರ್ ಆಗಿ ಬಡ್ತಿ : ಅಕ್ಟೋಬರ್ 1980
- ಸಾಗರದಲ್ಲಿ ಕಾರ್ಯಪಾಲಕ ಇಂಜಿನಿಯರ್ ಆಗಿ ಸರ್ಕಾರಿ ಸೇವೆಯಿಂದ ನಿವೃತ್ತಿ : 30-6-1983

## ಸಾರ್ವಜನಿಕ ಸೇವೆ

- ಶಿವಮೊಗ್ಗ ಜಿಲ್ಲಾ ಉಪ್ಪಾರ ಸಂಘದ ಅಧ್ಯಕ್ಷರು : ಒಂದು ಲಕ್ಷ ರೂ. ವೆಚ್ಚ ಮಾಡಿ ಸಂಘದ ಆಶ್ರಯದಲ್ಲಿನ ವಿದ್ಯಾರ್ಥಿ ನಿಲಯಕ್ಕೆ ಭೋಜನಶಾಲೆ ಹಾಗೂ ಶೌಚಾಲಯ ವ್ಯವಸ್ಥೆ : 1983
- ರಾಜ್ಯ ಉಪ್ಪಾರ ಸಂಘದ ಅಧ್ಯಕ್ಷ ಸ್ಥಾನ : ಜೂನ್ 1984
- ರಾಜಧಾನಿ ಬೆಂಗಳೂರಿನಲ್ಲಿ ಉಪ್ಪಾರ ಸಂಘದ ಕಚೇರಿ ಪ್ರಾರಂಭ : 1984
- ರಾಜ್ಯದ 21 ಜಿಲ್ಲೆಗಳ 96 ತಾಲ್ಲೂಕುಗಳಲ್ಲಿರುವ ಉಪ್ಪಾರ ಜನಾಂಗದ ಸಂಘಟನೆ : ಜೂನ್ 1986
- ಬೆಂಗಳೂರಿನಲ್ಲಿ ರಾಜ್ಯಮಟ್ಟದ ಬೃಹತ್ ಉಪ್ಪಾರ ಸಮ್ಮೇಳನ : 1986
- ಉಪ್ಪಾರ ಸಮುದಾಯ ಸಂಘಟನೆಗೆ ಅನುಕೂಲವಾಗುವಂತೆ ಐದು ಶಾಖಾ ಮಠಗಳ ಸ್ಥಾಪನೆಗೆ ನಿರ್ಧಾರ : 1987
- ಭಗೀರಥ ಉಪ್ಪಾರ ಧಾರ್ಮಿಕ ಟ್ರಸ್ಟ್ ಸ್ಥಾಪನೆ : 1987

- ರಾಜ್ಯ ಉಪ್ಪಾರ ಸಂಘಕ್ಕೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಮೂಲಕ ಅರ್ಧ ಎಕರೆ ಜಮೀನು ಮಂಜೂರಾತಿ : 1991
- ಬೆಂಗಳೂರಿನಲ್ಲಿ ಮಂಜೂರಾದ ನಿವೇಶನದಲ್ಲಿ ವಿದ್ಯಾರ್ಥಿ ನಿಲಯ ಹಾಗೂ ಸ್ವಾಮೀಜಿಯವರ ವಾಸ್ತವ್ಯಕ್ಕೆ ಬೇಕಾದ ಕಟ್ಟಡ ನಿರ್ಮಾಣ : 1991
- ಹನ್ನೊಂದು ವರ್ಷ ಉಪ್ಪಾರ ಸಂಘದ ಅಧ್ಯಕ್ಷರಾಗಿ ಉಪ್ಪಾರರ ಸಂಘಟನೆಗೆ ದುಡಿಮೆ : 1984-1995
- ಕ್ಷೇತ್ರಕಾರ್ಯದ ಮೂಲಕ ಉಪ್ಪಾರ ಸಮುದಾಯದ ಸಮಗ್ರ ಮಾಹಿತಿ ಸಂಗ್ರಹ : 1984-1995
- ದಾವಣಗೆರೆಯಲ್ಲಿ ಶಾಖಾಮಠದ ಸ್ಥಾಪನೆ : 1996
- ದಾವಣಗೆರೆಯ ಉಪ್ಪಾರ ಧಾರ್ಮಿಕ ಟ್ರಸ್ಟ್‌ಗೆ 3-16 ಗುಂಟೆ ಜಮೀನು ಖರೀದಿ : 1996
- ದಾವಣಗೆರೆಯಲ್ಲಿನ ಟ್ರಸ್ಟ್‌ನ ಕೆಲಸಕ್ಕೆ ಹೊಸ ಟೆಂಪೋ ಟ್ರಾಕ್ಸ್ ವಾಹನ ಖರೀದಿ : 1998
- ಬೆಂಗಳೂರಿನಲ್ಲಿ ಸಂಘಕ್ಕೆ ಮಂಜೂರಾದ ನಿವೇಶನಕ್ಕೆ ಪ್ರತಿ ವರ್ಷ ಕಟ್ಟಬೇಕಾದ ಕಂತಿನ ಹಣದ ಠೇವಣಿ : 1997
- ಕೊಪ್ಪಳಜಿಲ್ಲೆ ಕುಷ್ಟಗಿಯಲ್ಲಿ ರಾಜ್ಯಮಟ್ಟದ ಭಗೀರಥ ಜಯಂತಿ ಆಚರಣೆ: 1999
- ಉಪ್ಪಾರ ಜನಾಂಗದ ಜಗದ್ಗುರುಗಳಾದ ಶ್ರೀ ಶ್ರೀ ಪುರುಷೋತ್ತಮಾನಂದಪುರಿ ಮಹಾಸ್ವಾಮೀಜಿಗಳವರ ಪಟ್ಟಾಭಿಷೇಕ ಮಹೋತ್ಸವಕ್ಕೆ ದುಡಿಮೆ : 2000
- 'ಉಪ್ಪಾರ ಹಣತೆ' ಎಂಬ ಅಭಿನಂದನ ಗ್ರಂಥಸ್ವೀಕಾರ : ಸೆಪ್ಟೆಂಬರ್ 2002
- ದಾವಣಗೆರೆಯಲ್ಲಿ ವಿಶ್ರಾಂತ ಜೀವನ; ಉಪ್ಪಾರ ಸಮುದಾಯದ ಏಳಿಗೆಗೆ ಮುಡಿಪಾಗಿರುವ ಚೇತನ.

ಅನುಬಂಧ-3

## ಉಪ್ಪಾರ ಹಣತೆ ಅಭಿನಂದನ ಗ್ರಂಥಕ್ಕೆ ಜಿಲ್ಲಾವಾರು ಮಾಹಿತಿ ಸಂಗ್ರಹದಲ್ಲಿ ಸಿದ್ಧಮಾಡಿದ ಪ್ರಶ್ನಾವಳಿ

- ಜಿಲ್ಲೆಯ ಹೆಸರು.
- ಜಿಲ್ಲೆಯಲ್ಲಿನ ತಾಲ್ಲೂಕುಗಳು.
- ಜಿಲ್ಲೆಯ ಒಟ್ಟು ಜನಸಂಖ್ಯೆ.
- ಜಿಲ್ಲೆಯಲ್ಲಿನ ಉಪ್ಪಾರ ಜನಸಂಖ್ಯೆ.
- ಜಿಲ್ಲೆಯಲ್ಲಿ ಉಪ್ಪಾರರು ಹೆಚ್ಚಿರುವ ತಾಲ್ಲೂಕು, ಹೋಬಳಿ ಹಾಗು ಗ್ರಾಮ.
- ಗ್ರಾಮದ ಉಪ್ಪಾರ ಕುಟುಂಬದ ವಿವರ-ಯಜಮಾನನ ಹೆಸರು-ಕುಟುಂಬದಲ್ಲಿರುವವರ ವಿವರ. ಗಂಡಸರು, ಹೆಂಗಸರು ಹಾಗೂ ಮಕ್ಕಳು.
- ಗ್ರಾಮದ ಉಪ್ಪಾರ ಕುಟುಂಬದ ಆರ್ಥಿಕ ಸ್ಥಿತಿ, ದೊರಕಿರುವ ಸವಲತ್ತುಗಳು ಹಾಗೂ ಅವರಿಗೆ ಅಗತ್ಯವಾಗಿ ಆಗಬೇಕಾದ ಅಭಿವೃದ್ಧಿ ಕೆಲಸಗಳು.
- ಜಿಲ್ಲೆಯಲ್ಲಿ ಉಪ್ಪಾರರು ಕೈಗೊಂಡಿರುವ ಪ್ರಮುಖ ವೃತ್ತಿ.
- ಕುಟುಂಬದಲ್ಲಿರುವವರ ಸಾಕ್ಷರತಾ ಪ್ರಮಾಣ, ಸರ್ಕಾರಿ ಉದ್ಯೋಗವೇ ಅಥವಾ ಖಾಸಗಿ ಉದ್ಯೋಗವೇ, ವ್ಯಾಪಾರ, ಕೃಷಿ ಹಾಗು ಇತರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ರೀತಿ.
- ಉಪ್ಪಾರ ಕುಟುಂಬದಲ್ಲಿರುವ ಸೃಜನಶೀಲ ಪ್ರತಿಭೆಗಳು ಹಾಗೂ ಅವರಿಗೆ ದೊರೆಯುತ್ತಿರುವ ಪ್ರೋತ್ಸಾಹ.
- ಗ್ರಾಮದಲ್ಲಿ ಉಪ್ಪಾರರ ಸಾಮಾಜಿಕ ಸ್ಥಾನಮಾನ.
- ಜಿಲ್ಲೆಯಲ್ಲಿ ಉಪ್ಪಾರ ಸಂಘವಿದೆಯೆ ? ಅದರ ಅಧ್ಯಕ್ಷರು, ಹಿಂದೆ ಇದ್ದ ಅಧ್ಯಕ್ಷರ ವಿವರ.
- ಉಪ್ಪಾರರು ಕನ್ನಡ ಬಿಟ್ಟು ಇತರ ಭಾಷೆಗಳನ್ನು ಬಳಸುತ್ತಾರೆಯೆ ?
- ಉಪ್ಪಾರ ಸಮುದಾಯದಲ್ಲಿ ಪ್ರಚಲಿತವಿರುವ ಉಪನಾಮಗಳೇನು ? (Sir names)
- ಉಪ್ಪಾರರಲ್ಲಿ ಸಾಕ್ಷರತೆಯ ಪ್ರಮಾಣ ಎಷ್ಟು ? (ಗಂಡಸರು ಮತ್ತು ಹೆಂಗಸರು)
- ಸಮುದಾಯದಲ್ಲಿರುವ ವೈದ್ಯರು, ಇಂಜಿನಿಯರ್, ವಕೀಲರು ಹಾಗೂ ವ್ಯಾಪಾರಸ್ಥರ ವಿವರ. (ಅವರುಗಳ ಹೆಸರುಗಳ ವಿವರ ಕೊಡಲು ಸಾಧ್ಯವಾಗದಿದ್ದರೆ ಅವರುಗಳ ಒಟ್ಟಾರೆ ಸಂಖ್ಯೆ ಹೇಳಿದರೆ ಸಾಕು).


ಕನ್ನಡಾಂಬೆಯ ಕಣ್ಮಣಿ
ಶ್ರೀಮಾನ್ ಡಿ. ಎಸ್. ರಾಮಪ್ಪನವರಿಗೆ
ಸಮರ್ಪಿಸಲಾಗಿರುವ
'ಉಪ್ಪಾರ ಹಣತೆ'ಯು
ಕನ್ನಡ ಸಾಹಿತ್ಯದ
ಅಭಿನಂದನಗ್ರಂಥಗಳ
ಸಾಲಿನಲ್ಲೊಂದು ಮೈಲಿಗಲ್ಲು.
ಈ ಗ್ರಂಥವು ಡಿ. ಎಸ್. ರಾಮಪ್ಪನವರ
ಸಾಧನೆ ಸಿದ್ಧಿಗಳ ಮಹೋನ್ನತ
ಚಿತ್ರವೊಂದನ್ನು ನೀಡಿರುವುದರ
ಜೊತೆಗೆ, ಆ ಮಹನೀಯರು
ಮೇಲೆತರಲು ಪ್ರಯತ್ನಿಸುತ್ತಿರುವ
ಉಪ್ಪಾರ ಸಮಾಜದ ಸಮಗ್ರ
ವಿವರಗಳನ್ನೊಳಗೊಂಡ
ವಿಶ್ವಕೋಶವೇ ಆಗಿ ಪರಿಣಮಿಸಿದೆ.
ಅಖಂಡ ಕರ್ನಾಟಕದ ಮಹಿಮಾ
ವಿಶೇಷಗಳನ್ನು ಬೆಳಗಿಸುವ
ಹಣತೆಯೂ ಆಗುವಂತೆ
ಮೂಡಿಬಂದಿರುವುದು ಅದರ
ಮತ್ತೊಂದು ವೈಶಿಷ್ಟ್ಯ.
ಡಾ. ಕೆ. ಅನಂತರಾಮು
ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ